# ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ

(ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಕವಿತಾ ರೈ ಬಿ.ಆರ್.



ಮಾರ್ಗದರ್ಶಕರು

ಡಾ. ಸಬಿಹಾ

ಕನ್ನಡ ವಿಭಾಗ

ಮಂಗಳೂರು ವಿಶ್ವವಿದ್ಯಾನಿಲಯ

ಮಂಗಳ ಗಂಗೋತ್ರಿ - 547 199

2003





# ಪ್ರಮಾಣ ಪತ್ರ

ಮಂಗಳೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಯ ಉದ್ದೇಶದಿಂದ ಅಧ್ಯಯನ ಮಾಡಿ ಬರೆದು ಸಿದ್ಧಪಡಿಸಿದ ಮಹಾಪ್ರಬಂಧ **'ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ'**. ಕನ್ನಡ ವಿಭಾಗದ ರೀಡರ್ ಡಾ. ಸಬಿಹಾ ಅವರು ಮಾರ್ಗದರ್ಶಕರು. ಈ ಮಹಾಪ್ರಬಂಧದ ಶೀರ್ಷಿಕೆ, ಹೊಳಹು, ಗ್ರಹೀತಗಳು, ಅಧ್ಯಾಯಗಳು ಮುಂತಾಗಿ ಯಾವುದೇ ಇಡಿ-ಬಿಡಿ ಭಾಗಗಳನ್ನು ಈ ಮೊದಲು ಅನ್ಯ ಪದವಿ ಅಥವಾ ನಿಮಿತ್ತಗಳಿಗೆ ಪೂರಕವಾಗಿ ಬಳಸಿಕೊಂಡಿರುವುದಿಲ್ಲ.

*(ಕವಿತಾ ರೈ ಬಿ.ಆರ್)*

*ಸಂಶೋಧಕರು*

# ದೃಢೀಕರಣ ಪತ್ರ

ಮಂಗಳೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿ *'ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ'* ಎನ್ನುವ ಈ ಮಹಾಪ್ರಬಂಧವನ್ನು ಕವಿತಾ ರೈ ಬಿ.ಆರ್. ಬರೆದು ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧದ ಯಾವುದೇ ಇಡಿ- ಬಿಡಿ ಭಾಗಗಳನ್ನು, ಶೀರ್ಷಿಕೆ, ಗ್ರಹೀತಗಳನ್ನು ಅನ್ಯ ಪದವಿ, ಉದ್ದೇಶಗಳಿಗಾಗಿ ಈ ಮೊದಲು ಬಳಸಿಕೊಂಡಿರುವುದಿಲ್ಲ.

*(ಡಾ. ಸಬಿಹಾ)*

*ಮಾರ್ಗದರ್ಶಕರು.*

# ಕೃತಜ್ಞತೆಗಳು

ನಾನು ಪಿಎಚ್.ಡಿ ಪದವಿಗಾಗಿ ವ್ಯಾಸಂಗ ಮಾಡುವ ಇಂಗಿತವನ್ನು ಮುಂದಿಟ್ಟಾಗ ವಿಷಯ ಸೂಚಿಸಿ ಅಧ್ಯಯನದ ರೂಪರೇಖೆಯನ್ನು ಖಚಿತಪಡಿಸಿಕೊಟ್ಟವರು, ಓದು - ಬರವಣಿಗೆಗಳ ಸಂದರ್ಭಗಳಲ್ಲಿ ಸೂಕ್ತ ಸಲಹೆ - ಸೂಚನೆ ಇತ್ತವರು ಕನ್ನಡ ವಿಭಾಗದ ಅಧ್ಯಕ್ಷರು ಹಾಗೂ ಕಲಾ ನಿಕಾಯದ ಡೀನ್ - ಗುರುಗಳಾದ ಡಾ. ಬಿ.ಎ. ವಿವೇಕ ರೈಯವರು.

ಈ ಅಧ್ಯಯನದ ಮಾರ್ಗದರ್ಶಕರು ಕನ್ನಡ ವಿಭಾಗದ ರೀಡರ್ ಡಾ. ಸಬಿಹಾ ಅವರು.

ಸಾಂದರ್ಭಿಕವಾಗಿ ಚರ್ಚೆ, ಗೊತ್ತುಗುರಿಗಳ ಸ್ಪಷ್ಟತೆಗಳಿಗೆ ಒದಗಿಬಂದವರು ಡಾ. ಬಿ. ಶಿವರಾಮ ಶೆಟ್ಟಿ, ಡಾ. ಮಾಧವ ಪೆರಾಜೆ, ಡಾ. ಕಿಶೋರಿ ನಾಯಕ್, ಡಾ. ಜೋಗನ್ ಶಂಕರ್, ಡಾ. ಗುರುಲಿಂಗಯ್ಯ, ಡಾ. ಸಿ.ಎನ್. ರಾಮಚಂದ್ರನ್, ಡಾ. ಪಿ.ಎಲ್. ಧರ್ಮ, ಡಾ. ಅರ್ಮುಗಂ, ಅಬ್ದುಲ್ ರಶೀದ್ ಅವರು.

ಕನ್ನಡ ವಿಭಾಗದ ಡಾ.ಕೆ. ಚಿನ್ನಪ್ಪ ಗೌಡ, ಡಾ.ಕೆ. ಅಭಯಕುಮಾರ, ಡಾ. ಲೋಲಾಕ್ಷಿ ಅವರು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಅಡಿಯಲ್ಲಿ ಫೆಲೋಶಿಪ್ (ಯು.ಜಿ.ಸಿ. / ಜೆ ಆರ್.ಎಫ್.) ನೀಡಿದ ಅಧಿಕಾರಿ ವೃಂದ.

ಮಂಗಳೂರು ವಿಶ್ವವಿದ್ಯಾನಿಲಯದ ಆಡಳಿತಾಂಗ, ಪರೀಕ್ಷಾಂಗ, ಶೈಕ್ಷಣಿಕ ವಿಸ್ತರಣಾಂಗ ಹಾಗೂ ಗ್ರಂಥಾಲಯಗಳ ಸಂಬಂಧಿತ ಅಧಿಕಾರಿ ವರ್ಗದವರು.

ಕನ್ನಡ ವಿಭಾಗದ ಸಂಶೋಧಕ ಸ್ನೇಹಿತರು - ಸುಜಾತಾ ತೆಕ್ಕಮೂಲೆ, ಶ್ರೀನಿವಾಸ ಗಿಳಿಯಾರು, ದಿನೇಶ್ ನಾಯಕ್, ನರಸಿಂಹಮೂರ್ತಿ ಹಾಗೂ ಗೆಳತಿಯರಾದ ಲಾವಣ್ಯ ಮತ್ತು ಶರೀನ್ ಸುವರ್ಣ ಅವರು. ಜೊತೆಗೆ ನನ್ನವರು: ಅಮ್ಮ, ಆನಂದ ಕೋಡಿಂಬಳ, ಅನ್ವಯ, ಅನಿತಾ, ಗಣೇಶ ಭಂಡಾರಿ, ರಾಮಚಂದ್ರ ಭಂಡಾರಿ, ಲಕ್ಷ್ಮಿ ಆರ್. ಭಂಡಾರಿ, ಬಿ.ಎ. ಮಮತಾ ರೈ - ಇವರಿಗೆಲ್ಲ ಪ್ರೀತಿ. ಗೌರವ. ಕೃತಜ್ಞತೆ.

*(ಕವಿತಾ ರೈ ಬಿ.ಆರ್.)*

# ಪರಿವಿಡಿ

## ಅಧ್ಯಾಯ ನಾಲ್ಕು:ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ:ವಿವಾಹ ಮತ್ತು ಕುಟುಂಬ ಪರಿಕಲ್ಪನೆ:೧೬೦

**ಅಧ್ಯಾಯ ಐದು:ಅನನ್ಯ ಸಾಂಸ್ಕೃತಿಕ ನೆಲೆ :ವಿವಾಹ ಮತ್ತು ಕುಟುಂಬದ ಪರಿಕಲ್ಪನೆ. ೨೩೬**



**ಅಧ್ಯಾಯ ಆರು :ಸಾಂಸ್ಕೃತಿಕ ನೆಲೆಗಳ ಅಂತರ್ ಸಂಬಂಧ : ವಿಕಾಸ ಮುಖೀ ರೇಖೆ.**

## ಅಧ್ಯಯನದ ಹಿಂದಿನ ತಾತ್ತ್ವಿಕತೆ: ಉದ್ದೇಶ ಮತ್ತು ವ್ಯಾಪ್ತಿ

೧. ಪ್ರಸ್ತಾವನೆ.

೧.೨. ಅಧ್ಯಯನದ ಹಿಂದಿನ ಉದ್ದೇಶ.

೧.೩. ಅಧ್ಯಯನ ವಿಧಾನ.

೧.೪. ಅಧ್ಯಯನದ ವ್ಯಾಪ್ತಿ.

## ೧. ಪ್ರಸ್ತಾವನೆ

**ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ** ಎನ್ನುವ ಈ ವಿಷಯದ ಅಧ್ಯಯನದ ಹಿಂದಿನ ತಾತ್ತ್ವಿಕತೆಯು ವಿಶಿಷ್ಟವಾದುದು. ಯಾವುದೇ ಹಿನ್ನೆಲೆಯ ಸಮಾಜದ ಮೂಲ ಅಸ್ತಿವಾರ ಎನ್ನುವುದು ಕುಟುಂಬದಿಂದಲೇ ಹುಟ್ಟಿಕೊಳ್ಳುತ್ತದೆ. ಸಮಾಜವು ಕುಟುಂಬವನ್ನು ಒಂದು ನಿರ್ದಿಷ್ಟ ಪರಿಸರ, ಸಂದರ್ಭ ಸನ್ನಿವೇಶಗಳಲ್ಲಿ ಕಟ್ಟಿಹಾಕಿ ನಿಶ್ಚಿತ ನೆಲೆಯನ್ನು ಒದಗಿಸುತ್ತದೆ. ಎರಡು ಪ್ರಧಾನ ಮತ್ತು ಸಮಾನ ಆಶಯದ ಘಟಕಗಳನ್ನು ಒಗ್ಗೂಡಿಸುವ, ಒಂದೇ ಸೂರಿನಡಿಯಲ್ಲಿ ಹಂಚಿಕೊಂಡು ಬದುಕುವ, ಮಾತ್ರವಲ್ಲ ನೈಸರ್ಗಿಕವಾದ ಸಂಸರ್ಗಕ್ಕೆ ಒಂದು ಚೌಕಟ್ಟನ್ನು ಒದಗಿಸುವ ವ್ಯವಸ್ಥೆಯೇ ವಿವಾಹ. ಮಾನವ ಬದುಕು ಬುದ್ಧಿಪೂರ್ವಕವಾಗಿ ಕಾಲಕಾಲದ ಸ್ಥಿತ್ಯಂತರಗಳಿಗೆ ಅನುಗುಣವಾಗಿ ವಿವಾಹವನ್ನು ಸಾಮಾಜಿಕ, ಧಾರ್ಮಿಕ, ಆರ್ಥಿಕ ವಿಧಿಗಳಿಗೆ ಪೂರಕವಾಗಿ ರೂಪಿಸಿಕೊಂಡು ಆ ಮೂಲಕ ನಿರ್ಮಿಸಿಕೊಂಡ ವ್ಯವಸ್ಥೆಯಾಗಿದ್ದು, ಇದು ಒಟ್ಟು ಬದುಕಿನಲ್ಲಿ ಬಹಳ ವಿಶಿಷ್ಟವಾದುದು. ವಿವಾಹ ಎನ್ನುವುದು ಇಂಡಿಯಾದ ಸಂದರ್ಭದಲ್ಲಿ ಕೇವಲ ವ್ಯಾವಹಾರಿಕ ಅಥವಾ ಲೌಕಿಕ ಅರ್ಥದಲ್ಲಷ್ಟೇ ಉಳಿದಿಲ್ಲ. ಈ ಮಾತನ್ನು ಪ್ರಪಂಚದ ಯಾವ ಮೂಲೆಯ ಜನರ ಜೀವನಕ್ಕೂ ವಿಸ್ತರಿಸಲು ಸಾಧ್ಯವಿದೆ. ಎಂದರೆ ಪ್ರಪಂಚದ ಯಾವ ಪ್ರದೇಶದ, ಯಾವುದೇ ಹಿನ್ನೆಲೆಯ ಜನತೆಯೇ ಇರಲಿ ಅಲ್ಲಿಯ ಆಚಾರ, ವಿಚಾರ, ವಿಧಿ ವಿಧಾನಗಳು, ನಂಬಿಕೆ ನಡಾವಳಿಗಳಿಗೆ ಪೂರಕವಾದ ಸಂಸ್ಕೃತಿಯಂತೆ ವಿವಾಹ ಎನ್ನುವುದು ಅರ್ಥವನ್ನು ಪಡೆದುಕೊಳ್ಳುತ್ತದೆ. ಆದಿವಾಸಿ, ಬುಡಕಟ್ಟು ಜನತೆಯ ಜೀವನ ಕ್ರಮವೇ ಇರಲಿ, ಆಧುನಿಕ ಸಮಾಜದ ಜಾತಿ, ವರ್ಗ ಸೀಮಿತ ವ್ಯವಸ್ಥೆಯೇ ಇರಲಿ, ಕೆಳಜಾತಿಗಳ ಜನತೆಯ ಜೀವನ ಕ್ರಮವೇ ಇರಲಿ, ಭಿನ್ನ ಭಿನ್ನ ನೆಲೆಗಟ್ಟನ್ನು ಹೊಂದಿರುವ ಯಾವುದೇ ಧರ್ಮ ಕಕ್ಷೆಯೊಳಗೆ ನಿರೂಪಿತಗೊಳ್ಳುವ ಜನ ಸಮೂಹವೇ ಆಗಿದ್ದರೂ ವಿಶಾಲವಾದ ಅರ್ಥದಲ್ಲಿ

ಅವರವರದೇ ಸಮೂಹ ನಿರ್ದಿಷ್ಟ ಪಡಿಸಿಕೊಂಡ, ರೂಪಿಸಿಕೊಂಡ ಮತ್ತು ಮಾನ್ಯಮಾಡಿಕೊಂಡ ನಿಶ್ಚಿತವೂ ವೈಶಿಷ್ಟಪೂರ್ಣವೂ ಆದ ವಿವಾಹದ ವ್ಯವಸ್ಥೆಯನ್ನು ಹೊಂದಿರುತ್ತವೆ. ಆಯಾ ಪ್ರಾದೇಶಿಕ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಯ ವ್ಯವಸ್ಥೆಗೆ ಒಳಗಾಗಿಯೇ ಜನರು ಬದುಕುವುದು ಅನಿವಾರ್ಯವಾಗಿ ಬಿಡುತ್ತದೆ. ಸಮಾಜದ ಚಲನೆ ಎನ್ನುವುದು ಅರಿವಿಗೆ ಬರುವ ಮೊದಲೇ ಸಿದ್ಧ ಚೌಕಟ್ಟಿನೊಳಗೆ ಜನತೆಯ ಅಸ್ತಿತ್ವ ರೂಪಿತವಾಗಿ ಬಿಟ್ಟಿರುತ್ತದೆ. ಮಗುವೊಂದು ಬೆಳೆಯುತ್ತ ಬಂದಂತೆ ಬುದ್ಧಿಪೂರ್ವಕವಾಗಿ ತನಗೆ ಸರಿಕಾಣುವ ವೈಚಾರಿಕ ಪಾತಳಿಗೆ ಪಕ್ಕಾಗಿ ವ್ಯಕ್ತಿವಿಶಿಷ್ಟತೆಯಿಂದ ಸಮಾಜದಲ್ಲಿ ತನ್ನನ್ನು ಗುರುತಿಸಿಕೊಳ್ಳಲು ಸಾಧ್ಯವಿದೆ. ಆದರೂ ಸಾಮಾಜಿಕ ವ್ಯವಸ್ಥೆಯೊಳಗೆ ಬಹುಕಾಲದಿಂದ ಭದ್ರವಾಗಿ ಬೇರುಬಿಟ್ಟಿರುವಂಥ ನಿಯಮಗಳಿಂದ ಹೊರತಾಗಿ ಬದುಕುವುದು ಕಷ್ಟಸಾಧ್ಯ. ಯಾವುದೇ ಹಿನ್ನೆಲೆಯ ಒಂದು ವ್ಯವಸ್ಥೆ ರೂಪಿತವಾಗಿದೆ ಎಂದರೆ ಆ ಸಮಾಜದಲ್ಲಿ ಆ ವ್ಯವಸ್ಥೆಗೆ ವಿರೋಧವೂ, ಪ್ರತಿಭಟನೆಯೂ ಇದ್ದೇ ಇರುತ್ತದೆ. ವಿರೋಧ, ಪ್ರತಿಭಟನೆ ಎನ್ನುವುದು ಒಂದರ್ಥದಲ್ಲಿ ವ್ಯವಸ್ಥೆಯ ಬೆಳವಣಿಗೆಯ ಮೆಟ್ಟಿಲೂ ಆಗಿ ಬಿಡುತ್ತದೆ. ಎಚ್ಚರದ ಸಾಕಾರ ರೂಪವೂ ಆಗಿ ಬಿಡುತ್ತದೆ. ಆದರೆ ಈ ಜಗತ್ತಿನಲ್ಲಿ ಹುಟ್ಟುಪಡೆದ ಮೇಲೆ ಬಾಲ್ಯ, ಯೌವನ, ವೃದ್ಧಾಪ್ಯ ಸಾವು ಸಮೀಪಿಸುವ ತನಕದ ಬದುಕಿನ ಆವರ್ತನಗಳಲ್ಲಿ ನಿರಂತರವಾಗಿ ಕಲಿಕೆ ಇದ್ದೇ ಇರುತ್ತದೆ. ಬುದ್ಧಿಪೂರ್ವಕವಾಗಿ ವ್ಯಕ್ತಿಗಳು ರೂಪಿಸಿ, ರೂಢಿಸಿಕೊಂಡಂಥ ಬಹುಮುಖೀ ಆಯಾಮಗಳ ವ್ಯವಸ್ಥೆಗಳ ಜೊತೆಗೆ ಮುಖಾಮುಖಿ ಇದ್ದೇ ಇರುತ್ತದೆ. ಆದರೆ ಇವೆಲ್ಲಕ್ಕೂ ಮೂಲಮಾನವಾದ ಹುಟ್ಟು ಸಾಧ್ಯವಾಗಬೇಕಾದರೆ ನಿಸರ್ಗ ಸಹಜವಾಗಿ ಮಾನವ ಜೀವಿಗಳಲ್ಲಿ ಗಂಡು ಹೆಣ್ಣು ಎಂಬ ಘಟಕಗಳು ನಿಸರ್ಗದತ್ತ ನೆಲೆಯಲ್ಲಿ ಸಮಾಗಮ ಹೊಂದಲೇ ಬೇಕು. ಸಮಾನ ಆಶಯದ ಸೆಳೆತ ಪ್ರಬಲವಾಗಿ ಗಂಡು ಜೀವಿಯ ಗಂಡುತನದ ಪ್ರತೀಕವು ಹೆಣ್ಣು ಜೀವಿಯ ಹೆಣ್ತನದ ಪ್ರತೀಕದ ಜೊತೆಗೆ ಮಿಲನ ಹೊಂದಬೇಕು. ಈ ಮಿಲನ ಅಥವಾ ಸಂಭೋಗ ಕ್ರಿಯೆಯು ಗಂಡು ಹೆಣ್ಣುಗಳಲ್ಲಿ ಅತ್ಯಂತ ಸಹಜವೂ, ನಿಸರ್ಗನಿಯಮವೂ ಆಗಿದೆ. ಹೊಸ ಹುಟ್ಟಿಗೆ ನಾಂದಿಯಾಗಿರುವ ಬಹಳ ಪ್ರಧಾನ ಮಾತ್ರವಲ್ಲ ವಿಶಿಷ್ಟವಾದ ನೆಲೆಯಲ್ಲಿ ಬದುಕನ್ನು ಸಾರ್ಥಕಗೊಳಿಸಿಬಿಡುವ ಇಂಗಿತ ನಿಸರ್ಗ ಕ್ರಿಯೆಗೆ ಇದೆ.

ಕುಟುಂಬ ವ್ಯವಸ್ಥೆ ಎಂದು ಹುಟ್ಟಿ ಕೊಂಡಿತೋ ಗೊತ್ತಿಲ್ಲ. ಅದು ಮೂಲದಲ್ಲಿ ಪಿತೃ ಅಧಿಕಾರ ಹೊಂದಿತ್ತೇ ಅಥವಾ ಮಾತೃ ಅಧಿಕಾರ ಹೊಂದಿತ್ತೇ ಖಚಿತವಿಲ್ಲ. ಅದು ಬಂಧು ಬಳಗವನ್ನು ಹೊಂದಿದ್ದ ಕೂಡುಕುಟುಂಬವಾಗಿತ್ತೇ ಅಥವಾ ಮೂರು ನಾಲ್ಕು ಜನರಿಂದ ಕೂಡಿದ ಸರಳ ಕುಟುಂಬವಾಗಿತ್ತೇ ಎನ್ನುವುದು ಅಸ್ಪಷ್ಟ. ಕುಟುಂಬದ ಮೂಲವನ್ನು ಚರಿತ್ರಾತ್ಮಕವಾಗಿ ಹುಡುಕುವುದು ಸಾಹಿತ್ಯ, ಶಾಸ್ತ್ರಗಳ ಮೂಲಕ ಮಾತ್ರವಲ್ಲ ವೈಜ್ಞಾನಿಕವಾಗಿಯೂ ಸಾಧ್ಯವಾಗದ ಅಂಶ. ಮಾನವ ಸಮಾಜದ ಹುಟ್ಟಿನೊಡನೆಯೇ ಕುಟುಂಬ ವ್ಯವಸ್ಥೆ ಹುಟ್ಟಿಕೊಂಡಿರಬೇಕು. ಅಥವಾ ಕುಟುಂಬ ಮತ್ತು ಸಮಾಜ ಏಕಕಾಲಕ್ಕೆ ಹುಟ್ಟಿಕೊಂಡವು ಎಂದು ನಿರ್ಣಯಿಸಲೂ ಬಹುದು. ಈ ಅರ್ಥದಲ್ಲಿ ಸಮಾಜವೆಂದರೆ ಕುಟುಂಬಗಳ ಒಂದು ಜಾಲ ಅಥವಾ ಬಲೆ ಎಂದು ಹೇಳಬಹುದು. ಹಸಿವನ್ನು ಕೇಂದ್ರ ಆಶಯವಾಗಿಸಿಕೊಂಡು ಅದನ್ನು ಹಿಂಗಿಸಿಕೊಳ್ಳುವ ಮತ್ತು ಸಹಿಸಿಕೊಳ್ಳುವ, ಅದಕ್ಕಾಗಿ ಹೋರಾಡುವ ನೆಲೆಯಿಂದಲೇ ಜೀವನದ ಭದ್ರತೆಯ ಹುಡುಕಾಟ ಆರಂಭವಾಗಿದೆ. ನಾಗರಿಕತೆಯ ಸಂಸ್ಕೃತಿಯನ್ನು ಅದರೊಳಗಿನಿಂದಲೇ ನಿರ್ವಚಿಸಬೇಕಾಗುತ್ತದೆ. ಉದಾಹರಣೆಗೆ ಶಿಲಾಯುಗ, ಕಂಚಿನಯುಗ, ಕಬ್ಬಿಣದಯುಗ ಮೊದಲಾದವು. ಚರಿತ್ರೆಯ ಬಗ್ಗೆ ಚಿಂತಕರ ಸಿದ್ಧಾಂತಗಳಲ್ಲಿ ಎಷ್ಟೇ ಭಿನ್ನತೆಗಳು

ಇದ್ದರೂ, ವ್ಯಕ್ತಿಗಳ ಸಾಮಾಜಿಕ ಜೀವನದಲ್ಲಿ ಅವರ ಉತ್ಪಾದನಾ ಸಾಮಾಗ್ರಿಗಳ ಪ್ರಾಮುಖ್ಯವನ್ನು ಅಲ್ಲಗೆಳೆಯಲಾಗುವುದಿಲ್ಲ. [೧] ಸಂದರ್ಭದಲ್ಲಿ ಸಾಮಾಜಿಕವಾಗಿ ಆಯಾಯಾ ಕಾಲಘಟ್ಟಗಳ ಉತ್ಪಾದನಾ ಸಾಮಾಗ್ರಿಗಳಿಂದ ಆಯಾಯಾ ಕಾಲಘಟ್ಟಗಳ ಜೀವನವಿಧಾನ, ಮನೋಧರ್ಮ, ಸಾಮಾಜಿಕ ರಚನೆಗಳನ್ನು ವಿಶ್ಲೇಷಿಸುವುದು ಅನಿವಾರ್ಯವಾಗುತ್ತದೆ. ಮಾತ್ರವಲ್ಲ ಈ ರೀತಿಯ ವಿಶ್ಲೇಷಣೆಗೆ ತೊಡಗುವುದರಿಂದ ನಿಖರವಾದ ತೀರ್ಮಾನಗಳನ್ನು ರೂಪಿಸುವುದಕ್ಕೆ ಸಾಧ್ಯವಾಗುತ್ತದೆ. ಚಾರಿತ್ರಿಕಭೌತವಾದದ ಪ್ರಕಾರ ಅತ್ಯಂತ ಕೆಳಮಟ್ಟದ ಉತ್ಪಾದನಾ ವಿಧಾನಗಳಿಂದಾಗಿ ಮತ್ತು ಉತ್ಪಾದನೆಯ ಕೊರತೆಯಿಂದಾಗಿ ಸಂಘಜೀವನಪದ್ಧತಿಯು ಪ್ರಾಚೀನ ಜನಾಂಗಗಳಲ್ಲಿ ಅನಿವಾರ್ಯವಾಗಿತ್ತು. ಇದು ಹೇರಿಕೆಯಾಗಿತ್ತೇ ವಿನಾ ಉತ್ಪಾದನೆಗಳ ಸಮೃದ್ಧಿ ಆ ಕಾಲದಲ್ಲಿ ಇರಲಿಲ್ಲ. ಪ್ರಾಚೀನ ಸಮಾಜದಲ್ಲಿ ಏನನ್ನಾದರೂ ಉತ್ಪಾದಿಸಬೇಕಿದ್ದರೆ ಅದು ಸಾಮೂಹಿಕ ಶ್ರಮದಿಂದ ಮಾತ್ರವೇ ಸಾಧ್ಯವಾಗುತಿತ್ತು. (ಸ್ವಂತ ಸಂಪಾದನೆ, ಸ್ವಂತ ಖರ್ಚು ಮತ್ತು ಸ್ವಂತ ಮನೆಮಾರು ಆ ಕಾಲದಲ್ಲಿ ಸಾಧ್ಯವಿರಲಿಲ್ಲ.) ಆಯಾ ಕಾಲದ ಸಾಮಾಜಿಕ ಕೌಟುಂಬಿಕ ರಚನೆಯು ಉತ್ಪಾದನಾ ವ್ಯವಸ್ಥೆಯ ಮೂಲದಿಂದಲೇ ಆಕಾರ ಪಡೆಯಲು ಸಾಧ್ಯವಾಗಿದೆ. ಪ್ರಾಚೀನ ಸಮಾಜದಲ್ಲಿ ಪರಾವಲಂಬನೆ ಅನಿವಾರ್ಯವಾಗಿದ್ದು, ಇದು ಸಂಘ ಜೀವನ ಪದ್ಧತಿಯ ಪ್ರಮುಖ ಲಕ್ಷಣವಾಗಿದೆ. [೨]

ಮೋರ್ಗನ್ ಗುರುತಿಸಿ, ಮಾರ್ಕ್ಸ್, ಎಂಗೆಲ್ಸ್ ವಿಶ್ಲೇಷಿಸಿದ ಪ್ರಾಚೀನ ಸಂಘಜೀವನದ ಮತ್ತು ಉತ್ಪಾದನಾ ವಿಧಾನಗಳ ಪ್ರಮುಖ ಲಕ್ಷಣಗಳೆಂದರೆ, ಸಾಮೂಹಿಕ ಶ್ರಮ ಮತ್ತು ಸಾಮೂಹಿಕ ಅನುಭೋಗ. ಸ್ವಂತ ಆಸ್ತಿ ಮತ್ತು ಶ್ರಮ ವಿಭಜನೆಯ ಕಲ್ಪನೆಯೇ ಇರದ ಪ್ರಾಚೀನ ಸಮಾಜವು ನಾಗರಿಕತೆಯನ್ನು ಹಂತ ಹಂತವಾಗಿ ಸಾಧಿಸಿಕೊಂಡಿದೆ. ಉತ್ಪಾದನಾ ಶಕ್ತಿಯು ಬೆಳೆದಂತೆ ಶ್ರಮವಿಭಜನೆಯೂ ಕಂಡು ಬರುತ್ತದೆ. ಪ್ರಾಚೀನ ಸಮಾಜಗಳಲ್ಲಿ ವರ್ಗಗಳಿರಲಿಲ್ಲ. ಮಾತೃಪ್ರಧಾನವಾದ ಸಾಮಾಜಿಕ ವ್ಯವಸ್ಥೆ ಇದ್ದು ಇದರಲ್ಲಿ ಹುಟ್ಟಿದ ಮಕ್ಕಳೆಲ್ಲ ಇಡೀ ಗುಂಪಿನ ಸ್ವತ್ತಾಗಿರುತ್ತಿದ್ದರು. ಮುಂದಿನ ನಾಗರಿಕ ಹಂತದಲ್ಲಿ ಕಂಡು ಬಂದ ವಿವಾಹ ಮತ್ತು ಸ್ವಂತ ಕುಟುಂಬ ಪದ್ಧತಿ ಆಗ ಇನ್ನೂ ಹುಟ್ಟಿರಲಿಲ್ಲ. ಇದರಲ್ಲಿ ಎಲ್ಲ ಕೆಲಸಗಳಿಗೂ ಇಡೀ ಗುಂಪೇ ಜವಾಬ್ದಾರಿಯಾಗಿರುತಿತ್ತು. ರಾಜ್ಯ, ಕಾನೂನು ಅಥವಾ ಯಾವುದೇ ಪದ್ಧತಿ ಜನಜೀವನದ ಮೇಲೆ ಹೇರಿಕೆಗೊಂಡಿರಲಿಲ್ಲ. ರಾಜ್ಯ ವ್ಯವಸ್ಥೆ ಬಂದಾಗ ಪ್ರಾಚೀನ ಸಂಘ ಜೀವನ ಪದ್ಧತಿ ಒಡೆದು ಸಾಮೂಹಿಕ ಜವಾಬ್ದಾರಿಯ ಕಲ್ಪನೆಯೇ ನಾಶವಾಗುವುದು ಸಾಮಾಜಿಕ ಬೆಳವಣಿಗೆಯ ಚರಿತ್ರೆಯಲ್ಲಿ ಪ್ರಕಟವಾಗುವ ಮುಖ್ಯ ವಿಚಾರವಾಗಿದೆ.

**ವಿವಾಹ ಮತ್ತು ಕುಟುಂಬದ ಪದಗಳ ನಿಷ್ಪತ್ತಿ:**

ಸಮಾಜದ ಬೆಳವಣಿಗೆಯ ಮೂರು ಮುಖ್ಯ ಘಟ್ಟಗಳಿಗೆ ಅನುಗುಣವಾದ ಮೂರು ಮುಖ್ಯ ವಿವಾಹ ರೂಪಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಅವುಗಳೆಂದರೆ, ಕಿರಾತಾವಸ್ಥೆಗೆ ಅನುಗುಣವಾದ ಸಮೂಹ ವಿವಾಹ; ಅನಾಗರಿಕಾವಸ್ಥೆಗೆ- ಯುಗ್ಮವಿವಾಹ; ನಾಗರಿಕಾವಸ್ಥೆಗೆ - ಏಕಪತ್ನೀ ವಿವಾಹ ಪದ್ಧತಿ. ಕುಟುಂಬದ ಪ್ರಾಚೀನತೆಗೆ ಸಂಬಂಧಿಸಿದಂತೆ ರೋಮನರ ಕುಟುಂಬದ ವ್ಯವಸ್ಥೆಯು ಪರಿಪೂರ್ಣ ಮಾದರಿಯಾಗಿದೆ. Familia ಎಂಬ ಪದಕ್ಕೆ ಮೂಲದಲ್ಲಿ ಯಾವುದೇ ಆದರ್ಶವಾದ ಅರ್ಥಗಳು ಚರಿತ್ರೆಯಲ್ಲಿ ಸಿಗುವುದಿಲ್ಲ. Familia ಪದವು ರೋಮನರು ಆರಂಭದಲ್ಲಿ ಗುಲಾಮರಿಗೆ ಸಂಬಂಧಿಸಿದಂತೆ ಬಳಸುತ್ತಿದ್ದರು.

Famulus ಎಂದರೆ ಮನೆಯ ಗುಲಾಮ ಎಂದರ್ಥ. Familia ಎಂದರೆ ಒಬ್ಬ ವ್ಯಕ್ತಿಗೆ ಸೇರಿದ ಗುಲಾಮರ ಸಂಕುಲ (Familia, id est patrimonium). ಕುಟುಂಬ ಅಂದರೆ, ಉತ್ತರಾಧಿಕಾರ ಎನ್ನುವ ಅರ್ಥ ಪ್ರಾಪ್ತವಾಗಿದೆ. ಈ ಉತ್ತರಾಧಿಕಾರವನ್ನು ರೋಮನರಲ್ಲಿ ಉಯಿಲಿನ ಮೂಲಕ ಬಿಟ್ಟುಕೊಡಲಾಗುತ್ತಿತ್ತು. ಇದರಿಂದ ವ್ಯಕ್ತವಾಗುವ ವಿಚಾರವೆಂದರೆ, ರೋಮನರು ವ್ಯಕ್ತಿಗಳ ಒಂದು ಸಾಮಾಜಿಕ ಸಂಘಟನೆಯನ್ನು ಸೂಚಿಸಲು familia ಎಂಬ ನುಡಿಗಟ್ಟನ್ನು ಸೃಷ್ಟಿಸಿದರು. ಈ ಹೊಸ ಸಾಮಾಜಿಕ ಸಂಘಟನೆಯ ಮುಖ್ಯಸ್ಥನು ತನ್ನ ಕೈಕೆಳಗೆ ಹೆಂಡತಿ ಮಕ್ಕಳನ್ನು ಅನೇಕ ಮಂದಿ ಗುಲಾಮರನ್ನೂ ಹೊಂದಿರುತ್ತಿದ್ದ. ಮಾರ್ಗನ್ ಗುರುತಿಸುವಂತೆ :

> "familia ಪದವು ಲ್ಯಾಟಿನ್ ಬುಡಕಟ್ಟುಗಳ ಅತಿ ಕಟ್ಟುನಿಟ್ಟಿನ ಕುಟುಂಬ ಪದ್ಧತಿಗಿಂತ ಹೆಚ್ಚು ಹಳೆಯದೇನಲ್ಲ. ಅದು ಭೂಮಿಯ ಉಳುಮೆ ಪ್ರಾರಂಭವಾದ ನಂತರ, ಗುಲಾಮಗಿರಿಯನ್ನು ಶಾಸನಬದ್ಧವನ್ನಾಗಿ ಮಾಡಿದ ನಂತರ ಮತ್ತು ಗ್ರೀಕರಿಂದ ಆರ್ಯನ್ ಇಟಾಲಿಕರು ಪ್ರತ್ಯೇಕಗೊಂಡ ನಂತರ ಬಂದಿತು." (ಗೋಪಾಲಕೃಷ್ಣರಾವ್ ಕೆ.ಎಲ್ (ಅನು): ೧೯೮೦; ೮೩)

ಇದರಿಂದ ಕುಟುಂಬವು ಮೂಲಾವಸ್ಥೆಯಲ್ಲಿ ಗುಲಾಮಗಿರಿಯನ್ನಷ್ಟೆ (Servitus) ಅಲ್ಲದೆ, ಜೀತದಾಳು ಪದ್ಧತಿಯನ್ನು ಒಳಗೊಂಡಂತೆ ರಚನೆಗೊಂಡ ಸಾಂಸ್ಥಿಕರೂಪ ಎಂಬುದು ವ್ಯಕ್ತವಾಗುತ್ತದೆ. ಕುಟುಂಬ ಒಂದು ಸಂಸ್ಥೆಯಾಗಿ ಬೆಳೆದುಬಂದ ಬಗೆಗಿನ ಚರ್ಚೆಗಳು ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳಲ್ಲಿ ಹಲವು ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಅಲ್ಲದೆ, ಈ ಶಾಸ್ತ್ರಗಳ ನಿರ್ವಚನಗಳು ವಿದ್ವಾಂಸರಲ್ಲಿ ತೀವ್ರವಾದ ಬಿನ್ನಭಿಪ್ರಾಯಗಳಿಗೆ ಎಡೆಮಾಡಿಕೊಟ್ಟಿವೆ. ಜಗತ್ತಿನ ಎಲ್ಲಾ ದೇಶ, ಜನಾಂಗ, ಮತ, ಜಾತಿ, ಧರ್ಮಗಳಲ್ಲಿ ಸರ್ವಮಾನ್ಯವಾಗಿರುವ ಹಾಗೂ ಸಮಾಜದಲ್ಲಿ ಕುಟುಂಬದ ರಚನೆಗೆ 'ವಿವಾಹ'ವೇ ಕೇಂದ್ರ ಎನ್ನುವುದು ಎಲ್ಲಾ ವಿದ್ವಾಂಸರ ಒಮ್ಮತದ ಅಭಿಪ್ರಾಯವಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಶೋಡಷ ಸಂಸ್ಕಾರಗಳಲ್ಲಿ ವಿವಾಹ ಸಂಸ್ಕಾರಕ್ಕೆ ಅಗ್ರಸ್ಥಾನ ಲಭಿಸಿದೆ. ಆಶ್ರಮಗಳಲ್ಲಿ ಸರ್ವಶ್ರೇಷ್ಠ ಎಂಬ ಪ್ರಶಂಸೆಗೂ, ಋಷಿಗಳಿಂದ 'ಧನ್ಯೋ ಗೃಹಸ್ಥಾಶ್ರಮಃ' (ಗೃಹಸೂತ್ರ : ಶ್ಲೋಕ ೨೦) ಎಂಬ ಮನ್ನಣೆಗೂ ಅದು ಪಾತ್ರವಾಗಿದೆ.

> "ವಿವಾಹ- (೧) ಸಂಸ್ಕಾರಗಳಲ್ಲೆಲ್ಲಾ ಬಹಳ ಮಹತ್ವಪೂರ್ಣವಾದದ್ದು. ಇದು ಎಲ್ಲಾ ಸಂಸ್ಕಾರಗಳಿಗೂ ಮೂಲ. ಏಕೆಂದರೆ ಎಲ್ಲಾ ಆಚಾರ, ನೇಮಗಳು, ಯಜ್ಞಯಾಗಗಳು, ದಾನ, ಧರ್ಮ ಮುಂತಾದವು ಗೃಹಸ್ಥನ ಸುತ್ತ ಹೆಣೆದುಕೊಂಡಿವೆ. ಪ್ರತಿಯೊಬ್ಬ ಮನುಷ್ಯನೂ ವಿವಾಹವಾಗಿ ಗೃಹಸ್ಥನಾಗಬೇಕೆಂದು ಶಾಸ್ತ್ರಗಳು ಹೇಳುತ್ತವೆ. ಎಲ್ಲಾ ಶಾಸ್ತ್ರಗಳೂ ಗೃಹಸ್ಥ ಜೀವನದ ಹಿರಿಮೆಯನ್ನು ಕೊಂಡಾಡಿವೆ. ಮಿಕ್ಕ ಮೂರು ಆಶ್ರಮಗಳಿಗೆ ಗೃಹಸ್ಥಾಶ್ರಮವು ಆಶ್ರಯವಾಗಿದೆ. ಅವಿವಾಹಿತನು ಕರ್ತವ್ಯ ನಿರ್ವಹಣೆಗೆ ಅನರ್ಹ. ಐಹಿಕ ಜೀವನವನ್ನು ನಿರ್ಲಕ್ಷಿಸದೆ, ಇಚ್ಛೆಯಿಂದಲೇ ಸ್ವೀಕರಿಸಿ, ಅಧ್ಯಾತ್ಮದ ಅನುಭವಕ್ಕೆ ಸೋಪಾನ ಮಾಡಿಕೊಳ್ಳಬೇಕೆಂದು ಹೇಳುತ್ತಾರೆ. ವಧು ಒಬ್ಬಳನ್ನು ಜೀವನದ ಜೊತೆಗಾರ್ತಿಯಾಗಿ,

ಸಹಧರ್ಮಿಣಿಯಾಗಿ ಸ್ವೀಕರಿಸಿ ಬ್ರಹ್ಮಚರ್ಯ ಹಂತದಿಂದ ಜೀವಿಯು ಗೃಹಸ್ಥನ ನೆಲೆಗೆ ಸೇರಲು ಮಾಡುವ ಸಂಸ್ಕಾರವೇ ವಿವಾಹ. ಗಂಡು ಹೆಣ್ಣುಗಳು ಸತಿಪತಿಗಳಾಗಿ ಒಂದಾಗಬೇಕಾದರೆ ಧಾರ್ಮಿಕ ವಿಧಿಗಳ ಮನ್ನಣೆ ಬೇಕೇಬೇಕು. ವಿವಾಹದ ಸಮಯದಲ್ಲಿ ನಡೆಯುವ ಧಾರ್ಮಿಕ ವಿಧಿಗಳು ಈ ಸಂಸ್ಕಾರಕ್ಕೆ ಪಾವಿತ್ರ್ಯತೆಯನ್ನು ತಂದುಕೊಡುತ್ತವೆ. ವೈದಿಕ ವಿವಾಹಕ್ಕೆ ಮೊದಲು ವಧೂ-ವರರನ್ನು ಆರಿಸಿ ನಿರ್ಣಯಿಸಬೇಕು. ಸಗೋತ್ರವಲ್ಲದ, ಸಪಿಂಡವಲ್ಲದ ಸಂಬಂಧವನ್ನಾರಿಸಬೇಕು. ವಿಧಿವತ್ತಾಗಿ ನಡೆಯುವ ವಿವಾಹ ಸಂಸ್ಕಾರದಲ್ಲಿ ಪ್ರಮುಖ ಅಂಶಗಳೆಂದರೆ; ೧. ವಾಗ್ದಾನ(ನಿಶ್ಚಿತಾರ್ಥ), ೨. ವರ-ವರಣ (ವರನ ಔಪಚಾರಿಕ ಸಮ್ಮತಿ), ೩. ಕನ್ಯಾದಾನ (ವಿಧಿವತ್ತಾಗಿ ಕನ್ಯಾಪಿತೃವು ವರನಿಗೆ ದಾನ ನೀಡುವುದು), ೪. ವಿವಾಹ ಹೋಮ, ೫. ಪಾಣಿಗ್ರಹಣ (ವಧುವಿನ ಕೈಯ್ಯನ್ನು ವರನೂ, ವರನ ಕೈಯನ್ನು ವಧುವೂ ಹಿಡಿದುಕೊಂಡು ವಿವಾಹ ಬಂಧನದಲ್ಲಿ ಒಳಗಾಗುವುದು), ೬. ಹೃದಯ ಸ್ಪರ್ಶ (ಪರಸ್ಪರ ಹೃದಯಗಳನ್ನು ಮುಟ್ಟುವುದು), ೭. ಸಪ್ತಪದಿ (ಸಂಪತ್ತು ಅಭಿವೃದ್ಧಿಗಳ ಸಂಕೇತವಾಗಿ, ವಧೂವರರು ಏಳು ಹೆಜ್ಜೆಗಳನ್ನು ವಿಧಿ ಪ್ರಕಾರ ಇಡುವುದು), ೮. ಅಶ್ಮಾರೋಹಣ (ಸ್ಥಿರತೆ, ಬಲಗಳ ದ್ಯೋತಕವಾಗಿ ಕಲ್ಲಿನ ಬಂಡೆಯನ್ನೇರುವುದು), ೯. ಸೂರ್ಯಾವಲೋಕನ (ವಿವಾಹ ಸಾಕ್ಷಿಯಾಗಿದ್ದ ಸೂರ್ಯನ ದರ್ಶನ), ೧೦. ಧ್ರುವದರ್ಶನ (ನಿರಂತತೆಯ ಮತ್ತು ನಿಷ್ಠೆಯ ದ್ಯೋತಕವಾಗಿ ಧ್ರುವ ಅರುಂಧತೀ ನಕ್ಷತ್ರಗಳನ್ನು ದರ್ಶಿಸುವುದು), ೧೧. ತ್ರಿರಾತ್ರವ್ರತ (ವಿವಾಹದ ಮೊದಲು ಮೂರು ರಾತ್ರಿ ಬ್ರಹ್ಮಚರ್ಯವ್ರತ ಪರಿಪಾಲನೆ ಮಾಡುವುದು), ೧೨. ಚತುರ್ಥೀಕರ್ಮ - ನಾಲ್ಕನೆಯ ದಿನ ಸತಿಪತಿಗಳ ಸಾಂಪ್ರದಾಯಿಕ ಮಿಲನ. ಗಂಡು ಹೆಣ್ಣುಗಳ ನಡುವೆ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಸಾಮರಸ್ಯವನ್ನೇರ್ಪಡಿಸುವ ಈ ಸಂಸ್ಕಾರದ ಇನ್ನೊಂದು ಮೂಲ ಗುರಿಯೆಂದರೆ ವಂಶೋದ್ಧಾರ ಹಾಗೂ ಸಮಾಜ ವ್ಯವಸ್ಥೆಯನ್ನು ಉಳಿಸಿಕೊಂಡು ಕಾಪಾಡಿಕೊಂಡು ಬರುವುದೇ ಆಗಿದೆ.

(೨) ಗಂಡು- ಹೆಣ್ಣನ್ನು ಒಂದು ಗೂಡಿಸುವ ಒಂದು ಧಾರ್ಮಿಕ ವಿಧಿ. ದೇವರು ತೋರಿಸಿದ್ದನ್ನು ಮಾನವನು ವಿಂಗಡಿಸಬಾರದು ಎಂದು ಕ್ರಿಸ್ತ ಹೇಳಿದ ಮಾತು, ಕ್ರೈಸ್ತ ವಿವಾಹದ ಮೂಲವಾಗಿದೆ." (ಅ.ರಾ.ಸೇ (ಸಂ): ೧೯೯೯; ೩೫೭-೩೫೮)

ಸಂಸ್ಕೃತದ 'ವಹ್ ಪ್ರಾಪಣೇ' ಎಂಬ ಧಾತುವಿನಿಂದ ವಿವಾಹ ಶಬ್ದ ಬಂದಿದೆ. ಹೊಂದುವುದು, ಪಡೆಯುವುದು ಎಂಬುದು ಇದರ ಅರ್ಥ. ಕಾಲಾನುಕ್ರಮಣಿಕೆಯಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯು ಹಲವು ಮೂಲಗಳಿಂದ (ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಹಿತ್ಯಕ) ಅರ್ಥ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಸಾಹಿತ್ಯದಲ್ಲಿ ಆಯಾಕಾಲದ ಸಾಮಾಜಿಕ ಚಿತ್ರಣದ ಪ್ರತಿಬಿಂಬವೆಂಬಂತೆ ವಿವಾಹ ಮತ್ತು ಕುಟುಂಬ ಪರಿಕಲ್ಪನೆಯು ವಿವರಣೆಗೆ ಒಳಗಾಗಿದೆ. ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ವಿವಾಹ ಮತ್ತು ಕುಟುಂಬವನ್ನು ವ್ಯಕ್ತಿಸಂಬಂಧಗಳ ಆತ್ಯಂತಿಕ ಸ್ವರೂಪಗಳೆಂಬಂತೆ ನಿರೂಪಿಸಲಾಗಿವೆ. ಆಧುನಿಕ ಸಾಹಿತ್ಯ

ಪ್ರಕಾರಗಳಲ್ಲಿ ಮಹಿಳೆಯರಿಂದ ನಿರ್ಮಿತಿಗೊಂಡ ಕಾದಂಬರಿಗಳ ಸಂಕಥನಗಳು ಕೂಡ ವಿವಾಹ ಮತ್ತು ಕುಟುಂಬದ ಭೂಮಿಕೆಯನ್ನು ಗಂಭೀರವಾಗಿ ಪರಿಗಣಿಸಿವೆ. ಮಾತ್ರವಲ್ಲದೆ ಕಾದಂಬರಿ ಪಠ್ಯಗಳಲ್ಲಿ ಸ್ತ್ರೀಯರ ಬದುಕಿನ ಪ್ರತಿಬಿಂಬಗಳು ವಿವಾಹ ಮತ್ತು ಕುಟುಂಬದ ಆವರಣದಲ್ಲಿ ಅನಾವರಣಗೊಂಡಿರುವುದು ವ್ಯಕ್ತವಾಗುತ್ತದೆ. ಹತ್ತೊಂಬತ್ತನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೂ ಮಹಿಳೆಯರಿಂದ ರಚನೆಗೊಂಡಿರುವ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ವಸ್ತುವಿಷಯವು ಸ್ತ್ರೀಯರ ಅಸ್ತಿತ್ವದ ತಳಹದಿಯಾಗಿ ಕಾಣಿಸಿಕೊಳ್ಳುತ್ತವೆ. ಸ್ತ್ರೀ ಪುರುಷರ ಸ್ಥಾಪಿತ ಸಂಬಂಧವಾದ ವಿವಾಹ ಮತ್ತು ಆ ಮೂಲಕ ರಚನೆಗೊಳ್ಳುವ ಕುಟುಂಬದ ವಸ್ತುವಿಷಯವು ಮಹಿಳೆಯರ ಕಾದಂಬರಿಗಳ ನೆಲೆಯಿಂದ ಒಂದು ಶತಮಾನದ ದಾಖಲೆಗಳಾಗಿ, ಚರಿತ್ರೆಯಾಗಿ ಕಾಣಿಸಿಕೊಳ್ಳುತ್ತವೆ. ಇದು 'ಕನ್ನಡದ ಮಹಿಳೆಯರ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ' ಎನ್ನುವ ಶೋಧವನ್ನು ನಡೆಸಲು ಮುಖ್ಯ ಪ್ರೇರಣೆಯಾಗಿದೆ.

## ೧.೨. ಅಧ್ಯಯನದ ಹಿಂದಿನ ಉದ್ದೇಶ :

ಈ ಮಹಾಪ್ರಬಂಧದ ಮೂಲ ಉದ್ದೇಶ ಕನ್ನಡ ಮಹಿಳೆಯರ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯ ವಿಭಿನ್ನ ನೆಲೆಗಳನ್ನು ಶೋಧಿಸುವ ಕಾರ್ಯವಾಗಿದೆ. ತಿರುಮಲಾಂಬ ಅವರಿಂದ ತೊಡಗುವ ಈ ಕಾದಂಬರಿಗಳ ನಿರ್ವಚನವು ವಿವಾಹ ಮತ್ತು ಕುಟುಂಬದ ವಿನ್ಯಾಸಗಳನ್ನು ಗುರುತಿಸುವ, ವಿಶ್ಲೇಷಿಸುವ, ವಿಮರ್ಶಿಸುವ ಉದ್ದೇಶವನ್ನು ಹೊಂದಿದೆ. ಪುರುಷರ ಜಗತ್ತನ್ನೇ ತನ್ನದು ಎಂದು ಪರಿಭಾವಿಸಿಕೊಂಡು ಬದುಕುವ ಸ್ತ್ರೀಯರ ಒಟ್ಟು ಬದುಕಿನಲ್ಲಿ ಪ್ರಾಪಂಚಿಕ ಅನುಭವ ಎನ್ನುವುದು ಸಾರ್ವತ್ರಿಕ ಸ್ವರೂಪದಲ್ಲಿಯೇ ಪರಿಭಾವಿತಗೊಂಡಿದೆ. ಕನ್ನಡದಲ್ಲಿ ಮಹಿಳಾ ಬರಹಗಾರರು ಈ ಪ್ರಪಂಚದ ಅನುಭವಗಳನ್ನು ಅವುಗಳ ಸಾರ್ವತ್ರಿಕ ಸ್ವರೂಪದಲ್ಲಿ ಗ್ರಹಿಸುವ ಬದಲು ವಿಶೇಷ ದೃಷ್ಟಿಕೋನಗಳಿಂದ ಕಾಣಲು ಯತ್ನಿಸಿದ್ದಾರೆ. ಶತಮಾನಗಳಿಂದಲೂ ಬರಹಗಳ ಮೂಲಕ ಸಂವಹನೆಯ ಆಕಾಂಕ್ಷೆ ಮತ್ತು ಸಂವಹನ ಒಡ್ಡುವ ಸವಾಲುಗಳನ್ನು ಎದುರಿಸುವ ನೆಲೆಯಲ್ಲಿ ಮಹಿಳಾ ಬರಹಗಾರರಿಗೆ ಪ್ರಧಾನವಾಹಿನಿಯ ಜೊತೆಗೆ ಅನುಸಂಧಾನ ನಡೆಸುವುದು ಸಾಧ್ಯವಾಗಿಲ್ಲ ಎನ್ನುವುದು ನಿಜ. ಇದಕ್ಕೆ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಸಂಸ್ಕೃತಿಗಳ ಪಾತಳಿಗಳಿಂದಲೇ ಕಾರಣಗಳನ್ನು ಹುಡುಕಬೇಕಾಗುತ್ತದೆ; ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಇದಲ್ಲದೆ, ಸುಮಿತ್ರಾಬಾಯಿಯವರು ಗುರುತಿಸುವಂತೆ ;

> "ಯಾವುದೇ ಅರ್ಥವಿರದ ತನ್ನ ಒಳಬದುಕನ್ನು ತುಂಬಿಕೊಳ್ಳಲು ತಾನಿರುವ ಪರಿಸ್ಥಿತಿಯ ವಿರುದ್ಧ ಬಂಡೆದ್ದು ತನ್ನನ್ನು ಪ್ರತಿಪಾದಿಸಿಕೊಳ್ಳಲು ಲೇಖಕಿ ಯತ್ನಿಸುತ್ತಾಳೆ. ಇದರಲ್ಲಿ ತಾನು ಬದುಕುವುದಕ್ಕಿಂತ ಭಿನ್ನವಾದ ಪ್ರಪಂಚವನ್ನು ಸೃಷ್ಟಿಸಲು ಆಕೆಗೆ ಆತ್ಮಾಭಿವ್ಯಕ್ತಿಗೆ ತೊಡಗುವುದೊಂದೇ ಮಾರ್ಗ. ಹೀಗೆ (ಬರವಣಿಗೆಯನ್ನು ತನ್ನ ಅಭಿವ್ಯಕ್ತಿಗೆ ಆಯ್ದುಕೊಂಡು) ಮಹಿಳೆ ಅತ್ಯಲ್ಪ ಆಕಾಂಕ್ಷೆಯ ಜೊತೆ ತನ್ನ ನೆನಪುಗಳನ್ನು ಬರೆಯತೊಡಗುತ್ತಾಳೆ. ಆತ್ಮಕಥೆಯನ್ನು ಕಾದಂಬರಿಯಾಗಿಸುತ್ತಾಳೆ. ತನ್ನ ಭಾವನೆಗಳಿಗೆ ಕವಿತೆಗಳಲ್ಲಿ ಉಸಿರು ತುಂಬುತ್ತಾಳೆ. ಆದರೆ ತನ್ನ ಜೀವನದ ಬರಡುತನವನ್ನು ತುಂಬಲು ಆಕೆ ಹೊರಟಾಗ, ಅವಳ

> ರಚನೆ ಕೇವಲ ಕಲ್ಪನಾಮಯವಾಗುತ್ತದೆ. ಅದಕ್ಕೆ ಹೆಚ್ಚು ಕಾಲವನ್ನಾಗಲೀ, ಗಮನವನ್ನಾಗಲೀ ನೀಡದಿರುವುದರಿಂದ ಅವುಗಳು ಅಷ್ಟೇ ಕಡಿಮೆ ಬೆಲೆ ಬಾಳುತ್ತವೆ. ಮಧ್ಯವಯಸ್ಸಿನಲ್ಲಿ, ತಮ್ಮ ಅಸ್ತಿತ್ವದಲ್ಲಿನ ಕೊರತೆ ನಿವಾರಿಸಲೆಂದು ಲೇಖನಿ ಹಿಡಿಯುವ ಮಹಿಳೆಯರು ಗಂಭೀರವಾದ ತರಬೇತಿಯ ಅಭಾವದಿಂದಾಗಿ ಹವ್ಯಾಸಿತನದಿಂದ ಮೇಲೇರಲಾರದೆ ಹೋಗುತ್ತಾರೆ."
> (ಸುಮಿತ್ರಾ ಬಾಯಿ ಬಿ.ಎನ್.: ೧೯೯೫; ೧-೨)

ಸುಮಿತ್ರಾ ಬಾಯಿಯವರು ಗುರುತಿಸುವ ಲೇಖಕಿಯರ ಆತ್ಮಾಭಿವ್ಯಕ್ತಿ ಎನ್ನುವುದು ಸಾಮಾಜಿಕ ಚೌಕಟ್ಟಿನೊಳಗಿನ ಸ್ತ್ರೀಯರ ಸ್ವ- ಬಿಂಬ ಎನ್ನುವುದು ಸ್ಪಷ್ಟವಾಗುತ್ತದೆ. ಸ್ತ್ರೀಯರಿಗೆ ಗುರುತಿಸಿಕೊಳ್ಳುವಿಕೆಯ ಪ್ರಶ್ನೆ ಕಾಣಿಸಿಕೊಳ್ಳುವುದು ಪುರುಷರಿಗೆ ಸಿಕ್ಕ ಸಂವಹನದ ಸಾಧ್ಯತೆಗಳ ಅವಕಾಶಗಳ ಅರಿವಿನಿಂದಲೇ ಆಗಿದೆ. (ಭಾಷೆ- ಸಾಹಿತ್ಯ- ಸಂಸ್ಕೃತಿಯ ಅಭಿವ್ಯಕ್ತಿ ಮೂಲದಲ್ಲಿ ಪುರುಷಜನ್ಯವಾಗಿದೆ.) ಹೀಗಾಗಿ ತನಗೆ ದಕ್ಕಿಸಿಕೊಳ್ಳಲಾಗದ ಹಪಹಪಿಕೆಯು ಸ್ತ್ರೀಯರು ಇರುವ ಸ್ಥಿತಿಯನ್ನು ತೆರೆದಿಡುವ ಅಂಶವಾಗಿದೆ. ಸುಮಿತ್ರಾಬಾಯಿಯವರು ಹೇಳುವಂತೆ;

> "ಮೆಚ್ಚಿಸುವುದೇ ಅವಳ ಮೊದಲ ಉದ್ದೇಶ. ತಾನು ಬರೆಯುತ್ತಿರುವುದರಿಂದ ಹೆಣ್ಣಾಗಿ ಇತರರನ್ನು ಮೆಚ್ಚಿಸದೆ ಹೋಗಬಹುದು ಎಂದು ಆಕೆ ಅನೇಕ ಬಾರಿ ಹೆದರುತ್ತಾಳೆ. ಲೇಖಕಿಯಾಗಿ ಇತರರ ಅಸಂತುಷ್ಟಿಗೆ ಕಾರಣಳಾಗುವ ಧೈರ್ಯ ಆಕೆಗಿಲ್ಲ. ತೀರ ಸ್ವಂತಿಕೆಯುಳ್ಳ ಲೇಖಕ ಯಾವಾಗಲೂ ಷಾಕ್ ಕೊಡುತ್ತಿರುತ್ತಾನೆ, ಅಪವಾದಕರವಾಗಿರುತ್ತಾನೆ. ಹೊಸತನ ಎಂದೂ ಸಹ ಹಳತನ್ನು ತಳ್ಳಿಹಾಕುವ ಸ್ವಭಾವದ್ದಾಗಿರುತ್ತದೆ. ಇದುವರೆವಿಗೆ ಪುರುಷರ ಸ್ವಾಮ್ಯವಾಗಿದ್ದ ಕಲೆ ಹಾಗೂ ವಿಚಾರಗಳ ಕ್ಷೇತ್ರಕ್ಕೆ ತನಗೂ ಪ್ರವೇಶ ದೊರಕಿದೆಯೆಂಬುದೇ ಇನ್ನೂ ಮಹಿಳೆಗೆ ಸಂಗತಿಯಾಗಿದ್ದು ಆದರಿಂದಲೇ ಆಕೆ ಬೆರಗಾಗಿದ್ದಾಳೆ. ಆದ್ದರಿಂದಲೆ ತನ್ನಿಂದಾದಷ್ಟು ಚೆನ್ನಾಗಿ ನಡೆದುಕೊಂಡು ಮೆಚ್ಚಿಸಲು ಯತ್ನಿಸುತ್ತಾಳೆ. ಕ್ರಮಗೆಡಿಸಲು, ಹುಡುಕಾಟ ನಡೆಸಲು, ಆಸ್ಫೋಟಿಸಲು ಆಕೆ ಹೆದರುತ್ತಾಳೆ. ತನ್ನ ಸಾಹಿತ್ಯಕ ಸೋಗುಗಳಿಗೆ ವಿನಯ ಸದಭಿರುಚಿಯ ಮೂಲಕ ಪ್ರಾಯಶ್ಚಿತ್ತ ಮಾಡಲು ಆಕೆ ಬಯಸುತ್ತಾಳೆ. ವಿಧೇಯತೆ ಅವಳು ಬಲವಾಗಿ ನಂಬುವ ಖಚಿತ ಮೌಲ್ಯವಾಗಿದೆ. ಕೆಲವು ಆಯ್ದ ಆಲಂಕಾರಿಕ ಸೋಗಿನ ಘನತೆಯ ಮೂಲಕ ತಾನು ಹೆಣ್ಣೆಂಬುದನ್ನು ನೆನಪಿಸುತ್ತಾ, ತನ್ನಿಂದ ಜನ ನಿರೀಕ್ಷಿಸುವ ವೈಯಕ್ತಿಕ ಧ್ವನಿಯನ್ನು ತನ್ನ ಬರಹಕ್ಕೆ ಆಕೆ ನೀಡುತ್ತಾಳೆ. ಆಕೆಯ ಈ ಗುಣಗಳು ಜನಪ್ರಿಯ ಕಾದಂಬರಿಗಳನ್ನು ಬರೆಯಲು ಸಹಕಾರಿ. ಆದರೆ ಅಪರಿಚಿತ ದಾರಿಯಲ್ಲಿನ ಸಾಹಸ ಪ್ರವೃತ್ತಿಯನ್ನು ಈಕೆಯಿಂದ ನಾವು ನಿರೀಕ್ಷಿಸಲಾಗುವುದಿಲ್ಲ. ಬರವಣಿಗೆಯ ಮೂಲಕ ಸ್ವತಂತ್ರರಾದ ಈ ಮಹಿಳೆಯರು ತಮ್ಮ ವರ್ತನೆ ಭಾವನೆಗಳ ಸ್ವಂತಿಕೆಯ ದೃಷ್ಟಿಯಿಂದ ಕಳಪೆ ಏನೂ ಅಲ್ಲ. ಆದರೆ ಅವರಲ್ಲಿ ಬಹುಮಂದಿ ತಾವು ಯಾವ ಪುರುಷರ ಆಜ್ಞೆಯನ್ನು ತಿರಸ್ಕರಿಸುತ್ತಾರೋ ಅವರಿಗಿಂತ ಹೆಚ್ಚು ಲಹರಿ ಮನುಷ್ಯರಾಗಿ, ವಿಲಕ್ಷಣವಾಗಿ ವರ್ತಿಸುತ್ತಿರುತ್ತಾರೆ. ಈ ವಿಲಕ್ಷಣತೆಯನ್ನು, ತಮ್ಮ ಪ್ರತಿಭೆಯನ್ನು ತಮ್ಮ ಬದುಕುವ ರೀತಿಗೆ,

ಮಾತುಕತೆಗಳಿಗೆ, ಪತ್ರವ್ಯವಹಾರಕ್ಕೆ ಬಳಸುವ ಇವರು ಬರವಣಿಗೆಗೆ ತೊಡಗಿದಾಗ ಇವರು ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗುತ್ತಾರೆ. ಅದು ಪುರುಷರ ಪ್ರಪಂಚವಾದ್ದರಿಂದ ಅಲ್ಲಿ ಅವರು ತೊದಲ ತೊಡಗುತ್ತಾರೆ. ಇದಕ್ಕೆ ವಿರುದ್ಧವಾಗಿ ಪುರುಷರನ್ನೇ ಅನುಕರಿಸಿ, ವೈಚಾರಿಕತೆಯನ್ನು ತನ್ನ ಅಭಿವ್ಯಕ್ತಿ ತಂತ್ರವನ್ನಾಗಿ ಮಾಡಿಕೊಂಡ ಮಹಿಳೆ ತಾನು ಸಂಶಯಿಸುವ ತನ್ನತನದ ಕತ್ತನ್ನೇ ಕಿವುಚಬಹುದು. ಅತಿ ಪಂಡಿತೆಯಾಗಿ ಜಾಗರೂಕತೆಯಿಂದ ಗಂಡಸಿನ ಒರಟುತನ, ಚುರುಕುತನಗಳನ್ನು ಅನುಸರಿಸುವ ಈಕೆ ಒಳ್ಳೆಯ ಸಿದ್ಧಾಂತಿಯಾಗಬಹುದು. ಆ ದಿಕ್ಕಿನಲ್ಲಿ ನಿಜವಾದ ಯೋಗ್ಯತೆಯನ್ನೂ ಸಾಧಿಸಬಹುದು. ಆದರೆ ಪುರುಷನಿಗಿಂತ 'ಭಿನ್ನ'ವಾದದ್ದು ತನ್ನಲ್ಲಿ ಏನಿದೆಯೋ ಅದನ್ನಾಕೆ ತಿರಸ್ಕರಿಸುತ್ತಲೇ ಇರಬೇಕಾಗುತ್ತದೆ. ಹುಚ್ಚು ಎನಿಸಬಲ್ಲ ಮಹಿಳೆಯರಿದ್ದಾರೆ, ವಿವೇಕಿಗಳೂ ಇದ್ದಾರೆ. ಆದರೆ ಜೀನಿಯಸ್ ಎಂದು ಕರೆಯಬಲ್ಲಂಥ ಹುಚ್ಚುತನ ಹೊಂದಿರುವ ಯಾವೊಬ್ಬ ಮಹಿಳೆಯೂ ಇನ್ನೂ ಹುಟ್ಟಿ ಬಂದಿಲ್ಲ." (ಸುಮಿತ್ರಾಬಾಯಿ ಬಿ.ಎನ್:೧೯೯೫ ; ೪-೫)

ಮೇಲಿನ ವಿವರಗಳು ನೇರನೋಟಕ್ಕೆ ಸತ್ಯವಾಗಿ ಕಂಡುಬರುತ್ತವೆ. ಆದರೆ ಅದರ ಹಿಂದೆ ಬಹಳ ಸಂಕೀರ್ಣವಾದ ಚಾರಿತ್ರಿಕ ಬೆಳವಣಿಗೆಗಳಿವೆ. ಸಂಸ್ಕೃತಿ-ಜ್ಞಾನಕ್ಷೇತ್ರ- ಸಾಹಿತ್ಯದ ಒಳಗೆ ಸ್ತ್ರೀಯರಿಗೆ ಸಂವಹನ ಎದುರು ಮಾಡಿದ ಸವಾಲುಗಳ ಚಿತ್ರಣವಿದೆ. ಸುಮಿತ್ರಾಬಾಯಿಯವರು ಉಲ್ಲೇಖಿಸುವ ಮೇಲಿನ ಮಾತುಗಳು ಮಹಿಳೆಯರ ಬರಹಗಳಿಗೆ ಸಂಬಂಧಿಸಿದಂತೆ ಪ್ರಧಾನವಾಹಿನಿಯ ವಿಮರ್ಶೆಯನ್ನು ಧ್ವನಿಸುತ್ತವೆ. ವಿಮರ್ಶೆಯ ಸಂದರ್ಭದಲ್ಲಿ ನಿರ್ದಿಷ್ಟ ಕೃತಿಯನ್ನಷ್ಟೇ ಪ್ರಧಾನವೆಂದು ಭಾವಿಸಿದ್ದರೆ, ವಿಮರ್ಶೆಯು ಹೆಚ್ಚು ವಸ್ತುನಿಷ್ಠವಾಗಿರುತ್ತದೆ. ಮಾತ್ರವಲ್ಲದೆ, ಸುಮಿತ್ರಾಬಾಯಿಯವರು ಮೇಲೆ ಗುರುತಿಸುವ ವಿಚಾರಗಳೆಲ್ಲವೂ ಒಂದರ್ಥದಲ್ಲಿ ಗೌಣವಾಗಿ ಬಿಡುತ್ತವೆ. ಸಾಹಿತ್ಯ ವಿಮರ್ಶಕರು ಮಹಿಳೆಯರ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಕೃತಿಗಳ ಬಗ್ಗೆ ಮಾತನಾಡುತ್ತೇವೆ ಎನ್ನುತ್ತಲೇ ಇಡೀ ಮಹಿಳೆಯರ ಬರಹಗಳನ್ನು ಪುರುಷ ಮತ್ತು ಆ ಮನೋಭಾವದ ಬರಹಗಾರರ ಬರಹಗಳೊಂದಿಗೆ ತುಲನಾತ್ಮಕಗೊಳಿಸಿ ಅಧಿಕೃತವಾಗಿ ಮಾತನಾಡುವ 'ಗರ್ವ'ವನ್ನು ಪ್ರದರ್ಶಿಸುತ್ತಾ ಬಂದಿದ್ದಾರೆ. ಮಹಿಳೆಯರ ಬರಹಗಳಿಗೆ ಸಂಬಂಧಿಸಿದಂತೆ ಪುರುಷ ಮತ್ತು ಆ ಮನೋಭಾವದ ವಿಮರ್ಶಕರ ಅಭಿಪ್ರಾಯಗಳನ್ನು 'ಗರ್ವ'ವೆಂದು ಏಕೆ ಕರೆಯಬೇಕೆಂದರೆ ಮಹಿಳೆಯರ ಬರಹಗಳಲ್ಲಿ ವಿಶೇಷವಾದದ್ದು ಏನಿರಲು ಸಾಧ್ಯ ಎನ್ನುವ ಪೂರ್ವಗ್ರಹದಿಂದಲೇ ಸಾಹಿತ್ಯ ಕೃತಿಗೂ ಹಾಗೂ ಆ ಕೃತಿ ನಿರ್ಮಾಣಗೊಂಡ ಸ್ತ್ರೀಯರ ಸಂದರ್ಭಕ್ಕೂ ನಡುವಿನ ಸಂಬಂಧಗಳನ್ನು ಅತಿ ಸರಳವಾಗಿ ಸ್ವಯಂ ಸಿದ್ಧವೆಂದು ಅಂಗೀಕರಿಸುತ್ತಾ ಬಂದಿರುವುದು. ಅಲ್ಲದೆ ಮಹಿಳೆಯರ ಅನುಭವಗಳನ್ನು ತೆಳುರಚನೆಗಳೆಂದು ಸಾದಾಸೀದಾ ಏಕಪಕ್ಷೀಯವಾಗಿ ನಿರಾಕರಿಸಿರುವುದು. ಇದರಿಂದಾಗಿ ಮಹಿಳೆಯರಿಂದ ರಚನೆಗೊಂಡ ಕೃತಿಗಳಿಗೆ ಪರಿಪೂರ್ಣವಾಗಿ, ಅರ್ಥಪೂರ್ಣವಾಗಿ ಸಮಗ್ರವಾಗಿ ಬರಬೇಕಾದ ವಿಮರ್ಶೆಯು ಬಾರದೆ ಹೋಗಿದೆ. ಮಹಿಳೆಯರ ಹಲವಾರು ಕೃತಿಗಳು ವಿಮರ್ಶೆಯ ಮಾನದಂಡಕ್ಕೆ ಒಳಗಾಗದೆ ಗೌಣವಾಗಿ ಬಿಟ್ಟಿವೆ. ಇದರಿಂದಾಗಿ ಸಾಹಿತ್ಯ ವಿಮರ್ಶೆ ಎನ್ನುವ ಬರಹಗಳು ಸ್ತ್ರೀಯರ ಬರಹಗಳನ್ನು ಹುಟ್ಟಿನಲ್ಲೇ ಉಸಿರು ಗಟ್ಟಿಸುವ ಸೂಕ್ಷ್ಮ ತಂತ್ರವೆನ್ನುವುದು ಬಯಲಾಗುತ್ತದೆ. ಮಹಿಳೆಯರ ಕಾದಂಬರಿಗಳಿಗೆ ಬಂದ ವಿಮರ್ಶೆಗಳಿಗೆ ಸೀಮಿತಗೊಳಿಸಿ

ಹೇಳುವಾಗಲು ಮೇಲಿನ ಅಂಶ ವಾಸ್ತವ ಎನಿಸುತ್ತದೆ. ಮಹಿಳೆಯರ ಕಾದಂಬರಿಗಳಿಗೆ ಸಂಬಂಧಿಸಿದ ಸಂವಾದಗಳನ್ನು ಕನ್ನಡದಲ್ಲಿ ಓದು ಬರಹದ ಮುಂದಾಳುತನವನ್ನು ವಹಿಸಿದ ಸಾಹಿತ್ಯ ವಿಮರ್ಶೆಯ ಮಂದಿ ಕುಡಿಯಲ್ಲೇ ಚಿವುಟಿ ಹಾಕಿದ್ದಾರೆ. *, ಕನ್ನಡದ ವಿಮರ್ಶೆಯ ಸಂದರ್ಭದಲ್ಲಿ ಹತ್ತೊಂಬತ್ತನೇ ಶತಮಾನದ ಎಂಬತ್ತರ ದಶಕದ ನಂತರದಲ್ಲಿ ಮಹಿಳೆಯರ ಕಾದಂಬರಿ ಬರಹಗಳ ವಿಮರ್ಶೆ, ಅಧ್ಯಯನಗಳು ಸ್ತ್ರೀವಾದಿ ಅಧ್ಯಯನದ ಭಾಗವಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಕಾದಂಬರಿಗಳ ವಸ್ತು, ವಿಷಯ, ತಂತ್ರ, ವಿನ್ಯಾಸ, ಶೈಲಿ ಇವುಗಳಿಗೆ ಸಂಬಂಧಿಸಿದಂತೆಯೂ ಪರಿಪೂರ್ಣ ವಿಮರ್ಶೆ ಸಿಗುವುದು ವಿರಳವಾಗಿದೆ. ವಿವಾಹ ಮತ್ತು ಕುಟುಂಬ ಪರಿಕಲ್ಪನೆಯ ನೆಲೆಯಿಂದ ಕನ್ನಡದ ಮಹಿಳೆಯರ ಕಾದಂಬರಿಗಳನ್ನು ಅಧ್ಯಯನ ಮಾಡುವುದು ಈ ಕಾರಣಕ್ಕಾಗಿ ಮುಖ್ಯವೆಂದು ಪರಿಭಾವಿಸಲಾಗಿದೆ. ಈ ಅಧ್ಯಯನದಲ್ಲಿ ವಿಮರ್ಶೆಯಲ್ಲಿ ಹತ್ತಿಕ್ಕಲಾಗಿರುವ, ಅಂಚಿಗೆ ಒತ್ತರಿಸಲಾಗಿರುವ ಸ್ತ್ರೀಯರ ಬದುಕಿನ ದ್ರವ್ಯಗಳು ಪ್ರಧಾನವಾಹಿನಿಯ ನಿರೀಕ್ಷಿತ ಮೌಲ್ಯಗಳಿಗೆ ಪೂರಕವಾಗಿ, ಪ್ರತಿಯಾಗಿ ಯಾವ ಬಗೆಯಲ್ಲಿ ದಾಖಲೀಕರಣಕ್ಕೆ ಒಳಗಾಗಿವೆ ಎನ್ನುವ ಅಂಶಗಳನ್ನು ಅನಾವರಣಗೊಳಿಸುವ ಉದ್ದೇಶವಿದೆ. ವಿವಾಹ ಮತ್ತು ಕುಟುಂಬದ ನೆಲೆಯೇ ಸ್ತ್ರೀಯರ ಇರುವಿಕೆಯ ಸ್ಥಿತಿಯಾಗಿರುವುದರಿಂದ ಇವು ಸ್ತ್ರೀಯರ ಸಮಗ್ರ ಬದುಕಿನ ಮೇಲೆ ಯಾವ ಬಗೆಯಲ್ಲಿ ಪ್ರಭಾವಗಳನ್ನು ಬೀರಿವೆ, ಅವರ ಬದುಕನ್ನು ನಿಯಂತ್ರಿಸಿವೆ ಎನ್ನುವುದನ್ನು ಕಂಡುಕೊಳ್ಳುವ ಉದ್ದೇಶ ಇದೆ. ಕುಟುಂಬ ಹೇಗೆ ವ್ಯಕ್ತಿಗಳಿಂದ ಕಟ್ಟಲಾದ ರಚನೆಯೋ ಹಾಗೆಯೇ ಸ್ತ್ರೀಯರಿಂದ ನಿರ್ಮಿತಿಗೊಂಡ ಕಾದಂಬರಿ ಎನ್ನುವ ಕಥನ (Narration) ಕೂಡ ಭಾಷಿಕವಾಗಿ ಕಟ್ಟಲಾದ ರಚನೆಯಾಗಿದೆ. ಆದುದರಿಂದ ಸ್ತ್ರೀಯರಿಂದ ರಚನೆಗೊಂಡ ಕಥನಗಳ ಆಳದಲ್ಲಿ ಒಂದು ಪರಿಮಿತ ಸಂಹಿತೆ ಅಥವಾ ವ್ಯವಸ್ಥೆ ಇದೆ. ಈ ವ್ಯವಸ್ಥೆಯನ್ನು ನಿರ್ದಿಷ್ಟವಾಗಿ ಗುರುತಿಸುವ ಉದ್ದೇಶ ಈ ಅಧ್ಯಯನಕ್ಕೆ ಇದೆ. ಈ ಎಲ್ಲ ಕಾರಣಗಳಿಂದಾಗಿ ಕಥನದ ಕಾಲ, ಧೋರಣೆ, ಮತ್ತು ಪ್ರಯೋಗಗಳ ವಿಶ್ಲೇಷಣೆಯು ಉದ್ದೇಶದ ನೆಲೆಯಿಂದ ಮುಖ್ಯವಾಗಿದೆ.

ಇಲ್ಲಿ ಒಟ್ಟು ಹನ್ನೆರಡು ಮಹಿಳಾ ಬರಹಗಾರರ ಕಾದಂಬರಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಪ್ರಾದೇಶಿಕ ಭಿನ್ನತೆ, ಕಾಲದ ಪರಿಮಿತಿ, ಸಾಂಸ್ಕೃತಿಕ ಸಂದರ್ಭಗಳನ್ನು ಗಮನದಲ್ಲಿಟ್ಟುಕೊಂಡಂತೆ, **ನಂಜನಗೂಡು ತಿರುಮಲಾಂಬ, ಆರ್. ಕಲ್ಯಾಣಮ್ಮ, ತ್ರಿವೇಣಿ, ಎಂ.ಕೆ.ಇಂದಿರಾ, ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್, ಅನುಪಮಾ ನಿರಂಜನ, ವೀಣಾ ಶಾಂತೇಶ್ವರ, ಕೆ. ತಾರಾಭಟ್, ಸವಿತಾ ನಾಗಭೂಷಣ, ಎಚ್.ಎಸ್.ಚಂಪಾವತಿ, ಉಮಾರಾವ್** ಅವರ ಪ್ರಾತಿನಿಧಿಕ ಕಾದಂಬರಿಗಳನ್ನಷ್ಟೇ ಆಯ್ಕೆಮಾಡಿಕೊಂಡು ಅಧ್ಯಯನ ನಡೆಸಲಾಗಿದೆ. ಈ ನಿರ್ವಚನವು ಪಠ್ಯದಲ್ಲಿ ನಿರೂಪಿತಗೊಂಡಿರುವ ವಿವಾಹ ಮತ್ತು ಕುಟುಂಬದ ನಿಲುವುಗಳ ಮಂಡನೆಯನ್ನು ಮೂಲದಲ್ಲಿಟ್ಟು ನಡೆಸಲಾದ ವಿಮರ್ಶೆಯ ಒಟ್ಟು ವಾಗ್ವಾದವಾಗಿದೆ.

## ೧.೩. ಅಧ್ಯಯನ ವಿಧಾನ

ಒಂದು ಕಾದಂಬರಿ ಅದು ರೂಪುಗೊಳ್ಳುವ ಸಾಂಸ್ಕೃತಿಕ ಸಂದರ್ಭ ಹಾಗೂ ಬರಹಗಾರರಿಗೆ ಸಂಬಂಧಿಸಿದ ಚಾರಿತ್ರಿಕ ಮಹತ್ವವನ್ನು ಬಿಂಬಿಸುವಂಥದ್ದಾಗಿರುತ್ತದೆ. ಪಠ್ಯಗಳ ವಿಮರ್ಶೆಯಲ್ಲಿ 'ವಿವಾಹ' ಮತ್ತು 'ಕುಟುಂಬ'ದ ಪರಿಕಲ್ಪನೆಯ ತಾತ್ತ್ವಿಕತೆಯನ್ನು ಮೂಲದಲ್ಲಿ ಗ್ರಹಿಸಿಕೊಳ್ಳಲಾಗಿದೆ. ಇದರಿಂದಾಗಿ ಅಧ್ಯಯನದ ಸಂವಿಧಾನವನ್ನು ಪ್ರಜ್ಞಾಪೂರ್ವಕವಾಗಿ ಸಮಾಜಶಾಸ್ತ್ರ, ಮಾನವಶಾಸ್ತ್ರ, ವಿಕಾಸಮನಃಶಾಸ್ತ್ರಗಳ ಚೌಕಟ್ಟಿನಲ್ಲಿ ನಿರ್ಬಂಧಿಸಿಕೊಳ್ಳಲಾಗಿದೆ. ಒಂದು ಕಾದಂಬರಿಯನ್ನು ಕಾದಂಬರಿಯಾಗಿಯೇ ಓದುವುದೆಂದರೆ ಅದರ ಮೇಲೆ ಯಾವುದೇ ಪೂರ್ವ ಷರತ್ತುಗಳನ್ನಾಗಲೀ, ಒತ್ತಾಯಗಳನ್ನಾಗಲೀ ಹೇರದಿರುವುದು. ಅಂದರೆ ನಿರ್ದಿಷ್ಟ ಕಾದಂಬರಿಯ ಓದು 'ಓದುಗ'ರನ್ನು 'ನಿರರ್ಗಳವಾಗಿ ಅರ್ಪಿಸಿಕೊಳ್ಳಬೇಕು', 'ಅದರ ಅನುಭವಗಳಿಗೆ ನಮ್ಮನ್ನು ನಾವು ತೆರೆದುಕೊಳ್ಳಬೇಕು ಎಂದು ಬಯಸುತ್ತದೆ'. ಆದರೆ 'ಪರಿಕಲ್ಪನೆ'ಗಳ ನೆಲೆಯಲ್ಲಿ ಹೊರಡುವ ವಿಮರ್ಶೆ ಒಂದು 'ಅದೃಶ್ಯ' ಚೌಕಟ್ಟನ್ನು ಅದರ ಮೂಲದಲ್ಲಿ ನಿರ್ಮಿಸಿಕೊಂಡು ಬಿಟ್ಟಿರುತ್ತದೆ. ನಿರ್ದಿಷ್ಟ ಪರಿಕಲ್ಪನೆಯ ಕೇಂದ್ರದಲ್ಲಿ ನಡೆಯುವ ವಸ್ತುನಿಷ್ಠ ವಿಮರ್ಶೆ ಪ್ರಾರಂಭಗೊಳ್ಳುವುದೇ ಒಂದು ಪರಸ್ಪರಾನ್ವಯದ ಮೇಲೆ. ಈ ಮಹಾಪ್ರಬಂಧದಲ್ಲಿ ಸ್ತ್ರೀವಾದದ ಸೈದ್ಧಾಂತಿಕ ಅಥವಾ ತಾತ್ತ್ವಿಕತೆಯ ಚೌಕಟ್ಟಿನಲ್ಲಿ ಕನ್ನಡದ ಮಹಿಳೆಯರ ಕಾದಂಬರಿ ಬರಹಗಳನ್ನು ಸ್ಥಿತಬಂಧಗೊಳಿಸುವ ಪ್ರಯತ್ನವನ್ನು ನಡೆಸಲಾಗಿದೆ. ಇದು ವಿಚಾರ ಮತ್ತು ಅನುಭವ ಹಾಗೂ ಬುದ್ಧಿ ಮತ್ತು ಭಾವ ಇವುಗಳ ನಡುವೆ ಪರಸ್ಪರಾನ್ವಯವಿದೆ ಎಂದುಕೊಂಡೇ ಹೊರಡುತ್ತದೆ. ಇಲ್ಲಿ ಮುಖ್ಯವಾಗುವ ಅಂಶವೆಂದರೆ, 'ಸ್ತ್ರೀವಾದದ ತಾತ್ತ್ವಿಕತೆ'ಯ 'ಸಾಹಿತ್ಯೇತರ' ಎಂದು ಹೇಳಲಾಗುವ (ಮಾನವಶಾಸ್ತ್ರ, ಸಮಾಜಶಾಸ್ತ್ರ, ವಿಕಾಸ ಮನಃಶಾಸ್ತ್ರ) ಸೈದ್ಧಾಂತಿಕ ಒತ್ತಾಯಗಳನ್ನು ಮಾನ್ಯ ಮಾಡಿರುವ ಆಯಾಮ. ಸ್ತ್ರೀ - ಪುರುಷರ ನಡುವಿನ ಸಂಬಂಧಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಕಾಣಿಸಿಕೊಳ್ಳುವುದೇ ಲಿಂಗಬೇಧ (gender unequality)ದ ಮೂಲಭೂತ ಆಯಾಮದಿಂದಲೇ ಆಗಿದೆ. (ಎಂದರೆ, ಈ ಸಂಬಂಧಗಳು ಆರ್ಥಿಕ ಅಥವಾ ಮತ್ಯಾವುದೇ ರಾಜಕೀಯ ಧಾರ್ಮಿಕ ಒತ್ತಡಗಳಿಂದ ಕಾಣಿಸಿಕೊಳ್ಳುವುದರ ಒಳಗೆ ಲಿಂಗ ರಾಜಕಾರಣ (gender politics)ವಿದೆ). ಸ್ತ್ರೀ ಮತ್ತು ಪುರುಷನ ಗುರುತಿಸುವಿಕೆಯು ಬಹುತೇಕ ಸಾಂಸ್ಕೃತಿಕವಾಗಿ ನಿರ್ಮಾಣವಾಗುತ್ತದೆ. ಲಿಂಗಬೇಧ ಮತ್ತು ಅದನ್ನು ಆಧಾರಿಸಿದ ವ್ಯತ್ಯಾಸಗಳೇ ಶ್ರೇಣೀಕೃತ ಸಮಾಜದ ಉಗಮಕ್ಕೆ ಕಾರಣ ಎನ್ನುವ ಅಂಶಗಳನ್ನು ಮಾರ್ಕ್ಸ್‌ವಾದ ತೋರಿಸಿಕೊಟ್ಟಿದೆ. ಈ ಅರ್ಥದಲ್ಲಿ ಇತಿಹಾಸವೆಂದರೆ, ಸಾಮಾಜಿಕ ಅಸಮಾನತೆಗಳನ್ನು ವರ್ಗ, ವರ್ಣ, ಲಿಂಗಗಳ ನೆಲೆಯಲ್ಲಿ ಮಾನ್ಯಮಾಡಿದ ಒಟ್ಟು ರಚನೆಯೆಂದೆ ಹೇಳಬೇಕಾಗುತ್ತದೆ. ಈ ಅರ್ಥದಲ್ಲಿ ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರದಲ್ಲಿ ಚರಿತ್ರೆಗಿಂತ ಭಿನ್ನವಾದ ನಿರೂಪಣೆಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ. (ಚರಿತ್ರೆ ಎನ್ನುವುದು ಅದರ ಸ್ವರೂಪದಲ್ಲಿ ಪುರುಷನ ವಾಙ್ಮಯವಾಗಿದೆ.) ವಿವಾಹ- ಕುಟುಂಬದ ಸಂಬಂಧಗಳನ್ನು ಕೇಂದ್ರೀಯವಾಗಿ ಪರಿಕಲ್ಪಿಸುವ ಮಾನವಶಾಸ್ತ್ರ, ಸಮಾಜಶಾಸ್ತ್ರದ ನಿರ್ವಚನಗಳಲ್ಲಿ ಸ್ತ್ರೀಯರನ್ನು ನ್ಯಾಯೋಚಿತವಾದ ವಿಶ್ಲೇಷಣೆಗೆ ಒಳಪಡಿಸಲಾಗಿದೆಯೇ ಎನ್ನುವುದಕ್ಕಿಂತ ಅವರನ್ನು ಇಂತಹ ಶಾಸ್ತ್ರ ಸಂಬಂಧಿ ಅಧ್ಯಯನಗಳಲ್ಲಿ ಹೇಗೆ ಪ್ರತಿನಿಧಿಸಲಾಗಿದೆ (representation) ಎನ್ನುವುದು ಕುತೂಹಲದ ಅಂಶವಾಗಿದೆ. ಈ ಅಧ್ಯಯನದಲ್ಲಿ ಪರಿಕಲ್ಪನಾತ್ಮಕವಾಗಿ

ಸಮಾಜಶಾಸ್ತ್ರ, ಮಾನವಶಾಸ್ತ್ರ, ವಿಕಾಸಮನಃಶಾಸ್ತ್ರಗಳ ಚೌಕಟ್ಟನ್ನು ಬಳಸಿಕೊಳ್ಳಲಾಗಿದೆ. ಆದರೆ ಸ್ತ್ರೀಯರ ನೆಲೆಯಿಂದ ಇದನ್ನು (ಚೌಕಟ್ಟನ್ನು) ಪ್ರಶ್ನಿಸುವ ಕೆಲಸವನ್ನು ಇಲ್ಲಿ ನಡೆಸಿಲ್ಲ. ಇದರ ಹಿನ್ನೆಲೆಯಲ್ಲಿ ಕನ್ನಡದ ಮಹಿಳೆಯರ ಕಾದಂಬರಿ ಬರಹಗಳನ್ನು ಕೈಗೆತ್ತಿಕೊಳ್ಳುತ್ತಲೇ 'ಈ ಕೃತಿ ಮಹಿಳಾ ಹೋರಾಟದ ತತ್ತ್ವವನ್ನು ಪ್ರತಿಪಾದಿಸುತ್ತದೆಯೆ?' 'ಕ್ರಾಂತಿಯ ಅಗತ್ಯವನ್ನು ಸಾರುತ್ತದೆಯೇ?' ಸಾಮಾಜಿಕ ಪ್ರತಿಷೇಧಗಳ ಬಗ್ಗೆ ಸ್ಪಷ್ಟ ಚಿತ್ರಣ ನೀಡುತ್ತದೆಯೇ? ಎನ್ನುವ ಅನ್ವೇಷಣೆಯನ್ನು ಇಲ್ಲಿ ನಡೆಸಿಲ್ಲ (ಹಾಗೆ ಕೇಳಬೇಕು ಎಂದು ಸ್ತ್ರೀವಾದ ಎಲ್ಲಿಯೂ ಹೇಳುವುದಿಲ್ಲ). ಬರಹಗಾರ ಒಂದು ತತ್ತ್ವಕ್ಕೆ ಜ್ಞಾನತಃ ನಿಷ್ಠೆ ಸಾರಿ ಅದನ್ನು ಕೃತಿಯಲ್ಲಿ ಸಾಧಿಸಿ ತೋರಿಸಬೇಕೆಂಬ ಒತ್ತಾಯವನ್ನು 'ಸ್ತ್ರೀವಾದ' ಎಲ್ಲಿಯೂ ಹೇರಲಿಲ್ಲ. *ᵥ ಸ್ತ್ರೀವಾದದ ಮೂಲ ನಿಲುವು 'ಸ್ತ್ರೀಯರ ಇರುವಿಕೆ ಅವರ ಅರಿವನ್ನು ನಿರ್ಧರಿಸುತ್ತದೆ; ಅರಿವು ಇರುವಿಕೆಯನ್ನಲ್ಲ' ಎನ್ನುವುದು. ಸ್ತ್ರೀಯರ ಇರುವಿಕೆ ಎಂದರೆ ಅವರ ಸಾಮಾಜಿಕ ಅಸ್ತಿತ್ವ. ಸಾಮಾಜಿಕ ಅಸ್ತಿತ್ವ ಎಂದರೆ, ಒಂದು ಸಮಾಜದ ಎಲ್ಲ ಸಂಘ ಸಂಸ್ಥೆಗಳೂ ಸೇರುತ್ತವೆ. ವಿವಾಹದ ಮೂಲಕವಾಗಿ ಸ್ಥಾಪಿತಗೊಳ್ಳುವ ಕುಟುಂಬ ಸಂಸ್ಥೆಯು ಸಮಾಜದ ಪ್ರಾಥಮಿಕ ಘಟಕವಾಗಿದೆ. ಆಧುನಿಕ ಸಮಾಜದಲ್ಲಿಯೇ ಆದರೂ, ಕುಟುಂಬ ಸಂಬಂಧಗಳಿಲ್ಲದ ವ್ಯಕ್ತಿಗಳ ಸಮಾಜವನ್ನು ನಾವು ಕಲ್ಪಿಸಿಕೊಳ್ಳುವುದು ಅಸಾಧ್ಯ. ಈ ಆಯಾಮದಿಂದ ಕನ್ನಡದ ಮಹಿಳೆಯರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ 'ವಿವಾಹ ಮತ್ತು ಕುಟುಂಬ'ದ ವಿನ್ಯಾಸಗಳನ್ನು ವಿಶ್ಲೇಷಣಾತ್ಮಕವಾಗಿ ನಿರ್ವಚಿಸುವುದು ಅಧ್ಯಯನ ವಿಧಾನದ ಸ್ವರೂಪವಾಗಿದೆ.

ಸಾಹಿತ್ಯ ಚರಿತ್ರೆಯಲ್ಲಿ ಮಾಡಿಕೊಂಡಿರುವ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಎಂಬ ವಿಂಗಡಣೆಗಳನ್ನು ಇಲ್ಲಿ ಕೈಬಿಡಲಾಗಿದೆ. ಇದಕ್ಕೆ ವಿವಾಹ ಮತ್ತು ಕುಟುಂಬದ ಅತಿಸೂಕ್ಷ್ಮ ಬದಲಾವಣೆಗಳನ್ನು ಸಮಗ್ರವಾಗಿ, ಶಕ್ತವಾಗಿ ಗ್ರಹಿಸಿ ವಿಶ್ಲೇಷಿಸುವ ಗುರಿಯೇ ಕಾರಣವಾಗಿದೆ. ಪರ್ಯಾಯವಾಗಿ **ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆ** ಎನ್ನುವ ಪರಿಕಲ್ಪನೆಯನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಮಾಡಿಕೊಳ್ಳಲಾಗಿದೆ. ಸಾಮಾಜಿಕ ಬದುಕಿನಲ್ಲಿ ಮಹತ್ವದ ಬದಲಾವಣೆಗಳು ಜರುಗುತ್ತಿದ್ದಾಗ ಮಾತ್ರ ರೂಢಿಗತ ಆಲೋಚನಾ ಕ್ರಮಗಳು - ನಂಬಿಕೆಗಳು ಪ್ರಶ್ನೆಗಳಾಗಿ ಮಾರ್ಪಡುತ್ತವೆ. ಪರಿಣಾಮವಾಗಿ ಇವು ಸಾಹಿತ್ಯಕ ಮತ್ತು ಸಾಂಸ್ಕೃತಿಕವಾದ ಹೊಸ ಪರಿಕಲ್ಪನೆಗಳು ರೂಪುಗೊಳ್ಳಲು ಒತ್ತಾಯಿಸುತ್ತವೆ. ಇಲ್ಲಿ ಪಠ್ಯಗಳನ್ನು 'Inter Textuality' (ಒಂದು ಪಠ್ಯ ಮತ್ತೊಂದು ಪಠ್ಯವನ್ನು ಪುನರ್ ರಚಿಸಿಕೊಳ್ಳುತ್ತದೆ.) ನೆಲೆಗಳಲ್ಲಿ ಪರಿಕಲ್ಪಿಸಲಾಗಿದೆ. ಕಾದಂಬರಿಯ ಅಧ್ಯಯನದಲ್ಲಿ Inter Textuality ಪರಿಕಲ್ಪನೆಯನ್ನು ಮೊದಲು ಅಧ್ಯಯನಕ್ಕೆ ಬಳಸಿಕೊಂಡ ಸ್ತ್ರೀವಾದಿ ಚಿಂತಕಿ ಜೂಲಿಯಾ ಕ್ರಿಸ್ಟೇವ. *ᵥᵢ ಮೇಲು ನೋಟಕ್ಕೆ ಈ ಪರಿಕಲ್ಪನೆ ಎರಡು ಕೃತಿಗಳ ನಡುವೆ ಇರುವ ಸಂಬಂಧವನ್ನು ಸೂಚಿಸುತ್ತದೆ. ಯಾವ ಕೃತಿಯೂ ಸ್ವಂತಿಕೆ ಪಡೆದದ್ದಲ್ಲ. ಒಂದು ಕಾದಂಬರಿ ಪಠ್ಯ ಇನ್ನೊಂದು ಕಾದಂಬರಿ ಪಠ್ಯವನ್ನು ಪುನರ್‌ರಚಿಸುತ್ತದೆ. Inter Textuality ಎನ್ನುವ ಒಳನೋಟ ಎರಡು ಸಂಸ್ಕೃತಿಗಳ, ಎರಡು ಸಂದರ್ಭಗಳ ನಡುವಿನ ಸಂಬಂಧಗಳನ್ನು ನಿರೂಪಿಸಲು ಪ್ರಯತ್ನಿಸುತ್ತದೆ. ಇದರಲ್ಲಿ 'ಬಹುಮುಖಿ ಧ್ವನಿ' (Polyphony) ಬಹಳ ಮುಖ್ಯವಾದುದು. ಇದು ಒಂದು ಕೃತಿಯಲ್ಲಿ ಹಲವಾರು ಧ್ವನಿಗಳಿರುತ್ತವೆ ಎಂದು ಸೂಚಿಸುವಂತಹ ಪರಿಕಲ್ಪನೆ. ಪ್ರತಿಯೊಂದು ಕೃತಿಯು ವಾಸ್ತವಿಕತೆಯಲ್ಲದೆ ತನ್ನ ಹಿಂದಿನ ಕೃತಿಗಳನ್ನು, ಅವುಗಳು ನಿರ್ಮಿಸಿದ

ಒಂದು ಲಿಖಿತ ಪರಂಪರೆಯನ್ನು ಅವಲಂಬಿಸಿರುತ್ತದೆ. ಇಂತಹ ಪ್ರತಿಯೊಂದು ಕೃತಿಗಳಲ್ಲಿಯೂ ಕಂಡು ಬರುವ 'ಕೃತಿ ಮಾರ್ದನಿ'ಗಳನ್ನು Inter textuality ಬಿಂಬಿಸುತ್ತದೆ. ಎಂದರೆ ಯಾವುದೇ ಕೃತಿಯು ನಿಜ ಜೀವನವನ್ನು, ವಾಸ್ತವಿಕ ಸತ್ಯವನ್ನು ಬಿಂಬಿಸುವುದರ ಜೊತೆಗೆ ಅದು ಇತರ ಕೃತಿಗಳನ್ನು ಕೂಡ ಪ್ರತಿಬಿಂಬಿಸುತ್ತದೆ. ರಷ್ಯದ ಮಿಖೈಲ್ ಬಕ್ತಿನ್ (Mikhail Bakhtin) ಎನ್ನುವ ವಿಮರ್ಶಕನ ನಿರಚನವಾದ (deconstruction)ದಲ್ಲಿ ಇದು ಶಕ್ತವಾಗಿ ಬಿಂಬಿತಗೊಂಡಿದೆ. ಸಾಹಿತ್ಯ ಎನ್ನುವ ವಾಙ್ಮಯ (Discourse)ವು ಅದರ ಆಂತರಿಕತೆಯಲ್ಲಿ ದ್ವಂದ್ವ ಹಾಗೂ ವಿರೋಧಾಭಾಸಗಳಿಂದ ತುಂಬಿರುತ್ತದೆ. ಇದಕ್ಕೆ ಮುಖ್ಯ ಕಾರಣ ರೂಪನಿಷ್ಠ ಅಥವಾ ರಾಚನಿಕ ಚಿಂತನೆಯ ವಿಮರ್ಶೆಗಳು ರೂಪಕ್ಕೆ ಹೆಚ್ಚು ಒತ್ತು ಕೊಟ್ಟು ಅರ್ಥವನ್ನು ಕಡೆಗಣಿಸಿದ್ದೆ ಆಗಿದೆ. ಬಕ್ತಿನ್‌ನ ಪ್ರಕಾರ ಭಾಷೆ ಒಂದು ಅಮೂರ್ತ ವ್ಯವಸ್ಥೆಯಲ್ಲ. ಅದೊಂದು ಸಾಮಾಜಿಕ ಚಟುವಟಿಕೆ, ಮಾತ್ರವಲ್ಲ ಅದೊಂದು ಸಂಭಾಷಣೆ ಎನ್ನುವ ಅಂಶ ಮುಖ್ಯವಾಗುತ್ತದೆ. ಬಕ್ತಿನ್‌ನ ಬಹುಧ್ವನಿತ್ವದ ಪರಿಕಲ್ಪನೆ ಹೆಚ್ಚು ವಿಶಾಲವಾದುದು. ನಿರ್ದಿಷ್ಟ ಕೃತಿಯಲ್ಲಿ ಭಾಷೆಯ ಒಂದೇ ಸ್ತರದ ಉಪಯೋಗವಿದ್ದರೂ ಕೃತಿಯಲ್ಲಿ ಒಂದು ಅನುಭವದ ಅಥವಾ ಸಮಸ್ಯೆಯ ಅಥವಾ ವೈಚಾರಿಕ ಪ್ರಣಾಲಿಯ ಭಿನ್ನ ಭಿನ್ನ ನೆಲೆಗಳ ಸಮಾನ ಅಸ್ತಿತ್ವವಿದ್ದರೆ (ಎಂದರೆ ಕೃತಿಯ ವೈಚಾರಿಕ ಗತಿ ಏಕಮುಖವಾಗಿಲ್ಲದಿದ್ದರೆ) ಆ ಕೃತಿಯನ್ನು ಬಹುಧ್ವನಿಯುಕ್ತವೆಂದು ನಾವು ಪರಿಗಣಿಸಬಹುದು. ಇಂಥ ಬಹುಧ್ವನಿ ಸ್ವರೂಪವು ಒಂದು ಕೃತಿಗೆ ಆವರಣ ತಂತ್ರದಿಂದ (Framing device) ಅಥವಾ ಭಾಷಾ ಪ್ರಭೇದಗಳಿಂದ ದೊರಕುತ್ತದೆ. ಬಹುಧ್ವನಿತ್ವದ ಪರಿಕಲ್ಪನೆಗೆ ಈ ನೆಲೆಯಿಂದ ಒಂದು ಸಾಂಸ್ಕೃತಿಕ ಆಯಾಮವಿದೆ. ಒಂದು ಕೃತಿಯಲ್ಲಿ ಭಾಷೆಯ ಎಲ್ಲಾ ಸ್ತರಗಳಿಗೂ ಸಮಾನ ಸ್ಥಾನ ಒದಗಿದಾಗ ಅಂತಹ ಕೃತಿ ಯಾವುದೇ ಏಕಮುಖೀ ಚಿಂತನೆಯನ್ನು ಪ್ರತಿಭಟಿಸುತ್ತದೆ. ಪಟ್ಟಭದ್ರಹಿತಾಸಕ್ತಿಗಳ ವಿರುದ್ಧ ಭಾಷೆಯ ಅಥವಾ ಸಂವಿಧಾನದ ನೆಲೆಯಲ್ಲಾಗುವ ಇಂತಹ ಪ್ರತಿಭಟನೆ ರಾಜಕೀಯವಾಗಿ ಹಾಗೂ ಸಾಂಸ್ಕೃತಿಕವಾಗಿ ತುಂಬಾ ಮಹತ್ವದ್ದಾಗುತ್ತದೆ.

ಕನ್ನಡದ ಮಹಿಳಾ ಕಾದಂಬರಿಕಾರರೆಂದು ಈ ಮಹಾಪ್ರಬಂಧದಲ್ಲಿ ಆಯ್ಕೆ ಮಾಡಿಕೊಂಡ ಬರಹಗಾರರು ಕರ್ನಾಟಕವನ್ನು ಪ್ರಾದೇಶಿಕವಾಗಿ ಬೇರೆ ಬೇರೆ ಸ್ಥಳಗಳನ್ನು ಪ್ರತಿನಿಧಿಸುವವರಾಗಿದ್ದಾರೆ. ಲೇಖಕಿಯರ ಕಾಲಘಟ್ಟ, ಪ್ರಾದೇಶಿಕತೆಯು ಅವರನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಕಾರಣಗಳಲ್ಲಿ ಮುಖ್ಯವಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದ ಮೊದಲ ಮಹಿಳಾ ಬರಹಗಾರರಾಗಿ ಕಾಣಿಸಿಕೊಳ್ಳುವ **ತಿರುಮಲಾಂಬ** ಅವರ ಹುಟ್ಟೂರು (೧೮೮೭) ನಂಜನಗೂಡು. ತಿರುಮಲಾಂಬ ಅವರು ಬದುಕಿನ ಬಹುಭಾಗವನ್ನು (ವಿದ್ಯಾಭ್ಯಾಸ, ಬರಹ, ಪ್ರಕಟಣೆ, ಅಭ್ಯಾಸವೇ ಮೊದಲಾದ ಸಾರಸತ್ವ ಲೋಕದ ಚಟುವಟಿಕೆಗಳಲ್ಲಿ) ನಂಜನಗೂಡಿನಲ್ಲಿಯೇ ಕಳೆದವರು. ಅವರು ಬದುಕಿನ ಕೊನೆಯ ದಿನದಲ್ಲಿ ಬೆಂಗಳೂರಿನಲ್ಲಿ ನೆಲೆಸಿದ್ದರು ಎನ್ನುವುದು ವಿಜಯಾ ದಬ್ಬೆ ಅವರು ಸಂಪಾದಿಸಿದ 'ಹಿತೈಷಿಣಿಯ ಬದುಕು-ಬರಹ'ದಿಂದ ವ್ಯಕ್ತವಾಗುತ್ತದೆ. ವಿಜಯಾ ದಬ್ಬೆ ಅವರು ಹೇಳುವಂತೆ ಅವರ ಬದುಕೇ ಹೋರಾಟದ ಕತೆಯಾಗಿದೆ. ಐದು ವರ್ಷದಲ್ಲಿಯೇ ತಾಯಿಯನ್ನು ಕಳೆದುಕೊಂಡ ಅವರು ಬದುಕನ್ನು ಎದುರಿಸಿದ ರೀತಿಯೇ ಮಾದರಿಯಾದದ್ದು. ., ಹದಿಮೂರರ ಮುಗ್ಧ ವಯಸ್ಸಿನಲ್ಲಿ ವಿವಾಹಿತೆಯಾಗಿ, ಹದಿನಾಲ್ಕರಲ್ಲಿ ಬಾಲವಿಧವೆಯಾಗಿ, ಬದುಕಿನ ಗುರಿಯಾಗಿ ಬರಹ, ಪ್ರಕಾಶನ, ಪತ್ರಿಕಾ ಸಂಪಾದನೆಯನ್ನು ಹಚ್ಚಿಕೊಂಡ

ಯುವತಿಯಾಗಿ, ಪ್ರಕಾಶನ, ಸಂಪಾದನೆಯಿಂದ ಎದುರಾದ ಆರ್ಥಿಕ ಮುಗ್ಗಟ್ಟಿನಲ್ಲಿ ಹಾಗೂ ಸಮಾಜ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ (ವಿಮರ್ಶೆ, ಟೀಕೆಗಳ ನಡುವೆ) ದೃಢವಾಗಿ ಹೋರಾಡಿದ ಸ್ಥಿರಚಿತ್ತೆಯಾಗಿ, ನಿಷ್ಠಾವಂತೆಯಾಗಿ ಬದುಕಿನ ಸಿಹಿ ಕಹಿಗಳನ್ನು ಉಂಡು, ಏರು ತಗ್ಗುಗಳನ್ನು ಬದುಕು-ಬರಹಕ್ಕೆ ಸಂಬಂಧಿಸಿದಂತೆ ಕಂಡ ಜೀವವಾಗಿ ತಿರುಮಲಾಂಬ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ನಂಜನಗೂಡಿನ ತಿರುಮಲಾಂಬಾ ಮತ್ತು ಬೆಂಗಳೂರಿನ **ಆರ್. ಕಲ್ಯಾಣಮ್ಮ**ನವರ ಬದುಕು ಮತ್ತು ಸಾಧನೆಗಳಲ್ಲಿ ಆಕಸ್ಮಿಕವೆಂಬಂತೆ ಹಲವು ಸಾಮ್ಯತೆಗಳಿವೆ. ಈ ಇಬ್ಬರು ಲೇಖಕಿಯರೂ ಬಾಲ್ಯವಿವಾಹವಾಗಿ, ಬಾಲವಿಧವೆಯಾಗಿ ಜೀವನವನ್ನು ಎದುರಿಸಿದ ರೀತಿ ಹೆಚ್ಚು ಕಡಿಮೆ ಒಂದೇ ರೀತಿಯದ್ದು. ಮಹಿಳೆಯರ, ಮಕ್ಕಳ ಕಲ್ಯಾಣವನ್ನು ಮಾತ್ರವಲ್ಲದೆ ೧೯೩೪ರಲ್ಲಿ ಬೆಂಗಳೂರಿನ ಪುರಸಭೆಯ ಉಪಾಧ್ಯಕ್ಷರಾಗಿ ಆಯ್ಕೆಯಾಗಿ ಜನಸೇವೆಯಲ್ಲಿ ತಮ್ಮ ಜೀವನವನ್ನು ಕಳೆದ ಆರ್. ಕಲ್ಯಾಣಮ್ಮನವರ ಜೀವನ ಧೋರಣೆಗಳು ಅವರ ಒಟ್ಟು ಬರಹಗಳಲ್ಲಿ ಬಿಂಬಿತಗೊಂಡಿವೆ.

**ತ್ರಿವೇಣಿ** ಎನ್ನುವ ಅಂಕಿತನಾಮದಲ್ಲಿ ಬರೆದ ಅನಸೂಯ ಮೂಲತಃ ಮಂಡ್ಯದವರು. ಮನಃಶಾಸ್ತ್ರದಲ್ಲಿ ಪದವೀಧರೆಯಾದ ತ್ರಿವೇಣಿಯವರು ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬವನ್ನು ವ್ಯಕ್ತಿಗಳ ಅಸ್ಮಿತೆಯ ಮೂಲವಾಗಿ ಪರಿಭಾವಿಸಿದ್ದಾರೆ. ಕಾದಂಬರಿಯನ್ನು ತನ್ನ ಅಭಿವ್ಯಕ್ತಿಯ ಗಂಭೀರ ಮಾಧ್ಯಮವಾಗಿ ಆರಿಸಿಕೊಂಡ ಇವರು ವಿವಾಹ ಮತ್ತು ಕುಟುಂಬದಲ್ಲಿ ಸ್ತ್ರೀಯರ ಸ್ಥಿತ್ಯಂತರವನ್ನು ಬಿಂಬಿಸುವ ಪ್ರಯತ್ನವನ್ನು ನಡೆಸಿದ್ದಾರೆ. **ಎಂ.ಕೆ. ಇಂದಿರಾ** ಅವರು ಹುಟ್ಟಿದ ಊರು ತೀರ್ಥಹಳ್ಳಿ (ಮಲೆನಾಡು). ಮದುವೆಯ ನಂತರ ಪತಿಯೊಡನೆ ಶಿವಮೊಗ್ಗ, ಮಂಡ್ಯ, ಮೈಸೂರು ಮೊದಲಾದ ಪ್ರದೇಶಗಳಲ್ಲಿ ಅವರು ಜೀವನಾನುಭವವನ್ನು ಪಡೆದುಕೊಂಡವರು. ಮಲೆನಾಡಿನ ವೈದಿಕ ಮನೆತನಗಳ ಜೀವನ ಕ್ರಮವು ಇವರ ಕಾದಂಬರಿಗಳಲ್ಲಿ ಸಾಂದ್ರವಾಗಿ ಚಿತ್ರಣಗೊಂಡಿದೆ. ವಿವಾಹ ಮತ್ತು ಕುಟುಂಬದ ಕೇಂದ್ರೀಯ ನೆಲೆಯೇ ಇವರ ಎಲ್ಲಾ ಕಾದಂಬರಿಗಳ ಚೌಕಟ್ಟಾಗಿದೆ.

> "ನನ್ನ ನಲವತ್ತಾರನೆಯ ವಯಸ್ಸಿನಲ್ಲಿ ಆಕಸ್ಮಿಕವಾಗಿ ನಾನು ಕಾದಂಬರಿಗಾರ್ತಿಯಾದೆ. ಯಾಕೋ ಏನೋ ಹೇಳಲು ಬರುವುದಿಲ್ಲ. ಅದು ಅಲ್ಲಿ ಪ್ರಕಟವಾಗಿ ಬಂದದ್ದು, ಸಾರ್ವಜನಿಕರಿಗೆ ಅಚ್ಚರಿ ತಂದಿದ್ದರೂ ನನಗೇನೂ ಅಚ್ಚರಿ ಎನಿಸಿರಲಿಲ್ಲ. ಕತೆ, ಕಾದಂಬರಿ, ಓದುತ್ತಿದ್ದೆ. ಪತ್ರಿಕೆಗಳನ್ನು ಓದುತ್ತಿದ್ದೆ." (ಮಂದಾಕಿನಿ ಪುರೋಹಿತ: ೧೯೯೩;೪೦)

ಹೀಗೆ ಲೇಖಕಿ ಸಾಹಿತ್ಯದ ಜೊತೆಗಿನ ಸಾತತ್ಯದ ಬಗ್ಗೆ ತಮ್ಮ ಅನಿಸಿಕೆಗಳನ್ನು ಹೇಳಿಕೊಂಡಿದ್ದಾರೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ **ಅನುಪಮಾ ನಿರಂಜನ** ಅವರ ಹುಟ್ಟೂರು.

> "ಅನುಪಮಾ ಅವರ ತಾಯಿಯ ಮನೆತನ ಮತ್ತು ತಂದೆಯ ಮನೆತನ ಇವೆರಡನ್ನು ತೂಗಿ ನೋಡಿದಾಗ ತುಂಬಾ ಅಂತರ ಕಂಡು ಬರುತ್ತದೆ. ಎರಡೂ ಮನೆತನಗಳು ನೇಕಾರಿಕೆಯಂತಹ ದುಡಿವ ವರ್ಗದವು. ಒಂದು ಪರಿಸರದ ಪರದೆ ಹರಿದು ಶೈಕ್ಷಣಿಕ ಸಂಪರ್ಕ ಪಡೆದು ಜ್ಞಾನದ ವಲಯದಲ್ಲಿ ಬದುಕಿದ್ದಾದರೆ ಇನ್ನೊಂದು ಪರಿಸರದ ಎಳೆಗಳನ್ನು ಸುತ್ತಿಕೊಂಡು ಅಜ್ಞಾನದ ಕತ್ತಲಲ್ಲೇ ಇದ್ದುದು. ತಂದೆ ಮತ್ತು ತಾಯಿಯ ಕಡೆಯವರು ಇಬ್ಬರೂ ಬಡವರೇ ಆದರೂ, ನಗರದಲ್ಲಿದ್ದು ವಿದ್ಯೆ ಸಂಸ್ಕಾರ ಪಡೆದ ತಂದೆಯ ಕಡೆಯವರು ಸುಧಾರಣೆಯ ಹಂತ

> ತಲುಪಿದ್ದರೆ, ಹಳ್ಳಿಯಲ್ಲಿಯೇ ಇದ್ದು ನೇಕಾರಿಕೆಯನ್ನೇ ಮುಂದುವರಿಸಿಕೊಂಡು ಹೋಗಿ ಗ್ರಾಮೀಣ ಬದುಕಿನ ಎಲ್ಲ ನೋವುಗಳಿಗೆ ತಾಯಿಯ ಕಡೆಯವರು ನಿರುತ್ತರರಾದವರು. ಹೀಗೆ ಲೇಖಕಿಯ ತಾಯಿ ಮತ್ತು ತಂದೆ ಒಂದೇ ಜಾತಿಯವರಾದರೂ ಕೂಡ ಭಿನ್ನ ಸಂಸ್ಕೃತಿಯಲ್ಲಿ ಬೆಳೆದು ಬಂದವರು. ಇದನ್ನೇ ಲೇಖಕಿ ಆತ್ಮಕಥಾನಕ 'ನೆನಪು : ಸಿಹಿಕಹಿ'ಯಲ್ಲಿ ಹೀಗೆ ಹೇಳಿದ್ದಾರೆ." ನನ್ನ ತಾಯಿಯ ಕಡೆಯಿಂದ ವಿದ್ಯಾಭಿಲಾಷೆಯನ್ನೂ, ಶಿಸ್ತು ಪ್ರಾಮಾಣಿಕತೆಯನ್ನೂ ನಾನು ಬಳುವಳಿಯಾಗಿ ಪಡೆದೆ". ಎನ್ನುವಲ್ಲಿ ಎರಡು ವಿಭಿನ್ನ ಸಂಸ್ಕೃತಿಗಳ ಸಂವಹನದಲ್ಲಿ ಲೇಖಕಿ ಬೆಳೆದು ನಿಂತದ್ದು ಸ್ಪಷ್ಟವಾಗುತ್ತದೆ." (ವಿಜಯಶ್ರೀ ಸಬರದ: ೧೯೯೪;೩)

ಸಾಹಿತಿ ನಿರಂಜನರನ್ನು ಪ್ರೇಮವಿವಾಹವಾಗಿ, ವೃತ್ತಿಯಲ್ಲಿ ವೈದ್ಯೆಯಾಗಿ, ಪ್ರವೃತ್ತಿಯಲ್ಲಿ ಸಾಹಿತಿಯಾಗಿ ಬೆಳೆದವರು ಅನುಪಮಾ. ವೈದ್ಯಕೀಯ ವೃತ್ತಿಯ ಫಲವಾಗಿ ಅವರಿಗೆ ದಕ್ಕಿದ ವ್ಯಕ್ತಿಗಳ ಬದುಕಿನ ವ್ಯಾಪಕ ಚಿತ್ರಣ ಅವರ ಬರಹಗಳನ್ನು ರೂಪಿಸುವಲ್ಲಿ ಪ್ರಭಾವ ಬೀರಿವೆ. ವೃತ್ತಿ ಮತ್ತು ಪ್ರವೃತ್ತಿಯೊಳಗಿನ ಅವರ ಜೀವನ ಮೈಸೂರು, ಬೆಂಗಳೂರು, ಧಾರವಾಡ, ಮುಂಬೈ ಮೊದಲಾದ ಪ್ರದೇಶಗಳನ್ನು ವ್ಯಾಪಿಸಿಕೊಂಡಿವೆ. ಬದುಕಿನ ತತ್ವಗಳಲ್ಲಿ ನಿರಂಜರನ್ನು ಮಾದರಿಯಾಗಿಟ್ಟುಕೊಂಡ ಅವರಿಗೆ ಜೀವನದ ಅನುಭವಗಳೇ ಬರವಣಿಗೆಗೆ ಮೂಲ ಪ್ರೇರಣೆಯನ್ನು ನೀಡಿವೆ. **ವೀಣಾ ಶಾಂತೇಶ್ವರ** ಹುಟ್ಟಿದ್ದು ವಿಜಾಪುರ ಜಿಲ್ಲೆಯ ಬಾಗಿಲುಕೋಟೆಯಲ್ಲಿ. ಅವರ ತಂದೆ ಕರ್ನಾಟಕದವರು. ತಾಯಿ ಮಹಾರಾಷ್ಟ್ರದವರು. ಅವರ ಶಿಕ್ಷಣದ ಪರಿಸರಕ್ಕೆ ಸಂಬಂಧಿಸಿದಂತೆ ಲೇಖಕಿ ಕೆಳಗಿನಂತೆ ಹೇಳಿಕೊಂಡಿದ್ದಾರೆ.

> "ನನ್ನ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ವಿಜಾಪುರ ಜಿಲ್ಲೆಯ ಬಾಗಿಲು ಕೋಟೆಯಲ್ಲಿ ಆಯಿತು. ಪ್ರತಿಯೊಂದು ಪರೀಕ್ಷೆಯಲ್ಲಿ, ಪ್ರತಿಯೊಂದು ವಿಷಯದಲ್ಲಿ, ಪ್ರತಿಯೊಂದು ತರಗತಿಯಲ್ಲಿ ನಾನು ಮೊದಲ ರ್‍ಯಾಂಕ್ ಪಡೆಯುತ್ತಿದ್ದೆ. ಅಷ್ಟೇ ಅಲ್ಲ ಸೆಕೆಂಡ್ ರ್‍ಯಾಂಕ್ ಪಡಕೊಂಡವರು ನನಗಿಂತ ಬಹಳ ಕಡಿಮೆ ಮಾರ್ಕ್ಸ್ ಪಡೆಯುತ್ತಿದ್ದರು. ಮುಂದೆ ಧಾರವಾಡದಲ್ಲಿ ಕಾಲೇಜಿನಲ್ಲಿ ಎಮ್.ಎ ವರೆಗೆ ನನ್ನ ವಿಷಯವಾದ ಇಂಗ್ಲಿಷ್‌ನಲ್ಲಿ ಮೊದಲ ರ್‍ಯಾಂಕ್ ಪಡೆದೆ. ಹೈದ್ರಾಬಾದಿನ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲಿಷ್‌ನಿಂದ ಇಂಗ್ಲಿಷ್ ಲ್ಯಾಂಗ್ವೆಜ್ ಟೀಚಿಂಗ್‌ನಲ್ಲಿ ELt ಸ್ನಾತಕೋತ್ತರ ಡಿಪ್ಲೋಮಾ, ಎಮ್. ಲಿಟ್, ನಂತರ ಪಿಎಚ್.ಡಿ ಪದವಿಗಳನ್ನು ಪಡೆದೆ. ಉಚ್ಚ ಶಿಕ್ಷಣದುದ್ದಕ್ಕೂ ವಿಶಿಷ್ಟವಾದ ಸಾಧನೆಗಳನ್ನು ಗೈಯುತ್ತಲೇ ಹೋಗುವುದು ಸಾಧ್ಯವಾಗಲು ಬಾಲ್ಯದಲ್ಲಿ ನಾನು ಬೆಳೆದ ಉತ್ತಮ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ವಾತಾವರಣವೇ ಮುಖ್ಯ ಕಾರಣ ಅಂತ ನನಗನ್ನಿಸುವುದು." (ನಾಗಮಣಿ ಎಸ್.ರಾವ್(ಸಂ) :೧೯೯೯;೧೦೭-೧೦೭)

ಬರವಣಿಗೆಯನ್ನು ಗಂಭೀರವಾಗಿ ಪರಿಗಣಿಸಿದ ಇವರ ಬರಹಗಳಲ್ಲಿ ಆಧುನಿಕ ಜೀವನದ ಅಗಾಧ ಸಂಕೀರ್ಣತೆಯು ಜೀವಂತ ಸಂವೇದನೆಗಳಾಗಿ ಕಾಣಿಸಿಕೊಳ್ಳುತ್ತವೆ. *೧೦

**ಗೀತಾ ನಾಗಭೂಷಣ** ಮೂಲತಃ ಕಲುಬುರ್ಗಿಯವರು.

"ನಾನು ಹುಟ್ಟಿದ್ದು ತಳವಾರದಂಥ ತೀರ ಕೆಳಜಾತಿಯ ಅನಕ್ಷರಸ್ಥ ಬಡಕುಟುಂಬದಲ್ಲಿ. ನನ್ನ ಅವ್ವ ಹಳ್ಳಿಯ ಹೆಣ್ಣುಮಗಳು. ಅಪ್ಪ ಕಲಬುರ್ಗಿಯ ಬಟ್ಟೆ ಗಿರಣಿಯಲ್ಲಿ ಕಾರ್ಮಿಕನಾಗಿದ್ದು, ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜೈಲು ಸೇರಿ ಬಂದವನು. ಹೀಗಾಗಿ ಬಡತನ, ಅನಕ್ಷರತೆಯ ಕೆಳವರ್ಗದ ಕುಟುಂಬದಲ್ಲಿ ಹುಟ್ಟಿದರೂ ನನ್ನ ಅಪ್ಪ ನನ್ನನ್ನು ಶಾಲೆಗೆ ಕಳಿಸಿದ್ದು, ನನ್ನ ಸುದೈವ... ಗಂಡನಿಗೆ ಗುಲಾಮಳಾಗುವ ಅಥವಾ ಸಮಸ್ಯೆಗಳೊಂದಿಗೆ ರಾಜಿ ಮಾಡಿಕೊಳ್ಳುವ ಗುಣ ನನ್ನಲ್ಲಿ ಇರಲೇ ಇಲ್ಲವಲ್ಲ. ಹೀಗಾಗಿ ನನ್ನ ದಾಂಪತ್ಯ ಬದುಕಿಗೆ ಸುಖ, ಶಾಂತಿ, ನೆಮ್ಮದಿಗಳು ದಕ್ಕಲೇಯಿಲ್ಲ! ನನಗೆ ನನ್ನ ಕಾಲೇಜಿನ ನೌಕರಿ (ಕೆಲಸ) ಇತ್ತು ಅಂತ ನಾನು ನನ್ನ ಮಕ್ಕಳೂ ಬೀದಿಗೆ ಬೀಳಲಿಲ್ಲ ಅಷ್ಟೇ. ಇಲ್ಲದಿದ್ದರೆ ನನ್ನ ಗತಿ ಏನಾಗುತ್ತಿತ್ತೋ...ಇದೆಲ್ಲ ದಾಟಿದ ನಂತರ ಅಂದರೆ ಎಂಬತ್ತರ ದಶಕದಿಂದೀಚೆಗೆ ನಾನು ಬಂಡಾಯದ ಬರಹಕ್ಕಿಳಿದೆ. ಯಾರ ಹಂಗೂ ಇಲ್ಲದೆ ಶೋಷಣೆಯ ವಿರುದ್ಧ ದಂಗೆಯ ಬರವಣಿಗೆ ಶುರುಮಾಡಿದೆ. ಒಂದು ರೀತಿಯಿಂದ, ನನ್ನ ಗಂಡನೆನ್ನಿಸಿಕೊಂಡಿದ್ದ ಆ ಮನುಷ್ಯ ನಮ್ಮಿಂದ ದೂರ ಸರಿದದ್ದೇ ನನ್ನ ದಿಟ್ಟತನದ ಬರಹಕ್ಕೆ ಅನುಕೂಲವಾಯಿತೆನ್ನಬಹುದು. ಮುಂದೆ ಕೆಲವೇ ವರ್ಷಗಳಲ್ಲಿ ನಾಗಭೂಷಣ, ಆರೋಗ್ಯ ಕೆಟ್ಟು ಹಾಸಿಗೆ ಹಿಡಿದದ್ದು ಗೊತ್ತಾದರೂ ನಾನು ಇದೇ ಊರಲ್ಲಿದ್ದ ಅವನ ಆ ಮನೆಗೆ ಹೋಗಲಿಲ್ಲ. ಮಕ್ಕಳೂ ಹೋಗಲು ಇಷ್ಟಪಡಲಿಲ್ಲ. ಮುಂದೊಂದು ದಿನ ಅವನು ಸತ್ತ ಸುದ್ದಿ ಬಂದಾಗಲೇ ನಾನು, ನನ್ನ ಮಗನೂ ಹೋಗಿ ಅವನ ಗೋರಿಗೆ ಮೂರು ಬೊಗಸೆ ಮಣ್ಣು ಹಾಕಿ ನಮ್ಮ ಋಣ ತೀರಿಸಿಕೊಂಡು ಬಂದೆವು. " (ಉಷಾ ಪಿ. ರೈ (ಸಂ) : ೨೦೦೩; ೩೩)

ಎಂದು ಗೀತಾ ನಾಗಭೂಷಣ ತನ್ನ ಬಾಲ್ಯ ಹಾಗೂ ಯೌವ್ವನದ ಬದುಕನ್ನು ಲೇಖ-ಲೋಕ-ಆರಲ್ಲಿ ಹೇಳಿಕೊಂಡಿದ್ದಾರೆ. ತನ್ನ ಪರಿಸರದ ಶೂದ್ರ-ದಲಿತ ಜೀವನ ಕ್ರಮವನ್ನು ಇವರ ಕಾದಂಬರಿ ಪಾತ್ರಗಳು ಬಿಂಬಿಸಲು ಅವರು ಅನುಭವಿಸಿದ, ಗ್ರಹಿಸಿದ, ಅರ್ಥೈಸಿಕೊಂಡ ಜೀವನಾನುಭವವೇ ಕಾರಣವಾಗಿದೆ. [೧೧]

ಗಡಿನಾಡು ಕಾಸರಗೋಡಿನಲ್ಲಿ ಹುಟ್ಟಿದ ಲೇಖಕಿ **ಸಾರಾ ಅಬೂಬಕ್ಕರ್** ಮುಸ್ಲಿಂ ಮಹಿಳೆಯರ ಬದುಕನ್ನು ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ. ಹತ್ತನೇ ತರಗತಿಯವರೆಗೆ ಶಿಕ್ಷಣ ಪಡೆದು ವಿವಾಹಿತರಾಗಿ ಮಂಗಳೂರಿನಲ್ಲಿ ಬಂದು ನೆಲಸಿದ ಇವರು ಎಂ.ಕೆ ಇಂದಿರಾ ಅವರಂತೆ ಮಧ್ಯ ವಯಸ್ಸಿನಲ್ಲಿ ಬರವಣಿಗೆಗೆ ತೊಡಗಿಸಿಕೊಂಡವರು. ಅವರ ಬಾಲ್ಯದ ಹಾಗೂ ಯೌವ್ವನದ ಜೀವನಾನುಭವಗಳು, ಮುಸ್ಲಿಂ ಸಮಾಜದ (ಮಾಪಿಳ್ಳೆಗಳ) ಸ್ತ್ರೀಯರ ಬದುಕು ಕೇಂದ್ರವಾಗಿ ಅವರ ಬರಹಗಳಲ್ಲಿ ಕಾಣಿಸಿಕೊಳ್ಳುತ್ತದೆ. [೧೨]

೧೯೮೦ರ ದಶಕದಲ್ಲಿ ಕಾದಂಬರಿ ಬರಹಕ್ಕೆ ತೊಡಗಿಸಿಕೊಂಡವರಾದ **ಸವಿತಾ ನಾಗಭೂಷಣ, ಕೆ. ತಾರಾಭಟ್, ಎಚ್.ಎಸ್. ಚಂಪಾವತಿ, ಉಮಾರಾವ್** ಕರ್ನಾಟಕದ ಬೇರೆ ಬೇರೆ ಪ್ರದೇಶಗಳಿಂದ ಸಾಹಿತ್ಯ ಪ್ರಪಂಚವನ್ನು ಪ್ರವೇಶಿಸಿದವರಾಗಿದ್ದಾರೆ. ಕವಿಯತ್ರಿಯಾದ **ಸವಿತಾ ನಾಗಭೂಷಣ** ಮೂಲತಃ ಸಾಗರದವರು. ಬಿ.ಕಾಂ ಪದವೀಧರೆಯಾಗಿ ಅಂಚೆ ಇಲಾಖೆಯಲ್ಲಿ ಉದ್ಯೋಗಿಯಾಗಿರುವ ಇವರು ವಿಮರ್ಶಕ ಡಿ.ಎಸ್ ನಾಗಭೂಷಣ ಅವರ ಪತ್ನಿ. ಉದ್ಯೋಗದ ನಿಮಿತ್ತ ಮಂಗಳೂರು, ಹಾಸನ, ಮಡಿಕೇರಿ,

ಭದ್ರಾವತಿ, ಚಿತ್ರದುರ್ಗ ಮುಂತಾದ ಸ್ಥಳಗಳಲ್ಲಿ ಇದ್ದವರಾದ ಸವಿತಾ ನಾಗಭೂಷಣ ಅವರ ಮೊದಲ ಕಾದಂಬರಿಯಲ್ಲಿ ವ್ಯಕ್ತಿಗಳ ಆಧುನಿಕ ಜೀವನವನ್ನು ಸ್ತ್ರೀಯರ ನೆಲೆಯಿಂದಲೇ ಪರಿಕಲ್ಪಿಸುವ ಪ್ರಯತ್ನವನ್ನು ನಡೆಸಿದ್ದಾರೆ. ಮೂಲತಃ ಉಡುಪಿಯವರಾದ **ಕೆ. ತಾರಾಭಟ್** ಆಂಗ್ಲ ಸಾಹಿತ್ಯ ಪದವೀಧರೆ. ದಕ್ಷಿಣ ಕನ್ನಡ, ಕುಂದಾಪುರ, ಮುಂಬೈಯ ಬದುಕನ್ನು ಕಂಡವರಾದ ಇವರು ಆಧುನಿಕ ಸಮಾಜದ ಸ್ತ್ರೀಯರ ಜೀವನಾವಕಾಶವನ್ನು ತಮ್ಮ ಮೊದಲ ಕಾದಂಬರಿಯಾದ 'ಅವ್ಯಕ್ತ'ದಲ್ಲಿ ಚಿತ್ರಿಸುವ ಪ್ರಯತ್ನ ನಡೆಸಿದ್ದಾರೆ. **ಎಚ್.ಎಸ್.ಚಂಪಾವತಿ** ಸ್ತ್ರೀವಾದಿ ನೆಲೆಯಿಂದ ಬರೆಯುವ ಲೇಖಕಿ ಕರ್ನಾಟಕ ಮಾತ್ರವಲ್ಲದೆ ಹೊರರಾಜ್ಯದ, ವಿದೇಶದ ಅವರ ಜೀವನಾನುಭವಗಳು ಅವರ ಬರಹಗಳಲ್ಲಿ ಅಭಿವ್ಯಕ್ತಿಗೊಂಡಿವೆ. ಸ್ತ್ರೀವಾದವನ್ನು ಬದ್ಧತೆಯಾಗಿ ಸ್ವೀಕರಿಸುವ ಇವರ ಬರಹಗಳಿಗೆ ಸ್ತ್ರೀವಾದದ ಚಳವಳಿಯ ಮತ್ತು ಸಿದ್ಧಾಂತದ ಅಧಿಕೃತತೆ ಇದೆ. ಇವರ ಕಾದಂಬರಿಗೆ ಮುನ್ನುಡಿ ಬರೆದ ಸುಮಿತ್ರಾ ಬಾಯಿಯವರು ಇದನ್ನು ಶಕ್ತವಾಗಿ ಗುರುತಿಸಿದ್ದಾರೆ.[೧೩] ವೈಚಾರಿಕ ನೆಲೆಯಲ್ಲಿಯೇ ಬದುಕನ್ನು ಶೋಧಿಸುವ ಚಂಪಾವತಿಯವರಂತೆ, ಮುಖ್ಯರಾಗುವ ಮತ್ತೋರ್ವ ಲೇಖಕಿ **ಉಮಾರಾವ್** ಮೂಲತಃ ಮೈಸೂರಿನವರು.

ಉದ್ಯೋಗದ ನಿಮಿತ್ತ ಬೆಂಗಳೂರು, ಮುಂಬೈಯಲ್ಲಿ ಇದ್ದ ಅವರ ಬರಹಗಳಲ್ಲಿ ಕರ್ನಾಟಕದ ಮಾತ್ರವಲ್ಲ ಮುಂಬಾಯಿಯ ಆಧುನಿಕ ಸಂಸ್ಕೃತಿಯ ಚಿತ್ರಣವಿದೆ. ಮಹಾಪ್ರಬಂಧದಲ್ಲಿ ಅಧ್ಯಯನಕ್ಕಾಗಿ ಆಯ್ಕೆಮಾಡಿಕೊಂಡ ಹನ್ನೆರಡು ಜನ ಲೇಖಕಿಯರು ಪ್ರಾದೇಶಿಕ ಭೂಮಿಕೆಯಲ್ಲಿ ಕರ್ನಾಟಕವನ್ನು ಬೇರೆ ಬೇರೆ ಪ್ರದೇಶಗಳಿಂದ ಪ್ರತಿನಿಧಿಸುವವರಾಗಿದ್ದಾರೆ. ಸೃಜನಶೀಲತೆಯ ಇಕ್ಕಟ್ಟು, ಸಂಘರ್ಷ, ಅನುಸಂಧಾನಗಳು, ಮಾತ್ರವಲ್ಲದೆ ಲೇಖಕಿಯರ ಕೌಟುಂಬಿಕ, ಸಾಮಾಜಿಕ, ರಾಜಕೀಯ ಪರಿಸರಕ್ಕೆ ಸಂಬಂಧಿಸಿದಂತೆ ಇವರ ಕಾದಂಬರಿಗಳ ಚರ್ಚೆ (ವಿವಾಹ ಮತ್ತು ಕುಟುಂಬಕ್ಕೆ ಸಂಬಂಧಿಸಿದಂತೆ) ಮುಖ್ಯವಾಗುತ್ತದೆ. ಈ ಅಧ್ಯಯನದಲ್ಲಿ ಆರಿಸಿದಂತಹ ಬರಹಗಾರರು ಸೂಕ್ಷ್ಮವಾದ ಇಕ್ಕಟ್ಟುಗಳನ್ನೂ, ಅತ್ಯಂತ ಸಂಕೀರ್ಣವೂ ಜಟಿಲವೂ ಆದ ವ್ಯವಸ್ಥೆಯನ್ನೂ, ವ್ಯವಸ್ಥೆಯ ಒಳಗೆ ಅಸಾಧಾರಣ ಮುಜುಗರಗಳನ್ನೂ, ತೀಕ್ಷ್ಣವಾದ ವೈರುದ್ಧ್ಯಗಳನ್ನೂ ಎದುರಿಸುತ್ತಲೇ (ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಕ ನೆಲೆಗಳಲ್ಲಿ) ಅವುಗಳ ನಡುವಿನಿಂದಲೇ ಬೆಳೆದು ಬಂದವರಾಗಿದ್ದಾರೆ. ಸಾಂಪ್ರದಾಯಿಕತೆ ಮತ್ತು ಆಧುನಿಕತೆಯ ನಡುವಿನ ಆತಂಕ ಮತ್ತು ಬಿಕ್ಕಟ್ಟುಗಳನ್ನು ಎದುರಿಸಿದವರಾಗಿದ್ದಾರೆ. ಈ ನೆಲೆಗಟ್ಟುಗಳಿಂದ ಇವರ ಕಾದಂಬರಿ ಪಠ್ಯಗಳು ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ವ್ಯಾಪಕವಾದ ಒಳನೋಟಗಳನ್ನು ನೀಡಬಹುದೆಂದು ಪರಿಭಾವಿಸಲಾಗಿದೆ.

ತಿರುಮಲಾಂಬ ಅವರಿಂದ ತೊಡಗಿ ಉಮಾರಾವ್ ಅವರವರೆಗಿನ ಕಾದಂಬರಿಗಳ ಸಂಕಥನದ ಒಳರಚನೆಯಲ್ಲಿ ಹಲವಾರು ವ್ಯತ್ಯಾಸಗಳನ್ನು ಗುರುತಿಸಬಹುದು. ಇದರಲ್ಲಿ ಕಾಲದ ವ್ಯತ್ಯಾಸ, ಪ್ರಾದೇಶಿಕ ವ್ಯತ್ಯಾಸಗಳು ಪ್ರಾಥಮಿಕ ಅಂಶಗಳಾಗಿ ಕಾಣಿಸಿಕೊಳ್ಳುತ್ತವೆ. ಆದರೆ, ಜೀವನಾನುಭವ, ಸಮಾಜದ ಧೋರಣೆ, ಸಮಕಾಲೀನ ಬದುಕಿನ ಸಂಘರ್ಷಗಳು ಆಯಾ ಲೇಖಕಿಯರ ನೆಲೆಯಿಂದ ಮಾತ್ರವಲ್ಲದೆ ಪ್ರತಿ ಪಠ್ಯಗಳ ನೆಲೆಯಿಂದಲೂ ಭಿನ್ನತೆಯಿಂದ ಕೂಡಿದ್ದಾಗಿದೆ. ಅಲ್ಲದೆ, ಪ್ರತಿ ಪಠ್ಯಗಳು ವ್ಯಾಪಕ ವೈವಿಧ್ಯತೆಯಿಂದ (ವಿನ್ಯಾಸ, ಶೈಲಿ, ಬಂಧ, ತಂತ್ರ, ರಚನೆಗೆ ಸಂಬಂಧಿಸಿದಂತೆ) ಕೂಡಿದ್ದಾಗಿದೆ. ಲೇಖಕಿಯರ ಪಠ್ಯಗಳು ಬೆಳೆದ

ಪರಿಸರ, ಬದಲಾಗುತ್ತಿರುವ ಸಮಾಜವನ್ನು ವ್ಯಕ್ತಿಸಂಬಂಧಗಳ ನೆಲೆಯಲ್ಲಿ, ವಿವಾಹ ಮತ್ತು ಕುಟುಂಬದ ನೆಲೆಯಲ್ಲಿ ವಿಭಿನ್ನವಾಗಿ ಪರಿಕಲ್ಪಿಸುವ ನಿರ್ವಚನಗಳಾಗಿವೆ.

## ೧.೪. ಅಧ್ಯಯನದ ವ್ಯಾಪ್ತಿ :

ಈ ಅಧ್ಯಯನದಲ್ಲಿ ಕನ್ನಡದ ಮಹಿಳೆಯರ ಕಾದಂಬರಿಗಳೆಂದು ತಿರುಮಲಾಂಬ ಅವರ ಆರು ಕಾದಂಬರಿಗಳನ್ನು (ನಭಾ, ವಿರಾಗಿಣಿ, ಮಣಿಮಾಲಾ, ಗಿರಿಜಾಬಾಯಿ, ವಿದ್ಯುಲ್ಲತೆ, ಮಾತೃನಂದಿನಿ) ಆರ್. ಕಲ್ಯಾಣಮ್ಮನವರ ಎರಡು ಕಾದಂಬರಿಗಳನ್ನು (ನಿರ್ಭಾಗ್ಯವನಿತೆ, ಪ್ರಿಯಂವದೆ) ಆಯ್ಕೆಮಾಡಿಕೊಳ್ಳಲಾಗಿದೆ. ತ್ರಿವೇಣಿಯವರು ಬರೆದ ಇಪ್ಪತ್ತೊಂದು ಕಾದಂಬರಿಗಳಲ್ಲಿ ಈ ಅಧ್ಯಯನದಲ್ಲಿ ಒಂಬತ್ತು ಕಾದಂಬರಿಗಳನ್ನಷ್ಟೇ ಗಮನಿಸಲಾಗಿದೆ (ಹೂವು ಹಣ್ಣು, ಅಪಸ್ವರ, ಕೀಲುಗೊಂಬೆ, ಅಪಜಯ, ಕಂಕಣ, ಮುಕ್ತಿ, ಕಾಶಿಯಾತ್ರೆ, ಶರಪಂಜರ, ಹಣ್ಣೆಲೆ ಚಿಗುರಿದಾಗ). ಎಂ.ಕೆ ಇಂದಿರಾ ಅವರು ಬರೆದ ನಲವತ್ತೊಂದು ಕಾದಂಬರಿಗಳಲ್ಲಿ ಒಂಬತ್ತು ಕಾದಂಬರಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ (ತುಂಗಾಭದ್ರ, ಹೆಣ್ಣಿನ ಆಕಾಂಕ್ಷೆ, ಗೆಜ್ಜೆ ಪೂಜೆ, ಮನತುಂಬಿದ ಮಡದಿ, ಚಿದ್ವಿಲಾಸ, ಸದಾನಂದ, ಮಧುವನ, ಫಣಿಯಮ್ಮ, ಸೂತ್ರಧಾರ). ಗೀತಾ ನಾಗಭೂಷಣ ಅವರ ಒಟ್ಟು ಕೃತಿಗಳಲ್ಲಿ (ನೀಲಾಗಂಗಾ, ಆಸರೆ, ಬದುಕು) ಮೂರನ್ನು, ಸಾರಾ ಅಬೂಬಕ್ಕರ ಅವರ (ಚಂದ್ರಗಿರಿಯ ತೀರದಲ್ಲಿ, ವಜ್ರಗಳು, ಸಹನ, ಸುಳಿಯಲ್ಲಿ ಸಿಕ್ಕವರು, ಪ್ರವಾಹ ಸುಳಿ) ಐದು ಪಠ್ಯಗಳನ್ನು ಅಧ್ಯಯನದ ಪ್ರಧಾನ ಭೂಮಿಕೆಯಲ್ಲಿ ಚರ್ಚಿಸಲಾಗಿದೆ. ಅನುಪಮಾ ನಿರಂಜನ ಅವರ (ಅನಂತ ಗೀತ, ಸಂಕೋಲೆಯೊಳಗಿಂದ, ಶ್ವೇತಾಂಬರಿ, ಸ್ನೇಹ ಪಲ್ಲವಿ, ಚಿತ್ತಮೋಹನ, ಎಳೆ, ಹಿಮದ ಹೂ, ನೂಲುನೆಯ್ದ ಚಿತ್ರ, ಮೂಡಣ ಪಡುವಣ, ಆಳ, ಮುಕ್ತಿ ಚಿತ್ರ) ಹನ್ನೊಂದು ಕಾದಂಬರಿಗಳನ್ನು ಹಾಗೂ ವೀಣಾ ಶಾಂತೇಶ್ವರ ಅವರ (ಗಂಡಸರು, ಬಂಡಾಯ ಶೋಷಣೆ ಇತ್ಯಾದಿ) ಎರಡು ಕಾದಂಬರಿಗಳನ್ನು ಚರ್ಚೆಗೆ ಆರಿಸಿಕೊಳ್ಳಲಾಗಿದೆ. ೧೯೯೦ರ ದಶಕದಲ್ಲಿ ಕಾಣಿಸಿಕೊಳ್ಳುವ ಸವಿತಾ ನಾಗಭೂಷಣ (ಸ್ತ್ರೀಲೋಕ), ಕೆ. ತಾರಾಭಟ್ (ಅವ್ಯಕ್ತ), ಎಚ್.ಎಸ್. ಚಂಪಾವತಿ (ಶಿವಗಂಗಾ), ಉಮಾರಾವ್(ನೂರು ಸ್ವರ) ಅವರ ಮೊದಲ ಕಾದಂಬರಿಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ಒಟ್ಟಾಗಿ ೫೧ ಪಠ್ಯಗಳನ್ನು ಅಧ್ಯಯನದ ಪ್ರಧಾನ ಭೂಮಿಕೆಯಲ್ಲಿ ವಿಶ್ಲೇಷಣೆಯನ್ನು ನಡೆಸಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯನ್ನು ನಿರ್ವಚಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಒಟ್ಟು ಆರು ಅಧ್ಯಾಯನಗಳನ್ನಾಗಿ ವಿಂಗಡಿಸಿಕೊಂಡು ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯನ್ನು ಕನ್ನಡದ ಮಹಿಳೆಯರ ಕಾದಂಬರಿಗಳ ನೆಲೆಯಲ್ಲಿ ಶೋಧಿಸುವ ಕಾರ್ಯವನ್ನು ಮಾಡಲಾಗಿದೆ. ಅಧ್ಯಾಯ ಒಂದರಲ್ಲಿ ಪ್ರಸ್ತಾವನೆಯ ಭಾಗವನ್ನು ಒಳಗೊಂಡಂತೆ, ಅಧ್ಯಯನದ ಉದ್ದೇಶ, ಅಧ್ಯಯನದ ವಿಧಾನ, ಅಧ್ಯಯನದ ವ್ಯಾಪ್ತಿಯನ್ನು ಚರ್ಚಿಸಲಾಗಿದೆ.

ಕನ್ನಡ ಮಹಿಳೆಯರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಗೆ ತಳಪಾಯವನ್ನು ಹಾಕಿಕೊಳ್ಳುವಲ್ಲಿ ಈ ಅಧ್ಯಾಯದಲ್ಲಿ ಸಮಾಜಶಾಸ್ತ್ರ, ಮಾನವಶಾಸ್ತ್ರ, ವಿಕಾಸಮನಃಶಾಸ್ತ್ರಗಳ ಗ್ರಹೀತಗಳನ್ನು ವಿವಾಹ ಮತ್ತು ಕುಟುಂಬದ ಅರ್ಥ, ರಚನೆ, ವಿನ್ಯಾಸ ಅಂತರ್‌ಸಂಬಂಧ ಎನ್ನುವ ಅಧ್ಯಾಯ ಎರಡರಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಿಂದ ಕನ್ನಡ ಮಹಿಳೆಯರ ಕಾದಂಬರಿಗಳಲ್ಲಿ ಅಭಿವ್ಯಕ್ತಿಗೊಂಡಿರುವ ವಿವಾಹ ಮತ್ತು ಕುಟುಂಬದ ಸ್ವರೂಪದ ನೇಯ್ಗೆಗಳನ್ನು ಮೂರು ಪ್ರಧಾನವಾದ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಇದು ವಸಾಹತು- ವಸಾಹತೋತ್ತರ ಇಂಡಿಯಾದ ವಿವಾಹ ಮತ್ತು ಕುಟುಂಬದ ವಿನ್ಯಾಸಗಳನ್ನು ಕರ್ನಾಟಕದ ಪ್ರಾದೇಶಿಕತೆಗೆ ಸಮೀಕರಿಸಿ ಅನುಸಂಧಾನ ನಡೆಸುವ ಪ್ರಯತ್ನವಾಗಿದೆ. ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆ ಎನ್ನುವ ಮೂರು ನಾಲ್ಕು ಮತ್ತು ಐದು ಅಧ್ಯಾಯಗಳ ಒಡಲೊಳಗೆ ಮಹಿಳಾ ಬರಹಗಾರರ ಕಾದಂಬರಿಗಳ ಆಶಯಗಳ ನೆಲೆಯಿಂದ ಮೊದಲಕಟ್ಟು- ಕೂಡುಕಟ್ಟು ಎಂದು ವಿಭಾಗಿಸಿಕೊಳ್ಳಲಾಗಿದೆ. ಆ ಮೂಲಕವಾಗಿ ಒಟ್ಟಂದದಲ್ಲಿ ನಿರ್ದಿಷ್ಟ ಸಾಂಸ್ಕೃತಿಕ ಚೌಕಟ್ಟಿನ ಅರ್ಥೈಸುವಿಕೆ, ವಿವರಣೆ, ವಿಶ್ಲೇಷಣೆಯಾಗಿ ಕಾದಂಬರಿ ವಿಮರ್ಶೆಯು ಪ್ರಸ್ತುತತೆಯನ್ನು ಸಾಧಿಸುವ ಪ್ರಯತ್ನವನ್ನು ನಡೆಸಲಾಗಿದೆ.

ಮೂರನೇಯ ಅಧ್ಯಾಯವಾದ ಉದಾರವಾದಿ ಸಾಂಸ್ಕೃತಿಕ ನೆಲೆ: ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯಲ್ಲಿ ವಿವಾಹ ಮತ್ತು ಕುಟುಂಬ ಸಂಸ್ಥೆಯ ಸಾಂಪ್ರದಾಯಿಕ ಪಲ್ಲಟಗಳು ಇಂಡಿಯಾದ ವಸಾಹತು ಆಡಳಿತದ ಶಿಕ್ಷಣಕ್ರಮ, ಸಾಮಾಜಿಕ ಪರಿವರ್ತನೆಗಳು ಕಟ್ಟಿರುವ ಅದರ ಒಳವಿನ್ಯಾಸದ ಮೂಲದಿಂದಲೇ ಆಗಿವೆ. ಎಂದರೆ, ವಸಾಹತುಶಾಹಿ ಆಡಳಿತ ಇಂಡಿಯಾದಲ್ಲಿ ಜಮೀನುದಾರಿ ಪದ್ಧತಿಯನ್ನು (ಲಾರ್ಡ್ ಕಾರ್ನ್ ವಾಲೀಸ್) ಜಾರಿಗೊಳಿಸಿ, ಇದರಲ್ಲಿ ಕುಟುಂಬವನ್ನು ಊಳಿಗಮಾನ್ಯ ವ್ಯವಸ್ಥೆಯಾಗಿ ಪಲ್ಲಟಿಸಿದೆ. ಅದು ಸಾಮ್ರಾಜ್ಯಶಾಹಿ, ವಸಾಹತುಶಾಹಿ ಸಂಘಟಿತ ಸಮಾಜ ವ್ಯವಸ್ಥೆಯ ಪರಸ್ಪರ ಶೋಷಣೆಯ ಮೇಲೆ ಆಧರಿತವಾಗಿದೆ. ನಿರಂತರ ವೈರುಧ್ಯಗಳ ಮೂಲಕವೇ ಅದು ಊರ್ಜಿತವಾಗಿರುವುದು ವ್ಯಕ್ತವಾಗಿರುತ್ತದೆ. ವೈರುಧ್ಯಗಳ ಆಳದಿಂದಲೇ ಉದಾರವಾದಿ ಸಾಂಸ್ಕೃತಿಕ ನೆಲೆ ರೂಪಿತಗೊಂಡಿದೆ. ನಂಜನಗೂಡು ತಿರುಮಲಾಂಬರಿಂದ ತೊಡಗುವ ಮಹಿಳಾ ಬರಹಗಾರರು ಇಂತಹ ವೈರುಧ್ಯಗಳನ್ನು, ಸಮನ್ವಯತೆಗಳನ್ನು, ಸಂಘರ್ಷಗಳನ್ನು ಗುರುತಿಸುವುದು ಮನೆ- ಸಂಸಾರ- ಮಕ್ಕಳು ಎನ್ನುವ ಸಾಮಾಜಿಕ ಸಂರಚನೆಯಲ್ಲಿ. ತಿರುಮಲಾಂಬ ಮತ್ತು ಆರ್. ಕಲ್ಯಾಣಮ್ಮ ಇವರ ಕಾದಂಬರಿಗಳನ್ನು ಮೊದಲ ಕಟ್ಟಿನವು ಎಂದೂ ಇಂದಿರಾ, ಎಂ.ಕೆ. ತ್ರಿವೇಣಿ ಅವರ ಕಾದಂಬರಿಗಳನ್ನು ಕೂಡುಕಟ್ಟಿನ ಕಾದಂಬರಿಗಳೆಂದು ವರ್ಗೀಕರಿಸಿಕೊಂಡು ಈ ಕಾದಂಬರಿಗಳು ನಿರೂಪಿಸುವ ವಿವಾಹ ಮತ್ತು ಕುಟುಂಬದ ಸಾಂಸ್ಕೃತಿಕ ಆವರಣವನ್ನು ೧) ವಿವಾಹದ ಸ್ವರೂಪ ೨) ದಾಂಪತ್ಯದ ಸ್ವರೂಪ ೩) ಕುಟುಂಬದ ಸ್ವರೂಪ ಎನ್ನುವ ಆಂತರಿಕ ವಿಂಗಡಣೆಗಳಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ೪ : ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ : ವಿವಾಹ ಮತ್ತು ಕುಟುಂಬದ ಪರಿಕಲ್ಪನೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯು ವಸಾಹತೋತ್ತರ ಸಂದರ್ಭದಲ್ಲಿ ಗಾಂಧಿ, ನೆಹರು, ಅಂಬೇಡ್ಕರ್, ಲೋಹಿಯಾ ಮೊದಲಾದ ಚಿಂತಕರ ಬೌದ್ಧಿಕ ಬೆಳವಣಿಗೆಯ ಪ್ರತಿಫಲನದ ಉನ್ನತ ಘಟ್ಟ. ಸಾಮಾಜಿಕ ಪ್ರಕ್ರಿಯೆಯ ವಿಕಾಸಮುಖಿ ಚಲನೆಯಲ್ಲಿ ಇಂಡಿಯಾದ ಸ್ತ್ರೀಯರ ಸ್ಥಾನಮಾನಗಳ ಬಗ್ಗೆ ಇದ್ದ ಧೋರಣೆಗಳು ಕನಿಷ್ಠಪಕ್ಷ ಸಿದ್ಧಾಂತಗಳ ಮಟ್ಟದಲ್ಲಿಯಾದರೂ ಬದಲಾವಣೆಗೊಂಡ ಸಂದರ್ಭ ಇದು. ಈ ಬದಲಾದ ಮನೋಧರ್ಮಗಳ ಪರಿಣಾಮಗಳು, ಅವು ಸಾಗಿದ ದಿಕ್ಕುಗಳು ಇವನ್ನು ಅನುಪಮಾ ನಿರಂಜನ, ವೀಣಾಶಾಂತೇಶ್ವರ, ಗೀತಾ ನಾಗಭೂಷಣ ಮತ್ತು ಸಾರಾ ಅಬೂಬಕ್ಕರ್ ಈ ಬರಹಗಾರರ ಹಿನ್ನೆಲೆಯಲ್ಲಿ

ಗಮನಿಸಲಾಗಿದೆ. ಮೊದಲ ಕಟ್ಟಿನ ಕಾದಂಬರಿಗಳೆಂದು ಗೀತಾ ನಾಗಭೂಷಣ ಮತ್ತು ಸಾರಾ ಅಬೂಬಕ್ಕರ್ ಅವರ ಕೃತಿಗಳನ್ನು ವಿವೇಚಿಸಲಾಗಿದೆ. ಕೂಡುಕಟ್ಟಿನ ಕಾದಂಬರಿಗಳಾಗಿ ಅನುಪಮಾ ನಿರಂಜನ ಮತ್ತು ವೀಣಾಶಾಂತೇಶ್ವರ ಅವರ ಕೃತಿಗಳನ್ನು ಗಮನಿಸಲಾಗಿದೆ. ಉದಾರವಾದಿ ಸಾಂಸ್ಕೃತಿಕ ನೆಲೆಯ ವ್ಯಾಪಕವಾದ ಶೈಕ್ಷಣಿಕ ಅವಕಾಶವನ್ನು ಆರಂಭದಲ್ಲಿ ಬಳಸಿಕೊಂಡವರೆಲ್ಲ ಸಮಾಜದ ಮೇಲುವರ್ಗದ ಜನ. ಸಾಹಿತ್ಯ ಕ್ಷೇತ್ರದಲ್ಲಿಯೂ ಮೇಲ್‌ವರ್ಗದ ಜನತೆಯ ಅಭಿವ್ಯಕ್ತಿಯೇ ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಂಡಿದೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಇದು ಪರಿವರ್ತನೀಯ ಪ್ರಗತಿಯನ್ನು ಪಡೆದಿದೆ. ಶೂದ್ರ ಮತ್ತು ದಲಿತ ವರ್ಗಕ್ಕೆ ಸಂಬಂಧಿಸಿದ ಮಹಿಳಾ ಬರಹಗಾರರು ಇಲ್ಲಿ ಕಾಣಿಸಿಕೊಳ್ಳುತ್ತಾರೆ. ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಇವರ ಕೃತಿಗಳು ಮಹತ್ವದ ಪಲ್ಲಟವನ್ನು ಬಿಂಬಿಸುವ ರಚನೆಗಳಾಗಿವೆ.

ಇದರ ಮುಖ್ಯ ಕಾರಣ ವಿವಾಹ ಮತ್ತು ಕುಟುಂಬದ ಪ್ರಧಾನ ಆಶಯಗಳು ಕಾದಂಬರಿಗಳ ವಸ್ತುವಾಗಿ ಹಲವು ಆಯಾಮಗಳಿಂದ ಮುಖಾಮುಖಿಗೊಳ್ಳುವುದೇ ಆಗಿದೆ. ಮೊದಲ ಕಟ್ಟಿನ ಕಾದಂಬರಿಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ರೂಪಿತಗೊಂಡಿರುವ ವಿವಾಹ ಮತ್ತು ಕುಟುಂಬದ ಎಲ್ಲಾ ರೀತಿಯ ಪಲ್ಲಟಗಳನ್ನು ನಿರೂಪಿಸುವ ಪಠ್ಯಗಳಾದರೆ, ಕೂಡುಕಟ್ಟಿನ ಕಾದಂಬರಿಗಳಲ್ಲಿ ಬಂಡವಾಳಶಾಹಿ ವ್ಯವಸ್ಥೆ ಪ್ರತಿಬಿಂಬಿತಗೊಂಡಿದೆ. ಇವು ವ್ಯವಸ್ಥೆಯ ಒಳಗೆ ಇರುವ ವ್ಯಕ್ತಿ - ವ್ಯಕ್ತಿಗಳ ವಿವಾಹ ಮತ್ತು ಕುಟುಂಬದ ಸಂಬಂಧವನ್ನು ವಾಸ್ತವಿಕ ತಳರಚನೆಯಲ್ಲಿ ಬಿಂಬಿಸುವ ಪ್ರಯತ್ನವನ್ನು ನಡೆಸುತ್ತವೆ. ವಿವಾಹ ಮತ್ತು ಕುಟುಂಬದ ಕೇಂದ್ರ ಪ್ರೇರಣೆಯಾಗಿ ಬಂಡವಾಳಶಾಹಿ ವ್ಯವಸ್ಥೆ ಹೇಗೆ ಪ್ರಭುತ್ವ ಸಾಧಿಸುತ್ತದೆ ಎಂಬುದನ್ನು ಪಠ್ಯಗಳ ಅಂತರ್ ನೇಯ್ಗೆಯಲ್ಲಿ ಸೂಕ್ಷ್ಮವಾಗಿ ಬಿಡಿಸುವ ಪ್ರಯತ್ನ ಕೂಡುಕಟ್ಟಿನ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಕಾದಂಬರಿಯ ವಸ್ತು ವಿವಿಧತೆಯ ಮೂಲಕವಾಗಿ ತೊಡಗುವ ವಿವಾಹ ಮತ್ತು ಕುಟುಂಬದ ಅನುಸಂಧಾನ ಈ ಇಬ್ಬರು ಲೇಖಕಿಯರಲ್ಲೂ ಪ್ರಯೋಗಾತ್ಮಕ ಮಾದರಿಯದ್ದಾಗಿದೆ. ಎಂದರೆ, ವಿವಾಹದ ಮೂಲಕ ಕುಟುಂಬಕ್ಕೆ ಬದ್ಧಗೊಳಿಸಿ ನಿರ್ಮಾಣಗೊಳ್ಳುವ ಸ್ತ್ರೀಯರ ಬದುಕಿನಲ್ಲಿ 'ಸ್ವಾತಂತ್ರ್ಯ' 'ಸಮಾನತೆ' ಎಂಬ ಮಾನದಂಡ ಉಂಟುಮಾಡುವ ವಿಪ್ಲವತೆಯನ್ನು, ಸಂಘರ್ಷಗಳನ್ನು, ಬದಲಾವಣೆಗಳನ್ನು, ಬೆಳವಣಿಗೆಗಳನ್ನು ಅನುಪಮಾ ನಿರಂಜನ ಮತ್ತು ವೀಣಾಶಾಂತೇಶ್ವರ ಈ ಇಬ್ಬರ ಕೃತಿಗಳು ಕೂಡ ಬಂಡವಾಳಶಾಹಿ ವ್ಯವಸ್ಥೆಯ ಭಿನ್ನ ಸಾಮಾಜಿಕ ಸಂದರ್ಭಗಳಿಂದ ಬಗೆಯುವ ಪ್ರಯತ್ನವನ್ನು ನಡೆಸುತ್ತವೆ.

ಅನನ್ಯ ಸಾಂಸ್ಕೃತಿಕ ನೆಲೆ : ವಿವಾಹ ಮತ್ತು ಕುಟುಂಬದ ಪರಿಕಲ್ಪನೆ ಎನ್ನುವ ಅಧ್ಯಾಯ ಐದು ; ಸ್ತ್ರೀಯರ ಅಸ್ತಿತ್ವದ ಶೋಧದ ಪರಿಣಾಮ. ಪ್ರಜಾಪ್ರಭುತ್ವ ಸಂವಿಧಾನದ ಒಳಗಿನ ಸ್ತ್ರೀಯರ ಅನನ್ಯತೆಯು 'ಸಮಾನತೆ'ಯ ಕಾಯಕಲ್ಪವನ್ನು ಬಿಂಬಿಸುತ್ತದೆ. ಆತ್ಮ ಸಿದ್ಧಿಯಿಂದ ಬರುವ ಸುಖದ ಮೂಲ ಪಾತಳಿಯಲ್ಲೇ 'ನಾನು ಯಾರು?' ಎನ್ನುವ ಜನನ ಕೇಂದ್ರಿತ ಪ್ರಶ್ನೆ ಸ್ತ್ರೀಯರಲ್ಲಿ ಅನ್ವೇಷಣೆಯ ನೆಲೆಯಲ್ಲಿ ಕಾಣಿಸಿಕೊಂಡಿದೆ. ಸ್ತ್ರೀವಾದಿ ವಿಚಾರಧಾರೆಗಳು, ಹೋರಾಟಗಳು ಅನ್ವೇಷಣೆಯ ಫಲಶ್ರುತಿಗಳು. ಇವು ಸ್ತ್ರೀಯರ 'ಆತ್ಮಜಿಜ್ಞಾಸೆ'ಯ ಮೇಲೆ ಗಾಢ ಪ್ರಭಾವ ಬೀರಿವೆ. ಪರಿಣಾಮವಾಗಿ ಅವರಿಗೆ ತಾವು ಕುಟುಂಬ, ಸಮಾಜ, ಉದ್ಯೋಗಗಳಿಗೆ ಬೇಕಾದವರು ಮತ್ತು ಎಲ್ಲಾ ಕ್ಷೇತ್ರಗಳಲ್ಲಿ ನಾನಾ ರೀತಿಗಳಲ್ಲಿ ಸೇವೆ ಸಲ್ಲಿಸುವವರು ಎಂಬ ವಿಶ್ವಾಸ ದೃಢವಾಗಿ ರೂಪಿತಗೊಳ್ಳುತ್ತಿವೆ. ಇದರೊಳಗಿನ ಸಂಘರ್ಷಗಳನ್ನು,

ವೈರುದ್ಧ್ಯಗಳನ್ನು, ತಲ್ಲಣಗಳನ್ನು ಅಲ್ಲದೆ ಸಮಾಯೋಜನೆಗಳನ್ನು ಕೆ.ತಾರಾಭಟ್, ಸವಿತಾ ನಾಗಭೂಷಣ ಅವರ 'ಅವ್ಯಕ್ತ' ಮತ್ತು 'ಸ್ತ್ರೀಲೋಕ' ಕೃತಿಗಳು ಹಾಗೂ ಚಂಪಾವತಿ, ಎಚ್.ಎಸ್. ಉಮಾರಾವ್ ಅವರ 'ಶಿವಗಂಗಾ', 'ನೂರು ಸ್ವರ' ಕಾದಂಬರಿಗಳು ಬಿಂಬಿಸುತ್ತವೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಮೊದಲಕಟ್ಟಿನ ಕಾದಂಬರಿಗಳೆಂದು ತಾರಾಭಟ್ ಕೆ. , ಸವಿತಾ ನಾಗಭೂಷಣ ಇವರ ಕೃತಿಗಳನ್ನು ವಿಶ್ಲೇಷಿಸಲಾಗಿದೆ. ಕೂಡುಕಟ್ಟಿನ ಕಾದಂಬರಿಗಳೆಂದು ಚಂಪಾವತಿ ಎಚ್.ಎಸ್. ಮತ್ತು ಉಮಾರಾವ್ ಅವರ ಕೃತಿಗಳನ್ನು ವಿಮರ್ಶಿಸಲಾಗಿದೆ. ಅನನ್ಯ ಸಾಂಸ್ಕೃತಿಕ ನೆಲೆಯನ್ನು ಹೆಚ್ಚು ಶಕ್ತವಾಗಿ ನಿರೂಪಿಸುವ ಈ ಕಾದಂಬರಿಗಳ 'ಸ್ವಾಭಿಮುಖ' ಅನ್ವೇಷಣೆ ಇಲ್ಲಿ ಮುಖ್ಯವಾಗುತ್ತದೆ. ಕಾದಂಬರಿಗಳ ಈ 'ಸ್ವಾಭಿಮುಖ' ದ್ರವೀಕರಣದಲ್ಲಿ ಅವುಗಳ 'ಕೃತ್ರಿಮತೆ'ಯ ಹಾಗೂ 'ಸ್ವಪ್ರತಿಫಲನ'ದ ನಿಸ್ಸಂಕೋಚ ಅರಿವಿದೆ. ಇದು ಸ್ಪಷ್ಟವಾಗಿ ವ್ಯಕ್ತವಾಗುವುದು ವಿವಾಹ ಮತ್ತು ಕುಟುಂಬದ ಆಯಾಮಗಳಲ್ಲಿ. ಈ ನೆಲೆಯಿಂದ ಅನನ್ಯ ಸಾಂಸ್ಕೃತಿಕ ನೆಲೆಯ ವಿವಾಹದ ಸ್ವರೂಪ, ದಾಂಪತ್ಯದ ಸ್ವರೂಪ, ಕೌಟುಂಬಿಕ ಸ್ವರೂಪಗಳ ಚರ್ಚೆ ಮುಖ್ಯವಾಗುತ್ತದೆ.

ಅಧ್ಯಾಯ ಆರು :ಸಾಂಸ್ಕೃತಿಕ ನೆಲೆಗಳ ಪರಸ್ಪರ ಅಂತಃಸಂಬಂಧ: ವಿಕಾಸಮುಖಿ ರೇಖೆ. ಇದರಲ್ಲಿ ಉದಾರವಾದಿ ಸಾಂಸ್ಕೃತಿಕ ನೆಲೆ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆಗಳ ಪರಸ್ಪರ ಅನ್ವಯಿಕ ಅಂಶಗಳನ್ನು ಗುರುತಿಸುವ ಮೂಲಕವಾಗಿ ವಿವಾಹ ಮತ್ತು ಕುಟುಂಬದ ಒಟ್ಟು ವಾಗ್ವಾದವನ್ನು ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ, ಅಂತಃಸಂಬಂಧಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಇದರ ಚಲನಶೀಲತೆಯಲ್ಲಿ ಊರ್ಧ್ವಮುಖಿ ಚಲನೆಯನ್ನು ಗಮನಿಸಲಾಗಿದೆ. ಜಾಗತೀಕರಣದ ನ್ಯೂಕ್ಲಿಯರ್ ಸಮಾಜ ವ್ಯವಸ್ಥೆಯಲ್ಲಿ ಕಂಡುಬರುವ ಕೌಟುಂಬಿಕ ಸಂರಚನೆ ಎಲ್ಲಾ ಕಡೆಗಳಲ್ಲೂ ವಿಕಾಸದ ಕೆಲವು ನಿರ್ದಿಷ್ಟ ನಿಯಮಗಳನ್ನು ಅನುಸರಿಸಿಕೊಂಡು ಏರ್ಪಟ್ಟದ್ದಾಗಿದೆ. ಇದು ವೈಯಕ್ತಿಕ ಮತ್ತು ಸಾಮಾಜಿಕ ಸಮಾಯೋಜನೆಯಿಂದ ಸಾಧಿತಗೊಂಡ ಅಂಶವಾಗಿದ್ದು, ಪ್ರತಿಯೊಂದು ಸಂಸ್ಕೃತಿಯಲ್ಲೂ ಸಾಮಾಜಿಕ ವರ್ತನೆಗಳ ಮತ್ತು ಕೌಶಲಗಳ ಮೂಲಕವಾಗಿ ವ್ಯಕ್ತಿಗಳನ್ನು ಸಾಮಾಜೀಕರಣಗೊಳಿಸುವ ಪ್ರಕ್ರಿಯೆಯಲ್ಲಿ ಇದು ಕಾಣಿಸಿಕೊಳ್ಳುತ್ತದೆ. ಸಾಹಿತ್ಯದ ನಿರ್ವಚನ ಅದರಲ್ಲೂ ಮಹಿಳೆಯರ ಬರವಣಿಗೆಯಲ್ಲಿ ಇದು ಅತಿ ಸಫಲವಾಗಿ ಅಭಿವ್ಯಕ್ತಿ ರೂಪು ಪಡೆದುಕೊಂಡಿದೆ.

ಮಹಾಪ್ರಬಂಧದ ಒಡಲೊಳಗೆ ಹೀಗೆ ಆರು ಪ್ರಧಾನವಾದ ಅಧ್ಯಾಯಗಳಲ್ಲಿ ವಿಷಯಗಳನ್ನು ವಿಭಾಗಿಸಿಕೊಂಡು ಕಾದಂಬರಿಗಳ ವಿಶ್ಲೇಷಣೆಯನ್ನು ಕೈಗೊಳ್ಳುವ ಹಂತಗಳಲ್ಲಿ ವಿವಾಹ ಮತ್ತು ಕುಟುಂಬದ ಸಾಂಸ್ಕೃತಿಕ ಮೌಲ್ಯಗಳಲ್ಲಿ ಆಂತರಿಕ ಬದಲಾವಣೆಗಳನ್ನು ಶಕ್ತವಾಗಿ ಗುರುತಿಸುವುದಕ್ಕೆ ಪ್ರಯತ್ನಿಸಲಾಗಿದೆ. ವಿವಾಹ ಮತ್ತು ಕುಟುಂಬದ ಒಳಪದರಗಳು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ ಮತ್ತು ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗೆ ಬೇರೆ ಬೇರೆಯಾಗಿರುತ್ತವೆ. ಎಂದರೆ, ವ್ಯಕ್ತಿಗಳ ಆಯುರಾವಧಿಯ ಚಲನಶೀಲ ನೆಲೆಯಲ್ಲಿ ವ್ಯಕ್ತಿಭೇದ, ಕಾಲಭೇದ ಮತ್ತು ಸಂಸ್ಕೃತಿಭೇದಗಳಿರುತ್ತವೆ. ಕಾದಂಬರಿಗಳ ವಿಶ್ಲೇಷಣೆ ಮತ್ತು ಆ ಮೂಲಕದ ತೀರ್ಮಾನಗಳನ್ನು ಮಂಡಿಸುವ ಸಂದರ್ಭದಲ್ಲಿ ಈ ಹಿನ್ನೆಲೆಯ ವ್ಯಕ್ತಿಭೇದ, ಕಾಲಭೇದ ಮತ್ತು ಸಂಸ್ಕೃತಿಭೇದವನ್ನು ಗಮನದಲ್ಲಿ ಇಟ್ಟುಕೊಳ್ಳಲಾಗಿದೆ.

ಸಾಹಿತ್ಯದ ಸಂಶೋಧನೆ ಮತ್ತು ವಿಮರ್ಶೆಗಳ ಕನ್ನಡದ ಮಹಿಳೆಯರ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ವಿವಾಹ ಮತ್ತು ಕುಟುಂಬದ ವಿಶ್ಲೇಷಣೆಯು ಭಾಗಶಃವಾಗಿ, ಪ್ರಾಸಂಗಿಕವಾಗಿ ಅಷ್ಟೇ ಕಾಣಿಸಿಕೊಳ್ಳುತ್ತದೆ. *೧೪ ಮಾನವಶಾಸ್ತ್ರ, ಸಮಾಜಶಾಸ್ತ್ರ, ವಿಕಾಸಮನಃಶಾಸ್ತ್ರಗಳ ತಳಹದಿಯಿಂದ ವಿವಾಹ ಮತ್ತು ಕುಟುಂಬದ ವಿಶ್ಲೇಷಣೆಯು (ಮಹಿಳೆಯರ ಕಾದಂಬರಿಗಳಿಗೆ ಸಂಬಂಧಿಸಿದಂತೆ )ನಡೆದೇ ಇಲ್ಲವೆಂದು ಹೇಳಬೇಕಾಗುತ್ತದೆ. ಶಾಸ್ತ್ರ ಸಂಬಂಧಿ, ವಿಚಾರಗಳಾದ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯು ಸಾಹಿತ್ಯದಲ್ಲಿ ಅನುಸಂಧಾನಗೊಂಡ ಬಗೆಯು ಹೆಚ್ಚು ಕುತೂಹಲಪೂರ್ಣವಾದುದು. ಕೇಂದ್ರೀಯ ನೆಲೆಯಲ್ಲಿ ಇದನ್ನು ಶೋಧಿಸುವ ಅಗತ್ಯ ಮತ್ತು ವೈಶಿಷ್ಟ್ಯ ಪ್ರಸ್ತುತ ಈ ಅಧ್ಯಯನಕ್ಕೆ ಇದೆ ಎಂದು ಪರಿಭಾವಿಸಲಾಗಿದೆ.

# ಅನುಬಂಧ

*೧ ಪ್ರಮುಖ ಇತಿಹಾಸ ವಿದ್ವಾಂಸರಾದ ದೇವಿಪ್ರಸಾದ್ ಚಟೋಪಾಧ್ಯಾಯ, ರಾಹುಲ್ ಸಾತ್ಸೇನ, ಡಿ. ಡಿ. ಕೊಸಾಂಬಿ, ರೊಮಿಲಾ ಥಾಪರ್ ಇವರು ಪ್ರಾಚೀನ ಇತಿಹಾಸ ಮತ್ತು ವ್ಯಕ್ತಿ ಸಮಾಜಗಳ ಬಗ್ಗೆ ಅಧಿಕೃತವಾಗಿ ಮರುವ್ಯಾಖ್ಯಾನ ನಡೆಸಿದ್ದಾರೆ.

*೨ ಚರಿತ್ರೆಯ ಒಂದು ಅವಧಿಯಲ್ಲಿದ್ದ ಉತ್ಪಾದನಾ ಶಕ್ತಿಗಳನ್ನೇ ಆ ಕಾಲವನ್ನು ಗುರುತಿಸುವ ದಾಖಲೆಗಳಾಗಿ ಮಾರ್ಕ್ಸ್‌ವಾದೀ ಚರಿತ್ರಕಾರರು (ಮಾರ್ಕ್ಸ್, ಏಂಗೆಲ್ಸ್) ತಿಳಿಯುತ್ತಾರೆ. ವ್ಯಕ್ತಿಯು ಆಲೋಚನೆಯಿಂದ ಮಾಡುವ ಎಲ್ಲಾ ಕ್ರಿಯೆಗಳಿಗಿಂತ ಮೊದಲು ಅವನು ತಾನು ಬದುಕಲಿಕ್ಕಾಗಿ ಪ್ರಕೃತಿಯ ಜೊತೆ ಹೋರಾಡುವ ಮೂಲ ಕ್ರಿಯೆಯನ್ನು ಮಾಡಲೇ ಬೇಕಾಗುತ್ತದೆ. ಉದಾಹರಣೆಗೆ ಅವನ ಮೂಲ ಹೋರಾಟ ಪ್ರಾಥಮಿಕ ಅವಶ್ಯಕತೆಗಳಾದ ಆಹಾರ, ಮನೆ, ಬಟ್ಟೆಬರೆ ಮೊದಲಾದವುಗಳಿಗಾಗಿರುತ್ತದೆ. ಈ ಹೋರಾಟಕ್ಕಾಗಿ ಅವನು ರೂಪಿಸುವ ಉತ್ಪಾದನಾ ಉಪಕರಣಗಳು, ಒಳಗೊಳ್ಳಬಹುದಾದ ಜನರ ಸಂಖ್ಯೆ, ಮತ್ತು ಅವರ ಕೌಶಲ್ಯ - ಇವೆಲ್ಲದರ ಒಟ್ಟು ಮೊತ್ತವೇ ಆ ಸಮಾಜದ ಉತ್ಪಾದನಾ ಶಕ್ತಿಯಾಗಿ ರೂಪುಗೊಳ್ಳುತ್ತದೆ. ಆಗ ಮಾತ್ರ ಭೌಗೋಳಿಕ ಅಥವಾ ಪ್ರಾಕೃತಿಕ ಸೌಲಭ್ಯಗಳು ಅವನಿಗೆ ಸಹಾಯಕವಾಗಬಲ್ಲುವು. ಈ ಉತ್ಪಾದನಾ ಶಕ್ತಿಗಳು ಮತ್ತು ಅವುಗಳ ಪ್ರವೃತ್ತಿಯ ಆಧಾರದ ಮೇಲೆಯೇ ಸಾಮಾಜಿಕ ಚೌಕಟ್ಟು ನಿರ್ಮಾಣವಾಗುತ್ತದೆ. ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧಗಳು ಕೂಡಾ ಈ ಉತ್ಪಾದನಾ ಶಕ್ತಿಗಳನ್ನು ಅವಲಂಬಿಸಿರುತ್ತವೆ. ಕಲ್ಲನ್ನೇ ಆಯುಧವಾಗಿ ಬಳಸುತ್ತಿದ್ದ ಪ್ರಾಚೀನ ಬೇಟೆಗಾರರಿಗೆ ಬಂಡವಾಳಶಾಹೀ ರೀತಿಯ ಸಾಮಾಜಿಕ ಸಂಬಂಧಗಳು ಸಾಧ್ಯವಾಗಲಾರವು. ಅಂತೆಯೇ ಉಗಿಯಂತ್ರಗಳ ಆಧುನಿಕ ಕೂಲಿಗಾರ ಮತ್ತು ಬಂಡವಾಳಶಾಹಿಗಳಿಗೆ ಪ್ರಾಚೀನ ಗಣ ವಿವಾಹ ಪದ್ಧತಿಯ ಸಂಬಂಧಗಳನ್ನು ಬೆಳೆಸಿಕೊಳ್ಳುವುದು ಅಸಾಧ್ಯ. ಆದುದರಿಂದ ಉತ್ಪಾದನಾ ಉಪಕರಣಗಳೇ ಸಾಮಾಜಿಕ ಸಂಬಂಧಗಳ ಬದಲಾವಣೆಗೆ ಕ್ರಾಂತಿಕಾರೀ ಪ್ರೇರಕ ಶಕ್ತಿಗಳಾಗಿದ್ದುವು ಎಂಬುದು ಸ್ಪಷ್ಟ. ಈ ಉಪಕರಣಗಳ ವಿಶೇಷವೆಂದರೆ, ಅವು ನಿರಂತರವಾಗಿ ಬದಲಾಗುತ್ತಾ ಹೋದವು. ಉತ್ಪಾದನಾ ಉಪಕರಣಗಳು ಮತ್ತು ಉತ್ಪಾದನಾ ಶಕ್ತಿಗಳು ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧಗಳ, ಸಮಾಜ ರಚನೆಯ ಮೂಲಭೂತ ಸ್ಥಿತಿಗತಿಗಳ ನಿರಂತರವಾದ ಬದಲಾವಣೆಗೆ ಕಾರಣಗಳಾಗಿವೆ.

*೩ ತಿರುಮಲಾಂಬ ಅವರ ಕೃತಿಗಳು ಮಾಸ್ತಿಯವರ ತೀಕ್ಷ್ಣ ವಿಮರ್ಶೆಗೆ ಗುರಿಯಾದವು. "ಬಹುಮಾನ ಸ್ಪರ್ಧೆಗಾಗಿ ಅವಸರದಿಂದ ಬರೆದುದರಿಂದಲೋ ಅಥವಾ ಗ್ರಂಥ ಕರ್ತ್ರಿಯವರ ಪ್ರಯತ್ನವಾದುದರಿಂದಲೋ ಈ ಪುಸ್ತಕವು ಇವರ ಇತರ ಪುಸ್ತಕಗಳ ಹಾಗೂ ಇಲ್ಲ; ಕೇವಲ ಸಾಮಾನ್ಯವಾದುದಾಗಿದೆ." ಎಂದು ಮಾಸ್ತಿಯವರು ಪ್ರತಿಕ್ರಿಯಿಸಿದ್ದಾರೆ. (ವಿಮರ್ಶೆ -೧ ; ೧೯೨೬)

*೪ ಕೃತಿಯ ಬಗ್ಗೆ ಸಾಹಿತ್ಯೇತರ ಪ್ರಶ್ನೆಗಳನ್ನು ಕೇಳಬೇಕು ಎಂದು ಸ್ತ್ರೀವಾದ ಹೇಳುವುದಿದ್ದರೆ ಅದಕ್ಕೆ ಕಾರಣ 'ಸ್ತ್ರೀವಾದಿ ವಿಮರ್ಶೆ' ಎನ್ನುವ ಪ್ರಕಾರ ರೂಪುಗೊಂಡಿರುವುದು. 'ಫೆಮಿನಿಸಂ' ಉಳಿದೆಲ್ಲ 'ಇಸಂ'ಗಳಂತೆ 'ಸಾಹಿತ್ಯ ಸಿದ್ಧಾಂತ/ ಮೀಮಾಂಸೆ' ಎಂದು ಡ್ರಿಸಿಲ್ಲಾ ಕಾರ್ನೆಲ್ ಅಭಿಪ್ರಾಯ ಪಡುತ್ತಾರೆ. ಇದು At the Heart of Freedom ಎಂಬ ಕೃತಿಯಲ್ಲಿ ಸುದೀರ್ಘವಾಗಿ ಚರ್ಚೆಗೆ ಒಳಗಾಗಿದೆ. (೧೯೯೬ :೩೦೪-೩೪೮)

*೫ ಜೂಲಿಯಾ ಕ್ರಿಸ್ಟೀವಾ 'ವುಮೆನ್ಸ್ ಟೈಮ್' ಎನ್ನುವ ಕೃತಿಯಲ್ಲಿ ರಚನಾವಾದದ ನೆಲೆಯಲ್ಲಿ 'Inter Textuality' ಎನ್ನುವ ಪರಿಕಲ್ಪನೆಯನ್ನು ಮೊದಲು ಕಾದಂಬರಿಗಳ ಅಧ್ಯಯನಕ್ಕಾಗಿ ಬಳಸುತ್ತಾಳೆ. ಅವಳ ಪ್ರಕಾರ ಒಂದು ಕಾದಂಬರಿಯು ಮತ್ತೊಂದು ಕಾದಂಬರಿಯನ್ನು ಪುನರ್‌ರಚಿಸುತ್ತದೆ. ಎಂದರೆ, ಈ ಪುನರ್‌ರಚನೆಯು ಕಾದಂಬರಿಯ ಬಹುಮುಖಿ ಧ್ವನಿಗಳ ರಚನೆಗೆ ಸಂಬಂಧಿಸಿದ್ದಾಗಿರುತ್ತದೆ. ಇದು ಓರ್ವ ಲೇಖಕಿ ಮತ್ತೋರ್ವ ಲೇಖಕಿಯ ಬರಹಗಳನ್ನು ಗಮನಿಸದಿದ್ದರೂ, ನಿರ್ದಿಷ್ಟ ಸಾಮಾಜಿಕ ಸಂದರ್ಭದಲ್ಲಿ ಅಂತರ್‌ಗತವಾಗಿ ಕಾಣಿಸಿಕೊಳ್ಳುವ ವಿಚಾರವಾಗಿದೆ. ಗಮನಿಸಿ :(Kristeva, Julia : 'Women's Time' ; 1981,13-35.)

*೬ "ಎಂಟುವರ್ಷದ ಹುಡುಗಿ ತಿರುಮಲಾಂಬ ನಂಜನಗೂಡಿನ ಬಾಲಿಕಾ ಪಾಠ ಶಾಲೆಯ ವಿದ್ಯಾರ್ಥಿನಿಯಾದಳು. ಹನ್ನೆರಡು ವರ್ಷ ತುಂಬುವ ತುಂಬುವ ಮೊದಲೇ ಆಕೆಯ ವಿದ್ಯಾರ್ಥಿ ಜೀವನ ಮುಗಿಯಿತು. ಜೀವನದುದ್ದಕ್ಕೂ ಅಧ್ಯಯನಶೀಲರಾಗಿದ್ದ ತಿರುಮಲಾಂಬ ಅವರ ಶಾಲಾಶಿಕ್ಷಣ ನಾಲ್ಕನೆಯ ತರಗತಿಯವರೆಗೆ ಮಾತ್ರ ಸಾಗಿತು. ಶಾಲೆಯಿಂದ ಓಡಿಬಂದ ಹುಡುಗಿಗೆ ಮದುವೆ ಮಂಟಪ ಕಾಯುತ್ತಿತ್ತು. ಹದಿಮೂರರ ಈ ಮುಗ್ಧ ಹುಡುಗಿ ಪುಟ್ಟ ಮುತ್ತೈದೆಯ ಪಟ್ಟವೇರಿದ ದಿನಗಳು ಹಸಿರಾಗಿರುವಾಗಲೇ ಆ ಓಲಗದ ಸದ್ದಿನ್ನೂ ಕಿವಿಯಲ್ಲಿ ಗುಯ್‌ಗುಡುತ್ತಿರುವಾಗಲೇ ಯಾರೂ ಊಹಿಸಿರದ ಆಘಾತ ಎರಗಿತು. ಅರುಣೋದಯವನ್ನು ಕತ್ತಲೆ ನುಂಗಿತು, ಆ ಪುಟ್ಟ ಹುಡುಗಿಯೊಡನೆ ಹಸೆಯೇರಿದ್ದ ಹುಡುಗ ಎಂದೆಂದಿಗೂ ಆಕೆಯಿಂದ ಅಗಲಿದ, ಮೊದಲ ಸುತ್ತಿನ ಪ್ಲೇಗಿಗೆ ತುತ್ತಾದ. ಹದಿನಾಲ್ಕರ ಹುಡುಗಿ ತಿರುಮಲಾಂಬ ವಿಧವೆ! ಹೀಗೆ ಪ್ರಾರಂಭವಾದ ದುರಂತ ಅಲ್ಲಿಗೇ ನಿಲ್ಲಲಿಲ್ಲ. ೧೯೦೦-೧೯೦೭ರ ಅವಧಿಯಲ್ಲಿ ಮತ್ತೆರಡು ಪ್ರಿಯ ಜೀವಗಳು ಅವರನ್ನು ತೊರೆದವು. ೧೯೦೫ರಲ್ಲಿ ತಮ್ಮನನ್ನೂ ೧೯೦೭ರಲ್ಲಿ ಒಡಹುಟ್ಟಿದ ತಂಗಿಯನ್ನೂ ಅವರು ಕಳೆದುಕೊಂಡರು. ಇಂಥ ಆಘಾತಗಳಿಗೆ ಒಳಗಾಗಿ ಕತ್ತಲಲ್ಲೇ ಸದ್ದಿಲ್ಲದೆ ಬಾಳು ತಳ್ಳಿ ಕೊನೆಯಿಸಿರೆಳೆವ ಜೀವಗಳೆಷ್ಟೋ, ಆದರೆ ಈ ಅಘಾತಗಳ ಅಗ್ನಿಕುಂಡಗಳಲ್ಲಿ ಚಿಗುರುವ ಜೀವಗಳೂ ಇವೆ. ಅಂಥ ಜೀವಗಳು ವಿನಾಶವನ್ನು ಮೆಟ್ಟಿನಿಂತು ಬೆಳೆಯುತ್ತವೆ, ಬದುಕು ನೀಡುವ ವಿಷವೂ ಅದಕ್ಕೆ ಅಮೃತವಾಗುತ್ತದೆ. ಅಂಥ ಜೀವಗಳು ವಿನಾಶವನ್ನು ಮೆಟ್ಟಿನಿಂತು ಬೆಳೆಯುತ್ತವೆ, ಬದುಕು ನೀಡುವ ವಿಷವೂ ಅದಕ್ಕೆ ಅಮೃತವಾಗುತ್ತದೆ. ಅಂಥ ಜೀವಗಳಲ್ಲಿ ಒಂದು ನಂಜನಗೂಡು ತಿರುಮಲಾಂಬ ಅವರದ್ದು." ಎಂದು ವಿಜಯಾದಬ್ಬೆ ಹಿತೈಷಿಣಿಯ ಬದುಕು ಬರಹದಲ್ಲಿ ಹೇಳುತ್ತಾರೆ. (ವಿಜಯಾಟಬ್ಬೆ: ಹಿತೈಷಿಣಿಯ ಹೆಜ್ಜೆಗಳು; ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು; ೧೯೯೭, ೫-೬)

*೭ ಕಲ್ಯಾಣಮ್ಮನವರ ಬದುಕು ಬರಹಗಳನ್ನು ಕುರಿತಂತೆ ಈವರೆಗೆ ಹಲವರು ಬರೆದಿದ್ದಾರೆ. ಆದರೆ ವಿವಿಧ ಬರಹಗಳು ನೀಡುವ ಮಾಹಿತಿಗಳಲ್ಲಿ ಐಕ್ಯತೆಯಿಲ್ಲ. ಕಲ್ಯಾಣಮ್ಮನವರು ಹುಟ್ಟಿದ ವರ್ಷದಿಂದ ಹಿಡಿದು ಅವರ ಕೃತಿಗಳ ಸಂಖ್ಯೆ, ಅವುಗಳ ಸ್ವರೂಪಗಳವರೆಗೆ ಹಲವು ಬಗೆಯ ಗೊಂದಲಗಳಿವೆ. ಇಂಥ ಸಮಸ್ಯೆಗಳನ್ನು ನಿವಾರಿಸಿ 'ಇದಮಿತ್ಥಂ' ಎಂದು ಹೇಳಲು ನೆರವಾಗುವಂತಹ ಡೈರಿ ಮುಂತಾದ ಯಾವುದೇ ರೀತಿಯ ಖಚಿತ ದಾಖಲೆಯೂ ಈಗ ಲಭ್ಯವಿಲ್ಲ. ಕಲ್ಯಾಣಮ್ಮನವರ ಜೊತೆಯಲ್ಲಿ ದುಡಿದ, ಅವರ ಕಿರಿಯ ಸಮಕಾಲೀನರಾಗಿದ್ದ ಅನೇಕ ಹಿರಿಯರು, ಮಿತ್ರರು, ಬಂಧುಗಳು, ಹಿತೈಷಿಗಳು ನೆನಪಿನಿಂದ ನೀಡುವ

ಮಾಹಿತಿಗಳಷ್ಟೇ ಈಗ ಲಭ್ಯವಿರುವ ಆಧಾರ. ನೆನಪನ್ನು ಹಿಡಿಯ ಹೊರಟರೆ ವಿಸ್ಮೃತಿ, ವೈಭವೀಕರಣ, ಪಕ್ಷಪಾತಗಳ ಸಂದಿಗ್ಧತೆಗಳು ಅನಿವಾರ್ಯ. ಎಂದು ಕಲ್ಯಾಣ ಸರಸ್ವತಿ ಕೃತಿಯ ಸಂಪಾದಕಿಯಾದ ಬಿ.ಎನ್. ಸುಮಿತ್ರಾಬಾಯಿ ಅವರು ಅಭಿಪ್ರಾಯಪಡುತ್ತಾರೆ. ಕಲ್ಯಾಣಮ್ಮನವರ ಎಲ್ಲ ಕೃತಿಗಳು ಈಗ ಸಿಗುತ್ತಿಲ್ಲ. ನಾಲ್ಕು ದಶಕಗಳ ಕಾಲ ನಡೆದು ದಾಖಲೆ ಸ್ಥಾಪಿಸಿದ್ದ 'ಸರಸ್ವತಿ' ಮಾಸಪತ್ರಿಕೆಯ ಎಲ್ಲ ಸಂಪುಟಗಳು ಎಲ್ಲಿಯೂ ಸಂರಕ್ಷಿತವಾಗಿ ಉಳಿದಿಲ್ಲ. ಬೆಂಗಳೂರಿನ ಸಾರ್ವಜನಿಕ ಜೀವನದ ಬಹುಮುಖ್ಯ ಕಾರ್ಯಕ್ಷೇತ್ರಗಳೆಲ್ಲದರಲ್ಲೂ ದುಡಿದಿದ್ದ ಕಲ್ಯಾಣಮ್ಮನವರ ಹೆಸರಿಗೆ 'ಮಕ್ಕಳ ಕೂಟ'ವೊಂದರ ವಿನಾ ಬೇರೆಲ್ಲೂ ಕುರುಹು ಉಳಿದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿಗಾಗಿ ಹತ್ತು ವರ್ಷಕ್ಕಿಂತ ಹೆಚ್ಚು ಕಾಲ ದುಡಿದಿದ್ದ ಕಲ್ಯಾಣಮ್ಮನವರ ಒಂದೂವರೆ ಕೃತಿ ಮತ್ತು ಬೆರಳಣಿಕೆಯಷ್ಟು 'ಸರಸ್ವತಿ' ಸಂಚಿಕೆಗಳು ಅಲ್ಲಿನ ಗ್ರಂಥಾಲಯದಲ್ಲಿವೆ. ದಾಖಲೆಗಳ ಕೊರತೆಯಿಂದಾಗಿ, ಕಲ್ಯಾಣಮ್ಮನವರ ಜನ್ಮವರ್ಷವನ್ನು ಕುರಿತಂತೆ ಏಕಾಭಿಪ್ರಾಯವಿಲ್ಲ. ಕಲ್ಯಾಣಮ್ಮನವರು ಜೀವಿತವಿದ್ದ ಅವಧಿಯಲ್ಲೇ ಪ್ರಕಟವಾಗಿದ್ದ ಅವರ ಜೀವನವನ್ನು ಪರಿಚಯಿಸುವ ಎರಡು ಉಲ್ಲೇಖಗಳಲ್ಲಿ ೧೮೯೧ ಮತ್ತು ೧೮೯೨ರಲ್ಲಿ ಅವರು ಜನಿಸಿದರೆಂದು ಉಲ್ಲೇಖಿಸಲಾಗಿದೆ. ಕಲ್ಯಾಣಮ್ಮನವರ ಮರಣದ ನಂತರ ಪ್ರಕಟವಾಗಿರುವ ಎಲ್ಲ ಪರಿಚಯಾತ್ಮಕ ಬರಹಗಳಲ್ಲೂ ೧೮೯ಳನ್ನು ಅವರ ಜನ್ಮ ವರ್ಷವೆಂದು ಉಲ್ಲೇಖಿಸುವ ರೂಢಿ ಬೆಳೆದಿದೆ. ಅವರ ನಿಕಟ ಸಂಬಂಧಿಗಳು ಹೇಳುವುದೂ ೧೮೯೧ನೇ ಇಸವಿಯೇ ಅವರು ಹುಟ್ಟಿದ ವರ್ಷವಿರಬೇಕು ಎಂಬುದನ್ನು ಸಮರ್ಥಿಸುವುದರಿಂದಲೂ, ಇದೇ ಕಲ್ಯಾಣಮ್ಮನವರು ಜೀವಿಸಿದ್ದ ಅವಧಿಯಲ್ಲಿ ಪ್ರಕಟವಾಗಿರುವ ಹುಟ್ಟು ವರ್ಷಗಳಿಗೆ ಹೊಂದುವುದರಿಂದಲೂ ಪ್ರಸ್ತುತ ಲೇಖನದಲ್ಲಿ ೧೮೯೨ರಿಂದ ೧೯೬೫ರವರೆಗೆ ಅವರ ಜೀವಿತಾವಧಿಯನ್ನು ಕುರಿತು ವಿವೇಚಿಸಿದ್ದೇನೆ. ಎಂದು ಸುಮಿತ್ರಾಬಾಯಿಯವರು ಹೇಳುತ್ತಾರೆ. ಬದುಕಿಗೆ ಒದಗಿದ ತಿರುವು ಒಂದು ರೀತಿಯ ಸಾಂಪ್ರದಾಯಿಕ ಬದುಕಿನ ಗತಿಯನ್ನು ನಿರಾಕರಿಸಿ, ಅದೇ ಸಂಪ್ರದಾಯದ ಮತ್ತೊಂದು ಗತಿಯನ್ನು ವಿಧಿಸಿತ್ತು. ಈ ಗತಿಯಲ್ಲಿ ಹಿಂಸೆ, ಅವಮಾನ, ಹೀನೈಸುವಿಕೆ, ಕಡ್ಡಾಯವಾದ ಅಮಾನವೀಯ ನಿಯಮಗಳನ್ನು ಅನುಭವಿಸುವುದು ಅನಿವಾರ್ಯ ಎಂದು ಜನ ಒಪ್ಪಿ ಬದುಕಿದ್ದರು. ಅಂಥ ಹೀನಾಯದ ಸ್ಥಿತಿಯಿಂದ ತಮ್ಮನ್ನು ಪಾರುಮಾಡಿಕೊಳ್ಳಲು ಮತ್ತು ತಮ್ಮಂತಹ ಇತರರಿಗೂ ಆ ಸ್ಥಿತಿಯಿಂದ ಮೇಲೆ ಏಳಲು ನೆರವಾಗಲು ಕಲ್ಯಾಣಮ್ಮ ಸಮಾಜ ಸೇವೆಯ ಮಾರ್ಗವನ್ನು ಆರಿಸಿಕೊಂಡರು. ಒಬ್ಬ ಯಜಮಾನ ದುಡಿದು ಹಲವರನ್ನು ಪೋಷಿಸಬೇಕಾಗಿದ್ದ ಸ್ಥಿತಿಯಲ್ಲಿ, ಕಷ್ಟಗಳಿದ್ದರೂ ಓದುವ ಚಟುವಟಿಕೆಯನ್ನು ಅವರು ತಮ್ಮದನ್ನಾಗಿಸಿಕೊಂಡರು. ಅಸಂಖ್ಯಾತ ವಿಧವೆಯರ ಬದುಕು ನಿರಕ್ಷರತೆ, ಮೌಢ್ಯ ಮತ್ತು ಕ್ರೂರ ಸಂಪ್ರದಾಯಗಳಲ್ಲಿ ಸಿಕ್ಕು ಯಾತನಾಮಯವಾಗಿರುವುದನ್ನು ಓದಿನಿಂದ ವಿಸ್ತರಿಸಿದ ಬದುಕಿನ ಅರಿವಿನಿಂದ ಗ್ರಹಿಸಿದರು. 'ಎಲ್ಲ ವಿಧವೆಯರ ಹಾಗೆ ತಾನು ಮಾತ್ರ ಗೋಳಾಟದಲ್ಲಿ ಮುಳುಗಲಾರೆ' ಎಂದು ಅವರು ನಿರ್ಧರಿಸಿದಾಗ ಅವರಿಗೆ ಹದಿನಾಲ್ಕು- ಹದಿನೈದರ ವಯಸ್ಸಷ್ಟೆ, ಹಲವು ವರ್ಷಗಳ ಅಧ್ಯಯನದ ಮೂಲಕ ಕನ್ನಡದಲ್ಲಿ ಲೇಖನಗಳನ್ನು ಕಥೆಗಳನ್ನು ಬರೆದು ಪತ್ರಿಕೆಗಳಿಗೆ ಕಳಿಸತೊಡಗಿದರು. ತಮ್ಮ ಚಿಂತನೆ ಭಾವನೆಗಳನ್ನು ಭಾಷೆಯ ಮೂಲಕ ಇತರರಿಗೆ ತಲುಪಿಸುವ ಈ ಯತ್ನದ ಜೊತೆ ಜೊತೆಗೇ ಎಲ್ಲ ಹತಭಾಗಿನಿಯರು, ನಿರ್ಗತಿಕ ಸ್ತ್ರೀಯರ ಏಳಿಗೆಗಾಗಿ ದುಡಿಯಲು

ನಿರ್ಧರಿಸಿ, ಯೋಜನಾ ಬದ್ಧವಾಗಿ ಯತ್ನಿಸಿದರು. ಇಂಥ ಯತ್ನಗಳಲ್ಲಿ ಅವರ ಆಧ್ಯಾತ್ಮಿಕ ಶ್ರದ್ಧೆಯು ಅವರ ಮನಸ್ಸಿನ ಸಂಕಲ್ಪ ಶಕ್ತಿಗೆ ಮತ್ತು ಕ್ರಿಯಾ ಶಕ್ತಿಗೆ ಬಲವನ್ನು ಒದಗಿಸಿದ ಒಳಶಕ್ತಿಯಾಯಿತು. ಜೊತೆಗೆ ಸುತ್ತಲಿನ ಹಲವು ಗಣ್ಯರು ಮತ್ತು ಅವರ ಪತ್ನಿಯರ ಸಹಕಾರ ತಕ್ಕಮಟ್ಟಿಗೆ ಅವರಿಗೆ ದೊರೆಯಿತು. (ಕಲ್ಯಾಣ ಸರಸ್ವತಿ: ೧೯೯೨ ;೯-೧೩)

*೮ ತ್ರಿವೇಣಿ ಎನ್ನುವ ಅಂಕಿತನಾಮದಲ್ಲಿ ಬರೆದ ಅನಸೂಯ ಅವರ ನಿಜವಾದ ಹೆಸರು ಭಾಗೀರಥಿ. ಇವರ ತಂದೆ ಮಂಡ್ಯದಲ್ಲಿ ಪ್ರಸಿದ್ಧ ವಕೀಲರಾಗಿದ್ದ ಬಿ.ಎಂ. ಕೃಷ್ಣಸ್ವಾಮಿ ಮತ್ತು ತಾಯಿ ತಂಗಮ್ಮ. ಭಾಗೀರಥಿಯ ಜನ್ಮ ಸೆಪ್ಟಂಬರ್ ೧, ೧೯೨೮ರಲ್ಲಿ ಆಯಿತು. ಮಂಡ್ಯದಲ್ಲಿ ಶಾಲೆಗೆ ಸೇರಿಸುವಾಗ ಭಾಗೀರಥಿಯ ಹೆಸರನ್ನು ಅನಸೂಯಾ ಎಂದು ಬದಲಾಯಿಸಿದರು. ೧೯೫೧ರಲ್ಲಿ ಎನ್.ಎಸ್. ಶಂಕರ್ ಅವರನ್ನು ಮದುವೆಯಾದ ಇವರು ಮೈಸೂರಿನಲ್ಲಿ ನೆಲೆಸಿದ್ದರು. ಬಾಲ್ಯದಿಂದಲೇ ಅಸ್ತಮದಿಂದ ನರಳುತ್ತಿದ್ದ ಅನಸೂಯಾ ಆ ಕಾರಣದಿಂದಾಗಿ ಯಾವಾಗಲೂ ಇತರರಿಂದ ಬೇರೆಯಾಗಿ ಏಕಾಕಿಯಾಗಿ ಇರುತ್ತಿದ್ದರು. ಆ ಕಾಲಘಟ್ಟದಲ್ಲಿ ತ್ರಿವೇಣಿಯಾಗಿ ಬರವಣಿಗೆಗೆ ತೊಡಗಿದ ಅವರು ಸಾಹಿತ್ಯಲೋಕಕ್ಕೆ ಪರಿಚಿತರಾದರು. ತ್ರಿವೇಣಿಯವರ ಬದುಕು ಬರಹಗಳ ಕುರಿತಂತೆ ವಿಮಲಾ ಎನ್.ವಿ.(ತ್ರಿವೇಣಿ ವ್ಯಕ್ತಿ ಮತ್ತು ಸಾಹಿತ್ಯ: ೧೯೭೮), ಯಶೋಧರಾ ಎಚ್. (ತ್ರಿವೇಣಿ ಕಾದಂಬರಿಯ ಸಮೀಕ್ಷೆ : ೧೯೮೦), ಗಾಯತ್ರಿ ಎನ್. (ಸಂ) (ತ್ರಿವೇಣಿ : ೧೯೮೯), ಸಿ.ಎನ್. ರಾಮಚಂದ್ರನ್ (ತ್ರಿವೇಣಿ : ೧೯೯೯), ಎಚ್.ಎಸ್. ಶ್ರೀಮತಿ (ತ್ರಿವೇಣಿ: ಮರು ಓದು; ೨೦೦೧) ಇಷ್ಟು ವಿಮರ್ಶನಾ ಕೃತಿಗಳು ಮುಖ್ಯವಾಗುತ್ತವೆ.

*೯ ಎಂ.ಕೆ. ಇಂದಿರಾ ಅವರ ಜೀವನ ಬರಹಕ್ಕೆ ಸಂಬಂಧಿಸಿದಂತೆ ಮಂದಾಕಿನಿ ಪುರೋಹಿತ ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ ಅಲ್ಲದೆ, ಎಂ. ಕೆ ಇಂದಿರಾ ಅವರ ಅಭಿನಂದನ ಸುರಗಿ ಗ್ರಂಥ ಲೇಖಕಿಯ ಸಮಗ್ರ ಜೀವನವನ್ನು ತೆರೆದಿಡುವ ಕೃತಿಗಳಾಗಿವೆ. ಆದರೆ ಅವರ ಕೃತಿಗಳನ್ನು ವಿವಾಹ ಮತ್ತು ಕುಟುಂಬ ನೆಲೆಯಿಂದ ಸಾಂದರ್ಭಿಕವಾಗಿ ಅಷ್ಟೇ ಇವುಗಳಲ್ಲಿ ಚರ್ಚಿಸಿರುವುದು ಕಂಡು ಬರುತ್ತದೆ.

*೧೦ ವೀಣಾಶಾಂತೇಶ್ವರ ಅವರು ಬರಹಕ್ಕೆ ಸಂಬಂಧಿಸಿದಂತೆ ಲೇಖ - ಲೋಕ ೨ರಲ್ಲಿ ವ್ಯಕ್ತಪಡಿಸುವ ಅಭಿಪ್ರಾಯ ಗಮನಾರ್ಹವಾದುದು. "ಒಬ್ಬ ಸೃಜನಶೀಲ ಕಲಾವಿದ ತನ್ನ ಅನುಭವಗಳಿಗೆ ವಿಶಿಷ್ಟ ರೂಪದಲ್ಲಿ ಅಭಿವ್ಯಕ್ತಿ ನೀಡಿದಾಗ ಆತನಿಗೆ ಅಥವಾ ಆಕೆಗೆ ಆಗುವ ಆತ್ಮಾನುಭೂತಿ ಬ್ರಹ್ಮಾನಂದಕ್ಕೆ ಸಮ ಎಂದು ಹೇಳುತ್ತಾರೆ. ಮನಸ್ಸನ್ನು ಆಳವಾಗಿ ತಟ್ಟಿದ ಒಂದು ವಿಷಯವನ್ನು ಮನಸ್ಸಿನಲ್ಲೇ ಬಹುಕಾಲ ಮಥಿಸಿ, emotion recollected in tranquility ಅಂತ ಕವಿ ವರ್ಡ್ಸ್‌ವರ್ತ್ ಹೇಳುವ ಹಾಗೆ, ಕೊನೆಗೊಮ್ಮೆ ಕೃತಿಯ ರೂಪದಲ್ಲಿ ಅದು ಹೊರಬಂದಾಗ ಸಹಜವಾಗಿಯೇ ನನಗೂ ಬಹಳ ಸಮಾಧಾನವೆನಿಸುತ್ತದೆ. ಆದರೆ ಬಹಳಷ್ಟು ಸಲ ನಾನು ಗುರಿ ಮುಟ್ಟಿಲ್ಲ ಎಂಬ ಭಾವನೆ ಉಳಿದುಬಿಡುತ್ತದೆ. ದಿನನಿತ್ಯದ ನೂರು ಬವಣೆಗಳು ನನ್ನ ಸೃಜನಶೀಲತೆಗೆ ಅಡ್ಡಿಯಾಗುತ್ತಿವೆ ಅಂತಲೂ ಇತ್ತೀಚೆಗೆ ಆಗಾಗ ಅನಿಸುತ್ತದೆ. ಈ ಸಮಾಜದಲ್ಲಿ ಹೆಂಗಸು ಮನೆಯೊಳಗೇ ಇರಲಿ-ಹೊರಗೇ ಹೋಗಲಿ, ವಿವಾಹಿತಳಿರಲಿ - ಅವಿವಾಹಿತಳಿರಲಿ, ಸ್ವಾವಲಂಬಿಯೆ ಇರಲಿ- ಪರಾವಲಂಬಿಯಿರಲಿ, ನಾಲ್ಕನೇ ದರ್ಜೆ ನೌಕರಳಾಗಿರಲಿ- ಅತ್ಯುಚ್ಚ ಪದವಿಯಲ್ಲಿರಲಿ, ಆಕೆಯ ಮೇಲೆ ಗಂಡಸಿಗಿಂತ ಹೆಚ್ಚಿನ ಭಾರ ಬೀಳುತ್ತದೆ. ಸತತವಾಗಿ ಬೀಳುವ ಈ

ಭಾರದಿಂದ ಕಾಲಕ್ರಮೇಣ ಆಕೆಯ ಜೀವಶಕ್ತಿ ಕ್ಷಯಿಸುತ್ತದೆ, ಅಂತ ನನಗನಿಸುತ್ತದೆ. ನಾನು ನೂರಾ ಎಂಟು ಕತೆ- ಕಾದಂಬರಿ ಬರೆದವಳಲ್ಲ. ನನ್ನ ಕೃತಿಗಳು ಕೇವಲ ಬೆರಳೆಣಿಕೆಯಷ್ಟು. ಅದರಲ್ಲೂ ಎಲ್ಲವೂ ನನಗೆ ತೃಪ್ತಿ ತಂದಂತಹವುಗಳಲ್ಲ. ನಾನೊಂದು ಒಳ್ಳೆಯ ಕೃತಿ, ಬಹುಶಃ ಒಂದು ಸುದೀರ್ಘವಾದ ಕಾದಂಬರಿ, ರಚಿಸಬೇಕು ಅಂದುಕೊಳ್ಳುತ್ತ ಇತ್ತೀಚಿನ ಮೂರು- ನಾಲ್ಕು ವರ್ಷಗಳನ್ನು ಕಳೆದಿದ್ದೇನೆ. ಇನ್ನು ಬಹಳ ಕಾಲವನ್ನು ಹೀಗೆ ವ್ಯಯಿಸುವುದಿಲ್ಲ ಅಂದುಕೊಂಡಿದ್ದೇನೆ." (ನಾಗಮಣಿ ಎಸ್.ರಾವ್ (ಸಂ) : ೧೯೯೯ ;೧೧೦) ಶ್ರೀಮತಿ ವೀಣಾ ಶಾಂತೇಶ್ವರ ಅವರಿಗೆ ಕರ್ನಾಟಕ ಲೇಖಕಿಯರ ಸಂಘದ ಪ್ರತಿಷ್ಠಿತ ಅನುಪಮಾ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡಮಿ ಬಹುಮಾನ ಮುಂತಾದವು ದೊರೆತಿವೆ.

*೧೧ ಗೀತಾ ನಾಗಭೂಷಣ ಅವರ ಹುಟ್ಟೂರಿನ (ಕಲಬುರ್ಗಿ) ಪ್ರಭಾವದ ಕುರಿತು ಲೇಖ-ಲೋಕ ನಾಲ್ಕರಲ್ಲಿ ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ. "ನನ್ನ ಕಾದಂಬರಿಯ ವಸ್ತುಗಳೆಲ್ಲ ಇದೇ ಹಳ್ಳಿಯ ಕೆಳಗೇರಿಯ ಪಟ್ಟಣದ ಕೊಳಗೇರಿಯ ನಗರದ ಝೋಪಡಪಟ್ಟಿಯ ಮುಗ್ಧ- ಮೂರ್ಖ ಹೆಂಗಸರ ನೂರಾರು ಸಮಸ್ಯೆಗಳೇ ಆದುವು. ನಾನು ಬರೆಯಬೇಕಾದದ್ದು ಇದು ಇಂಥದು ಅನ್ನುವ ನಿಚ್ಚಳ ಸತ್ಯ ನನ್ನ ಕಣ್ಣು ಮುಂದೆ ಬಂದು ನಿಂತಿತು. ಹಿಂದಿನ ಮನರಂಜನಾತ್ಮಕ ಕಾದಂಬರಿಗಳನ್ನು ಒಂದೆಡೆ ಸರಿಸಿ, ನಾನು ನನ್ನದೇ ಆದ ಹೊಸಹಾದಿಯನ್ನು ಹುಟ್ಟಿಸುವ ಹೆಜ್ಜೆಗಳನ್ನು ಎತ್ತಿಡಲಾರಂಭಿಸಿದೆ. ಗುಡಿಸಲಗೇರಿಯ ನನ್ನ ಹೆಂಗಸರ ಬದುಕನ್ನು ಅನಾವರಣಗೊಳಿಸತೊಡಗಿದೆ. ಅವರ ಹೋರಾಟ, ಸಂಘರ್ಷಗಳನ್ನು ಬಯಲಿಗೆ ಹರವತೊಡಗಿದೆ. ನನ್ನ ಜಿಲ್ಲೆಯ ಝೋಪಡಪಟ್ಟಿಯ ಹೆಂಗಸರ ಗೋಳನ್ನು ಕತೆಯಾಗಿಸುವಾಗ ನಾನು ಅವರದೇ ದಿನನಿತ್ಯದ ಆಡುನುಡಿಗಳ ಅಸಲೀ ಜವಾರಿ ಭಾಷೆಯನ್ನು ಬಳಸುವುದು ಅನಿವಾರ್ಯವಾಯಿತು. ಎಲ್ಲರಿಗೂ ತಿಳಿಯಲಿ ಅನ್ನುವ ಜಿದ್ದಿನಲ್ಲಿಗೆ ಕಟ್ಟುಬಿದ್ದು ನಾನೇನಾದ್ರೂ ಶಿಷ್ಟ ಭಾಷೆಯಲ್ಲಿ ಅವರ ಬದುಕನ್ನು ಸುತ್ತಿಟ್ಟಿದ್ದರೆ ಅದು ತನ್ನ ಅಸಲೀತನವನ್ನು ಕಳೆದುಕೊಂಡು ನಕಲಿಯಾಗಿ, ಅದರ ಮೂಲ ಆಶಯದ ಮುಖ್ಯ ಬೇರಿಗೇ ಕೊಡಲಿ ಪೆಟ್ಟಾಗುತ್ತಿತ್ತು. ಹೀಗಾಗಿ ನನ್ನೂರಿನ ಈ ಹಳ್ಳಿ ಭಾಷೆ ಆ ಕಡೆಯ, ಅಂದರೆ ಬೆಂಗಳೂರು, ಮೈಸೂರು, ಮಲೆನಾಡು ಮೊದಲಾದ ಕನ್ನಡಿಗರಿಗೆ ಅರ್ಥವಾಗುತ್ತದೆಯೋ ಇಲ್ಲವೋ ಅನ್ನುವ ಅಳುಕಿದ್ದರೂ ನಾವು ಹೀಗೆ ಅವರ ಗ್ರಾಮ್ಯ ಭಾಷೆಯ ಕಾದಂಬರಿಗಳನ್ನು ಶ್ರಮಪಟ್ಟು ಓದಿ ಅರ್ಥಮಾಡಿಕೊಳ್ಳುತ್ತೇವೆಯೋ ಅವರೂ ಹಾಗೆಯೇ ಸ್ವಲ್ಪ ಹೆಣಗಾಡಲಿ ಅನ್ನುವ ತಗಾದೆಯೂ ನನ್ನ ಅಂತರ್ಯದಲ್ಲಿತ್ತು. ನನ್ನ 'ನೀಲಗಂಗಾ' ಕಾದಂಬರಿ 'ಲಂಕೇಶ ಪತ್ರಿಕೆ'ಯಲ್ಲಿ ಧಾರಾವಾಹಿಯಾಗಿ ಪ್ರಕಟವಾದಾಗ ವಿಮರ್ಶಕರೂ, ಓದುಗರೂ ಅದನ್ನು ತುಂಬಾ ಮೆಚ್ಚಿಕೊಂಡರು. ಭಾಷೆಯ ಗಟ್ಟಿತನವನ್ನು, ಒರಟುತನವನ್ನು ಪ್ರೀತಿಸಿದರು. ನನ್ನ ಜಿಲ್ಲೆಯ ಗಂಡು ಕನ್ನಡ ಭಾಷೆಯ ಕಡೆಗೆ ಆಕರ್ಷಿತರಾದರು. ನನಗೆ ಧೈರ್ಯ ಬಂದಿತು. ಮುಂದಿನ ಎಲ್ಲಾ ಕಾದಂಬರಿಗಳಲ್ಲಿ ಇದೇ ಗ್ರಾಮ್ಯಭಾಷೆಯನ್ನು ಯಾವ ಮುಲಾಜೂ ಇಲ್ಲದೆ, ನಿರ್ಭಿಡೆಯಿಂದ ಬಳಸತೊಡಗಿದೆ. 'ಹಸಿ ಮಾಂಸ ಮತ್ತು ಹದ್ದುಗಳು' ಕಾದಂಬರಿ 'ತರಂಗ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗ ತೊಡಗಿದಾಗಂತೂ ಜನರು ದಂಗಾದರು. ಇಂದು ಓದಿದ ಧಾರಾವಾಹಿಯನ್ನು ಮೆಚ್ಚಿ ಮೆಲುಕಾಡಿಸುತ್ತಲೇ ಮುಂದಿನ ಕಂತಿಗಾಗಿ ಕಾತರದಿಂದ ಕಾಯತೊಡಗಿದರು. "ಅಯ್ಯಯ್ಯಪ್ಪೋ.... ಒಬ್ಬ ಹೆಣ್ಣು ಮಗಳಾಗಿ ಈ

ಗೀತಾ ಸೆಕ್ಸ್ ಬಗ್ಗೆ ಹೆಣ್ಣಿನ ಲೈಂಗಿಕ ಶೋಷಣೆಯ ಬಗ್ಗೆ ಇಷ್ಟು ಖುಲ್ಲಮ್ ಖುಲ್ಲಾ ಆಗಿ ಬರೀತಾಳಲ್ಲ... ಎಂಥ ಧೈರ್ಯ ಆಕೀದು...." ಅಂತ ಕೆಲವರು ಮೆಚ್ಚುಗೆಯ ಮಾತಾಡಿದರೆ 'ನಾಚಿಕೆಯಿಲ್ಲದವಳು' ಅಂತ ಬೆರಳ ಮೇಲೆಣಿಕೆಯ ಮಂದಿ ನನ್ನ ಹಣೆಗೆ ಲೇಬಲ್ ಅಂಟಿಸಿದರು. "ಏನು ಅಶ್ಲೀಲ ಬರೀತಾಳ್ರೀ ಇಕೀ... ಇಕಿಗಿ ಮನ್ಯಾಗ ಯಾರೂ ಹೇಳವರು ಕೇಳವರು ಇಲ್ಲಂತ ಕಾಣಸ್ತದ. ಇಕೀಗಿ ಹದ್ದು ಬಸ್ತಿನಲ್ಲಿ ಇಟ್ಟುಕೊಳ್ಳಲಾರ್ದ ಗಂಡನಾದ ಆ ನಾಗಭೂಷಣ ಎಂಥವನ್ರೀ? ಜೋರು ಕಾ ಗುಲಾಮ ಅದಾನ ಕಾಣಸ್ತದ... ಹೆಂಗಸಾಗಿ ಹಿಂಗ್ ಬರೆಯೋದಾ.... ಥೂ ನಾಚಿಗ್ಗೇಡು" ಅಂತಂದು ಮೇಲೆ ಮೂಗು ಮುರಿದರೂ ಕೆಲ ಮಡಿವಂತ ಮನಸ್ಸುಗಳು ನನ್ನ ಕಾದಂಬರಿಯನ್ನು ಕದ್ದು ಮುಚ್ಚಿ ಓದಿ ಒಳಗೊಳಗೇ ತೊಡೆತುರಿಸಿಕೊಂಡದ್ದು ಸುಳ್ಳಲ್ಲ! ಹೌದು "ಹಸಿಮಾಂಸ ಮತ್ತು ಹದ್ದುಗಳು" ಬರೆದಾಗ ನನ್ನ ಗಂಡ ನಾಗಭೂಷಣ ಸತ್ತು ಆಗಲೇ ಬಹಳ ದಿನಗಳಾಗಿತ್ತು. ಅವನು ಜೀವಂತವಿದ್ದರೂ "ಹೆಣ್ಣು ಮಗಳಾಗಿ ಹಿಂತದ್ದೆಲ್ಲಾ ಬರ್ದು ನೀ ಬದಲಾಮಿ ಆಗಬ್ಯಾಡ... ನನಗಿದು ಬಿಲ್‌ಕುಲ್ ಪಸಂದಿಲ್ಲ ನೋಡು." ಅಂತ ಅವನೇನಾದ್ದರೂ ನನ್ನನ್ನು ದಬಾಯಿಸಿ, ನನ್ನ ಬರವಣಿಗೆಯನ್ನು ಬಗ್ಗಿಸಲು ಹವಣಿಸಿದ್ದರೆ ನಾನು ಅವನಿಗೆ ಹೆದರಿ ಬರೆಯುವುದನ್ನು ಬಿಡುತ್ತಲೂ ಇರಲಿಲ್ಲ. ಆ ಮಾತು ಬೇರೆ. ಆದರೆ ನನ್ನ ನಾಗಭೂಷಣ 'ಜೋರು ಕಾ ಗುಲಾಮ್'ನಂತೂ ಖಂಡಿತ ಆಗಿರಲಿಲ್ಲ! ಅವನಿಗೂ ನನಗೂ ಯಾವಾಗಲೂ ಒಂದಿಲ್ಲಾ ಒಂದು ವಿಷಯಕ್ಕೆ ಮಾತಿನ ಚಕಮಕಿ ನಡೆಯುತ್ತಲೇ ಇರುತ್ತಿತ್ತು. ಒಂದೊಂದು ಸಲವಂತೂ 'ನನ್ನ ಬಾಯಿ ಅವನ ಕೈ' ಅನ್ನುವವರೆಗೂ ಬರುತ್ತಿತ್ತು. ಇದ್ದೊಬ್ಬ ಮಗ ನನ್ನ ಬರವಣಿಗೆಯ ಉಸಾಬರಿಗೇ ಬರುವುದಿಲ್ಲ. ನಾನು ಬರೆದದ್ದನ್ನು ಅವನು ಓದುವುದೂ ಇಲ್ಲ. ಇನ್ನು ನನ್ನ ಮುದ್ದಿನ ಮಗಳಿಗೆ ನಾನು ಬರೆದದ್ದೆಲ್ಲ ಅಚ್ಚುಮೆಚ್ಚು. ಹೀಗಾಗಿ ನಾನು ಗುಡಿಸಲಗೇರಿ ಹೆಂಗಸರ ಲೈಂಗಿಕ ಶೋಷಣೆಯ ಬಗ್ಗೆ ಝೋಪಡಪಟ್ಟಿಯ ಮಂದಿಯ ಹಸಿವು- ಹಾದರ- ಕುಡಿತ- ಕಳವು ಮೊದಲಾದವುಗಳ ಬಗ್ಗೆ ಇದ್ದದ್ದಿದ್ದಂತೆಯೇ ಖುಲ್ಲಮ್ ಖುಲ್ಲಾ ಆಗಿ ಬರೆಯಲು ನನಗ್ಯಾವ ಅಡ್ಡಿ ಆತಂಕಗಳೂ ಇರಲಿಲ್ಲ ಅಂತಾದರೂ ನನ್ನ ಅವ್ವನ ಸಿಡಿಪಡಿ ಇದ್ದೇ ಇತ್ತು. ಅವಳಿಗೆ ನನ್ನ ಕಾದಂಬರಿಗಳ ಅಕ್ಷರಗಳೆಂದರೆ ಕಾಗೆಕಾಲು ಗುಬ್ಬಿಕಾಲು ಅಂತಿರುವಾಗ ಯಾರಾದರೂ ಗಂಡಸರು ಹೊಟ್ಟೆಕಿಚ್ಚಿನಿಂದ "ನಿನ್ ಮಗಳು ಹಲ್ಕಟ್ ಮಾತುಗೋಳೆಲ್ಲಾ ಬರೀತಾಳ ತನ್ನ ಕತಿ ಒಳಗೆ ಕೋಡಿ.... ನೀ ಅರೆ ಒಂದಿಷ್ಟು ಬುದ್ಧಿ ಹೇಳಬಾರ್ದಾ ಆಕೀsಗೀ...." ಅಂತ ಚಾಡಿ ಹೇಳಿ, ಹಚ್ಚಿಕೊಟ್ಟಾಗ ಮಾತ್ರ ಅವ್ವನ ಗೊಣಗಾಟ ಶುರುವಾಗುತ್ತದೆ. ನಾನದಕ್ಕೆ ನಕ್ಕು ಹಾರಿಸಿ ಬಿಡುತ್ತೇನೆ ಅಷ್ಟೇ. "ಹಸಿ ಮಾಂಸ ಮತ್ತು ಹದ್ದುಗಳು" ಎಷ್ಟು ಜನಪ್ರಿಯವಾಯಿತೆಂದರೆ ಅದಿನ್ನೂ ಪತ್ರಿಕೆಯಲ್ಲಿ ಮೂರೇ ಮೂರು ಕಂತು ಮಾತ್ರ ಪ್ರಕಟವಾದಾಗಲೆ ಸುಪ್ರಸಿದ್ಧ ಚಲನಚಿತ್ರ ನಿರ್ದೇಶಕರಾದ ದೊರೈ- ಭಗವಾನರು ಸಿನೇಮಾಕ್ಕಾಗಿ ಅದರ ಹಕ್ಕನ್ನು ಪಡೆದುಕೊಂಡರು. ಅದು ಸಿನೇಮಾ ಆಗಿ ಬಿಡುಗಡೆಯಾದಾಗ ಮೆಚ್ಚುಗೆಯ ಮಹಾಪುರವೇ ಹರಿದು ಬಂತು. ವಿಮರ್ಶಾಲೋಕದಲ್ಲಿಯೂ ಅದು ಚರ್ಚಿತವಾಗಿ ಅದರಲ್ಲಿಯ ವಸ್ತು ಮತ್ತು ನಾಯಕಿ ಸರಿತಾಳ ಅಭಿನಯವನ್ನು ಎಲ್ಲರೂ ದೂಸರಾ ಮಾತಿಲ್ಲದೆ ಮೆಚ್ಚಿಕೊಂಡರು. ನಾನು ಆರಿಸಿಕೊಳ್ಳುವ ವಸ್ತುವಿನ ನಾವಿನ್ಯತೆ ಮತ್ತು ಬಳಸುವ ಭಾಷೆಯಲ್ಲಿಯ ಹೊಸತನದಿಂದಾಗಿಯೇ ಇರಬೇಕು ನನ್ನ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಗಟ್ಟಿನೆಲೆಯನ್ನು ಕಂಡುಕೊಂಡಿವೆ. ಅನಕ್ಷರಸ್ಥ, ಹಳ್ಳಿಯ

ಹೆಣ್ಣಿನ ಶೋಷಣೆಯ ಬಗ್ಗೆ ಈ ಹಿಂದೆ ಕನ್ನಡದಲ್ಲಿ ಎಲ್ಲಿಯೂ ಯಾವ ಲೇಖಕಿಯೂ ದಾಖಲಿಸಿಲ್ಲ. ನನಗಿಂತ ಮೊದಲು ಬಂದ ಲೇಖಕಿಯರು ಯಾರೂ, ಈ ಅಮಾಯಕ ಹೆಣ್ಣು ಮಕ್ಕಳ ಸ್ಥಿತಿಗತಿಯ ಬಗ್ಗೆ ಕಾಳಜಿ ವಹಿಸಿಲ್ಲ. ಉಪವಾಸ ವನವಾಸ ಬಿದ್ದು, ಹರಕು ಬಟ್ಟೆಯ ಈ ಹೆಂಗಸರು ಮುರುಕು ಮನೆಯಲ್ಲಿ ಬದುಕುತ್ತಿರುವುದಾದರೂ ಹೇಗೆ? ಇವರ ಸಮಸ್ಯೆಗಳೇನು? ಸಂಘರ್ಷಗಳೆಂಥವು? ಅನ್ನುವುದರ ಕಡೆಗೆ ಅವರ ಗಮನವೇ ಹರಿಯಲಿಲ್ಲ. ಈ ದುರ್ದೈವಿ ಹೆಣ್ಣು ಮಕ್ಕಳಿಗೆ ಬದುಕೇ ಒಂದು ಶಾಪವೆಂಬ ಅಂಶ ನಮ್ಮ ಯಾವ ಲೇಖಕಿಗೂ ಹೊಳೆಯಲಿಲ್ಲ. ಹೀಗಾಗಿ ಇಂಥ ಹೆಂಗಸರ ದಾರುಣತೆಯ ಹಲವಾರು ಮಗ್ಗಲುಗಳ ಬಟ್ಟೆ ಬಿಚ್ಚಿಟ್ಟಿಲ್ಲ. ಕಾರಣ ಅವರಿಗೆ ಇದೆಲ್ಲ ಗೊತ್ತೇಯಿರಲಿಲ್ಲ. ಜಾತಿನೆಲೆಯ ಸಾಮಾಜಿಕ ಅಪಮಾನದ ಸಂಕಟ, ದೌರ್ಜನ್ಯ ದಬ್ಬಾಳಿಕೆಯ ನೋವು, ವರ್ಗನೆಲೆಯ ಮಾನಸಿಕ ದೈಹಿಕ ಕ್ರೌರ್ಯ, ದಲಿತ ಜಗತ್ತಿನ ಮುಗ್ಧ ಹೆಂಗಸರ ಲೈಂಗಿಕ ಶೋಷಣೆಯ ಚಿತ್ರಹಿಂಸೆ, ಎಂಜಲುಂಡು, ಅಪಮಾನ ನುಂಗಿ, ಕಣ್ಣೀರನ್ನು ಕಣ್ಣಲ್ಲೇ ಇಂಗಿಸುವ ಅವರ ನಿತ್ಯ ಚಡಪಡಿಕೆಗಳನ್ನು 'ಈ ವೈದಿಕ ಪರಂಪರೆಯಿಂದ ಬಂದ ಲೇಖಕಿಯರು ಕನಿಕರದಿಂದ ನೋಡಿ ತಿಳಿಯಬೇಕೇ ಹೊರತು ಅನುಭವಿಸಿ ಪ್ರತಿಕ್ರಿಯಿಸುವ ಛಲವಂತಿಕೆಯಿಂದಲ್ಲ". ಎನ್ನುವ ಮಲ್ಲಿಕಾ ಘಂಟಿಯವರ ಮಾತುಗಳು ಅಲ್ಲಗೆಳೆಯುವಂತಿಲ್ಲ. (ಕೆ ಉಷಾ ಪಿ. ರೈ, ಕೆ.ಎಂ. ವಿಜಯಲಕ್ಷ್ಮಿ (ಸಂ): ಲೇಖ ಲೋಕ -೪ ; ೨೦೦೩, ೨೮-೩೨) ಗೀತಾನಾಗಭೂಷಣ ಅವರ ಬರಹದ ಅಧಿಕೃತತೆಯ ಬಗ್ಗೆ ಅವರ ಮಾತುಗಳು ಮುಖ್ಯವೆಂಬಂತೆ ಕಂಡುಬರುತ್ತವೆ.

*೧೨ ಸಾರಾ ಅಬೂಬಕ್ಕರ್ ಅವರ ಜೀವನಾನುಭವಗಳನ್ನು ಲೇಖ-ಲೋಕ-೧ರಲ್ಲಿ ಈ ಕೆಳಗಿನಂತೆ ಹೇಳಿಕೊಂಡಿದ್ದಾರೆ. ಎಸ್.ಎಸ್.ಎಲ್.ಸಿ ಪರೀಕ್ಷೆಯ ಫಲಿತಾಂಶ ಹೊರಬೀಳುವ ಮೊದಲೇ ಮದುವೆಯಾಯಿತು. ಮದುವೆ ಬೇಡ ಎಂದು ಹೇಳುವ ಸಾಧ್ಯತೆ ಇರಲೇ ಇಲ್ಲ. ಆಗಲೇ ಆರು ವರ್ಷಗಳ ಜೀವದಾನ ಪಡೆದಿದ್ದೆನಲ್ಲ? ಆದ್ರೆ ವಿದ್ಯಾವಂತ ಗಂಡ ಬೇಕು ಎನ್ನುವಷ್ಟು ಸ್ವಾತಂತ್ರ್ಯವಿತ್ತು. ಅದೂ ಕೂಡಾ ಮನೆಯ ಹಿರಿಯರಿಗೆ ಆಶ್ಚರ್ಯದ ವಿಷಯವೇ. ಹೆಣ್ಣು ಮಕ್ಕಳು ಕಲಿತರೆ ಹೀಗೆಯೇ ಆಗೋದು ಅಂತ ಅಜ್ಜಿ ತಂದೆಯನ್ನು ಬೈಯ್ಯಲು ಶುರುಮಾಡಿದ್ದರು. ಆದರೆ ಆಗಿನ ಕಾಲದಲ್ಲಿ ವಿದ್ಯಾವಂತ ಮುಸ್ಲಿಂ ಹುಡುಗರು ಇರುವುದೇ ಅಪರೂಪವಾಗಿತ್ತು. ಊರಲ್ಲಿ ವೈದ್ಯಕೀಯ ಕಾಲೇಜಿನಲ್ಲಿ ಓದುತ್ತಿದ್ದವರೊಬ್ಬರಿದ್ದರು. ಅವರ ತಂದೆ ತಾಯಿಗಳು ನನ್ನ ಹೆಸರನಲ್ಲಿ ಇನ್ನೂರು ಮುಡಿ ಅಕ್ಕಿ ಹುಟ್ಟುವಳಿ ಬರುವ ಆಸ್ತಿ ಕೊಡಬೇಕೆಂದರು. ಹೀಗಾಗಿ ಅದು ಆಗಲಿಲ್ಲ. ನನ್ನ ಹೆಸರಿನಲ್ಲಿ ಚಿಕ್ಕದೊಂದು ಅಡಿಕೆತೋಟವಿತ್ತು. ಆ ಮೇಲೆ ಮದುವೆಯಾಗಿ ಮಂಗಳೂರಿಗೆ ಬಂದೆ. ಆಗಿನ ಕಾಲದಲ್ಲಿ ನಮ್ಮ ಕುಟುಂಬಗಳಲ್ಲಿ ಹಣದ ರೂಪದಲ್ಲಿ ವರದಕ್ಷಿಣೆ ಕೊಡುವ ಪದ್ಧತಿ ಇರಲಿಲ್ಲ. ಆದರೂ ಚಿಕ್ಕರೂಪದ ವರದಕ್ಷಿಣೆ ಕಿರುಕುಳವನ್ನು ಅನುಭವಿಸಿದೆನೆಂದೇ ಹೇಳಬಹುದು. ಮದುವೆಯಾದ ಬಳಿಕ ಮನೆಯ ಈ ಬಂಧನದಿಂದ ಬಿಡುಗಡೆ ದೊರೆಯಬಹುದೆಂದುಕೊಂಡಿದ್ದೆ. ಗಂಡ ವಿದ್ಯಾವಂತನಾದರೆ ಆತನಿಗೆ ಧರ್ಮಾಂಧತೆ ಇರಲಾರದು. ಘೋಷಾ ಹಾಕಬೇಕೆಂದು ಪೀಡಿಸಲಾರನೆಂದುಕೊಂಡಿದ್ದೆ. ಹೀಗಾಗಿಯೇ ವಿದ್ಯಾವಂತ ಗಂಡನನ್ನು ಬಯಸಿದ್ದೆ. ಆದರೆ ನಾನು ಬಯಸಿದ್ದೊಂದು ಆಗಲೇ ಇಲ್ಲ. ಮದುವೆಯ ಮರುದಿನ ಪ್ರಥಮಬಾರಿ ಗಂಡನ ಮನೆಗೆ ಹೋಗಬೇಕಾದರೆ ಬುರುಕಾ ತೊಡಿಸಿಯೇ ನನ್ನನ್ನು

ಕರೆದೊಯ್ದರು! ನಮ್ಮೂರಿನಲ್ಲಿ ಆಗ ಬುರ್ಖಾದ ಹಾವಳಿ ಅಷ್ಟೊಂದಿರಲಿಲ್ಲ. ಆದರೆ ಮಂಗಳೂರಿನಲ್ಲಿ ಆಗ ಹತ್ತು ವರ್ಷ ಪ್ರಾಯ ದಾಟಿದ ಹೆಣ್ಣು ಮಕ್ಕಳು ಬುರ್ಖಾ ಹಾಕುವುದು ಕಡ್ಡಾಯವಾಗಿತ್ತು. ನನ್ನ ಅತ್ತೆಯಮನೆ ಸುಮಾರು ನಾಲ್ವತ್ತಕ್ಕಿಂತ ಮೇಲ್ಪಟ್ಟು ಜನರಿದ್ದ ಅವಿಭಕ್ತ ಕುಟುಂಬದ ಮನೆಯಾಗಿತ್ತು. ಮನೆಯ ಹೆಂಗಸರು ಹೆಣ್ಣು ಮಕ್ಕಳೆಲ್ಲರೂ ನಿರಕ್ಷರಿಗಳಾಗಿದ್ದರು. ಅವರ ದೃಷ್ಟಿಯಲ್ಲಿ ಓದುವುದೆಂದರೆ ಖುರ್‌ಆನ್ ಓದುವುದು ಮಾತ್ರ. ಹೆಣ್ಣುಮಕ್ಕಳು ಬೇರೇನನ್ನಾದರೂ ಓದುವುದು ಪಾಪವೆಂದೇ ಪರಿಗಣಿಸಲ್ಪಡುತ್ತಿತ್ತು. ಆದರೆ ಅವರಿಗೆ ಧಾರ್ಮಿಕ ವಿದ್ಯಾಭ್ಯಾಸ ಚೆನ್ನಾಗಿತ್ತು. ಹುಡುಗಿ ತಾಯಿಯ ಮನೆಯ ಯಾವ್ಯಾವ ಸೌಕರ್ಯಗಳನ್ನು ಹೊಂದಿದ್ದಳೋ ಅದನ್ನು ಗಂಡನ ಮನೆಯಲ್ಲೂ ಒದಗಿಸಿಕೊಡಬೇಕೆಂಬ ಧಾರ್ಮಿಕ ಬೋಧನೆ ಇದ್ದುದರಿಂದ ನಾನು ಗಂಡನ ಮನೆಯಲ್ಲಿ ಸುಖವಾಗಿಯೇ ಇದ್ದೆನೆನ್ನಬಹುದು. ಸಾರಾ ಅವರು ಕಂಡ ಅನುಭವಿಸಿದ ಜೀವನಾನುಭವಗಳೇ ಅವರ ಬರಹಕ್ಕೆ ಮೂಲ ಪ್ರೇರಣೆಯಾಗಿದೆ. (ವಿಜಯಾದಬ್ಬೆ (ಸಂ): ಲೇಖ-ಲೋಕ -೧ ; ೧೯೯೮,೨೮-೩೫)

*೧೩ ಚಂಪಾವತಿಯವರ ಕೃತಿಯಾದ ಶಿವಗಂಗಾ ಕಾದಂಬರಿಗೆ ಮುನ್ನುಡಿಯನ್ನು ಬರೆದ ಸುಮಿತ್ರಾ ಬಾಯಿಯವರು ಲೇಖಕಿಯ ಸ್ತ್ರೀವಾದದ ನೆಲೆಯಲ್ಲಿ ಎತ್ತಿದ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಿದ್ದಾರೆ. "ಇದು ಕೆಲವು ವರ್ಷಗಳ ಹಿಂದಿನ ಸಂಗತಿ. ಮಡಿಕೇರಿಯಲ್ಲಿ ಲೇಖಕಿಯರಿಗಾಗಿ, ಲೇಖಕಿಯರೇ ನಡೆಸಿದ ಒಂದು ಕಮ್ಮಟ. ಮುಖ್ಯವಾಗಿ ಸ್ತ್ರೀವಾದದ ಸಿದ್ಧಾಂತ ಮತ್ತು ಮಹಿಳಾ ಬರಹವನ್ನು ಕುರಿತ ಚರ್ಚೆ ಸಾಗಿತ್ತು. ಚರ್ಚೆಯ ಹೊತ್ತಿನಲ್ಲಿ ಚಂಪಾವತಿ ಒಂದು ಪ್ರಶ್ನೆ ಎತ್ತಿದ್ದರು. "ಸ್ತ್ರೀವಾದವನ್ನ ಬರೀ ಪುಸ್ತಕ ಸಿದ್ಧಾಂತ ಅಂದುಕೊಳ್ಳದೆ, ಬದುಕಿನ ವಿಧಾನವನ್ನು ಬದಲಾಯಿಸಲು ಒತ್ತಾಯಿಸೋ ಹೋರಾಟದ ಕ್ರಮ ಅಂತ ತಿಳಕೊಂಡಿರೋರು, ಮಹಿಳಾ ಹೋರಾಟ ರಾಜಕೀಯದಲ್ಲಿ ಗಾಢವಾಗಿ ತೊಡಗಿಕೊಂಡಿರೋರು, ಲೇಖಕಿಯರೂ ಆಗಿದ್ದಾಗ, ಆ ವಾಸ್ತವ ಹೋರಾಟದ ಅನುಭವಾನ ದಿಟ್ಟವಾಗಿ ಪ್ರಾಮಾಣಿಕವಾಗಿ ಕೃತಿಗಳಲ್ಲಿ ಅಭಿವ್ಯಕ್ತಿಸಿದ ಉದಾಹರಣೆಗಳು ಕನ್ನಡದಲ್ಲಿ ಏಕೆ ಇಲ್ಲ? ಅಂಥ ಕೃತಿಗಳು ಬಂದಾಗ ನಿಮ್ಮ ಚರ್ಚೆಗಳು ಅರ್ಥ ಪೂರ್ಣವಾದೀತಲ್ಲವೇ?" ಎನ್ನುವುದು ಸ್ವಲ್ಪ ಹೆಚ್ಚು ಕಡಿಮೆ ಅಂದು ಅವರು ಕೇಳಿದ ಪ್ರಶ್ನೆಯ ಸಾರಾಂಶ. ಈ ಪ್ರಶ್ನೆಗೆ ಸರಳ ಉತ್ತರ ನನಗೆ ಸಾಧ್ಯವೆನಿಸಿರಲಿಲ್ಲ." ಆದರೆ ಇದನ್ನು ಶಿವಗಂಗಾದ ಒಳಗೆ ಚಂಪಾವತಿಯವರು ಮಾಡಿ ತೋರಿಸಿದ್ದಾರೆ. ಎನ್ನುವುದು ಅವರ ಅಭಿಪ್ರಾಯವಾಗಿದೆ.

*೧೪ ಸಂಶೋಧನೆಯ ಕೃತಿಗಳಾಗಿ ಎಂ.ಕೆ.ಇಂದಿರಾ ಸಮಗ್ರ ಅಧ್ಯಯನ (ಮಂದಾಕಿನಿ ಪುರೋಹಿತ), ಅನುಪಮಾ ನಿರಂಜನ ಅವರ ಕಾದಂಬರಿಗಳು ಒಂದು ಸಾಹಿತ್ಯಕ ಅಧ್ಯಯನ (ವಿಜಯಶ್ರೀ ಸಬರದ), ಮಹೇಶ್ವರಿ ಯು ಅವರ ಮಾನುಷಿಯ ಓದು)ಮುಖ್ಯವಾಗುತ್ತದೆ. ಸ್ತ್ರೀಯರ ಕಾದಂಬರಿಗಳಿಗೆ ಸಂಬಂಧಿಸಿದಂತೆ ಪಾರ್ಶ್ವಿಕ ಅಧ್ಯಯನವು ಎನ್.ಕೆ.ಕೋದಂಡ ರಾಮ ಅವರ ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ ಈ ಕೃತಿಯಲ್ಲಿದೆ. ಇವುಗಳಲ್ಲದೆ, ವಿಜಯಾ ದಬ್ಬೆ ಅವರು ಸಂಪಾದಿಸಿದ ಹಿತೈಷಿಣಿಯ ಬದುಕು- ಬರಹದಲ್ಲಿ ನಂಜನಗೂಡು ತಿರುಮಲಾಂಬ ಅವರ ಕಾದಂಬರಿಗಳು ಮತ್ತು ಅದಕ್ಕೆ ಸಂಬಂಧಿಸಿ ಬರೆದ ವಿಮರ್ಶೆ, ಸುಮಿತ್ರಾಬಾಯಿಯವರು ಸಂಪಾದಿಸಿದ ಕಲ್ಯಾಣ ಸರಸ್ವತಿ

(ಆರ್.ಕಲ್ಯಾಣಮ್ಮ) ಕೃತಿಗಳು ಅನುಪಮಾ ನಿರಂಜನ, ಎಂ.ಕೆ.ಇಂದಿರಾ, ತ್ರಿವೇಣಿಯವರ ಕುರಿತು ಬಂದ ಅಭಿನಂದನ ಕೃತಿಗಳು, ವಿಮರ್ಶೆಗಳು ಸಾಹಿತ್ಯ ವಿಮರ್ಶೆಯ ಒಳಗೆ ಸಾಂದರ್ಭಿಕವಾಗಿ ಕಾಣಿಸಿಕೊಳ್ಳುತ್ತವೆ.

## ಕೊನೆ ಟಿಪ್ಪಣಿ

೧. ಅ.ರಾ.ಸೇ(ಸಂ):(೧೯೯೯) ಪರಮಾರ್ಥ ಪದಕೋಶ (ಜಾಗತಿಕ ಆಧ್ಯಾತ್ಮ ಪದಗಳ ವಿವರಣಾರ್ಥಕೋಶ); ಕಾಮಧೇನು ಪ್ರಕಾಶನ, ಬೆಂಗಳೂರು.

೨. ಕೆ. ಉಷಾ ಪಿ.ರೈ, ಕೆ. ವಿಜಯ ಲಕ್ಷ್ಮಿ(ಸಂ) :(೨೦೦೩) ಲೇಖ -ಲೋಕ ೪; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೩. ಗೋಪಾಲ ಕೃಷ್ಣ ಕೆ.ಎಲ್.(ಅನು):(೧೯೮೦)ಏಂಗೆಲ್ಸ್ ;ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗ, ಮೈಸೂರು.

೪. ನಾಗಮಣಿ ಎಸ್.ರಾವ್(ಸಂ) :(೧೯೯೯) ಲೇಖ - ಲೋಕ ೨; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೫. ಮಂದಾಕಿನಿ ಪುರೋಹಿತ: (೧೯೯೧)ಎಂ.ಕೆ.ಇಂದಿರಾ-ಸಮಗ್ರ ಅಧ್ಯಯನ; ಹೇಮಂತ ಸಾಹಿತ್ಯ, ಬೆಂಗಳೂರು.

೬. ವಿಜಯಶ್ರೀ ಸಬರದ:ಅನುಪಮಾ ನಿರಂಜನ:(೧೯೯೪) ಬದುಕು-ಬರಹ; ಮನೋಹರ ಪ್ರಕಾಶನ, ಧಾರವಾಡ.

೭. ಸುಮಿತ್ರಾಬಾಯಿ ಬಿ.ಎನ್. :(೧೯೯೫) ವಿಚಯ; ಇಳಾ ಪ್ರಕಾಶನ, ಬೆಂಗಳೂರು.

# ಅಧ್ಯಾಯ ಎರಡು :

## ವಿವಾಹ ಮತ್ತು ಕುಟುಂಬ: ಅರ್ಥ, ರಚನೆ, ವಿನ್ಯಾಸಗಳ ಅಂತರ್ ಸಂಬಂಧ

**ವಿವಾಹ ಮತ್ತು ಕುಟುಂಬ: ಅರ್ಥ, ರಚನೆ, ವಿನ್ಯಾಸಗಳ ಅಂತರ್ ಸಂಬಂಧ**

**೨.೧ ಆದಿ ಆರ್ಯರ ಕೌಟುಂಬಿಕ ವ್ಯವಸ್ಥೆ .**

೨.೧.೧ ಸಂಘ ಜೀವನದೊಳಗಿನ ವಿವಾಹ ವ್ಯವಸ್ಥೆ .

**೨.೨ ಪ್ರಾಚೀನ ಭಾರತೀಯ ಸಮಾಜದಲ್ಲಿ ವಿವಾಹದ ಪದ್ಧತಿ.**

೨.೨.೧ ಆದಿವಾಸಿ ಸಮಾಜದಲ್ಲಿನ ವಿವಾಹ ಪದ್ಧತಿಗಳು.

೨.೨.೨ ಪ್ರಾಚೀನ ಹಿಂದೂ ಸಮಾಜದಲ್ಲಿ ವಿವಾಹ ಪದ್ಧತಿ.

೨.೨.೩ ಭಾರತೀಯ ಮುಸ್ಲಿಂ ಸಮಾಜ .

**೨.೩ಆಧುನಿಕ ಸಮಾಜದಲ್ಲಿ ವಿವಾಹದ ಪದ್ಧತಿ .**

**೨.೪ ವಿವಾಹದ ರಚನೆ .**

೨.೪.೧. ಆಂತರಿಕ - ಒಳರಚನೆಯ ವಿವಾಹ .

೨.೪.೨ ಬಾಹ್ಯ ಹೊರ ರಚನೆಯ ವಿವಾಹ .

೨.೪.೩ ಅನುಲೋಮ ವಿವಾಹ .

೨.೪.೪ ಪ್ರತಿಲೋಮ ವಿವಾಹ .

**೨.೫ ಕುಟುಂಬ : ಅರ್ಥ- ರಚನೆ- ವಿನ್ಯಾಸ- ಅಂತರ್ ಸಂಬಂಧ.**

೨.೬.೧ ಕುಟುಂಬದ ಅರ್ಥ ವಿನ್ಯಾಸ .

೨.೬.೨ ಕುಟುಂಬದ ರಚನಾ ವಿನ್ಯಾಸ.

ಸಮಾನ ಪ್ರಾಧಾನ್ಯ ಹೊಂದಿದ ಎರಡು ಧ್ರುವಗಳ ಅಥವಾ ಎರಡು ಘಟಕಗಳ ಅನುಸಂಧಾನವೇ ನಿಸರ್ಗ. ಸಮ್ಮಿಲನ ನಿಸರ್ಗದ ಸಹಜ ಧರ್ಮ. ಸಮಗ್ರತೆ ಮತ್ತು ಪೂರ್ಣತ್ವ ಪ್ರಾಪ್ತವಾಗಬೇಕಾದರೆ ನಿರ್ದಿಷ್ಟವಾದ ನಿಸರ್ಗ ಸೂಚಿತ ಒಂದು ಸಮಬಿಂದುವಿನಲ್ಲಿ ಸಂಧಿಸಿ ಐಕ್ಯವಾಗುವುದು ಮುಖ್ಯವಾಗುತ್ತದೆ. ಅದೇ ಪ್ರಕೃತಿ. ಯಾವುದೇ ಸೃಷ್ಟಿ ಆಗಬೇಕಾದರೆ, ಅಂತರ್‌ಸತ್ವದಲ್ಲಿ ಸಮಾನ ಆಶಯ ಹೊಂದಿರುವ, ಪೂರ್ಣವಾಗಿರುವ ಎರಡು ಘಟಕಗಳ ಮಿಲನ ಅನಿವಾರ್ಯ. ಈ ರೀತಿಯಲ್ಲಿ ಪರಿಪೂರ್ಣವಾದ ಎರಡು ಘಟಕಗಳು ಇಲ್ಲದೆ ಪ್ರಕೃತಿಸಹಜ ಪೂರ್ಣತ್ವ ಈ ನಿಸರ್ಗದಲ್ಲಿ ಸಾಧ್ಯವಾಗಲಾರದು. ನಿಸರ್ಗ ರೂಪಿತ ಪ್ರಕೃತಿಯ ಸಹಜ ಪ್ರಕ್ರಿಯೆಯಲ್ಲಿ ಕಾರ್ಯ-ಕಾರಣ ಸಂಬಂಧಗಳದ್ದೇ ಅಂತಿಮ ತೀರ್ಮಾನ. ಸೂರ್ಯ ಕೇಂದ್ರಿತವಾಗಿ ರೂಪಗೊಂಡಿರುವ ಸೌರಮಂಡಲದಲ್ಲಿ ಸ್ವತಂತ್ರ ಸ್ಥಾನವನ್ನು ಪಡೆದುಕೊಂಡು ಗ್ರಹವಾದ ಭೂಮಿಯ 'ವಿಶ್ವ ವ್ಯಾಪಾರ' ನಿರ್ಮಿತವಾದದ್ದೇ ಸಮಾನ ಆಶಯಗಳ ಎರಡು ಘಟಕಗಳ ಒಗ್ಗೂಡುವಿಕೆಯಿಂದ. ಈ ಹಿನ್ನೆಲೆಯಲ್ಲಿ ಪ್ರಕೃತಿ- ಪುರುಷ ಅಥವಾ ಹೆಣ್ಣು- ಗಂಡು ಎಂಬ ಲಿಂಗ ಸಂಬಂಧೀ ಘಟಕಗಳು ಸಮಾನ ಆಶಯದಿಂದ ಒಗ್ಗೂಡುವುದೇ ಈ ನಿಸರ್ಗ ನಿರ್ಮಿತ ಪ್ರಕೃತಿಯ ಸಹಜ ಧರ್ಮ. ಸಾಮಾನ್ಯವಾಗಿ ಮಾನವಶಾಸ್ತ್ರದ ಪರಿಗ್ರಹಿಕೆಗಳು 'ಮಾನವ ಸಂಘ ಜೀವಿ' ಎಂದು ವ್ಯಾಖ್ಯಾನಿಸುತ್ತವೆ.[6] ಆದರೆ ಭೂಮಿಯ ಮೇಲಿನ ಜೀವ ಜಗತ್ತಿನಲ್ಲಿ ಮಾನವ ಮಾತ್ರ ಸಂಘ ಜೀವಿಯಲ್ಲ. ಎಲ್ಲ ಜೀವಿಗಳೂ ತಮ್ಮ ಜೀವಿತದ ನೆಲೆಯಲ್ಲಿ ಸಂಘ ಜೀವಿಗಳಾಗಿಯೇ ಇರಬಯಸುತ್ತವೆ. ಆದರೆ ಒಂದೊಂದು ಜೀವ ವೈವಿಧ್ಯದ ಸಾಂಘಿಕ ಬದುಕು ಅವುಗಳ ಬಯಕೆಗಳ ಆವರ್ತನಗಳನ್ನು ಅವಲಂಬಿಸಿಕೊಂಡು ಭಿನ್ನ ಭಿನ್ನವಾಗಿರುತ್ತವೆ. ತನ್ನ ಜೀವನ ಪೂರ್ತಿ ಒಂಟಿಯಾಗಿ ಬಾಳಿ ಬದುಕಲು ಭೂಮಿಯ ಮೇಲಿನ ಯಾವ ಜೀವಿಗೂ ಸಾಧ್ಯವಿಲ್ಲ ಎಂಬುದು ಖಚಿತ. ಏನಿಲ್ಲದಿದ್ದರೂ ವಂಶಾಭಿವೃದ್ಧಿಯಂಥ ಅತ್ಯಂತ ಪ್ರಧಾನವಾದ ಮಾತ್ರವಲ್ಲ ಹತ್ತಿಕ್ಕಲಾರದಂಥ ಆಂತರಂಗಿಕ ಕರೆ ಸಹಜವಾದ ನೆಲೆಯಲ್ಲಿ ತನ್ನ ಪಂಗಡದ ಭಿನ್ನ ಲಿಂಗದ ಜೀವಿಯ ಜೊತೆಗೆ

ಸಂಸರ್ಗವನ್ನು ನಿರೂಪಿಸಿ ಬಿಡುತ್ತದೆ. ಮನುಷ್ಯರನ್ನು ಹೊರತುಪಡಿಸಿ ಸಾಮಾನ್ಯವಾಗಿ ಇತರ ಯಾವುದೇ ಜೀವಿಗಳ ಲೈಂಗಿಕ ಆಸಕ್ತಿ ಕಾಲ ರೂಪಿತವಾಗಿರುತ್ತದೆ ಮತ್ತು ಸಂತಾನಾಭಿವೃದ್ಧಿ ಕೇಂದ್ರ ಕಾಳಜಿಯಾಗಿರುತ್ತದೆ. ಸಂಘ ಜೀವನದ ಪರಿಕಲ್ಪನೆಯಲ್ಲಿ ಪ್ರಧಾನ ಪಾತ್ರ ಪಡೆಯುವುದು ಆಂತರಂಗಿಕ ಬಯಕೆ ಮತ್ತು ಆಯಾಯ ಜೀವಿಗಳ ಬುದ್ಧಿಮತ್ತೆ, ಜ್ಞಾನ ಮತ್ತು ನೆನಪಿನ ಶಕ್ತಿ. ಜೀವಿಗಳ ಭೌತಿಕ ಮತ್ತು ಬೌದ್ಧಿಕ ನೆಲೆಗಳು ಎಂದು ಇನ್ನೊಂದು ರೀತಿಯಲ್ಲಿ ಇದನ್ನು ಸಮರ್ಥಿಸಬಹುದು. ಭೌತಿಕ ಅಭಿಲಾಷೆಗಳ ಆವರ್ತನೆ ಯಾವುದೇ ಜೀವಿಯು ಪಡೆದುಕೊಳ್ಳುವ ಪ್ರಕೃತಿ ರೂಪಿತ ವೈಶಿಷ್ಟ್ಯದ ಪ್ರಕಾರ ಭಿನ್ನ ಭಿನ್ನವಾಗಿರುತ್ತದೆ. ನಿಸರ್ಗ ರೂಪಿತ ಪ್ರಕೃತಿ ಪ್ರತಿಯೊಂದು ಜೀವಿಗಳಿಗೂ ಅವುಗಳ ಜೈವಿಕ ನಿಯಮವನ್ನು ನಿರೂಪಿಸಿಬಿಡುತ್ತದೆ. ಅವುಗಳ ಒಟ್ಟು ವ್ಯಾಪ್ತಿಯಲ್ಲಿ ಜೀವಿಗಳ ಆವರ್ತನಶೀಲತೆಯಲ್ಲಿ ಬೌದ್ಧಿಕತೆಗಿಂತ ಭೌತಿಕತೆಗೆ ಮಹತ್ವ. ಆದುದರಿಂದ ಜೀವಿಗಳ ಸಾಂಘಿಕ ನೆಲೆಗಟ್ಟು ಭಿನ್ನತೆಯಿಂದ ಕೂಡಿದುದಾಗಿರುತ್ತದೆ. ಅಂದರೆ ಈ ಜೀವ ಜಗತ್ತಿನಲ್ಲಿ ಮಾನವ ಜೀವಿಯು ಇತರ ಪ್ರಾಣಿಗಳಂತೆ ಕೇವಲ ಭೌತಿಕ ಜೀವಿಯಲ್ಲ. ಹಾಗಾಗಿಯೇ ಮಾನವರಿಗೆ ಪ್ರಕೃತಿಯನ್ನು ಸಂಸ್ಕರಿಸುವ ಆ ಮೂಲಕವಾಗಿ ತಾನು ಇರುವ ಸ್ಥಿತಿಗಿಂತ ಭಿನ್ನವಾದ ಮಾತ್ರವಲ್ಲ ಆ ಕಾಲ, ಸಂದರ್ಭದಲ್ಲಿ ತಾನು ಇದ್ದುದಕ್ಕಿಂತ ವಿಶಿಷ್ಟವಾದ ಬದುಕಿನ ವಿನ್ಯಾಸವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇರುವ ಒಂದು ಜಾಗೃತ ಪ್ರಜ್ಞೆಯ ಚೌಕಟ್ಟು ಪ್ರಾಪ್ತವಾಗಿದೆ. ನಾಗರಿಕತೆಗೆ ನಾಂದಿಯಾದದ್ದು ಈ ಮನೋಭಾವವೇ. ಎಂದರೆ ಇರುವಿಕೆಯ ಅರಿವು ಮತ್ತು ಆಗಬೇಕಾದ ಬದಲಾವಣೆಯ ಅರಿವು. ಭೌತಿಕ ಮತ್ತು ಬೌದ್ಧಿಕ ಅರ್ಥಾತ್ ಬುದ್ಧಿ ಮತ್ತು ಭಾವ ಕೇಂದ್ರಿತವಾಗಿ ವಿನ್ಯಾಸಗೊಳಿಸಿಕೊಂಡು ಪ್ರಕೃತಿಯನ್ನು ಸಂಸ್ಕೃತಿಯಾಗಿಸಿಕೊಳ್ಳುವ ಯೋಜನೆ ಒಂದು ಪರಂಪರೆಯಾಗಿ ನಿರ್ಮಿತವಾಗಿದೆ. ಇದರಲ್ಲಿ ಬದಲಾವಣೆ ಎನ್ನುವುದು ಒಂದು ನಿರಂತರ ಪ್ರಕ್ರಿಯೆಯಾಗಿ ತಾದಾತ್ಮ್ಯವನ್ನು ಪಡೆದುಕೊಂಡಿದೆ. ., ಆದರೆ ಮನುಷ್ಯ ಮನೋಭಾವ ತನ್ನ ಬುದ್ಧಿಮತ್ತೆಯ ಮೂಲಕ ಪ್ರಕೃತಿಯ ಮೇಲೆ ಅಧಿಕಾರ ಸ್ಥಾಪಿಸುವ ಹುನ್ನಾರಕ್ಕೆ ಒಳಗಾಗಿ ಆಹಾರ ಸಾಮಾಗ್ರಿ ಬೆಳೆಸುವ, ರಕ್ಷಿಸುವ, ದಾಸ್ತಾನಿಸುವ, ಪೋಷಿಸುವ ಪ್ರಕ್ರಿಯೆಗೆ ಮುಂದಾಗಿ ಆಯ್ಕೆಯ ಅವಕಾಶದ ಚಲನಶೀಲತೆಯನ್ನು ರೂಢಿಸಿಕೊಂಡಿದೆ.

ಕಾಲದ ಬದಲಾವಣೆಯ ಮೂಲಕ ಪರಿಷ್ಕಾರಕ್ಕೆ ಒಳಗಾಗುತ್ತ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ ಸಾಮಾಜಿಕ ಸಂಸ್ಕೃತಿಗೆ ಅನುಗುಣವಾಗಿ ಸಾಂಘಿಕ ಬದುಕನ್ನು ಪರಿಷ್ಕರಿಸುತ್ತ ಬಂದಿರುವುದು ಮಾನವ ಇತಿಹಾಸದಿಂದ ವ್ಯಕ್ತವಾಗುತ್ತದೆ. ತನ್ನ ಅಸ್ಮಿತೆ (Identity)ಯನ್ನು ಮತ್ತು ಆ ಮೂಲಕ ವಿಶಿಷ್ಟತೆಯನ್ನು ಪಾರಂಪರಿಕ ಹಿನ್ನೆಲೆಯ ನೆಲೆಗಟ್ಟಿನಿಂದ ಕಟ್ಟುತ್ತ ಪ್ರತ್ಯೇಕತೆಯನ್ನು ಸಾಧಿಸಲು ನಾನಾ ವಿಧದ ಪದ್ಧತಿಗಳು, ರೂಢಿಗಳು, ನಂಬಿಕೆಗಳು, ಆರಾಧನೆಯ ವಿನ್ಯಾಸಗಳು ಮಾನವನಿಗೆ ನೆರವಾಗಿವೆ. ಅಲೆಮಾರಿ ಹಿನ್ನೆಲೆ, ಪಶು ಸಂಗೋಪನೆಯ ಮೂಲಕ ಒಂದರ್ಥದಲ್ಲಿ ಜಂಗಮತ್ವದಿಂದ ಕೃಷಿ ಸಂಸ್ಕೃತಿಗೆ ಒಳಗಾಗಿ ಸ್ಥಾವರಗೊಳಿಸಿಕೊಂಡ ಮನೋಭಾವ ಮೂಲದಲ್ಲಿ ಕುಟುಂಬ ಕಲ್ಪನೆಗೆ ಚಾಲನೆ ನೀಡಿದೆ. ಮೂಲಭೂತವಾಗಿ ಮಾತೃಪ್ರಧಾನವಾಗಿ ಸಂಘಟಿತಗೊಳ್ಳುತ್ತಿದ್ದ ಗುಂಪುಗಳು ಕೃಷಿ ಪ್ರಧಾನ ವ್ಯವಸ್ಥೆಯನ್ನು ರೂಪಿಸಿವೆ. ಆದರೆ ಕೃಷಿಯೋಗ್ಯ ಭೂಮಿಯ ಒಡೆತನ, ಆರ್ಥಿಕ ಯಾಜಮಾನ್ಯ, ಅಧಿಕಾರ ಮತ್ತು ಮನೋಭಾವದಲ್ಲಿ ರೂಢಿಸಿಕೊಂಡ ಬದಲಾವಣೆ ಮುಂತಾದ ಅಂಶಗಳು ಸಂಘ ಜೀವನದ ತಳಹದಿಯ ಕುಟುಂಬ ಪರಿಪ್ರೇಕ್ಷ್ಯದಲ್ಲಿ ಮಹಿಳೆಯ ಸ್ಥಾನವನ್ನು

ಪಲ್ಲಟಿಸಿ, ಅಧೀನತ್ವಗೊಳಿಸಿ ಪುರುಷನನ್ನು ವೈಭವೀಕರಿಸಿವೆ. ಇದಕ್ಕೆ ಸಾಕ್ಷೀಭೂತವಾಗಿ ಭಾರತದ ಮಹಾಸಂಸ್ಕೃತಿ ಎಂದು ಇತಿಹಾಸದಲ್ಲಿ ಗುರುತಿಸಲಾಗುವ ಆರ್ಯರ ಕುಟುಂಬ ಜೀವನವನ್ನು ನೋಡಬಹುದು. ಇದು ಸಮಾಜಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು ವಿವರಿಸುವ ವಿವಾಹ ಮತ್ತು ಕುಟುಂಬದ ನಿರ್ವಚನಗಳಿಗೆ ಪೂರಕವಾಗಿಯೇ ಬೆಳವಣಿಗೆ ಸಾಧಿಸಿದೆ ಎಂಬುದು ಗಮನಾರ್ಹ ಅಂಶವಾಗಿದೆ.

## ೨.೧ ಆದಿ ಆರ್ಯರ ಕೌಟುಂಬಿಕ ವ್ಯವಸ್ಥೆ :

ಪ್ರಾಚೀನ ಭಾರತದ ಇತಿಹಾಸದಲ್ಲಿ ಆದಿ ಆರ್ಯರು ಸಂಘ ಜೀವಿಗಳಾಗಿದ್ದರು. ಆದರೆ, ಅವರಿಗೆ ತಮ್ಮ ತಂತ್ರಜ್ಞಾನದಿಂದ ಹೆಚ್ಚುವರಿ (Surplus) ಸಂಪತ್ತನ್ನು ಉತ್ಪಾದಿಸಬಹುದು ಎಂಬುದೇ ಗೊತ್ತಿರಲಿಲ್ಲ. ಬೆಂಕಿಯನ್ನು ಕಂಡು ಹಿಡಿದ ಆರ್ಯರಿಗೆ ಮುಂದೆ ಪ್ರಾಣಿಗಳನ್ನು ಪಳಗಿಸುವುದನ್ನು ಕಲಿಯಲು ಕೆಲವು ಸಮಯ ಹಿಡಿಯಿತು ಎಂಬುದು ಗಮನಾರ್ಹ. ಆದರೆ, ನಂತರದ ಬದಲಾವಣೆಗಳಾದ ಕೊಡುಕೊಳ್ಳುವ ವ್ಯವಹಾರ, ಶ್ರಮವಿಭಜನೆ, ವರ್ಣವ್ಯವಸ್ಥೆ ಇವೇ ಮೊದಲಾದ ಎಲ್ಲ ಬೆಳವಣಿಗೆಗಳು ಅತಿ ವೇಗವಾಗಿ ಕಾಲಾನುಕ್ರಮದೊಳಗೆ ಘಟಿಸಿವೆ. ಆರ್ಯರ ಸಮಾಜ ಆ ಹಂತದಲ್ಲಿ ಅತಿ ವೇಗದ ಬದಲಾವಣೆಯನ್ನು ಕಂಡಿದೆ. ಆರ್ಯರ ಸಮಾಜದ ಸಂಘಟನೆಯು 'ಗಣ' ರೂಪದಲ್ಲಿದ್ದುವು. ಎಂಜಲ್ಸ್‌ನ ಪ್ರಕಾರ ಇದನ್ನು 'ಶಕ್ತಿಯುತವಾದ, ಕ್ರಿಯಾಶೀಲ ಸ್ವಾವಲಂಬಿ ಗುಂಪು' ಎಂದು ಹೇಳಬಹುದು. ಇತಿಹಾಸಕಾರರು ಗುರುತಿಸುವಂತೆ, 'ಗಣ'ದ ಮುಖ್ಯ ಲಕ್ಷಣವೆಂದರೆ ಗಣವ್ಯವಸ್ಥೆಯೊಳಗೆ ನನ್ನದು ಮತ್ತು ನಿನ್ನದು ಎನ್ನುವ ಅರ್ಥಕಲ್ಪನೆಯೇ ಇರಲಿಲ್ಲ. ಇದು ಬರೇ ಕಟ್ಟುಕತೆಯಾಗಿರದೆ ಆ ಕಾಲದ ಸಮಾಜವು ಆಚರಿಸಿಕೊಂಡು ಬಂದಿರುವ ವಾಸ್ತವವೇ ಆಗಿತ್ತು ಎಂಬುದು ಕೌಟಿಲ್ಯನ ಅರ್ಥಶಾಸ್ತ್ರದಿಂದ (ಅಧ್ಯಾಯ ೨೦ ಪ್ರಕರಣ ೧೮ರಲ್ಲಿ) ಸ್ಪಷ್ಟವಾಗುತ್ತದೆ.

'ಗಣ' ಶಬ್ದವು ಸಂಸ್ಕೃತದ 'ಜನ್' ಧಾತುವಿನಿಂದ ಹುಟ್ಟಿದೆ. ಇದರ ಅರ್ಥ 'ಹುಟ್ಟಿಸು' 'ಉತ್ಪಾದಿಸು' ಎನ್ನುವುದು. ಇದಕ್ಕೆ ಲೈಂಗಿಕ ಮತ್ತು ಆರ್ಥಿಕ ಹಿನ್ನೆಲೆಯ ಎರಡು ಅರ್ಥಗಳಿವೆ. ಎಂದರೆ, 'ಗಣ'ದ ಧಾತುವಾದ 'ಜನ್' ಮತ್ತು ಯಜ್ಞದ ಧಾತುವಾದ 'ಜನ್' ಒಂದೇ ಮೂಲದ್ದು. ಒಂದೇ ಧಾತುವಿನಿಂದ ಹುಟ್ಟಿದ ಶಬ್ದವನ್ನು ಆರ್ಯರು ಲೈಂಗಿಕ, ಆರ್ಥಿಕ ಮತ್ತು ಸಾಮಾಜಿಕ ಈ ಮೂರು ಅರ್ಥಗಳ ನೆಲೆಗಳಿಗೆ ಸಮೀಕರಣಗೊಳ್ಳುವಂತೆ ಬಳಸುತ್ತಿದ್ದರು. 'ಯಜ್ಞ' ವ್ಯವಸ್ಥೆಗೆ 'ಗಣ' ಅಥವಾ 'ವಂಶ' ವ್ಯವಸ್ಥೆ ಅನಿವಾರ್ಯವಾಗಿತ್ತು. ಇದರೊಳಗೆ ಗಂಡು ಹೆಣ್ಣುಗಳು ಸಾಮೂಹಿಕವಾಗಿ ಸಂತಾನವನ್ನು ಪಡೆಯುತ್ತಿದ್ದರು ಮತ್ತು ಆಹಾರವನ್ನು ಉತ್ಪಾದಿಸುತ್ತಿದ್ದರು. ಎಂದರೆ 'ಗಣ' ಮತ್ತು ವಂಶವ್ಯವಸ್ಥೆ ಬೇರೆ ಬೇರೆಯಲ್ಲ ಎನ್ನುವುದು ಗಣ ಶಬ್ದದ ಮೂಲಾರ್ಥದಿಂದ ಹೊಳೆಯುತ್ತದೆ. ಈ ಬಗ್ಗೆ ಮೋರ್ಗನ್‌ನ ಕೆಲವು ಅಭಿಪ್ರಾಯಗಳನ್ನು ಏಂಗಲ್ಸ್ 'The origin of the family'ಯಲ್ಲಿ ವಿವರಿಸುವ ಪ್ರಯತ್ನ ನಡೆಸಿದ್ದಾನೆ. ಮೋರ್ಗನ್ ಲೈಂಗಿಕ ವ್ಯವಸ್ಥೆಗೆ ಸಾಮಾನ್ಯವಾಗಿ ಉಪಯೋಗಿಸಿದ 'ಜನ್' (Gen) ಎಂಬ ಲ್ಯಾಟಿನ್ ಶಬ್ದವು ಗ್ರೀಕ್ ಮೂಲದ 'ಜಿನೋಸ್' (Genos) ಎಂಬ ಶಬ್ದದಿಂದ ಬಂದಿದೆ. ಇದರ ಮೂಲವು ಸಂಸ್ಕೃತದ 'ಜನ್' ಎಂದರೆ 'ಸೃಷ್ಟಿಸು' ಎನ್ನುವುದೇ ಆಗಿದೆ. 'ಜನ್' (gen) 'ಜನೋಸ್' (genos) ಸಂಸ್ಕೃತದ ಗಣ (ganas) ಗೋಥಿಕ್‌ನ 'ಕುನಿ' ಪ್ರಾಚೀನ

ನೋರ್ಸ್ (Nores) ಮತ್ತು ಆಂಗ್ಲೋ ಸಕ್ಸನ್‌ರ (Anglo -Saxan) 'ಕಿನ್' (kiyn) ಇಂಗ್ಲೀಷ್‌ನ 'ಕಿನ್' (Kin) ಮಿಡ್ಲ್ ಹೈ ಜರ್ಮನ್ ಭಾಷೆಯ 'ಕಿನ್ನೆ' (Kenne) ಎಂಬ ಈ ಎಲ್ಲವೂ ಒಂದೇ ಮೂಲದಿಂದ ಬಂದಿವೆ. ಇವು ಮುಖ್ಯವಾಗಿ ಲೈಂಗಿಕ ವ್ಯವಸ್ಥೆ ಎಂಬ ಅರ್ಥ ಬರುವ ಒಂದೇ ಮೂಲದಿಂದ ಹುಟ್ಟಿಕೊಂಡವು.

ಹೀಗಾಗಿ 'ಗಣ' ವ್ಯವಸ್ಥೆಯು ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ ಮಾತ್ರವಲ್ಲದೆ ಕೌಟುಂಬಿಕ ವ್ಯವಸ್ಥೆಯೂ ಆಗಿದೆ. ಕುಟುಂಬ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆಗಳು ಬೇರೆ ಬೇರೆಯಾಗಿರಲಿಲ್ಲ ಎನ್ನುವುದನ್ನು ತಾಯಿ,ಮಗಳು, ತಂದೆ, ಗಂಡ, ಹೆಂಡತಿ ಈ ಸಂಬಂಧಗಳಿಗೆ ಬಳಸಿದ ಶಬ್ದಗಳಿಂದ ಕಂಡು ಬರುತ್ತದೆ. ತಾಯಿ (ಮಾತೃ)ಯ ಕೆಲಸವು ಆಹಾರವನ್ನು ಅಳತೆಮಾಡಿ (ಧಾತು 'ಮಾ' ಅಂದರೆ ಅಳತೆ ಮಾಡು) ಹಂಚುವುದು. ಹಾಗೆಯೇ ಸಂತಾನ ಅಭಿವೃದ್ಧಿಯೂ ಅವಳ ಪಾಲಿನ ಕೆಲಸ. ಆಹಾರ ಮತ್ತು ತಾಯಿಯ ಮೂಲಕ, ಆರ್ಯ ಸಮಾಜವು (ಬ್ರಹ್ಮನ್) ತಾನು ಬದುಕುವುದರ ಜೊತೆಗೆ ಬೆಳೆಯುತ್ತಾ ಹೋಗಿದೆ. ತಂದೆಯ (ಪಿ-ಪ-ತೃ) ಕೆಲಸವು ಬೇಟೆಯಾಡುವುದು ಮತ್ತು ತನ್ನ ಕುಟುಂಬವನ್ನು ರಕ್ಷಿಸುವುದು (ಧಾತು 'ಪ' ಅಂದರೆ ರಕ್ಷಿಸು.) ಮಗಳ (ದುಹಿ- ತೃ) ಕೆಲಸವು ಹಾಲು ಕರೆಯುವ (ಧಾತು - ದುಹ್ ಅಂದರೆ ಹಾಲು ಕರೆ) ಕೆಲಸವಾಗಿದೆ. ಇದು ತಾಯಿಯ ಕೆಲಸವಾದ ಆಹಾರ ಸರಬರಾಜಿನ ಮುಖ್ಯ ಅಂಗ. ಪತಿ, ಪತ್ನಿಯರ ಅಥವಾ ಮುಂದಿನ ತಾಯಿ ತಂದೆಯರ ಕೆಲಸವು ಸದಸ್ಯರನ್ನು ಜತೆ ಸೇರಿಸಿ ಕುಟುಂಬ ಕಟ್ಟುವುದಾಗಿದೆ. ಈ ಶಬ್ದದ ಮೂಲವು 'ಸ್ತೈ' (Stayi) ಅಂದರೆ 'ಜತೆ ಸೇರಿಸು' ಎಂದಾಗಿದೆ. ಪಸ್ತ್ರ್ಯ (pastrya) ಸ್ತ್ರೀ (Stree) ಮತ್ತು ಪತ್ನಿ ಎನ್ನುವ ಎಲ್ಲಾ ಶಬ್ದಗಳಿಗೂ ಸಮುದಾಯದಲ್ಲಿ ಸೇರಿದ ಗಂಡು ಮತ್ತು ಹೆಣ್ಣುಗಳು ಎಂದು ಅರ್ಥ. ಆರ್ಯರು ಗಂಡು ಮತ್ತು ಹೆಣ್ಣುಗಳಿಗೆ ಅವರ ಆರ್ಥಿಕ ಸಾಮಾಜಿಕ ಕಸುಬುಗಳ ಆಧಾರದಿಂದ ಬೇರೆ ಹೆಸರಿಡುವುದಕ್ಕಿಂತ ಮೊದಲೇ ಈ ಶಬ್ದಗಳು ಹುಟ್ಟಿಕೊಂಡಿರಬೇಕು. ಆದುದರಿಂದ 'ಗೃಹಪತಿ' ಎನ್ನುವ ಶಬ್ದವು 'ಸ್ವಂತ ಆಸ್ತಿ'ಯು ಅಸ್ತಿತ್ವಕ್ಕೆ ಬರುವುದರ ಮೊದಲು ಗಂಡು ಹೆಣ್ಣು ಎಂಬ ಎರಡೂ ಅರ್ಥವನ್ನು ಸೂಚಿಸುತ್ತದೆ. ಪಾಣಿನಿಯ ಪ್ರಕಾರ 'ಗೃಹಪತಿ' ಎಂದರೆ, ಸ್ತ್ರೀಯೇ ಆಗಿದ್ದಳು.

ಆರ್ಯರ ಸಮಾಜದ ಸಂಘಟನೆಯಲ್ಲಿ ಬಳಕೆಗೊಂಡಿದ್ದ ಮತ್ತೊಂದು ಹೆಸರು ಗೋತ್ರ. 'ಗಣ' ಶಬ್ದವು ಉತ್ಪಾದಿಸುವ ಕ್ರಿಯೆ ಮತ್ತು ಉತ್ಪಾದನಾಕಾರರು ಎಂಬ ಅರ್ಥವನ್ನು ಸೂಚಿಸಿದರೆ, 'ಗೋತ್ರ' ಶಬ್ದವು ಅವರ ಸಂಪತ್ತಿನ ಅಥವಾ ಆಹಾರದ ಮೂಲವಾದ 'ಹಸು' ಎನ್ನುವ (ಸಂಸ್ಕೃತದಲ್ಲಿ ಗೋವು) ಅರ್ಥವನ್ನು ಸೂಚಿಸುತ್ತದೆ. 'ಗೋತ್ರ' ಎನ್ನುವುದು ಕಾಲಾನುಕ್ರಮದಲ್ಲಿ ಲೈಂಗಿಕ ಮತ್ತು ಕೌಟುಂಬಿಕ ಸಂಬಂಧಗಳ ಒಂದು ವ್ಯವಸ್ಥೆಯಾಗಿ ಬೆಳೆದು ಬಂದಿದೆ. ಎಲ್ಲ ಗೋತ್ರಗಳು ಒಂದಾಗಿ ಒಂಭತ್ತು ಮುಖ್ಯ ಪ್ರವರಗಳಾಗಿ ವಿಂಗಡಣೆಗೊಂಡಿವೆ. ವೈದಿಕ ತಜ್ಞರ ಪ್ರಕಾರ ಸಗೋತ್ರದ ಮದುವೆಯ ಬಗೆಗಿರುವ ನಿರ್ಬಂಧವು ವೇದಗಳಲ್ಲಿ ಅಥವಾ ಅದಕ್ಕಿಂತ ಹಿಂದಿನ ಚರಿತ್ರೆಯಲ್ಲಿ ಕಂಡುಬರುವುದಿಲ್ಲ. ಈ ನಿರ್ಬಂಧವು ಬಹಳ ತಡವಾಗಿ ಹುಟ್ಟಿಕೊಂಡವು. ಆದರೆ ವಿದ್ವಾಂಸರಿಗೆ ಈ ನಿರ್ಬಂಧಗಳ ಕಾರಣಗಳನ್ನು ಹೇಳಲಾಗುವುದಿಲ್ಲ. ಈ ಕಾರ್ಯ ನಿಷ್ಪ್ರಯೋಜಕ ಎಂದು ತೀರ್ಮಾನಿಸುವುದರಿಂದ ಗೋತ್ರ ಮತ್ತು ಪ್ರವರಗಳ ಗೊಂದಲಗಳು ವೈದಿಕ ವಿದ್ವಾಂಸರಿಗೆ ಅಪರಿಹಾರ್ಯವಾಗಿದ್ದವು. ಆರ್ಯರ ಸಮಾಜಗಳಲ್ಲಿ ಜೀವ ಮತ್ತು ಜೀವನಾವಶ್ಯಕ ವಸ್ತುಗಳನ್ನು ಉತ್ಪಾದಿಸಲು 'ಗೋತ್ರ'ವೇ ಮೂಲಾಧಾರ ಮತ್ತು ಮಿತಿಯೂ ಕೂಡಾ ಆಗಿತ್ತು. ಆದುದರಿಂದಲೇ

ಸಗೋತ್ರದಿಂದಲೇ ಮದುವೆಯಾಗಬೇಕಿತ್ತು. ಆದಿ ಆರ್ಯರ 'ಯಜ್ಞ' ಸಮುದಾಯಕ್ಕೆ ತನ್ನ ಗೋತ್ರಕ್ಕಿಂತ ಹೊರಗಿನ ಅಥವಾ ತನ್ನ ಅಗ್ನಿಗಿಂತ ದೂರವಾದ ವೈವಾಹಿಕ ಸಂಬಂಧವನ್ನು ಕಲ್ಪಿಸಿಕೊಳ್ಳಲು ಕೂಡ ಸಾಧ್ಯವಿರಲಿಲ್ಲ. ಅತ್ಯಂತ ಅನಾಗರಿಕ ಹಂತದ ಆದಿ ಆರ್ಯರು ತಮ್ಮ ನೂರಾರು ವರ್ಷಗಳ ಅನುಭವದ ಮತ್ತು ಸೂಕ್ಷ್ಮಾವಲೋಕನದ ಮೂಲಕ ಮಾತ್ರ ಸಗೋತ್ರದಲ್ಲಿ ಹುಟ್ಟುವ ಜನಾಂಗದಿಂದ ಗೋತ್ರದ ಬೆಳವಣಿಗೆಗೆ ಮಾರಕ ಎಂಬುದನ್ನು ಅರಿತುಕೊಂಡರು. ಸಗೋತ್ರ ಮದುವೆಯ ಬಗ್ಗೆ ಈಗ ಪ್ರಚಲಿತವಿರುವ ನಿಷೇಧಗಳ ಕಲ್ಪನೆಗಳೆಲ್ಲ ಸಹಸ್ರಾರು ವರ್ಷಗಳ ಚರಿತ್ರೆಯಲ್ಲಿ ಬೆಳೆದು ಬಂದವುಗಳಾಗಿವೆ. ⁹ ಆರ್ಯರು ತಮ್ಮ ಅನಾಗರಿಕ ಹಂತದಲ್ಲಿ 'ಗೋತ್ರ'ಗಳ ಒಳಗೆ ಮದುವೆಯಾಗುತ್ತಿದ್ದರು. ಕ್ರಮೇಣ ಅವರ ಜ್ಞಾನ, ಸಂಖ್ಯಾಬಲ, ಆರ್ಥಿಕತೆ ಬೆಳೆದಂತೆ ಇದನ್ನು ನಿಷೇಧಿಸಿರುವುದು ಕಂಡು ಬರುತ್ತದೆ.

### ೨.೧.೧ ಸಂಘ ಜೀವನದೊಳಗಿನ ವಿವಾಹ ವ್ಯವಸ್ಥೆ :

ಪ್ರಾಚೀನ ಸಮಾಜದ ಲೈಂಗಿಕ ಸಂಬಂಧಗಳು ಆಧುನಿಕ ಸಮಾಜದ ಲೈಂಗಿಕ ಸಂಬಂಧಗಳಿಗಿಂತ ತೀರ ಭಿನ್ನ ಹಾಗೂ ವ್ಯತಿರಿಕ್ತ ಎನ್ನುವುದು ನಿರ್ವಿವಾದ. ವೈದಿಕ ವಿದ್ವಾಂಸರ ಸಾಮಾನ್ಯ ಅಭಿಪ್ರಾಯದಲ್ಲಿ ನಾಲ್ಕು ಯುಗಗಳಲ್ಲಿ ವಂಶಾಭಿವೃದ್ಧಿಗೆ ನಾಲ್ಕು ಭಿನ್ನ ಭಿನ್ನ ರೀತಿಯ ಲೈಂಗಿಕ ಸಂಬಂಧಗಳು ಅಸ್ತಿತ್ವದಲ್ಲಿದ್ದವು. ಇದು ಸಂಪತ್ತಿನ ಉತ್ಪಾದನೆಗೆ ನಾಲ್ಕು ಯುಗಗಳಲ್ಲಿ ಇದ್ದ ಬೇರೆ ಬೇರೆ ರೀತಿಯ ಸಾಮಾಜಿಕ, ಆರ್ಥಿಕ ಸಂಬಂಧಗಳಿಗೆ ಪೂರಕವಾಗಿದೆ ಎನ್ನುವುದು ಗಮನಾರ್ಹ. ಮಹಾಭಾರತದಲ್ಲಿ ಭೀಷ್ಮನು ನಾಲ್ಕು ಯುಗಗಳಲ್ಲಿದ್ದ ಬೇರೆ ಬೇರೆ ರೀತಿಯ ಲೈಂಗಿಕ ಸಂಬಂಧಗಳಿಗೆ ನಾಲ್ಕು ಹೆಸರುಗಳನ್ನು ಹೇಳಿದ್ದಾನೆ. ಅವುಗಳೆಂದರೆ ಸಂಕಲ್ಪ, ಸಂಸ್ಪರ್ಶ, ಮೈಥುನ ಮತ್ತು ದ್ವಂದ್ವ. ಇವು ಕೃತ, ತ್ರೇತ, ದ್ವಾಪರ, ಮತ್ತು ಕಲಿಯುಗಗಳಿಗೆ ಸಂಬಂಧಿಸಿದವುಗಳಾಗಿವೆ. ¹⁰ ಪ್ರಾಚೀನ ಬುಡಕಟ್ಟು ಜನಾಂಗಗಳಲ್ಲಿ ಆಚರಣೆಯಲ್ಲಿದ್ದ ಈಗಲೂ ಕೆಲವೆಡೆ ಪ್ರಚಲಿತವಿರುವ ವಿವಾಹ ಪದ್ಧತಿಗಳ ಅಧ್ಯಯನದ ಮೂಲಕ ಗಂಡು- ಹೆಣ್ಣಿನ ಸಂಬಂಧಗಳ ಈ ನಾಲ್ಕು ಹಂತಗಳನ್ನು ಸುಲಭವಾಗಿ ವಿಶ್ಲೇಷಣೆಗೆ ಗುರಿಪಡಿಸಬಹುದು. 'ಸಂಕಲ್ಪ' ಸಂಬಂಧಗಳೆಂದರೆ ಗಂಡು ಹೆಣ್ಣುಗಳ ಸ್ವೇಚ್ಛಾ ಸಂಪರ್ಕ. ಇದು ಯಾವುದೇ ಸಾಮಾಜಿಕ ನಿರ್ಬಂಧವಿಲ್ಲದೆ ಇಚ್ಛೆಯಿರುವವರು ಒಟ್ಟಿಗೆ ಇರಬಹುದಾದ ಒಂದು ವ್ಯವಸ್ಥೆ. 'ಸಂಸ್ಪರ್ಶ' ಪದ್ಧತಿಯಲ್ಲಿ ತೀರಾ ಹತ್ತಿರದ ರಕ್ತ ಸಂಬಂಧಿಗಳ ಮಧ್ಯೆ ಮದುವೆಯನ್ನು ನಿಷೇಧಿಸಲಾಗಿತ್ತು. 'ಸಗೋತ್ರ'ದಲ್ಲಿ ಮದುವೆ ನಿಷಿದ್ಧವಾಗಿದ್ದು ಅಂತರ್ ಗೋತ್ರಗಳ ಮದುವೆ, ಗುಂಪು ಮದುವೆಗಳು ನಡೆಯುತ್ತಿದ್ದವು. 'ಮೈಥುನ ಪದ್ಧತಿ' ವೈವಾಹಿಕ ಸಂಬಂಧಗಳಲ್ಲಿ ಬಂದ ಕೊನೆಯ ವ್ಯವಸ್ಥೆಯಾಗಿದೆ ಅಂದರೆ 'ಗುಂಪು ಮದುವೆ' ನಂತರದಲ್ಲಿ ಮುಂದುವರೆಯದೆ ನಿಂತುಹೋಗಿದೆ. ಈ ಪದ್ಧತಿಯಲ್ಲಿ ಗಂಡು ಹೆಣ್ಣು ಯಾರ ಗೊಡವೆಯೂ ಇಲ್ಲದೆ ತಮ್ಮ ಇಚ್ಛೆ ಬಂದಷ್ಟು ಸಮಯ ಜತೆಯಾಗಿ ಇರುತ್ತಿದ್ದರು. 'ದ್ವಂದ್ವ'ವು ಕಲಿಯುಗದ ಏಕಪತ್ನಿತ್ವ ವ್ಯವಸ್ಥೆಯಾಗಿದೆ. ಇಲ್ಲಿ ಗಂಡಸು ಹೆಂಗಸಿನ ಯಜಮಾನನಾದ. ಇದಕ್ಕೆ ಆತನಿಗಿದ್ದ ಆಸ್ತಿಯ ಮೇಲಿನ ಹಕ್ಕು ಬೆಂಬಲವಾಗಿ ನಿಂತಿದೆ.

ಏಂಗೆಲ್ಸ್ ಪರಿಭಾವಿಸುವಂತೆ, ಏಕ ಪತ್ನಿತ್ವ ಕುಟುಂಬ ವ್ಯವಸ್ಥೆಯು ಆರ್ಥಿಕ ಸ್ಥಿತಿಯ ಆಧಾರದ ಮೇಲೆ ರೂಪುಗೊಂಡ ಮೊತ್ತ ಮೊದಲ ವ್ಯವಸ್ಥೆಯಾಗಿದೆ. ಈ ಬೆಳವಣಿಗೆಯು ಸ್ವಂತ ಆಸ್ತಿ

ಪದ್ಧತಿಯು ಸಂಪತ್ತಿನ ಸಾಮಾಜಿಕ ಒಡೆತನದ ಸ್ಥಿತಿಯ ಮೇಲೆ ಸ್ಪಷ್ಟವಾಗಿ ವಿಜಯವನ್ನು ಸಾಧಿಸಿದ ಹಂತವಾಗಿದೆ. ಕುಟುಂಬದಲ್ಲಿ ಪುರುಷನೇ ಪ್ರಧಾನ. ಮಕ್ಕಳೆಲ್ಲ ಅವನದ್ದೇ ಆಗಿ ಅವನ ಸಂಪತ್ತಿಗೆ ಉತ್ತರಾಧಿಕಾರಿಗಳಾಗುತ್ತಿದ್ದರು. ಆದರೆ, ಆರ್ಯರ ಸಮಾಜದಲ್ಲಿ ಇಂತಹ ವ್ಯವಸ್ಥೆಗೆ ಯಾವುದೇ ರೀತಿಯ ಮಾನ್ಯತೆಯು ಪ್ರಾಪ್ತವಾಗಿರಲಿಲ್ಲ. ಆಸ್ತಿಗೆ ಯಾವ ರೀತಿಯಿಂದಲಾದರೂ ಉತ್ತರಾಧಿಕಾರಿಯಾಗಿ ಮಗನನ್ನು ಪಡೆಯುವುದು ಮುಖ್ಯ. ಇದರಿಂದಾಗಿ ಅವರಿಗೆ ಸ್ತ್ರೀಯರ ಭಾವನೆಗಳಾಗಲಿ, ಸ್ತ್ರೀಯರ ವ್ಯಕ್ತಿತ್ವದ ಕಲ್ಪನೆಗಳಾಗಲಿ ಮುಖ್ಯವಾಗಿರಲಿಲ್ಲ. ಪತಿಯಿಂದ ಮಕ್ಕಳನ್ನು ಪಡೆಯುವುದು ಸಾಧ್ಯವಾಗದೆ ಹೋದಾಗ ಅವರು ನಿಯೋಗ ಪದ್ಧತಿಯ ಮೂಲಕ ಯಾವ ಆಗಂತುಕನನ್ನಾಗಲಿ, ಬ್ರಾಹ್ಮಣನನ್ನಾಗಲಿ, ಋಷಿಗಳನ್ನಾಗಲಿ ಅಥವಾ ಸಾಮರ್ಥ್ಯವಿರುವ ಯಾರನ್ನೇ ಆಗಲಿ ಕೂಡಿ ಮಕ್ಕಳನ್ನು ಪಡೆಯುತ್ತಿದ್ದರು. ₁ ಆ ಕಾಲದಲ್ಲಿ ಕುಟುಂಬದ ಸ್ತ್ರೀಯರೆಲ್ಲರೂ ಅಕ್ಕ ತಂಗಿಯರಾಗಿದ್ದು ಅವರ ಗಂಡಂದಿರು ಮಾತ್ರ ಬೇರೆ ಬೇರೆ ಗೋತ್ರಗಳಿಂದ ಬಂದವರಾದುದರಿಂದ ಸಹಜವಾಗಿಯೇ ಸ್ತ್ರೀಯರು, ಕುಟುಂಬದ ಆಧಾರ ಸ್ತಂಭಗಳಾಗಿರುತ್ತಿದ್ದರು.

"ಗೋತ್ರ- ಪ್ರವರ ವ್ಯವಸ್ಥೆಗಳು ಆರ್ಯರ ಕುಟುಂಬದ ಚೌಕಟ್ಟನ್ನು ಸ್ಪಷ್ಟಪಡಿಸತೊಡಗಿದವು. ಏಕೆಂದರೆ, ಸಮಾಜವನ್ನು ಹೊಸ ಹೊಸ ಜನರು ಪ್ರವೇಶಿಸತೊಡಗಿದರು. ಈ ಪ್ರವರಗಳು ಅವರ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳನ್ನು ಸುಸೂತ್ರವಾಗಿ ನಡೆಸುವ ಒಂದು ವ್ಯವಸ್ಥೆಯಾಯಿತು. ಇದು ಆ ಕಾಲದ ವರ್ಣವ್ಯವಸ್ಥೆ, ವರ್ಗವ್ಯವಸ್ಥೆ, ರಾಜ್ಯವ್ಯವಸ್ಥೆಗೆ ಅನುಗುಣವಾಗಿಯೇ ಇತ್ತು. ಅಂದರೆ ಹೊಸಬರು ಗಣದೊಳಗೆ ಪ್ರವೇಶಿಸಿದುದರಿಂದ ಗಣದೊಳಗಿನ ಸದಸ್ಯರೆಲ್ಲರೂ ರಕ್ತ ಸಂಬಂಧಿಗಳಾಗಿರಲಿಲ್ಲ. ಆದುದರಿಂದಲೇ ಆಗಂತುಕರಿಗೆ ಮೊದಲೇ ಇದ್ದ ಸದಸ್ಯರಂತೆ ಸಮಾನ ಹಕ್ಕುಗಳನ್ನು ಗಣವು ಕೊಡಲಿಲ್ಲ. ಇದನ್ನೇ ಆರ್ಯ ಬರಹಗಾರರು ಯಜ್ಞ ಮತ್ತು ಯಾಜನದ ಹಕ್ಕು ಎಲ್ಲರಿಗೂ ಇಲ್ಲ ಎಂದಿದ್ದಾರೆ. ಹಿಂದಿನ ರಕ್ತ ಸಂಬಂಧದ ವ್ಯವಸ್ಥೆಗಿಂತ ಭಿನ್ನವಾದ ಒಂದು ಹೊಸ ಸಮಾಜ ವ್ಯವಸ್ಥೆಯು ಬರತೊಡಗಿತ್ತು. ಇದು ರಕ್ತ ಸಂಬಂಧ ವ್ಯವಸ್ಥೆಗಿಂತ ಭಿನ್ನವಾದ ಒಂದು ಹೊಸ ಪ್ರದೇಶಕ್ಕೆ ಬದ್ಧವಾದ ಅಥವಾ ರಾಜ್ಯಕ್ಕೋ ರಾಷ್ಟ್ರಕ್ಕೋ ಸೀಮಿತವಾದ ಒಂದು ಹೊಸ ಸಮಾಜ ವ್ಯವಸ್ಥೆಯಾಗಿತ್ತು. ಆರ್ಥಿಕ ಸಂಬಂಧಗಳಿಗೂ ರಕ್ತ ಸಂಬಂಧಗಳಿಗೂ ಇದರಲ್ಲಿ ಏನೂ ಸಂಬಂಧ ಉಳಿದಿರಲಿಲ್ಲ. ಶೂದ್ರರಿಗೆ ಮತ್ತು ಆಗಂತುಕರಿಗೆ ನಿರ್ದಿಷ್ಟ ಗೋತ್ರ ಪ್ರವರಗಳಲ್ಲಿ ಸ್ಥಾನಮಾನವಿಲ್ಲದಿದ್ದರೂ ರಾಜ್ಯದಲ್ಲಿ ಸ್ಥಳ ಕಲ್ಪಿಸಲಾಯಿತು.

ಆರ್ಯರ ಈ ಪ್ರವರ ವ್ಯವಸ್ಥೆಯು ಭಾರತೀಯ ವಿದ್ವಾಂಸರಿಗೆ ದೊಡ್ಡ ತಲೆನೋವಾಗಿದೆ. ಗ್ರೀಕರಲ್ಲಿದ್ದ ಇಂತಹುದೇ ವ್ಯವಸ್ಥೆಯನ್ನು ನೋಡಿದ ಯುರೋಪಿಯನ್ನರಿಗೂ ಹೀಗೇ ಆಗಿತ್ತು. ಪ್ರವರಗಳು ಇತ್ತೀಚಿನವರೆಗೂ ತಮ್ಮ ಒಂದೇ ಮೂಲವನ್ನು ಪ್ರತಿಪಾದಿಸುತ್ತಾ ಬಂದಿವೆ. ಆದರೆ ತಜ್ಞರು ಗಣ ಪದ್ಧತಿಯಲ್ಲಿದ್ದ ಗುಂಪು ಮದುವೆಗಳು ವಂಶದ ಮೂಲ ಎಂಬುದನ್ನು ಒಪ್ಪುವುದಿಲ್ಲ. ಇದರಿಂದಾಗಿ ಗೋತ್ರ ಪ್ರವರಗಳು ಅರ್ಥವಿಲ್ಲದ ಕಟ್ಟುಕಥೆಗಳೆಂದು ಅವರು ತಿಸ್ಕರಿಸಿದ್ದಾರೆ." ₂

ತಂದೆಯ ಹಕ್ಕು, ಸ್ವಂತ ಆಸ್ತಿ ಮತ್ತು ಆಸ್ತಿಯ ಅನುವಂಶಿಕ ಹಕ್ಕಿನ ನಿರ್ಧಾರಕ್ಕೆ ಏಕಪತ್ನಿ ವ್ಯವಸ್ಥೆಯು ಅತ್ಯಗತ್ಯವಾಗಿದೆ. ಇಲ್ಲದಿದ್ದರೆ ತಂದೆಯ ಉತ್ತರಾಧಿಕಾರಿಯನ್ನು ಗುರುತು ಹಿಡಿಯುವುದು ಕಷ್ಟಕರ. ಆಸ್ತಿಯ ಉತ್ತರಾಧಿಕಾರಿಯನ್ನು ಗುರುತಿಸುವಲ್ಲಿ ಏಕಪತ್ನಿತ್ವ, ಹೆಣ್ಣಿನ ಪಾವಿತ್ರ್ಯ ಮತ್ತು ವಿಧೇಯತೆಯನ್ನು ಮಹತ್ವವೆಂದು ಪರಿಗಣಿಸಿದ್ದವು ಎನ್ನುವುದು ಸ್ಪಷ್ಟ. ಹೀಗಿದ್ದರೂ, ಇತಿಹಾಸದ ವಿವರಗಳನ್ನು ಪರಿಶೀಲಿಸಿದಾಗ ಈ ಪದ್ಧತಿ ಹೆಣ್ಣಿನ ಇಚ್ಛೆಗನುಸಾರವಾಗಿಯೇ ಬಂದಿದೆ ಎನ್ನುವುದು ವ್ಯಕ್ತವಾಗುತ್ತದೆ. ಪುರುಷರು ಎಲ್ಲ ಕಾಲಗಳಲ್ಲೂ ಗುಂಪು ಮದುವೆಯ ಸೌಲಭ್ಯವನ್ನು ಬಯಸುತ್ತಿದ್ದರು. ಇದು ಈಗಲೂ ಉಳಿದುಕೊಂಡುಬಂದಿರುವ ದೇವದಾಸಿ, ಬಸವಿ, ವ್ಯಭಿಚಾರ ಮೊದಲಾದ ಪುರುಷ ಪೂರಕ- ಸಾಮಾಜಿಕ ಅಭ್ಯಾಸಗಳಿಂದ ಸ್ಪಷ್ಟವಾಗುತ್ತದೆ. ಗಣ-ಗೋತ್ರಗಳು ಬೆಳೆದು, ಚದರಿ ಹೋದಂತೆ ಮತ್ತು ಹೊಸ ರೀತಿಯ ಸಂಬಂಧಗಳು ಸಣ್ಣ ಸಣ್ಣ ಕುಟುಂಬಗಳಾಗಿ ಬೆಳವಣಿಗೆ ಸಾಧಿಸಿದಂತೆಲ್ಲಾ ಪೂರ್ವದ ಗಣ ಪದ್ಧತಿಯಲ್ಲಿದ್ದ ಇತರ ಗೋತ್ರಗಳ ಸ್ತ್ರೀಯರ ಮೇಲಿನ ಪುರುಷರ ಅಧಿಕಾರ ಸ್ತ್ರೀಯರಿಗೆ ಅಸಹ್ಯವಾಗ ತೊಡಗಿದವು. ಗಣಗಳು ಸಣ್ಣ ಸಣ್ಣ ಘಟಕಗಳಾಗಿದ್ದಾಗ ಅದರಲ್ಲಿದ್ದ ಎಲ್ಲ ಸದಸ್ಯರೂ ಪರಸ್ಪರ ಗೊತ್ತಿರುವ ಆತ್ಮೀಯ ವ್ಯಕ್ತಿಗಳಾಗಿರುತ್ತಿದ್ದರು. ಆದರೆ, ಎಲ್ಲಿಂದಲೋ ಬಂದ ಅಪರಿಚಿತ ಪುರುಷರೆಲ್ಲ ಅಧಿಕಾರ ಚಲಾಯಿಸುವುದು ಸ್ತ್ರೀಯರಿಗೆ ಪೀಡನೆಯಾಗ ತೊಡಗಿದವು. ಗುಂಪು ಮದುವೆಗಳು ಚಾಲ್ತಿಯಲ್ಲಿದ್ದ ಪ್ರಾಚೀನ ಕಾಲದಲ್ಲಿ ಮನೆಗೆ ಬಂದ ಅತಿಥಿಗೆ ಹೆಂಡತಿಯನ್ನು ಬಿಡುವ ಪದ್ಧತಿ ಜಾರಿಯಲ್ಲಿತ್ತು. 'ಬಾರ್ಯದಾನ' ದಾನಗಳಲ್ಲೆಲ್ಲಾ ಶ್ರೇಷ್ಠವಾಗಿತ್ತು. ೬ ಅಪರಿಚಿತನಿಗಿರುವ ಅಸಹ್ಯವಾದ ಅಧಿಕಾರದಿಂದ ಬಿಡುಗಡೆ ಪಡೆಯಲು ಸ್ತ್ರೀಯರು ಏಕಪತ್ನಿತ್ವವನ್ನು ಒತ್ತಾಯಿಸಿರುವ ಪರಿಸ್ಥಿತಿ ವ್ಯಕ್ತವಾಗುತ್ತದೆ. ಚಾರಿತ್ರಿಕವಾಗಿ ಗಮನಿಸಿದರೆ, ಇದು ಆಗ ಬೆಳೆದು ಬರುತ್ತಿದ್ದ ಆಸ್ತಿ ಸಂಬಂಧಗಳಿಗೆ ಮಾರಕವಾಗಿಯೆ ಇತ್ತು. ಏಕಪತ್ನಿತ್ವವನ್ನು ಒತ್ತಾಯಿಸಿದ ಸ್ತ್ರೀ ಆಗಂತುಕನ ಅಸಹ್ಯವಾದ ಅಧಿಕಾರದಿಂದ ಬಿಡುಗಡೆ ಹೊಂದಿದ್ದಳು ಎಂಬುದು ನಿಜವಾದರೂ, ಮತ್ತೊಂದು ದೃಷ್ಟಿಯಿಂದ ಸ್ತ್ರೀ ಸಮಾಜದಲ್ಲಿ ಗುಲಾಮಗಿರಿಗೆ ಬಂಧಿತಗೊಂಡಳು. ಏಕಪತ್ನಿತ್ವದ ನೆಲೆಯಿಂದ ಕಂಡು ಬಂದ ಆರ್ಥಿಕ ಸೋಲು ಆಕೆಯನ್ನು ದೈಹಿಕವಾಗಿ ಮತ್ತು ನೈತಿಕವಾಗಿ ಗಂಡಸಿಗೆ ಮತ್ತು ಆಸ್ತಿಗೆ ಬಲಿಯಾಗುವಂತೆ ಮಾಡಿತು.

> "ತಾಯಿಯ ಹಕ್ಕಿನ ಉಚ್ಚಾಟನೆ ಮಹಿಳಾ ಜಗತ್ತಿನ ಚಾರಿತ್ರಿಕ ಸೋಲಾಯಿತು. ಮನೆಯ ಆಡಳಿತ ಸೂತ್ರವನ್ನು ಗಂಡಸೇ ಸ್ವಾದೀನ ಪಡಿಸಿಕೊಂಡ. ಹೆಂಗಸು ಗುಲಾಮಳಾಗಿ, ಗಂಡಸಿನ ಭೋಗದ ವಸ್ತು ಮಾತ್ರವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ಪರಿವರ್ತನೆಗೊಂಡಳು." ೭

ಎನ್ನುವ ವಿಚಾರ ಇಲ್ಲಿ ಮುಖ್ಯವಾಗುತ್ತದೆ. ಆಸ್ತಿಯ ಹಕ್ಕಿನ ಬಗ್ಗೆ ನಿರ್ದಿಷ್ಟ ನೀತಿ ನಿಯಮಗಳನ್ನು ರೂಪಿಸಿದ ಸ್ಮೃತಿಕಾರರು ಹೆಂಗಸರ ಭಾವನೆಗಾಗಲಿ, ವ್ಯಕ್ತಿತ್ವಗಳಿಗಾಗಲಿ ಯಾವುದೇ ರೀತಿಯ ಮನ್ನಣೆಯನ್ನು ನೀಡಿರಲಿಲ್ಲ. ಅವರಿಗೆ ಸ್ತ್ರೀಯರಲ್ಲಿ ಹುಟ್ಟುವ ಮಕ್ಕಳು ಮಾತ್ರ ಮುಖ್ಯರಾಗಿದ್ದರು. ಮಗನ ಹಕ್ಕುಗಳ ಬಗ್ಗೆ ಮಹಾಭಾರತದ ಅನುಶಾಸನ ಪರ್ವದಲ್ಲಿ ಒಂದು ಚರ್ಚೆಯ ಪ್ರಸಂಗವಿದೆ. ಅದರಲ್ಲಿ ಯುಧಿಷ್ಠಿರನು ಒಂದು ಮಹತ್ವದ ಪ್ರಶ್ನೆಯನ್ನು ಮುಂದಿಡುತ್ತಾನೆ. ಕೆಲವರು ತಾಯಿಯ ಮಕ್ಕಳನ್ನೇ ನಿಜವಾದ ಮಕ್ಕಳೆಂದೂ, ಇನ್ನು ಕೆಲವರು ತಂದೆಯ ಮಕ್ಕಳು ಮಾತ್ರ ನಿಜವಾದ ಮಕ್ಕಳೆಂದೂ, ಹೇಳುತ್ತಾರೆ. ಈ ಎರಡೂ ರೀತಿಯ ಮಕ್ಕಳೂ

ಸಮಾನರೆ? ನಿಜವಾಗಿ ಮಕ್ಕಳು ಯಾರಿಗೆ ಸೇರಬೇಕಾದವರು. (ಮಹಾಭಾರತ : ಅನುಶಾಸನ ಪರ್ವ ಶ್ಲೋಕ ೧೨೬)

ಭೂಮಿಯಲ್ಲಿ ಹುಟ್ಟಿದ ಫಲ ಅದನ್ನು ಬೆಳೆಸಿದ ಕೃಷಿಕನಿಗೆ ಸೇರತಕ್ಕದ್ದೋ ಅಥವಾ ಆ ಭೂಮಿಯ ಯಜಮಾನನಿಗೆ ಸೇರತಕ್ಕದ್ದೋ ಎಂಬಂತೆ, ಧರ್ಮರಾಯನ ಪ್ರಶ್ನೆಯನ್ನು ವಿಶ್ಲೇಷಿಸಬೇಕಾಗುತ್ತದೆ. ಹೆಂಗಸಿನ ಬಗ್ಗೆ ಈ ರೀತಿಯ ಕಲ್ಪನೆ ಯಜ್ಞ- ಗಣ ಪದ್ಧತಿಯಲ್ಲಿ ಇರಲಿಲ್ಲ. ಅಲ್ಲಿ ಸಂತಾನದ ಬಗ್ಗೆ ಅಪರಿಮಿತ ಅಭಿಲಾಷೆ ಇದ್ದರೂ ವೇದಗಳಲ್ಲಿ ತಾಯಿಯನ್ನು ಸ್ಪಷ್ಟವಾಗಿ 'ಜನನಿ' ಎಂದು ಕರೆಯಲಾಗಿದೆ. 'ಜನಿ' ಎಂದರೆ, ಸಂತಾನೋತ್ಪಾದಕಗಳು. ಎಂದರೆ, 'ಜನಿ'ಯಲ್ಲಿ ಹುಟ್ಟಿದ ಸಂತಾನವೆಲ್ಲ 'ಜನ' ಎಂದಾಗಿದೆ. ಅವಳಿಗೆ ಹುಟ್ಟಿದ ಸಂತಾನ ಅವಳದ್ದೇ ಆಗಿದೆ. ವೇದಕಾಲಗಳಲ್ಲಿ ಮಕ್ಕಳು ಕ್ಷೇತ್ರಕ್ಕೆ ಸೇರಿದವರೋ ಅಥವಾ ಬೀಜಕ್ಕೆ ಸೇರಿದವರೋ ಎನ್ನುವ ಪ್ರಶ್ನೆಗಳೇ ಹುಟ್ಟಲು ಸಾಧ್ಯವಿರಲಿಲ್ಲ. ಏಕೆಂದರೆ, ಆಗ ಮಕ್ಕಳು ಮಾತ್ರ ಹಕ್ಕನ್ನು ಸ್ಥಾಪಿಸಬಹುದಾದ 'ಸ್ವಂತ ಆಸ್ತಿ ಪದ್ಧತಿ' ರೂಪಿತಗೊಂಡಿರಲಿಲ್ಲ. ಪಿತೃ ಪ್ರಧಾನ ಆಡಳಿತ ಆಗ ಇನ್ನೂ ಹುಟ್ಟನ್ನು ಪಡೆದಿರಲಿಲ್ಲ. ಇಲ್ಲಿ ಹೆಂಗಸನ್ನು ಹೆರುವ ಯಂತ್ರವನ್ನಾಗಿ ರೂಪಿಸಿದ ನಿಯಮಗಳು ಗುಲಾಮಗಿರಿ ಯುಗದ್ದಾಗಿದೆ ಎನ್ನುವುದು ಮುಖ್ಯ ವಿಚಾರವಾಗಿದೆ. ಇದರಲ್ಲಿ ಗುಲಾಮರನ್ನು ವಿನಿಮಯ ಮಾಡಿಕೊಂಡು ಸಂಪತ್ತನ್ನು ಹೆಚ್ಚಿಸಿಕೊಳ್ಳುವಂತೆ, ಹೆಂಗಸರನ್ನು ಬಳಸುವುದರಲ್ಲಿ ಪ್ರಕಟವಾಗುತ್ತದೆ. ಯುಧಿಷ್ಠಿರನ ಪ್ರಶ್ನೆಗೆ ಯಾರ ಬೀಜದಿಂದ ಹುಟ್ಟಿದ್ದಾನೋ ಅವನಿಗೇ ಆ ಮಗನು ಸೇರುತ್ತಾನೆ ಎನ್ನುವ ಉತ್ತರವಿದೆ (ಶ್ಲೋಕ ೧೨೭). ಹೆಂಗಸನ್ನು ತನ್ನ ಆಸ್ತಿಗೆ ಉತ್ತರಾಧಿಕಾರಿಯನ್ನು ಪಡೆಯಲು ಒಂದು ಯಂತ್ರವಾಗಿ ಪರಿಗಣಿಸುವುದು ಇಲ್ಲಿ ವ್ಯಕ್ತವಾಗುತ್ತದೆ. ಅಂದರೆ 'ಪಿತೃನಿಷ್ಠ' ಸಂಸ್ಕೃತಿಯನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಒಂದು ವೇಳೆ ನಿಜವಾದ ತಂದೆಯು ಆತನ ಮಗನನ್ನು ತಿರಸ್ಕರಿಸಿದರೆ ಆಗ ಮಗನು ತನ್ನ ತಾಯಿಯ ಗಂಡನ ಮಗನೇ ಆಗುತ್ತಾನೆ. •೧೦ ಗುಂಪು ಮದುವೆ ಮತ್ತು ಒಬ್ಬನಿಗೊಬ್ಬಳು ವ್ಯವಸ್ಥೆಯಲ್ಲಿ ಮಕ್ಕಳು ಅವರ ತಾಯಿಗೆ ಸಂಬಂಧಿಸಿದ್ದರು. ತಂದೆ, ತಾಯಿಯನ್ನು ಬಿಟ್ಟಾಗ ಮಕ್ಕಳು ಸಹಜವಾಗಿ ತಾಯಿಯಲ್ಲಿ ಉಳಿಯುತ್ತಿದ್ದರು. ಮಹಾಭಾರತದ ಪಾಂಡವರ ಸಂದರ್ಭಗಳಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಗುಲಾಮಗಿರಿಯಲ್ಲಿ ಹೆಂಗಸರನ್ನು ಕೊಂಡುಕೊಳ್ಳುವುದು, ಮಾರುವುದು ಅಥವಾ ಬಾಡಿಗೆಗೆ ಕೊಡುವುದು ಬಳಕೆಯಲ್ಲಿತ್ತು. ಸ್ವಂತ ಹೆಂಡತಿಯಲ್ಲಿ ಹುಟ್ಟಿದ ಮಕ್ಕಳು ಆಸ್ತಿಯ ಉತ್ತರಾಧಿಕಾರಿಗಳೂ, ಗುಲಾಮ ಹೆಂಗಸರಲ್ಲಿ ಹುಟ್ಟಿದ ಮಕ್ಕಳು ಸಂಪತ್ತನ್ನು ಹೆಚ್ಚಿಸುವ ಕೆಲಸಗಾರರಾಗುವುದು ಕಂಡು ಬರುತ್ತದೆ. ಹೆಂಡತಿಯನ್ನು ಮಾತ್ರವಲ್ಲದೆ, ಹೆಣ್ಣು ಮಕ್ಕಳನ್ನೂ ಸಹ ಇದೇ ದೃಷ್ಟಿಯಿಂದ ನೋಡಲಾಗಿದೆ. ಮಹಾಭಾರತದ ಉದ್ಯೋಗ ಪರ್ವದಲ್ಲಿ ಬರುವ ಋಷಿಯಾದ ಗಾಲವನ ಕಥೆಯಲ್ಲಿ ಹೆಣ್ಣು ಮಕ್ಕಳನ್ನು ಹೇಗೆ ಬಾಡಿಗೆಯ ಮೇಲೆ ಕೊಡುತ್ತಿದ್ದರು ಎನ್ನುವುದನ್ನು ವಿವರಿಸಿದೆ. ಇಲ್ಲಿ ಗಾಲವನು ಗುರುಗಳಿಗೆ ಗುರುದಕ್ಷಿಣೆ ಕೊಡಲು ತನ್ನಲ್ಲಿ ಹಣವಿಲ್ಲದೆ ಯಯಾತಿಯನ್ನು ಯಾಚಿಸುತ್ತಾನೆ. ಯಯಾತಿಯು ಆತನ ಮಗಳಾದ ಮಾಧವಿಯನ್ನು ಆತನಿಗೆ ಸಾಲವಾಗಿ ಕೊಡುತ್ತಾನೆ. ಗಾಲವನು ಮಾಧವಿಯನ್ನು ಕ್ರಮವಾಗಿ ಮೂರು ಜನ ರಾಜರಲ್ಲಿ ಒತ್ತೆಯಿಟ್ಟು ಅವರಿಂದ ತಲಾ ೨೦೦ ಕುದುರೆಗಳನ್ನು ಪ್ರತಿಫಲವಾಗಿ ಪಡೆಯುತ್ತಾನೆ. ಪ್ರತಿಯೊಬ್ಬರೂ ಅವಳನ್ನು ಅನುಭವಿಸಿ ಒಂದೊಂದು ಮಗು ಪಡೆದು ಪುನಃ ಗಾಲವನಿಗೆ ಒಪ್ಪಿಸುತ್ತಾರೆ. ಗಾಲವನು ಅವಳನ್ನು,

ಕುದುರೆಗಳನ್ನು ಮತ್ತು ಒಟ್ಟಾದ ಎಲ್ಲಾ ಸಂಪತ್ತನ್ನು ಗುರುಕಾಣಿಕೆಯಾಗಿ ಕೊಟ್ಟು ಅವನ ಬಾಕಿ ತೀರಿಸುತ್ತಾನೆ. ಗುರು ವಿಶ್ವಾಮಿತ್ರರು ಕೂಡ ಅವಳಲ್ಲಿ ಒಂದು ಮಗುವನ್ನು ಪಡೆದು ಮರಳಿ ಗಾಲವನಿಗೆ ಹಿಂದಿರುಗಿಸುತ್ತಾನೆ. ಕೊನೆಗೆ ಗಾಲವನು ಮಾಧವಿಯನ್ನು ಯಾಯತಿಗೆ ಒಪ್ಪಿಸುತ್ತಾನೆ. ಇಷ್ಟು ಸಮಯದ ಗುಲಾಮಗಿರಿಯ ನಂತರದಲ್ಲಿ ತಂದೆಯು ಸ್ವಯಂವರ ಪದ್ಧತಿಯಿಂದ ಅವಳ ಮದುವೆ ಮಾಡಲು ಯೋಚಿಸುತ್ತಾನೆ. ಇದಕ್ಕೆ ರಾಜರು, ಶ್ರೀಮಂತರು, ಯುವಕರು ಬರುತ್ತಾರೆ. ಆದರೆ ಈ ಕಾಲಕ್ಕಾಗಲೇ ಮಾಧವಿಯು ಜೀವನದ ಬಗ್ಗೆ, ಗಂಡಸಿನ ಗುಲಾಮಳಾಗಿರುವ ಬಗ್ಗೆ ಸಾಕಷ್ಟು ಜುಗುಪ್ಸೆಯನ್ನು ಹೊಂದಿದವಳಾಗಿ, ಸ್ವಯಂವರಕ್ಕೆ ಬಂದ ಎಲ್ಲರನ್ನೂ ತಿರಸ್ಕರಿಸಿ ಕಾಡಿಗೆ ಹೋಗುತ್ತಾಳೆ. ಅಲ್ಲಿ ಅವಳು ಪುರುಷ ಸಮಾಜದ ದುಷ್ಟ ಹಿಡಿತದಿಂದ ಪಾರಾಗಲು ದೇವರನ್ನು ಪ್ರಾರ್ಥಿಸುತ್ತಾಳೆ (ಮಹಾಭಾರತ : ಉದ್ಯೋಗ ಪರ್ವ- ೧೨೦).

ಪಿತೃವಿನ ಅಧಿಕಾರ ವ್ಯಾಪ್ತಿ ಪತ್ನಿಯನ್ನು, ಮಗಳನ್ನು ಮತ್ತು ಮಕ್ಕಳನ್ನು ಒತ್ತೆ ಇಡುವುದಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಬದಲಾಗಿ ಅವರ ಜೀವನದ ಮೇಲೂ ಪರಿಪೂರ್ಣವಾದ ಅಧಿಕಾರ ಸ್ಥಾಪಿಸುತ್ತದೆ. ಇಚ್ಛೆ ಬಂದಾಗ ಅವರನ್ನು ಮಾರುವಂತೆ ಕೊಲ್ಲುವ ಅಧಿಕಾರವೂ ಪುರುಷನಿಗಿತ್ತು. ಗೋತ್ರ ಪದ್ಧತಿಯಲ್ಲಿ ಸ್ತ್ರೀಯರು ಅನುಭವಿಸುತ್ತಿದ್ದ ಸ್ವಾತಂತ್ರ್ಯಕ್ಕೂ ಗುಲಾಮಗಿರಿಯ ಪದ್ಧತಿಯ ಸ್ತ್ರೀಯರ ಬದುಕಿಗೂ ಅಜಗಜಾಂತರ ವ್ಯತ್ಯಾಸವಿದೆ. ಗುಲಾಮಗಿರಿಯ ನೀತಿನಿಯಮಗಳನ್ನು ಒಳಗೊಂಡ ಪಿತೃಸತ್ತೆಯ ವ್ಯವಸ್ಥೆಯ ಒಳಗೆ ಹೆಂಡತಿ, ಮಕ್ಕಳು, ಗುಲಾಮರನ್ನು ಆಸ್ತಿಯೆಂಬಂತೆ ಪರಿಗಣಿಸುವುದರ ಮೂಲಕವಾಗಿ ಪುರುಷ ಅವರ ಮೇಲೆ ಸರ್ವಸ್ವಾಮ್ಯವನ್ನು ಸಾಧಿಸುವುದು ಕಂಡು ಬರುತ್ತದೆ. ಇಲ್ಲಿ ಸ್ತ್ರೀಯರು ಹಳೆಯ ಸ್ಥಾನಮಾನಗಳಿಗಾಗಿ ಸಾಕಷ್ಟು ಹೋರಾಟ ನಡೆಸಿದ್ದಾರೆ ಎಂಬುದು ಗಮನಾರ್ಹ ವಿಚಾರ. ಹಾಗಾಗಿಯೇ ಗುಲಾಮಗಿರಿ ಪಿತೃವ್ಯವಸ್ಥೆಯ ಒಳಗೆ ಕೂಡ ಕೆಲವು ಹಳೆಯ ಪದ್ಧತಿಗಳು ಉಳಿದು ಬಂದವು. ಆದರೆ ಸ್ತ್ರೀಯರ ಹೋರಾಟವನ್ನು ಗುಲಾಮರ ಯಜಮಾನನಾದ ಪುರುಷ ಸಾಕಷ್ಟು ಕ್ರೂರವಾಗಿಯೇ ಹತ್ತಿಕ್ಕಿರುವುದು ವ್ಯಕ್ತವಾಗುತ್ತದೆ. ಇದನ್ನು ಸ್ಪಷ್ಟಪಡಿಸಿಕೊಳ್ಳುವ ಸಲುವಾಗಿ ಮಹಾಭಾರತದಲ್ಲಿ ಬರುವ ಮೂರು ಪ್ರಮುಖ ಪ್ರಸಂಗಗಳನ್ನು ಇಲ್ಲಿ ಗಮನಿಸುವುದು ಅನಿವಾರ್ಯವಾಗುತ್ತದೆ. ಅವುಗಳೆಂದರೆ, ೧) ಸುದರ್ಶನ- ಓಘವತಿ, ೨)ಗೌತಮ- ಗೌತಮಿ ಮತ್ತು ೩) ಜಮದಗ್ನಿ- ರೇಣುಕೆಯರ ವೈವಾಹಿಕ ಸ್ವರೂಪಗಳು. ಇವು ಗೋತ್ರ ಪದ್ಧತಿಯಲ್ಲಿದ್ದ ನೀತಿ ನಿಯಮಗಳು ಪಿತೃನಿಷ್ಠ ಗುಲಾಮ ಪದ್ಧತಿಗೆ ಬಂದಾಗ ಹೇಗೆ ಬದಲಾದವು ಎಂಬುದನ್ನು ಅವುಗಳ ವಿವರಣೆಯ ಒಡಲೊಳಗೆ ಅನಾವರಣಗೊಳಿಸುತ್ತವೆ.

೧) ಒಮ್ಮೆ ಸುದರ್ಶನ ಋಷಿ ಆತನ ಹೆಂಡತಿಯನ್ನು ಆಶ್ರಮದಲ್ಲೇ ಬಿಟ್ಟು ಹೋದಾಗ ಓರ್ವ ಬ್ರಾಹ್ಮಣ ಆಗಂತುಕ ಆಶ್ರಮಕ್ಕೆ ಬರುತ್ತಾನೆ. ಅವನಿಗೆ ಊಟೋಪಚಾರಗಳನ್ನು ಮಾಡಿದುದಲ್ಲದೆ ಗಣ ಗೋತ್ರ ಪದ್ಧತಿಯ ಪ್ರಕಾರ ಅವನ ಇಚ್ಛೆಯಂತೆ ಓಘವತಿಯು ಬ್ರಾಹ್ಮಣನ ಜತೆ ಮಲಗಿ ರಾತ್ರಿ ಕಳೆಯುತ್ತಾಳೆ. ಸುದರ್ಶನ ಮುನಿಯು ಹಿಂದಿರುಗಿ ಬಂದು ಈ ಬಗ್ಗೆ ತಿಳಿದು ಆತನ ಹೆಂಡತಿಯು ಸರಿಯಾದ ಗೃಹಿಣಿ ಧರ್ಮವನ್ನು ಪಾಲಿಸಿದಳು ಎನ್ನುವುದಕ್ಕಾಗಿ ಸಂತೋಷಗೊಳ್ಳುತ್ತಾನೆ. ಈ ಘಟನೆ, ಗಣಗಳು ಒಡೆದು ಬೇರೆ ಬೇರೆ ಕಡೆ ಸ್ವತಂತ್ರ ಕುಟುಂಬಗಳಾಗಿ ನೆಲೆಯೂರಿದ ಸಮಯಕ್ಕೆ ಸಂಬಂಧ ಪಟ್ಟದ್ದು ಎಂಬುದು ಆ ಕಾಲದ ಮನೋಧರ್ಮದ ಹಿನ್ನೆಲೆಯಲ್ಲಿ ವ್ಯಕ್ತವಾಗುವ ವಿಚಾರವಾಗಿದೆ. ಪೂರ್ವದ 'ಗುಂಪು ಮದುವೆ'ಯನ್ನು

ವಿರೋಧಿಸಿ ಸ್ತ್ರೀ ಒಂದೇ ಪುರುಷನ ಜೊತೆಗೆ ಬದುಕುವ ನಿರ್ಧಾರ ಮಾಡಿದ್ದು ಸಾಮಾನ್ಯವಾಗಿ ಇದೇ ಕಾಲದಲ್ಲಿ. ಈ ಸಂಕ್ರಮಣ ಸ್ಥಿತಿಯ ತಲ್ಲಣಗಳು ಸುದರ್ಶನನ ಮೂಲಕ ಅಭಿವ್ಯಕ್ತವಾಗಿವೆ. ಆತನ ಹೆಂಡತಿ ಅತಿಥಿಯ ಜತೆ ಮಲಗದೆ ಎಲ್ಲಿ ಅತಿಥೇಯಳ ಧರ್ಮವನ್ನು ಮುರಿಯುತ್ತಾಳೋ ಎಂದು ಸುದರ್ಶನನು ಭೀತನಾಗುತ್ತಾನೆ. ಅಲ್ಲದೆ, ಆತನ ಹೆಂಡತಿ ಹಿಂದಿನ ಕಾಲದ ಗುಣಧರ್ಮಗಳಿಗನುಗುಣವಾಗಿ ಅತಿಥಿಯನ್ನು ಸಂತೋಷಗೊಳಿಸಿದುದಕ್ಕಾಗಿ ಸಮಾಧಾನ ಹೊಂದುತ್ತಾನೆ.

೨) ಗೌತಮ - ಗೌತಮಿಯರ ಸಂದರ್ಭದಲ್ಲಿ ಇದೇ ಸನ್ನಿವೇಶ ಎದುರಾದಾಗ ಕಾಲ ಸಾಕಷ್ಟು ಮಾರ್ಪಟ್ಟಿದೆ. ಗೌತಮನ ಹೆಂಡತಿ ಗಂಡನಿಲ್ಲದ ವೇಳೆಯಲ್ಲಿ ಅತಿಥಿಯಾದ ಇಂದ್ರನನ್ನು ಕೂಡುತ್ತಾಳೆ. ಇದನ್ನು ತಿಳಿದ ಗೌತಮ ಸಿಟ್ಟಾಗಿ ಮಗ ಚಿರಕಾರಿಯನ್ನು ಕರೆದು ತಾಯಿಯನ್ನು ಕೊಲ್ಲಲು ಹೇಳಿ ಹೋಗುತ್ತಾನೆ. ಚಿರಕಾರಿಗೆ ದೊಡ್ಡ ಧರ್ಮ ಸಂಕಟ ಎದುರಾಗುತ್ತದೆ. ಹಳೆಪದ್ಧತಿಯ ಪ್ರಕಾರ ಆತನ ತಾಯಿಯ ವರ್ತನೆ ಅಪರಾಧವಲ್ಲ. ೧೧ ಆದ್ದರಿಂದ ಅವಳನ್ನು ಕೊಲ್ಲುವುದು ಮಹಾಪರಾಧವಾಗುತ್ತದೆ. ಆದರೆ ಹೊಸ ಕಾಲದ ಹೊಸ ವರ್ಗ ಸಂಬಂಧಗಳ ಮತ್ತು ಕುಟುಂಬ ವ್ಯವಸ್ಥೆಯ ಕಾನೂನುಗಳ ಪ್ರಕಾರ ತಂದೆಯ ಆಜ್ಞೆಯನ್ನು ಪಾಲಿಸಬೇಕಾಗುತ್ತದೆ. ದೀರ್ಘ ಆಲೋಚನೆಯಲ್ಲಿ ಚಿರಕಾರಿ ತಂದೆಗಾಗಿ ಕಾದು ಆತನ ಬರುವಿಕೆಯ ನಂತರದಲ್ಲಿ ಪರಿಸ್ಥಿತಿಯನ್ನು ವಿವರಿಸುತ್ತಾನೆ. ತಾಯಿ- ಮಗ ಗೆಲ್ಲುತ್ತಾರೆ. ಸೂಕ್ಷ್ಮವಾಗಿ ಸಂದರ್ಭವನ್ನು ಅವಲೋಕಿಸಿದರೆ, ಗೌತಮಿ ಚಿರಕಾರಿಯ ಗೆಲುವಿಗೆ ಕಾರಣ ಕಾನೂನಿನ ಬೆಂಬಲವಲ್ಲ. ಬದಲಾಗಿ ಹೊಸ ಕಾನೂನು ಆಗಿನ್ನೂ ಸಮಾಜದಲ್ಲಿ ಪರಿಣಾಮಕಾರಿಯಾಗಿ ಬೇರೂರಿರಲಿಲ್ಲ. ಇದೂ ಕೂಡ ಸಂಕ್ರಮಣ ಕಾಲದ ದ್ವಂದ್ವತೆಗೆ ನಿದರ್ಶನವೇ ಆಗಿ ಕಾಣಿಸಿಕೊಳ್ಳುತ್ತದೆ.

೩) ಜಮದಗ್ನಿ ರೇಣುಕೆಯರ ಪ್ರಸಂಗದಲ್ಲಿ ಅದೇ ಸನ್ನಿವೇಶ ಭಿನ್ನ ಪರಿಣಾಮಕ್ಕೆ ಕಾರಣವಾಗುತ್ತದೆ. ರೇಣುಕೆಯು ಚಿತ್ರರಥನೆಂಬ ಗಂಧರ್ವನ ಮೇಲೆ ಮೋಹಗೊಂಡಳು ಎಂಬ ಕಾರಣಕ್ಕಾಗಿ ಜಮದಗ್ನಿ ಅವಳನ್ನು ಶಿಕ್ಷಿಸುತ್ತಾನೆ. ಮಗ ಪರಶುರಾಮ ತಂದೆಯ ಶಿಕ್ಷಾ ಆಜ್ಞೆಯಂತೆ ತಾಯಿಯನ್ನು ಕೊಲೆ ಮಾಡುತ್ತಾನೆ. ಹೆಂಡತಿಯ ಜೀವನದ ಮೇಲಿನ ಸಂಪೂರ್ಣ ಹಕ್ಕು ಪುರುಷ ಸಾಧಿಸಿಕೊಂಡಿರುವುದು ಈ ಕಾಲಘಟ್ಟದಲ್ಲಿ ಎಂಬುದು ಸ್ಪಷ್ಟವಾಗುತ್ತದೆ. ಇದರಲ್ಲಿ ಸ್ತ್ರೀಯಾದವಳ ಸ್ವಂತವಾದ ಅಸ್ತಿತ್ವಕ್ಕಾಗಲಿ, ಭಾವನೆಗಳಿಗಾಗಲಿ ಯಾವುದೇ ಮಾನ್ಯತೆ ಇಲ್ಲ. ಸಾಮಾಜಿಕ ಭದ್ರತೆ ಇಲ್ಲ. ಅತಿ ಕ್ರೂರನಾದ ಸರ್ವಾಧಿಕಾರಿ ಪುರುಷನ ಅಧೀನದಲ್ಲಿ ಅಸ್ತಿತ್ವ, ಸ್ವಾತಂತ್ರ್ಯ ನಿರಸನಗೊಂಡು ಬದುಕುವ ಸ್ತ್ರೀಯರ ನಿದರ್ಶನದ ಪ್ರತೀಕವಾಗಿ ರೇಣುಕೆಯ ಕಥೆ ಕಾಣಿಸಿಕೊಳ್ಳುತ್ತದೆ.

ಈ ಮೂರು ಪೌರಾಣಿಕ ಸನ್ನಿವೇಶದ ಘಟನೆಗಳು ಸ್ವಂತ ಆಸ್ತಿಪದ್ಧತಿ, ಕುಟುಂಬ ವ್ಯವಸ್ಥೆಯ ಬೆಳವಣಿಗೆ ಮತ್ತು ಅನುಕ್ರಮವಾಗಿ ಪುರುಷನ ಪ್ರಾಬಲ್ಯತೆಯನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಬಯಲುಗೊಳಿಸುತ್ತವೆ. ಶತಮಾನಗಳ ಕಾಲದ ವೇಗ ಇದರೊಳಗೆ ಇದ್ದರೂ, ಆಧುನಿಕ ಇಂಡಿಯಾದ ಶೋಷಿತ ಮಹಿಳೆ ಭಾರತ ದೇಶದ 'ಮಹಾಸಂಸ್ಕೃತಿ'ಯಿಂದ ಹುಟ್ಟಿ ಬಂದವಳಲ್ಲ. ಬದಲಾಗಿ ವರ್ಣ, ವರ್ಗ ಸಮಾಜದ ಕ್ರೂರ ದಬ್ಬಾಳಿಕೆಯ ಹಿನ್ನೆಲೆಯಿಂದ ಬಂದವಳು ಎಂಬುದು ಅನಾವರಣಗೊಳ್ಳುತ್ತದೆ.

ಗಣವ್ಯವಸ್ಥೆಯ ನಾಶ, ಸ್ವಂತ ಆಸ್ತಿಯ ಉದಯದೊಂದಿಗೆ ಕಾಣಿಸಿಕೊಂಡ ವರ್ಣ ವ್ಯವಸ್ಥೆ (ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವೈಶ್ಯ) ಇದರೊಳಗಿನ ಜಾತಿ, ಉಪಜಾತಿ ವಿಂಗಡಣೆ ಇವುಗಳಲ್ಲಿ ಆಸ್ತಿಯ ಕೂಡಿಡುವಿಕೆಯಿಂದ ಉಂಟಾದ ವರ್ಗ ಸಂರಚನೆ ಇವೆಲ್ಲವುಗಳಿಂದ ಹೆಂಗಸಿನ ಮನೆಕೆಲಸಕ್ಕೆ ಯಾವುದೇ ಸಾಮಾಜಿಕ ಮೌಲ್ಯವಿರದಿದ್ದ ಒಂದು ಕುಟುಂಬ ವ್ಯವಸ್ಥೆ ಭಾರತದಲ್ಲಿ ಹುಟ್ಟಿಕೊಂಡಿತು. ಇದರೊಳಗೆ ಹೆಂಗಸು ಶೂದ್ರ ಗುಲಾಮರಂತೆ ಸ್ವಾತಂತ್ರ್ಯ ಕಳೆದುಕೊಳ್ಳಬೇಕಾಯಿತು. ಭಾರತದ 'ಸುವರ್ಣಯುಗ' ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ಮೌರ್ಯರ ಇತಿಹಾಸದಿಂದ ತೊಡಗುವ ರಾಜ -ರಾಜ್ಯ ಆಡಳಿತ ವ್ಯವಸ್ಥೆಯಲ್ಲಿ ಗುಲಾಮಳಾಗಿ ಮಾರ್ಪಟ್ಟ ಸ್ತ್ರೀಯರು ಜೀತದ ಆಳಾಗಿ ಮಾರ್ಪಾಡು ಹೊಂದುವುದು ವ್ಯಕ್ತವಾಗುತ್ತದೆ.•[೧೨] ಶತಮಾನಗಳ ಬಳಿಕ ಗುಲಾಮಗಿರಿಯೂ ಕಡಿಮೆಯಾಗಿ ಆಸ್ತಿ ವ್ಯವಸ್ಥೆ, ಉತ್ಪಾದನಾ ವ್ಯವಸ್ಥೆ ಪಲ್ಲಟಗೊಂಡ ಪರಿಣಾಮದಿಂದ ಊಳಿಗಮಾನ್ಯ ಪದ್ಧತಿ ಜಾರಿಗೊಳ್ಳುತ್ತದೆ. ಈ ವ್ಯವಸ್ಥೆಯ ಒಳಗೆ ಸ್ತ್ರೀಯರು ಹುಟ್ಟಿನಿಂದ ಸಾವಿನವರೆಗೆ ಜೀತದಾಳಾಗಿ ಬದುಕುವುದು ಅನಿವಾರ್ಯವಾಗಿದೆ. ಈ ಅನಿವಾರ್ಯತೆಗೆ ಮುಖ್ಯ ಕಾರಣ ಆರ್ಥಿಕ ಪರಾವಲಂಬನೆ. ಸ್ತ್ರೀಯರ ಆರ್ಥಿಕ ಅಧೀನತೆಯು ಪುರುಷ ಸಂಸ್ಕೃತಿಯ ಅಧಿಕಾರ ದಬ್ಬಾಳಿಕೆಯನ್ನು ಸದಾ ಮಾನ್ಯ ಮಾಡಿರುವಂಥದ್ದಾಗಿದೆ. ಕೊನೆಗೆ ವಸಾಹತುಶಾಹಿ, ಬಂಡವಾಳಶಾಹಿ ಪದ್ಧತಿಯಲ್ಲಿ ಇಂಡಿಯಾದ ಸ್ತ್ರೀಯರು ಜೀತದ ಮುಂದುವರಿಕೆಯ ಜೊತೆಗೆ, ಕೂಲಿಗಳಾಗಿ ಪರಿವರ್ತನೆ ಹೊಂದಿದ ಪಲ್ಲಟವನ್ನು ನಿಖರವಾಗಿ ಗುರುತಿಸಬಹುದು. ಎಂದರೆ, ಸ್ತ್ರೀಯರ ದಾಸ್ಯ ನಿರಂತರವಾಗಿ ಮುಂದುವರಿದಿದೆ. ಆದುದರಿಂದ ಇಂಡಿಯಾದ ಸಂದರ್ಭದಲ್ಲಿ ಸ್ತ್ರೀ ವಿಮೋಚನೆ ಪ್ರಧಾನವಾಗಿ ಎರಡು ಆಯಾಮಗಳಿಗೆ ಸಂಬಂಧಿಸಿದ ವಿಚಾರವಾಗಿದೆ.

ಒಂದು : ನೈತಿಕ ಆಧ್ಯಾತ್ಮಿಕಕ್ಕೆ ಸಂಬಂಧಿಸಿದಂತೆ.

ಎರಡು: ಜಾತಿ ವ್ಯವಸ್ಥೆಯ ವರ್ಗ ಸಮಾಜಕ್ಕೆ ಸಂಬಂಧಿಸಿದಂತೆ.

ಇಲ್ಲಿ ಸ್ಪಷ್ಟವಾಗುವ ಸಾಮಾಜಿಕ ಸತ್ಯವೆಂದರೆ, ಸ್ತ್ರೀಯರ ದಾಸ್ಯವು ಸಾಮಾಜಿಕ ಆರ್ಥಿಕ ತಳಹದಿಯ ಮೇಲೆ ನಿರ್ಮಾಣಗೊಂಡಿರುವುದು. ಮಹಿಳಾಪ್ರಧಾನ ಯಾಜಮಾನ್ಯದಿಂದ ಪುರುಷ ಪ್ರಧಾನ ಯಾಜಮಾನ್ಯ ಕುಟುಂಬದ ಭೂಮಿಕೆಯಾದಾಗ ಲೈಂಗಿಕ ಹಕ್ಕು ಮತ್ತು ಮಗುವಿನ ತಂದೆಯನ್ನು ಗುರುತಿಸುವ, ಆ ಮೂಲಕ ತಾಯಿ, ತಂದೆ, ಮಕ್ಕಳು ಎಂಬ ರಕ್ತ ಸಂಬಂಧೀ ಬಾಂಧವ್ಯ ಬಲಯುತವಾಗಿ ಕುಟುಂಬ ಕಲ್ಪನೆಗೆ ಭದ್ರವಾದ ಬುನಾದಿ ನೀಡಿದೆ. ಇದರ ರಕ್ಷಣಾತ್ಮಕ ಸೂತ್ರವಾಗಿ 'ವಿವಾಹ' ಪರಿಗ್ರಹಿತವಾಗಿದೆ.

ಭೂಮಿಯ ಮೇಲಿನ ಎಲ್ಲ ಹಿನ್ನೆಲೆಯ ಮಾನವ ಸಮಾಜಗಳಲ್ಲಿ ವಿವಾಹವು ಸರ್ವಮಾನ್ಯವಾದ ಒಂದು ವ್ಯವಸ್ಥೆಯಾಗಿ ರೂಢಿಯಲ್ಲಿದೆ. ಕುಟುಂಬ ಪರಿಪ್ರೇಕ್ಷ್ಯವನ್ನು ಬಹಳ ಸಮರ್ಥವಾಗಿ ಪೋಷಿಸುವ ವ್ಯವಸ್ಥೆ ಇದು. ಹೆಣ್ಣು ಮತ್ತು ಗಂಡುಗಳ ವ್ಯವಸ್ಥಿತವಾದ ಲೈಂಗಿಕ ಸಂಬಂಧಕ್ಕೆ ಸಮಾಜ ನೀಡುವ ಮಾನ್ಯತೆ ವಿವಾಹ. ಆದರೆ ಸಾಮಾಜಿಕವಾಗಿ ಮಾನವ ಸಂತತಿ ರೂಢಿಸಿಕೊಂಡು ಬಂದಂಥ ಬಂಧುತ್ವದ (Kinship) ತಳಹದಿ ವಿವಾಹ •[೧೪] ಹೆಣ್ಣು ಗಂಡುಗಳ ಲೈಂಗಿಕ ಸಂಬಂಧ ಎನ್ನುವುದು ಸರಳ ರೇಖಾತ್ಮಕ ಸಂಬಂಧವಲ್ಲ. ಇಬ್ಬರು ಭಿನ್ನ ಲಿಂಗಿಗಳ ನಡುವೆ ಮಾತ್ರ ಸಾಧಿತವಾಗುವ ದೈಹಿಕ, ಮಾನಸಿಕ ಕ್ರಿಯೆ ಅಲ್ಲ. ಬಹುಮಾನ್ಯ ಹಿನ್ನೆಲೆಯಲ್ಲಿ ಸಮಾಜದಿಂದ ಸ್ವೀಕೃತಗೊಂಡ ನಡಾವಳಿಗಳ ಮೂಲಕ ಪದ್ಧತಿಯಾಗಿ ಮಾನಿತವಾಗುವ ವಿವಾಹವೆನ್ನುವ ಸಂಸ್ಕಾರಕ್ಕೆ ಮಾನವ ಕಲ್ಪಿತ ಧಾರ್ಮಿಕ ಅಸ್ಮಿತೆಯೂ ಇದೆ. ಜಾತಿ, ವರ್ಗ,

ಬುಡಕಟ್ಟು, ಆದಿವಾಸಿ, ನಾಗರಿಕ ಸಮಾಜಗಳಲ್ಲಿ ಕಾಲ- ದೇಶಾತೀತವಾಗಿ ಆಯಾಯ ಹಿನ್ನೆಲೆಯ ಮೂಲಕ ಮಾನವ ಬದುಕು ಕಟ್ಟಿಕೊಂಡ ಸಂಹಿತೆಯಲ್ಲಿ ಸ್ವೀಕೃತ ಮೌಲ್ಯಗಳು ಅವುಗಳ ಪರಿಧಿಯನ್ನು ನಿರ್ಧರಿಸಿ ತರ್ಕ ಶುದ್ಧ ಒಡಂಬಡಿಕೆಯನ್ನು ಸಾಧಿಸಿಕೊಂಡಿವೆ. ಆಸ್ತಿಕ ಮನೋಭಾವದ ವಶೀಕರಣಕ್ಕೆ ಒಳಗಾದ ಬದುಕು ಆ ಆಸ್ತಿಕತೆ ಕೊಡಮಾಡಿದ ಸರ್ವ ವಿಧದ ತಾರತಮ್ಯ ಭಾವವನ್ನು ಸಹಜವೆನ್ನುವಂತೆ ಒಪ್ಪಿಕೊಂಡಿದೆ. ಭಯ ಮೂಲ ಮನೋಭಾವವು ಪ್ರಶ್ನಿಸುವ ಹಕ್ಕನ್ನು ಹತ್ತಿಕ್ಕಿದ ಪರಿಣಾಮವಾಗಿ ಲೌಕಿಕದ ಬದುಕು ಧಾರ್ಮಿಕತೆಗೆ, ದೈವಿಕ ಕಲ್ಪನೆಗೆ ಶರಣಾಗಿ ಸಾರಾ ಸಗಟಾಗಿ ಆ ಮನೋಭಾವದ ಮೂಲಕ ಧಾರ್ಮಿಕತೆಯನ್ನು ಸ್ವೀಕರಿಸಿಕೊಂಡು ಬಿಟ್ಟಿದೆ. ಹಾಗಾಗಿ ಆಚಾರ, ವಿಚಾರ, ನಂಬಿಕೆ, ನಡಾವಳಿಗಳು ಬೇರೆ ಬೇರೆ ಜನ ಸಮೂಹಗಳಲ್ಲಿ ಭಿನ್ನ ಭಿನ್ನವಾಗಿ ಇರುವುದಾದರೂ, ಆಯಾಯ ಜನ ಸಮೂಹ ಒಪ್ಪಿಕೊಂಡು, ಸ್ವೀಕರಿಸಿಕೊಂಡ ಧಾರ್ಮಿಕತೆಗೆ ಒಳಗಾದುದೇ ಆಗಿ ಪ್ರಚಲಿತಗೊಂಡಿವೆ. ಹೆಣ್ಣು- ಗಂಡುಗಳ ಲೈಂಗಿಕ ಒತ್ತಾಸೆಗೆ ಪೂರಕವಾಗಿ ರೂಪಿತವಾದ ವ್ಯವಸ್ಥೆ ಬೇರೆ ಬೇರೆ ದೇಶಗಳ ಜನ ಸಮೂಹ ಒಪ್ಪಿಕೊಂಡು ಸ್ವೀಕರಿಸಿಕೊಂಡ ನೆಲೆಯಲ್ಲಿ ಮಾನಿತವಾಗಿ ಆ ಜನ ಸಮೂಹದ ಸ್ವೀಕೃತ ಮೌಲ್ಯಗಳೊಳಗೆ 'ವಿವಾಹ'ವಾಗಿ ಪರಿಗಣಿತವಾಗಿದೆ. ವಿವಾಹದ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯದ ನಡೆಸಿರುವ ಸಮಾಜಶಾಸ್ತ್ರಜ್ಞರು ಬಹುತೇಕವಾಗಿ ಸಾಮಾಜಿಕ ಸ್ತರವಿನ್ಯಾಸದಲ್ಲಿ ಮೇಲಂತಸ್ತಿನಲ್ಲಿ ಗುರುತಿಸಲಾಗುವ ಜಾತಿಗಳ ಆಧುನಿಕ ಸಮಾಜವನ್ನೇ ಕೇಂದ್ರೀಕರಿಸಿಕೊಂಡಿದ್ದಾರೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಆದಿವಾಸಿ, ಬುಡಕಟ್ಟು ಸಮೂಹಗಳ ಅಧ್ಯಯನಗಳು ಹೆಚ್ಚು ಹೆಚ್ಚು ನಡೆಯುತ್ತಿದ್ದು ವಿವಾಹ ಪದ್ಧತಿಗಳು ಉತ್ಕ್ರಾಂತಿಗೊಂಡ ಬಗೆಗಳನ್ನು ಗಮನಿಸುವುದಕ್ಕೆ ಹೆಚ್ಚು ವಿಶಾಲವಾದ ವ್ಯಾಪ್ತಿ ನಿರ್ಮಿತವಾಗಿದೆ. ೧೪

ವಿವಾಹವು ಬಹಿರಂಗವಾಗಿ ಘೋಷಿತವಾದ, ಕ್ರಮಬದ್ಧವಾದ ಹಾಗೂ ಸುವ್ಯವಸ್ಥಿತವಾದ ರೀತಿಯಲ್ಲಿ ಗಂಡು ಹೆಣ್ಣಿನ ಒಡಗೂಡಿ ಬದುಕುವ ಜೀವನ ಕ್ರಮದ ಕಟ್ಟುಪಾಡು. ವಿವಾಹದ ಈ ಒಪ್ಪಂದದಲ್ಲಿ ಆ ದಂಪತಿಗಳಿಗೆ ಹುಟ್ಟುವ ಮಕ್ಕಳ ಹಕ್ಕುಗಳು ಮತ್ತು ಹೊಣೆಗಳು ಸ್ಪಷ್ಟವಾಗಿ ನಿರೂಪಿತವಾಗಿರುತ್ತವೆ. ಪ್ರತಿಯೊಂದು ಸಮಾಜವೂ ಗಂಡ- ಹೆಂಡತಿ ಮತ್ತು ಮಕ್ಕಳ ವಿಷಯದಲ್ಲಿ ಗೊತ್ತಾದ ಹಲವು ನಿಯಮಗಳನ್ನು ನಿರೂಪಿಸಿರುತ್ತವೆ. ಇದನ್ನು ಆಯಾಯ ಸಂಸ್ಕೃತಿಗಳು ಅದರ ವಿಕಾಸಮುಖೀ ನೆಲೆಗಳಲ್ಲಿ ಮಾನ್ಯಮಾಡಿರುತ್ತವೆ. ಇದರಿಂದ ೧)ವಿವಾಹ ಇಬ್ಬರು ವಿರುದ್ಧ ಲಿಂಗಿಗಳಾದ ಹೆಣ್ಣು ಮತ್ತು ಗಂಡಿನ ಒಕ್ಕೂಟ ಎಂದು ಸ್ಪಷ್ಟವಾಗುತ್ತದೆ. ಒಂದು ಹೆಣ್ಣು ಒಂದು ಗಂಡಿನ ನಡುವೆ ವಿವಾಹಕ್ಕೆ ಅವಕಾಶವಿದೆಯೇ ಹೊರತು ಪುರುಷ ಪುರುಷನನ್ನೇ ಇಲ್ಲವೇ ಸ್ತ್ರೀಯು ಸ್ತ್ರೀಯನ್ನೇ ಮದುವೆಯಾಗಲು ಅವಕಾಶವಿಲ್ಲ. ವಿವಾಹದ ಚೌಕಟ್ಟಿನೊಳಗೆ ಇದು ಸಾಧ್ಯವಿಲ್ಲ . ಇನ್ನೊಂದು ರೀತಿಯಲ್ಲಿ ಸ್ಪಷ್ಟೀಕರಿಸುವುದಾದರೆ ವಿವಾಹದ ನೆಲಗಟ್ಟು ಬಯಸುವುದು ಪ್ರಧಾನವಾಗಿ ಲೈಂಗಿಕ ವ್ಯವಹಾರವನ್ನು ಮತ್ತು ಆ ಮೂಲಕ ಸಂತಾನೋತ್ಪತ್ತಿಯನ್ನು. ಗಂಡು - ಹೆಣ್ಣುಗಳ ನಡುವಿನ ಈ ಪ್ರಕೃತಿಗೆ ಹಕ್ಕುದಾರಿಕೆಯಾಗಿ ಮತ್ತು ವಂಶದ ಗುರುತಿಸುವಿಕೆಗಾಗಿ ರೂಪಿತವಾದ ಚೌಕಟ್ಟು ವಿವಾಹವಾಗಿ ರೂಢಿಗತವಾಗಿದೆ. ವಿವಾಹವನ್ನು ನಿರ್ಧರಿಸುವ ಕಾನೂನು ಅಥವಾ ಭಾರತೀಯ ಹಲವು ಧರ್ಮಗಳ ಅಡಿಯಲ್ಲಿ ವ್ಯಾಖ್ಯಾನಿತವಾಗುವ ವಿವಾಹ ಪರಿಕಲ್ಪನೆಗಳು ಹೆಣ್ಣು- ಗಂಡುಗಳ ವ್ಯವಸ್ಥಿತ, ಯೋಜಿತ ಮತ್ತು ಒಪ್ಪಿತ ಕೂಡಿಕೆಯನ್ನು ಮಾತ್ರ ವಿವಾಹವೆಂದು ಮಾನ್ಯ ಮಾಡುತ್ತವೆ. ಈ ಚೌಕಟ್ಟಿಗೆ ನಿಲುಕದಂಥ ಒಡಂಬಡಿಕೆಯನ್ನು ವಿವಾಹವೆಂದು ಒಪ್ಪಿಕೊಳ್ಳುವುದರ ಅಗತ್ಯವೂ ಇರುವಂತಿಲ್ಲ. ಕಾಮ

ಸಂಬಂಧವಾಗಿ ಬಯಕೆಯ ತೃಪ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಹೆಣ್ಣು- ಹೆಣ್ಣು ಮತ್ತು ಗಂಡು-ಗಂಡು ಜೊತೆಗೂಡಿ ಬದುಕುವಂತಿದ್ದರೂ ಅದು ಕಾನೂನು, ಸಮಾಜ, ಧರ್ಮಗಳ ಹಿನ್ನೆಲೆಯ ಒಪ್ಪಿತ ನೆಲೆಯ ವಿವಾಹವೆನಿಸಿಕೊಳ್ಳದೆ, ಕಾಮ ತೃಪ್ತಿಯ ವಿಕೃತ ಮುಖವಾಗಿ ಬಿಡುವ ಸಾಧ್ಯತೆ ಇದೆ. ಇಂಥ ಸಾಧಿತ ಸಂಬಂಧವು ವಿವಾಹವೆಂದು ಆರೋಪಿಸಿಕೊಳ್ಳುವಂತಿದ್ದರೂ ಅದರ ಮೂಲಕ ಸಂತಾನ ಪಡೆಯುವಂಥ ನಿಜದ ನೆಲೆ ಅರ್ಥ ಪಡೆಯಲು ಸಾಧ್ಯವಿಲ್ಲ. ೨) ವಿವಾಹವು ಕಾನೂನು ಅಥವಾ ಸಂಪ್ರದಾಯದಿಂದ ಅಂಗೀಕರಿಸಲಾದ ಒಕ್ಕೂಟ. ಬೇರೆ ಬೇರೆ ಧರ್ಮ ಮತ್ತು ಪಂಗಡಗಳಲ್ಲಿ ರೂಢಿಯಲ್ಲಿ ಪ್ರಕಟವಾಗುವ ವಿವಾಹದ ಸಂದರ್ಭಗಳಲ್ಲಿ ಅನೇಕ ವಿಧಿ ಮತ್ತು ಆಚಾರಗಳನ್ನು ಅನುಸರಿಸಲಾಗುತ್ತದೆ. ೩) ಪತಿ- ಪತ್ನಿಯರು ಸಂತಾನೋತ್ಪತ್ತಿಯಾಗಿ ಲೈಂಗಿಕ ತೃಪ್ತಿಗಾಗಿ ಮತ್ತು ಜೀವನ ನಿರ್ವಹಣೆಗಾಗಿ ಲಭ್ಯವಿರುವ ಜೀವನ ಸೌಲಭ್ಯಗಳಿಂದ ಬಾಳುವೆ ನಡೆಸುವ ಜೀವನ ವಿಧಾನ. ೪)ಸಮಾಜದಲ್ಲಿ ನೈತಿಕವಾಗಿ ಬದುಕುವ ಅನಿವಾರ್ಯ ನೆಲೆಗಳು ವಿವಾಹದ ಮೂಲದಿಂದಲೇ ಏರ್ಪಡುತ್ತವೆ. ೫) ಲೈಂಗಿಕ ವಿಧಿ ನಿಷೇಧಗಳನ್ನು ಕುರಿತು ಕೂಡ ವಿವಾಹ ಒಂದು ಮಾರ್ಗದರ್ಶಕ ಮಾದರಿಯನ್ನು ಒದಗಿಸುತ್ತದೆ. ಎಂಬ ಅಂಶಗಳು ನಿಚ್ಚಳವಾಗಿ ಗಮನಕ್ಕೆ ಬರುತ್ತವೆ.

ವಿವಾಹದ ಲಕ್ಷಣಗಳು ಎಲ್ಲ ಸಮಾಜ, ಜಾತಿ, ಧರ್ಮಗಳಲ್ಲಿ ಒಂದೇ ರೀತಿಯಾಗಿ ಇರುವುದಿಲ್ಲ. ವಿವಾಹದ ನಿಶ್ಚಿತ ದಿವಸ ಒಂದು ಸಮಾರಂಭವನ್ನು ಏರ್ಪಡಿಸುವುದು. ಹಾಗೂ ಆಹ್ವಾನಿತರು ವಧೂವರರಿಗೆ ಶುಭವನ್ನು ಕೋರುವುದು ಒಂದು ಆಚರಣೆಯಂತೆ ಎಲ್ಲ ಸಮಾಜಗಳಲ್ಲಿ ರೂಢಿಯಾಗಿದೆ. ೧೮ ಕೆಲವು ಸಮಾಜಗಳಲ್ಲಿ ಈ ಸಮಾರಂಭವು ಸರಳವಾಗಿರುತ್ತದೆ. ಇನ್ನು ಕೆಲವು ಸಮಾಜಗಳಲ್ಲಿ ವಿವಾಹವು ಧರ್ಮ ಪ್ರೇರಿತ ಮತ ಕ್ರಿಯಾ ವಿಧಿಗಳಿಗನುಸಾರವಾಗಿ ವೈಭವದಿಂದ ನಡೆಯುತ್ತದೆ. ಅದನ್ನು ಸಾಮಾನ್ಯವಾಗಿ ಆರ್ಥಿಕತೆ ಮತ್ತು ಕುಟುಂಬಗಳ ಅಂತಸ್ತು ನಿರ್ಧರಿಸುವಂತಿರುತ್ತದೆ.

ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ವಿವಾಹದ ಅರ್ಥವನ್ನು ಸ್ಥೂಲವಾಗಿ ಎರಡು ಆಯಾಮಗಳಲ್ಲಿ ವಿಂಗಡಿಸಲಾಗಿದೆ. ಒಂದು: **ಪ್ರಾಚೀನ ಭಾರತೀಯ ಸಮಾಜದಲ್ಲಿ ವಿವಾಹದ ಪದ್ಧತಿ**. ಎರಡು: **ಆಧುನಿಕ ಭಾರತೀಯ ಸಮಾಜದಲ್ಲಿ ವಿವಾಹದ ಪದ್ಧತಿ**.

## ೨.೨ ಪ್ರಾಚೀನ ಭಾರತೀಯ ಸಮಾಜದಲ್ಲಿ ವಿವಾಹದ ಪದ್ಧತಿ:

ಭಾರತದ ಪ್ರಾಚೀನ ಸಮಾಜ ಎಂದು ಹೇಳುವಾಗ ನಾವು ಮೂರು ನೆಲೆಗಳಲ್ಲಿ ಪ್ರವೇಶ ಪಡೆಯುವ ಅನಿವಾರ್ಯವಿದೆ. ಅವುಗಳೆಂದರೆ, ಒಂದು: ಆದಿವಾಸಿ ಸಮಾಜ. ಎರಡು: ಪ್ರಾಚೀನ ಹಿಂದು ಸಮಾಜ. ಮೂರು: ಭಾರತೀಯ ಮುಸ್ಲಿಂ ಸಮಾಜ.

**೨.೨.೧ ಆದಿವಾಸಿ ಸಮಾಜದಲ್ಲಿನ ವಿವಾಹ ಪದ್ಧತಿಗಳು:** ಆದಿವಾಸಿಗಳಲ್ಲಿ ವಿವಾಹವನ್ನು ಒಂದು ಒಪ್ಪಂದವೆಂದು ಪರಿಗಣಿಸಲಾಗಿದೆ. ಅದು ಕೇವಲ ಇಬ್ಬರು ವ್ಯಕ್ತಿಗಳ ಲೈಂಗಿಕ ಸಂಬಂಧ ಮಾತ್ರವಾಗಿರದೆ, ಎರಡು ಕುಟುಂಬಗಳ ನಡುವೆ ಏರ್ಪಡುವ ಸಂಬಂಧ. ಸಮಾಜಶಾಸ್ತ್ರಜ್ಞರಾದ ಮಜುಮ್‌ದಾರ್ ಮತ್ತು ಮದನ್ ಅವರು ಆದಿವಾಸಿಗಳಲ್ಲಿ ವಧು-ವರರ ಆಯ್ಕೆಯ ಕ್ರಮಗಳನ್ನು ಎಂಟು ವಿಧಗಳಿಂದ ಗುರುತಿಸಿದ್ದಾರೆ.

೧) **ಪರೀಕ್ಷಾರ್ಥ ವಿವಾಹ (Probationary Marriage):** ವಿವಾಹವಾಗಲು ಬಯಸುವ ಯುವಕನು ತಾನು ವಿವಾಹವಾಗಲು ಇಚ್ಛಿಸುವ ಯುವತಿಯ ಮನೆಯಲ್ಲಿ ಕೆಲವು ಕಾಲ ವಾಸಮಾಡುತ್ತಾನೆ. ಆ ಕಾಲದಲ್ಲಿ ಗಂಡು - ಹೆಣ್ಣು ಪರಸ್ಪರ ಒಪ್ಪಿಕೊಂಡರೆ ಅನಂತರ ಅವರಿಬ್ಬರಿಗೂ ವಿವಾಹವಾಗಬಹುದು. ಇಲ್ಲದಿದ್ದರೆ ಗಂಡು ಹೆಣ್ಣಿನ ಮನೆಯವರಿಗೆ ಪರಿಹಾರವನ್ನು ಕೊಟ್ಟು ತನ್ನ ಮನೆಗೆ ಹಿಂದಿರುಗಬೇಕಾಗುತ್ತದೆ. •೧೬

೨) **ಅಪಹರಣ ವಿವಾಹ (Marriage by capture) :** ಆದಿವಾಸಿಗಳಲ್ಲಿ ಒಂದು ಗುಂಪಿನ ಗಂಡು ಮತ್ತೊಂದು ಗುಂಪಿನ ಹೆಣ್ಣನ್ನು ಅಪಹರಿಸಿಕೊಂಡು ಹೋಗಿ ವಿವಾಹವಾಗುವ ಪದ್ಧತಿ ಇದೆ. ಇದು ನಾಗಾ ಜನಾಂಗಗಳಲ್ಲಿರುವ ಪದ್ಧತಿ. ಬಿಲ್ ಮತ್ತು ಗೊಂಡಾಗಳಲ್ಲಿ ಕನ್ಯೆಯ ತಂದೆ ತಾಯಿಗಳು ಪರೋಕ್ಷವಾಗಿ ಅಪಹರಣಕ್ಕೆ ಅನುಮತಿ ನೀಡುವುದು ಮತ್ತು ಅನಂತರ ಅವರಿಬ್ಬರಲ್ಲಿ ತೋರಿಕೆಯ ಪ್ರತಿಭಟನೆ, ಶೋಕ ಇತ್ಯಾದಿಗಳನ್ನು ನಟಿಸುವುದಿದೆ. ಕೆಲವು ವೇಳೆ ಇದು ಔಪಚಾರಿಕವಾಗಿರುತ್ತದೆ. ಅದು ನಡೆದ ನಂತರ ಅವರಿಬ್ಬರನ್ನು ಗಂಡ- ಹೆಂಡತಿಯರೆಂದು ಪರಿಗಣಿಸಲಾಗುತ್ತದೆ.

೩) **ಅರ್ಹತಾ ಪರೀಕ್ಷಾನಂತರದ ವಿವಾಹ (Marriage by trial):** ವಿವಾಹವಾಗಲು ಬಯಸುವ ಗಂಡು ಎಲ್ಲರ ಸಮಕ್ಷಮದಲ್ಲಿ ತನ್ನ ಶೌರ್ಯ ಸಾಹಸವನ್ನು ಪ್ರದರ್ಶಿಸಬೇಕಾಗುತ್ತದೆ. ಅನಂತರ ತನಗೆ ಇಷ್ಟವಾದ ಯುವತಿಯನ್ನು ವಿವಾಹ ಮಾಡಿಕೊಳ್ಳಬಹುದು. ಈ ಪದ್ಧತಿಯನ್ನು ಅರ್ಹತಾ ಪರೀಕ್ಷಾನಂತರದ ವಿವಾಹ ಅಥವಾ ಶೌರ್ಯ ವಿವಾಹ ಎಂದು ಕರೆಯಲಾಗುತ್ತದೆ. ಬಿಲ್ಲ ಎಂಬ ಜನಾಂಗದಲ್ಲಿ ಈ ಪದ್ಧತಿಯು ಕಂಡು ಬರುತ್ತದೆ.

೪) **ಕೊಂಡ ವಿವಾಹ (Marriage by purchase):** ವಧು ಶುಲ್ಕವನ್ನು ನೀಡಿ ವಿವಾಹವಾಗುವ ಪದ್ಧತಿಯು ಕೆಲವು ಆದಿವಾಸಿಗಳಲ್ಲಿದ್ದು, ಇದನ್ನು 'ಕೊಂಡ ವಿವಾಹ' ಅಥವಾ 'ಕನ್ಯಾ ವಿಕ್ರಯ ವಿವಾಹ' ಎಂದು ಕರೆಯಲಾಗಿದೆ. ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಹೆಚ್ಚಿನ ಆದಿವಾಸಿ ಬುಡಕಟ್ಟುಗಳಲ್ಲಿ ಈ ವಿವಾಹ ಪದ್ಧತಿ ರೂಢಿಯಲ್ಲಿದೆ ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಶುಲ್ಕ ಅಥವಾ ತೆರದ ರೂಪವಾಗಿ ಹಣ, ಹೊಗೆಸೊಪ್ಪು, ಜೇನು ತುಪ್ಪ, ಸಾಕು ಪ್ರಾಣಿ, ಉಡುಪು, ಆಯುಧಗಳನ್ನು ವಿಕ್ರಯಿಸುವಂತೆ ನಿಗದಿಸಲಾಗುತ್ತದೆ. •೧೭

೫) **ಸೇವಾ ವಿವಾಹ (Marriage by service) :** ಕನ್ಯಾಶುಲ್ಕವನ್ನು ತೆರುವ ಶಕ್ತಿ ಇಲ್ಲದವರು ತಮ್ಮ ಭಾವಿ ಅತ್ತೆ ಮಾವಂದಿರ ಮನೆಯಲ್ಲಿ ಸೇವಕರಂತೆ ಕೆಲವು ಕಾಲ ದುಡಿಯಬೇಕಾಗುತ್ತದೆ. ಅನಂತರ ಅವರು ಮದುವೆ ಮಾಡಿಕೊಳ್ಳಬಹುದು. ಅದನ್ನು ಸೇವಾ ವಿವಾಹವೆಂದು ಪರಿಗಣಿಸಲಾಗುತ್ತದೆ. ಮಧ್ಯ ಪ್ರದೇಶದ ಗೊಂಡಾ ಮತ್ತು ಬೈಗಾ ಜನಾಂಗಗಳಲ್ಲಿ ಈ ಪದ್ಧತಿ ಪ್ರಚಲಿತದಲ್ಲಿದೆ.

೬) **ವಿನಿಮಯ ವಿವಾಹ (Exchange Marriage) :** ಭಾರತದ ಬಹುಭಾಗದ ಆದಿವಾಸಿ ಬುಡಕಟ್ಟುಗಳಲ್ಲಿ ಈ ವಿವಾಹವು ಚಾಲ್ತಿಯಲ್ಲಿದೆ. ಈ ವಿವಾಹ ಪದ್ಧತಿಯಿಂದ ಎರಡು ಕುಟುಂಬಗಳು ಪರಸ್ಪರ ಅನ್ಯೋನ್ಯವಾಗಿರುತ್ತವೆ. ಪರಸ್ಪರ ಕಷ್ಟ ಸುಖಗಳಲ್ಲಿ ಭಾಗಿಗಳಾಗುತ್ತವೆ. ಒಂದು ಮನೆಯಲ್ಲಿ ಅಣ್ಣ ಮತ್ತು ತಂಗಿ ಅಥವಾ ಅಕ್ಕ ಮತ್ತು ಮದುವೆಯ ವಯಸ್ಸಿಗೆ ಬಂದ ತಮ್ಮ ಇದ್ದರೆ ಅದೇ ರೀತಿ ಇರುವ

ಮನೆಯನ್ನು ಗೊತ್ತು ಪಡಿಸಿಕೊಂಡು ಯಾವ ಮನೆಯಿಂದ ಹೆಣ್ಣನ್ನು ತರಲಾಗುತ್ತದೆಯೋ ಅದೇ ಮನೆಗೆ ಹೆಣ್ಣನ್ನು ಕೊಡುವುದನ್ನು ಸಾಮಾನ್ಯಾರ್ಥದಲ್ಲಿ ವಿನಿಮಯ ವಿವಾಹ ಎಂದು ಭಾವಿಸಲಾಗುತ್ತದೆ. ಇದರಿಂದಾಗಿ ವಿನಿಮಯ ವಿವಾಹ ಪದ್ಧತಿಯು ಎರಡು ಕುಟುಂಬಗಳು ಏರ್ಪಡಿಸುವ ಒಪ್ಪಂದವೆಂದು ಪರಿಗಣಿಸಬಹುದು.

೭) **ಒಪ್ಪಿಗೆ ವಿವಾಹ (Marriage of consentand Elopements):** ಪ್ರೇಮಿಯೊಡನೆ ಪಲಾಯನ ವಿವಾಹವು ಕೆಲವು ಬುಡಕಟ್ಟುಗಳಲ್ಲಿ ರೂಢಿಯಲ್ಲಿದೆ. ವಿವಾಹಕ್ಕೆ ಹಿರಿಯರ ಒಪ್ಪಿಗೆಯಿಲ್ಲವೆಂದು ತಿಳಿದಾಗ ಪ್ರೇಮಿಗಳಿಬ್ಬರು ಪರಸ್ಪರ ಸಮ್ಮತಿಸಿ ತಮ್ಮ ಗುಂಪನ್ನು ತೊರೆದು ಹೋಗುತ್ತಾರೆ. ಕೆಲವು ತಿಂಗಳ ನಂತರ ಅವರು ಹಿಂದಿರುಗಿದಾಗ ಅವರನ್ನು ಗಂಡ- ಹೆಂಡತಿಯರೆಂದು ಸಮೂಹ ಒಪ್ಪಿಕೊಳ್ಳುತ್ತದೆ. ಅನಂತರ ಈ ವಿವಾಹಕ್ಕೆ ಆ ಕುಟುಂಬ ವರ್ಗದ ಸಮ್ಮತಿ ಇರುತ್ತದೆ.

೮) **ಅಕ್ರಮ ಪ್ರವೇಶ ವಿವಾಹ (Marriage by Intrusion) :** ಕೆಲವು ಆದಿವಾಸಿಗಳಲ್ಲಿ ಹೆಣ್ಣು ತಾನು ಬಯಸಿದ ಯುವಕನನ್ನು ವಿವಾಹವಾಗುವುದು ಸಾಧ್ಯವಿಲ್ಲವೆಂದು ಅರಿತು ಆ ಯುವಕನ ಮನೆಯನ್ನು ಅಕ್ರಮ ಪ್ರವೇಶ ಮಾಡುತ್ತಾಳೆ. ಇದು 'ಹೊ' ಮತ್ತು 'ಬರ್‌ಹಾರ್' ಜನಾಂಗಗಳಲ್ಲಿ ಕಂಡು ಬರುತ್ತದೆ. ಈ ರೀತಿ ಹೆಣ್ಣು ತಾನು ವಿವಾಹವಾಗಬಯಸುವ ಯುನಕನ ಮನೆಯನ್ನು ಅಕ್ರಮವಾಗಿ ಪ್ರವೇಶಿಸಿದಾಗ ಆತನ ಮನೆಯವರು ನೀಡುವ ಚಿತ್ರಹಿಂಸೆಯನ್ನು ಸಹಿಸಬೇಕಾಗುತ್ತದೆ. ಈ ಕಷ್ಟಗಳನ್ನೆಲ್ಲ ಸಹಿಸಿಕೊಂಡು ಆತನ ಮನೆಗೆ ಪ್ರವೇಶ ದೊರೆತರೆ ಅವರಿಬ್ಬರೂ ವಿವಾಹವಾದಂತೆ ಎಂದು ಪರಿಗಣಿಸಲಾಗುತ್ತದೆ.

ಪ್ರಾಚೀನ ಭಾರತೀಯ ಸಮಾಜದಲ್ಲಿ ಇದ್ದ ಈ ರೀತಿಯ ವಿವಾಹ ಕ್ರಮಗಳು ಆಯಾಯ ಬುಡಕಟ್ಟುಗಳ ಜನತೆಯ ಒಳಗಿನ ಸಂಸ್ಕೃತಿಯ ಪ್ರತೀಕವಾಗಿ ರೂಢಿಯಲ್ಲಿ ಇತ್ತು ಎನ್ನುವುದು ಮುಖ್ಯ. ಯಾವುದೇ ಹಿನ್ನೆಲೆಯ ಒಂದು ಪದ್ಧತಿ ಚಾಲ್ತಿಯಲ್ಲಿದ್ದರೂ ಅದಕ್ಕೆ ಆ ಸಮಾಜದ ಒಳಗೆ ಮಾನ್ಯತೆ ಇದ್ದೇ ಇರುತ್ತದೆ. ಈ ರೀತಿಯ ವಿಶಿಷ್ಟತೆ ಆಚರಣಾತ್ಮಕವಾಗಿ ಅನನ್ಯ ನಡಾವಳಿ ಎನಿಸಿಕೊಳ್ಳುತ್ತದೆ. ಪ್ರದೇಶ, ಭಾಷೆ, ಜಾತಿ, ಜನಾಂಗಗಳಲ್ಲಿರುವ ಧಾರ್ಮಿಕ, ಸಾಂಪ್ರದಾಯಿಕ ಗೊತ್ತುವಳಿಗಳು ಆ ಸಮೂಹದ ಮುಖೇನ ಅರ್ಥಪಡೆದುಕೊಂಡು ಚಲಾವಣೆಯನ್ನು ಹೊಂದುತ್ತಿರುತ್ತವೆ. ಹೀಗೆ ಪ್ರಾಚೀನ ಆದಿವಾಸಿ ಸಮುದಾಯಗಳಲ್ಲಿ ರೂಢಿಯಾಗಿದ್ದ ಎಂಟು ರೀತಿಯ ವಿವಾಹ ಕ್ರಮಗಳನ್ನು ಗ್ರಹಿಸಲಾಗಿದೆ.

**೨.೨.೨ ಪ್ರಾಚೀನ ಹಿಂದೂ ಸಮಾಜದಲ್ಲಿ ವಿವಾಹ ಪದ್ಧತಿ:**

ಪ್ರಾಚೀನ ಹಿಂದೂ ಸಮಾಜದಲ್ಲಿ ವಿವಾಹದ ವಿಧಿಗಳನ್ನು ಸ್ಮೃತಿಕಾರರು ಎಂಟು ವಿಧಗಳಲ್ಲಿ ವಿವರಿಸಿದ್ದಾರೆ.[೧೮] ಅವುಗಳೆಂದರೆ, ೧) ಬ್ರಹ್ಮ ೨)ದೈವ ೩) ಆರ್ಶ ೪) ಪ್ರಜಾಪತ್ಯ ೫) ಅಸುರ ೬) ಗಾಂಧರ್ವ ೭) ರಾಕ್ಷಸ ೮) ಪೈಶಾಚ.

೧) **ಬ್ರಹ್ಮ ವಿವಾಹ :** ಈ ವಿವಾಹವು ಬ್ರಾಹ್ಮಣ ವರ್ಗದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಸರ್ವಾಲಂಕೃತಳಾದ ವಧುವನ್ನು ಅದೇ ವರ್ಗಕ್ಕೆ ಸೇರಿದ ವರನಿಗೆ ಕೊಟ್ಟು ವಿವಾಹ ಮಾಡುವುದಕ್ಕೆ ಬ್ರಹ್ಮ ವಿವಾಹವೆಂದು ಹೆಸರು. ಇದರಲ್ಲಿ ಬಲಾತ್ಕಾರ, ಶರತ್ತುಗಳು ಅಥವಾ ಹಣ ನೀಡಿಕೆಗಳಾವುವೂ ಇರುವುದಿಲ್ಲ. ಬ್ರಹ್ಮ ವಿವಾಹವು ಆ ಕಾಲದಲ್ಲಿ ಸಾಮಾಜಿಕವಾಗಿ ಸಭ್ಯ ಮತ್ತು ಧಾರ್ಮಿಕವಾಗಿ ಮಾನ್ಯ ಮಾಡಲಾದ ವಿವಾಹವಾಗಿದೆ. ಇದು

ವೇದಗಳ ಕಾಲದಿಂದಲೂ ರೂಢಿಯಲ್ಲಿದೆ. ಸ್ಮೃತಿಗಳು ಬ್ರಹ್ಮ ವಿವಾಹವನ್ನು ಶ್ರೇಷ್ಠ ವಿವಾಹ ಪದ್ಧತಿಯೆಂದು ಪರಿಗಣಿಸಿವೆ.

೨) **ದೈವ ವಿವಾಹ** : ವಧುವಿನ ತಂದೆಯು ಯಜ್ಞ ಯಾಗಾದಿಗಳನ್ನು ನೆರವೇರಿಸಿದಾಗ ಪುರೋಹಿತರಿಗೆ ಕೊಡಬೇಕಾದ ದಕ್ಷಿಣೆಯ ಬದಲಾಗಿ, ತನ್ನ ಪ್ರಾಪ್ತ ವಯಸ್ಕಳಾದ ಮಗಳನ್ನೇ ದಕ್ಷಿಣೆಯಾಗಿ ಕೊಡುವುದಕ್ಕೆ ದೈವ ವಿವಾಹವೆಂದು ಹೆಸರು. ಪ್ರಾಚೀನ ಭಾರತದಲ್ಲಿ ಪುರೋಹಿತರು ಪೌರೋಹಿತ್ಯ ನಡೆಸಿದ್ದಕ್ಕಾಗಿ ದಕ್ಷಿಣೆಯಾಗಿ ಉತ್ತಮ ಕನ್ಯೆಯರನ್ನು ರಾಜರಿಂದ ಪಡೆಯುತ್ತಿದ್ದರು. ಕೆಲವು ಕಾಲದ ನಂತರ ಈ ವಿವಾಹವನ್ನು ಅಸಮಂಜಸ ಪದ್ಧತಿಯೆಂದು ಪರಿಗಣಿಸಲಾಯಿತು. ದೈವ ವಿವಾಹವು ವೈವಾಹಿಕ ವಿಧಿ ಮತ್ತು ಆಚರಣೆಗಳಾವುದನ್ನೂ ಒಳಗೊಂಡಿಲ್ಲದ್ದರಿಂದ ಇದು ಬ್ರಹ್ಮ ವಿವಾಹಕ್ಕಿಂತ ಕೀಳೆಂದು ಪರಿಗಣಿತವಾಗಿದೆ.

೩) **ಆರ್ಶ ವಿವಾಹ** : ವಧುವಿನ ತಂದೆಯು ವರನಿಂದ ಒಂದು ಹಸು ಮತ್ತು ಒಂದು ಹೋರಿ ಅಥವಾ ಇವುಗಳಲ್ಲಿ ಒಂದು ಜೊತೆಯನ್ನು ಪಡೆದು ತನ್ನ ಮಗಳನ್ನು ವಿವಾಹ ಮಾಡಿ ಕೊಡುವುದಕ್ಕೆ ಆರ್ಶ ಪದ್ಧತಿಯೆಂದು ಹೆಸರು. ಇದು ಸಾಮಾನ್ಯವಾಗಿ ಪುರೋಹಿತ ವರ್ಗದವರಲ್ಲಿ ಕಂಡು ಬರುವುದರಿಂದ ಇದನ್ನು ಆರ್ಶ ಪದ್ಧತಿ ಎಂದು ಕರೆಯಲಾಗುತ್ತದೆ. ಇದು ಕನ್ಯೆಯನ್ನು ಮಾರಾಟ ಮಾಡಿದಂತಾಗುವುದರಿಂದ ಈ ವಿವಾಹ ಪದ್ಧತಿಯನ್ನು ಮುಂದೆ ರೂಢಿಯಲ್ಲಿ ಪ್ರೋತ್ಸಾಹಿಸಿರುವಂತೆ ಕಂಡುಬರುವುದಿಲ್ಲ. ಆದರೆ ಇದು ಪ್ರಾಚೀನ ಭಾರತದಲ್ಲಿ ರೂಢಿಯಲ್ಲಿದ್ದುದು ವ್ಯಕ್ತವಾಗುತ್ತದೆ. ಸ್ಮೃತಿಕಾರ ಮನು ಇದನ್ನು ಅಕ್ರಮ ಪದ್ಧತಿ ಎಂದು ಪರಿಗಣಿಸಿದ್ದಾನೆ. ೧೯

೪) **ಪ್ರಜಾಪತ್ಯ ವಿವಾಹ:** ಪ್ರಜಾಪತ್ಯ ವಿವಾಹದಲ್ಲಿ ವರನನ್ನು ವಿಧಿ ಪೂರ್ವಕವಾಗಿ ಪೂಜಿಸಿ, ಗೌರವಾದರಗಳೊಡನೆ ಕನ್ಯೆಯನ್ನು ಕೊಟ್ಟು ವಿವಾಹ ನೆರವೇರಿಸಲಾಗುತ್ತದೆ. ಪತಿ- ಪತ್ನಿಯರಿಬ್ಬರೂ ಜೀವನ ಪರ್ಯಂತ ಒಟ್ಟಿಗೆ ಲೌಕಿಕ ಮತ್ತು ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗುತ್ತಿರಬೇಕು. ಪ್ರಾಚೀನ ಧರ್ಮಶಾಸ್ತ್ರಜ್ಞರು ಈ ವಿವಾಹವನ್ನು ಅಂಗೀಕರಿಸಿದ್ದರೂ ಬ್ರಹ್ಮ , ದೈವ ಮತ್ತು ಆರ್ಶ ವಿವಾಹ ಪದ್ಧತಿಗಿಂತ ಕೀಳೆಂದು ಪರಿಗಣಿಸಲಾಗಿದೆ.

೫) **ಅಸುರ ವಿವಾಹ** : ವರನು ವಧುವಿನ ತಂದೆ, ತಾಯಿ ಅಥವಾ ಸಂಬಂಧಿಗಳಿಗೆ ಹಣವನ್ನು ಕೊಟ್ಟು ಆಕೆಯನ್ನು ವಿವಾಹವಾಗುವುದಕ್ಕೆ ಅಸುರ ವಿವಾಹವೆಂದು ಹೆಸರು. ಅಸುರ ವಿವಾಹದಲ್ಲಿ ಹಣ ನೀಡಿಕೆಯೇ ಪ್ರಮುಖ ಅಂಶವಾಗಿದೆ. ಇಲ್ಲಿ ವಧುವನ್ನು ಕೊಂಡುಕೊಳ್ಳಲಾಗುತ್ತದೆ. ಪ್ರಾಚೀನ ಹಿಂದೂ ಸಮಾಜದಲ್ಲಿ ಅಸುರ ವಿವಾಹವನ್ನು ಖಂಡಿಸುವುದು ಅಥವಾ ಪ್ರೋತ್ಸಾಹಿಸುವುದು ಸ್ಪಷ್ಟವಾಗುವುದಿಲ್ಲ. ಇದನ್ನು ಅನಿವಾರ್ಯವೆಂದು ಆಚರಿಸುತ್ತಿದ್ದರು.

೬) **ಗಾಂಧರ್ವ ವಿವಾಹ:** ಗಂಡು ಮತ್ತು ಹೆಣ್ಣು ತಾವಾಗಿಯೇ ಸಂಧಿಸಿ ಪರಸ್ಪರ ವ್ಯಾಮೋಹಕ್ಕೊಳಗಾಗಿ ರತಿಸಂಬಂಧವನ್ನು ಹೊಂದುವುದಕ್ಕೆ ಗಾಂಧರ್ವ ವಿವಾಹವೆಂದು ಮನು ತಿಳಿಸಿದ್ದಾನೆ. ಹಿಮಾಲಯ ಪ್ರದೇಶದ 'ಗಾಂಧರ್ವ' ಎಂಬ ಆದಿವಾಸಿಗಳಲ್ಲಿ ಈ ವಿವಾಹವು ಆಚರಣೆಯಲ್ಲಿದ್ದುದರಿಂದ ಇದನ್ನು

ಗಾಂಧರ್ವ ವಿವಾಹವೆಂದು ಕರೆಯಲಾಗಿದೆ. ಪ್ರಾಚೀನ ಭಾರತದಲ್ಲಿ ಅನೇಕ ಧರ್ಮಶಾಸ್ತ್ರಜ್ಞರು ಧಾರ್ಮಿಕ ಮತ್ತು ನೈತಿಕ ಹಿನ್ನೆಲೆಯ ಆಧಾರದ ಮೇಲೆ ಈ ವಿವಾಹವನ್ನು ಪ್ರೋತ್ಸಾಹಿಸಲಿಲ್ಲ.

೭) **ರಾಕ್ಷಸ ವಿವಾಹ:** ರಾಕ್ಷಸ ವಿವಾಹವು ಹಿಂದೂಗಳ ಒಂದು ವಿವಾಹ ಪದ್ಧತಿಯಾಗಿದೆ. ವಿವಾಹ ವಯಸ್ಸಿನ ಹೆಣ್ಣು ಅಳುತ್ತಾ ಕಿರುಚಿಕೊಳ್ಳುತ್ತ ಪ್ರತಿಭಟಿಸುವಂತಿದ್ದರೂ ಬಲವಂತವಾಗಿ ಆಕೆಯನ್ನು ವಶಪಡಿಸಿಕೊಂಡು, ಆಕೆಯ ಬಂಧುಗಳನ್ನು ಕೊಂದು, ಘಾಸಿಗೊಳಿಸಿ, ಚದುರಿಸಿ, ಗಾಯಗೊಳಿಸಿ ಆಕೆಯನ್ನು ಹೊಂದುವುದಕ್ಕೆ 'ರಾಕ್ಷಸ ವಿವಾಹ' ವೆಂದು ಮನು ತಿಳಿಸಿದ್ದಾನೆ. ರಾಕ್ಷಸ ವಿವಾಹದಲ್ಲಿ ಹೆಣ್ಣಿನ ಒಪ್ಪಿಗೆಯಿಲ್ಲದೆ ಅವಳ ಇಚ್ಛೆಗೆ ವಿರುದ್ಧವಾಗಿ, ಬಲವಂತವಾಗಿ, ಆಕೆಯನ್ನು ವಿವಾಹ ಮಾಡಿಕೊಳ್ಳಲಾಗುತ್ತಿತ್ತು. ಕಾಲಾನುಕ್ರಮದಲ್ಲಿ ರಾಕ್ಷಸ ವಿವಾಹದ ಆಚರಣೆಯು ಕಡಿಮೆಯಾಗುತ್ತಾ ಕೊನೆಗೆ ಕಣ್ಮರೆಯಾಗಿದೆ.

೮) **ಪೈಶಾಚ ವಿವಾಹ :** ಪೈಶಾಚ ವಿವಾಹವು ಅತ್ಯಂತ ಕ್ರೂರ ಹಾಗೂ ಖಂಡನೀಯವಾದ ವಿವಾಹ ಪದ್ಧತಿಯಾಗಿದೆ. 'ಪ್ರಜ್ಞಾಹೀನಳಾದ ನಿದ್ರಿಸುತ್ತಿರುವ ಅಥವಾ ಪಾನಮತ್ತಳಾದ, ಹೆಣ್ಣನ್ನು ಸಂಭೋಗಿಸುವುದಕ್ಕೆ' ಕೌಟಿಲ್ಯ ಪೈಶಾಚ ವಿವಾಹವೆಂದು ಹೇಳಿದ್ದಾನೆ. [೧೦] ಮನುವಿನ ಪ್ರಕಾರ 'ಪುರುಷನು ಏಕಾಂತದಲ್ಲಿರುವ, ನಿದ್ರಿಸುತ್ತಿರುವ, ಹುಚ್ಚಳಾದ ಅಥವಾ ಪಾನಮತ್ತಳಾದ ಹೆಣ್ಣನ್ನು ಸಂಭೋಗಿಸಿದರೆ' ಅದಕ್ಕೆ ಪೈಶಾಚ ವಿವಾಹವೆಂದು ಕರೆಯಲಾಗುತ್ತದೆ. ಒಂದರ್ಥದಲ್ಲಿ ಪೈಶಾಚ ವಿವಾಹವು ಮಾನಭಂಗವಿದ್ದಂತೆ. ಈ ಎಂಟು ಹಿಂದೂ ವಿವಾಹ ಕ್ರಮಗಳಲ್ಲಿ ಬ್ರಹ್ಮ, ದೈವ, ಆರ್ಶ ಮತ್ತು ಪ್ರಜಾಪತ್ಯ ವಿವಾಹಗಳನ್ನು ಪ್ರಶಸ್ತವೆಂದು ಅಂಗೀಕರಿಸಲಾಗಿದೆ. ಅಸುರ, ಗಾಂಧರ್ವ ಮತ್ತು ರಾಕ್ಷಸ ವಿವಾಹ ಪದ್ಧತಿಗಳನ್ನು ಅಪ್ರಶಸ್ತವಾದುವೆಂದು ನಿಷೇಧಿಸಲಾಗಿದೆ. ಆಧುನಿಕ ಸಮಾಜದಲ್ಲಿ ಬ್ರಹ್ಮ ಮತ್ತು ಅಸುರ ವಿವಾಹ ಪದ್ಧತಿಗಳು ಅಂಗೀಕೃತ ವಿವಾಹಗಳಾಗಿವೆ.

ಪ್ರಾಚೀನ ವಿವಾಹ ಪದ್ಧತಿಗಳು ಆಧುನೀಕರಣ ಪ್ರಕ್ರಿಯೆಯ ಪ್ರಭಾವದಿಂದಾಗಿ ಕಾಲದಿಂದ ಕಾಲಕ್ಕೆ ಸಾಕಷ್ಟು ಬದಲಾವಣೆಗಳನ್ನು ಪಡೆದುಕೊಂಡಿರುವುದು ಸಹಜವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ವಿವಾಹ ಪದ್ಧತಿಯ ಸಾಧ್ಯತೆ ಮತ್ತು ಮಿತಿಗಳ ವಿಶ್ಲೇಷಣೆಯನ್ನು ನಡೆಸದೆ, ಅಧ್ಯಯನದ ಅನುಕೂಲದ ದೃಷ್ಟಿಯಿಂದ ಇವುಗಳನ್ನು ಸ್ಥೂಲವಾಗಿಯಷ್ಟೇ ಇಲ್ಲಿ ಗಮನಿಸಲಾಗಿದೆ.

**೨.೨.೩ ಭಾರತೀಯ ಮುಸ್ಲಿಂ ಸಮಾಜ :**

ಇಸ್ಲಾಂ ಧರ್ಮದಲ್ಲಿ [೧೧] ವಿವಾಹವು ಒಂದು ಕರಾರು ಅಥವಾ ಒಪ್ಪಂದ. ಪುರುಷರಿಗೆ ಮುಸ್ಲಿಂ ಸಮುದಾಯದಲ್ಲಿ ಸಾಂಪ್ರದಾಯಿಕವಾಗಿ ಹಲವು ಬಾರಿ (ಗರಿಷ್ಠ ನಾಲ್ಕು ಬಾರಿ) ವಿವಾಹವಾಗಲು ಅವಕಾಶವಿದೆ. ತಾತ್ವಿಕವಾಗಿ ಈ ಅವಕಾಶಗಳು ಇದ್ದು ಹಾಗೂ ವಾಸ್ತವದಲ್ಲಿ ಹೆಚ್ಚಿನ ಪುರುಷರು ಏಕಪತ್ನಿ ವಿವಾಹವನ್ನು ರೂಢಿಯಲ್ಲಿರಿಸಿಕೊಂಡಿರುವುದು ವ್ಯಕ್ತವಾಗುತ್ತದೆ. ಇಸ್ಲಾಮ್ ಧರ್ಮದ ನಂಬಿಕೆಯಂತೆ ವಿವಾಹವು ಸ್ತ್ರೀ- ಪುರುಷರು ಕಾನೂನುಬದ್ಧವಾಗಿ ಲೈಂಗಿಕತೆಗೆ ಮತ್ತು ಸಂತಾನವನ್ನು ಪಡೆಯಲು ಮಾಡಿಕೊಂಡಿರುವ ಒಂದು ಕರಾರು ಅಥವಾ ಒಪ್ಪಂದವಾಗಿದೆ. ಆದ್ದರಿಂದ ವಿವಾಹದ ಪ್ರಸ್ತಾಪ ಹಾಗೂ ಒಪ್ಪಿಗೆ ಎರಡೂ ಔಪಚಾರಿಕವಾಗಿ ನಡೆಯುತ್ತವೆ. [೧೨] ಈ ಒಪ್ಪಂದವನ್ನು ಬರವಣಿಗೆಯ ರೂಪಕ್ಕೆ ಇಳಿಸಬೇಕಾದ ಅಗತ್ಯವಿರುವುದಿಲ್ಲ. ಖಾಜಿಯೊಬ್ಬರ ಹಾಜರಿಯ ಅಗತ್ಯವೂ ಬೇಕೆಂದಿರುವುದಿಲ್ಲ. ಕೆಲವೊಂದು ಮತೀಯ

ಆಚರಣೆಗಳ ಮೂಲಕ ನೆರೆದಿರುವ ಬಂಧುಗಳ ಸಮಕ್ಷಮದಲ್ಲಿ ಗಂಡು- ಹೆಣ್ಣಿನ ವೈವಾಹಿಕ ಸಂಬಂಧ ತೀರ್ಮಾನಗೊಳ್ಳುತ್ತದೆ. ಸಂಗೀತ- ನೃತ್ಯ ಊಟೋಪಚಾರದೊಂದಿಗೆ ಕಾರ್ಯಕ್ರಮ ನೆರವೇರುತ್ತದೆ. ಮುಸ್ಲಿಂ ವಿವಾಹಕ್ಕೆ ಸಂಬಂಧಿಸಿದಂತೆ ಮೂರು ಅಂಶಗಳು ಬಹಳ ಮುಖ್ಯವಾಗಿವೆ.

೧) **ವಿವಾಹದ ಪ್ರಸ್ತಾಪ ಮತ್ತು ಒಪ್ಪಿಗೆ:** ವಿವಾಹದ ಪ್ರಸ್ತಾಪವನ್ನು ಒಂದು ಕಡೆಯ ಕುಟುಂಬದವರು ಮತ್ತೊಂದು ಕಡೆಯ ಕುಟುಂಬದವರಿಗೆ ಮಾಡುತ್ತಾರೆ. ಇಬ್ಬರು ಪುರುಷರ ಅಥವಾ ಒಬ್ಬ ಪುರುಷ ಮತ್ತು ಇಬ್ಬರು ಸ್ತ್ರೀಯರ ಸಮ್ಮುಖದಲ್ಲಿ ಮಾಡಲಾಗುವ ಈ ಪ್ರಸ್ತಾವಕ್ಕೆ ಅಂದೇ ಅದೇ ಸಭೆಯಲ್ಲಿಯೇ ಒಪ್ಪಿಗೆ ಪಡೆಯಲಾಗುತ್ತದೆ. ವಿವಾಹದ ಪ್ರಸ್ತಾವಕ್ಕೆ ಅದೇ ದಿವಸ ಒಪ್ಪಿಗೆ ದೊರೆಯದೆ ಇನ್ನಾವುದೋ ದಿನ ದೊರಕುವುದಾದರೆ ಅದು ವಿಧಿ ಬದ್ಧವೆನಿಸಿಕೊಳ್ಳುವುದಿಲ್ಲ. (ಕನಿಷ್ಠ ಇಬ್ಬರು ವ್ಯಕ್ತಿಗಳು ಸಾಕ್ಷಿಗಳಂತೆ ವಿವಾಹ ಪ್ರಸ್ತಾಪದ ಸಮಯಕ್ಕೆ ಹಾಜರಿರಬೇಕಾದ ಅಗತ್ಯ ಷಿಯಾ ಪಂಥದವರಲ್ಲಿ ಇರುವುದಿಲ್ಲ.)

೨) **ವಧು ಮತ್ತು ವರರ ದಾಂಪತ್ಯ ನಡೆಸುವ ಸಾಮರ್ಥ್ಯ:** ವಿವಾಹವಾಗಲು ಬಯಸುವ ಗಂಡು - ಹೆಣ್ಣು ದೈಹಿಕವಾಗಿ ಹಾಗೂ ಮಾನಸಿಕವಾಗಿ ದಾಂಪತ್ಯ ಜೀವನ ನಡೆಸಲು ಸಮರ್ಥರಿದ್ದು ಪ್ರಾಪ್ತವಯಸ್ಕರಿರಬೇಕು. ಅಪ್ರಾಪ್ತ ವಯಸ್ಕರಾಗಿದ್ದರೆ ತಂದೆ- ತಾಯಿ ಅಥವಾ ಪೋಷಕರ ಸಮ್ಮತಿ ಪಡೆದು ವಿವಾಹವಾಗಬೇಕು. ನಿಯಮಗಳ ಅಥವಾ ಕಾನೂನಿನ ಅಡಚಣೆಯಿಂದ ಮುಕ್ತವಾಗಿರಬೇಕು: ವಿವಾಹವು ವಿಧಿ ಬದ್ಧವೆನಿಸಿಕೊಳ್ಳಬೇಕಾದರೆ ಅದು ಮುಸ್ಲಿಂ ವೈಯಕ್ತಿಕ ಕಾನೂನು 'ಷರಿಯತ್'ಗೆ ವಿರುದ್ಧವಾಗಿರಬಾರದು. 'ಷರಿಯತ್'ಗೆ ವಿರುದ್ಧವಾಗಿರುವ ವಿವಾಹವನ್ನು ಆ ಸಮಾಜವು ಪರಿಗಣಿಸುವುದಿಲ್ಲ. ಅದೊಂದು ಬಗೆಯ 'ರದ್ದು ವಿವಾಹ' (ತಲಾಕ್ ಬಾಯಿನ್). ಮುಸ್ಲಿಂ ವಿವಾಹವು ಕೆಲವೊಂದು ನಿಯಮಾವಳಿಗೆ ಬದ್ಧವಾಗಿದೆ. ವಿವಾಹಕ್ಕೆ ಸಂಬಂಧಿಸಿದಂತೆ ಕಾನೂನು ರೀತಿಯ ಅನರ್ಹತೆಗಳಾವುವು ಎಂಬುದನ್ನು ಖುರಾನಿನಲ್ಲಿ ಸ್ಪಷ್ಟ ಪಡಿಸಲಾಗಿದೆ. ಅವುಗಳನ್ನು ಉಲ್ಲಂಘಿಸಿದ ವಿವಾಹವು 'ರದ್ದು ವಿವಾಹ' ಎನಿಸಿಕೊಳ್ಳುತ್ತದೆ. ಅದನ್ನು ಕೆಳಗಿನಂತೆ ಪಟ್ಟಿಮಾಡಬಹುದು.

ಅ) ವಿವಾಹದ ಸಂದರ್ಭದಲ್ಲಿ ಪುರುಷನೊಬ್ಬನಿಗೆ ನಾಲ್ಕು ಮಂದಿ ಜೀವಂತವಿರುವ ಆದರೆ ವಿಚ್ಛೇದನ ಕೊಟ್ಟಿರದ ಪತ್ನಿಯರಿದ್ದರೆ ಐದನೇ ವಿವಾಹವಾಗುವಂತಿಲ್ಲ. ಇದಕ್ಕೆ ವಿರುದ್ಧವಾಗಿ ವಿವಾಹವಾದರೆ ಅದು ರದ್ದುಗೊಳ್ಳುತ್ತದೆ.

ಆ) ತಂದೆ- ಮಗಳು, ತಾಯಿ- ಮಗ, ಅಜ್ಜ-ಮೊಮ್ಮಗಳು, ಅಜ್ಜಿ- ಮೊಮ್ಮಗ, ಅಣ್ಣ- ತಂಗಿ, ಸೊಸೆಯ ಜೊತೆ, ಮೊಮ್ಮಗನ ಹೆಂಡತಿಯ ಜೊತೆ, ಮಗಳ ಗಂಡ, ಮಗನ ಹೆಂಡತಿಯ ಜೊತೆ- ಇಂತಹ ತೀರಾ ಸಮೀಪದ ಬಂಧುಗಳ ಜೊತೆ ನಡೆಯುವ ವಿವಾಹಗಳು ರದ್ದುಗೊಳ್ಳುತ್ತವೆ.

ಇ) ಇಸ್ಲಾಂ ಮತವು ಮೂರ್ತಿ ಪೂಜೆಯನ್ನು ಬಲವಾಗಿ ವಿರೋಧಿಸುತ್ತದೆ. ಆದ್ದರಿಂದ ವಿಗ್ರಹಾರಾಧಕರೊಡನೆ ವಿವಾಹವಾಗಕೂಡದೆಂದು ಅದು ನಿರ್ಬಂಧಿಸುತ್ತದೆ. ಮತ್ತು ಅಂತಹ ವಿವಾಹ ರದ್ದುಗೊಳ್ಳುತ್ತದೆ. ಇಸ್ಲಾಂ ಧರ್ಮದ ಪ್ರಕಾರ ಮುಸ್ಲಿಂ ಮಹಿಳೆಯರು ಮುಸ್ಲಿಮೇತರ ಪುರುಷನನ್ನು ವಿವಾಹವಾಗುವಂತಿಲ್ಲ.

ಈ) ಪೋಷಕರ ಅಥವಾ ಹೆತ್ತವರ ಸಮ್ಮತಿಯಿಲ್ಲದೆ ತೀರಾ ಚಿಕ್ಕ ವಯಸ್ಸಿನಲ್ಲಿ ವಿವಾಹವಾಗುವುದನ್ನು ಮತ್ತು ಮಾನಸಿಕ ಸ್ಥಿಮಿತತೆಯನ್ನು ಹೊಂದಿರದ ಅಥವಾ ಬುದ್ಧಿ ಭ್ರಮಣೆ ಹೊಂದಿರುವವರೊಂದಿಗೆ ವಿವಾಹವಾಗುವುದನ್ನು ಇಸ್ಲಾಮಿ ಕಾನೂನು ವಿರೋಧಿಸುತ್ತದೆ.

ಉ) ಗಂಡ ತನ್ನ ಹೆಂಡತಿಗೆ ವಿಚ್ಛೇದನ ನೀಡದೆ ಆಕೆಯ ಸೋದರಿಯನ್ನು ಅಂದರೆ ತನ್ನ ನಾದಿನಿಯನ್ನು ವಿವಾಹವಾಗುವಂತಿಲ್ಲ. ಈ ನಿಯಮದಿಂದ ಮುಸ್ಲಿಮರಲ್ಲಿ ಸೋದರಿಯರು ಸವತಿಯರಾಗುವುದಿಲ್ಲ.

ಊ) ಗಂಡನ ಸಾವಿನಿಂದ ಅಥವಾ ಆತ ನೀಡಿದ 'ತಲ್ಲಾಕ್'ನಿಂದಾಗಿ 'ಇದ್ದತ್'ಅನ್ನು ಪಾಲಿಸಬೇಕಾದ ಮುಸ್ಲಿಂ ಮಹಿಳೆಯು ಆ ಅವಧಿ ಮುಗಿಯುವವರೆಗೂ ಮತ್ತೊಂದು ವಿವಾಹವಾಗುವಂತಿಲ್ಲ.

ಋ) 'ತಲ್ಲಾಕ್' ನೀಡಿದ ಮೇಲೆ ಪತ್ನಿಯಾದವಳು 'ಇದ್ದತ್' ಕಾಲಾವಧಿಯನ್ನು ಮುಗಿಸಬೇಕು. ಆ ಬಳಿಕ ಆಕೆಯನ್ನು ಮತ್ತೊಬ್ಬ ವ್ಯಕ್ತಿ ಒಂದು ದಿನದ ಮಟ್ಟಿಗಾದರೂ ವಿವಾಹವಾಗಿ 'ತಲ್ಲಾಕ್' ನೀಡಬೇಕು. ಪುನಃ 'ಇದ್ದತ್' ಅವಧಿಯನ್ನು ಪೂರೈಸಿಯಾದ ಮೇಲೆ ಮಾತ್ರ ಆಕೆಯನ್ನು ಮೊದಲ ಗಂಡ ಮರು ವಿವಾಹವಾಗಬಹುದು.

ಮುಸ್ಲಿಂಮರ ವಿವಾಹದೊಂದಿಗೆ ಸೇರಿಕೊಂಡಿರುವ ಒಂದು ಆಚರಣೆ ಎಂದರೆ, ಮೆಹರ್. ಇದು ವರನು ಕೊಡಬೇಕಾದ ಕನ್ಯಾಶುಲ್ಕ. ಮೆಹರ್ (ಹಣ- ಶುಲ್ಕ- ಕಾಣಿಕೆ) ಇಷ್ಟೇ ಇರಬೇಕೆಂಬ ನಿಯಮವಿಲ್ಲ. ಅದು ವಧುವಿನ ವಯಸ್ಸು, ಸೌಂದರ್ಯ, ಸಾಮರ್ಥ್ಯ, ಕೌಟುಂಬಿಕ ಸ್ಥಾನಮಾನ, ವಂಶ, ಮತ್ತಿತ್ತರ ಅಂಶಗಳನ್ನು ಹೊಂದಿಕೊಂಡಿರುತ್ತದೆ.

ಮುಸ್ಲಿಮರಲ್ಲಿ ವಿವಾಹ ವಿಚ್ಛೇದನದ ಒಂದು ಕ್ರಮವೇ 'ತಲ್ಲಾಕ್'. ಇದರ ಅರ್ಥ 'ಪರಿತ್ಯಜನೆ'. ಇಲ್ಲಿ ಗಂಡನಾದವನು ಹೆಂಡತಿಯನ್ನು ಪರಿತ್ಯಾಗ ಮಾಡುತ್ತಾನೆ. ಇದರ ಸಂಕೇತವಾಗಿ 'ತಲ್ಲಾಕ್' ಎಂಬ ಶಬ್ದವನ್ನು ಗಂಡನು ಮೂರು ಬಾರಿ ಉಚ್ಚರಿಸಿ ಹೆಂಡತಿಗೆ ವಿವಾಹ ವಿಚ್ಛೇದನ ನೀಡಬಹುದಾಗಿದೆ. ಈ ರೀತಿಯಲ್ಲಿ ವಿಚ್ಛೇದನ ನೀಡುವ ಏಕಪಕ್ಷೀಯವಾದ ಹಾಗೂ ಪರಿಪೂರ್ಣವಾದ ಹಕ್ಕು ಗಂಡನಿಗೆ ಮಾತ್ರ ಇರುತ್ತದೆ. ಖುರಾನಿನಲ್ಲಿ 'ತಲಾಕ್' ನೀಡುವ ಕ್ರಮ, 'ತಲ್ಲಾಕ್' ಕೊಡಲಾದ ಹೆಂಡತಿ ಮತ್ತು ಮಕ್ಕಳ ಬಗೆಗಿನ ವಿಚಾರಗಳಲ್ಲಿ ಗಂಡನ ಆರ್ಥಿಕ ಸ್ಥಿತಿ, ಜವಾಬ್ದಾರಿಗಳು ಮತ್ತಿತರ ಅಂಶಗಳ ಬಗ್ಗೆ ಹೆಚ್ಚಿನ ವಿವರಗಳು ದೊರೆಯುತ್ತವೆಯೇ ಹೊರತು ಗಂಡನಿಗೆ ಯಾವ ಕಾರಣದಿಂದಾಗಿ ಇಂತಹ ವಿಶೇಷ ಹಕ್ಕನ್ನು ನೀಡಲಾಗಿದೆ. ಮತ್ತು ಯಾವ ಸಂದರ್ಭದಲ್ಲಿ 'ತಲ್ಲಾಕ್' ನೀಡಬಹುದು ಎಂಬುದರ ಬಗ್ಗೆ ಖುರಾನಿನಲ್ಲಿ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಇದಕ್ಕೆ ಸಂಬಂಧಿಸಿದ ವಿವರಗಳು ಕುರ್‌ಆನ್‌ನ ಎರಡನೇ ಅಧ್ಯಾಯವಾದ 'ಅಲ್‌ಬಕರ:'ದಲ್ಲಿ ಸಿಗುತ್ತವೆ. ಇದಗಲ್ಲಿ ತಲಾಕಿನ ಕುರಿತು ಸಿಗುವ ಶ್ಲೋಕ ೨೩೭ರಿಂದ ತೊಡಗಿ ತಲಾಕ್ ಬಾಯಿನ್‌ನ ಕುರಿತಂತೆ ಇರುವ ೨೪೯ರವರೆಗಿನ ಶ್ಲೋಕಗಳು ವಿವರಗಳ ಅಧಿಕೃತತೆಯನ್ನು ದೃಢಪಡಿಸುತ್ತವೆ.

## ೨.೩. ಆಧುನಿಕ ಸಮಾಜದಲ್ಲಿ ವಿವಾಹದ ಪದ್ಧತಿ :

ಇಂಡಿಯಾದ *೨೩ ಇತ್ತೀಚಿನ ವರ್ಷಗಳಲ್ಲಿ ಅದರಲ್ಲಿಯೂ ಸ್ವಾತಂತ್ರ್ಯಾ ನಂತರದಲ್ಲಿ ಸಾಮಾಜಿಕ ಪದ್ಧತಿಗಳಲ್ಲಿ ಪ್ರಮುಖವಾದ ವಿವಾಹ ಪದ್ಧತಿಗಳಲ್ಲಿ ಗಣನೀಯವಾದ ಪರಿವರ್ತನೆಗಳಾಗಿವೆ.

ಭಾರತೀಯ ವಿವಾಹ ಪದ್ಧತಿಗಳ ಮೂಲ ಸ್ವರೂಪ ಮತ್ತು ಅದರ ಹಿಂದಿನ ಮೂಲಭೂತ ಭಾವನೆಗಳು ಹಾಗೂ ನಂಬಿಕೆಗಳು ಬದಲಾಗದೇ ಇದ್ದರೂ ಅದಕ್ಕೆ ಸಂಬಂಧಿಸಿದ ಆಚರಣೆ ಹಾಗೂ ನಿಯಮಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ.



ಪರಂಪರಾಗತ ವಿವಾಹ ಪ್ರಕಾರಗಳು (ಆರ್ಶ, ದೈವ, ಬ್ರಹ್ಮ, ರಾಕ್ಷಸ, ಪೈಶಾಚ ಇತ್ಯಾದಿ) ಈಗ ಜಾರಿಯಲ್ಲಿಲ್ಲ. ಪರಿಷ್ಕೃತ 'ಬ್ರಹ್ಮ ವಿವಾಹ'ವು ಮಾತ್ರ ಆಚರಣೆಯಲ್ಲಿದೆ. ಗಂಡು- ಹೆಣ್ಣುಗಳು ಪರಸ್ಪರ ಪ್ರೀತಿಸಿ ಮದುವೆಯಾಗುವ ಹಾಗೂ ತಂದೆ ತಾಯಿಗಳು ಇದನ್ನು ಒಪ್ಪಿಕೊಳ್ಳುವ ವಿವಾಹ ಪ್ರಕರಣಗಳು ಹೆಚ್ಚಾಗುತ್ತಿವೆ. ಇದನ್ನು 'ಪ್ರೇಮ ವಿವಾಹ' ವೆಂದು ಕರೆಯಲಾಗುತ್ತದೆಯೇ ವಿನಃ ಗಂಧರ್ವ ವಿವಾಹ ಎಂದು ಪರಿಗಣಿಸುವುದಿಲ್ಲ. ವಿವಾಹದ ವಯಸ್ಸಿಗೆ ಸಂಬಂಧಿಸಿದಂತೆ ಮಹತ್ವದ ಬದಲಾವಣೆಗಳಾಗಿವೆ. 'ಬಾಲ್ಯವಿವಾಹ'ಗಳು ಕಾನೂನಿನ ಪ್ರಕಾರ ಮರೆಯಾಗಿವೆ ಎಂದು ಹೇಳಬಹುದು. .೨೪ ಆರ್ಥಿಕ ಒತ್ತಡ, ಸಾಮಾಜಿಕ ಅಗತ್ಯತೆ ಹಾಗೂ ಶಾಸನಾತ್ಮಕ ನಿಯಂತ್ರಣದಿಂದಾಗಿ ಬಾಲ್ಯವಿವಾಹದ ಬದಲು ಪ್ರೌಢ ವಿವಾಹಗಳೇ ಹೆಚ್ಚಾಗಿ ಕಾಣಬರುತ್ತಿವೆ. ಕಾನೂನಿನ ಕಣ್ಣಿಗೆ ಬೀಳದಂತೆ ಅನಕ್ಷರಸ್ಥರಲ್ಲಿ, ಪರಿಶಿಷ್ಟ ಜನಾಂಗಗಳಲ್ಲಿ ಮತ್ತು ಬುಡಕಟ್ಟು ಜನಾಂಗಗಳಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದು ಜಾರಿಯಲ್ಲಿದೆ. ಮೇಲ್ಜಾತಿಗಳಲ್ಲಿ ಹಾಗೂ ಶಿಕ್ಷಿತರಲ್ಲಿ ಅದು ಸಂಪೂರ್ಣವಾಗಿ ನಿಂತು ಹೋಗಿದೆ ಎಂದು ಹೇಳಲು ಕೂಡ ನಿಖರವಾದ ಆಧಾರಗಳಿಲ್ಲ. ವಿವಾಹದಲ್ಲಿನ ಆಯ್ಕೆಗೆ ಸಂಬಂಧಿಸಿದಂತೆ ಈಗ ಹಿರಿಯರಿಂದ 'ಪೂರ್ವ ವ್ಯವಸ್ಥಾಪಿತವಾದ ವಿವಾಹಗಳು' ನಡೆಯುವುದು ಅಪರೂಪವಾಗಿದೆ. ಜೀವನ ಸಂಗಾತಿಗಳ ಆಯ್ಕೆಯಲ್ಲಿ ಹೆಣ್ಣು - ಗಂಡಿಗೆ ಹೆಚ್ಚಿನ ಸ್ವಾತಂತ್ರ್ಯ ದೊರೆತಿದೆ. ಗೋತ್ರ ಜಾತಕಗಳ ಹೊಂದಾಣಿಕೆಯಂತಹ ರೂಢಿಗಳಿದ್ದರೂ ತಮ್ಮ ಮಕ್ಕಳ ಪೂರ್ವ ಸಮ್ಮತಿಯಿಲ್ಲದೆ ತಂದೆ- ತಾಯಿಯರು ವಿವಾಹ ಕಾರ್ಯದಲ್ಲಿ ಮುಂದಡಿ ಇಡುವುದು ವಿರಳವಾಗಿದೆ. ಸ್ತ್ರೀಯರ ಶಿಕ್ಷಣ, ಸ್ತ್ರೀಯರ ಆರ್ಥಿಕ ಸ್ವಾವಲಂಬನೆಗಳು, ಉದ್ಯೋಗದಲ್ಲಿ ಸ್ತ್ರೀ- ಪುರುಷರ ಸಹಭಾಗಿತನ ಹಾಗೂ ಸ್ತ್ರೀ- ಪುರುಷ ಸಮಾನತೆಯ ಕಲ್ಪನೆಗಳ ಪ್ರಭಾವ ಇವುಗಳಿಂದಾಗಿ ಜೀವನ ಸಂಗಾತಿಯ ಪ್ರಶ್ನೆ ಕೇವಲ ಗಂಡಿನದ್ದು ಮಾತ್ರವಾಗಿರದೆ, ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ವಿಚಾರವಾಗಿದೆ. ವಿವಾಹದ ವಿಧಿ ವಿಧಾನಗಳಲ್ಲಿ ಕೂಡ ಅನೇಕ ಬದಲಾವಣೆಗಳು ಕಂಡು ಬರುತ್ತಿವೆ. ವಾಗ್ದಾನ, ಕನ್ಯಾದಾನ, ಪ್ರಾಣಿಗ್ರಹಣ, ಸಪ್ತಪದಿ, ಮಾಂಗಲ್ಯಧಾರಣ- ಮುಂತಾದವು ಸಾಂಕೇತಿಕ ರೂಪದಲ್ಲಿ ಆಚರಣೆಯಲ್ಲಿವೆ. ವಿವಾಹ ಸಮಾರಂಭಕ್ಕೆ ಸಂಬಂಧಿಸಿದಂತೆ ಹಲವು ಆಚರಣೆಗಳನ್ನು ಕೈಬಿಡಲಾಗಿದೆ. ಮೂರು - ನಾಲ್ಕು ದಿನ ನಡೆಯುವ ವಿವಾಹ ಸಮಾರಂಭ ಅನುಕೂಲದ ದೃಷ್ಟಿಯಿಂದ ಒಂದು ದಿನಕ್ಕೆ, ಕೆಲವೇ ಗಂಟೆಗಳಿಗೆ ಸೀಮಿತಗೊಂಡಿದೆ. ಕೆಲವು ಧಾರ್ಮಿಕ ವಿಧಿಗಳನ್ನು ಬಿಟ್ಟರೆ ಉಳಿದಂತೆ ಭಾರತೀಯ ವಿವಾಹವು ಹೆಚ್ಚು ಹೆಚ್ಚು ಸಾಮಾಜಿಕ ರೂಪವನ್ನು ತಳೆಯುತ್ತಿವೆ.

ಭಾರತೀಯ ವಿವಾಹಗಳಲ್ಲಿ ಇಂದಿಗೂ ಜಾತಿಯ ಪ್ರಭಾವ ಗಾಢವಾಗಿದೆ. ಬಹುತೇಕ ವಿವಾಹಗಳು 'ಒಳಪಂಗಡ' ವಿವಾಹಗಳೇ ಆಗಿವೆ. ಜಾತಿಯ ಚೌಕಟ್ಟಿನ ಹೊರಗೆ ವಿವಾಹವಾಗುವುದು ಇಂದಿಗೂ ಸಾಮಾನ್ಯ ಅಂಶವಾಗಿಲ್ಲ. ಆದರೆ, ಒಂದೇ ಜಾತಿಯ ಹಲವು ಉಪಜಾತಿಗಳನ್ನು ಈಗ ಅಲಕ್ಷಿಸಲಾಗುತ್ತಿದೆ. ವಿಭಿನ್ನ ಉಪಜಾತಿಗಳ ನಡುವೆ ವಿವಾಹವಾಗುವುದು ಈಗ ಸಾಮಾನ್ಯವಾದ

ಸಂಗತಿಯಾಗಿದೆ. ಜಾತಿಯ ಪರಿಧಿಯೊಳಗೆ ವರನನ್ನು ಹುಡುಕಬೇಕಾದ ಅನಿವಾರ್ಯತೆಯು 'ವರದಕ್ಷಿಣೆ'ಯಂತಹ ಪಿಡುಗಿಗೆ ಮತ್ತಷ್ಟು ಒತ್ತಾಸೆಯನ್ನು ನೀಡಿದೆ. ವಿವಾಹದ ಸ್ವರೂಪ, ರೀತಿ ನೀತಿಗಳು ಹಾಗೂ ವಿಧಿ ವಿಧಾನಗಳು ಜಾತಿ ಜಾತಿಗಳಿಗೆ ಬೇರೆಯೇ ಆಗಿವೆ. 'ಸಂಸ್ಕೃತೀಕರಣ'ದ ಪ್ರಭಾವದಿಂದ ಮೇಲ್ಜಾತಿಗಳ ವಿವಾಹದ ಕ್ರಮಗಳನ್ನು ಅನುಕರಣೆ ಮಾಡುವ ಪ್ರವೃತ್ತಿ ತೀರಾ ಹೆಚ್ಚಿದೆ. ಸರಕಾರದ ಸಾಮಾಜಿಕ ಶಾಸನಗಳ ಪ್ರಭಾವದಿಂದ ಹಿಂದೂ ವಿವಾಹದ ಹಲವಾರು ಕ್ಲಿಷ್ಟತೆಗಳು, ಬಲವಾದ ಕಟ್ಟುಪಾಡುಗಳು, ಹಾಗೂ ದೋಷಗಳು ನಿವಾರಣೆಗೊಂಡಿವೆ. 'ಬಾಲ್ಯವಿವಾಹ' ಮತ್ತು 'ಸತೀ ಪದ್ಧತಿ'ಗಳು ಕಣ್ಮರೆಯಾಗುತ್ತಿವೆ. *೧೫ ವಿಧವಾ ಪುನರ್ವಿವಾಹದ ಕಾಯ್ದೆಯಿಂದ ವಿಧವೆಯರ ಸ್ಥಿತಿಯಲ್ಲಿ ಸಾಕಷ್ಟು ಸುಧಾರಣೆಗಳಾಗಿವೆ.*೧೬ ಅಂತರ್ಜಾತಿಯ ವಿವಾಹವನ್ನು ಕಾನೂನು ಮೂಲಕ ಸಕ್ರಮಗೊಳಿಸಲಾಗಿದೆ. ಅಂತರ್ಜಾತಿಯ ವಿವಾಹ ವರದಕ್ಷಿಣೆಯ ಸಮಸ್ಯೆಗೂ ಒಂದು ಪರಿಹಾರ ಎಂದು ಭಾವಿಸಲಾಗಿದೆ. ಸ್ತ್ರೀಯರಿಗೆ ಆಸ್ತಿಯಲ್ಲಿ ಹಕ್ಕು ನೀಡಿರುವುದರಿಂದ ವಿವಾಹ ನಿರ್ಧಾರದಲ್ಲಿ ಅವರ ವೈಯಕ್ತಿಕ ಅಭಿಪ್ರಾಯ- ಅನಿಸಿಕೆ ತೀರ್ಮಾನಗಳಿಗೆ ಮನ್ನಣೆ ದೊರೆತಿದೆ. ವಿವಾಹ ವಿಚ್ಛೇದನದ ಹಕ್ಕನ್ನು ಸ್ತ್ರೀ- ಪುರುಷರೀರ್ವರಿಗೂ ಸಮಾನವಾಗಿ ನೀಡಲಾಗಿರುವುದರಿಂದ ವಿವಾಹಿತ ಸ್ತ್ರೀಯರ ಶೋಷಣೆಯೂ ಸಾಕಷ್ಟು ಕಡಿಮೆಯಾಗಿದೆ.

ಆಧುನಿಕ ಶಿಕ್ಷಣ ಹಾಗೂ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವು ಭಾರತೀಯ ಜನಜೀವನದ ಮೇಲಾದಂತೆ ವಿವಾಹದಂತಹ ಸಂಸ್ಥೆಯ ಮೇಲೂ ಆಗಿದೆ. ವೈಚಾರಿಕತೆ, ವೈಜ್ಞಾನಿಕತೆ, ವ್ಯಕ್ತಿವಾದ, ಲಿಂಗ ಸಮಾನತೆ, ಪ್ರಜಾ ಪ್ರಭುತ್ವ- ಮುಂತಾದ ವಿಚಾರಗಳು ಯುವ ಜನಾಂಗದ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿವೆ. ಇದರಿಂದಾಗಿ ಆಧುನಿಕ ಯುವಕ- ಯುವತಿಯರು ತಾವು ಯಾವಾಗ, ಯಾರನ್ನು, ಹೇಗೆ ವಿವಾಹವಾಗಬೇಕು ಎಂಬ ಬಗ್ಗೆ ತಮ್ಮದೇ ಆದ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗಿದೆ. ವಿವಾಹದ ನಿರ್ಣಯದಲ್ಲಿ ಈ ರೀತಿಯ ವೈಯಕ್ತಿಕತೆ ಬೆಳೆಯುತ್ತಿದ್ದರೂ ಕೌಟುಂಬಿಕ ಮೌಲ್ಯಗಳು ಜೀವನದಲ್ಲಿ ಬಹಳ ಆಳವಾಗಿ ಬೇರೂರಿರುವುದರಿಂದ ಕೇವಲ ಸ್ವಂತ ಸುಖ ಅಪೇಕ್ಷೆಗಳನ್ನೇ ಪ್ರಧಾನವಾಗಿಟ್ಟುಕೊಂಡು ವಿವಾಹವಾಗುವವರ ಸಂಖ್ಯೆ ತೀರಾ ಕಡಿಮೆ ಎಂದು ಹೇಳಬೇಕು.

ಒಟ್ಟಿನಲ್ಲಿ ಸ್ಥಾಪಿತ ಸಾಮಾಜಿಕ ಸಂಸ್ಥೆಯಾಗಿರುವ ವಿವಾಹವು ಸದೃಢವಾಗಿಯೇ ಇದೆ. ಹಿಂದೂ, ಮುಸ್ಲಿಂ ಅಥವಾ ಬುಡಕಟ್ಟು ಯಾವುದೇ ಜನಾಂಗಗಳ ವೈವಾಹಿಕ ಮೌಲ್ಯಗಳ ಕುರಿತು ಯೋಚಿಸುವಾಗಲೂ, ಮೌಲ್ಯಗಳ ಬಗೆಗಿನ ಭಾವನಾತ್ಮಕ ಬದ್ಧತೆ ಈ ಹಿಂದಿನಂತೆ ಬಲವಾಗಿಲ್ಲದೇ ಇದ್ದರೂ ಶಿಥಿಲವಾಗಿಲ್ಲ. ವಿವಾಹ ಪೂರ್ವ ಹಾಗೂ ವಿವಾಹೇತರ ಲೈಂಗಿಕ ಸಂಬಂಧಗಳನ್ನು ಬಲವಾಗಿ ಖಂಡಿಸಲಾಗುತ್ತದೆ. ಸ್ತ್ರೀಯರ ಶಿಕ್ಷಣ ಮತ್ತು ಉದ್ಯೋಗಾರ್ಹತೆಗಳು ಪತಿ- ಪತ್ನಿಯರ ಸಂಬಂಧಗಳಲ್ಲಿ ಅಲ್ಪ ಪ್ರಮಾಣದ ಬದಲಾವಣೆಯನ್ನು ಉಂಟುಮಾಡಿವೆಯಾದರೂ, ಅದರಿಂದ ಅವರ ದಾಂಪತ್ಯ ಜೀವನದಲ್ಲಿ ಆತಂಕ ಉಂಟಾಗಿದೆ ಎನ್ನುವ ಹಾಗಿಲ್ಲ. ಒಂಟಿ ಜೀವನ ನಡೆಸಲು ಸಾಕಷ್ಟು ಅನುಕೂಲ ಅವಕಾಶಗಳು ಇವೆಯಾದರೂ, ವೈವಾಹಿಕ ಬದುಕಿಗೆ ಹೆಚ್ಚಿನ ಮಾನ್ಯತೆ ನೀಡಲಾಗಿದೆ. ವಿವಾಹವಾಗದೇ ಉಳಿಯುವವರ ಸಂಖ್ಯೆ ಕಡಿಮೆ ಇದೆ. ಹಳ್ಳಿಗಳಲ್ಲಂತೂ ಅತೀ ವಿರಳವೆಂದೇ ಹೇಳಬೇಕಾಗುತ್ತದೆ. ಈ ಎಲ್ಲ ಕಾರಣದಿಂದ

ಭಾರತದ ಜನ ಸಮುದಾಯವು ಅನಿವಾರ್ಯವೆಂದು ಒಪ್ಪಿಕೊಂಡ ಸಾಮಾಜಿಕ ಸಂಸ್ಥೆ ವಿವಾಹ ಮತ್ತು ಕುಟುಂಬ ಎಂದು ನಿರ್ಣಯಿಸುವುದು ತಪ್ಪಾಗಲಾರದು.

## ೧.೪ ವಿವಾಹದ ರಚನೆ :

ವಿವಾಹದ ರಚನೆಯನ್ನು ಆಯಾಯ ಸಮಾಜಗಳಿಗೆ ಅನ್ವಯಗೊಳಿಸಿ, ಆಂತರಿಕ-ಒಳರಚನೆಯ ವಿವಾಹ ಮತ್ತು ಬಾಹ್ಯ ಹೊರ ರಚನೆಯ ವಿವಾಹ ಎಂದು ಎರಡು ವಿಭಾಗಗಳಲ್ಲಿ ಚರ್ಚಿಸಬಹುದು.

### ೧.೪.೧ ಆಂತರಿಕ - ಒಳರಚನೆಯ ವಿವಾಹ :

ಆಂತರಿಕ ಒಳರಚನೆಯ ವಿವಾಹದಲ್ಲಿ ವಿವಾಹಾಸಕ್ತ ವ್ಯಕ್ತಿಯು ತನ್ನ ಜೀವನ ಸಂಗಾತಿಯನ್ನು ತನ್ನ ಜಾತಿ ಗುರುತಿನ, ಪಂಗಡ ಅಥವಾ ಸಮೂಹದ ಒಳಗಡೆಯೇ ಆಯ್ಕೆ ಮಾಡಬೇಕಾಗುತ್ತದೆ. ಆದ್ದರಿಂದ ಇದನ್ನು ಒಳಬಾಂಧವ್ಯ ಅಥವಾ ಒಳ ಪಂಗಡ- (Endogamy) ವಿವಾಹ ಎಂದು ಕರೆಯಬಹುದು. ಇದು ಪಂಗಡದೊಳಗೆ ನಡೆಯುವ ವಿವಾಹವಾಗಿರುವುದರಿಂದ ಆಯಾಯ ಪಂಗಡದ ಹೊರಗೆ ಅಥವಾ ಬೇರೊಂದು ಜಾತಿ ಸಮೂಹಕ್ಕೆ ಸೇರಿದ ವ್ಯಕ್ತಿಯನ್ನು ಈ ನಿಯಮದಂತೆ ವಿವಾಹವಾಗುವಂತಿಲ್ಲ. ಹಿಂದೂ ಸಮುದಾಯವನ್ನು ಗಮನಿಸಿ ಹೇಳುವುದಾದರೆ, ಇದು ಹಲವಾರು ಜಾತಿ ಸಮೂಹಗಳಿಂದ ಕೂಡಿದ್ದು ಪ್ರತಿಯೊಂದು ಜಾತಿಯೂ ಒಳಪಂಗಡ ವಿವಾಹಕ್ಕೆ ಬದ್ಧವಾಗಿದೆ. ಅಂತೆಯೇ ಜಾತಿಯೊಳಗಿನ, ಉಪಜಾತಿಯ ಒಳಗಿನ ವಿವಾಹ ಆಯಾ ಉಪಜಾತಿಗೆ ಬದ್ಧವಾಗಿದೆ. ಜಾತಿ, ಉಪಜಾತಿ, ವರ್ಗ, ಬುಡಕಟ್ಟು, ಧಾರ್ಮಿಕ ಸಮೂಹ, ಗ್ರಾಮ ಮುಂತಾದ ವಿಭಾಗ ಮನ್ನಣೆಯನ್ನು ಈ ಆಂತರಿಕ-ಒಳರಚನೆಯ ವಿವಾಹದಲ್ಲಿ ಕಾಣಬಹುದು. ಉದಾಹರಣೆ ಹೇಳುವುದಾದರೆ, ಈ ರಚನೆಯ ವಿವಾಹ ನಿಯಮದಂತೆ ಬ್ರಾಹ್ಮಣ ಜಾತಿಗೆ ಸೇರಿದ ವ್ಯಕ್ತಿಯು ಬ್ರಾಹ್ಮಣ ಜಾತಿಯಲ್ಲಿಯೇ ಮದುವೆಯಾಗಬೇಕು. ಲಿಂಗಾಯಿತ ಜಾತಿಗೆ ಸೇರಿದ ವ್ಯಕ್ತಿಯು ಲಿಂಗಾಯಿತ ಜಾತಿಯವರನ್ನು, ಒಕ್ಕಲಿಗ- ಒಕ್ಕಲಿಗ ಜಾತಿಯ ಒಳಗೆ ವಿವಾಹವಾಗಬೇಕು. ಉಪಜಾತೀಯ ವಿವಾಹದಲ್ಲಿ ಈ ಆಯ್ಕೆಯು ಉಪಜಾತಿಗೆ ಮಾತ್ರ ಸೀಮಿತವಾಗಿರುವುದು (ಬ್ರಾಹ್ಮಣರಲ್ಲಿ ಕೋಟ ಜಾತಿಗೆ ಸೇರಿದ ವ್ಯಕ್ತಿ ಕೋಟ ಜಾತಿಗೆ ಸೇರಿದವರನ್ನೇ ವಿವಾಹವಾದರೆ, ಹವ್ಯಕರು ಹವ್ಯಕರನ್ನೇ ವಿವಾಹವಾಗಬೇಕು ಗಂಗಡಿಗಾರ್ ಉಪಜಾತಿಗೆ ಸೇರಿದ ಒಕ್ಕಲಿಗನು ಅದೇ ಉಪಜಾತಿಯ ಒಳಗೆ ವಿವಾಹವಾಗಬೇಕು.)

**ಆಂತರಿಕ ಒಳರಚನೆಯ ವಿವಾಹದ ಕಾರಣಗಳು :** ಆಂತರಿಕ ಒಳರಚನೆಯ ವಿವಾಹಕ್ಕೆ ಕಾರಣವಾಗುವ ಹಲವು ಅಂಶಗಳನ್ನು ನಾವು ಗುರುತಿಸಬಹುದು. ಅವುಗಳೆಂದರೆ, ತಾವು ಇತರರಿಗಿಂತ ಪ್ರತ್ಯೇಕವಾಗಿರಬೇಕು, ಭಿನ್ನವಾಗಿ ಇರಬೇಕೆಂಬ ಬಯಕೆ. ತಮ್ಮ ಆಸ್ತಿಯನ್ನು ತಮ್ಮ ಪಂಗಡದೊಳಗೇ ಉಳಿಸಿಕೊಳ್ಳಬೇಕೆಂಬ ಬಯಕೆ. ಮತ್ತೊಂದು ಸಮೂಹದ ಬಗೆಗಿನ ಕೀಳರಿಮೆ. ಅಥವಾ ಮೇಲರಿಮೆಯ ಭಾವನೆಗಳು. ಇವು ಒಳರಚನೆಯ ವಿವಾಹಕ್ಕೆ ಪ್ರೇರಕ ಅಂಶಗಳೆಂದು ಗುರುತಿಸಬಹುದು.

**ಆಂತರಿಕ ಒಳರಚನೆಯ ವಿವಾಹದ ಅನುಕೂಲತೆಗಳು :**

ಒಳರಚನೆಯ ವಿವಾಹವು ಸಮೂಹದ ಐಕ್ಯ ಹಾಗೂ ಏಕತೆಗೆ ಕಾರಣವಾಗುವುದು. ಸಮೂಹದ ಆಸ್ತಿಯು ಸಮೂಹದೊಳಗೆ ಉಳಿಯುವುದು. ಸಮೂಹದ ಸಾಮರ್ಥ್ಯ ಹಾಗೂ ದೌರ್ಬಲ್ಯಗಳು ಇತರರ ಗಮನಕ್ಕೆ ಬಾರದಂತೆ ಗೋಪ್ಯವಾಗಿಡಲು ಸಹಾಯ ಮಾಡುವುದು. ವೃತ್ತಿಪರ ಉದ್ಯಮದ ರಹಸ್ಯವನ್ನು ಗೋಪ್ಯವಾಗಿಡುವುದಕ್ಕೂ ಈ ವಿವಾಹ ಪದ್ಧತಿ ಸಹಕಾರಿಯಾಗಿದೆ. ಮೇಲಿನ ಎಲ್ಲ ಅಂಶಗಳು ಆಂತರಿಕ ಒಳರಚನೆಯ ವಿವಾಹದ ಅನುಕೂಲತೆಗಳಾಗಿವೆ.

**ಆಂತರಿಕ ಒಳರಚನೆಯ ವಿವಾಹದ ಅನಾನುಕೂಲತೆಗಳು :**

ಈ ವಿವಾಹವು ಸಮಾಜವನ್ನು ಹಲವಾರು ಒಳ ಪಂಗಡಗಳಾಗಿ ಒಡೆಯುವುದರಿಂದ ವ್ಯಕ್ತಿಗಳಲ್ಲಿ ಪ್ರತ್ಯೇಕತೆಯ ಸಂಕುಚಿತ ಭಾವನೆಯನ್ನು ಬೆಳೆಸುತ್ತದೆ. ಅಲ್ಲದೆ, ರಾಷ್ಟ್ರೀಯ ಐಕ್ಯತೆಗೆ ಇಂತಹ ಮನೋಭಾವದ ಬೆಳವಣಿಗೆ ಮಾರಕವಾಗಿ ಪರಿಣಮಿಸುತ್ತದೆ. ಸಂಗಾತಿಗಳ ಆಯ್ಕೆಯ ಕ್ಷೇತ್ರವು ತೀರಾ ಸೀಮಿತವಾಗಿರುತ್ತದೆ. ಇದರಿಂದಾಗಿ ಕನ್ಯಾಶುಲ್ಕ ವರದಕ್ಷಿಣೆಯಂತಹ ಪಿಡುಗು ಜೀವಂತವಾಗಿ ಉಳಿಯಲು ಕಾರಣವಾಗಿದೆ.

ಅತಿ ಸಮೀಪವರ್ತಿಗಳಲ್ಲಿ ತೀರಾ ಹತ್ತಿರದ ರಕ್ತಸಂಬಂಧಿಗಳ ಜೊತೆ ವಿವಾಹವು ಜರುಗುವುದರಿಂದ ಹುಟ್ಟುವ ಮಕ್ಕಳಲ್ಲಿ ಜೈವಿಕ ಕ್ಷಮತೆಯ ಕೊರತೆ ಪ್ರಬಲವಾಗುತ್ತದೆ. ಈ ಪ್ರಮುಖ ಕಾರಣಗಳು ಆಂತರಿಕ ಒಳರಚನೆಯ ವಿವಾಹದ ಅನಾನುಕೂಲತೆಗಳಾಗಿವೆ. ಇದರಿಂದಾಗಿ ಆಧುನಿಕ ಜನಾಂಗವು ಒಳರಚನೆಯ ವಿವಾಹಕ್ಕಿಂತಲೂ ಹೊರ ರಚನೆಯ ವಿವಾಹವನ್ನೇ ಹೆಚ್ಚಾಗಿ ಪ್ರೋತ್ಸಾಹಿಸುತ್ತದೆ.

**೨.೪.೨ ಬಾಹ್ಯ ಹೊರ ರಚನೆಯ ವಿವಾಹ :**

ಬಾಹ್ಯ- ಹೊರ ರಚನೆಯ ವಿವಾಹದಲ್ಲಿ ಒಳಪಂಗಡ ವಿವಾಹಕ್ಕೆ ಅವಕಾಶವಿಲ್ಲ. ಒಳಪಂಗಡ ವಿವಾಹಕ್ಕೆ ವಿರುದ್ಧವಾದ ನಿಯಮಗಳನ್ನು ಹೊರ ರಚನೆಯ ವಿವಾಹದಲ್ಲಿ ಕಾಣಬಹುದಾಗಿದೆ. ಇಲ್ಲಿ ಸಗೋತ್ರ- ಸಪ್ರವರ ಮತ್ತು ಸಪಿಂಡ ವಿವಾಹವನ್ನು ನಿಷೇಧಿಸಲಾಗಿದೆ. ಮಾನವ ಶಾಸ್ತ್ರಜ್ಞ ರಿಸ್ಲೆ (Risley) ಗುರುತಿಸುವಂತೆ:

೧) ವ್ಯಕ್ತಿಯು ತಾನು ಇತರರಿಗಿಂತ ಭಿನ್ನ ಎಂದು ತೋರಿಸಿಕೊಳ್ಳಲು ಬಾಹ್ಯ- ಹೊರ ರಚನೆಯ ವಿವಾಹವಾಗಬಹುದು.

೨) ನಿಕಟ ಸ್ನೇಹ ಹಾಗೂ ಸಲಿಗೆ ಇರುವವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದರಿಂದ ತಮ್ಮನ್ನು ತಾತ್ಸಾರದಿಂದ ನೋಡಬಹುದು ಎಂಬ ಭಯದಿಂದಲೂ ಹೊರ ಬಾಂಧವ್ಯ ವಿವಾಹವನ್ನು ಇಷ್ಟ ಪಡುವುದುಂಟು.

೩) ಸಮೀಪವರ್ತಿಗಳಲ್ಲಿ ವಿವಾಹವಾಗುವುದರಿಂದ ಹುಟ್ಟುವ ಮಕ್ಕಳ ಜೈವಿಕ ಕ್ಷಮತೆ ಕಡಿಮೆಯಾಗುವುದೆಂಬ ಬಲವಾದ ನಂಬಿಕೆಯಿಂದಲೂ ಕೂಡ ಬಾಹ್ಯ- ಹೊರ ರಚನೆಯ ವಿವಾಹಗಳು ಜರುಗುತ್ತವೆ. (Samuel Rapport and Helen Wright (Edi) :1968 ;146)

ಬಾಹ್ಯ - ಹೊರ ರಚನೆಯ ವಿವಾಹದಲ್ಲಿಯೇ ನಾವು ಅನುಲೋಮ ಮತ್ತು ಪ್ರತಿಲೋಮ ವಿವಾಹಗಳನ್ನು ಗುರುತಿಸಬಹುದು (Hypergamous and Hypogamous Marriages).

**೨.೪.೩ ಅನುಲೋಮ ವಿವಾಹ :** ಅನುಲೋಮ ವಿವಾಹವೆಂದರೆ, ಮೇಲುಜಾತಿಯ ಪುರುಷನು ಕೆಳಜಾತಿಯ ಸ್ತ್ರೀಯನ್ನು ವಿವಾಹವಾಗುವುದು. ಈ ಬಗೆಯ ವಿವಾಹವು ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯ ವರ್ಗಗಳವರಿಗೆ ಮಾನ್ಯವಾಗಿತ್ತು. ಬ್ರಾಹ್ಮಣ ತನಗಿಂತ ಕೆಳಗಿನ ಎರಡು ವರ್ಗಗಳಲ್ಲಿ, ಕ್ಷತ್ರಿಯ ತನಗಿಂತ ಕೆಳಗಿನ ವರ್ಗದಲ್ಲಿ ವಿವಾಹವಾಗುವ ಅವಕಾಶವಿತ್ತು. ಆದರೆ, ಪ್ರಾಚೀನ ಸಮಾಜದಲ್ಲಿ ಶೂದ್ರರಿಗೆ ಈ ಅವಕಾಶಗಳು ಇತ್ತು ಎನ್ನುವ ಕುರಿತು ದಾಖಲೆಗಳು ಇದ್ದಂತೆ ಕಂಡು ಬರುವುದಿಲ್ಲ. •೨೭

**೨.೪.೪ ಪ್ರತಿಲೋಮ ವಿವಾಹ** : ಬ್ರಾಹ್ಮಣರನ್ನು ಹೊರತಾಗಿ ಇತರ ಮೂರು ವರ್ಣಗಳಲ್ಲಿ ಯಾವುದೇ ಕೆಳಗಿನ ವರ್ಣದವನು ತನಗಿಂದ ಮೇಲಿನ ವರ್ಣಕ್ಕೆ ಸೇರಿದ (ಉದಾಃ ಶೂದ್ರನು ಬ್ರಾಹ್ಮಣ ಕನ್ಯೆಯನ್ನು ವಿವಾಹವಾಗುವುದು) ಕನ್ಯೆಯನ್ನು ವಿವಾಹವಾಗುವುದನ್ನು ನಿಷೇಧಿಸಲಾಗಿದ್ದು ಇಂತಹ ನಿಷೇಧಿತ ವಿವಾಹ ಕ್ರಮವನ್ನು 'ಪ್ರತಿಲೋಮ' ವಿವಾಹ ಎನ್ನಲಾಗುವುದು.

ಅನುಲೋಮ ಮತ್ತು ಪ್ರತಿಲೋಮ ವಿವಾಹಗಳು ಬೆಳೆದು ಬಂದ ರೀತಿಯನ್ನು ಗಮನಿಸಿ ಹೇಳುವುದಾದರೆ, ಅವುಗಳಿಗೆ ವಿಶೇಷ ಪ್ರೋತ್ಸಾಹ ಹಾಗೂ ಸಾಮಾಜಿಕ ಮನ್ನಣೆಯನ್ನು ಶಾಸ್ತ್ರಕಾರರು ನೀಡಿರುವಂತೆ ವ್ಯಕ್ತವಾಗುವುದಿಲ್ಲ. ಆದರೆ ಅಂತಹ ವಿವಾಹಗಳನ್ನು ಸಹಿಸಿಕೊಳ್ಳಲಾಗಿತ್ತು (Tolerated, but not encouraged) ಎನ್ನಬಹುದು. ಧರ್ಮಶಾಸ್ತ್ರಕಾರರು ಬೇರೆ ವರ್ಣಗಳಲ್ಲಿ ಹುಟ್ಟಿದ ಗಂಡು ಮಕ್ಕಳಿಗೆ ತಂದೆಯ ಆಸ್ತಿಯಲ್ಲಿ ಪಾಲು ನೀಡಲು ಆಕ್ಷೇಪಣೆ ಮಾಡದೇ ಇರುವುದನ್ನು ನೋಡಿದರೆ ಅಂತಹ ವಿವಾಹಗಳು (ಅನುಲೋಮ- ಪ್ರತಿಲೋಮ) ಆಗ ಜನಪ್ರಿಯತೆ ಗಳಿಸಿಕೊಳ್ಳದಿದ್ದರೂ ನಡೆಯುತ್ತಿತ್ತು ಎನ್ನಬಹುದು. •೨೮ ಆಧುನಿಕ ಸಮಾಜದಲ್ಲಿ ಪರಸ್ಪರ ಪ್ರೀತಿಸಿ, ಒಪ್ಪಿ ನಡೆಯುವ ಪ್ರೇಮ ವಿವಾಹಗಳಲ್ಲಿ ಅನುಲೋಮ ಪ್ರತಿಲೋಮ ವಿವಾಹಗಳೆರಡೂ ಅತಿ ಸಹಜವೆಂದು ಹೇಳಬಹುದು. ಆದರೆ, ಸಾಮಾಜಿಕ ಮನ್ನಣೆಯ ಪ್ರಶ್ನೆ ಬಂದಾಗ ಇಂತಹ ವಿವಾಹಗಳಿಗೆ ಹೆಚ್ಚಿನ ಸಂದರ್ಭದಲ್ಲಿ ಹೆತ್ತವರಿಂದ, ಕುಟುಂಬ ವರ್ಗದವರಿಂದ ಪ್ರತಿರೋಧ, ಪ್ರತಿಭಟನೆ ಸಹಜವಾಗಿ ಪ್ರಕಟಗೊಳ್ಳುತ್ತದೆ.

**೨.೫ ಕುಟುಂಬ : ಅರ್ಥ- ರಚನೆ- ವಿನ್ಯಾಸ- ಅಂತರ್ ಸಂಬಂಧ.**

ಸಾಮಾಜಿಕ ಸಂಸ್ಥೆಗಳನ್ನು ಅವಲೋಕಿಸಿದಾಗ, ಕುಟುಂಬ ಅವುಗಳಲ್ಲೆಲ್ಲಾ ಚಿಕ್ಕ ಸಂಸ್ಥೆ; ಪ್ರಾಥಮಿಕ ಸಂಸ್ಥೆ. ಇದು ಇತರ ಎಲ್ಲಾ ಸಂಸ್ಥೆಗಳಿಗೂ ಮೂಲ. ಏಕೆಂದರೆ ಇತರ ಎಲ್ಲಾ ಸಂಸ್ಥೆಗಳು ನಿಂತಿರುವುದು ಕುಟುಂಬದ ಆಧಾರದ ಮೇಲೆ. ಅವು ತಮ್ಮ ಸದಸ್ಯರನ್ನು, ಬಲಸತ್ವವನ್ನು ಪಡೆಯುವುದು ಕುಟುಂಬದಿಂದ. ಅಲ್ಲದೆ, ಅದು ಎಲ್ಲಾ ಸಮಾಜಗಳಿಗೂ ಸರ್ವಸಾಮಾನ್ಯವಾದದ್ದು. ಇವೆಲ್ಲವುಗಳಿಗಿಂತ, ದೊಡ್ಡದಾದ ಸಮಾಜದಲ್ಲಿರುವ ಮತ್ತು ಇರಬಹುದಾದ ಎಲ್ಲಾ ಅಂಶಗಳು ಕುಟುಂಬದಲ್ಲಿವೆ. ದೊಡ್ಡ ಸಮಾಜದಲ್ಲಿ ಆಟದ ಸಂಸ್ಥೆಗಳಿವೆ. ವಿದ್ಯಾ ಸಂಸ್ಥೆಗಳಿವೆ. ವೃತ್ತಿ ಸಂಸ್ಥೆಗಳಿವೆ. ಧರ್ಮ ಸಂಸ್ಥೆಗಳಿವೆ. ರಾಜಕೀಯ ಸಂಸ್ಥೆಗಳಿವೆ. ಆ ಎಲ್ಲಾ ಸಂಸ್ಥೆಗಳ ಅಂಶಗಳು ಕುಟುಂಬ ಜೀವನದಲ್ಲಿವೆ. ಮಕ್ಕಳ ಆಟಕ್ಕೆ, ಅವರ ವಿದ್ಯಾಭ್ಯಾಸಕ್ಕೆ, ಧಾರ್ಮಿಕ ಬೆಳವಣಿಗೆಗೆ, ಶಿಸ್ತನ್ನು ಪಾಲಿಸುವ ಅಭ್ಯಾಸಕ್ಕೆ ಕುಟುಂಬವು ಮೂಲ ಕೇಂದ್ರ. ಇತರ ಸಂಸ್ಥೆಗಳು ಕುಟುಂಬ ವಹಿಸುವ ಜವಾಬ್ದಾರಿಯನ್ನು ಎಷ್ಟೋ ಕಡಿಮೆ ಮಾಡಿ ತಾವು ಆ ಜವಾಬ್ದಾರಿಯನ್ನು

ವಹಿಸಿದರೂ ಆ ಜವಾಬ್ದಾರಿಗಳು ಪೂರ್ಣವಾಗಿ ಕುಟುಂಬದಿಂದ ಬಿಟ್ಟು ಹೋಗುವುದಿಲ್ಲ. ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳು, ಪಂಗಡಗಳು, ವೃತ್ತಿಗಳು, ಎಲ್ಲಾ ರೀತಿಯ ನೀತಿಗಳೂ, ಜೀವನದ ಎಲ್ಲಾ ಅವಸ್ಥೆಗಳೂ, ಎಲ್ಲಾ ಆಶ್ರಮಗಳು, ಸಂಬಂಧಗಳೂ ಹುಟ್ಟು ಪಡೆದಿರುವುದು ಕುಟುಂಬದಿಂದ. ತನ್ನವರು, ಪರಕೀಯರು, ಸ್ವ-ಜಾತಿ, ಪರಜಾತಿ, ಸ್ವಬಳಗ, ನೆರೆಹೊರೆ, ರಕ್ತಸಂಬಂಧ, ಬಂಧು ಬಳಗ, ಸ್ನೇಹಿತರು, ಶತ್ರುಗಳು, ದಾಸ, ಧಣಿ, ಧನಿಕ, ದರಿದ್ರ, ಸೇವಕ, ಸಹೋದ್ಯೋಗಿ ಮುಂತಾದ ಸಾಮಾಜಿಕ ಭೇದಗಳು ಹುಟ್ಟಿರುವುದು ಕುಟುಂಬ ಜೀವನದಿಂದ. ಮನೆ-ಮಠ, ತೋಟ-ತುಡಿಕೆ, ಆಭರಣ-ಹಣ ಮುಂತಾದ ಆಸ್ತಿಪಾಸ್ತಿಗಳೂ, ಕೃಷಿ, ವ್ಯಾಪಾರ, ಕೈಗಾರಿಕೆ ಮುಂತಾದ ಜೀವನ ಮಾರ್ಗಗಳು, ಉದ್ಯಮಿಗಳು, ಕಸುಬಿನವರು, ಕೋಮಿನವರು ಹುಟ್ಟಿರುವುದು ಕುಟುಂಬ ಜೀವನದಿಂದ. ತಂದೆ- ತಾಯಿ, ಮಗ- ಸೊಸೆ, ಮಗಳು- ಅಳಿಯ, ಮಾವ- ಅತ್ತೆ, ಅಜ್ಜ - ಅಜ್ಜಿ, ಮುಂತಾದ ಬಂಧುವಾಚಕ ಶಬ್ದಗಳು, ಬಾಂಧವ್ಯಗಳು ಹುಟ್ಟಿರುವುದು ಕುಟುಂಬ ಜೀವನದಿಂದ ಎಂದು ಹೇಳಬಹುದು.

ಈಚೀನವರೆಗೂ, ಅಂದರೆ ಕೈಗಾರಿಕೆಯ ಕ್ರಾಂತಿಯ ಹಿನ್ನೆಲೆಯಲ್ಲಿ ಕೈಗಾರಿಕೆ ಮತ್ತು ವ್ಯವಸಾಯಗಳು ಯಂತ್ರಗಳ ಮೂಲಕ ನಡೆಯಲು ಪ್ರಾರಂಭವಾಗುವವರೆಗೂ, ಕಂಪ್ಯೂಟರ್, ಅಣು ಸ್ಥಾವರಗಳ ಬೆಳವಣಿಗೆಯವರೆಗೂ ಕುಟುಂಬವು ಜೀವನಕ್ಕೆ ಬೇಕಾದ ಹೆಚ್ಚು ಕಡಿಮೆ ಎಲ್ಲ ಪದಾರ್ಥಗಳನ್ನು ತಯಾರಿಸುವ ಕೇಂದ್ರವಾಗಿತ್ತು. ಅದು ತಯಾರಿಸಿದ ಪದಾರ್ಥಗಳನ್ನು, ವಸ್ತುಗಳನ್ನು ಹಂಚುವ ಸಂಸ್ಥೆ (Distributing agency)ಯೂ ಅದೇ ಆಗಿತ್ತು. ತಯಾರಿಸಿದ ಪದಾರ್ಥಗಳನ್ನು ಉಪಯೋಗಿಸುವ (consuming agency) ಸಂಸ್ಥೆಯೂ ಅದೇ ಆಗಿತ್ತು. ಆಸ್ತಿಯ ಮೇಲಿನ ಹಕ್ಕು (Right of Property), ವ್ಯಕ್ತಿತ್ವವನ್ನು ಬೆಳಸಿಕೊಳ್ಳುವ ಹಕ್ಕು (Personal Right) ಇವುಗಳನ್ನು ತಿಳಿದು ಅಭ್ಯಸಿಸುವುದು ಕುಟುಂಬದಲ್ಲಿ. ಶಮ, ದಮ, ವಿಧೇಯತೆ, ಸಹಕಾರ, ಸೇವೆ, ಸಹನೆ, ಅನುಕಂಪ, ಗೌರವ ಈ ಭಾವನೆಗಳು ಹುಟ್ಟುವುದು ಕುಟುಂಬ ಜೀವನದಲ್ಲಿ. ಅವುಗಳನ್ನು ಕಲಿಯುವುದು, ಅಭ್ಯಸಿಸುವುದು ಕುಟುಂಬಗಳ ಪರಸ್ಪರ ಸಂಬಂಧಗಳ ಮೂಲಕವೆಂಬುದು ಸ್ಪಷ್ಟವಾದ ಅಂಶವಾಗಿದೆ. ಈ ನೆಲೆಗಳಲ್ಲಿ ಮತ, ಸಂಸ್ಕೃತಿ, ಇವು ತಮ್ಮ ಪ್ರಭಾವವನ್ನು ಕುಟುಂಬದ ಮೇಲೆ ನಿರಂತರವಾಗಿ ಬೀರುತ್ತಿವೆ.

ಕುಟುಂಬ ಜೀವನವು ಯಾವ ಕಾಲದಲ್ಲಿ ಹುಟ್ಟಿತು ಎಂಬುದನ್ನು ನಿರ್ಧರಿಸಲಾಗಿಲ್ಲ. ಆದರೆ ಒಂದು ವ್ಯವಸ್ಥಿತ, ಸಿದ್ಧ ರೂಪದ ನೆಲೆಯಲ್ಲಿ, ವೃತ್ತಿ, ಕೃಷಿ ಉತ್ಪಾದನೆಗಳ ಮೂಲಕ ಊಟ, ವಸತಿ, ಬಟ್ಟೆ ಬರೆಗಳಿಗೆ ಒಂದು ನೆಲೆ ಕಂಡು ಕೊಂಡು ವಿವಾಹದ ಮೂಲಕ ಗಂಡ, ಹೆಂಡತಿ, ಮಕ್ಕಳು, ರಕ್ತಸಂಬಂಧಿಗಳು ಎಂಬ ಖಚಿತವಾದ ಭಾವನಾತ್ಮಕ ಹೊಂದಾಣಿಕೆ ಪ್ರಾಪ್ತವಾದ ಕಾಲದಿಂದಲೇ ಕುಟುಂಬ ಜೀವನ ನಾಂದಿಯಾಗಿದೆ. ವಿವಾಹ ಎನ್ನುವುದು ಒಂದು ಬಹುಮಾನ್ಯ ಅಂಗವಾಗಿ, ಸಂಸ್ಥೆಯಾಗಿ ಸಾಮಾಜಿಕ, ಧಾರ್ಮಿಕ, ಮಾನ್ಯತೆಯನ್ನು ಪಡೆದು ಆ ಮೂಲಕ ಅಸ್ತಿತ್ವ ಪಡೆಯುವಂತೆ ರೂಪಿತವಾದ ಜೀವನ ವ್ಯವಸ್ಥೆ ಕುಟುಂಬವಾಗಿ ರೂಪಿತವಾಗಿದೆ. ಎಷ್ಟು ಹಿಂದಿನ ಕಾಲದ ಚರಿತ್ರೆಯನ್ನು ನಾವು ಪರಿಶೀಲಿಸಿದರೂ ಅಲ್ಲಾಗಲೇ ಕುಟುಂಬ ಜೀವನವು ನೆಲೆಯಾಗಿರುವುದು ಸ್ಪಷ್ಟವಾಗುತ್ತದೆ. ನಮಗೆ ತಿಳಿದಿರುವ ಅತ್ಯಂತ ಪ್ರಾಚೀನವಾದ ಬೇಬಿಲೋನಿಯ, ಈಜಿಪ್ಟ್, ಭಾರತೀಯ ಮತ್ತು ಚೀನೀಯ ಸಮಾಜಗಳಲ್ಲಿ ಅದು ಆಗಲೇ ತುಂಬ ಬೆಳೆದ

ಸ್ಥಿತಿಯಲ್ಲಿತ್ತು. ನಾಗರಿಕ ಜೀವನದ ಆವರಣದಲ್ಲಿ ಬಾರದೆ ಉಳಿದಿರುವ ಕಾಡು ಜನರಲ್ಲೂ, ಅನಾಗರಿಕ ಜನರಲ್ಲೂ ಅದಾಗಲೇ ನಿರ್ದಿಷ್ಟವಾದ ರೂಪ ಪಡೆದಿತ್ತು. ಆದಿ ಮಾನವನು ಕೂಡ ಸಂಘ ಜೀವಿ ಎಂದು ಹೇಳಲು ಆಧಾರಗಳಿವೆ. ಏಕೆಂದರೆ, ಅವನನ್ನು ಹೋಲುವ ಮಾನವವಾನರರಲ್ಲೂ ಕೂಡ ಕುಟುಂಬದ ಲಕ್ಷಣಗಳಿವೆ. ಈ ಎಲ್ಲ ಕಾರಣಗಳಿಂದಾಗಿ ಕುಟುಂಬದ ಉಗಮವನ್ನು ನಿರ್ದಿಷ್ಟ ಪಡಿಸುವುದು, ಖಚಿತವಾಗಿ ಹೀಗೆಯೇ ಎಂದು ಗುರುತಿಸುವುದು ಕಷ್ಟವಾಗುತ್ತದೆ.

**೨.೬.೧ ಕುಟುಂಬದ ಅರ್ಥ ವಿನ್ಯಾಸ :**

**ಮಾತೃಮೂಲೀಯ ಕುಟುಂಬ (Matrinial Family) :** ಈ ವ್ಯವಸ್ಥೆಯಲ್ಲಿ ವಂಶದ ಮೂಲವನ್ನು ತಾಯಿಯ ತವರಿನ ಸಂಬಂಧಾತ್ಮಕ ನೆಲೆಯಿಂದ ಗುರುತಿಸಲಾಗುತ್ತದೆ. ಮಾತೃ ಪ್ರಧಾನ ಕುಟುಂಬದಲ್ಲಿ (Matriarchal family) ತಾಯಿಯು ಕುಟುಂಬದ ಒಡತಿ. ಕುಟುಂಬದ ಎಲ್ಲ ವಿಷಯ ವ್ಯವಹಾರಗಳಲ್ಲಿಯೂ ಸ್ತ್ರೀಗೆ ಪ್ರಾಮುಖ್ಯ ಇರುತ್ತದೆ. •೨೯ ಮಕ್ಕಳು ತಾಯಿಯ ವಂಶಕ್ಕೆ ಸೇರುತ್ತಾರೆ. ತಾಯಿ, ಅವಳ ಸೋದರ ಸೋದರಿಯರು, ಅವರ ಮಕ್ಕಳು ಮತ್ತು ರಕ್ತ ಸಂಬಂಧಿಗಳು ಮಾತೃ ಪ್ರಧಾನ ಕುಟುಂಬಕ್ಕೆ ಸೇರುತ್ತಾರೆ. ಈ ಕುಟುಂಬ ಪದ್ಧತಿಯಲ್ಲಿ ಸ್ತ್ರೀಯು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಹೆಚ್ಚಿನ ಪಾತ್ರವಹಿಸುತ್ತಾಳೆ. ಸ್ತ್ರೀಗೆ ಆಸ್ತಿಯ ಮೇಲಿನ ಹಕ್ಕಿರುತ್ತದೆ. ಉತ್ತರಾಧಿಕಾರವು ಸ್ತ್ರೀ ಕುಲವನ್ನೇ ಅನುಸರಿಸಿ ಬರುತ್ತದೆ. ಇದರಿಂದಾಗಿ ಮಕ್ಕಳನ್ನು ಮಾತೃವಂಶೀಯರೆಂದೆ ಕರೆಯುತ್ತಾರೆ. ಸಾಮಾನ್ಯವಾಗಿ ಆಸ್ತಿಯು ತಾಯಿಯಿಂದ ಹೆಣ್ಣು ಮಕ್ಕಳಿಗೆ ವರ್ಗಾವಣೆಗೊಳ್ಳುತ್ತದೆ. ಹಿರಿಯ ಮಗಳು ಆಸ್ತಿಯ ವಾರಸುದಾರಳಾಗುತ್ತಾಳೆ.

ಈ ಕುಟುಂಬದಲ್ಲಿ ತಾಯಿಯ ಸಹೋದರನಿಗೆ ವಿಶೇಷವಾದ ಸ್ಥಾನ- ಗೌರವಗಳಿವೆ. ಆತನೇ ಕುಟುಂಬದ ಹೆಚ್ಚಿನ ವ್ಯವಹಾರಗಳನ್ನು ನೋಡಿಕೊಳ್ಳುತ್ತಾನೆ. ಲೂಯಿ ಮಾಲಿನೋವ್ಸ್ಕಿ ಮುಂತಾದ ಮಾನವ ಶಾಸ್ತ್ರಜ್ಞರು ಈ ಕುಟುಂಬದ ಸ್ವರೂಪಗಳನ್ನು ಸುಧೀರ್ಘವಾಗಿ ಅಧ್ಯಯನ ಮಾಡಿದ್ದಾರೆ. ಜಗತ್ತಿನ ಹಲವಾರು ಆದಿವಾಸಿ ಸಮುದಾಯಗಳಲ್ಲಿ ಮಾತೃಪ್ರಧಾನ ಕುಟುಂಬ ಪದ್ಧತಿ ಇದೆ. ಮಾರ್ಗರೇಟ್ ಮೀಡ್ ಎಂಬ ಮಾನವಶಾಸ್ತ್ರಜ್ಞೆ ತನ್ನ ಅಧ್ಯಯನದಲ್ಲಿ ತಿಳಿಸಿರುವಂತೆ, ನ್ಯೂಗಿನಿಯ ಮೂಲನಿವಾಸಿಗಳಾದ ಚಾಂಬೂಲಿ ಜನರಲ್ಲಿ ಮಾತೃಪ್ರಧಾನ ಕುಟುಂಬದ ಉತ್ತಮ ಉದಾಹರಣೆ ಇದೆ. ಅಲ್ಲಿ ಸ್ತ್ರೀಯರೇ ದರ್ಪದಿಂದ ಅಧಿಕಾರ ಚಲಾಯಿಸತ್ತಾರೆ. ಆದರೆ ಅಮೇರಿಕನ್ ಇಂಡಿಯನ್ ಗುಂಪಿಗೆ ಸೇರಿದ ಹೋಪಿ, ಜ್ಯೂನಿ, ಇರಾಕ್ವಿಯಸ್ ಮೊದಲಾದ ಆದಿವಾಸಿ ಸಮುದಾಯಗಳಲ್ಲಿ ಆಸ್ತಿಯು ಸ್ತ್ರೀಯರಿಗೇ ಸೇರಿದ್ದರೂ ಸೋದರ ಸಂಬಂಧಿಗಳು ಸಾಕಷ್ಟು ಅಧಿಕಾರ ಹೊಂದಿರುತ್ತಾರೆ. ಭಾರತದ ಖಾಸ ಜನಾಂಗದಲ್ಲಿ ಮತ್ತು ಕೇರಳದ ನಾಯರ್ ಜನರಲ್ಲಿ ಮಾತೃಪ್ರಧಾನ ಕುಟುಂಬ ಪದ್ಧತಿ ಕಂಡು ಬರುತ್ತದೆ. ಆಧುನಿಕ ಪ್ರಭಾವಗಳಿಗೆ ಸಿಲುಕಿದ ಕೇರಳದ ನಾಯರ್ ಜನಾಂಗದ ಜನರು ನಿಧಾನವಾಗಿ ತಮ್ಮ ಮಾತೃಪ್ರಧಾನ ಕುಟುಂಬ ಪದ್ಧತಿಯನ್ನು ಬಿಟ್ಟುಕೊಟ್ಟು ಪಿತೃಪ್ರಧಾನ ಕುಟುಂಬದ ಕಡೆಗೆ ವಾಲುತ್ತಿದ್ದಾರೆ. ಮಾತೃ ಪ್ರಧಾನ ಕುಟುಂಬದಲ್ಲಿ ತಾಯಿಯ ಅಧಿಕಾರವು ನೆಪಮಾತ್ರವಾಗಿರುತ್ತದೆ. ಸ್ತ್ರೀಯು ತನ್ನ ಬಂಧುಗಳೊಡನೆ ಸ್ವತಂತ್ರವಾಗಿ ಜೀವಿಸಬಹುದು. ಈ ವ್ಯವಸ್ಥೆಯಲ್ಲಿ ಪತಿಗೆ ಸರಿಯಾದ ಸ್ಥಾನಮಾನಗಳಿರುವುದಿಲ್ಲ.

ಪ್ರಪಂಚದ ಹಲವಾರು ಸಮಾಜಗಳಲ್ಲಿ ಮಾತೃಮೂಲೀಯ ಕುಟುಂಬ ವ್ಯವಸ್ಥೆ ಕಂಡುಬರುತ್ತದೆ. ಖಾಸಿ, ಗಾಂಡೀ, ಹೋಪಿ, ಮಯಿಬ್ಲೂ, ಮಲಬಾರಿನ ನಾಯರ್ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯುಳ್ಳ ಮುಖ್ಯ ಜನಾಂಗಗಳು ಎಂದು ಸಮಾಜಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ತಾತ್ವಿಕ ದೃಷ್ಟಿಯಿಂದ ವಿಚಾರ ಮಾಡಿದರೆ, ಮಾತೃ ಪ್ರಧಾನ ಕುಟುಂಬದಲ್ಲಿ ತಾಯಿಗೆ ಉನ್ನತವಾದ ಸ್ಥಾನ, ಪ್ರಾಧಾನ್ಯಗಳಿರಬೇಕು. ಆದರೆ ಮಾತೃ ಪ್ರಧಾನ ಕುಟುಂಬಗಳು ತಾಯಿಗೆ ಸರ್ವ ಮಾನ್ಯತೆಯನ್ನು ಕೊಡುತ್ತಿಲ್ಲ. ಪ್ರಾಚೀನರಲ್ಲಿ ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸ್ತ್ರೀ ಪ್ರಮುಖ ಪಾತ್ರ ವಹಿಸುತ್ತಿದ್ದಳೆಂದು ಕೆಲವು ಮಾನವ ಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಲವ್ವಿ ಮತ್ತು ಇತರ ವಿದ್ವಾಂಸರು ಈ ಅಭಿಪ್ರಾಯಗಳನ್ನು ಖಂಡಿಸಿ, ಮಾನವ ಇತಿಹಾಸದ ಯಾವ ಕಾಲದಲ್ಲೆ ಆಗಲಿ, ತಾಯಿಗೆ ಸಂಪೂರ್ಣ ಪ್ರಭುತ್ವವಿರಲಿಲ್ಲ. ಆದ್ದರಿಂದ ಈ ವಿಧದ ಕುಟುಂಬವನ್ನು ಮಾತೃ ವಂಶೀಯ, ಕುಟುಂಬವೆನ್ನಬಹುದೆ ವಿನಾಃ ಮಾತೃ ಪ್ರಧಾನ ಕುಟುಂಬ ಎಂದು ಹೇಳುವ ಹಾಗಿಲ್ಲ ಎಂದು ಸಮರ್ಥಿಸುತ್ತಾರೆ. ಏಕೆಂದರೆ ಹೆಸರಿಗೆ ಮಾತ್ರ ಸ್ತ್ರೀ ಒಡತಿಯೆ ಹೊರತು ಕುಟುಂಬದ ಎಲ್ಲ ವ್ಯವಹಾರ ಆಕೆಯ ತಂದೆ ಇಲ್ಲವೆ ಸಹೋದರ ನಿರ್ವಹಿಸುತ್ತಿದ್ದರು. ಆದ್ದರಿಂದ ನಿಜವಾದ ಅರ್ಥದಲ್ಲಿ ಇದು ಮಾತೃ ಮೂಲೀಯ ಕುಟುಂಬವೇ ವಿನಃ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲ. ೭೦

**ಪಿತೃಮೂಲೀಯ ಕುಟುಂಬ (Patrinial Family):** ಪ್ರಾಚೀನ ಹಾಗೂ ಆಧುನಿಕ ಸಮಾಜಗಳಲ್ಲಿ ಪಿತೃಮೂಲೀಯ ಕುಟುಂಬ ಬಹುಮಟ್ಟಿಗೆ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಪಿತೃಮೂಲೀಯ ವ್ಯವಸ್ಥೆ ಹಲವು ಅರ್ಥಗಳಲ್ಲಿ ಪಿತೃಪ್ರಧಾನ ವ್ಯವಸ್ಥೆ. ೭೧ ಆಸ್ತಿಯ ಕೇಂದ್ರೀಕರಣ, ಬೇಸಾಯದ ಪ್ರಗತಿ, ಅಧಿಕಾರದ ಸರ್ವಾಧಿಕಾರತ್ವ, ಕೈಗಾರಿಕೆ ಮತ್ತು ತಾಂತ್ರಿಕ ಬೆಳವಣಿಗೆ ಮತ್ತು ಅವುಗಳಲ್ಲಿನ ನೈಪುಣ್ಯಗಳು ಸ್ತ್ರೀಯ ಪ್ರಾಮುಖ್ಯವನ್ನು ಕುಗ್ಗಿಸಿ ಪಿತೃಪ್ರಧಾನ ಕುಟುಂಬದ ಹುಟ್ಟಿಗೆ ಕಾರಣವಾದವೆಂದು ಹಲವು ಮಾನವ ಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಪಿತೃ ಮೂಲೀಯ ಕುಟುಂಬದಲ್ಲಿ ಹಿರಿಯ ಪುರುಷನೇ ಮನೆಯ ಯಜಮಾನ, ನಿರಂಕುಶ ಪ್ರಭು, ಸರ್ವಾಧಿಕಾರಿ. ತನಗೆ ಇಷ್ಟ ಬಂದ ರೀತಿಯಲ್ಲಿ ನಡೆದುಕೊಳ್ಳುವ ಹಕ್ಕು ಆತನಿಗೆ ಇದೆ. ಕುಟುಂಬಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿ ಅವನದೇ ಅಂತಿಮ ತೀರ್ಮಾನ. ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಆತನಿಗೆ ಸ್ವತಂತ್ರವಾದ ಅಧಿಕಾರವಿರುತ್ತದೆ. ಹಾಗೆಂದು ಈ ಕುಟುಂಬಗಳಲ್ಲಿ ಮನೆಯ ಯಜಮಾನ ತನ್ನ ಅಧಿಕಾರವನ್ನು ದುರುಪಯೋಗ ಪಡಿಸುತ್ತಿದ್ದನೆಂದು ಇದರ ಅರ್ಥವಲ್ಲ.

ಪಿತೃ ಪ್ರಧಾನ ಕುಟುಂಬಗಳಲ್ಲಿ ಮಕ್ಕಳು ತಂದೆಯ ವಂಶಕ್ಕೆ ಸೇರುತ್ತಾರೆ. ಕುಟುಂಬದ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಮಾತ್ರ ಪಾಲು ಪಡೆಯುವ ಹಕ್ಕಿರುತ್ತದೆ. ಆನುವಂಶೀಯ ಅಧಿಕಾರ ಮತ್ತು ಸ್ಥಾನಮಾನಗಳು ಗಂಡು ಸಂತತಿಗೆ ಮೀಸಲಾಗಿರುತ್ತದೆ. ಈ ಕುಟುಂಬದಲ್ಲಿ ವಿವಾಹಿತ ಹೆಣ್ಣು ಆಕೆಯ ಗಂಡನ ಮನೆಯಲ್ಲಿ ವಾಸಿಸುತ್ತಾಳೆ. ಅವಳಿಗೆ ತವರಿನಲ್ಲಿ ಅಧಿಕಾರ ಮತ್ತು ಜವಾಬ್ದಾರಿಗಳು ಕಡಿಮೆ ಇರುತ್ತವೆ. ಈ ಸಮಾಜದಲ್ಲಿ ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬುದು ಅನಿವಾರ್ಯವಾಗುತ್ತದೆ. ಅಂದರೆ ಮದುವೆಯಾಗಿ ಗಂಡಿನ ಮನೆಸೇರುವ ಹೆಣ್ಣು, ತನ್ನ ಗಂಡನ ಮೂಲಕ ಗುರುತಿಸಿಕೊಳ್ಳುವಂಥ ವ್ಯವಸ್ಥೆ ಇದು. ಆದುದರಿಂದ ಮದುವೆ ಆದ ನಂತರ ಹುಟ್ಟಿದ ಮನೆಯ ಸಂಬಂಧವಾಗಲೀ, ತಂದೆಯ ಮೂಲಕ ಗುರುತಿಸಿಕೊಳ್ಳುವ

ವ್ಯವಸ್ಥೆಯಾಗಲೀ ಮುಂದುವರಿಯುವಂತೆ ಇರುವುದಿಲ್ಲ. ಕುಟುಂಬದ ಅರ್ಥ ಪರಿಕಲ್ಪನೆಯ ಸ್ಪಷ್ಟತೆಗಾಗಿ ಸ್ತ್ರೀಮೂಲ- ಪುರುಷಮೂಲ ಕುಟುಂಬಗಳೆಂದು ಅಧ್ಯಯನದ ಅನುಕೂಲತೆಯ ನೆಲೆಯಲ್ಲಿ ಪ್ರತ್ಯೇಕಗೊಳಿಸಬಹುದು. ಆದರೆ ಸಮಾಜಗಳಲ್ಲಿ ಈ ಎರಡರ ಛಾಯೆ ಲಕ್ಷಣಗಳನ್ನು ಒಳಗೊಂಡಿರುವ ಬೇರೆ ಬೇರೆ ಬಗೆಯ ಕುಟುಂಬ ರಚನೆಗಳಿವೆ. ಕುಟುಂಬ ಎಲ್ಲ ಕಾಲಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಅಸ್ತಿತ್ವದಲ್ಲಿರುವ ಶಾಶ್ವತವಾದ ಒಂದು ಸಾಮಾಜಿಕ ಸಂಸ್ಥೆ. ಕುಟುಂಬ ವ್ಯವಸ್ಥೆ ಮಾನವ ನಿರ್ಮಿತ ಹಾಗೂ ಪರಿವರ್ತನಶೀಲ. ಹೀಗಿರುವಾಗ ಅದರ ಅರ್ಥ ರಚನೆಗಳಲ್ಲಿ ಕಾಲ ದೇಶಗಳಿಗನುಗುಣವಾಗಿ ಆಗಿರುವ ಮಾರ್ಪಾಡುಗಳನ್ನು ಗಮನಿಸುವುದು ಮುಖ್ಯವಾಗುತ್ತದೆ. ಒಂದು ದೇಶದಲ್ಲಿಯೇ ಒಂದು ಕಾಲದಲ್ಲಿ ಇದ್ದ ಕುಟುಂಬರಚನೆ, ಸ್ತ್ರೀ-ಪುರುಷರ ಸ್ಥಾನ-ಮಾನಗಳು, ಬದುಕಿನ ರೀತಿ ನೀತಿಗಳು, ಜೀವನ ಕ್ರಮಗಳು ಕುಟುಂಬದೊಳಗೆ ಹಾಗೆಯೇ ಮುಂದುವರಿಯುತ್ತವೆ ಎಂದು ಪರಿಗಣಿಸುವುದು ಸಾಧ್ಯವಿಲ್ಲ. ಆದರೆ ಮೂಲ ರೂಪದ ಅವಲೋಕನದಲ್ಲಿ ಅಧ್ಯಯನದ ನೆಲೆಯಿಂದ ಈ ವಿಂಗಡಣೆ ಅನಿವಾರ್ಯವಾಗುತ್ತದೆ.

**೨.೬.೨ ಕುಟುಂಬದ ರಚನಾ ವಿನ್ಯಾಸ**

**ಕೂಡು ಕುಟುಂಬ:** ಕೂಡುಕುಟುಂಬದ ವ್ಯವಸ್ಥೆಯು ಅನೇಕ ಪ್ರಾಚೀನ ಸಮಾಜಗಳಲ್ಲಿ ಕಂಡು ಬರುತ್ತದೆ. ಅದರಲ್ಲೂ ಭಾರತದ ಪ್ರಾಚೀನ ಸಮಾಜವು ಪರಿಪೂರ್ಣವಾದ ಕೂಡುಕುಟುಂಬಗಳ ಮಾದರಿಯಾಗಿದೆ. ನಿರ್ದಿಷ್ಟವಾಗಿ ಒಂದು ಸೂರಿನ ಅಡಿಯಲ್ಲಿ ಮೂರು - ನಾಲ್ಕು ತಲೆಮಾರುಗಳ ಕುಟುಂಬದ ಜನರು ಒಂದು ಕಡೆಯಲ್ಲಿ ವಾಸವಾಗಿದ್ದರೆ ಅದನ್ನು ಅವಿಭಕ್ತ ಅಥವಾ ಕೂಡು ಕುಟುಂಬ ಎಂದು ಪರಿಗಣಿಸಬಹುದು. ತಂದೆ, ತಾಯಿ, ಮತ್ತು ಮಕ್ಕಳೇ ಅಲ್ಲದೆ, ಅವರ ಸಹೋದರರೂ ಒಟ್ಟಿಗೆ ವಾಸಿಸುತ್ತಿದ್ದು, ಆಸ್ತಿಯನ್ನು ಒಟ್ಟಾಗಿ ಹೊಂದಿರುವ ಕುಟುಂಬವೇ ಅವಿಭಕ್ತ ಕುಟುಂಬ ಎಂಬುದಾಗಿ ಸಮಾಜ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.[೬೨] ಕೂಡುಕುಟುಂಬಗಳಲ್ಲಿ ಮಾತೃಪ್ರಧಾನ ಕೂಡುಕುಟುಂಬ, ಪಿತೃಪ್ರಧಾನ ಕೂಡುಕುಟುಂಬಗಳೆಂದು ಎರಡು ವಿಧಗಳಿವೆ. ಈ ಕುಟುಂಬಗಳಲ್ಲಿ ಏಕಪತ್ನಿ ಕುಟುಂಬ. ಬಹುಪತ್ನಿ ಕುಟುಂಬ ಮತ್ತು ಬಹುಪತಿ ಕುಟುಂಬ ಎಂಬ ಮೂರು ವಿಧಗಳನ್ನೂ ಗುರುತಿಸಬಹುದು. ಮಾತೃ ಪ್ರಧಾನ ಕುಟುಂಬ ಮತ್ತು ಪಿತೃ ಪ್ರಧಾನ ಕುಟುಂಬ ಎಂಬ ವರ್ಗೀಕರಣವು ವಂಶಾವಳಿಯನ್ನು ಗುರುತಿಸುವ ವಿಧಾನ. ಕುಟುಂಬದ ಯಾಜಮಾನ್ಯ ಮತ್ತು ಸಂಗಾತಿಗಳ ವಾಸಸ್ಥಾನ ಇವುಗಳನ್ನು ಆಧಾರವಾಗಿಟ್ಟುಕೊಂಡು ಇವು ರಚನೆಗೊಂಡಿವೆ. ಅವಿಭಕ್ತ ಅಥವಾ ಕೂಡು ಕುಟುಂಬಗಳು ಗಾತ್ರದಲ್ಲಿ ದೊಡ್ಡದಾಗಿರುತ್ತವೆ. ತಂದೆ, ತಾಯಿ,ಅಜ್ಜ, ಅಜ್ಜಿ, ಮಕ್ಕಳು, ಸಹೋದರರು, ಸೊಸೆಯಂದಿರು, ಅವರ ಮಕ್ಕಳು ಇವರೆಲ್ಲರನ್ನೂ ಕೂಡು ಕುಟುಂಬ ಒಳಗೊಂಡಿರುತ್ತದೆ. ಈ ಕುಟುಂಬದ ಸದಸ್ಯರು ಒಂದೇ ವಂಶಾವಳಿಗೆ ಸೇರಿರುತ್ತಾರೆ. ಅಲ್ಲದೆ, ರಕ್ತಸಂಬಂಧಿಗಳಾಗಿರುತ್ತಾರೆ. ಕುಟುಂಬದವರೆಲ್ಲ ಏಕನೆಲೆಯಲ್ಲಿ, ಒಂದೇ ಸೂರಿನಡಿಯಲ್ಲಿ ವಾಸವಾಗಿರುತ್ತಾರೆ. ಒಂದೇ ಒಲೆಯಲ್ಲಿ ಬೇಯಿಸಿದ ಆಹಾರವನ್ನು ಸೇವಿಸುತ್ತಾರೆ. ಕೂಡು ಕುಟುಂಬದ ಸದಸ್ಯರು ಮತ್ತು ಕುಟುಂಬದ ರಚನೆಯ ಒಳಗೆ ಒಂದೇ ಧರ್ಮ, ಇತರ ಧರ್ಮ, ಒಂದೇ ಜಾತಿ- ಬೇರೆ ಜಾತಿ ಎಂಬ ಅಂಶವೇ ಇರುವುದಿಲ್ಲ. 'ರಕ್ತ ಸಂಬಂಧ'ದ ವಂಶ ಪರಂಪರೆ ಅಷ್ಟೇ ಪ್ರಧಾನ. ಈ ಕುಟುಂಬದ ಸದಸ್ಯರೆಲ್ಲರೂ ಒಂದೇ ಧರ್ಮದವರಾಗಿದ್ದು, ತಮ್ಮದೇ ಆದ ಮನೆದೇವರನ್ನು ಹೊಂದಿರುತ್ತಾರೆ. ಕುಟುಂಬದ ಆಸ್ತಿಯು ಅವಿಭಾಜ್ಯವಾಗಿರುತ್ತದೆ. ಎಲ್ಲಾ ಆಸ್ತಿಯು ಕುಟುಂಬಕ್ಕೆ ಸೇರಿದ್ದು,

ಅದರಲ್ಲಿ ಪ್ರತಿಯೊಬ್ಬ ಸದಸ್ಯನಿಗೂ ಸಮನಾದ ಹಕ್ಕಿರುತ್ತದೆ. ಕುಟುಂಬದ ಯಜಮಾನ ಪಾರುಪತ್ಯಗಾರ (Trustee) ನಂತಿದ್ದು ಸದಸ್ಯರೆಲ್ಲರ ಸಂಪಾದನೆಯು ಒಟ್ಟಿಗೆ ಸೇರುತ್ತದೆ. ಕುಟುಂಬದ ಹಿರಿಯ ವ್ಯಕ್ತಿ ಮನೆಯ ಯಜಮಾನನಾಗಿರುತ್ತಾನೆ. ಕುಟುಂಬದ ಆಸ್ತಿ ಮತ್ತು ಆರ್ಥಿಕ ಯಾಜಮಾನ್ಯ ಕುಟುಂಬದ ಹಿರಿಯ ಸದಸ್ಯನ ಅಂಕೆಯಲ್ಲಿರುತ್ತದೆ. ಉಳಿದ ಸ್ತ್ರೀ, ಪುರುಷ ಸದಸ್ಯರು ಯಜಮಾನನಾದ ಹಿರಿಯ ಸದಸ್ಯನ ಅಣತಿಯಂತೆ ವರ್ತಿಸುತ್ತಿರುತ್ತಾರೆ. ಪ್ರತಿಯೊಬ್ಬ ವ್ಯಕ್ತಿಯು ಈ ಕುಟುಂಬದಲ್ಲಿ ಪರಸ್ಪರ ಹಕ್ಕು ಬಾಧ್ಯತೆಯ ಅರಿವುಳ್ಳವನಾಗಿರುತ್ತಾರೆ. ಆದರೆ ಯಾವುದೇ ಕೆಲಸ ಕಾರ್ಯಗಳು ಯಜಮಾನನ ಆದೇಶದಂತೆ ನೆರವೇರುತ್ತಿರುತ್ತವೆ. •ₒₒ

ಸಾಮಾನ್ಯವಾಗಿ ಇಂತಹ ಕೂಡು ಕುಟುಂಬಗಳು ಸಂಪ್ರದಾಯ, ಆಚರಣೆ, ನಡವಳಿಕೆ ಮತ್ತು ಸದ್ಗುಣಗಳನ್ನು ರಕ್ಷಿಸುತ್ತವೆ. ಇವು ಪ್ರೀತಿ, ವಿಶ್ವಾಸ, ಪರಸ್ಪರ ಸಹಾಯ, ಸಹನೆ, ಶಿಸ್ತು, ನಿಷ್ಠೆ , ಔದಾರ್ಯ, ಸೇವೆ ಮತ್ತು ಸಹಕಾರಗಳ ಕೇಂದ್ರಗಳಾಗಿರುತ್ತವೆ. ಸಾಂಪ್ರದಾಯಿಕವಾದ ಕುಲ ಕಸುಬುಗಳು, ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಗೊಳ್ಳುತ್ತವೆ. ಸಮಾನ ದುಡಿಮೆ ಮತ್ತು ಸಮಾನ ಪ್ರತಿಫಲಗಳಿಗೆ ಹೆಚ್ಚಿನ ಅವಕಾಶವಿರುತ್ತದೆ. ಅವಿಭಕ್ತ ಕುಟುಂಬದಲ್ಲಿ ಒಟ್ಟಿಗೆ ಅಡಿಗೆ ಮಾಡುವುದರಿಂದ ಮತ್ತು ಕುಟುಂಬಕ್ಕೆ ಬೇಕಾದ ಸಾಮಾಗ್ರಿಗಳನ್ನು ಒಟ್ಟಿಗೆ ಕೊಂಡುಕೊಳ್ಳುವುದರಿಂದ ಸಾಕಷ್ಟು ಹಣದ ಉಳಿತಾಯವಾಗುತ್ತದೆ. ಈ ಕುಟುಂಬಗಳಲ್ಲಿ ಆಸ್ತಿಯು ಅವಿಭಾಜ್ಯವಾಗಿರುವುದರಿಂದ ಭೂಮಿ ಹಂಚಿ ಹರಿದು ಹೋಗುವುದನ್ನು ತಪ್ಪಿಸುತ್ತದೆ. ಸದಸ್ಯರೆಲ್ಲರೂ ಕೆಲಸವನ್ನು ಹಂಚಿ ಮಾಡುವುದರಿಂದ ಕೆಲಸದ ಒತ್ತಡ ಮತ್ತು ಉದ್ವೇಗಗಳು ಈ ಕುಟುಂಬಗಳಲ್ಲಿ ಕಡಿಮೆ ಇರುತ್ತದೆ. ಹೆಚ್ಚಿನ ಬಿಡುವು ದೊರೆಯುವುದರಿಂದ ಮನೆ ಮಂದಿಗಳೆಲ್ಲ ಬಿಡುವಿನ ಕಾಲವನ್ನು ಆಹ್ಲಾದಕರವಾಗಿ ಮತ್ತು ಸಂತೋಷವಾಗಿ ಕಳೆಯುತ್ತಾರೆ. ಮಕ್ಕಳ ಆಟ, ಅಜ್ಜಿಯರು ಕಥೆ ಹೇಳುವುದು, ಹಾಸ್ಯ ಚಟಾಕಿ, ಜನಪದ ಹಾಡುಗಳು, ರಾಗಿ ಬೀಸುವ ಪದಗಳು ಈ ಕುಟುಂಬದ ಪರಿವಾರದ ಮಂದಿಯ ಮನೋರಂಜನೆಗಳಾಗಿರುತ್ತವೆ. ಅಲ್ಲದೆ, ಕೋಲಾಟ, ನಾಟಕ, ಯಕ್ಷಗಾನ,ನೃತ್ಯ,ಕಂಸಾಳೆ, ತಾಳಮದ್ದಳೆ ಇವುಗಳಿಂದಲೂ ಮನಃ ಸಂತೋಷವನ್ನು ಪಡೆಯುತ್ತಾರೆ. ಉಪವಾಸ, ಜೌತಣ, ವಿವಾಹ, ಬಾಣಂತನ ಇವೆಲ್ಲ ಆಚರಣೆಗಳು ಕೂಡು ಕುಟುಂಬದಲ್ಲಿ ವಿಶೇಷವಾದ ಅರ್ಥಗಳಿಂದ ಕೂಡಿರುತ್ತವೆ.

ಕೂಡು ಕುಟುಂಬಗಳಲ್ಲಿ ಅನುಕೂಲತೆಗಳು ಹೆಚ್ಚಿದ್ದಂತೆ ಅನಾನುಕೂಲಗಳೂ ಇವೆ. ಈ ಕುಟುಂಬದಲ್ಲಿ ಅಧಿಕಾರವೆಲ್ಲವೂ ಯಜಮಾನನಲ್ಲಿ ಕೇಂದ್ರೀಕೃತವಾಗಿರುತ್ತದೆ. ಇದರಿಂದಾಗಿ ಯಜಮಾನ ನಿರ್ದೇಶಕ ನಾಗಿರುವುದಕ್ಕಿಂತ ಸರ್ವಾಧಿಕಾರಿಯಾಗುವ ಸಂಭವವೇ ಹೆಚ್ಚಾಗಿರುತ್ತದೆ. ಕುಟುಂಬದ ಮಂದಿಗಳಿಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸ್ವಾತಂತ್ರವಿರುವುದಿಲ್ಲ. ಸ್ವಯಂಯೋಜನೆ, ಸ್ವಯಂನಿರ್ಧಾರ, ಸ್ವಾವಲಂಬನೆಯಂತಹ ಗುಣಗಳನ್ನು ರೂಢಿಸಿಕೊಳ್ಳಲು ಅವಿಭಕ್ತ ಕುಟುಂಬದಲ್ಲಿ ಹೆಚ್ಚು ಅವಕಾಶಗಳಿಲ್ಲ. ಈ ಕುಟುಂಬಗಳಲ್ಲಿ ದುಡಿಮೆಯ ಹೊರೆಯು ಕೆಲವರ ಮೇಲೆ ಬೀಳುವುದರಿಂದ ದುಡಿಯದವರಲ್ಲಿ ಇದು ಸೋಮಾರಿತನವನ್ನು ಪ್ರೋತ್ಸಾಹಿಸುತ್ತದೆ. ಕೌಟುಂಬಿಕ ಸಂಬಂಧಗಳಿಂದ ದೊರೆಯುವ ಹೆಚ್ಚಿನ ಭದ್ರತೆಯಿಂದಾಗಿ, ಇದು ಸದಸ್ಯರಲ್ಲಿ ಚತುರತೆ, ಸಾಹಸ ಪ್ರಿಯತೆ, ವ್ಯವಹಾರ ಪ್ರಜ್ಞೆಯನ್ನು ಬೆಳೆಸುವುದಿಲ್ಲ. ಕೂಡು ಕುಟುಂಬಗಳು ಸಾಮಾನ್ಯವಾಗಿ ಪುರುಷ ಪ್ರಧಾನವಾಗಿರುವುದರಿಂದ ಸ್ತ್ರೀಯರಿಗೆ ಸ್ವಾತಂತ್ರ್ಯ ಮತ್ತು

ಸಮಾನತೆ ಇಲ್ಲ. ಅವರು ಪುರುಷರ ಹಿಂಸೆ ಮತ್ತು ಕಿರುಕುಳಕ್ಕೊಳಗಾಗುತ್ತಾರೆ. ಅವರ ಅಭಿಪ್ರಾಯಕ್ಕೆ ಮನ್ನಣೆ ಇರುವುದಿಲ್ಲ. ಮತ್ತು ಯಾವುದೇ ವಿಚಾರಗಳಿಗೂ ಸ್ತ್ರೀಯರ ಅಭಿಪ್ರಾಯ ಕೇಳುವುದು ವಿರಳವಾಗಿರುತ್ತದೆ. ಅವರ ಅಭಿಪ್ರಾಯಗಳನ್ನು ಮನ್ನಿಸುವುದಿಲ್ಲ. ಇಲ್ಲಿ ತಾಯಿ ತನ್ನ ಮಗಳ ವಿವಾಹದ ಕುರಿತು ಕೂಡ ಖಚಿತವಾದ ಅಭಿಪ್ರಾಯವನ್ನು ಹೇಳುವಂತಿಲ್ಲ. ಹೆಣ್ಣಿನ ಜೀವನವು ಅಡಿಗೆಮನೆ ಮತ್ತು ಗೃಹಕೃತ್ಯಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಆಕೆ ಮನೆಯ ಹೊರಗಿನ ಯಾವುದೇ ವ್ಯವಹಾರಗಳಲ್ಲಿ ಭಾಗವಹಿಸುವಂತಿಲ್ಲ. ಹೊರಗಿನ ಸಮಾರಂಭಗಳಿಗೆ ಸ್ವತಂತ್ರವಾಗಿ ಹೋಗುವಂತಿಲ್ಲ. ಇದರಿಂದಾಗಿ;

> "ಹಿಂದೂ ಅವಿಭಕ್ತ ಕುಟುಂಬದಲ್ಲಿ ಸ್ತ್ರೀಯರಿಗಿರುವ ಸ್ಥಾನಮಾನವು ಹಿಂದೂ ಸಾಮಾಜಿಕ ಜೀವನದ ಪ್ರಮುಖ ಸಮಸ್ಯೆಯಾಗಿದೆ" ಎಂದು ಸಮಾಜಶಾಸ್ತ್ರಜ್ಞ ಕೆ.ಎಂ. ಪಣಿಕ್ಕರ್ ಅಭಿಪ್ರಾಯ ಪಡುತ್ತಾರೆ.

ದ್ವೇಷ ಮತ್ತು ಒಳಜಗಳಗಳು ಕೂಡು ಕುಟುಂಬದ ಮತ್ತೊಂದು ದೌರ್ಬಲ್ಯವಾಗಿದೆ. ಪರಿವಾರದ ಮಂದಿಯಲ್ಲಿ ಹೊಂದಾಣಿಕೆ ಕಡಿಮೆ ಇದ್ದು ಹಿರಿಯ ಮತ್ತು ಕಿರಿಯ ಮಂದಿಗಳಲ್ಲಿ ಜಗಳ ನಿರಂತರವಾಗಿರುತ್ತದೆ. ಅತ್ತೆ ಸೊಸೆಯರಲ್ಲಿ ಹೊಂದಾಣಿಕೆಯ ಕೊರತೆಯು ಮನೆ- ಮನದ ಶಾಂತಿಗೆ ಭಂಗ ತರುವಂತಿರುತ್ತದೆ. ಆಂತರಿಕ ಮತ್ಸರ ಮತ್ತು ಒಳಗುದಿಯು ಕೆಲವೊಮ್ಮೆ ಸ್ಫೋಟಗೊಂಡು ಪರಸ್ಪರ ದ್ವೇಷ ಮತ್ತು ಕುಟುಂಬದ ಶಿಥಿಲತೆಗೆ ಕಾರಣವಾಗುತ್ತದೆ. ಕೂಡು ಕುಟುಂಬಗಳು ಸಹಜವಾಗಿ ಜನಜಂಗುಳಿಯಿಂದ ಕೂಡಿದ್ದು, ಏಕಾಂತಕ್ಕೆ ಅವಕಾಶವಿಲ್ಲದಿರುವುದು ಈ ಕುಟುಂಬದ ಮತ್ತೊಂದು ಅನಾನುಕೂಲವಾಗಿದೆ. ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಇಂತಹ ಪರಿಸರ ಅಡ್ಡಿಯಾಗುತ್ತದೆ. ನವದಂಪತಿಗಳ ಏಕಾಂತಕ್ಕೆ ಅವಕಾಶ ಇಲ್ಲವಾಗಿ ಪರಸ್ಪರ ಮುಕ್ತವಾಗಿ ಮಾತನಾಡಲು ಮತ್ತು ಆತ್ಮೀಯತೆಯನ್ನು ಬೆಳೆಸಿಕೊಳ್ಳಲು ಅಸಾಧ್ಯವಾಗುತ್ತದೆ. ಇದರಿಂದ ಆತ್ಮೀಯ ಸಂಪರ್ಕ ಮತ್ತು ಪರಸ್ಪರ ಅರಿವಿನ ಕೊರತೆಯಿಂದ ಗಂಡ ಹೆಂಡತಿಯರಲ್ಲಿ ಮೂಡ ಬೇಕಾದ ನೈಜ ಪ್ರೇಮಕ್ಕೆ ಅವಕಾಶವಿಲ್ಲದೆ ಅದು ಬತ್ತಿಹೋಗುತ್ತದೆ. ಈ ಮುಂತಾದ ಕೊರತೆಗಳು ಸಹಜ ಎಂಬಂತೆ ಕೂಡು ಕುಟುಂಬದಲ್ಲಿ ಕಂಡು ಬರುತ್ತವೆ.

ಪರಿವರ್ತನಾಶೀಲ ಸಾಮಾಜಿಕ ಸನ್ನಿವೇಶದಲ್ಲಿ ಕೂಡು ಕುಟುಂಬಗಳು ಅನೇಕ ಸವಾಲುಗಳು ಮತ್ತು ಬದಲಾವಣೆಗಳನ್ನು ಎದುರಿಸಿವೆ. ಇದರ ರಚನೆ ಮತ್ತು ಕಾರ್ಯಗಳಲ್ಲಿ ಅನೇಕ ಬದಲಾವಣೆಗಳಾಗಿವೆ. ಹಲವು ತಲೆಮಾರಿನ ರಕ್ತ ಸಂಬಂಧಿಗಳು ಒಟ್ಟಿಗೆ ವಾಸಿಸುತ್ತಿದ್ದ ಕೂಡು ಕುಟುಂಬಗಳು ಕೈಗಾರಿಕೀಕರಣ ಮತ್ತು ನಗರೀಕರಣದ ಪ್ರಭಾವದಿಂದ ಒಡೆದು ಆಧುನಿಕ ಕುಟುಂಬಗಳಾಗಿವೆ. ವಿದ್ಯಾವಂತ ಮತ್ತು ಉದ್ಯೋಗಸ್ಥ ದಂಪತಿಗಳು ಸ್ವತಂತ್ರ ಮನೆಗಳನ್ನು ಸ್ಥಾಪಿಸಿಕೊಳ್ಳಲು ಹಾತೊರೆಯುತ್ತಿದ್ದಾರೆ. ಪಟ್ಟಣ, ನಗರಗಳ ಉದ್ಯೋಗಾವಕಾಶ ಮತ್ತು ವ್ಯವಸಾಯದ ವಿಕರ್ಷಣೆ ಜನರನ್ನು ಹಳ್ಳಿಗಳಿಂದ ದೂರ ಸರಿಯುವಂತೆ ಮಾಡಿವೆ. ಸ್ವತಂತ್ರ ಜೀವನದ ಬಯಕೆ, ಕೂಡು ಕುಟುಂಬದ ಯಜಮಾನನ ಸ್ವಾಮ್ಯತ್ವದ ಹಿಡಿತದಿಂದ ವಿಮೋಚನೆ, ಗಳಿಕೆಯನ್ನು ತನ್ನ ಹೆಂಡತಿ ಮತ್ತು ಮಕ್ಕಳಿಗೆ ಖರ್ಚುಮಾಡಬೇಕೆನ್ನುವ ಸ್ವಾರ್ಥ, ಪರಿವಾರದ ಜನತೆಯಲ್ಲಿನ ಭಾವನಾಪರ ಸಂಬಂಧದ ಕೊರತೆ ಇವುಗಳೆಲ್ಲವು ಕೂಡು ಕುಟುಂಬದ ಶಿಥಿಲತೆಗೆ ಮತ್ತು ಸರಳ ಕುಟುಂಬದ ಉಗಮಕ್ಕೆ ಕಾರಣಗಳಾಗಿವೆ.

**ಸರಳ ಕುಟುಂಬಗಳು (ವಿಭಕ್ತ ಕುಟುಂಬ):**

ನಿರ್ದಿಷ್ಟವಾಗಿ ಗಂಡ - ಹೆಂಡತಿ ಮತ್ತು ಅವರ ಮಕ್ಕಳು ಒಂದೇ ಮನೆಯಲ್ಲಿ ವಾಸವಾಗಿರುವ ವಿಭಕ್ತ ಕುಟುಂಬವೇ ಸರಳ ಕುಟುಂಬವಾಗಿದೆ. ಇದನ್ನು ದಾಂಪತ್ಯ ಕುಟುಂಬವೆಂದು ಸಹ ಕರೆಯಬಹುದು. ಗ್ರಾಮೀಣ ವ್ಯವಸಾಯ ಮತ್ತು ಗೃಹ ಕೈಗಾರಿಕೆಗಳ ಕ್ಷೀಣಿಸುವಿಕೆ, ಶೈಕ್ಷಣಿಕ, ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿ, ಕೈಗಾರಿಕೀರಣ, ಸ್ತ್ರೀಯರ ಶಿಕ್ಷಣ, ಮತ್ತು ಆರ್ಥಿಕ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವ, ಆಧುನಿಕ ಕಾಯಿದೆಗಳು ಈ ಮುಂತಾದ ಅಂಶಗಳು ಸರಳ ಕುಟುಂಬದ ರಚನೆಗೆ ಕಾರಣಗಳಾಗಿವೆ. ಅಲ್ಲದೆ ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿ, ಸಾರಿಗೆ-ಸಂಪರ್ಕ, ಶಿಕ್ಷಣದಲ್ಲಿನ ಪ್ರಗತಿ, ಆರೋಗ್ಯ ಸೌಲಭ್ಯಗಳ ಹೆಚ್ಚಳ, ಉದಾರತ್ವ, ವ್ಯಕ್ತಿ ಪ್ರಾಧಾನ್ಯ ಮುಂತಾದ ವಾಸ್ತವ ಬೆಳವಣಿಗೆಗಳು ಸರಳ ಕುಟುಂಬ ರಚನೆಗೆ ಪೂರಕವಾಗಿವೆ.

ಹೀಗೆ ಹಲವಾರು ವಿಧಗಳಲ್ಲಿ ಮಾರ್ಪಟ್ಟಿರುವ ಆಧುನಿಕ ಸರಳ ಕುಟುಂಬ ಗಾತ್ರದಲ್ಲಿ ಸಣ್ಣದು. ಅದು ಹಿಂದಿನ ಕುಟುಂಬದ ಹಾಗೆ ಹತ್ತಿರದ ರಕ್ತಸಂಬಂಧಿಗಳೆಲ್ಲರನ್ನೂ ಒಳಗೊಂಡಿರುವುದಿಲ್ಲ. ಗಂಡ- ಹೆಂಡತಿ ಮತ್ತು ಅವರ ಅವಿವಾಹಿತ ಮಕ್ಕಳು ಇಂದಿನ ಸರಳ ಕುಟುಂಬದ ಪ್ರಮುಖ ಸದಸ್ಯರು. ಇದನ್ನು 'ಮೂಲ ಕುಟುಂಬ' ಅಥವಾ ಪ್ರಾಥಮಿಕ ಕುಟುಂಬ (Nuclear family) ಎಂದು ಕರೆಯುತ್ತಾರೆ. ಕೂಡು ಕುಟುಂಬದ ಗಾತ್ರ ಹಾಗೂ ಪಾತ್ರಗಳಲ್ಲಿ ಬದಲಾವಣೆ ಹೊಂದಿ ಸರಳ ಕುಟುಂಬಗಳು ರಚನೆ ಗೊಂಡಿವೆ. ಆದರೆ,ಕುಟುಂಬದ ಮುಖ್ಯ ಕಾಳಜಿಗಳಾದ ಸಂತಾನೋತ್ಪತ್ತಿ, ಮಕ್ಕಳ ಪೋಷಣೆ, ಸಾಮಾಜಿಕ ಹಾಗೂ ಆರ್ಥಿಕ ಭದ್ರತೆ, ನೀತಿಯುತವಾದ ಜೀವನ ಇವುಗಳ ಮೂಲಭೂತ ಧೋರಣೆಗಳಿಗೆ ಯಾವುದೇ ರೀತಿಯ ಧಕ್ಕೆ ಉಂಟಾಗಿರುವುದು ಮೇಲು ನೋಟಕ್ಕೆ ವ್ಯಕ್ತವಾಗುವುದಿಲ್ಲ. ವ್ಯಕ್ತಿಗಳಲ್ಲಿ ಲೈಂಗಿಕ ಬಯಕೆಯು ಸ್ವಾಭಾವಿಕವಾದದ್ದು. ಸರಳ ಕುಟುಂಬವು ವ್ಯಕ್ತಿಗಳಿಗೆ ಖಚಿತವೂ ಮತ್ತು ಸ್ಥಿರವೂ ಆದ ಲೈಂಗಿಕ ತೃಪ್ತಿಯನ್ನು ತಂದು ಕೊಡುತ್ತದೆ. ಈ ನೆಲೆಯಲ್ಲಿ ಮಿತ ಸಂತಾನೋತ್ಪತ್ತಿಯು ಕೂಡ ಸರಳ ಕುಟುಂಬದ ಅಗತ್ಯಗಳಲ್ಲಿ ಒಂದಾಗಿದೆ. ಮಕ್ಕಳ ಪಾಲನೆ ಪೋಷಣೆಯು ಇಲ್ಲಿ ಸಂಪೂರ್ಣವಾಗಿ ತಂದೆ- ತಾಯಿಗಳ ಜವಾಬ್ದಾರಿಯಾಗಿದೆ. ಶಾಲೆ, ಆಸ್ಪತ್ರೆ, ಸಾರ್ವಜನಿಕ ಮನೋರಂಜನಾ ಕ್ಷೇತ್ರಗಳು ಈ ಜವಾಬ್ದಾರಿಯನ್ನು ಕಡಿಮೆಗೊಳಿಸಿವೆಯಾದರೂ, ಬಾಲ್ಯದಲ್ಲಿ ಮಕ್ಕಳ ಮೇಲೆ ತಂದೆ- ತಾಯಿಗಳ ಪೋಷಣೆ ಮತ್ತು ಪ್ರಭಾವಗಳು ಅನಿವಾರ್ಯವಾಗುತ್ತವೆ.

ಸರಳ ಕುಟುಂಬಗಳು ಆಧುನಿಕ ಸಮಾಜದ ಅನಿವಾರ್ಯಗಳಲ್ಲಿ ಒಂದಾಗಿವೆ. ಪ್ರಗತಿಪರ ಸಮಾಜ ಒಂದರಲ್ಲಿ ಸ್ತ್ರೀ- ಪುರುಷರಿಬ್ಬರೂ ಸಮಾನವಾದ ಅವಕಾಶ, ಸ್ಥಾನ-ಮಾನಗಳನ್ನು ಪಡೆಯುವುದು ಅನಿವಾರ್ಯವಾಗುವುದರಿಂದ ಸರಳ ಕುಟುಂಬಗಳ ದಾಂಪತ್ಯ ಜೀವನದಲ್ಲೂ ಗಂಡ- ಹೆಂಡತಿಯ ಸ್ಥಾನ ಮಾನಗಳು ಸಮಾನವಾಗಿರುತ್ತವೆ ಎಂಬುದು ಮೇಲು ನೋಟಕ್ಕೆ ವ್ಯಕ್ತವಾಗುತ್ತದೆ. ಅದಕ್ಕೆ ಕೂಡು ಕುಟುಂಬದಲ್ಲಿನ ಸೌಹಾರ್ದ ವಾತಾವರಣ, ಕುಟುಂಬ ಸದಸ್ಯರೆಲ್ಲರು ಒಂದು ಕಡೆ ಕಲೆತು ಬಾಳುವ ಜೀವನ, ಹಿರಿಯರ ಪ್ರೀತಿ ಈ ಮುಂತಾದ ಭಾವನಾತ್ಮಕ ಸನ್ನಿವೇಶಗಳು ಸರಳ ಕುಟುಂಬದಿಂದ ದೊರೆಯುವುದು ಅಸಾಧ್ಯವೆಂದು ಹೇಳಬೇಕಾಗುತ್ತದೆ. ಒಟ್ಟಿನಲ್ಲಿ ಆಯಾ ಕಾಲಕ್ಕೆ ಕೂಡು-ಕುಟುಂಬ ಸರಳ ಕುಟುಂಬಗಳೆರಡೂ ಸಮಾಜದ ಅನಿವಾರ್ಯತೆಗಳಾಗಿದ್ದವು ಎಂಬುದು ಸ್ಪಷ್ಟವಾಗುತ್ತದೆ. ವಿಶ್ವದ ಎರಡು

ಮಹಾಯುದ್ಧಗಳ ಪರಿಣಾಮ, ಅಣುಶಕ್ತಿ ಮತ್ತು ನ್ಯೂಕ್ಲಿಯರ್ ಬಾಂಬ್‌ಗಳ ಉತ್ಪಾದನೆ, ಹಲವು ರಾಷ್ಟ್ರಗಳ ಸ್ವಾತಂತ್ರ್ಯ ಹೋರಾಟದ ಫಲ, ಕಾರ್ಮಿಕರ ಕ್ರಾಂತಿ, ಮಹಿಳಾ ಜಾಗೃತಿಯಂತಹ ಹಲವು ಹತ್ತು ಬದಲಾವಣೆಗಳು ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿ ಘಟಿಸಿವೆ. ಇವುಗಳೆಲ್ಲವೂ ಕುಟುಂಬದ ಮೇಲೆ ಪರಿಣಾಮಗಳನ್ನು ಉಂಟುಮಾಡಿವೆ. ಇಂದು ನಾವು ಕೇವಲ ಕೂಡು ಕುಟುಂಬ ಮತ್ತು ಸರಳ ಕುಟುಂಬಗಳ ರಚನೆಯನ್ನಷ್ಟೆ ಕಾಣುವುದಲ್ಲದೆ ಆಧುನಿಕ ಸಂಕೀರ್ಣ ಕುಟುಂಬಗಳ ರಚನೆಯನ್ನು ಕೂಡ ಕಾಣಬಹುದಾಗಿದೆ. ಇದರಲ್ಲಿ ಸಂತಾನದ ಇಚ್ಛೆ ಐಚ್ಛಿಕವಾಗಿರುತ್ತದೆ. ಪುರುಷ ಸ್ತ್ರೀ ಪರಸ್ಪರ ಒಪ್ಪಿ ವಿವಾಹವನ್ನು ತಮ್ಮ ಉದ್ದೇಶದಂತೆ ಮಾಡಿಕೊಳ್ಳುತ್ತಾರೆ. ಇದು ಸಂತಾನದ ಅಪೇಕ್ಷೆಯನ್ನು ನೇರವಾಗಿ ಹೊಂದಿರುವುದಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ಮುಂತಾದ ನೆಲೆಗಳಲ್ಲಿ ಸಮಾನತೆಯನ್ನು ಪಡೆದಿರುವ ಗಂಡು- ಹೆಣ್ಣುಗಳು, ಎಲ್ಲಾ ದೃಷ್ಟಿಯಿಂದಲೂ ಒಪ್ಪಿತಗೊಳ್ಳುವ ಜೀವನ ಸಂಗಾತಿಯ ಆಯ್ಕೆಯನ್ನು ಅಪೇಕ್ಷಿಸುತ್ತಾರೆ. ಯಾವುದೇ ಕಾಲದಲ್ಲಿಯೇ ಇರಲಿ, ವಿವಾಹ ಕೇವಲ ಸಾಮಾಜಿಕ ಮತ್ತು ರಾಜಕೀಯ ಜೀವನದ ಅನಿವಾರ್ಯತೆ ಮಾತ್ರವಾಗಿ ಕಂಡು ಬರುವುದಿಲ್ಲ. ಬದಲಿಗೆ, ಆರ್ಥಿಕತೆಯ ಅನಿವಾರ್ಯತೆ ಕೂಡ ಆಗಿರುವುದು ವ್ಯಕ್ತವಾಗುತ್ತದೆ. ಆಧುನಿಕ ಸ್ತ್ರೀ- ಪುರುಷರ ಮನಸ್ಥಿತಿಗಳೆರಡೂ ಸ್ವಾವಲಂಬನೆ ಮತ್ತು ಸ್ವಂತ ಉದ್ಯೋಗದ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ತಳೆಯುತ್ತಿವೆ. ಈ ನೆಲೆಯಲ್ಲಿ ಇಂದು ಕುಟುಂಬ ಜೀವನ- ದಾಂಪತ್ಯ ಜೀವನ ಹೆಚ್ಚು ಹೆಚ್ಚು ಸಂಕೀರ್ಣಗೊಂಡಿದೆ. ಗಂಡ- ಹೆಂಡತಿ ಕುಟುಂಬ ಜೀವನಕ್ಕಾಗಿ ತಮ್ಮ ವೇಳೆಯನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಮಕ್ಕಳ ಪಾಲನೆ- ಪೋಷಣೆ, ಆರೋಗ್ಯ, ಶಿಕ್ಷಣ, ಈ ಮುಂತಾದ ಪ್ರಾಥಮಿಕ ಕರ್ತವ್ಯಗಳಲ್ಲದೆ, ಪರಸ್ಪರ ಪ್ರೀತಿ, ಆತ್ಮವಿಶ್ವಾಸ, ನಂಬಿಕೆಗಳನ್ನು ಬೆಳೆಸುವ ಜವಾಬ್ದಾರಿಯು ಕೂಡ ಮೂಲದಲ್ಲಿ ಕುಟುಂಬದ ಜವಾಬ್ದಾರಿಯೇ ಆಗಿರುತ್ತದೆ. ಸಂಕೀರ್ಣ ಕುಟುಂಬಗಳು ಮಕ್ಕಳ ಪಾಲನೆ- ಪೋಷಣೆ, ಆರೋಗ್ಯ, ಶಿಕ್ಷಣ ಇವುಗಳಿಗೆಲ್ಲ ಹಣ ವ್ಯಯಮಾಡಿ ಉತ್ತಮವಾದುದನ್ನೇ ದೊರೆಯುವಂತೆ ಮಾಡುತ್ತವೆ. ಪಲ್ಲಟಗೊಂಡ ವ್ಯವಸ್ಥೆಯಲ್ಲಿ ಮಕ್ಕಳಿಗಾಗಿ ಪ್ರೀತಿ, ಆತ್ಮವಿಶ್ವಾಸದ ನಂಬಿಕೆಯ ವಾತಾವರಣವನ್ನು ಕಲ್ಪಿಸಿಕೊಡುವುದರಲ್ಲಿ ಸಂಕೀರ್ಣ ಕುಟುಂಬಗಳು ಸೋಲುತ್ತಿವೆ ಎಂದು ಹೇಳಬೇಕಾಗುತ್ತದೆ. ಇದರಿಂದಾಗಿ ಮಕ್ಕಳಲ್ಲಿ ಏಕಾಂಗಿತನ, ಆತ್ಮವಿಶ್ವಾಸದ ಕೊರತೆ, ಸ್ವ- ನಿರ್ಣಯದ ಕುಂಠಿತತೆ ಎದ್ದು ಕಾಣುತ್ತದೆ. ಪರಸ್ಪರ ನಂಬಿಕೆ -ಪ್ರೀತಿಯ ವಾತಾವರಣದಿಂದ ಸಂಪೂರ್ಣವಾಗಿ ವಂಚಿತಗೊಂಡು ಸಮಾಜಕ್ಕೆ ಮಾರಕ ವ್ಯಕ್ತಿಗಳಾಗಿ ಮಾರ್ಪಡುವ ಅಪಾಯ ವ್ಯಕ್ತವಾಗುತ್ತದೆ.

ವಿವಾಹ-ಕುಟುಂಬಗಳ ರಚನೆ-ವಿನ್ಯಾಸ ಅರ್ಥ ಪರಿಕಲ್ಪನೆಯನ್ನು ಮಾನವ ಶಾಸ್ತ್ರಜ್ಞರು- ಸಮಾಜಶಾಸ್ತ್ರಜ್ಞರು ನಿರ್ವಚಿಸಿದ ಹಿನ್ನೆಲೆಯಲ್ಲಿಯೇ ಗ್ರಹಿಸಬೇಕಾಗುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ, ಈ ಶಾಸ್ತ್ರಗಳು ವ್ಯಕ್ತಿಗಳ ವಿವಾಹ ಮತ್ತು ಕುಟುಂಬ ಜೀವನದ ಬಗ್ಗೆ ನಿರ್ವಚಿಸುವ ಮಾಹಿತಿಗಳು ಚಾರಿತ್ರಾತ್ಮಕವಾಗಿ ಸಾಹಿತ್ಯದ ಗ್ರಹಿಕೆಗಳನ್ನು, ತೀರ್ಮಾನಗಳನ್ನು ಪುಷ್ಟೀಕರಿಸುತ್ತವೆ. ವಿವಾಹ- ಕುಟುಂಬ ಜೀವನದ ಸಾಧ್ಯಾ ಸಾಧ್ಯತೆಗಳನ್ನು ಆ ನೆಲೆಯಿಂದಲೇ ಪುನರ್ ರಚಿಸಬೇಕಾಗುತ್ತದೆ.

# ಅನುಬಂಧ

*೧ ಐನಾಪುರ ಎಲ್.ಎಸ್. ಮತ್ತು ಮಲ್ಲಿನಾಥಯ್ಯ ಡಿ.ಎಚ್. ಇವರ 'ಮಾನವಶಾಸ್ತ್ರ ಪರಿಚಯ' ಈ ಕೃತಿಯ ೧೪೦-೧೬೨ರ ವರೆಗಿನ ಪುಟಗಳ ಚರ್ಚೆ. 'ಸಾಂಸ್ಕೃತಿಕ ಮಾನವಶಾಸ್ತ್ರ' ಈ ಕೃತಿಯ ೧೧೦-೧೧೧ರ ಪುಟಗಳ ಚರ್ಚೆಯನ್ನು ಗಮನಿಸಿಕೊಂಡಂತೆ. ಇವು ಮಾನವ ಸಂಘಜೀವಿ ಎನ್ನುವುದನ್ನು ಬಲವಾಗಿ ನಿರೂಪಿಸುತ್ತವೆ.

*೨ ಮಲ್ಲಿನಾಥಯ್ಯ ಡಿ.ಎಚ್. ಅವರ 'ಸಾಂಸ್ಕೃತಿಕ ಮಾನವಶಾಸ್ತ್ರ'ದಲ್ಲಿ ೮೮ ರಿಂದ ೧೦೧ರ ವರೆಗಿನ ವಿಶ್ಲೇಷಣೆಯನ್ನು ಗಮನಿಸಿಕೊಂಡಂತೆ.

*೩ ಆದಿ ಆರ್ಯರ ಸಮಾಜದಲ್ಲಿ ಸತ್ರ ಎಂಬ ವ್ಯವಸ್ಥೆ ಕಂಡುಬರುತ್ತದೆ. ಇದರಲ್ಲಿ ಸಾಮೂಹಿಕವಾಗಿ ಉತ್ಪಾದಿಸಿ ಅನುಭೋಗಿಸಲಾಗುತ್ತಿತ್ತು. ಅಂದಿನ ಸಮಾಜದ ಜನರು ಈಗಲೂ ಭಾರತದ ಕೆಲವು ಹಳ್ಳಿಗಳಲ್ಲಿ ಕಾಣಬಹುದಾದ ಅವಿಭಜಿತ ಕುಟುಂಬಗಳಂತೆ ಜೀವನ ಸಾಗಿಸುತ್ತಿದ್ದರು. ಕೆಲಸಗಳ ವೈವಿಧ್ಯ ಮತ್ತು ಯಜಮಾನನ ಅಧಿಕಾರಗಳು ಆಗ ಇರಲಿಲ್ಲ. ಅಲ್ಲಿ ಹೆಂಗಸರು ಮತ್ತು ಗಂಡಸರು ಮಾಡುವ ಕೆಲಸಗಳಲ್ಲಿ ಮಾತ್ರ ವ್ಯತ್ಯಾಸ ಕಾಣುತ್ತಿತ್ತು. ಗಂಡಸರು ಬೇಟೆ, ಹೋರಾಟ ಮೊದಲಾದವುಗಳಲ್ಲಿ ನಿರತರಾಗಿದ್ದರೆ ಹೆಂಗಸರು ಅಡುಗೆ, ಹಾಲು ಕರೆಯುವುದು ಮೊದಲಾದ ಕೆಲಸಗಳಲ್ಲಿ ನಿರತರಾಗಿದ್ದರು. ಹೇಗಿದ್ದರೂ ಇವರಿಬ್ಬರ ಶ್ರಮವೂ ಸಾಮೂಹಿಕವಾಗಿಯೇ ಜರುಗುತ್ತಿತ್ತು. ಆದ್ದರಿಂದಲೇ ಇವರಿಗೆ ಸ್ವಂತ ಮನೆಗಳು ಇರುತ್ತಿರಲಿಲ್ಲ. ಹಾಗೆಯೇ ಗಂಡು ಹೆಣ್ಣುಗಳ ಸ್ಥಾನಮಾನಗಳಲ್ಲಿ ವ್ಯತ್ಯಾಸವೂ ಇರಲಿಲ್ಲ. ವೃತ್ತಿ ವೈವಿಧ್ಯ, ಶ್ರಮವಿಭಜನೆ, ಶೋಷಕ ಮತ್ತು ಶೋಷಿತ ಎಂಬ ವರ್ಗ ವ್ಯವಸ್ಥೆ, ವಸ್ತುಗಳ ವಿನಿಮಯ- ಇವ್ಯಾವುವೂ ಆ ಸಮಾಜದಲ್ಲಿ ಅಸ್ತಿತ್ವದಲ್ಲಿರಲಿಲ್ಲ. ಜತೆಗೆ ಸಮುದಾಯದ ಗಾತ್ರ ಚಿಕ್ಕದಾಗಿದ್ದುದರಿಂದಲೂ ಆಗ ಆಳುವ ಮತ್ತು ಆಳಿಸಿಕೊಳ್ಳುವ ಒಂದು ವ್ಯವಸ್ಥೆಯ ಅಗತ್ಯವಿರಲಿಲ್ಲ. ಆದುದರಿಂದಲೇ ಆಳುವ ವರ್ಗದ ಹಿತಾಸಕ್ತಿಗಳಿಗೆ ಕಾರಣವಾದ ರಾಜ್ಯ, ವರ್ಗ, ಸೈನ್ಯ, ಪೋಲೀಸ್, ತೆರಿಗೆ ಇವು ಇರಲಿಲ್ಲ. ಆ ಸಮಾಜಕ್ಕೆ ಇಂತಹ ವ್ಯವಸ್ಥೆಯ ಅಗತ್ಯವಿರಲಿಲ್ಲ ಎನ್ನುವುದು ಮಹಾಭಾರತದ ಶಾಂತಿ ಪರ್ವದ ೧೦೧, ೧೧೦, ೨೩೮ರ ಶ್ಲೋಕಗಳಿಂದ ತಿಳಿದು ಬರುತ್ತದೆ. (ಹೆಚ್ಚಿನ ವಿವರಗಳಿಗೆ : ಅರಿವು ಬರಹ ಸಂಚಿಕೆ ೯. ೧೯೯೫ರಲ್ಲಿ ಇರುವ ಡಿ.ಡಿ.ಕೊಸಾಂಬಿ (ಮೂಲ) ವೇಣುಗೋಪಾಲ ಟಿ.ಎನ್. ಮತ್ತು ಶೈಲಜಾ (ಅನು) ಇವರ ಲೇಖನ ನೋಡಿ.)

*೪ ಮನುಸ್ಮೃತಿಯಲ್ಲಿ ಸಗೋತ್ರದವಳು ತಂಗಿ, ಅತ್ತೆ ಆಗಿರಬಹುದು. ಅಂತಹವರು ಹೆಂಡತಿಯಾಗತಕ್ಕವರಲ್ಲ. ರಕ್ತಭೇದವಿಲ್ಲ. ರಕ್ತಭೇದದಿಂದ ಅಭಿವೃದ್ಧಿಯನ್ನು ಒಪ್ಪುವಾಗ ಇದು ವಿರುದ್ಧವು ಎಂದು ಸಗೋತ್ರ ವಿವಾಹವನ್ನು ನಿಶೇಧಿಸಲಾಗಿದೆ. (ಮನು III - ೧೧)

*೫ ಕೃತಯುಗದಲ್ಲಿ ಭರತಶ್ರೇಷ್ಠನೇ, ಇವರಿಗೆ (ಜನರಿಗೆ) ಮೈಥುನವು (ಗರ್ಭೋತ್ಪತ್ತಿ) ಧರ್ಮವಾಗಿರಲಿಲ್ಲ. ಸಂಕಲ್ಪದಿಂದಲೇ ಗರ್ಭ ಉಂಟಾಗುತ್ತಿತ್ತು (ಮಹಾ ಭಾರತ ಶಾಂತಿ ಪರ್ವ ೨೦೭ -೪೨) ಅನಂತರ ತ್ರೇತಾಯುಗದಲ್ಲಿ ಸ್ಪರ್ಶದಿಂದ ಮಕ್ಕಳಾಗುವುದು ಪ್ರಾರಂಭವಾಯಿತು. ಅವರಿಗೆ ಮೈಥುನವು ಧರ್ಮವಾಗಿರಲಿಲ್ಲ (ಮಹಾಭಾರತ ಶಾಂತಿ ಪರ್ವ ೨೦೭-೪೩) ದ್ವಾಪರ ಯುಗದಲ್ಲಿ ಜನರಿಗೆ ಮೈಥುನವು

ಧರ್ಮವಾಯಿತು, ಹಾಗೆಯೇ ಕಲಿಯುಗದಲ್ಲಿ ಜನರು ದ್ವಂದ್ವ (ದಾಂಪತ್ಯ)ವನ್ನು ಹೊಂದಿದರು (ಮಹಾಭಾರತ ಶಾಂತಿ ಪರ್ವ ೨೦೭-೧೯)

*೬ ಕಲಿಯುಗದ ವರ್ಗ ಸಮಾಜದ ಕಾನೂನು ತಜ್ಞನಾದ ಮನುವು ಹಿಂದೆ ಪ್ರಚಲಿತವಿದ್ದ ಒಬ್ಬನಿಗೊಬ್ಬಳು ಕುಟುಂಬ ವ್ಯವಸ್ಥೆಯ ಮೈಥುನ ಧರ್ಮವನ್ನು ನಿಷೇಧಿಸುತ್ತಾನೆ. ಅದರ ಬದಲಾಗಿ ಗಂಡಸು ತನ್ನದೇ ಆದ ಮಗನನ್ನು ಪಡೆಯಲಿಕ್ಕಾಗಿ ಹೆಂಗಸನ್ನು ಕಾಪಾಡಬೇಕು ಎಂದು ಹೇಳುತ್ತಾನೆ. ಎಂದರೆ, ಪ್ರಜಾವಿಶುದ್ಧಿಗಾಗಿ ಸ್ತ್ರೀಯನ್ನು (ಸ್ತ್ರೀ ಪರಿಶುದ್ಧಿಯನ್ನು) ಪಯತ್ನ ಪಟ್ಟು ಉಳಿಸಬೇಕು ಎಂಬುದು ಆತನ ಅಭಿಪ್ರಾಯವಾಗಿದೆ. (ಮನು ix-೧)

*೭ "The herds and the other new object of wealth brought about a revolution in the family. Gaining a livelihood had always been the business of the man; he produced and owned the means therefore. The herds were the new means of gaining a livelihood, and their original domestication and subsequent tending was his work. Hence, he owned the cattle, and the commodities and slaves obtained in exchange for them. All the surplus now resulting from production fell to the man; the woman shared in consuming it, but she had no share in owning it. The savageing it, but she had no share in owning it. The 'savage warrior and hunter had been content to occupy second place in the house and give precedence to occupy second place in the house and give precedence to the woman. The 'genler' shepherd, presuming upon his wealth pushed forward to first place and forced the woman into second in the fimily had regulated the distribution of property between man and wife. This division of labour remained unchanged. and yet it put the former domestic relationship the family had regulated the distribution of property between man and wife. This division of labour remained unchanged, and yet it put the former domestic relationship topsy- turvy simply because the division of labour outside the family had changed. The very same cause that had formerly made the woman supreme in the house, namely her being confined to domestic work, now assured supremacy in the house for the man: the women's house work in obtaining a livehood; the latter as everything, the former an insignificant contribution......His achievement of actual supremacy in the house threw down the last barrier to the man's autocracy. This autocracy was confirmed and prepetuated by the overthrow of mother right, the introduction of father right and the gradual transition form the pairing family to monogamy. This made beach in the old gentile order: the monogamian family became a power and rose threateningly against the gens. (Engels :1889; 236-264)

*೮ 'ಭಾರ್ಯದಾನ ಮಹಾದಾನ' ಎಂದು ಪರಿಗಣಿಸಿದ ಸಮಾಜ ಹೆಂಡತಿಯನ್ನು ಪರಪುರುಷನೊಂದಿಗೆ ಹಂಚಿಕೊಳ್ಳುವುದು ಮಾನ್ಯಮಾಡಿತ್ತು. ಈ ಕುರಿತು ಹಿಲ್‌ಬ್ರ್ಯಾಂಡ್ ಆಲ್ಫ್ರೆಡ್ ಅವರ ವೇದಿಕ್ ಮೈಥಾಲಜಿ, ಮೋತಿಲಾಲ್ ಬನಾರಸಿದಾಸ್, ಡೆಲ್ಲಿ : ೧೯೮೧. ಈ ಕೃತಿಯಲ್ಲಿ ದೀರ್ಘ ಚರ್ಚೆಗಳಿವೆ ಗಮನಿಸಿ.

*೯ " The over- throw of mother right was the world historic defeat of the female sex. The man seized the reins of the house also; the women was degraded, enthralled, the slave of the man's lust, a mere instrument of breeding children" (Engels :1889; 94)

*೧೦ ಮನುವು ಆತನ ಗ್ರಂಥದಲ್ಲಿ ಹೇಳುವಂತೆ; ಮಗನು ಗಂಡನಿಗೆ ಸೇರಿದವನೆಂದು ತಿಳಿಯಲಾಗುತ್ತದೆ, ಗಂಡನು ಯಾರು ಎಂಬ ವಿಷಯದಲ್ಲಿ ಎರಡು ವಿಧವಾಗಿ ಕೇಳಿಬರುತ್ತಿದೆ. ಕೆಲವರ ಪ್ರಕಾರ ಉತ್ಪಾದಕನೇ ಗಂಡನಾದರೆ ಇತರರ ಪ್ರಕಾರ ಕ್ಷೇತ್ರಾಧಿಪಿತ ಗಂಡನಾಗುತ್ತಾನೆ. (ಮನು IX- ೩೨) ಎಲ್ಲಾ ಪ್ರಾಣಿಗಳ ಸೃಷ್ಟಿಯಲ್ಲಿ ಬೀಜದ ಲಕ್ಷಣ ಗುರುತು ಹಿಡಿಯುವಂತಿರುತ್ತದೆ. (ಮನು' I -೩೫)

*೧೧ ಪರಾಶರ ಸ್ಮೃತಿ ಚಿರಕಾರಿಯ ಧರ್ಮ ಸಂಕಟವನ್ನು ಕೆಳಗಿನಂತೆ ನಿರೂಪಿಸುತ್ತದೆ; ತಂದೆಯ ಆಜ್ಞೆಯನ್ನು ಪಾಲಿಸುವುದು ಪರಧರ್ಮ, ತಾಯಿಯ ರಕ್ಷಣೆ ಸ್ವಧರ್ಮ, ಹೀಗೆ ಪುತ್ರತ್ವವೆಂಬುದು ಪರತಂತ್ರ. ನನಗೆ ಮಾತ್ರ ಈ ಧರ್ಮದ ಪಾಲನೆಗೆ ಅಡ್ಡಿ ಬಂದಿದೆ. ಸ್ತ್ರೀಯನ್ನು ಅಲ್ಲದೆ ತಾಯಿಯನ್ನು ಕೊಂದು ಯಾರು ಎಂದಾದರೂ ಸುಖಿಯಾಗಬಲ್ಲನೆ? ತಂದೆಯನ್ನು ಅವಮಾನಿಸಿ ಯಾರು ಒಳ್ಳೆಯ ಹೆಸರು ಕೇಳಬಲ್ಲನು ಎಂದು ನಿರೂಪಿಸುತ್ತದೆ.

*೧೨ ಪುರಾಣ ಮತ್ತು ವಾಸ್ತವ ಎನ್ನುವ ಪುಸ್ತಕದ ಮುನ್ನುಡಿಯಲ್ಲಿ ಸುವರ್ಣಯುಗ ಚರಿತ್ರೆಯಲ್ಲಿ ಸ್ತ್ರೀಯರ ಗುಲಾಮಗಿರಿಯ ವಿವಿಧ ಹಂತಗಳ ದೀರ್ಘ ವಿವರಣೆಗಳು ಸಿಗುತ್ತವೆ. (ಡಿ.ಡಿ. ಕೊಸಾಂಬಿ, ಮಿಥ್ ಎಂಡ್ ರಿಯಾಲಿಟಿ, ಪಾಪ್ಯುಲರ್ ಪ್ರಕಾಶನ, ಬಾಂಬೆ, ೧೯೬೨. ಪುಟ -೧೧೯ರಿಂದ ೨೦೩)

*೧೩ ಬಂಧುತ್ವ ಎಂದರೆ ವ್ಯಕ್ತಿಗಳ ನಿಕಟ ಹಾಗೂ ದೂರದ ಬಂಧು ಬಳಗವನ್ನು ತಾತ್ವಿಕವಾಗಿ ಸೂತ್ರೀಕರಿಸುವ, ಮತ್ತು ಅಂತಹ ಬಾಂಧವ್ಯವನ್ನು ರೂಪಿಸಿಕೊಳ್ಳುವ ವಿಧಾನ. ಬಂಧತ್ವವು. ಪ್ರತಿಯೊಂದು ಮಾನವ ಸಮಾಜದ ಸಾಮಾಜಿಕ ವ್ಯವಸ್ಥೆಯ ಅಡಿಪಾಯ. ಆ ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆ ಬಂಧುತ್ವವನ್ನು ಆಧರಿಸಿರುತ್ತದೆ. ಆದ್ದರಿಂದ ಬಂಧತ್ವದ ಸ್ವರೂಪದ ಅರಿವು ಆಯಾ ಸಮಾಜದ ವ್ಯವಸ್ಥೆಯ ತಿಳುವಳಿಕೆಗೆ ಅತ್ಯವಶ್ಯ. ಬಂಧುತ್ವದಲ್ಲಿ ಮುಖ್ಯವಾಗಿ ಎರಡು ವಿಧ: ೧. ರಕ್ತ ಬಾಂಧವ್ಯ. ೨. ವೈವಾಹಿಕ ಬಾಂಧವ್ಯ.

ರಕ್ತ ಬಾಂಧವ್ಯ- (ಕಳ್ಳು ಬಳ್ಳಿ ಸಂಬಂಧ- ಕನ್ಸಾಗ್ಯುನಿಯಲ್) ಆ ಶಬ್ದವೇ ಸೂಚಿಸುವಂತೆ ರಕ್ತಬಾಂಧವ್ಯ ವ್ಯಕ್ತಿಗೆ ಆಜನ್ಮತಃ ಬರುವಂತಹ ಪ್ರಾಥಮಿಕ ಹಾಗೂ ಅತ್ಯಂತ ನಿಕಟ ಬಾಂಧವ್ಯ. ರಕ್ತಬಾಂಧವರು ಒಂದೇ ವಂಶಮೂಲೀಯರು ಒಂದೇ ಗೋತ್ರಜರು.

ವೈವಾಹಿಕ ಬಾಂಧವ್ಯ- (ಹೊರಬಾಂಧವ್ಯ- ಅಫಿನಲ್) ಇದು ರಕ್ತಬಾಂಧವ್ಯದಂತೆ ಹುಟ್ಟುಬಾಂಧವ್ಯವಲ್ಲ. ಕಟ್ಟು ಬಾಂಧವ್ಯ; ವೈವಾಹಿಕ ಸಂಬಂಧದ ಮುಖಾಂತರ ಹೊಸದಾಗಿ ಸೃಷ್ಟಿಗೊಂಡಂಥದು. ಇದರಲ್ಲಿ ಗಂಡ ಹೆಂಡತಿ, ಅತ್ತೆ ಮಾವ, ಸೊಸೆ ನಾದಿನಿ, ಅತ್ತಿಗೆ ಮೈದುನ- ಇತ್ಯಾದಿಗಳು ಬರುತ್ತಾರೆ. ಇದು ಲೋಕವ್ಯಾಪಕ ಬಾಂಧವ್ಯ. ಗಮನಿಸಿ: ( John Lewis : Anthropology Made Simple; A Howard & Wyndham Company, London 1978.Pg.No 18 -49)

*೧೪. ಭಯದ ನೆಲೆಯಲ್ಲಿ ವಿಶಿಷ್ಟ ಶಕ್ತಿಯನ್ನು ಮುಂದಿಟ್ಟು ದೇವರ ಸೃಷ್ಟಿಗೆ ಕಾರಣವಾಗಿ ಆ ಮೂಲಕವೂ ವಾರ್ಷಿಕ ಆವರ್ತಗಳಿಗೆ ಹಲವು ಆರಾಧನಾತ್ಮಕ ವಿಶಿಷ್ಟತೆಗಳು ಸೇರ್ಪಡೆಯಾಗಿವೆ. ಮೂಲಭೂತವಾಗಿ ಇದಕ್ಕೆ ಪೂರಕವಾಗಿಯೇ ಹಲವು ರೀತಿಯ ಸಂಸ್ಕಾರಾತ್ಮಕ ಅಂಶಗಳನ್ನು ಜೀವನದಲ್ಲಿ

ಆಳವಡಿಸಿಕೊಳ್ಳಲಾಗಿದೆ. ಹುಟ್ಟಿನಿಂದ ಸಾವಿನ ತನಕದ ಬಾಳುವೆಯಲ್ಲಿ ಒಳಗುಪಡಿಸಿಕೊಂಡ ಹಲವಾರು ಸಂಸ್ಕಾರಗಳು ಧಾರ್ಮಿಕ, ಸಾಮಾಜಿಕ, ಮತ್ತು ಸಾಂಸ್ಕೃತಿಕತೆಗೆ ಪೂರಕವಾಗಿ ನಿಯತವಾಗಿವೆ. ಆದುದರಿಂದ ವಾರ್ಷಿಕ ಆವರ್ತವೆಂಬುದು ಬಹುಮುಖೀ ನೆಲೆಯನ್ನು ಹೊಂದಿಕೊಂಡದ್ದಾಗಿದೆ. ಮನುಷ್ಯ ತನ್ನ ಹುಟ್ಟಿನಿಂದ ಸಾವಿನತನಕದ ಬಾಳುವೆಯಲ್ಲಿ ರಕ್ಷಣಾತ್ಮಕವಾಗಿ ಆರೋಪಿಸಿಕೊಂಡು ಮುಂದಡಿ ಇಡುವ ಈ ನಡಾವಳಿಗಳು ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳಲ್ಲಿ ಅನನ್ಯವೂ ಅನ್ವಯಾತ್ಮಕವೂ ಆಗಿ ಪರಿಗಣಿತಗೊಂಡಿವೆ. ಲಿಂಗ ಪ್ರಧಾನ ನೆಲೆಗಳಿಂದಲೂ ಪರಿಪ್ರೇರಿತಗೊಂಡಿದೆ. ಹುಟ್ಟಿಗೆ ಸಂಬಂಧಿಸಿ ನಡೆಸುವ ಆಚರಣೆಗಳು, ವಿಧಿ- ನಿಶೇಧಗಳು, ಮಡಿ- ಮೈಲಿಗೆ, ನಾಮಕರಣ, ಮೈನೆರೆಯುವ ಮೂಲಕ ಪ್ರೌಢಾವಸ್ಥೆಗೆ ಕಾಲಿರಿಸಿದಾಗಿನ ಆಚರಣೆ, ಮದುವೆ, ಮರಣ ಮನುಷ್ಯ ಜೀವಿತದಲ್ಲಿ ವಿಶಿಷ್ಟ ಘಟ್ಟಗಳಾಗಿಯೂ ಆಚರಣೆಗಳು ನಿರ್ಧಾರಿತಗೊಂಡಿವೆ. ದೇವರ, ಧರ್ಮ ಕೇಂದ್ರವಾದಂಥ ಕಾಲ ಸಂಬಂಧೀ ವಾರ್ಷಿಕ ಆಚರಣೆಗಳ ಆವರ್ತಗಳು, ಆರಾಧನಾತ್ಮಕವಾಗಿಯೂ, ಸಾಂಸ್ಕೃತಿಕ ಅನನ್ಯತೆಯಿಂದಲೂ ಪ್ರೇರಿತವಾಗಿ ಸಾಮಾಜಿಕವಾಗಿ ವಿಶಿಷ್ಟಾರ್ಥ ಪ್ರಾಪ್ತಿಸಿಕೊಳ್ಳುವಂತಿರುತ್ತವೆ.

*೧೫ ವಿವಾಹವು 'ಕುಟುಂಬ ವ್ಯವಸ್ಥೆ'ಯ ಮೂಲಭೂತ ಘಟಕ. ಗಂಡು - ಹೆಣ್ಣು ಜೊತೆಯಾಗಿ ಬದುಕಲು ಇರುವ ಒಪ್ಪಿತ ವ್ಯವಸ್ಥೆ. ಸಂತಾನಾಭಿವೃದ್ಧಿಗಾಗಿ - ಜೊತೆಯಾಗಿ ಬಾಳುವ ಹಿನ್ನೆಲೆಯಲ್ಲಿ ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಒಪ್ಪಿಕೊಂಡ ವ್ಯವಸ್ಥೆ ಇದು. ಆಯಾಯ ಸಮಾಜಗಳ ಸಾಂಸ್ಥಿಕ ಧೋರಣೆಗಳಿಗೆ ಅನುಗುಣವಾಗಿ ವಿವಾಹದ ಅರ್ಥ ಪರಿಕಲ್ಪನೆಗಳು ನಿರ್ಮಾಣಗೊಳ್ಳುತ್ತವೆ. ಮನುಷ್ಯ ಜೀವಿತದಲ್ಲಿ ಪ್ರಧಾನವಾಗಿ ಎರಡು ಹಿನ್ನೆಲೆಗಳ ಆವರ್ತನ ಪ್ರಕ್ರಿಯೆಗಳಿಗೆ ಒಳಗಾಗಬೇಕಾಗುತ್ತದೆ. ಸರಳವಾಗಿ ಇದನ್ನು ದೈನಂದಿನ ಆವರ್ತಗಳು ಮತ್ತು ವಾರ್ಷಿಕ ಆವರ್ತಗಳು ಎಂದು ಭಾವಿಸಬಹುದು. ಭೂಮಿ ಪಡೆವಂಥ ಸಕಲ ಕೊಡು ಕೊಳುಗೆಗಳು ಸೂರ್ಯ ಕೇಂದ್ರ ಪ್ರತಿನಿಧಿತ್ವದ ಶಕ್ತಿ ಸಂಚಿತ ವ್ಯಾಪಾರವೇ ಹೊರತು ಬೇರಲ್ಲ. ಭೂಮಿ ಜೀವವಾಸ ಯೋಗ್ಯವಾದ ರೀತಿಯಲ್ಲಿ, ಸೃಷ್ಟಿ ಸ್ಥಿತಿ, ಲಯಗಳ ಅನುಸಂಗಿಕತೆಯನ್ನು ಪಡೆದಿರುವುದೇ ವಿಸ್ಮಯಕರ ಸತ್ಯವಷ್ಟೇ ಅಲ್ಲ ಒಂದು ರೀತಿಯ ಒಡೆಯಲಾರದ ಒಡಪು. ಚಕ್ರಗತಿಯ ಚಲನೆಯೆ ಒಟ್ಟು ಆವರ್ತನಗಳಿಗೆ ಮೂಲಮಾನವಾಗಿರುವಂಥದ್ದು. ಭೂಮಿ ನಿಶ್ಚಿತ ದೂರದಲ್ಲಿ ಸೂರ್ಯನ ಸುತ್ತ ಸುತ್ತುವುದು ಮತ್ತು ಹೀಗೆ ಸುತ್ತುತ್ತ ತಾನೇ ತಿರುಗಿಕೊಂಡು ಸೂರ್ಯಭಿಮುಖವಾಗಿರುವುದರಿಂದ ಆದಕ್ಕೆ ತೆಗೆದು ಪೂರಕವಾಗಿ ಒಂದರ ಸುತ್ತ ಸುತ್ತಲು ತಗಲುವ ಕಾಲಕ್ಕೂ ಗಂಟೆಯಾಗಿ ಅದು ಒಂದು ದಿನವೆಂದು ಪರಿಗಣಿತವಾಗಿದೆ. ೨೪ ಗಂಟೆಗಳ ಅವಧಿಯ ಒಂದು ದಿನ ಮತ್ತು ಸೂರ್ಯಭಿಮುಖದ ಕಾರಣದಿಂದಾಗಿ ಸಮಾನವಾದಂಥ ೧೨ ಗಂಟೆಗಳ ಹಗಲು ಮತ್ತು ೧೨ ಗಂಟೆಗಳ ಕತ್ತಲನ್ನು ಪಡೆದುಕೊಂಡಿದೆ. ಮನುಷ್ಯ ಕಂಡು ಕೊಂಡ ನೆಲೆಯಲ್ಲಿ ತನ್ನ ದೇಹದ ಬೇಡಿಕೆಗೆ ಅನುಗುಣವಾಗಿ ಅಂದರೆ ಭೌತಿಕ ಹಸಿವಿಗೆ ಪೂರಕವಾಗಿ ದೈನಂದಿನ ಆಹಾರ ಪೂರೈಕೆಯ ನಿಯಮ ರೂಪು ಪಡೆದಿದೆ. ಸ್ಥೂಲವಾಗಿ ಆಹಾರ ಪೂರೈಕೆಯ ಕ್ರಮಾಗತ ನಿಯಮವೇ ದೈನಂದಿನ ಆವರ್ತವಾಗಿ ಪರಿಗಣಿತವಾಗಿದೆ. ಜೀವಾಣುಗಳ ಸಂರಚನೆ, ನರಮಂಡಲಗಳ ವ್ಯೂಹ, ಮಿದುಳು ಶಕ್ತಿಯನ್ನು ಕೇಂದ್ರೀಕರಿಸಿ ಪ್ರಚಂಡವಾಗಿ ಬೌದ್ಧಿಕ ಐಕ್ಯತೆಯನ್ನು ಸಾಧಿಸಿಕೊಂಡಿದೆ. ಬುದ್ಧಿ ಮತ್ತು ಭಾವನೆಗಳು, ನೆನಪು ಮತ್ತು ಮರೆವು

ಹಾಗೂ ಆವಿಷ್ಕಾರಗಳಿಗೆ ಪಕ್ಕಾದ ಕಾರಣ ಕಾಲದ ಗಣತಿಯನ್ನು ಪಡೆದುಕೊಂಡಿದೆ. ಇದು ವಾರ್ಷಿಕ ಆವರ್ತಗಳಿಗೆ ಸಾಕ್ಷೀಭೂತಗಳಾಗಿವೆ. ನಿಸರ್ಗ ನಿಯಮದಲ್ಲಿ ಪ್ರಕೃತಿಯು ಪಡೆದುಕೊಳ್ಳುವ ಬದಲಾವಣೆಗಳು ಅಂದರೆ ಬೇಸಿಗೆ, ಮಳೆ, ಚಳಿಗೆ ಪೂರಕ ಆವರ್ತಗಳ ನಿರ್ಮಿತಿಯೇ ಕಾಲದ ಚಕ್ರಗತಿಯ ಚಲನೆಯ ವಿಶಿಷ್ಟತೆಯನ್ನು ಅರಿವಿಗೆ ತರುತ್ತದೆ. ಒಟ್ಟು ವ್ಯವಸ್ಥೆ ಮತ್ತು ಲಿಂಗ ಪ್ರಧಾನ ಸಂಹಿತೆಯಲ್ಲಿ ಪ್ರಧಾನ ಮತ್ತು ಅಧೀನತೆಯು ನಿರ್ಧಾರಿತಗೊಂಡಿದೆ. ಲೈಂಗಿಕ ಸಂಬಂಧವೇ ಹಕ್ಕು ಬಾಧ್ಯತೆಯ ಪ್ರಧಾನ ಭೂಮಿಕೆಯಾಗಿ ಮದುವೆ ಕೇಂದ್ರ ಪಾತ್ರ ಪಡೆದು ಗಂಡ- ಹೆಂಡತಿ ಎಂಬ ಮೂಲಕ ಗಂಡು- ಹೆಣ್ಣುಗಳಿಗೆ ಸಮಾಜ ನೀಡುವ ಲೈಂಗಿಕತೆಯ ಮಾನ್ಯತೆ ಮತ್ತು ಆ ಮೂಲಕ ಹುಟ್ಟುವ ಸಂತಾನ ಕುಟುಂಬವಾಗಿ ಪರಿಗಣಿತವಾಗಿದೆ. ಹಾಗಾಗಿ ಕುಟುಂಬದ ಪ್ರಧಾನ ಕೇಂದ್ರ ವಿವಾಹ. ಈ ಮೂಲಕವೇ ಸಂಬಂಧ- ರಕ್ತ ಬಾಂಧವ್ಯ ಎನ್ನುವ ಕಲ್ಪನೆಗಳು ಅರ್ಥಪಡೆದುಕೊಳ್ಳುತ್ತವೆ.

*೧೬ ಪರೀಕ್ಷಾರ್ಥ ವಿವಾಹವು ಕುಕಿ ಜನಾಂಗಗಳಲ್ಲಿ ರೂಢಿಯಲ್ಲಿದೆ ಎಂದು ಈ ಮಾನವ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. Edward Tylor(1889) Burgess, (1947) V.Elwin (1952).

*೧೭ 'Joseph Bram (1888), Jotham Johnson (1905), oliver La Farge (1926), S.L. Washburn (1940). ಈ ಮೊದಲಾದ ಮನಃ ಶಾಸ್ತ್ರಜ್ಞರು ಆದಿವಾಸಿ ಜನಾಂಗದ ಕುರಿತಂತೆ ಅಧ್ಯಯನ ನಡೆಸಿದ್ದಾರೆ.

*೧೮ ಮನುಸ್ಮೃತಿಯಲ್ಲಿ ಎಂಟು ವಿಧವಾದ ವಿವಾಹವನ್ನು ನಿರ್ದಿಷ್ಟವಾಗಿ ಬ್ರಹ್ಮ, ದೈವ, ಆರ್ಷ, ಪ್ರಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂದು ಹೇಳಲಾಗಿದೆ. (ಅಧ್ಯಾಯ ೩.೨೧) ಅಲ್ಲದೆ, ಮೊದಲಿನಿಂದ ಆರು ವಿಪ್ರನಿಗೆ, ಕೊನೆಯಿಂದ ನಾಲ್ಕು ಕ್ಷತ್ರಿಯನಿಗೆ ರಾಕ್ಷಸವೊಂದು ಹೊರತು ವಿಟ್ಶೂದ್ರರಿಗೆ ಉಳಿದ ಮೂರು- ವಿವಾಹಗಳು ಧರ್ಮಸಮ್ಮತಗಳು (ಅಧ್ಯಾಯ ೩. ೨೩) ಎಂದು ಅದರ ಔಚಿತ್ಯವನ್ನು ವಿವರಿಸಲಾಗಿದೆ. ಗಮನಿಸಿ (ಚಕ್ರಕೋಡಿ ಈಶ್ವರ ಶಾಸ್ತ್ರೀ (ಅನು) : ಮನಸ್ಮೃತಿ (ಮನುಧರ್ಮಶಾಸ್ತ್ರದ ಸಮಗ್ರ ಅನುವಾದ- ಮೂಲಶ್ಲೋಕ ಸಹಿತ) ಸಮಾಜ ಪುಸ್ತಕಾಲಯ ಧಾರವಾಡ-೧: ೧೯೬೯)

*೧೯ ಈಶ್ವರ ಶಾಸ್ತ್ರೀ ಚಕ್ರಕೋಡಿ (ಅನು) ಮನುಸ್ಮೃತಿ (ಮನುಧರ್ಮಶಾಸ್ತ್ರದ ಸಮಗ್ರ ಅನುವಾದ - ಮೂಲ ಶ್ಲೋಕ ಸಹಿತ) ಇದರ ಅಧ್ಯಾಯ ೩ ಶ್ಲೋಕ ೨೦ನ್ನು ಗಮನಿಸಿದರೆ ಆರ್ಶ ವಿವಾಹ ರೂಢಿಯಲ್ಲಿದ್ದರೂ ಅದು ಪ್ರಾಚೀನಕಾಲದಲ್ಲೂ ಅಕ್ರಮ ಪದ್ಧತಿಯೇ ಆಗಿತ್ತು.

*೨೦ ಕೃಷ್ಣ ಭಟ್ಟ ಕೆ. (ಅನು) ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅಧ್ಯಾಯ ೪೯ ನೇ ಪ್ರಕರಣ ವಿವಾಹ ಸಂಯುಕ್ತ- ಪೈಶಾಚ ವಿವಾಹದ ಕುರಿತು ಹೇಳುತ್ತಾನೆ. ನೋಡಿ ಪುಟ. ೨೨೧. (ಸಮಾಜ ಪುಸ್ತಕಾಲಯ, ಧಾರವಾಡ : ೧೯೯೨)

*೨೧ "ಇಸ್ಲಾಂ ಈ ಪದದ ಬಳಕೆಯಲ್ಲಿ ಒಂದು ಐತಿಹಾಸಿಕ ನಿರಂತರತೆ ಇದೆ. ಏಕೆಂದರೆ, ಆ ಜನರನ್ನು ಅದಕ್ಕೂ ಹಿಂದೆ ಶತಮಾನಗಳಿಂದ ಸಂಪರ್ಕವಿದ್ದ ಪಶ್ಚಿಮ ಮತ್ತು ಮಧ್ಯ ಏಷ್ಯದಿಂದ ಬಂದವರೆಂದು ಅವು ಗುರುತಿಸುತ್ತವೆ." (ರೊಮಿಲಾ ಥಾಪರ್: ೧೯೯೯; ೧೬) ರೋಮಿಲಾ ಥಾಪರ್ (ಮೂಲ) ರಕ್ಷಿತ್ ಎಂ.ಆರ್. (ಅನು): ಚಾರಿತ್ರಿಕ ವ್ಯಾಖ್ಯಾನಗಳು ಮತ್ತು ಭಾರತೀಯ ಸಮಾಜದ ಧರ್ಮನಿರಪೇಕ್ಷೀಕರಣ: ವಿಸ್ತಾರ್ ಬೆಂಗಳೂರು ೧೯೯೯.

*೨೨ ಮುಸ್ಲಿಂ ಸಮಾಜದಲ್ಲಿ ವಿವಾಹವನ್ನು 'ನಿಖಾಹ' ಎಂದು ಕರೆಯಲಾಗುತ್ತದೆ. ವಿವಾಹದ ಪ್ರಸ್ತಾಪವನ್ನು 'ಇಜಬ್' (Ijab) ಎಂದೂ ಒಪ್ಪಿಗೆಯನ್ನು 'ಖುಬುಲ್' (Kubul) ಎಂದು ಕರೆಯಲಾಗುತ್ತದೆ. ವಿವಾಹ ಸಂಬಂಧಿತ ಮಾತುಕತೆಗೆ ಸೇರಿದ ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಈ ಪದಗಳನ್ನು ಉಚ್ಛರಿಸಲಾಗುತ್ತದೆ.

*೨೩ವಸಾಹತು ಪೂರ್ವ ಭಾರತವನ್ನು ಮಾತ್ರ ಈ ಮಹಾಪ್ರಬಂಧದ ಒಳಗೆ 'ಭಾರತ' ಎಂದು ಪರಿಭಾವಿಸಿಕೊಳ್ಳಲಾಗಿದೆ. ವಸಾಹತೋತ್ತರ ಭಾರತವನ್ನು ಇಂಡಿಯಾ ಎಂದೇ ಮಹಾಪ್ರಬಂಧದ ಉದ್ದಕ್ಕೂ ಗುರುತಿಸಿಕೊಳ್ಳಲಾಗಿದೆ.

*೨೪ ಹಿಂದೂ ವಿವಾಹ ಅಧಿನಿಯಮವೆಂದು ಪ್ರಚಲಿತವಿರುವ ಹಿಂದೂ ಬಾಲ್ಯ ವಿವಾಹ ನಿಷೇಧ ಅಧಿನಿಯಮದ ಮೊದಲ ಕಲ್ಪನೆ ಮೂಡಿದ್ದು ಈಶ್ವರಚಂದ್ರ ವಿದ್ಯಾಸಾಗರ ಅವರಿಗೆ. (೧೮೫೬) ಮಹಿಳೆಯರ ವಿಮೋಚನೆಯ ಬಗ್ಗೆ ಮುಕ್ತ ಮನಸ್ಸು ಹೊಂದಿರದಂಥ ಹಿಂದೂ ಸಂಪ್ರದಾಯವಾದಿಗಳು ಬಾಲ್ಯ ವಿವಾಹಕ್ಕೆ ಯಾವುದೇ ವಿರೋಧವನ್ನು ತೋರಿಸಿರಲಿಲ್ಲ. ಆದರೆ ಸಂವಿಧಾನದ ಅಧಿನಿಯಮದಲ್ಲಿ ಬಾಲಕಿಯರಿಗೆ ೧೪ವರ್ಷ ಹಾಗೂ ಬಾಲಕರಿಗೆ ೧೯ ವರ್ಷ ವಯಸ್ಸನ್ನು ಅರ್ಹ ವಿವಾಹ ವಯಸ್ಸನ್ನಾಗಿ ನಿಗದಿಪಡಿಸಿತು. ೧೯೪೯ರಲ್ಲಿ ಈ ವಯಸ್ಸುಗಳನ್ನು ಕ್ರಮವಾಗಿ ೧೫ ಹಾಗೂ ೧೮ಕ್ಕೆ ಏರಿಸಲಾಯಿತು. ೧೯೭೮ರಲ್ಲಿ ಇದು ಕ್ರಮವಾಗಿ ೧೮ ಮತ್ತು ೨೧ ವರ್ಷಕ್ಕೆ ನಿಗದಿಗೊಂಡಿದೆ. ಕಾನೂನು ರೀತ್ಯ ಇಂಥ ಬಾಲ್ಯ ವಿವಾಹಗಳನ್ನು ನಿಷೇದಿಸಿದರೂ ಭಾರತದ ಅನೇಕ ಕಡೆಗಳಲ್ಲಿ ಇದು ಜಾರಿಯಲ್ಲಿದೆ. ಸಂತಾನ ನಿಯಂತ್ರಣ ಪ್ರತಿಷ್ಠಾನ ೧೯೮೭ರಲ್ಲಿ ನಡೆಸಿದ ಒಂದು ಅಧ್ಯಯನ ಈ ಅಧಿನಿಯಮಗಳು ಅವುಗಳ ಉದ್ದೇಶಗಳನ್ನು ಸಾಧಿಸುವಲ್ಲಿ ವಿಫಲವಾಗಿವೆ ಎಂದಿದೆ. ಹೆಚ್ಚಿನ ವಿವರಗಳಿಗಾಗಿ ನೋಡಿ (ಗೀತಾ ಕೃಷ್ಣಮೂರ್ತಿ: ಮಹಿಳೆ ಕಾನೂನು ಮತ್ತು ರಾಜಕಾರಣ ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧.)

*೨೫ ಸತಿಪದ್ಧತಿಯನ್ನು ನಿಷೇಧಿಸುವ ಕಾನೂನು ೧೮೨೯ರ ಡಿಸೆಂಬರ್‌ನಲ್ಲಿ ಬ್ರಿಟಿಷ್ ಸರ್ಕಾರ ಜಾರಿಗೊಳಿಸಿತು. ನಿಷೇಧವನ್ನು ಬೆಂಬಲಿಸಿ, ರಾಜರಾಂ ಮೋಹನ್‌ರಾಯ್ ಅವರು ೧೮೩೦ರ ಜನವರಿಯಲ್ಲಿ ಕಲ್ಕತ್ತಾದ ೩೦೦ ನಾಗರಿಕರ ಸಹಿ ಇರುವ ಮನವಿಯನ್ನು ಬೆಂಟಿಂಕ್‌ರಿಗೆ ಸಲ್ಲಿಸಿದರು.

*೨೬ ೧೮೫೬ರಲ್ಲಿ ಹಿಂದೂ ವಿಧವಾ ಪುನರ್ವಿವಾಹ ಅಧಿನಿಯಮ ಜಾರಿಗೆ ಬಂದಿತು. ಹಿಂದುಗಳಲ್ಲಿ ಕೇವಲ ಮೇಲ್ವರ್ಗದವರಲ್ಲಿ ಜಾರಿಯಲ್ಲಿಲ್ಲದ ವಿಧವಾ ಪುನರ್ವಿವಾಹಕ್ಕೆ ಅನುಕೂಲ ಕಲ್ಪಿಸಿಕೊಡುವ ಉದ್ದೇಶದಿಂದ ಎಲ್ಲರಿಗೂ ಅನ್ವಯಿಸುವಂತೆ ಒಂದು ಕಾನೂನನ್ನು ಜಾರಿಗೆ ತಂದುದರ ಫಲವಾಗಿ, ವಿಧವಾ ಪುನರ್ವಿವಾಹ ಆಚರಣೆಯಲ್ಲಿದ್ದ ಬಹುಪಾಲು ಜಾತಿಗಳಿಗೆ ಸೇರಿದ ವ್ಯಕ್ತಿಗಳಿಗೆ ತೊಂದರೆಯಾಯಿತು. ಕೆಲವು ಸಮುದಾಯಗಳಿಗೆ ಸಂಬಂಧಿಸಿದಂತೆ, ಬಹುಹಿಂದಿನಿಂದಲೂ ಅನುಮತವಿದ್ದ, ಮಹಿಳೆಯರ ವಾರಸುದಾರಿಕೆಯ ಹಕ್ಕನ್ನು ವಿಧವಾ ಪುನರ್ವಿವಾಹ ಪದ್ಧತಿ ಮೊಟಕುಗೊಳಿಸಿತು.

*೨೭ ಮನಃಶಾಸ್ತ್ರದಲ್ಲಿ ಎಲ್ಲರಿಗೂ ಮದುವೆ ಆಗುವಾಗ ಮೊದಲಿನ ಮದುವೆಗೆ ತನ್ನ ಜಾತಿಯ ಹುಡುಗಿ ಆಗಬೇಕು. ಕಾಮಕ್ಕಾಗಿ ಮಾತ್ರ ಆಗುವ ಮದುವೆಗೆ ಜಾತಿನಿಯಮವಿಲ್ಲ. (ಅಧ್ಯಾಯ ೩. ಶ್ಲೋಕ. ೧೨) ಎನ್ನುವ ಉಲ್ಲೇಖ ಸ್ಪಷ್ಟವಾಗಿ ಇದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಮೊದಲನೆಯವರಿಗೆ

ಅನಂತರದ ಜಾತಿಯ ಎಲ್ಲ ಸ್ತ್ರೀಯರು ವಿವಾಹಯೋಗ್ಯರು (ಅಧ್ಯಾಯ ೩ ಶ್ಲೋಕ -೧೪) ಎಂದು ಹೇಳಲಾಗಿದೆ.

*೨೮ ಪರಜಾತಿ ಸ್ತ್ರೀಯಲ್ಲಿ ಸಂತತಿಯು ಜನಕನಿಗೆ ಅಷ್ಟು ನಿಂದಾರ್ಹವಲ್ಲ. ಪರಜಾತಿ ಸ್ತ್ರೀಯು ಹೆಂಡತಿಯಾದರೆ ತನ್ನ ಕುಲಮರ್ಯಾದೆಯ, ದೇವಪಿತೃಗಳ ಕಾರ್ಯಗಳಿಗೆ ಅವಳು ಸೇರುವುದನ್ನು ಇತರರು ಸಂತೋಷಿಸುವುದಿಲ್ಲ ಎಂದು ಮನುಸ್ಮೃತಿಯಲ್ಲಿ (ಅಧ್ಯಾಯ ೩ ಶ್ಲೋಕ -೧೬)ರಲ್ಲಿ ತಿಳಿಸಲಾಗಿದೆ.

*೨೯ ಮಾತೃದೇವತೆಯ ಪೂಜೆಯ ಉಗಮದಲ್ಲಿ ಒಂದು ಮಾತೃಪ್ರಧಾನ ಸಮಾಜ ವ್ಯವಸ್ಥೆ ಇದೆ ಎಂಬುದು ಮಾನವಶಾಸ್ತ್ರಜ್ಞರ ಅಭಿಮತ. ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರು ಲೋಕಾಯತ, ಪೀಪಲ್ಸ್ ಪಬ್ಲಿಷಿಂಗ್ ಹೌಸ್, ಬಾಂಬೆ, ೧೯೭೮ ೧೫೦-೧೮೦ ಇಲ್ಲಿ ಮಾತೃ ದೇವತೆಯ ಆರಾಧನೆಯ ಕುರಿತು ಚರ್ಚಿಸಿದ್ದಾರೆ.

*೩೦ ಸಾಮ್ಯೂಯಲ್ ರಿಪೋರ್ಟ್ ಮತ್ತು ಹೆಲನ್ ಲೈಟ್(ಸಂ) ಇವರ 'Anthroplogy' ಎನ್ನುವ ಕೃತಿಯಲ್ಲಿ ಲೂಯಿ ಮಾಲಿನೋವಸ್ಕಿಯು ನಡೆಸಿದ 'ಕುಟುಂಬ' ರಚನೆಯ ದೀರ್ಘ ವಿವರಣೆಗಳನ್ನು ಗಮನಿಸಿಕೊಂಡಂತೆ.

*೩೧ ಪ್ರಾಚೀನ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನದ ಕುರಿತ ದೀರ್ಘ ಚರ್ಚೆಗೆ ಗಮನಿಸಿ: (Sumuel Repport and Helen Wright (Edi): Anthropology; Newyork University Press: 1968. PgNo 297-319)

*೩೨ ಪ್ರಾಚೀನ ಹೀಬ್ರೂ ನಾಗರಿಕತೆಯಲ್ಲಿ, ಸಿಂಧೂಕೊಳ್ಳದ ನಾಗರಿಕತೆಯಲ್ಲಿ, ಗ್ರೀಕ್, ರೋಮನ್, ಮೊದಲಾದ ಪ್ರಾಚೀನ ನಾಗರಿಕತೆಗಳಲ್ಲಿ ಪಿತೃಪ್ರಧಾನ ಕುಟುಂಬವು ಎದ್ದು ಕಾಣುವಂತಿತ್ತು. ಆ ಕುಟುಂಬಗಳು ಕೇವಲ ಪಿತೃಪ್ರಧಾನವಾಗಿರದೇ ಪಿತೃ ಸತ್ತಾತ್ಮಕವಾಗಿದ್ದವು. ಅಂದರೆ ಎಲ್ಲ ಅಧಿಕಾರಗಳು ತಂದೆ ಅಥವಾ ಮನೆಯ ಹಿರಿಯನ ಕೈಯಲ್ಲಿ ಕೇಂದ್ರೀಕೃತವಾಗಿದ್ದವು. ಪ್ರಾಚೀನ ರೋಂ ಸಮಾಜದಲ್ಲಿ ತಂದೆಗೆ 'ಪೇಟ್ರಿಯಾ ಪ್ರೊಟೆಸ್ಟಾಸ್'- ಅಂದರೆ ತಂದೆಯ ವಿಶೇಷ ಅಧಿಕಾರ- ಇತ್ತು. ತಂದೆಯು ತನ್ನ ಮಕ್ಕಳಿಗೆ ಬೇಕಾದ ಶಿಕ್ಷೆಯನ್ನು ವಿಧಿಸಬಹುದಿತ್ತು. ಅವನು ಹೇಳಿದ ಹೆಣ್ಣನ್ನು ಅಥವಾ ಗಂಡನ್ನು ಮಕ್ಕಳು ಮದುವೆಯಾಗಬೇಕಾಗಿತ್ತು. ಮಕ್ಕಳಿಗೆ ಯಾವ ಆಸ್ತಿಯನ್ನೂ ಕೊಡದೇ ಇರುವ ಅಧಿಕಾರವಿತ್ತು. ಚಕ್ರವರ್ತಿಯು ತಂದೆಯ ಈ ವಿಶೇಷ ಅಧಿಕಾರವನ್ನು ಮನ್ನಿಸುತ್ತಿದ್ದನು.

*೩೩ ನಂಜಮ್ಮಣ್ಣಿ ಎಂ ಇವರ 'ಸಾಮಾಜಿಕ ಮಾನವಶಾಸ್ತ್ರ' ಈ ಕೃತಿಯಲ್ಲಿ ಕೂಡು ಕುಟುಂಬದ ಗುಣಲಕ್ಷಣಗಳಿಗೆ ಸಂಬಂಧಿಸಿದಂತೆ ದೀರ್ಘ ವಿವರಣೆಗಳಿವೆ ಗಮನಿಸಿ ಪುಟ ೩೬೦-೩೬೮ (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ೧೯೭೧)

# ಅಧ್ಯಾಯ ಮೂರು :

# ಉದಾರವಾದಿ ಸಾಂಸ್ಕೃತಿಕ ನೆಲೆ : ವಿವಾಹ ಮತ್ತು ಕುಟುಂಬದ ಪರಿಕಲ್ಪನೆ.

## ಉದಾರವಾದಿ ಸಾಂಸ್ಕೃತಿಕ ನೆಲೆ : ವಿವಾಹ ಮತ್ತು ಕುಟುಂಬದ ಪರಿಕಲ್ಪನೆ.

**ಉದಾರವಾದಿ ಸಾಂಸ್ಕೃತಿಕನೆಲೆ**ಯನ್ನು ನಿರ್ವಚಿಸುವಾಗ, ಕನ್ನಡದಲ್ಲಿ ಮಹಿಳೆಯರಿಂದ ನಿರ್ಮಿತಿಗೊಂಡ ಕಾದಂಬರಿಗಳನ್ನು ಸಮಗ್ರವಾಗಿ ಕನ್ನಡ ಕಾದಂಬರಿ ಬರೆವಣಿಗೆಯ ಪ್ರಧಾನವಾಹಿನಿಯ ಜೊತೆ - ಜೊತೆಯಾಗಿ ಇರಿಸಿಯೇ ಚರ್ಚಿಸಬೇಕಾಗುತ್ತದೆ. ಕನ್ನಡ ಕಾದಂಬರಿ ಬರೆವಣಿಗೆಯ ಪ್ರಧಾನವಾಹಿನಿಯ ನೆಲೆಯಿಂದಲೇ ಪುನರ್ ವ್ಯಾಖ್ಯಾನಗೊಳಿಸಬೇಕಾಗುತ್ತದೆ. ಮುಖ್ಯವಾಹಿನಿಯ ಅನುಸಂಧಾನದೊಂದಿಗೆ ತೀರ್ಮಾನಗಳನ್ನು ದೃಢಪಡಿಸಬೇಕಾಗುತ್ತದೆ. ಸ್ತ್ರೀವಾದಿ ನೆಲೆಯಲ್ಲಿ ಸಾಹಿತ್ಯವನ್ನು ಅಧ್ಯಯನ ನಡೆಸುವ ಪ್ರಕ್ರಿಯೆಯು ಇತ್ತೀಚೆಗೆ ಹೆಚ್ಚು ದೃಢವಾಗಿದೆ. ಹಾಗಿದ್ದರೂ ಸಾಹಿತ್ಯ ಚರಿತ್ರೆಯನ್ನು ಪುನರ್‌ರಚಿಸುವಲ್ಲಿ ಸ್ತ್ರೀವಾದಿ ಧೋರಣೆ ಸಫಲತೆಯನ್ನು ಸಾಧಿಸುವ ಪ್ರಯತ್ನದಲ್ಲಿದೆ ಎಂದು ಮಾತ್ರ ಹೇಳಬೇಕಾಗುತ್ತದೆ. ‘ಸಬಾಲ್ಟರ್ನ್’ *೧ ಚಿಂತನೆಯ ಬಹು ಆಕರಗಳ ಮೂಲಕ ದತ್ತವಾಗುವ ಗ್ರಹೀತಗಳ ನೆಲೆಯಲ್ಲಿ ಸಂಪೂರ್ಣವಾಗಿ ಸಾಹಿತ್ಯ ಚರಿತ್ರೆಯನ್ನು ವ್ಯಾಖ್ಯಾನಗೊಳಿಸುವ ಕಾರ್ಯದ ತುರ್ತು ಇಂದಿನ ಅಧ್ಯಯನಗಳಿಗೆ ಇದೆ. ಹಾಗಿದ್ದರೆ ಮಾತ್ರ ಹೊಸ ತೀರ್ಮಾನಗಳಿಗೆ ಅರ್ಥ ವಿವರಣೆ ಸಾಧ್ಯವಾಗುತ್ತದೆ.

ಇಂಗ್ಲಿಷ್ ವಿದ್ಯಾಭ್ಯಾಸ; ಆಧುನಿಕ ತಂತ್ರಜ್ಞಾನಗಳ ಪ್ರವೇಶ; ಶಿಕ್ಷಿತ ಮಧ್ಯಮ ವರ್ಗದ ಹುಟ್ಟು ಇವುಗಳಲ್ಲಿ ವಸಾಹತುಶಾಹೀ ಆಳ್ವಿಕೆಯ ನೇರ ಪರಿಣಾಮವನ್ನು ಗುರುತಿಸಬಹುದು. ಇವುಗಳಿಂದಾಗಿ ಭಾರತೀಯ ಸಾಹಿತ್ಯ ಪರಂಪರೆ ಅನಿವಾರ್ಯವಾಗಿ ಪಾಶ್ಚಾತ್ಯ ಸಾಹಿತ್ಯ ಸಂಸರ್ಗಕ್ಕೆ ಒಳಗಾಗಿದೆ. ಹೊಸ ಸಾಹಿತ್ಯ ಪ್ರಕಾರಗಳನ್ನು ಅಭಿವ್ಯಕ್ತಿ ಮಾಧ್ಯಮವಾಗಿ ಕಂಡುಕೊಂಡಿದೆ (ಸಾನೆಟ್, ಭಾವಗೀತೆ, ಸಣ್ಣಕತೆ, ನಾಟಕ, ಕಾದಂಬರಿ, ಪ್ರಬಂಧ ಇತ್ಯಾದಿ). ಒಂದರ್ಥದಲ್ಲಿ ತನ್ನ ಸತ್ವಶೀಲತೆಯನ್ನು ಕಳೆದುಕೊಂಡಿದ್ದ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳು ಅನ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಆ ಸತ್ವಶೀಲತೆಯ ಮರುಶೋಧನೆಯ

ಪ್ರಯತ್ನವನ್ನು ನಡೆಸಿವೆ. ಸಾಂಸ್ಕೃತಿಕ ಪುನರುಜ್ಜೀವನದ ಪ್ರಕ್ರಿಯೆಯಲ್ಲಿ ನಿರತವಾಗಿವೆ. ಸುಶಿಕ್ಷಿತ ಮಧ್ಯಮ ವರ್ಗದ ಅಭಿವ್ಯಕ್ತಿ ಪ್ರಕಾರವಾಗಿ ಕಾದಂಬರಿ ಸೃಷ್ಟಿಯಾಗಿದೆ. [೨]

> "ಕಾದಂಬರಿಯ ಉಗಮವಿರುವುದು ವಸಾಹತೀಕರಣದ ಜೊತೆಗೆ ಅಥವಾ ಇನ್ನೂ ನಿರ್ದಿಷ್ಟವಾಗಿ ಹೇಳುವುದಾದರೆ ಪರಕೀಯ ಯಜಮಾನ ಸಂಸ್ಕೃತಿ ಮತ್ತು ದೇಸಿ ಸಂಸ್ಕೃತಿಗಳ ನಡುವಿನ ಮುಖಾಮುಖಿಯಲ್ಲಿ ಕಾದಂಬರಿ ಹುಟ್ಟುತ್ತದೆ. ದೇಸಿ ಮಧ್ಯಮ ವರ್ಗ ರೂಪುಗೊಂಡು ತನಗೊಂದು ಆಧುನಿಕ ಸಾಂಸ್ಕೃತಿಕ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಾಗ ಉಂಟಾಗುವ ದ್ವಂದ್ವದಲ್ಲಿ ಕಾದಂಬರಿ ಹುಟ್ಟುತ್ತದೆ. ಪರಕೀಯ ಯಜಮಾನ ಸಂಸ್ಕೃತಿ ದೇಸಿ ಮಧ್ಯಮ ವರ್ಗದ ಒಳಗೇ ಹೊಕ್ಕು ಭದ್ರವಾಗಿ ಕೂತಿದೆ. ಅದು ಹಳೆಯ ದೇಸಿ ಜೊತೆಗೆ ಮುಖಾಮುಖಿಯಾಗಿ ದೇಸಿಯನ್ನು ಟೀಕಿಸುವ, ವಿಮರ್ಶಿಸುವ, ಅದನ್ನೂ ತನ್ನ ಜೊತೆಗೆ ಸೆಳೆದುಕೊಳ್ಳುವ ಪ್ರಯತ್ನ ಮಾಡುತ್ತದೆ. ದೇಸಿ ಕೂಡ ತನಗೆ ಸಾಧ್ಯವಾದಷ್ಟು ಪ್ರತಿಭಟನೆಯನ್ನೂ ಪರಕೀಯ ಯಾಜಮಾನ್ಯವನ್ನು ಟೀಕಿಸುವ ಕೆಲಸ ಮಾಡುತ್ತದೆ. ಭಾರತದ ಅನೇಕ ಭಾಷೆಗಳ ಮೊದಲ ಕಾದಂಬರಿಗಳ ಮೂಲ ಅನುಭವ ಇದು". (ವಿವೇಕ ರೈ ಬಿ.ಎ.(ಸಂ) :೧೯೮೭; ೧೪೨.)

ಎಂಬ ಡಿ.ಆರ್. ನಾಗರಾಜರ ಮಾತು ಕನ್ನಡದ ಸಾಂಸ್ಕೃತಿಕ ಸಂದರ್ಭದಲ್ಲಿ ಕೂಡ ನಿಜವಾಗುತ್ತದೆ. ಅನ್ಯ ಸಂಸ್ಕೃತಿಯಿಂದ ಬದಲಾದ ಪ್ರಜ್ಞೆಯ ಮೂಲಕ ಸಮಾಜದ ಪರಿಸರವನ್ನು ಅನ್ವೇಷಿಸುವ ಕೆಲಸ ಕಾದಂಬರಿ ಪ್ರಕಾರದ ಮೂಲಕ ನಡೆದಿದೆ. ಕನ್ನಡದ ಸಂದರ್ಭದಲ್ಲಿ ಯಜಮಾನ ಸಂಸ್ಕೃತಿ (ಪರಕೀಯ) ಮತ್ತು ದೇಸೀ ಸಂಸ್ಕೃತಿ (ಪರಾಧೀನ) ಇವುಗಳ ಮುಖಾಮುಖಿಯಲ್ಲಿ ಕಾದಂಬರಿಯ ಉಗಮವಾಗುತ್ತದೆ ಎನ್ನುವುದು ಅತಿ ಮಹತ್ವದ ವಿಚಾರವಾದರೂ, ಇದನ್ನು ಅರ್ಥೈಸಿಕೊಳ್ಳುವಾಗ ಎರಡು ಸಂಸ್ಕೃತಿಗಳ ಮುಖಾಮುಖಿಯ ಸ್ವರೂಪ ಹಾಗೂ ಪರಿಣಾಮಗಳು ಅತ್ಯಂತ ಸಂಕೀರ್ಣವಾಗಿ ಕಾಣಿಸಿಕೊಳ್ಳುತ್ತವೆ. ಎರಡು ಸಂಸ್ಕೃತಿಗಳ ಬರೆವಣಿಗೆಗಳ ಅನುಸಂಧಾನದಲ್ಲಿ ಒಂದಕ್ಕಿಂತ ಹೆಚ್ಚಿನ ಹಂತಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ವಸಾಹತುಶಾಹಿ ಆಡಳಿತಕ್ಕೆ ತಕ್ಷಣದಲ್ಲಿ ದೇಸಿ ಸಂಸ್ಕೃತಿಗೆ ಪ್ರತಿಕ್ರಿಯಿಸುವುದು ಸುಲಭವಾದ ವಿಚಾರವಾಗಿರಲಿಲ್ಲ. ಆರಂಭದ ಘಟ್ಟದಲ್ಲಿ ಎರಡೂ ಸಂಸ್ಕೃತಿಗಳ ನಡುವೆ ಘರ್ಷಣೆಯ ಪ್ರಶ್ನೆಯೇ ಉದ್ಭವಗೊಂಡಿರಲಿಲ್ಲ ಎನ್ನುವುದನ್ನು ಚರಿತ್ರೆ ನಿರೂಪಿಸುತ್ತದೆ. ಇದು ದೇಸಿ ಸಂಸ್ಕೃತಿಗೆ ಅದರ ಮೇಲೆ ಆಗಿರುವ ಆಘಾತದ ಸ್ವರೂಪವನ್ನು ಅರಿತುಕೊಳ್ಳುವುದು ಆರಂಭದಲ್ಲಿ ಸುಲಭ ಸಾಧ್ಯವಾಗಿರಲಿಲ್ಲ ಎನ್ನುವುದನ್ನು ಬಿಡಿಸಿ ತೋರಿಸುತ್ತದೆ. ಇದರಿಂದ ಪ್ರಕಟಗೊಳ್ಳುವ ವಿಚಾರವೆಂದರೆ, ವಸಾಹತುಶಾಹಿ ಸಂಸ್ಕೃತಿ ಬಲವಾಗಿ ಬೇರೂರಿದ ನಂತರವೇ ದೇಸಿ ಸಂಸ್ಕೃತಿ ಜಾಗೃತಗೊಂಡಿದೆ ಮತ್ತು ಅದರ ಮೇಲಾಗಿರುವ ಆಕ್ರಮಣವನ್ನು ಗ್ರಹಿಸುವುದಕ್ಕೆ ತೊಡಗಿದೆ. ಈ ಸಂದರ್ಭದಲ್ಲಿ ಸಹಜವಾಗಿ ಘರ್ಷಣೆ ಕಾಣಿಸಿಕೊಂಡಿದೆ. ಪರಸ್ಪರ ಅರ್ಥಗ್ರಹಿಕೆಯ ಘಟ್ಟದಲ್ಲಿ ಅವು ತಮ್ಮ ವಿಶಿಷ್ಟ ಅನನ್ಯತೆಯನ್ನು ಕಾಪಾಡಿಕೊಳ್ಳಲು ಪರಸ್ಪರ ದ್ವೇಷಿಸುವುದು ಕಂಡು ಬರುತ್ತವೆ. ಪರಸ್ಪರ ಘರ್ಷಣೆಯಲ್ಲಿ ದೇಸಿ ಸಂಸ್ಕೃತಿಯ ಒಳಗೆ ಎರಡು ರೀತಿಯ ಪ್ರತಿಕ್ರಿಯೆ ಕಾಣಿಸಿಕೊಂಡಿದೆ.

**ಒಂದು:** ಯಜಮಾನ ಸಂಸ್ಕೃತಿಯನ್ನು ಮಾನ್ಯಮಾಡಿ ಅದನ್ನು ಅನುಕರಣೆ ನಡೆಸಿರುವುದು.

**ಎರಡು:** ಪರಸ್ಪರ ಹೋಲಿಕೆಯಲ್ಲಿ ದೇಸಿ ಸಂಸ್ಕೃತಿಯು ತನ್ನ ಅಂತಃಸತ್ವವನ್ನು ಪರಕೀಯ ಸಂಸ್ಕೃತಿಗೆ ಕಡಿಮೆ ಇಲ್ಲದಂತೆ ತೋರಿಸಿಕೊಳ್ಳುವ ಸಲುವಾಗಿ ವೈಭವೀಕರಿಸಿ ಕೊಂಡಿರುವುದು.

ಪರಸಂಸ್ಕೃತಿಯ ಅನುಕರಣೆ ಮತ್ತು ಸ್ವಸಂಸ್ಕೃತಿಯ ವೈಭವೀಕರಣ ಈ ದ್ವಂದ್ವ, ಭಾರತದಲ್ಲಿ ೧೯ನೆಯ ಶತಮಾನದ ಉದ್ದಕ್ಕೂ ಪ್ರಕಟಗೊಂಡಿದೆ. ಇದರಿಂದಾಗಿಯೇ 'ಪರಸ್ಪರ ಪ್ರಭಾವ' ಎನ್ನುವುದು ಕನ್ನಡ ಕಾದಂಬರಿಯ ಸಂದರ್ಭದಲ್ಲಿ ವ್ಯಾಪಕ ಬಹುಮುಖೀ ಹಾಗೂ ಅತ್ಯಂತ ಸಂಕೀರ್ಣ ಪ್ರಕ್ರಿಯೆಯಾಗಿದೆ. ಇದನ್ನು ಪರಿಪೂರ್ಣವಾಗಿ ಅರ್ಥೈಸಿಕೊಳ್ಳುವ ಸಲುವಾಗಿ 'ಉದಾರವಾದಿ ಸಾಂಸ್ಕೃತಿಕ ನೆಲೆ' ಎನ್ನುವ ವ್ಯಾಪಕ ಅರ್ಥವಿಂಗಡಣೆಯನ್ನು ಕಂಡುಕೊಳ್ಳಲಾಗಿದೆ. ಅಲ್ಲದೆ, ಸಾಂಸ್ಕೃತಿಕ ಅಧ್ಯಯನ ಹಾಗೂ ಸಾಹಿತ್ಯಕ ಅಧ್ಯಯನ ಇವೆರಡರ ನಡುವೆ ನಿರಂತರವಾದ ಕೊಡು-ಕೊಳುಗೆಗಳು ಇವೆ. ಈ ಕೊಡು - ಕೊಳುಗೆಯನ್ನು ಸಾಂಸ್ಕೃತಿಕ ಅಧ್ಯಯನವೇ ನಿರ್ದೇಶಿಸಿದೆ. ಕನ್ನಡ ಕಾದಂಬರಿಗೆ ಸಂಬಂಧಿಸಿದಂತೆ, ಕರ್ನಾಟಕದ ಸಾಂಸ್ಕೃತಿಕ ಸ್ಥಿತಿಯನ್ನು ಹಲವಾರು ವಿದ್ವಾಂಸರು ಚರ್ಚಿಸಿರುವುದು ವ್ಯಕ್ತವಾಗುತ್ತದೆ.*೩ ಅವರು ಚರ್ಚಿಸಿರುವ ಎಲ್ಲಾ ವಿವರಗಳನ್ನು ಮರು ಪ್ರಸ್ತಾವಿಸದೆ ಅವಶ್ಯಕವಾದ ಮಾಹಿತಿಗಳನ್ನು ಮಾತ್ರ 'ಉದಾರವಾದಿ ಸಾಂಸ್ಕೃತಿಕ ನೆಲೆ'ಯ ನಿರ್ವಚನಕ್ಕೆ ಬಳಸಲಾಗಿದೆ.

## ೩.೧ ಉದಾರವಾದಿ ಸಾಂಸ್ಕೃತಿಕ ನೆಲೆ: ವಸಾಹತುಶಾಹಿ ಸಂದರ್ಭ :

ಕನ್ನಡ ಕಾದಂಬರಿಯು ವಸಾಹತೀಕರಣದೊಂದಿಗೆ ಸಮೀಪದ ಸಂಬಂಧವನ್ನು ಹೊಂದಿದೆ. ಇದು ಯಾವುದಾದರೊಂದು ಕ್ಷೇತ್ರಕ್ಕೆ ಸೀಮಿತವಾಗಿರುವ ಪ್ರಕ್ರಿಯೆಯಲ್ಲ. ವಸಾಹತೀಕರಣದ ಬುನಾದಿಯಾಗಿ ಇಂಗ್ಲಿಷ್ ಶಿಕ್ಷಣವು ಜಾರಿಗೊಂಡಿದೆ. ಈ ಮೂಲಕವಾಗಿ ಬ್ರಿಟಿಷ್ ರಾಜಸತ್ತೆ ಭಾರತದ ಹಳೆಯ ರಚನೆಗಳ ಮುಂದೆ ಹೊಸ ಸವಾಲುಗಳನ್ನು ಇರಿಸಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಮುಖರಾಗಿದ್ದ ಭಾರತೀಯ ಇಂಗ್ಲಿಷ್ ವಿದ್ಯಾವಂತರಲ್ಲಿ ಇದರ ಪರಿಣಾಮಗಳನ್ನು ಗುರುತಿಸಬಹುದು. ಭಾರತೀಯ ಆರ್ಥಿಕ ತಳಹದಿಯ ವಾಸ್ತವತೆಯು (ಗುಡಿ ಕೈಗಾರಿಕೆ, ಕೃಷಿ, ಮೀನುಗಾರಿಕೆ ಇತ್ಯಾದಿ) ರಚನೀಕರಣ (Structuration) ಮತ್ತು ನಿರಚನೀಕರಣ (Destructuration)ಗಳಿಗೆ ಒಳಗಾಗಿದೆ. ಈ ಕಾರಣದಿಂದ ಕಾದಂಬರಿಯ ಅಧ್ಯಯನದ ಸಂದರ್ಭದಲ್ಲಿ ಭಾರತದ ಮತ್ತು ಕರ್ನಾಟಕದ ಆಧುನಿಕತೆಯ *೪ ಒಳಸುಳಿಗಳನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಇದನ್ನು ಬಿಪಿನ್ ಚಂದ್ರ ಅವರ ಕೆಳಗಿನ ಮಾತುಗಳು ಸಮರ್ಥಿಸುತ್ತವೆ.

> "Colonial modernization involved not only the Indian economy, but also the patterns of Social, Political, Administrative and Cultural life."
> ( Bipenchandra :1979; 7)

ಸನಾತನದ ಮೌಲ್ಯಗಳಿಗೆ ಅಧೀನವಾಗಿದ್ದ ದೇಸಿ ಸಂಸ್ಕೃತಿಯು ಬ್ರಿಟಿಷ್ ಆಡಳಿತಶಾಹಿಗೆ ಮಾರಕವಾಗಿದ್ದು, ದೇಸಿ ತಾತ್ವಿಕತೆಯನ್ನು ರಾಜಸತ್ತೆಗೆ ಪೂರಕವಾಗಿಯೇ ಸುಧಾರಣೆಗೆ ಒಳಪಡಿಸುವ ಧೋರಣೆಯಿಂದ ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲಿಷ್ ಮಿಶನರಿಗಳು ಭಾರತವನ್ನು ಪ್ರವೇಶಿಸಿದವು. ಆರಂಭದಲ್ಲಿ ಲಂಡನ್ (೧೮೧೦) ವೆಸ್ಲೆಯನ್ (೧೮೨೦) ಮತ್ತು ಬಾಸೆಲ್ (೧೮೩೪) ಈ ಮೂರು ಪ್ರಮುಖ ಮಿಶನರಿ

ಸಂಸ್ಥೆಗಳು ತಮ್ಮ ಧಾರ್ಮಿಕ ಚಟುವಟಿಕೆಗಳನ್ನು ಆರಂಭಿಸಿದವು. ಅವು ತಮ್ಮ ಧಾರ್ಮಿಕ ಉದ್ದೇಶದ ಭಾಗವಾಗಿಯೇ ಶಿಕ್ಷಣ, ಮುದ್ರಣ ಮತ್ತು ಸಾಹಿತ್ಯಕ ಚಟುವಟಿಕೆಗಳನ್ನು ಹಮ್ಮಿಕೊಂಡವು. ಇವುಗಳ ಉದ್ದೇಶ ಶಂಕರ್‌ಘೋಷ್ ಅವರು ಹೇಳುವಂತೆ;

> "Indian in blood and colour, but English in tastes, in opinion, words and intellect' (Shankar Ghose : 1969; 3)

ಆದ ವಿದ್ಯಾವಂತರನ್ನು ತರಬೇತುಗೊಳಿಸುದಾಗಿತ್ತು. ಮತ್ತೊಂದು ನೆಲೆಯಲ್ಲಿ ಇನ್ನೂ ಹೊಸ ಆವಿಷ್ಕಾರಗಳಿಗೆ ಪಕ್ಕಾಗಿರದ ದೇಶ ಭಾಷೆಗಳಲ್ಲಿ ಕೆಲಸ ಮಾಡುವ ಮೂಲಕ ಪಾಶ್ಚಿಮಾತ್ಯ ವಿಚಾರಗಳನ್ನು ಹರಡುವುದು ಮಿಶನರಿಗಳಿಗೆ ಸುಲಭದ ಮತ್ತು ಮಹತ್ವದ ಕಾರ್ಯವಾಗಿತ್ತು. ೧೮೧೭ರಷ್ಟು ಹಿಂದೆಯೇ ವಿಲಿಯಂ ಕೇರಿ ದೇಶೀಯ ಪಂಡಿತರ ನೆರವಿನಿಂದ ದೇಶಭಾಷೆಗಳ ವ್ಯಾಕರಣ ಗ್ರಂಥಗಳನ್ನು ರಚಿಸುವ ಮಹತ್ವದ ಯತ್ನ ನಡೆಸಿರುವುದು ಇಲ್ಲಿ ಸ್ಮರಣೀಯ. ವಸಾಹತುಶಾಹಿ ಆಡಳಿತವು ಯಾಜಮಾನ್ಯದ ಸಾಂಸ್ಕೃತಿಕ ರಾಜಕಾರಣವನ್ನು ಪ್ರಾಥಮಿಕ ಹಂತದಿಂದಲೇ ಪರಿಣಾಮಕಾರಿಯಾಗಿ ರೂಪಿಸಿದೆ ಎನ್ನುವುದು ಇದರಿಂದ ವ್ಯಕ್ತವಾಗುತ್ತದೆ. ಇಲ್ಲಿ ಸ್ಥಳೀಯವಾಗಿ ರಾಜಕೀಯ ಸಾಂಸ್ಕೃತಿಕ ಕ್ಷೇತ್ರವನ್ನು ಪ್ರತಿನಿಧಿಸುತ್ತಿದ್ದ ಗಣ್ಯ ವ್ಯಕ್ತಿಗಳೇ ಬಂಡವಾಳಶಾಹೀ ನೈತಿಕತೆಯನ್ನು ಮೊದಲು ಮನ್ನಿಸಿದ್ದರು ಎಂಬುದು ಗಮನಾರ್ಹ. ಹೀಗೆ ಪಾಶ್ಚಾತ್ಯ ವಿದ್ಯಾಭ್ಯಾಸ ಮತ್ತು ಬ್ರಿಟಿಷ್ ಆಡಳಿತ ಯಂತ್ರದ ಸುಧಾರಣೆಗಳ ಮೊದಲ ಫಲವನ್ನು ಅನುಭವಿಸಿದ್ದು ಭಾರತದ ವೈದಿಕ ಸಮುದಾಯ. ಎಂದರೆ, ದೇಶೀಯ ಯಾಜಮಾನ್ಯ ಸಂಸ್ಕೃತಿಯೇ ಮೊದಲು ಆಧುನಿಕತೆಯ ಸಂಸರ್ಗಕ್ಕೆ ಒಳಗಾಗಿದೆ. ಈ ಪರಿಸ್ಥಿತಿ ಕರ್ನಾಟಕದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಕೂಡ ಭಿನ್ನವಾಗಿರಲಿಲ್ಲ. ಭಾರತದ ಬಹುತೇಕ ಕೆಳವರ್ಗಗಳು ಮಿಶನರಿಗಳ ಧಾರ್ಮಿಕ ಮತಾಂತರಗಳಿಗೆ ಒಳಗಾಗಿವೆ ಎಂಬುದು ನಿಜ. ಆದರೆ, ಪಾಶ್ಚಾತ್ಯ ವೈಚಾರಿಕ ಪ್ರಣಾಳಿಕೆಗಳನ್ನು ನೇರವಾಗಿ ಸ್ವೀಕರಿಸಿದ ವರ್ಗ ವೈದಿಕ ಸಮುದಾಯವೇ ಆಗಿದೆ. ಪರಂಪರಾಗತ ವೇದಾಂತ ಮೂಲ ಮೌಲ್ಯಗಳನ್ನು ಒಪ್ಪಿಕೊಂಡು, ಪಾಶ್ಚಿಮಾತ್ಯ ವೈಚಾರಿಕತೆಯೊಂದಿಗೆ ಯಾವುದೇ ಸಂಘರ್ಷವಿಲ್ಲದೆ ಅಧಿಕಾರಶಾಹಿಗೆ ಬದ್ಧವಾಗಿ ಭಾರತೀಯ ವಿದ್ಯಾವಂತ ವರ್ಗವು ರೂಪುಗೊಂಡಿದೆ. ಈ ವಿದ್ಯಾವಂತ ವರ್ಗವು ಮೊದಲು ಪಾಶ್ಚಿಮಾತ್ಯ ವೈಚಾರಿಕತೆಯನ್ನು ಯಥಾವತ್ತಾಗಿಯೇ ಸ್ವೀಕರಿಸಿದೆ. ಭಾರತದ ಬಹುಮುಖ ಸತ್ವಶಾಲಿ ಪರಂಪರೆಯನ್ನು 'ಇಂಗ್ಲಿಷ್ ವಿದ್ಯಾವಂತ ವರ್ಗ' ಎನ್ನುವ ಒಂದು 'ಮೊನೋಲಿಥಿಕ್'(Monolithic) ಅಚ್ಚಿನಲ್ಲಿ ರೂಪಿಸುವುದು ಬ್ರಿಟಿಷ್ ಆಡಳಿತದ ಉದ್ದೇಶ. ಇದನ್ನು ಮಲ್ಹೋತ್ರಾ ಅವರು ಸ್ಪಷ್ಟೀಕರಿಸುವಂತೆ ;

> "English educated Indians to differ from the mass of their countrymen in their food, dress, manners, language, religious beliefs, social practices and political ideas." (Mehlotrar S.R. : 1979; 23)

ಆದರೆ, ಪಾಶ್ಚಿಮಾತ್ಯ ವೈಚಾರಿಕತೆಯನ್ನು ಮಾನ್ಯಮಾಡಿದ ಇಂಗ್ಲಿಷ್ ವಿದ್ಯಾವಂತ ವರ್ಗದಲ್ಲಿ ರಾಷ್ಟ್ರೀಯತೆಯು ಜಾಗೃತಿಯಾದುದು ಒಂದು ವೈರುದ್ಧ್ಯ. ಸಾಂಪ್ರದಾಯಿಕ ಭಾರತದ ಮೌಲ್ಯಗಳು ಮತ್ತು ಪಾಶ್ಚಿಮಾತ್ಯ ವೈಚಾರಿಕತೆಗಳ ನಡುವಿನ ಅಸಹಜ ಮೈತ್ರಿಯನ್ನು ಮೈಗೂಡಿಸಿಕೊಂಡ ಇಂಗ್ಲಿಷ್ ವಿದ್ಯಾವಂತವರ್ಗ ಒಂದು ಕಡೆಯಲ್ಲಿ ಸಾಂಪ್ರದಾಯಿಕ ಜೀವನ ಕ್ರಮದಿಂದ, ದೇಸೀ ಸಂಸ್ಕೃತಿಯಿಂದ ಬೇರ್ಪಟ್ಟಿದೆ. ಮತ್ತೊಂದು

ಕಡೆಯಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯಿಂದಲೂ ಸ್ವೀಕೃತಗೊಳ್ಳದೆ ಅಧಿಕಾರಶಾಹಿಯೊಡನೆ ಅಂತರವೇರ್ಪಡಿಸಿ ಕೊಂಡಿದೆ.

> "ಭಾರತೀಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ನಡುವೆ ೧೯ನೆಯ ಶತಮಾನದ ಇಂಗ್ಲಿಷ್ ವಿದ್ಯಾವಂತವರ್ಗ ತ್ರಿಶಂಕುವಾಗಿ ಉದ್ಭವಿಸಿತು. ಮತ್ತು ತ್ರಿಶಂಕು ಸ್ಥಿತಿಯನ್ನು ಅನುಭವಿಸಿತು. ಈ ವರ್ಗ 'ಪರಕೀಯ'ವಾಯಿತು. ಅಂದರೆ ತನ್ನ ಕೀಳರಿಮೆಯ ಕಾರಣದಿಂದ ಪಾಶ್ಚಿಮಾತ್ಯ ಸಂಸ್ಕೃತಿಯೊಂದಿಗೆ ಗುರುತಿಸಿಕೊಳ್ಳಲಾರದ, ವ್ಯಕ್ತಿ ವಿಶಿಷ್ಟ ಪಾಶ್ಚಿಮಾತ್ಯ ತಾತ್ವಿಕತೆಯನ್ನು ಒಪ್ಪಿಕೊಂಡುದರಿಂದ ದೇಶೀಯ ಸಂಸ್ಕೃತಿಯೊಂದಿಗೆ ಸಂಬಂಧ ಸ್ಥಾಪಿಸಿಕೊಳ್ಳಲಾರದ ಸ್ಥಿತಿಯಿಂದಾಗಿ ಭಾರತೀಯ ಧೀಮಂತ ವರ್ಗ (Inteligensin) ತನ್ನ ಸಾಮಾಜಿಕ ಸಮಬಿಂಬ (Social Identity) ಕ್ಕಾಗಿ ತಡಕಾಡಬೇಕಾಗಿ ಬಂತು." (ಶಿವರಾಮ ಪಡಿಕ್ಕಲ್ ; ೧೯೮೭;೧೦೯)

ಹೀಗೆ ಪರಕೀಯವಾದ ತನ್ನ ಸಾಮಾಜಿಕ ಅನನ್ಯತೆಗಾಗಿ ಹೋರಾಡುತ್ತಿದ್ದ ಚಿಕ್ಕ ವರ್ಗವೇ ೧೯ನೆಯ ಶತಮಾನದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕ್ರಿಯಾಶೀಲವಾಗಿತ್ತು. ಇದನ್ನು ಸುರೇಸ್ಟ್ ಚಂದ್ರ ಬಾಲ್ಡಿ,

> "The western educated Indian novelists were the Products of opposing cultures, and belonged to neither. Their social origins placed them apart from the mass Indian people." ( Sureshest Ranjan Balde: 1982; 3)

ಎಂದು ಪರಿಣಾಮಕಾರಿಯಾಗಿ ವಿಶ್ಲೇಷಿಸಿದ್ದಾರೆ. ದೇಸಿ ವಿದ್ಯಾವಂತ ವರ್ಗವು ಸಾಂಸ್ಕೃತಿಕ ವ್ಯಕ್ತಿತ್ವದ ನಿರ್ಮಾಣಕ್ಕಾಗಿ ಶ್ರಮಿಸಿತು. ಇದು ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಪ್ರತ್ಯ-ಪ್ರತ್ಯೇಕವಾಗಿ ವ್ಯಕ್ತವಾಯಿತು. ವ್ಯಾಪಾರದ ಉದ್ದೇಶದಿಂದ ವಸಾಹತುಗಳನ್ನು ಸ್ಥಾಪಿಸಲು ಭಾರತಕ್ಕೆ ಆಗಮಿಸಿದ ಬ್ರಿಟಿಷರಿಗೆ ಭಾರತೀಯರ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ನೆಲೆಯ ಜೀವನ ಕ್ರಮವನ್ನು ಬಹಳ ಬೇಗನೆ ಸೂಕ್ಷ್ಮವಾಗಿ ಅರಿಯುವುದು ಸಾಧ್ಯವಾಗಿದೆ. ಆದುದರಿಂದ ಬ್ರಿಟಿಷರಿಗೆ ಅವರ ಶಿಕ್ಷಣ ನೀತಿಯ ಮೂಲಕ ಆಡಳಿತಾತ್ಮಕ ಪ್ರವೇಶ ಪಡೆಯುವುದು ತೀರಾ ಸುಲಭವಾಗಿ ಬಿಟ್ಟಿತು. ಭಾರತೀಯ ಸಂದರ್ಭದಲ್ಲಿ ಬ್ರಿಟಿಷರು ರೂಪಿಸಿದ ಸಾರ್ವತ್ರಿಕ ಶಿಕ್ಷಣ ಕ್ರಮ ಬಹುಮಾನ್ಯವಾಗಿ ಪರಿಣಮಿಸಿದೆ. ಆ ಮೂಲಕವಾಗಿ ಆಡಳಿತಾತ್ಮಕವಾಗಿಯೂ ಇಂಗ್ಲಿಷನ್ನು ಹೇರುವುದು ಮತ್ತು ಏಕರೂಪಾತ್ಮಕ ಚೌಕಟ್ಟು ನಿರ್ಮಿಸುವುದು ಸುಲಭವೇ ಆಗಿದೆ. ಬ್ರಿಟಿಷರು ರೂಪಿಸಿಕೊಂಡ ಅಥವಾ ಅನುಸರಿಸಿದ ಪದ್ಧತಿ ಭಾರತೀಯರಿಗೆ ಅದರಲ್ಲೂ ಮೊದಲು ಇಂಗ್ಲಿಷ್ ಶಿಕ್ಷಣ ಪಡೆದ ಮೇಲುವರ್ಗ, ಜಾತಿಯ ಜನತೆಗೆ ಪಾರದರ್ಶಕವಾಗಿ ಕಂಡುದರಿಂದ ಪರಿಪೂರ್ಣವಾದ ಸಾಮ್ರಾಜ್ಯ ಸ್ಥಾಪನೆಗೆ ತೊಡಕು ಉಂಟಾಗಲಿಲ್ಲ. ಭಾರತೀಯ ಸಮಾಜ ರೂಪಿಸಿಕೊಂಡ ಬಹುಜಾತಿ ಪರಂಪರೆ (ಮೇಲು- ಕೀಳು), ಸಂಸ್ಕೃತಿ, ಧಾರ್ಮಿಕತೆಯ ಮೇರೆಯನ್ನು ಮಿತಿಯಾಗಿ ಚಿತ್ರಿಸಿ ಬೈಬಲ್ ಶ್ರೇಷ್ಠವೆಂದು ಸಾರುವ ಮೂಲಕ ಮಿಶನರಿಗಳು ಮತ ಪ್ರಚಾರದ ಮೂಲಕ ಕಾರ್ಯಪ್ರವೃತ್ತರಾದರು. ಅದಕ್ಕೆ ಪ್ರತಿಕ್ರಿಯೆಯಾಗಿ ಭಾರತೀಯ ಇಂಗ್ಲಿಷ್ ವಿದ್ಯಾವಂತವರ್ಗದ ಪ್ರತಿನಿಧಿತ್ವ ಪಡೆದ ಚಿಂತಕರು ಭಾರತೀಯ ಧರ್ಮ, ದೇವರುಗಳ ಜಾಗೃತಿಗೆ ತೊಡಗಿದರು.

ಆಡಳಿತದಲ್ಲಿ ಏಕರೂಪತೆಯನ್ನು ಸಾಧಿಸುವ ಪ್ರಾಥಮಿಕ ಅವಶ್ಯಕತೆಯ ಲಕ್ಷ್ಯದಿಂದಲೇ ವಸಾಹತುಶಾಹಿ ಆಡಳಿತ ಭಾರತೀಯರಿಗೆ ಇಂಗ್ಲಿಷ್ ಶಿಕ್ಷಣವನ್ನು ಕೊಡಮಾಡಿತು. ಆದರೆ, ಭಾರತೀಯ ಸಮಾಜ ತನ್ನ ಮುಂದೆ ಅಸಹಜವಾಗಿ ಎದುರಾದ ಪಾಶ್ಚಿಮಾತ್ಯ ಸವಾಲುಗಳನ್ನು ಎದುರಿಸಲು, ಅಲ್ಲದೆ ಇದರಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ಪರ್ಯಾಯ ಮಾರ್ಗವನ್ನು ಅನ್ವೇಷಿಸತೊಡಗಿದ್ದು ಕಂಡು ಬರುತ್ತದೆ. ಪರಿಣಾಮವಾಗಿ ವೇದಾಂತದರ್ಶನ ಮತ್ತು ಪಾಶ್ಚಿಮಾತ್ಯ ವೈಚಾರಿಕತೆಗಳು 'ಭಾವ ತಾತ್ವಿಕ ಸೌಹಾರ್ದ' (Ideological alliance)ವನ್ನು ಸಾಧಿಸಿವೆ. ಮಹಾತ್ಮ ಗಾಂಧಿ, ಮಹರ್ಷಿಕರ್ವೆ, ಅಂಬೇಡ್ಕರ್ ಮೊದಲಾದ ಗಣ್ಯರು ಈ 'ತಾತ್ವಿಕ ಸೌಹಾರ್ದ'ಕ್ಕೆ ಒಂದು ಬುನಾದಿಯನ್ನು ಹಾಕಿಕೊಟ್ಟರು. ಭಾರತದಲ್ಲಿ ಆಂತರಿಕವಾಗಿ ನಡೆದ ಪುನರುತ್ಥಾನ ಬೆಳವಣಿಗೆಗಳಿಗೆ, ಸುಧಾರಣಾ ಸಂಘ ಸಂಸ್ಥೆಗಳಿಗೆ, ರಾಷ್ಟ್ರೀಯ ಚಳುವಳಿಗಳಿಗೆ ದೇಶದ ಬಹುಭಾಗವೇ ಕತ್ತಲಿನಿಂದ ಆವರಿಸಿರುವುದು ಅರಿವಾಯಿತು. ಸಾಂಸ್ಕೃತಿಕ ಕ್ಷೇತ್ರದಲ್ಲಿನ ತುರ್ತಿನ ಬೆಳವಣಿಗೆಗಳಿಗೆ ಭಾರತದ ಸ್ತ್ರೀ ಸಮೂಹ ಶತಮಾನಗಳ ಹಿಂದಿರುವುದು ಸ್ಪಷ್ಟವಾಯಿತು.

### ೩.೧.೧ ಉದಾರವಾದಿ ಸಾಂಸ್ಕೃತಿಕ ನೆಲೆ : ಸ್ತ್ರೀಯರ ಸ್ಥಿತಿಗತಿ.

ಭಾರತದ ಇತಿಹಾಸದಲ್ಲಿ ರಾಜಕೀಯ ಪ್ರಭಾವವು ಮಹಿಳೆಯರ ಜೀವನದ ಎಲ್ಲಾ ಏರಿಳಿತಗಳಿಗೆ ಕಾರಣವಾಗಿದೆ. ಪರಂಪರಾಗತವಾಗಿ ಪೂರ್ವದಿಂದಲೇ ಸ್ವತಂತ್ರ ವ್ಯಕ್ತಿತ್ವವನ್ನು ಕಳೆದುಕೊಂಡ ಮಹಿಳೆಯರು ಪುರುಷರ ಕೈಗೊಂಬೆಗಳಾಗಿಯೇ ಬದುಕಿದ್ದಾರೆ. ಧರ್ಮದ ಕಾರ್ಯಾಚರಣೆಗಳು ಹೆಣ್ಣನ್ನು ನಾಲ್ಕು ಗೋಡೆಗಳಲ್ಲಿ ಅಡಗಿಸಿದೆ. ಅಲ್ಲದೆ, ಬಂಗಾರದ ಆಭರಣಗಳಿಂದ ಬಂಧನದಲ್ಲಿ ಇರಿಸಿದೆ. ಭಾರತದ ದೇಸೀಯ ರಾಜ ಮಹಾರಾಜರುಗಳು ಕೂಡ ಮಹಿಳೆಯರನ್ನು ತಮ್ಮ ಭೋಗ ಜೀವನದ ಭಾಗವೆಂಬಂತೆ ಪರಿಗಣಿಸಿದ್ದರು. ಸನಾತನ ಸಾಹಿತ್ಯಗಳು ಮಹಿಳೆಯನ್ನು 'ದೇವಿ', 'ಶಕ್ತಿ ಸ್ವರೂಪಿ'ಯನ್ನಾಗಿ ಮಾರ್ಪಡಿಸಿ ಮನುಷ್ಯಳಾಗಿ ಬದುಕುವ ಅವಕಾಶವನ್ನೇ ಕಸಿದುಕೊಂಡವು. ಭಾರತದ ಮಹಿಳೆ ಧಾರ್ಮಿಕ ಜೀವನದಲ್ಲಿ ಶೂದ್ರಳೂ ಗೃಹ ಜೀವನದಲ್ಲಿ ದಾಸಿಯೂ ಆಗಿ ಬೆಳೆದು ಬಂದಳು. ಇಲ್ಲಿನ ಮಹಿಳೆ ಈ ಬಗೆಯ ಪ್ರತಿಮೆಗಳ ಸುಳಿಯಿಂದಾಗಿ ವಾಸ್ತವ ಜೀವನದಿಂದ ಬಹುದೂರ ಉಳಿಯುವುದು ಅನಿವಾರ್ಯವಾಗಿ, ತಮ್ಮ ಬದುಕಿನಲ್ಲಿ ಗಂಡ- ಮಕ್ಕಳು ಮತ್ತು ಆಭರಣಗಳಲ್ಲಷ್ಟೆ ತೃಪ್ತಿಕಾಣುವಂತಾಗಿದೆ. ಮನೆಗಳಲ್ಲಿ ಗೃಹಕೃತ್ಯದ ವಸ್ತುಗಳೆಂಬಂತೆ ಇದ್ದು, ಶಿಕ್ಷಣದ ಸೋಂಕಿಲ್ಲದ, ತನ್ನತನದ ಅರಿವಿಲ್ಲದ, ಸ್ವವ್ಯಕ್ತಿತ್ವವಿಲ್ಲದ ಮಹಿಳೆಯರಲ್ಲಿ ಜಾಗೃತಿಯನ್ನು ಉಂಟುಮಾಡುವುದು ಅನಿವಾರ್ಯವಾಗಿತ್ತು. ಆದರೆ ಇದು ಸುಲಭದ ಕಾರ್ಯವಾಗಿರಲಿಲ್ಲ. ರಾಜಸತ್ತೆಯು ಸಾರ್ವತ್ರಿಕ ಇಂಗ್ಲಿಷ್ ವಿದ್ಯಾಭ್ಯಾಸದ ಸೌಲಭ್ಯವನ್ನು ದೇಶೀಯ ಹೆಣ್ಣು ಮಕ್ಕಳಿಗೂ ಒದಗುವಂತೆ ಮಾಡಿತು. ಆದರೆ ಸಾಂಪ್ರದಾಯಿಕವಾದ ಮನಸ್ಸುಗಳಿಗೆ - ಮನೆತನಗಳಿಗೆ ಮಹಿಳೆಗೆ ಶಿಕ್ಷಣ ನೀಡುವುದು ಅಗೌರವದ ವಿಚಾರವಾಗಿತ್ತು.

ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದ ದೇಸೀ ಯಜಮಾನ್ಯ ಸಂಸ್ಕೃತಿಯೊಳಗೆ ಸ್ತ್ರೀಯರ ಶಿಕ್ಷಣಕ್ಕೆ, ಸುಧಾರಣೆಗಳಿಗೆ ಹೋರಾಟಗಳು ನಡೆದವು. ಬ್ರಾಹ್ಮಣ ಮತ್ತು ಕುಲೀನ ಮನೆತನಗಳ ಸ್ತ್ರೀಯರೇ ಮೊದಲಿಗೆ ಇಂಗ್ಲಿಷ್ ಶಿಕ್ಷಣದ ಅವಕಾಶವನ್ನು ಪಡೆದರು. ಆರ್ಯ ಸಮಾಜ, ಬ್ರಹ್ಮ ಸಮಾಜ,

ಥಿಯಾಸಫಿಕಲ್ ಸೊಸೈಟಿ ಅಲ್ಲದೆ, ಗಾಂಧಿವಾದ, ಮಾನವತಾವಾದಗಳು ಭಾರತದಲ್ಲಿನ ಸ್ತ್ರೀಯರ ಬದುಕಿನ ಪ್ರಾಥಮಿಕತೆಗಳ ಬಗ್ಗೆ, ಮನುಷ್ಯಳಾಗಿ ಬದುಕುವ ಬಗೆಗೆ ಜಾಗೃತ ಹೋರಾಟ ನಡೆಸಿದವು. ಪರಿಣಾಮವಾಗಿ ರಾಷ್ಟ್ರೀಯ ಹೋರಾಟದಲ್ಲಿ ಹೆಚ್ಚು ಹೆಚ್ಚು ಮಹಿಳೆಯರು ಪಾಲ್ಗೊಂಡರು.

> "ಮಹಿಳೆ ತನ್ನ ಸಮಯವನ್ನೆಲ್ಲ ಮನೆ ಕೆಲಸಗಳಲ್ಲಿ ಕಳೆಯದೆ ಬಿಡುವಿನ ವೇಳೆಯನ್ನು ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಬೇಕೆಂದು ಗಾಂಧೀಜಿಯ ಆದೇಶವಾಗಿತ್ತು." [ಎಚ್. ತಿಪ್ಪೇರುದ್ರ ಸ್ವಾಮಿ : ೧೯೭೦; ೪೮.]

ಇದರಿಂದಾಗಿ ರಾಷ್ಟ್ರಕ್ಕಾಗಿ ಹೋರಾಡುವುದನ್ನು ಭಾರತೀಯ ಮಹಿಳೆಯರು ತಮ್ಮ ಭಾಗ್ಯವೆಂಬಂತೆ ಪರಿಗಣಿಸಿದರು.

> "The making of the nation involves the shaping of a self, therefore the making of an other. The geograhy of the nation is not so much territorial as imaginative for it deals with what constitutes a people or a community, with ways the land has been lived on and worked over, with boundaries that include and exclude. With centers and perpheies, with the organizing principles of the nations 'integrity' or ' cohesion' and with social institutions and affective spaces that can house, protect and comfort" [ Susitharu, & K. Lalitha: 1995; 50-51]

ಎಂದು ಗುರುತಿಸುವುದು ಸರಿಯಾಗಿಯೇ ಇದೆ. 'ರಾಷ್ಟ್ರ' ಎನ್ನುವ 'ಭಾನನಾತ್ಮಕ' ಸಂವೇದನೆಯ ಫಲವಾಗಿ ಭಾರತದ ಬೃಹತ್ ಸ್ತ್ರೀ ಸಮೂಹ ರಾಷ್ಟ್ರೀಯ ಹೋರಾಟದಲ್ಲಿ ಪಾಲ್ಗೊಂಡಿದೆ. ವಿಜಯಲಕ್ಷ್ಮೀ ಪಂಡಿತ್, ಕಮಲಾನೆಹರು, ಸ್ವರೂಪ ರಾಣಿ, ಸರೋಜಿನಿ ನಾಯ್ಡು, ಕೃಷ್ಣಾ ಹತೀ ಸಿಂಗ್, ಡಾಕ್ಟರ್ ಸುಶೀಲಾ ನಾಯರ್, ಮೀರಾ ಬೆನ್, ರಾಜಕುಮಾರಿ ಅಮೃತ್ ಕೌರ್, ಮೃದುಲಾ ಬೆನ್, ಪ್ರೇಮಾ ತಂಟರ್, ಸುಚೇತಾ ಕೃಪಲಾನಿ, ಕುಮಾರಿ ಸಲಾಮ್, ಉಷಾ ಮೆಹತಾ, ಮಣಿಬೆನ್ ಪಟೇಲ್ ಇವರುಗಳಲ್ಲದೆ ಕರ್ನಾಟಕದ ರಾಜಕೀಯ ಸಂದರ್ಭದಲ್ಲಿ ಯಶೋದರಮ್ಮಾ ದಾಸಪ್ಪ, ಉಮಾಬಾಯಿ ಕುಂದಾಪುರ, ಬೀನಾದಾಸ, ಸೋಫಿಯಾ ಸೋಮಯಾಜಿ, ರುಕ್ಮಿಣಿ ಲಕ್ಷ್ಮೀಪತಿ, ಕೃಷ್ಣಾಬಾಯಿ ಪಣಜೀಕರ, ನಾಗಮ್ಮ ಪಾಟೀಲ, ಕಮಲಾದೇವಿ ಚಟ್ಟೋಪಾಧ್ಯಾಯ ಮೊದಲಾದವರ (ಮುಖಂಡರ) ಮಾರ್ಗದರ್ಶನದಲ್ಲಿ ಭಾರತದ ಬಹುಪಾಲು ಮಹಿಳೆಯರು ಒಂದಲ್ಲ ಒಂದು ರೀತಿಯಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

> "ಸ್ವಾತಂತ್ರ್ಯದ ಹೋರಾಟವೆಂದರೆ, ರಾಜಕೀಯ ಜಾಗೃತಿ ಮಾತ್ರವಲ್ಲ ಸಾಮಾಜಿಕ, ಶೈಕ್ಷಣಿಕ, ನೈತಿಕ, ಆರ್ಥಿಕ ಮತ್ತು ರಾಜಕೀಯ ಸಮಗ್ರ ಜಾಗೃತಿ."[ತಿಪ್ಪೇರುದ್ರಸ್ವಾಮಿ ಎಚ್ :೧೯೭೦ ; ೭೬]

ಎನ್ನುವ ಗಾಂಧೀಜಿಯ ನಿಲುವು ಮಹಿಳೆಯರು ತಮ್ಮ ತನು ಮನ ಧನಗಳಿಂದ ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸುವಂತೆ ಮಾಡಿತು.

ವಾಸ್ತವವಾಗಿ ಇಂಗ್ಲಿಷ್ ಶಿಕ್ಷಿತ ಮೇಲುವರ್ಗ ಹಾಗೂ ಮಧ್ಯಮವರ್ಗದ ಮಹಿಳೆಯರು ರಾಷ್ಟ್ರೀಯ ಚಳುವಳಿಯಲ್ಲಿ ಭಾಗಿಗಳಾಗಿರುವುದು ಕಂಡು ಬರುತ್ತದೆ. ಆದರೆ ರಾಷ್ಟ್ರೀಯ

ಆಂದೋಲನದಲ್ಲಿ ಮಹಿಳೆಯರ ಚಟುವಟಿಕೆಗಳು ಕಾಂಗ್ರೆಸ್ಸಿನ ಸದಸ್ಯರ ಜೊತೆಗೆ ವಿಲೀನೀಕರಣಗೊಂಡಿದ್ದವು. ಇದಕ್ಕೆ ಉದಾಹರಣೆಯಾಗಿ ನೆಹರೂ ಮನೆತನದ ಮಹಿಳೆಯರ ರಾಷ್ಟ್ರೀಯ ಆಂದೋಲನ ಚಟುವಟಿಕೆಗಳನ್ನು ಗಮನಿಸಬಹುದು. ಒಂದು ಕುಟುಂಬದ ಪುರುಷನೋರ್ವ ರಾಜಕೀಯವಾಗಿ ಸಕ್ರಿಯವಾಗಿ ಪಾಲ್ಗೊಳ್ಳುವುದೆಂದರೆ, ಆವನ ಕುಟುಂಬದ ಮಹಿಳೆಯರನ್ನೂ ಅಂದರೆ, ಹೆಂಡತಿ, ಮಗಳು, ತಾಯಿ, ಅಕ್ಕ, ನಾದಿನಿಯರನ್ನು ಕೂಡ ಒಳಗೊಂಡಿರುವುದು ಆ ಕಾಲಕ್ಕೆ ಗೌರವದ ವಿಚಾರವಾಗಿತ್ತು. ಅಲ್ಲದೆ, ಮೊದಲು ಪ್ರಸ್ತಾಪಿಸಿದಂತೆ 'ರಾಷ್ಟ್ರ' ಎನ್ನುವ ಪರಿಕಲ್ಪನೆ ಭಾವನಾತ್ಮಕ ನೆಲೆಯಿಂದ ನಿರ್ಮಾಣವಾದ ವಿಚಾರವಾಗಿದೆ. ಹತ್ತೊಂಬತ್ತನೇ ಶತಮಾನ ಹಾಗೂ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ರಾಷ್ಟ್ರ ಎನ್ನುವ ಪರಿಕಲ್ಪನೆಯು ಮಾತೃತ್ವವನ್ನು ವೈಭವೀಕರಿಸಿದೆ. ರಾಷ್ಟ್ರೀಯ ಆಂದೋಲನವು ಮಾತೃತ್ವ ಸ್ಥಾನಕ್ಕೆ ಅಪರಿಮಿತ ಮಹತ್ವವನ್ನು, ಚೈತನ್ಯವನ್ನು ತುಂಬಲು ಪ್ರಯತ್ನಿಸಿದೆ. ರಾಷ್ಟ್ರವನ್ನು ತಾಯಿಯಾಗಿ ಪರಿಕಲ್ಪಿಸಿದೆ. ಇದನ್ನು ಹತ್ತೊಂಬತ್ತನೇ ಶತಮಾನದ ರಾಷ್ಟ್ರೀಯವಾದಿ ಶ್ರೀ ಅರಬಿಂದೊ ಅವರ ಮಾತುಗಳು ಹೆಚ್ಚು ಸ್ಪಷ್ಟಪಡಿಸುತ್ತವೆ.

> "My country as a mother I offer her my devotions. My worship. If a monster sits up on her breast and prepares to suck her blood. What does her child do? Does he quietly sit down to his meal... or rush to her rescue?" (Vijaya Agnew : 1979;102)

ಹೀಗೆ ರಾಷ್ಟ್ರವನ್ನು ಕಟ್ಟುವಲ್ಲಿ ಮಾತೃತ್ವದ ಪ್ರತಿಮೆಯನ್ನು ಬಳಸಲಾಯಿತು. ರಾಷ್ಟ್ರವನ್ನು ಕಟ್ಟುವ ಉತ್ಪಾದಕರಾಗಿ ಸ್ತ್ರೀಯರನ್ನು ರಾಷ್ಟ್ರೀಯ ಮುಖಂಡರು ಮಾರ್ಪಾಡುಗೊಳಿಸಿದರು. ಅಂದರೆ, ಮಹಿಳೆಯರನ್ನು ರಾಷ್ಟ್ರಕ್ಕಾಗಿ ಬದುಕುವ ಅಥವಾ ಸಾವನ್ನು ಸ್ವೀಕರಿಸುವ ಮಕ್ಕಳನ್ನು ಕೊಡುವ ಮಾತೆಯರನ್ನಾಗಿ ಗೌರವಿಸಲಾಯಿತು. *ಳ ಭಾರತೀಯ ಮಹಿಳೆಯರನ್ನು ರಾಷ್ಟ್ರೀಯವಾದಿಗಳು 'ದೇಶದ ತಾಯಂದಿರಂತೆ' ಗುರುತಿಸುತ್ತಿದ್ದರು. ಈ ಕಾರಣದಿಂದಾಗಿ ಭಾರತ ಒಂದು 'ಮನೆ' ಎಂಬ ಕಲ್ಪನೆ ನಿರ್ಮಾಣವಾಯಿತು. ಭಾರತೀಯರೆಲ್ಲ ಭಾರತ ಮಾತೆಯ 'ಮಕ್ಕಳಾ'ದರು ; ರಾಷ್ಟ್ರೀಯ ಮುಖಂಡರು, ಧುರೀಣರು ಕುಟುಂಬದ ನಿರ್ವಾಹಕರಾದರು. ಪರಿಣಾಮವಾಗಿಯೇ ಗಾಂಧೀಜಿಯನ್ನು 'ರಾಷ್ಟ್ರಪಿತ' ಎಂದು ಗುರುತಿಸಲಾಯಿತು.

ಸಾಮಾಜಿಕ ಸುಧಾರಣೆಗಳಲ್ಲಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತಾದರೂ ಇದರ ಮೂಲ ಉದ್ದೇಶ ವಿದ್ಯಾವಂತ ಮಹಿಳೆಯರು ಉತ್ತಮ ತಾಯಂದಿರಾಗುವ ಅರ್ಹತೆಯನ್ನು ಶಿಕ್ಷಣದ ಮೂಲಕ ಪಡೆಯುತ್ತಾರೆ ಎಂಬುದೇ ಆಗಿದೆ. ಮಹಿಳೆಯರಿಗೆ ಶಿಕ್ಷಣ ನೀಡುವುದೆಂದರೆ ಅವರನ್ನು ಗೃಹಕೃತ್ಯ ಜವಾಬ್ದಾರಿಗಳಲ್ಲಿ ಹೆಚ್ಚು ಶ್ರದ್ಧೆ ಉಳ್ಳವರನ್ನಾಗಿ ಮಾರ್ಪಡಿಸುವುದೇ ಆಗಿದೆ. ಈ ಕಾರಣದಿಂದಾಗಿ ಇಂಗ್ಲಿಷ್ ಶಿಕ್ಷಣದ ಮೂಲಕ ಮಹಿಳೆ 'ಸಹಧರ್ಮಿಣಿ'ಯಾಗುವ ಮತ್ತು 'ಬಾಳಗೆಳತಿ'ಯಾಗುವ ಸಾಧ್ಯತೆಯ ಅರಿವನ್ನು ಮೂಡಿಸುವ ಪ್ರಯತ್ನಗಳು ನಡೆದವು. ಇದನ್ನು:

> "An educated woman can do house work thoughtfully and systematically in a way unknown to an ignorant, uneducated woman" (Partha chatterjee: 1989; 247.)

ಎಂದು ಸರಿಯಾಗಿ ಗುರುತಿಸಲಾಗಿದೆ. ಗಾಂಧೀಜಿಯ ಚಿಂತನೆಯೂ ಇದೇ ನಿಲುವಿನಿಂದ ಕೂಡಿದ್ದಾಗಿದೆ. ಆಧುನಿಕ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದುಕೊಂಡ ಮಹಿಳೆ ಸತಿಧರ್ಮವನ್ನು ಶಕ್ತವಾಗಿ ಅರ್ಥೈಸಿಕೊಳ್ಳುವ, ಸಹನೆ, ತಾಳ್ಮೆ, ತ್ಯಾಗದಂತಹ ಗುಣಗಳನ್ನು ಬೆಳೆಸಿಕೊಳ್ಳುವ 'ವೈದಿಕ' ಸ್ತ್ರೀಯಾಗಿ ರೂಪಿತಗೊಂಡಳು.

ಸುಧಾರಣಾವಾದಿಗಳ 'ಸ್ತ್ರೀ ಶಿಕ್ಷಣ' ಸಂಪೂರ್ಣವಾಗಿ ನೀತಿ ಬೋಧನೆಯ, ಸತಿ - ಮಾತೆ - ಗೃಹಿಣಿಯ ಧರ್ಮವನ್ನು ಪ್ರತಿಪಾದಿಸಿತು. ಸ್ತ್ರೀ ಶಿಕ್ಷಣವು ಮತ್ತು ಸುಧಾರಣೆ ಎನ್ನುವ ಧೋರಣೆಯು ಭಾರತೀಯ ಮಹಿಳೆಯರನ್ನು ಆಧುನಿಕ ವಿದ್ಯಾಭ್ಯಾಸವನ್ನು ಪಡೆದ ವೈದಿಕೀಕರಣಗೊಂಡ ಸ್ತ್ರೀಯರನ್ನಾಗಿ ಪರಿವರ್ತಿಸಿತು. ಇದು ಬರೆವಣಿಗೆಗಳಲ್ಲಿ ಕೂಡ ಪ್ರಮುಖವಾಗಿ ವ್ಯಕ್ತವಾಯಿತು. ಕನ್ನಡದ ಸಂದರ್ಭದಲ್ಲಿ ಮೊದಲ ಸಾಮಾಜಿಕ ಕಾದಂಬರಿಗಳಿಂದಲೇ ಇದನ್ನು ನಾವು ಗುರುತಿಸಬಹುದು. ಅಲ್ಲದೆ ಮೊದಲ ತಲೆಮಾರಿನ ಮಹಿಳಾ ಬರಹಗಾರರು ಕೂಡ 'ಆದರ್ಶನಾರಿ'ಯ ಪ್ರತಿಮೆಗಳನ್ನು ಪ್ರತಿಪಾದಿಸಿದರು. ದೇಶೀಯವಾಗಿ ಹೆಚ್ಚಿನ ಬರಹಗಾರರು ಮಹಿಳೆಯರ ಕುರಿತು ಪಾರಂಪರಿಕ ಮೂಲ ಮಾದರಿಗಳಿಗೆ ಪ್ರತಿಸ್ಪಂದಿಸಿರುವುದು ಕೂಡ ವ್ಯಕ್ತವಾಗುತ್ತದೆ.

ಭಾರತದ ಹೆಣ್ಣಿನ ಜೀವನದಲ್ಲಿ 'ಮದುವೆ' ಎನ್ನುವುದು 'ಗುರುತಿಸುವಿಕೆ'ಯ ಏಕಮಾತ್ರ ಮಹತ್ವದ ಉದ್ದೇಶವಾಗಿದೆ. ಈ ಉದ್ದೇಶದ ಸಫಲತೆಗೆ ಪೂರಕವಾಗಿಯೇ ಹೆಣ್ಣಿನ ತಾಯಿ ಆಕೆಯನ್ನು ತರಬೇತುಗೊಳಿಸುತ್ತಿದ್ದಳು. ಆದರ್ಶ ಸೊಸೆಯಾಗಿ, ಕೌಶಲ್ಯಪೂರ್ಣ- ವಿಧೇಯ - ಸಹನಾಶೀಲ ಪತ್ನಿಯಾಗಿ ಹೆಣ್ಣು 'ರೂಪುಗೊಳ್ಳ'ಬೇಕಾಗಿತ್ತು. ಇದರ ಸಲುವಾಗಿ ಅಡುಗೆ, ಸ್ವಚ್ಛತೆ, ಧಾರ್ಮಿಕ ಆಚರಣೆಗಳ ನಡಾವಳಿಗಳನ್ನು ಹೆಣ್ಣು ಮನೆಯಲ್ಲೇ ಹಿರಿಯ ಮಹಿಳೆಯರಿಂದ 'ಕಲಿಯ'ಬೇಕಾಗಿದ್ದ ಪರಿಸರ ನಿರ್ಮಾಣ ಮಾಡಲಾಗುತ್ತಿತ್ತು. ಇದನ್ನು ತಂದೆಯ ಹಾಗೂ ಗಂಡನ ಮನೆಯ ಹೆಸರನ್ನು, ಕೀರ್ತಿಯನ್ನು ಉಳಿಸುವ ಸಲುವಾಗಿ ಹೆಣ್ಣಿನ ಹಿರಿಮೆಯನ್ನು ಹೇಗೆ ಕಾಪಾಡಬೇಕೆಂದು ಆ ಕಾಲದ ಆಯಾ ಪ್ರಾದೇಶಿಕ ಜಾನಪದ ಸಾಹಿತ್ಯ ಹಾಗೂ ಪ್ರಾದೇಶಿಕ ಆಧುನಿಕ ಸಾಹಿತ್ಯಗಳೆರಡೂ ಪರಿಣಾಮಕಾರಿಯಾಗಿ ಪ್ರತಿಪಾದಿಸಿರುವುದು ವ್ಯಕ್ತವಾಗುತ್ತದೆ. ಸೊಸೆಯು ಗಂಡನ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಬಹಳ ಶ್ರದ್ಧೆಯಿಂದ, ಎಚ್ಚರಿಕೆಯಿಂದ ತಿಳಿಹೇಳಲಾಗುತ್ತಿತ್ತು ಎಂಬುದನ್ನು ಇರಾವತಿ ಕರ್ವೆ ಅವರು ತಮ್ಮ ಕೃತಿಯಲ್ಲಿ ದೀರ್ಘವಾಗಿ ಚರ್ಚಿಸಿದ್ದಾರೆ (Karve Irawati : 1953 ; 20). ಭಾರತೀಯ ಮಹಿಳೆಯ ಕುಟುಂಬ ಬಡತನದ್ದಾಗಿರಲಿ, ಶ್ರೀಮಂತಿಕೆಯದ್ದಾಗಿರಲಿ, ಅವಳು ಯಾವುದೇ ಜಾತಿ, ವರ್ಗ, ಪ್ರಾದೇಶಿಕತೆಗೆ ಸೇರಿದವಳಾಗಿರಲಿ, ಅವಳು ನವವಿವಾಹಿತ ತರುಣಿಯಾಗಿರಲಿ ಅನುಭವಸ್ಥ ವಯೋವೃದ್ಧೆಯಾಗಿರಲಿ, ಅವಳಿಗೆ 'ತನ್ನತನದ' (Self Identity) ಪ್ರತ್ಯೇಕವಾದ ಸ್ಥಾನವಿರಲಿಲ್ಲ. ಈ ಅರ್ಥದಲ್ಲಿ 'ತಾಯಿತನ'ದಿಂದಾಗಿ ಮಾತ್ರ ಆಕೆ ಸಾಮಾಜೀಕರಣಕ್ಕೆ ಒಳಗಾಗುತ್ತಿದ್ದಳು. 'ಗಂಡು' ಮಗುವಿನ ತಾಯಿಗೆ ಮಾತ್ರ ಸಮಾಜದಲ್ಲಿ ಮಾನ್ಯತೆ ಇತ್ತು. ಭಾರತೀಯ ಜೀವನ ಕ್ರಮದಲ್ಲಿ ನವವಧುವಿಗೆ ಸಹಜವೆಂಬಂತೆ ಕಡಿಮೆ ದರ್ಜೆಯ ಮಾನ್ಯತೆಯನ್ನು ಕುಟುಂಬ ನೀಡುತ್ತಿತ್ತು. ಇದಕ್ಕೆ ಆಕೆ 'ವಯಸ್ಸಿನಲ್ಲಿ ಕಿರಿಯ' ಹಾಗೂ 'ಹೊಸದಾಗಿ ಬಂದವಳು' ಎನ್ನುವ ಪ್ರಾಥಮಿಕ ಕಾರಣಗಳಿದ್ದವು. ಆಕೆ ಮಗುವನ್ನು ಹೆತ್ತ ನಂತರದಲ್ಲಿ ಅವಳನ್ನು ಕುಟುಂಬದಲ್ಲಿ ಗೌರವದಿಂದ ಪರಿಗಣಿಸಲಾಗುತ್ತಿತ್ತು. ಗಂಡು ಮಗುವಿನ ತಾಯಿಯಾದರೆ ಆಕೆಯ ಗೌರವ ಸಹಜವಾಗಿ ಹೆಚ್ಚುತ್ತಿತ್ತು.

> "ಆಧುನಿಕ ಯುಗದಲ್ಲೂ ಗಂಡು ಮಗನ ಹುಟ್ಟಿಗಿರುವ ಪ್ರಾಮುಖ್ಯ ಕಡಿಮೆಯಾಗಿಲ್ಲ. ವಿದ್ಯಾವಂತ ಮಂದಿ ಕೂಡ ಗಂಡು - ಹೆಣ್ಣು ಎಂಬ ಪದಗಳನ್ನು ಲಾಭ - ನಷ್ಟಗಳೆಂಬುದಕ್ಕೆ ಸಂಕೇತ ಪದಗಳನ್ನಾಗಿ ಬಳಸುವುದುಂಟು. ಹುಟ್ಟಿದ ಮಗನಿಗೆ ವಿದ್ಯಾಭ್ಯಾಸ ಕೊಡಿಸಿ, ಅದಕ್ಕೆ

ಖರ್ಚು ಮಾಡಿರುವಷ್ಟು ಹಣವನ್ನು ವರದಕ್ಷಿಣೆಯಾಗಿ ಪಡೆದು ಮುಪ್ಪಿನ ಕಾಲದಲ್ಲಿ ತಮ್ಮೊಂದಿಗೆ ಉಳಿಯಬಹುದಾದ ಮಗನನ್ನು ಹೆತ್ತೊಡಲು ಲಾಭವೆಂದೇ ಪರಿಗಣಿಸುತ್ತದೆ. ಮಗಳಿಗೆ ವಿದ್ಯಾಭ್ಯಾಸ ಕೊಡಿಸಿ, ಉದ್ಯೋಗ ದೊರೆತರೂ ವಿವಾಹದ ಖರ್ಚು, ವರದಕ್ಷಿಣೆಯ ಖರ್ಚನ್ನು ಸರಿದೂಗಿಸಿ ಮುಂದೆ ಮಗಳಿಗಾಗಬಹುದಾದ ಎಲ್ಲ ತಾಪತ್ರಯಗಳಿಗೂ ಒದ್ದಾಡಬೇಕಾದ ಪೋಷಕರು ಸಹಜವಾಗಿಯೇ ಹೆಣ್ಣು ಮಗುವನ್ನು ಆಶಿಸುವುದಿಲ್ಲ."(ಎನ್.ಗಾಯತ್ರಿ:೧೯೯೬; ೬೯)

ಎನ್ನುವ ಮಾತುಗಳು ಇಲ್ಲಿ ಮುಖ್ಯವೆನಿಸುತ್ತವೆ. ಅಂತೆಯೇ ಹೆಣ್ಣು ಮಗುವಿನ ತಾಯಿ ಕುಟುಂಬದ ಹಾಗೂ ಸಮಾಜದ ಅವಗಣನೆಗೆ ಒಳಗಾಗುತ್ತಿದ್ದಳು. ಮಕ್ಕಳಿಲ್ಲದ ತಾಯಂದಿರ- ವಿಧವೆಯರ ಬದುಕು ತೀರಾ ಶೋಚನೀಯವಾಗಿರುತ್ತಿತ್ತು. ಭಾರತೀಯ ಮಹಿಳೆಯ ಬದುಕು 'ಮಗಳಾಗಿ', 'ಹೆಂಡತಿಯಾಗಿ', 'ತಾಯಿಯಾಗಿ' ಮಾತ್ರ ಬದುಕುವ ಜೀವನಕ್ರಮ. 'ಮನೆ', 'ಕುಟುಂಬ', 'ಧಾರ್ಮಿಕ ಆಚರಣೆ'ಗಳಿಗಾಗಿ ಮಾತ್ರ ಅವಳ ಬದುಕು ಮೀಸಲಾಗಿರುವುದು ಕಂಡು ಬರುತ್ತದೆ. ಇವುಗಳ ಕಾರಣದಿಂದಾಗಿ ಮಹಿಳೆ ಸಹಜವಾಗಿ ಗುಲಾಮಳಂತೆ ಬದುಕುವ ಸಂಕುಚಿತ ಜೀವನದ ಅವಕಾಶಗಳು ಸಮಾಜ ಸುಧಾರಕರ ಗಮನ ಸೆಳೆದವು. ಹತ್ತೊಂಬತ್ತನೆಯ ಶತಮಾನ ಹಾಗೂ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಇಂಗ್ಲಿಷ್ ಶಿಕ್ಷಿತ ವರ್ಗಕ್ಕೆ ಭಾರತೀಯ ಮಹಿಳೆ ಬದುಕುವ 'ಮಾದರಿ'ಗಳಿಗಿಂತ ಭಿನ್ನವಾದ ಇಂಗ್ಲಿಷ್ 'ದೊರೆಸಾನಿ'ಗಳ ಬದುಕಿನ ಮಾದರಿಗಳು ವ್ಯಕ್ತವಾದವು. ಇದರಿಂದ ಗುಲಾಮರಂತೆ ಬದುಕುವ ಇಲ್ಲಿನ ಸ್ತ್ರೀಯರನ್ನು ಸಹಾನುಭೂತಿಯಿಂದ ಪರಿಗಣಿಸುವ ಅವಕಾಶಗಳನ್ನು ನಿರ್ಮಾಣಮಾಡುವುದು ಸಾಮಾಜಿಕ ಬದಲಾವಣೆಯ ತುರ್ತಿನ ಭಾಗವಾಗಿ ಕಾಣಿಸಿಕೊಂಡಿತು. ವಸಾಹತುಶಾಹಿ ಆಡಳಿತಕ್ಕೆ ಹಾಗೂ ದೇಶೀಯ ಸುಧಾರಣಾ ಚಳುವಳಿಗಳಿಗೆ ಬಾಲ್ಯವಿವಾಹ, ಸತಿಪದ್ಧತಿ, ವಿಧವೆಯರ ಸ್ಥಿತಿಗತಿಯ ಬಗ್ಗೆ ಋಣಾತ್ಮಕವಾದ ಅಭಿಮತ, ಧೋರಣೆ ಮೂಲಭೂತವಾಗಿದ್ದುದು ನಿಜ. ಆದರೆ, ಭಾರತೀಯ ಸಂಸ್ಕೃತಿಯೇ 'ಅನಾಗರಿಕ'ವಾದದ್ದು ಎನ್ನುವ ನಿರ್ಣಯ ವಸಾಹತುಶಾಹಿ ಆಡಳಿತಕ್ಕೆ ಇದ್ದರೆ, ಸುಧಾರಣಾ ಚಳುವಳಿಗಳಿಗೆ ಅದು 'ಅಮಾನವೀಯ'ವಾಗಿ ಮಾತ್ರ ವ್ಯಕ್ತವಾಗಿತ್ತು. ಬಾಲ್ಯವಿವಾಹ, ಸತಿಪದ್ಧತಿ, ವಿಧವೆಯರ ಸ್ಥಿತಿಗತಿಯ ಬಗ್ಗೆ ಈ ಎರಡೂ ಅಧಿಕಾರಶಾಹಿಗಳು ಒಂದರ್ಥದಲ್ಲಿ ಭಿನ್ನ ಭಿನ್ನವಾಗಿಯೇ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದವು. ವಸಾಹತುಶಾಹಿಯ ಪ್ರಾಥಮಿಕ ರಾಜಕಾರಣವಾದ 'ಮತಾಂತರ'ದ ಹುನ್ನಾರಗಳು ದೇಶೀಯ ಅಧಿಕಾರಶಾಹಿಗೆ ಅತಿ ಶೀಘ್ರವಾಗಿ ಮನವರಿಕೆಯಾಯಿತು. ಪರಿಣಾಮವಾಗಿ ಶಕ್ತರೂಪದಲ್ಲಿ ಇದನ್ನು ಪ್ರತಿಭಟಿಸುವ ಸಲುವಾಗಿ ಸುಧಾರಣಾ ವೇದಿಕೆಗಳಾದ ಆರ್ಯಸಮಾಜ, ಬ್ರಹ್ಮಸಮಾಜ, ಥಿಯಾಸಫಿಕಲ್ ಸೊಸೈಟಿಗಳು ಹುಟ್ಟಿಕೊಂಡವು. ಮತ್ತು ಕಾರ್ಯ ಪ್ರವೃತ್ತಗೊಂಡವು.

**ಬಾಲ್ಯವಿವಾಹ :**

ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಚಲಿತವಾಗಿದ್ದ 'ಬಾಲ್ಯವಿವಾಹ' ಪದ್ಧತಿಯನ್ನು ಪ್ರತಿಭಟಿಸಿ ವಿವಾಹದ ವಯಸ್ಸನ್ನು ಏರಿಸುವ ಸಲುವಾಗಿ ಹೆಚ್ಚಿನ ಹೋರಾಟಗಳು ನಡೆದವು. ಹಿಂದುಗಳಲ್ಲಿ ಆಚರಣೆಯಲ್ಲಿದ್ದ ಬಾಲ್ಯವಿವಾಹದ ಪದ್ಧತಿಯನ್ನು ಹಲವಾರು ಸುಧಾರಕರು ವಿರೋಧಿಸಿದರು.

ಮಹಾದೇವರಾನಡೆ, ರಾಜಾರಾಮ ಮೋಹನರಾಯ್, ಡಿ.ಕೆ.ಕರ್ವೆ, ವೀರೇಶಲಿಂಗಂಪಂತಲು, ಮಹಾತ್ಮಗಾಂಧಿ ಮೊದಲಾದವರು ಬಾಲ್ಯ ವಿವಾಹದ ಕೆಡುಕುಗಳನ್ನು ತಮ್ಮ ವೈಯಕ್ತಿಕ ಜೀವನದಿಂದಲೇ ಬಲ್ಲವರಾಗಿದ್ದರು.

"Many future reformers and political leaders were themselves married at a young age. Ramakrishna Paramhansa married a girl of six, M.G. Ranade a girl of eight. D.K Karve a girl of nine, Mahatma Gandhi was engaged at the age of Seven and Married at thirteen." (Suchetha Krupalani : 1975;23)

ಬಾಲ್ಯ ವಿವಾಹವೆಂಬುದು ಹಿಂದೂ ಸಮಾಜದಲ್ಲಿ ಸಾಂಸ್ಥೀಕರಣಗೊಂಡಿತ್ತು ಎಂಬುದು ಇದರಿಂದ ಗೊತ್ತಾಗುತ್ತದೆ. ಬಾಲ್ಯವಿವಾಹ ವಾಸ್ತವದಲ್ಲಿ ಒಳಜಾತಿ ಒಳಪಂಗಡಗಳಲ್ಲಿ ನಡೆಯುತ್ತಿದ್ದುದು ಸಾಮಾನ್ಯ. ಇದರ ಪರಿಣಾಮವಾಗಿ ಹುಡುಗಿಯೋರ್ವಳು ಬಾಲ್ಯದಲ್ಲೇ ತಂದೆಯ ಮನೆಯಿಂದ ಗಂಡನ ಮನೆಗೆ ದತ್ತಕಕ್ಕೆ ಒಳಗಾಗುತ್ತಿದ್ದಳು. ಈ ದತ್ತಕವು ಎಷ್ಟು ಪ್ರಭಾವಶಾಲಿಯಾಗಿತ್ತೆಂದರೆ, ಮದುವೆಯ ಕಾರ್ಯದಲ್ಲಿ ವಧುವಿನ ಹೆಸರಿನ ಬದಲಾವಣೆಯ ಶಾಸ್ತ್ರವೂ ನಡೆಯುತ್ತಿತ್ತು. ಇದು ಮೇಲ್ವರ್ಗದ ಸಮಾಜದಲ್ಲಿ ಸಾಮಾನ್ಯವಾಗಿತ್ತು.

ಸಣ್ಣ ವಯಸ್ಸಿನಲ್ಲೇ ಮದುವೆಯಾಗುತ್ತಿದ್ದ ಕಾರಣದಿಂದಾಗಿ ಪ್ರಾಯಕ್ಕೆ ಬಂದಾಗಲೇ ಹೆಣ್ಣು, ದೈಹಿಕ ಸಮಾಗಮಕ್ಕೆ ಒಳಗಾಗುತ್ತಿದ್ದಳಲ್ಲದೆ ಗರ್ಭವತಿಯಾಗುತ್ತಿದ್ದಳು. ಅತೀ ಸಣ್ಣ ವಯಸ್ಸಿನಲ್ಲಿ ಗರ್ಭವತಿಯಾಗುವ ಹೆಣ್ಣಿನ ದೈಹಿಕ ಹಾಗೂ ಮಾನಸಿಕ ಕ್ಷಮತೆ ಅನಿವಾರ್ಯವಾಗಿ ಕಡಿಮೆ ಇರುತ್ತಿತ್ತು. ಅಪ್ರಾಪ್ತ ಗರ್ಭಧಾರಣೆ, ದೈಹಿಕ ಹಾಗೂ ಮಾನಸಿಕ ವಿಕಲ್ಪತೆಯು ಹೆಚ್ಚಿನ ಯುವತಿಯರ ಸಾವಿಗೆ ಕಾರಣವಾಗಿತ್ತು. ಇದನ್ನು ಮನಗಂಡ ಸುಧಾರಣಾವಾದಿಗಳು ಮದುವೆಯ ವಯಸ್ಸಿನ ಹೆಚ್ಚಳದ ಬಗ್ಗೆ ಜನರಿಗೆ ಮನವರಿಕೆ ಮಾಡುವ ಪ್ರಯತ್ನಗಳನ್ನು ನಡೆಸಿದರು.

"Kamaladevi chattopadhyay, in her evidence to the Age of consent committee, mentioned several cases of girls contracting disease or being permanently handicapped due to premature maternity and cohabitation."( K.Natrajan:1928; 95)

ಬಾಲ್ಯ ವಿವಾಹವು ದೈಹಿಕವಾಗಿ ಹಾನಿಕಾರಕ ಎಂಬ ವೈದ್ಯಕೀಯ ಸ್ಪಷ್ಟೀಕರಣವನ್ನು ಹರಿಬಿಲಾಸ್ ಸರ್ದ್ಆ ಅವರು ಪತ್ರಿಕೆಗಳಲ್ಲಿ ಪ್ರಕಟಿಸಿದರು. ಬಾಲ್ಯವಿವಾಹ ವಿರುದ್ಧದ ಸುಧಾರಣಾ ಪರಚಿಂತನೆಗಳಿಗೆ ತೀವ್ರರೂಪದ ಬೆಂಬಲ ಹಾಗೂ ಪ್ರತಿರೋಧಗಳು ವ್ಯಕ್ತವಾದವು. ಬಾಲ್ಯ ವಿವಾಹದ ಪರ- ವಿರೋಧ ನಿಲುವುಗಳಲ್ಲಿ ಎಲ್ಲಾ ಪ್ರಾದೇಶಿಕ ಭಾಷೆಗಳ ಸಾಹಿತ್ಯಗಳು ರಚನೆಗೊಂಡವು.

"In 1884 Behramje Malabari , a Parsi journalist published his notes on Infant Marriage and Enforced widowhood .They were a journalistic appeal for sympathy and action. Malabaris arguement was based on humanitarianism and justice rather than on an interpretation of the smritis. He did not quote extensively from the censur Report or Court Records for support" (Natarajan K : 1928; 96-97)

ಎನ್ನುವಲ್ಲಿ ಇದು ನಿಖರವಾಗಿ ವ್ಯಕ್ತವಾಗುತ್ತದೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮೊದಲ ಕಾಲಘಟ್ಟದ ಬರಹಗಳಲ್ಲಿ ಬಾಲ್ಯವಿವಾಹದ ಹಲವು ಆಯಾಮಗಳ ಚರ್ಚೆಯನ್ನು ಗಮನಿಸಬಹುದು. ಬರಹದಂತಹ ಶಕ್ತ ಮಾಧ್ಯಮಗಳಲ್ಲಿ ಜನಸಾಮಾನ್ಯರಿಗೆ ಅರಿವು ಮೂಡಿಸುವುದರ ಪರಿಣಾಮವಾಗಿ ಸಮಾಜ

ನಿಧಾನಗತಿಯಿಂದಲಾದರೂ ಪರಿವರ್ತನೆಯನ್ನು ಕಾಣುವುದು ಸಾಧ್ಯವಾಯಿತು. ಅಲ್ಲದೆ ಶಾಸಕಾಂಗದ ಮೂಲಕವೂ ಬಾಲ್ಯವಿವಾಹದ ಕಾನೂನುಬದ್ಧ ರದ್ದತಿಗೆ ಹೋರಾಟಗಳು ನಡೆದವು. ಮೊದಲ ಬಾರಿಗೆ ಬ್ರಿಟಿಷ್ ಸರಕಾರ ೧೮೯೧ರಲ್ಲಿ ಹೆಣ್ಣಿನ ಮದುವೆಯ ವಯಸ್ಸು ೧೨ ಮತ್ತು ಗಂಡಿನ ಮದುವೆಯ ವಯಸ್ಸು ೧೪ ಎನ್ನುವ ಕಾನೂನನ್ನು ಜಾರಿಗೊಳಿಸಿತು. ಆದರೆ, ಭಾರತೀಯ ಸಮಾಜವು ಶಾಸಕಾಂಗದಿಂದ ಸುಧಾರಣೆಗೆ ಒಳಗಾಗುವುದಕ್ಕಿಂತ ಮುಖ್ಯವಾಗಿ ಸಾರ್ವಜನಿಕ ಬೆಂಬಲದಿಂದ ಮಾತ್ರ ಬದಲಾವಣೆಗೊಳ್ಳುವುದು ಸಾಧ್ಯವಿತ್ತು. ಸಮಾಜ ಸುಧಾರಕರ ಪ್ರಯತ್ನದಿಂದಾಗಿ ೧೯೨೯ರಲ್ಲಿ ಶಾಸಕಾಂಗವು ಹೆಣ್ಣಿನ ಮದುವೆಯ ವಯಸ್ಸನ್ನು ಕನಿಷ್ಠ ೧೪ ವರ್ಷಗಳೆಂದು ನಿಗದಿಗೊಳಿಸಿತು. ಇದು ಹತ್ತೊಂಬತ್ತನೆಯ ಶತಮಾನದ ಅತ್ಯಾಧುನಿಕ ಮಹಿಳಾ ಸುಧಾರಣೆಯಾಗಿದೆ.

**ವಿಧವಾ ಪದ್ಧತಿ :**

ಬಾಲ್ಯವಿವಾಹ, ದೇಶದಲ್ಲಿನ ಅಸ್ಥಿರವಾದ ರಾಜಕೀಯ ಪರಿಸ್ಥಿತಿ, ಮಲೇರಿಯಾ, ಪ್ಲೇಗ್‌ನಂತಹ ಭೀಕರ ಕಾಯಿಲೆಗಳು, ಸೂಕ್ತ ವೈದ್ಯಕೀಯ ಸೌಲಭ್ಯಗಳ ಕೊರತೆ, ಜನತೆಯಲ್ಲಿನ ಅಜ್ಞಾನ, ಮೂಢನಂಬಿಕೆಗಳು, ಈ ಎಲ್ಲದರ ಪರಿಣಾಮದಿಂದಾಗಿ ವಿಧವೆಯರ ಸಂಖ್ಯೆ ಹೆಚ್ಚಾಗಿತ್ತು.

> "The census report of 1891 indicated that out of a total population of 140, 196, 135 as many as 22,657, 429, were widows of these 13, 878 were under four years of age 64,040 between five and nine; 17, 532 between 10 and 14; 4, 160, 548 between 15 and 34". ( Hari Bilas Sarda; 1935 : 96- 97)

ಹಿಂದೂ ವಿಧವೆಯರ ಬದುಕು ಅತ್ಯಂತ ಅಸಹನೀಯ ಹಾಗೂ ಶೋಚನೀಯವಾಗಿತ್ತು. ೬-೭ನೆಯ ಶತಮಾನದವರೆಗೆ ಪುರಾಣಗಳು, ಸ್ಮೃತಿಗಳು, ಧರ್ಮಶಾಸ್ತ್ರಗಳು ಹೆಣ್ಣಿನ ಅಧೀನತೆಯನ್ನು ಸ್ಪಷ್ಟವಾಗಿ ಮಂಡಿಸಿದ್ದರೂ ವಿಧವೆಯರಿಗೂ ಗೌರವವಾದ ಸ್ಥಾನಮಾನಗಳನ್ನು ಕಲ್ಪಿಸಲು ಪ್ರಯತ್ನಿಸಿದ್ದವು. ದೇಶದ ಕೆಲವು ಭಾಗಗಳಲ್ಲಿ 'ನಿಯೋಗ'ದಂತಹ ಪದ್ಧತಿ ರೂಢಿಯಲ್ಲಿತ್ತು. ಅಲ್ಲದೆ, ವೈದಿಕೇತರ ಹಲವು ಸಮಾಜಗಳಲ್ಲಿ ವಿಧವೆಯರ ಮರುಮದುವೆಗೆ ಅವಕಾಶವಿದ್ದು, ವೈದಿಕಶಾಹೀ ಮನೆತನಗಳ ಕಠೋರ ಆಚರಣೆಗಳು, ನಿಯಮಗಳು ಉಳಿದ ಜನವರ್ಗಗಳಲ್ಲಿ ಆಚರಣೆಯಲ್ಲಿರಲಿಲ್ಲ. ಮೇಲ್ವರ್ಗದ ಹಿಂದೂ ಸಮಾಜಗಳಲ್ಲಿ ವಿಧವೆಯರ ಸ್ಥಿತಿ ಅತ್ಯಂತ ದಾರುಣವಾಗಿತ್ತು. ಆದರೆ ಎಲ್ಲಾ ವಿಧವೆಯರ ನೋವು ಒಂದೇ ರೀತಿಯದ್ದಾಗಿರಲಿಲ್ಲ. ವಯಸ್ಸಾದ ವಿಧವೆಯರ ಸ್ಥಿತಿಗತಿಯು ಬಾಲವಿಧವೆ ಮತ್ತು ಮಕ್ಕಳಿಲ್ಲದ ವಿಧವೆಯರ ಸ್ಥಿತಿಗಿಂತ ಉತ್ತಮವಾಗಿತ್ತು. ಧಾರ್ಮಿಕ ಕಟ್ಟಳೆಯ ಪ್ರಕಾರ ಹಿಂದೂ ವಿಧವೆಯರಿಗೆ ಗಂಡನ ಆಸ್ತಿಯಲ್ಲಿ ಪಾಲು ಸಿಗದ್ದಿದರೂ, ಗಂಡನ ಆಸ್ತಿಯನ್ನು ಊರ್ಜಿತಗೊಳಿಸುವ, ನೋಡಿಕೊಳ್ಳುವ ಹಕ್ಕು ಇರುತ್ತಿತ್ತು. ವೈದಿಕ ಸಮಾಜಗಳಲ್ಲಿ ವಿಧವೆಯರನ್ನು ಬಾಹ್ಯವಾಗಿ ವಿರೂಪಗೊಳಿಸಲಾಗುತ್ತಿತ್ತು. ವಿಧವೆಯರಿಗೆ ಕೇಶ ಮುಂಡನವನ್ನು ಮಾಡಿಸಿ ಕೆಂಪು, ಕಾವಿ, ಅಥವಾ ಬಿಳಿ ಸೀರೆಗಳನ್ನು ಉಡಿಸಲಾಗುತ್ತಿತ್ತು. ಆಭರಣ, ಹೂವು ಮುಂತಾದ ಅಲಂಕಾರ ವಸ್ತುಗಳು ವಿಧವೆಯರಿಗೆ ವರ್ಜ್ಯವಾಗಿದ್ದವು. ಮಾತ್ರವಲ್ಲದೆ, ಒಪ್ಪೊತ್ತಿನ ಊಟ ಹಾಗೂ ಅಪರಿಮಿತ ಧಾರ್ಮಿಕ ಕಟ್ಟಳೆಯ ಬಂಧನದಿಂದಾಗಿ ವಿಧವೆಯರ ಬದುಕು ನಿಷ್ಠುರವಾಗಿತ್ತು. ಕೂಡು ಕುಟುಂಬಗಳಲ್ಲಿ ಅನಾಯಾಸವಾಗಿ ದೊರೆಯುವ ಜೀತದಾಳುಗಳಂತಹ ಬದುಕು ವಿಧವೆಯರದಾಗಿತ್ತು. ಬಂಗಾಳದ ವಿಧವೆಯರ ಸ್ಥಿತಿಗತಿಯು

ದೇಶದ ಉಳಿದ ಭಾಗದ ವಿಧವೆಯರ ಪರಿಸ್ಥಿತಿಗಿಂತ ಅತ್ಯಂತ ದಾರುಣವಾಗಿತ್ತು. ವಿಧವೆಯರನ್ನು ದೈಹಿಕವಾಗಿ ಬಾಹ್ಯ ವಿರೂಪನಗೊಳಿಸುವುದು, ದೇವರ ಹೆಸರಿನಲ್ಲಿ - ಧಾರ್ಮಿಕತೆಯ ಹೆಸರಿನಲ್ಲಿ ಕುಟುಂಬದಿಂದ ವಿಧವೆಯರನ್ನು ಬೇರ್ಪಡಿಸಿ ವಾರಣಾಸಿಯಲ್ಲಿ ಅನಾಥರನ್ನಾಗಿ ಬಿಟ್ಟು ಹೋಗುವುದು, ಕುಟುಂಬಗಳಿಂದ ಬಹಿಷ್ಕರಿಸುವುದು ಅಲ್ಲದೆ 'ಸತಿ' ಹೋಗಲು ಒತ್ತಾಯಿಸುವುದು ಕೂಡ ಬಂಗಾಳದಲ್ಲಿ ರೂಢಿಯಲ್ಲಿತ್ತು. ದೇಶದ ಉಳಿದ ಭಾಗದ ಹಿಂದೂ ವಿಧವೆಯರಂತೆ ಬಂಗಾಳದ ಹಿಂದೂ ವಿಧವೆಯರು ಕೂಡ ಹಿಂದಿನಿಂದಲೂ ಮುಖ್ಯವಾಹಿನಿಯಿಂದ ಪ್ರತ್ಯೇಕಿತಗೊಂಡ ಬಹಿಷ್ಕೃತ ಮಹಿಳೆಯರಾಗಿದ್ದರು. ದೇಶದ ಉಳಿದ ಭಾಗಗಳಲ್ಲಿ ವಿಧವೆಯರನ್ನು ಸಮಾಜ ಮತ್ತು ಕುಟುಂಬಗಳ ಒಳಗೇ ಅಂಚಿಗೆ ಸರಿಸಿದ್ದರೆ, ಬಂಗಾಳಿಗಳು ತಮ್ಮ ಮನೆಯಿಂದಲೂ ದೂರಮಾಡಿ ಅವರನ್ನು ವಾರಣಾಸಿ, ಗಯಾ, ಕಾಶಿ ತೀರ್ಥ ಕ್ಷೇತ್ರಗಳಿಗೆ ಗಡೀಪಾರು ಮಾಡುತ್ತಿದ್ದರು. *೮ ಇದರಲ್ಲಿ ವಿಧವೆಯರಿಗೆ ಬೇರೆ ಆಯ್ಕೆಗಳಿರುತ್ತಿರಲಿಲ್ಲ.

ಹಿಂದು ವಿಧವೆಯ ಮರುವಿವಾಹ ಕಾಯಿದೆಯು ೧೮೫೬ರಲ್ಲಿ ಜಾರಿಗೊಂಡಿದೆ. ಈ ಸಮಸ್ಯೆಗೆ ಕಾನೂನಿನ ಬೆಂಬಲ ದೊರೆಯುತ್ತಿದ್ದಂತೆಯೇ ವಿಧವಾ ವಿವಾಹದ ಬಗೆಗೆ ಒಂದು ಆಂದೋಲನವೇ ಆರಂಭವಾಯಿತು. ಕರ್ನಾಟಕದ ಉತ್ತರ ಕನ್ನಡದಲ್ಲಿ ವಿಧವಾ ವಿವಾಹದ ಬಗೆಗೆ ಆಕದಾಸ ಗಣಪತಿ ಭಟ್ಟರ ಸಾಧನೆ ಈ ನೆಲೆಯಲ್ಲಿ ಗಮನಾರ್ಹ. ಉತ್ತರ ಕನ್ನಡದಲ್ಲಿ ವಿಧವಾವಿವಾಹದ ಬಗೆಗೆ ಒಂದು ಆಂದೋಲನವನ್ನೇ ನಡೆಸಿದ ಆಕದಾಸ ಭಟ್ಟರು ಸ್ವತಃ ವಿಧವೆಯನ್ನು ವಿವಾಹವಾಗುವುದರ ಮೂಲಕ ಮಹತ್ವದ ಸಾಮಾಜಿಕ ಪಲ್ಲಟಕ್ಕೆ ಕಾರಣರಾದರು.

> "ಆಕದಾಸ ಗಣಪತಿ ಭಟ್ಟನೆಂಬ ವಿಧುರನಾದ ನಾನು ನಂದೀತಳೆಯ ಅಂಚೆ ತಿಮ್ಮಯ್ಯನವರ ಮಗಳಾದ ವಿಧವೆ ಮಹಾಂಕಾಳಿಯನ್ನು ಲಗ್ನವಾಗಲು ನಿಶ್ಚಯಿಸಿರುತ್ತೇನೆ. ಮಂಜುಗುಣಿ ಕ್ಷೇತ್ರದಲ್ಲಿ ೨೩-೧೨-೧೯೩೨ರಂದು ನಡೆಯುವ ಈ ಶುಭಕಾರ್ಯಕ್ಕೆ ತಾವೆಲ್ಲ ಆಗಮಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ." (ರಾಜೀವ ಅಜ್ಜೀಬಳ, ಲಕ್ಷ್ಮೀನಾರಾಯಣ :೧೯೯೨;೯೬)

ಇದು ಗಣಪತಿ ಭಟ್ಟರು ಅವರ ಮದುವೆಗೆಂದು ಜಿಲ್ಲೆಯಲ್ಲಿ ಹಂಚಿದ ಆಮಂತ್ರಣ ಪತ್ರಿಕೆಯಾಗಿದೆ. ವಿಧವೆಯರ ಮರು ವಿವಾಹಕ್ಕೆ ಅವಕಾಶಗಳು ಇದ್ದವು ಎಂಬುದು ನಿಜವಾಗಿತ್ತು. ಆದರೆ ಹರಿಬಿಲಾಸ್ ಸರ್ದ ಕೊಡುವ ಅಂಕಿ ಅಂಶಗಳ ಹಿನ್ನೆಲೆಯಲ್ಲಿ ವಿವೇಚಿಸುವುದಾದರೆ, ಹೆಚ್ಚಿನ ಸಮಾಜಗಳಲ್ಲಿ ಪುರೋಹಿತಶಾಹಿ, ಹಾಗೂ ಪುರುಷಶಾಹಿ ಅಧಿಕಾರ ವರ್ತುಲಗಳು ವಿಧವೆಯರನ್ನು ಅಧೀನತೆಗೆ ಒಳಪಡಿಸಿದ್ದವು. ವೈದಿಕಶಾಹೀ ಹಿನ್ನೆಲೆಯ ಧಾರ್ಮಿಕ ಕಟ್ಟಳೆಗಳು ವಿಧವೆಯರ ಮರುವಿವಾಹಕ್ಕೆ ಅವಕಾಶವನ್ನು ಕಲ್ಪಿಸುವಂತೆ ಇಲ್ಲದಿರುವುದು, ಈ ಧಾರ್ಮಿಕ ರಾಜಕೀಯವು ಮಹಿಳೆಯನ್ನು ಅಪವಿತ್ರದ ಹಿನ್ನೆಲೆಯಲ್ಲಿ ಅಸ್ಪೃಶ್ಯಭಾವದಿಂದ, ತಿರಸ್ಕೃತವಾಗಿ ನೋಡುವುದು ಕೂಡ ಗಮನೀಯ ಅಂಶ. ಅಲ್ಲದೆ, ವಿಧವಾ ಕಾರ್ಮಿಕತೆಯನ್ನು ಪಡೆದುಕೊಳ್ಳುವ ಉಪಕೃತ ವರ್ಗಗಳು ಕೂಡ ವಿಧವೆಯರ ಮರುವಿವಾಹಕ್ಕೆ ಪ್ರಬಲವಾದ ಪ್ರತಿರೋಧವನ್ನು ವ್ಯಕ್ತಪಡಿಸಿದ್ದವು.

ಸುಧಾರಣಾವಾದಿಗಳ ಪರಿಶ್ರಮದಿಂದಾಗಿ ಜಾರಿಗೆ ಬಂದ ೧೮೫೬ರ ಹಿಂದೂ ವಿಧವೆಯರ ಪುನರ್ವಿವಾಹ ಕಾಯಿದೆಯು ನಿಷ್ಫಲಗೊಂಡಿತ್ತು. ಪಂಡಿತ್ ವಿದ್ಯಾಸಾಗರ, ಕೆಸುಬು ಚಂದ್ರಸೇನ್

ಮತ್ತು ಮಹರ್ಷಿ ಕರ್ವೆ ಮುಂತಾದ ಸುಧಾರಕರು ವಿಧವೆಯರ ಪುನರ್‌ವಿವಾಹ ಹಾಗೂ ಆಸ್ತಿಯ ಹಕ್ಕಿಗಾಗಿ ಹೋರಾಟ ನಡೆಸಿದರು. ಬಂಗಾಳದಲ್ಲಿ ೧೯ನೆಯ ಶತಮಾನದಲ್ಲಿ ಕಾಣಿಸಿಕೊಂಡ ರಾಷ್ಟ್ರೀಯವಾದಿ ಪಿತೃ ಸಂಸ್ಕೃತಿಯು ಕುಟುಂಬವನ್ನು ಸಾಮಾಜಿಕ ಬದಲಾವಣೆಯ ಪ್ರಾಥಮಿಕ ಘಟಕವಾಗಿ ರೂಪಿಸಿದೆ. 'ಹೆಂಡ್ತಿ' ಮತ್ತು 'ತಾಯ'ನ್ನು ಹೊಸ ರೂಪದಲ್ಲಿ ರಚಿಸುವತ್ತ ಆಸಕ್ತವಾಗಿದೆ. ಆದರೆ ಇದರಲ್ಲಿ ವಿಧವೆಯರಿಗೆ ಯಾವುದೇ ಸಾಮಾಜಿಕ ಸ್ಥಾನ ಜವಾಬ್ದಾರಿಗಳಿರಲಿಲ್ಲ. ಇವರು ವಸಾಹತು ಇಂಡಿಯಾದಲ್ಲಿ ಭಾರತೀಯ ಪರಂಪರೆಯ ಪರಿಶುದ್ಧತೆಗೆ ಸಂಕೇತವಾಗಿದ್ದರು. ರಾಷ್ಟ್ರೀಯವಾದಿ ಸುಧಾರಕರು ವಿಧವೆಯರ ಬದುಕನ್ನು ಆಧ್ಯಾತ್ಮಿಕವಾಗಿ ಪರಿಶುದ್ಧತೆಗೆ ಸೀಮಿತಗೊಳಿಸಿದ ಪರಿಣಾಮವಾಗಿ, ವಿಧವೆಯರು ಅಕಳಂಕಿತ ಚಿನ್ಹೆಗಳೆಂಬಂತೆ ರೂಪುಗೊಂಡರು. ಸುಧಾರಕರು ವಿಧವಾ ಶಿಕ್ಷಣದ ಮೂಲಕವಾಗಿ ರಾಷ್ಟ್ರೀಯವಾದಿ ಹೊಸ ಸಮಾಜ ರಚಿಸುವ ಪ್ರಯತ್ನ ನಡೆಸಿದರು. ಈ ನೆಲೆಯಲ್ಲಿ ಮಧ್ಯಮವರ್ಗ ಹಾಗೂ ಮೇಲ್ವರ್ಗದ ಹೆಚ್ಚಿನ ವಿಧವೆಯರು ಶಿಕ್ಷಣವನ್ನು ಪಡೆದುಕೊಂಡರು. ಶಿಕ್ಷಿತ ವಿಧವೆಯರಲ್ಲಿ ಅನೇಕರು ಶಾಲಾ ಶಿಕ್ಷಕಿಯರಾಗಿ, ತರಬೇತಿದಾರರಾಗಿ ನೇಮಕಗೊಂಡರು.

> "The question of education of women, in general, followed a pattern of women, similar to the controvercy over the age of consent or the rights of widows to remarry." [Usha Chakravarthi :1963; 38-39]

ಎನ್ನುವ ಮಾತುಗಳು ಇಲ್ಲಿ ಮುಖ್ಯವಾಗುತ್ತದೆ. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ, ಆರಂಭದ ಕಾಲಘಟ್ಟದ ಹೆಚ್ಚಿನ ಮಹಿಳಾ ಬರಹಗಾರರೆಲ್ಲರೂ ಇಂಗ್ಲಿಷ್ ಶಿಕ್ಷಣವನ್ನು ಪಡೆದ ವಿಧವೆಯರಾಗಿದ್ದರು ಎಂಬುದು ಗಮನಾರ್ಹ.

**ಸತಿಪದ್ಧತಿ :**

ವಿಧವೆಯರು ಸತಿ ಹೋಗುವ ಪದ್ಧತಿಯು ಪ್ರಾಚೀನ ಸಮಾಜಗಳಲ್ಲಿ ಒಂದು ಅಧಿಕೃತ ಆಚರಣೆಯಾಗಿ ಎಂದೂ ಪ್ರಮಾಣಿತಗೊಂಡಿರಲಿಲ್ಲ. ಮಧ್ಯಯುಗದಲ್ಲಿ ಭಾರತದ ಮುಸ್ಲಿಂ ದೊರೆಗಳ ರಾಜಕೀಯ - ಸೈನಿಕ - ಸಾಮಾಜಿಕ ಒತ್ತಡಗಳ ಪರಿಣಾಮದಿಂದಾಗಿ ವಿಧವೆಯರು ತಮ್ಮ ಗಂಡಂದಿರ ಚಿತೆಯಲ್ಲಿ ತಮ್ಮನ್ನು ಸುಟ್ಟುಕೊಳ್ಳುವ ಪದ್ಧತಿ ಕಾಣಿಸಿಕೊಂಡಿತು. ಮಧ್ಯಯುಗದ ಬಳಿಕ ಮತ್ತೆ ಸತಿಪದ್ಧತಿಯ ಜನಪ್ರಿಯತೆ ಕುಗ್ಗಿತು. ಹದಿನೇಳನೆಯ ಶತಮಾನದ ಹೊತ್ತಿಗೆ, ಈ ಪದ್ಧತಿ ಐಚ್ಛಿಕವಾಗಿ ಬಿಟ್ಟಿತು. ಹದಿನೆಂಟನೆಯ ಶತಮಾನದ ಆರಂಭದಲ್ಲಿ ಈ ಪದ್ಧತಿ ತೀರ ವಿರಳವಾಗಿಬಿಟ್ಟಿತ್ತು. ಸತಿಪದ್ಧತಿಯು ಮತ್ತೊಮ್ಮೆ ಒಂದು ಅಧಿಕೃತ ಉನ್ಮತ್ತ ಕ್ರೀಡೆಯೆಂಬಂತೆ ಚಾಲ್ತಿಗೊಂಡದ್ದು ಬಂಗಾಳ ಮತ್ತು ರಾಜಸ್ಥಾನಗಳಲ್ಲಿ. ಹದಿನೆಂಟನೆಯ ಶತಮಾನದ ಕೊನೆಗೆ ದೇಶದ ಹಲವು ಕಡೆಗಳಲ್ಲಿ ವಿರಳವಾಗಿ ಇದು ಕಾಣಿಸಿ ಕೊಂಡಿದ್ದರೆ, ಬಂಗಾಳ ಮತ್ತು ರಾಜಸ್ಥಾನದ ಕೆಲವು ಕಡೆಗಳಲ್ಲಿ 'ಸತಿ' ಬದುಕಿನ ಭಾಗವಾದ ಪದ್ಧತಿಯಾಗಿ ರೂಪುಗೊಂಡಿದೆ. ವಿಧವೆಯರಿಗೆ ಅಮಲು ಪದಾರ್ಥ ತಿನ್ನಿಸಿ ಚಿತೆಗೆ ಏರಿಸುವುದು, ಗಂಡಂದಿರ ಶವಗಳಿಗೆ ಅವರನ್ನು ಬಿಗಿದು ಕಟ್ಟುವುದು, ಚಿತೆಯಿಂದ ಏಳದಂತೆ ಅವರನ್ನು ಬಿದಿರುಕೋಲಿನಿಂದ ಒತ್ತಿ ಹಿಡಿಯುವುದು ಹೀಗೆ ಹಲವು ರೀತಿಯ ಹಿಂಸಾತ್ಮಕ ಪ್ರವೃತ್ತಿ ನಡೆಯತೊಡಗಿದವು. ಆಶೀಶ್ ನಂದಿಯವರು ಹೇಳುವಂತೆ :

"ಈ ಬಾರಿ ಈ ಪದ್ಧತಿಗೆ ಸಮಾಜದ ಬೇರೆ ಬೇರೆ ಮೂಲಗಳಿಂದ ಬೆಂಬಲ ಒದಗಿಬಂತು. ಉದಾಹರಣೆಗೆ, ಸಾಂಸ್ಕೃತಿಕವಾಗಿ ಈ ವಿಧಿಗೆ ಮೊದಲು ಕಾಳಿಪೂಜೆಯನ್ನು ನಡೆಸುವ ಹಾಗೂ ಈ ವಿಧಿಯಲ್ಲಿ ಶಾಕ್ತ ಆಚರಣೆಗಳನ್ನು ಸೇರಿಸಿಕೊಳ್ಳುವ ಪರಿಪಾಠ ಆರಂಭವಾಯಿತು. ಇನ್ನೊಂದು ಕಡೆಗೆ ರಾಜಕೀಯ ಸ್ತರದಲ್ಲಿ, ಆಗಿನ್ನೂ ಆರಂಭದ ಹಂತದಲ್ಲಿದ್ದ ಬ್ರಿಟಿಷ್ ವಸಾಹತುಶಾಹೀ ಆಡಳಿತವು ಇದನ್ನು ವಿರೋಧಿಸುವಷ್ಟು ಆತ್ಮ ವಿಶ್ವಾಸವನ್ನು ಇನ್ನೂ ಗಳಿಸಿರಲಿಲ್ಲ. ಹಾಗಾಗಿ ಆ ಆಡಳಿತದ ತಾಟಸ್ಥ್ಯವೇ ಈ ಆಚರಣೆಗೆ ಪರೋಕ್ಷ ಬೆಂಬಲವಾಗಿಬಿಟ್ಟಿತು. ಅರ್ಥಾತ್, ಸತಿಪದ್ಧತಿಯ ಸುಧಾರಣೆಯನ್ನು ಅರ್ಥಮಾಡಿ ಕೊಳ್ಳುವುದು ಅಂದರೆ, ಅದಕ್ಕೂ ಮೊದಲು ಒಂದು ನಿರ್ದಿಷ್ಟ ಪ್ರದೇಶ ಮತ್ತು ಕಾಲಾವಧಿಯಲ್ಲಿ ಅದು ಜನಪ್ರಿಯವಾಯಿತಲ್ಲ, ಆ ಹಿನ್ನೆಲೆಯ ಸಾಂಸ್ಥಿಕ ಮತ್ತು ಸಾಂಸ್ಕೃತಿಕ ಸಮೂಹ ಪ್ರೇರಣೆಗಳನ್ನು ಅರಿತು ಕೊಳ್ಳುವುದು ಕೂಡ." (ಉದ್ಧೃತ: ನಾಗರಾಜ್ ಡಿ. ಆರ್. (ಸಂ) : ೧೯೯೫ ;೪೭)

ಬಂಗಾಳದಲ್ಲಿನ ಪ್ರಚಲಿತವಿದ್ದ ಈ ಪದ್ಧತಿಗೆ ಕಾರಣಗಳು ಹಲವು.

೧) ಬಂಗಾಳದಲ್ಲಿ ರೂಢಿಯಲ್ಲಿದ್ದ ಆಸ್ತಿಹಕ್ಕಿನ 'ದಯಾಭಾಗ' ಪದ್ಧತಿಯ ಪ್ರಕಾರ ಅಲ್ಲಿಯ ಹೆಂಗಸರು ನ್ಯಾಯವಾದ ಆಸ್ತಿಯ ಹಕ್ಕನ್ನು ಪಡೆದವರಾಗಿದ್ದರು. ಹೆಂಡತಿ, ತಾಯಂತೆ, ಒಬ್ಬ ವಿಧವೆ ಕೂಡ ತನ್ನ ಆಸ್ತಿಯನ್ನು ಪಡೆದುಕೊಂಡು ಕುಟುಂಬದ ಪೂರ್ಣ ವ್ಯವಹಾರವನ್ನು ನಡೆಸುವುದು ಇಲ್ಲಿ ಸಾಧ್ಯವಿತ್ತು. ಆದ್ದರಿಂದ ಆಕೆಯನ್ನು ಆತ್ಮಹತ್ಯೆಗೆ ಪ್ರಚೋದಿಸುವುದರಿಂದ ಆಸ್ತಿ ಹಕ್ಕು ವಿಧವೆಗೆ ಹೋಗುವುದನ್ನು ತಪ್ಪಿಸಬಹುದಾಗಿತ್ತು.

೨) ವಸಾಹತುಶಾಹಿ ಸಂಸ್ಕೃತಿಗೆ ಉತ್ತರ ರೂಪದಲ್ಲಿ ಬದುಕುವ ಸಾಂಪ್ರದಾಯಿಕ ಕುಟುಂಬಗಳು ಪರಕೀಯ ಸಂಸ್ಕೃತಿಯೊಂದಿಗೆ ರಾಜಿ ಮಾಡಿಕೊಳ್ಳದೆ ವಿಚಲಿತಗೊಂಡಿದ್ದವು. ಇಂತಹ ಕುಟುಂಬಗಳಲ್ಲಿ ಕಟ್ಟುನಿಟ್ಟಾಗಿ ಅನುಷ್ಠಾನಗೊಂಡ ಸತಿ ಪದ್ಧತಿಯು ಅಂಥ ಕುಟುಂಬಗಳಿಗೆ ಧಾರ್ಮಿಕ ಶ್ರೇಷ್ಠತೆಯನ್ನೂ ಆ ಮೂಲಕ ಅಂತಸ್ತನ್ನೂ ಮರಳಿ ಸಂಪಾದಿಸುವ ಸಾಧನವಾಗಿತ್ತು. ಇದರಿಂದಾಗಿ ಸತಿ ಹೋಗುವುದಕ್ಕೆ ಒಮ್ಮೆ ಒಪ್ಪಿದ ಹೆಣ್ಣು ನಂತರದಲ್ಲಿ ಹಿಂಜರಿದರೆ ಕುಟುಂಬ ನಿರ್ದಯವಾಗಿ ಆಕೆಯನ್ನು ಚಿತೆಗೆ ತಳ್ಳುತ್ತಿತ್ತು.

೩) ವಿಧವೆಯರಿಗೆ ಆರ್ಥಿಕ ಸ್ವಾವಲಂಬನೆಗಾಗಿ ಪರ್ಯಾಯ ಮಾರ್ಗವೇ ಇರುತ್ತಿರಲಿಲ್ಲ. ಕುಟುಂಬಕ್ಕೆ ಅಧೀನವಾಗಿ ಹೊರೆಯಾಗಿ ಬದುಕು ನಿರ್ವಹಿಸುವುದು ಅನಿವಾರ್ಯವಾಗಿತ್ತು. ವಿಧವೆತನವೆ ಅಪಶಕುನವೆಂಬ ನಂಬಿಕೆಗಳು, ವೈಧವ್ಯದ ದುಃಸ್ಥಿತಿಯೇ ಸಾವಿನ ಭಯವನ್ನು ಮೀರುವಂತೆ ಮಾಡುತ್ತಿತ್ತು. ಅಲ್ಲದೆ ಆತ್ಮಾಹುತಿಗೆ ಸಿದ್ಧಗೊಳಿಸುತ್ತಿತ್ತು.

೪) ಸತಿಹೋಗುವ ಹೆಣ್ಣಿಗೆ ಸಿಗುವ ಅಪರಿಮಿತ ದೈವಿಕ ಮರ್ಯಾದೆಗಳು ಹಾಗೂ ಸತಿಹೋದ ಕುಟುಂಬಕ್ಕೆ ಸಲ್ಲುವ ಸಾಮಾಜಿಕ ಗೌರವಗಳಿಂದಾಗಿಯೂ ಕೂಡ ಸತಿ ಹೆಚ್ಚು ಹೆಚ್ಚು ಪ್ರಚಲಿತಗೊಂಡಿತ್ತು.

೫) ಬಹುಸಂಖ್ಯೆಯ ಬಂಗಾಳಿ ವೈದಿಕರು ಸತಿಗೆ ಧರ್ಮ ಸಮ್ಮತಿ ಇದೆಯೆಂದು ಪ್ರತಿಪಾದಿಸಿದ ಅಂಶವು ಕೂಡ ಇದಕ್ಕೆ ಕಾರಣವಾಯಿತು. ಪಶ್ಚಿಮದ ಪ್ರಭಾವಕ್ಕೆ ತೆರೆದುಕೊಂಡ ವೈದಿಕ ಸಂಸ್ಕೃತಿಯು ತಮ್ಮ ಧಾರ್ಮಿಕ

ಶುದ್ಧತೆಯನ್ನೂ ಸಂಪ್ರದಾಯ ನಿಷ್ಠೆಯನ್ನೂ ಬೇರೆಯವರಿಗೆ ಪ್ರದರ್ಶಿಸಿ ಸಮರ್ಥಿಸಿಕೊಳ್ಳಬೇಕು ಎನ್ನುವಂತಹ ಮಾನಸಿಕ ಒತ್ತಡ ನಿರ್ಮಾಣವಾಗಿತ್ತು. ಅಂತರ್ಯದಲ್ಲಿ ಆಚರಣೆಗಳು ಸಡಿಲವಾದಾಗ ಬಾಹ್ಯದಲ್ಲಾದರೂ ಅದನ್ನು ಅಭಿವ್ಯಕ್ತಗೊಳಿಸುವ ಪ್ರತಿಕ್ರಿಯೆ ಕಾಣಿಸಿಕೊಂಡಿತ್ತು. ಬ್ರಿಟಿಷ್ ಇಂಡಿಯಾದ ಮೊದಲ ಗವರ್ನರ್ ಜನರಲ್ ವಾರನ್ ಹೇಸ್ಟಿಂಗ್ಸ್‌ನು ೧೮೨೧ ರಲ್ಲೇ ಸತಿಯ ಪದ್ಧತಿಗೆ ಕಾರಣವನ್ನು :

"ಹಿಂದೂಗಳ ಮನಸ್ಥಿತಿಯಲ್ಲಿ ಹುಟ್ಟಿಕೊಂಡ ಒಡಕು ಮತ್ತು ಅದರಿಂದಾಗಿ ಉದ್ಭವಿಸಿದ ಮತಾಂಧತೆ" [ನಾಗರಾಜ್ ಡಿ. ಆರ್. : ೧೯೯೫; ೪೭] ಎಂದು ಗುರುತಿಸಿದ್ದಾನೆ.

(೬) ಗಂಡನ ಸಾವಿಗೆ ಹೆಂಡತಿಯ ವ್ರತಾಚರಣೆಗಳ ಭ್ರಷ್ಟತೆಯೇ ಕಾರಣ ಎನ್ನುವ ಸಿದ್ಧಾಂತವಿತ್ತು. ಆದ್ದರಿಂದ ಸತಿಯೆನ್ನುವುದು ಒತ್ತಾಯದ ಪ್ರಾಯಶ್ಚಿತವೂ ಆಗಿತ್ತು. ಮೇಲಿನ ಎಲ್ಲ ಕಾರಣಗಳನ್ನು ಒಳಗೊಂಡ ಮನೋವೈಜ್ಞಾನಿಕ ಪರಿಸರವೇ ಸತಿಪದ್ಧತಿಯ ಪ್ರಚಲಿತತೆಗೆ ಮೂಲವಾಗಿದೆ. ದಾಂಪತ್ಯದ ಅಸ್ತಿತ್ವವೊಂದೇ ಇದ್ದ ಹಿಂದೂ ಸ್ತ್ರೀಯರಿಗೆ ಆಧುನಿಕ ರಾಷ್ಟ್ರೀಯವಾದಿ ಪುರುಷ ವರ್ಗ ಸ್ತ್ರೀಯರ ಸುಧಾರಣೆಗಳ ಮೂಲಕ ಸ್ತ್ರೀಯರಿಗೆ ಹೊಸ ಪ್ರಾಮುಖ್ಯವನ್ನು ಘನತೆಯನ್ನು ಸಾಧಿಸಿಕೊಡುವಲ್ಲಿ ಶ್ರಮಿಸಿತು. ರಾಜಾರಾಮ ಮೋಹನ ರಾಯ್ ಅವರಂತಹ ಹಲವು ರಾಷ್ಟ್ರೀಯವಾದಿ ಸುಧಾರಕರ ಹೋರಾಟದಿಂದಾಗಿ ಬ್ರಿಟಿಷ್ ಇಂಡಿಯಾದಲ್ಲಿ ೧೮೨೯ರಲ್ಲಿ ಸತಿಪದ್ಧತಿ ರದ್ಧತಿಯ ಕಾನೂನು ಜಾರಿಗೆ ಬಂತು. ಅಲ್ಲದೆ ೧೮೫೬ರಲ್ಲಿ ವಿಧವಾ ಪುನರ್ವಿವಾಹ ಕಾಯಿದೆ ಚಾಲ್ತಿಗೆ ಬಂದಿತು. ಪಾಶ್ಚಿಮಾತ್ಯ ಶಿಕ್ಷಣದ ಆಲೋಚನಾ ಮಾದರಿಗೆ, ಸ್ತ್ರೀ ಪುರುಷ ಸಂಬಂಧಗಳಿಗೆ, ದಾಂಪತ್ಯದ ಬದುಕಿಗೆ ಮರು ವ್ಯಾಖ್ಯಾನ ನೀಡುವುದು ಸಾಧ್ಯವಾಯಿತು. ಬಾಲ್ಯವಿವಾಹದಿಂದ ಮುಕ್ತಿ, ಸತಿಯಂತಹ ಅನಿಷ್ಠದಿಂದ ಬಿಡುಗಡೆ, ವಿಧವಾವಿವಾಹ . ಇಂತಹ ಹೊಸ ಸಾಮಾಜಿಕ ಸಂರಚನೆಗಳು ಬ್ರಿಟಿಷ್ ಇಂಡಿಯಾದಲ್ಲಿ ಹೆಣ್ತನದ ಕಲ್ಪನೆಯ ಹೊಸ ವ್ಯಾಖ್ಯೆಯೊಂದಕ್ಕೆ ಅಡಿಗಲ್ಲಾದವು. ವಸಾಹತುಶಾಹಿ ಬದುಕಿನ ನಿರ್ವಹಣೆ ಹಾಗೂ ಸಂಪ್ರದಾಯ ಬದ್ಧ ಅನುಭವಗಳು ಆ ಕಾಲದ ಸ್ತ್ರೀಯರಲ್ಲಿ ಹೊಂದಾಣಿಕೆ ಮತ್ತು ಸಂಘರ್ಷದ ಮನೋಭಾವವನ್ನು ಸೃಷ್ಟಿಸಿದ್ದವು ಎಂಬುದು ಆರಂಭದ ಮಹಿಳಾ ಬರಹಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತವೆ. ಶಿಕ್ಷಿತ ಮಹಿಳಾ ಮನೋಭೂಮಿಕೆಗಳಲ್ಲಿ ದೇಶೀಯ ಹಾಗೂ ವಸಾಹತುಶಾಹಿ ಅನುಭವಗಳ ಸಮರ್ಥನೆ ಹಾಗೂ ಅಸಮರ್ಥನೆಗಳು ರೂಪುಗೊಂಡವು. ಉದಾರವಾದಿ ರಾಷ್ಟ್ರೀಯ ಕಾಲಘಟ್ಟದಲ್ಲಿ ಸ್ತ್ರೀಯರ ಅಧಿಕಾರ, ವೈಯಕ್ತಿಕತೆ, ಸಾಮರ್ಥ್ಯ ಮತ್ತು ಹಕ್ಕುಗಳ ಬಗ್ಗೆ ಅರಿವು ಬೀಜ ರೂಪದಲ್ಲಿ ಕಾಣಿಸಿಕೊಂಡಿದೆ. ದೇಶೀ ಸಂಸ್ಕೃತಿಯ ಸಾಂಪ್ರದಾಯಿಕ ಸ್ತ್ರೀ ಪುರುಷ ಕಲ್ಪನೆಗಳನ್ನು ಬುಡಮೇಲುಗೊಳಿಸುವ ಪ್ರಕ್ರಿಯೆಯ ಒಳವ್ಯೂಹದ ರಚನೆಯೊಂದು ಉದಾರವಾದಿ ಸಾಂಸ್ಕೃತಿಕ ಸನ್ನಿವೇಶದಲ್ಲಿ ಅತಿ ಸೂಕ್ಷ್ಮವಾಗಿ ಪ್ರಕಟಗೊಂಡಿತ್ತು.

ಈವರೆಗಿನ ಚರ್ಚಿತ ಅಂಶಗಳಿಂದ ಉದಾರವಾದಿ ಸಾಂಸ್ಕೃತಿಕ ನೆಲೆಯು ಸ್ತ್ರೀತ್ವದ ಸ್ಥಿತಿ ಸಾಧ್ಯತೆಗಳ ಬಗ್ಗೆ ಮೂಲದ ಅರಿವನ್ನು ಮೂಡಿಸಿತ್ತು ಎಂಬುದು ವ್ಯಕ್ತವಾಗುತ್ತದೆ. ಸ್ತ್ರೀಯರ ಅಧಿಕಾರ, ಕರ್ತವ್ಯ, ಹಕ್ಕು, ಸಾಮರ್ಥ್ಯ ಹಾಗೂ ವೈಯಕ್ತಿಕತೆಯ ಬುನಾದಿ ಅಂಶವೊಂದು ಈ ಕಾಲಘಟ್ಟದಲ್ಲಿ ಪ್ರಕಟಗೊಂಡಿದೆ. ಸ್ತ್ರೀಯರಲ್ಲಿನ ಉದ್ದೇಶ ಬದ್ಧತೆ, ಅಧಿಕಾರ ಶಕ್ತಿ, ಆತ್ಮ ವಿಶ್ವಾಸ ಹಾಗೂ ಶಿಕ್ಷಿತ ವ್ಯಕ್ತಿತ್ವವನ್ನು 'ಉದಾರವಾದಿ ರಾಷ್ಟ್ರೀಯ ಪುರುಷ ವರ್ಗ' ಮನ್ನಿಸಿದೆ, ಗೌರವಿಸಿದೆ ಎಂಬುದು ಕೂಡ ಮಹತ್ವದ

ಅಂಶವಾಗಿದೆ. ಭಾರತೀಯ ಸ್ತ್ರೀವಾದದ ಕೇಂದ್ರ ಬಿಂದುವೊಂದನ್ನು ಕಂಡುಕೊಂಡದ್ದು ಮೇಲೆ ಗುರುತಿಸಿದ ಈ 'ಉದಾರವಾದಿ ರಾಷ್ಟ್ರೀಯ ಪುರುಷ ವರ್ಗ'ವೇ ಆಗಿದೆ. ಪರಿಣಾಮವಾಗಿ ಪಾಶ್ಚಿಮಾತ್ಯ ಸ್ತ್ರೀವಾದಿ ಮೀಮಾಂಸೆಗಿಂತ ಭಿನ್ನ ರೂಪದಲ್ಲಿ ಭಾರತೀಯ ಸ್ತ್ರೀವಾದಿ ಮೀಮಾಂಸೆಯನ್ನು ರಚಿಸುವುದು ಅನಿವಾರ್ಯವಾಗುತ್ತದೆ. ಬ್ರಿಟಿಷ್ ಇಂಡಿಯಾದಲ್ಲಿ ಸ್ತ್ರೀವಾದಿ ಮೂಲ ಪಠ್ಯವೊಂದು ರಾಷ್ಟ್ರೀಯವಾದಿ ಪುರುಷರಿಂದಲೇ ರೂಪಿತಗೊಂಡಿದೆ ಎಂಬುದನ್ನು ಕಂಡುಕೊಳ್ಳಬೇಕಾಗುತ್ತದೆ.

**೩.೨ ಮೊದಲ ಕಟ್ಟಿನ ಕಾದಂಬರಿಗಳು.**

ಸಂಪ್ರದಾಯನಿಷ್ಠ ಪುರಾತನ ಸ್ತ್ರೀ ಪ್ರತಿಮೆ - ಪ್ರತೀಕಗಳ ಪಾತಳಿಗಳಿಂದ ಮುಕ್ತರಾಗಿ ಉದಾರವಾದಿ ಸಾಂಸ್ಕೃತಿಕ ಸನ್ನಿವೇಶದಲ್ಲಿ ನೂತನ ಸ್ತ್ರೀ ಪ್ರತಿಮೆಗಳನ್ನು ಪುನರ್‌ರಚಿಸಲಾಗಿದೆ. ಇಂತಹ ಮನೋವೈಜ್ಞಾನಿಕ - ಸಾಂಸ್ಕೃತಿಕ ಸನ್ನಿವೇಶದ ಪರಿಧಿಯ ನೆಲೆಯಿಂದಲೇ ಆರಂಭದ ಆಧುನಿಕ ಕಾಲಘಟ್ಟದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ನೆಲೆಗಳನ್ನು ನಿರ್ವಚಿಸಬೇಕಾಗುತ್ತದೆ. ಕನ್ನಡದ ಸಂದರ್ಭದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವು ಕೂಡ ಮಾಡಿದ ಸಾಹಿತ್ಯದ ಸಾಂಸ್ಕೃತಿಕ ವಾತಾವರಣವು ಪೂರ್ವದ ಸಾಹಿತ್ಯ ಸನ್ನಿವೇಶಕ್ಕಿಂತ ತೀರಾ ಭಿನ್ನವಾಗಿದೆ ಎಂಬುದು ಸ್ಪಷ್ಟ. ಈ ಭಿನ್ನತೆಗಳನ್ನು ಅಧ್ಯಯನ ನಡೆಸಿದ ಮೇರೆಗೆ ನಂಜನಗೂಡು ತಿರುಮಲಾಂಬ ಮತ್ತು ಆರ್ ಕಲ್ಯಾಣಮ್ಮನವರ ಕೃತಿಗಳನ್ನು ಮೊದಲ ಕಟ್ಟು ಎಂಬುದಾಗಿ ಪರಿಭಾವಿಸಿ, ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯನ್ನು ವಿವರಿಸಬೇಕಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಇವು ಆಧುನಿಕ ಕನ್ನಡ ಸಾಹಿತ್ಯದ ಆರಂಭದ ಬರಹಗಾರ ಮಹಿಳೆಯರ ಕೃತಿಗಳು ಎಂಬುದೇ ಆಗಿದೆ. ಕನ್ನಡದ ಸಂದರ್ಭದಲ್ಲಿ ಆಧುನಿಕ ಮಹಿಳಾ ಸಾಹಿತ್ಯವು ತಿರುಮಲಾಂಬ, ಕಲ್ಯಾಣಮ್ಮ ಇವರಿಂದ ತೊಡಗಿ 'ಕಟ್ಟುವ' ಪ್ರಕ್ರಿಯೆ ನಿರಂತರವಾಗಿ ಮುಂದುವರಿದಿದೆ. ಪುರುಷರಿಗಿಂತ ಭಿನ್ನವಾದ ಸಂವೇದನೆಯ ಸಾಂಸ್ಕೃತಿಕ ಅನಾವರಣವನ್ನು ಮಹಿಳೆಯರ ಕಾದಂಬರಿಗಳ ಜಗತ್ತು ಬಿಂಬಿಸುತ್ತದೆ. ಆದುದರಿಂದ ಇದನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಚರ್ಚಿಸಬೇಕಾಗುತ್ತದೆ. ಕಾಲಘಟ್ಟಕ್ಕೆ ಅನುಗುಣವಾಗಿ; ಕನ್ನಡ ಕಾದಂಬರಿಕಾರ್ತಿಯರ ಕೃತಿಗಳನ್ನು ಪ್ರತ್ಯೇಕವಾಗಿ ಅಧ್ಯಯನ ನಡೆಸಬೇಕಾಗುತ್ತದೆ. ಈ ಪ್ರಮುಖ ಕಾರಣದಿಂದ ಆರಂಭದ ಲೇಖಕಿಯರ ಕೃತಿಗಳನ್ನು 'ಮೊದಲಕಟ್ಟು' ಎಂಬುದಾಗಿ ಗಮನಿಸಲಾಗಿದೆ. ಅಲ್ಲದೆ, ವಿವಾಹ ಮತ್ತು ಕುಟುಂಬದ ಸಾಂಸ್ಥಿಕ ರಚನೆಯನ್ನು ಅಭ್ಯಾಸ ಮಾಡುವಾಗಲೂ ಕೂಡ 'ಕಟ್ಟುವ' ಕ್ರಿಯೆಗೆ ವಿಶೇಷವಾದ ಅರ್ಥವ್ಯಾಪ್ತಿಯನ್ನು ಕಂಡುಕೊಳ್ಳಬಹುದು. ಗಂಡು ಹೆಣ್ಣಿನ ಸಂಬಂಧವನ್ನು ವಿವಾಹ ಎಂಬ ಸಂಸ್ಥೆ ಸಾಂಸ್ಥಿಕವಾಗಿ ಕಟ್ಟುತ್ತದೆ. ಈ ಅರ್ಥದಲ್ಲಿ ಕುಟುಂಬ ಕೂಡ ಒಂದು ಕಟ್ಟಲಾದ (Constract) ರಚನೆಯಾಗಿದೆ. ಮನೆ - ಸಂಸಾರ - ಮಕ್ಕಳು ಎನ್ನುವ ಈ ಸಾಮಾಜಿಕ ನಿರ್ಮಾಣವನ್ನು ಮೊದಲ ಘಟ್ಟದ ಮಹಿಳಾ ಕಾದಂಬರಿಗಳು ಹೇಗೆ ನಿರೂಪಿಸುತ್ತವೆ ಎನ್ನುವ ಫಲಿತಕ್ಕಾಗಿ ಕೂಡ 'ಮೊದಲ ಕಟ್ಟು' ಎನ್ನುವ ಶೀರ್ಷಿಕೆಯನ್ನು ಕಂಡುಕೊಳ್ಳಲಾಗಿದೆ.

ಮೊದಲ ಕಟ್ಟಿನ ಆವರಣದಲ್ಲಿ ನಂಜನಗೂಡು ತಿರುಮಲಾಂಬ ಅವರ ಆರು ಕಾದಂಬರಿಗಳಾದ **ನಭಾ, ವಿರಾಗಿಣಿ, ಮಣಿಮಾಲಾ, ಗಿರಿಜಾಬಾಯಿ, ವಿದ್ಯುಲ್ಲತೆ, ಮಾತೃನಂದಿನಿ** ಈ

ಪಠ್ಯಗಳು, ಹಾಗೂ ಆರ್ ಕಲ್ಯಾಣಮ್ಮನವರ ಎರಡು ಕಾದಂಬರಿಗಳಾದ ನಿರ್ಭಾಗ್ಯವನಿತೆ, ಪ್ರಿಯಂವದೆ ಪಠ್ಯಗಳನ್ನು ವಿವೇಚನೆಗೆ ಬಳಸಿಕೊಳ್ಳಲಾಗಿದೆ. *೧೦

## ೩.೨.೧ ಮೊದಲ ಕಟ್ಟಿನ ಕಾದಂಬರಿಗಳು :ವಿವಾಹದ ಸ್ವರೂಪ.

ಬದಲಾವಣೆಯ ನಿರಂತರ ಪ್ರಕ್ರಿಯೆಯನ್ನೇ ಮೂಲಭೂತ ಅಂಶವಾಗಿ ಹೊಂದಿರುವ ಇಂದಿನ ಸಮಾಜಗಳಲ್ಲಿ ಪೂರ್ವದ ವಿವಾಹದ ಕುರಿತ ನೀತಿ ನಿಯಮಗಳಿಗೂ ಕಾಲಮಾನಕ್ಕೆ ಅನುಗುಣವಾಗಿರುವ ಆಚರಣೆಗಳಿಗೂ ಸಾಕಷ್ಟು ಅಂತರವಿದೆ. ವಿವಾಹಕ್ಕೆ ಸಂಬಂಧಿಸಿದ ಎಲ್ಲಾ ವಿಚಾರಗಳು, ಪ್ರಶ್ನೆಗಳು ಬದಲಾಗುತ್ತಿರುವ ವರ್ತಮಾನದಲ್ಲಿ ಸದಾ ಸಂವಾದಗಳನ್ನು ನಡೆಸುವಂತೆ ಒತ್ತಾಯಿಸುತ್ತವೆ. ಅಲ್ಲದೆ ವಿವಾಹದ ಕುರಿತ ಎಲ್ಲಾ ತೀರ್ಮಾನಗಳಿಂದ ಗಂಡು ಹೆಣ್ಣಿನ ಸಂಬಂಧಗಳ ಬಗ್ಗೆ ಎರಡು ಮೂಲಭೂತವಾದ ದೃಷ್ಟಿಕೋನಗಳಿಂದ ನೋಡುವಂತೆ ಮಾಡುತ್ತದೆ.

ಒಂದು -ಗಂಡಸರು ಮತ್ತು ಹೆಂಗಸರು ಎಂಬ ಸಾಮಾಜಿಕ ಘಟಕಗಳು.

ಎರಡು- ಗಂಡು ಮತ್ತು ಹೆಣ್ಣುಗಳೆಂಬ ನೈಸರ್ಗಿಕ ಭಿನ್ನತೆ.

ವ್ಯಕ್ತಿಯ ಲೈಂಗಿಕ ಸಂಬಂಧಗಳೆಲ್ಲ ಮೊದಲಿನಿಂದಲೂ ಸಮಾಜದಿಂದಲೇ ನಿರ್ಧರಿತಗೊಂಡಿವೆ. ಹೀಗಾಗಿ ಅವುಗಳು ಏಕಕಾಲಕ್ಕೆ 'ನೈಸರ್ಗಿಕ ಲೈಂಗಿಕ ಸಂಬಂಧಗಳೂ' ಮತ್ತು 'ಸಾಮಾಜಿಕ ಸಂಬಂಧಗಳೂ' ಆಗಿರುವುದು ಸಾಧ್ಯವಿಲ್ಲ. ಪ್ರಕೃತಿ ಮತ್ತು ಮನುಷ್ಯರಿಬ್ಬರೂ ನಿರಂತರವಾಗಿ ಬೆಳೆಯುತ್ತಾ, ಬಂದ ಪರಿಣಾಮದಿಂದಾಗಿ ಅವರಿಬ್ಬರಿಗೂ 'ಚರಿತ್ರೆ' (History) ಇದೆ. ಆದುದರಿಂದ ಅವುಗಳನ್ನು ಚಾರಿತ್ರಿಕವಾಗಿಯೇ ಗಮನಿಸಬೇಕಾಗುತ್ತದೆ. ಇದರ ಅರ್ಥ ಗಂಡು - ಹೆಣ್ಣಿನ ಸಂಬಂಧಗಳ ಸುತ್ತ ಹಬ್ಬಿಕೊಂಡ 'ನೈತಿಕ ಮೌಲ್ಯಗಳು' ದೇವರಿಂದಾಗಲೀ, ಪ್ರಕೃತಿಯಿಂದಾಗಲೀ ನಿರ್ಧರಿತವಾದವುಗಳಲ್ಲ. ಅವು ಎಲ್ಲ ಕಾಲಗಳಲ್ಲೂ ಒಂದೇ ರೀತಿಯಾಗಿ ಇರಲಿಲ್ಲ. ವಿವಾಹದ 'ನೈತಿಕ ಮೌಲ್ಯ'ಗಳೆಂದು ಪರಿಗಣಿತಗೊಂಡ ಅಂಶಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಪರಿಷ್ಕಾರಗೊಳ್ಳುತ್ತಾ ಬಂದವು. ಈ ಮೌಲ್ಯಗಳು ಎಲ್ಲಾ ಕಾಲದಲ್ಲೂ ಎಲ್ಲಾ ಸಮಾಜಗಳಲ್ಲಿಯೂ ಒಂದೇ ಆಗಿರಲಿಲ್ಲ ಎನ್ನುವುದನ್ನೂ, ಒಂದು ಸಮಾಜದಲ್ಲಿ ಕೂಡ ಎಲ್ಲಾ ಕಾಲಗಳಲ್ಲೂ ಒಂದೇ ರೀತಿಯಾಗಿರಲಿಲ್ಲ ಎನ್ನುವುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಮತ್ತು ಈ ನಿರ್ಣಯಗಳಿಂದಲೇ ಮೊದಲಕಟ್ಟಿನ ವಿವಾಹ ಸ್ವರೂಪದ ಗ್ರಹೀತಗಳನ್ನು ಚರ್ಚಿಸಬೇಕಾಗುತ್ತದೆ.

ಉದಾರವಾದಿ ಸಾಂಸ್ಕೃತಿಕ ಸನ್ನಿವೇಶವು ವಿವಾಹ ಮತ್ತು ಕುಟುಂಬದ ಕುರಿತು ಕೆಲವು ಪ್ರಾಥಮಿಕ ಪ್ರಶ್ನೆಗಳನ್ನು ಗಂಭೀರ ಸ್ವರೂಪದಿಂದ ಚರ್ಚಿಸುವಂತೆ ಒತ್ತಡವನ್ನು ನಿರ್ಮಾಣ ಮಾಡುತ್ತದೆ. ವಿವಾಹದ ಆಚರಣೆಯ ಸ್ವರೂಪ, ಬಾಲ್ಯವಿವಾಹ, ವರದಕ್ಷಿಣೆ, ವೈಧವ್ಯದ ಕಟ್ಟುನಿಟ್ಟಾದ ಜೀವನಕ್ರಮದ ಕುರಿತು ಉದಾರವಾದಿ ಸಾಂಸ್ಕೃತಿಕ ಸಂದರ್ಭವು ಜನಸಾಮಾನ್ಯರಲ್ಲಿ ಅರಿವನ್ನು ಮೂಡಿಸಿದೆ. ಆರಂಭದ ಕನ್ನಡ ಕಾದಂಬರಿಗಳೆಲ್ಲವೂ ಈ ವಿಚಾರಗಳ ಕುರಿತು ಸಂವಾದ ನಡೆಸುತ್ತವೆ. ಸಿ.ಎನ್. ರಾಮಚಂದ್ರನ್ ಅವರು ಹೇಳುವಂತೆ;

" ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿ 'ಇಂದಿರಾ ಬಾಯಿ' (೧೮೯೯)ಯ ಕರ್ತೃ ಗುಲವಾಡಿ ವೆಂಕಟರಾವ್ ಮತ್ತು ಬೋಳಾರ ಬಾಬುರಾವ್ ಅವರ 'ವಾಗ್ದೇವಿ' (೧೯೦೫) , ಎಂ.ಎಸ್. ಪುಟ್ಟಣ್ಣ ಅವರ 'ಮಾಡಿದ್ದುಣ್ಣೋ ಮಹರಾಯ' (೧೯೧೩) ಈ ಕಾದಂಬರಿಗಳ ಮೂಲ ಆಶಯವೇ ಸಮಾಜ ಸುಧಾರಣೆ. ನೀತಿಬೋಧನಾ ಕಥನ ವಿನ್ಯಾಸ ಈ ಕಾದಂಬರಿಗಳ ಮೂಲ ಬಂಧ." (ವಿವೇಕ ರೈ ಬಿ.ಎ. (ಸಂ) : ೧೯೮೭; ೯೧)

**ಬಾಲ್ಯವಿವಾಹ :**

ಬಾಲ್ಯವಿವಾಹದ ಪರ - ವಿರುದ್ಧದ ಚರ್ಚೆಗಳನ್ನು ವರದಕ್ಷಿಣೆಯ ಕುರಿತಾದ ವಿಚಾರಗಳನ್ನು ತಿರುಮಲಾಂಬ ಮತ್ತು ಆರ್. ಕಲ್ಯಾಣಮ್ಮನವರ ಕಾದಂಬರಿಗಳು ಸ್ಪಷ್ಟವಾಗಿ ಚರ್ಚಿಸುತ್ತವೆ. ನಿರ್ದಿಷ್ಟ ಸಾಮಾಜಿಕ ಸಂದರ್ಭದಲ್ಲಿ 'ವಿವಾಹ'ದಂತಹ ಸಂಸ್ಥೆ ಎದುರಿಸಿದ ಎಲ್ಲ ವೈರುಧ್ಯಗಳ ವಿಫುಲವಾದ ಚರ್ಚೆ ಈ ಇಬ್ಬರು ಲೇಖಕಿಯರ ಕಾದಂಬರಿಗಳಲ್ಲಿ ಪ್ರಧಾನವಾಹಿನಿಯಾಗಿ ಕಾಣಸಿಗುತ್ತವೆ. ಹಿಂದೂ ಸಮಾಜದಲ್ಲಿ ಬಾಲ್ಯ ವಿವಾಹವೆಂಬುದು ಜೀವನದ ಭಾಗವಾಗಿ ಪರಿಣಮಿಸಿದ್ದುದು ವಾಸ್ತವ. ಇಂತಹ ಬೀಜರೂಪದಿಂದಲೇ ಸದೃಢವಾಗಿದ್ದ ಜೀವನಾದರ್ಶಗಳನ್ನು ಬದಲಾಯಿಸುವುದು, ಮಾರ್ಪಾಡುಗೊಳಿಸುವುದು ಕಷ್ಟಸಾಧ್ಯ. ಈ ಸಂಘರ್ಷದ ಸ್ವರೂಪವು ಲೇಖಕಿಯರ ಕಾದಂಬರಿಗಳಲ್ಲಿ ಪ್ರಕಟಗೊಳ್ಳುತ್ತವೆ. ಇವರ ಕಾದಂಬರಿಗಳ ನಾಯಕಿಯರಲ್ಲಿ ಹೆಚ್ಚಿನವರು ಬಾಲ್ಯದಲ್ಲೇ ವಿವಾಹಿತರಾದವರು. ಸುಮಾರು ಎಂಟು ಹತ್ತು ವರ್ಷಕ್ಕೆ ಅವರೆಲ್ಲರ ವಿವಾಹ ಜರುಗುತ್ತದೆ. ತಿರುಮಲಾಂಬ ಅವರ ಕಾದಂಬರಿಗಳ ನಾಯಕಿಯರಾದ ನಭಾ, ಗಿರಿಜಾಬಾಯಿ, ಮಣಿಮಾಲಾ ಇವರುಗಳ ವಿವಾಹ ಕಾದಂಬರಿ ತೆರೆದುಕೊಳ್ಳುವ ಪೂರ್ವದಲ್ಲಿಯೇ ಘಟಿಸಿದೆ.

ತಿರುಮಲಾಂಬ ಅವರ **ಮಾತೃನಂದಿನಿಯು** 'ಬಾಲ್ಯವಿವಾಹ'ದ ಕುರಿತು ಜಿಜ್ಞಾಸೆ ನಡೆಸುವ ಕೃತಿಗಳಲ್ಲಿ ಮುಖ್ಯವಾಗುತ್ತದೆ. ನಾಗೇಶರಾಯನ ಅತಿಥಿ ವಿಶ್ವನಾಥರಾಯನಿಗೆ ನಾಗೇಶರಾಯನ ಮಗಳಿಗೆ ಇನ್ನೂ ವಿವಾಹವಾಗದೇ ಉಳಿದಿರುವುದು ಬಹು ದೊಡ್ಡ ಲೋಪವಾಗಿ ಕಾಣುತ್ತದೆ. ಆದರ ಕುರಿತು ನಾಗೇಶರಾಯನಲ್ಲಿ ಪ್ರಸ್ತಾಪಿಸುತ್ತಾನೆ. ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಮೊದಲು ಮಹತ್ವ, ನಂತರದಲ್ಲಿ ಅವರ ವಿವಾಹ ಎಂದು ದೃಢ ನಿರ್ಧಾರದವನಾದ ನಾಗೇಶರಾಯ ವಿಶ್ವನಾಥರಾಯನಿಗೆ ಸೂಕ್ತ ಉತ್ತರವನ್ನೇ ನೀಡುತ್ತಾನೆ. ಇನ್ನೂ ಎರಡು ವರ್ಷಕ್ಕೆ ಮಗಳಿಗೆ ಮದುವೆ ಮಾಡುವುದಿಲ್ಲ ಎಂದು ನಾಗೇಶರಾಯನ ತೀರ್ಮಾನವಾಗಿದೆ. ಈಗಲೇ ಹನ್ನೆರಡು ವರ್ಷ ಸಾಲದಕ್ಕೆ ಮತ್ತೂ ಎರಡು ಎಂದಾದರೆ ಹದಿನಾಲ್ಕರ ಮೇಲೆ ಎಂದಾದರೆ, ಇದು ವಿಶ್ವನಾಥರಾಯನನ್ನು ಕೆರಳಿಸುತ್ತದೆ. ಬಾಲ್ಯವಿವಾಹದ ಸಾಧಕದ ಕುರಿತು ಪ್ರೌಢವಿವಾಹದ ಬಾಧಕದ ಕುರಿತು ನಾಗೇಶರಾಯನಿಗೆ ತಿಳುವಳಿಕೆ ಹೇಳುತ್ತಾನೆ.

"ವಿಶ್ವನಾಥ :- ಹಾಗೋ ? ಬಾಲ್ಯದಲ್ಲಿ ಮದುವೆ ಮಾಡುವುದರಿಂದ ಹೆಣ್ಣುಮಕ್ಕಳು, ನಮ್ಮ ಅಧೀನದಲ್ಲಿರುತ್ತಾರೆ. ಅಲ್ಲದೆ ಅವರಿಗೆ ಪೂರ್ವಾಚಾರದಲ್ಲಿ ನಂಬಿಕೆಯೂ, ಹಿರಿಯರಲ್ಲಿ ಗುರುಜನರಲ್ಲಿ ಮತ್ತು ದೇವರಲ್ಲಿ ಭಯ- ಭಕ್ತಿ- ಗೌರವಗಳೂ ನೆಲೆಗೊಂಡು, ಮನೆಯವರಿಗೆ ಅನುಕೂಲೆಯರಾಗಿರುವರು. ಬುದ್ಧಿ ಬಂದ ಬಳಿಕ ಮಾಡಬೇಕೆಂದರೆ, ಅವರು ನಮ್ಮ ಇಚ್ಛೆಯಂತೆ ನಡೆಯಲೊಲ್ಲರು. ಸ್ವಾತಂತ್ರ್ಯದಿಂದ ತಮ್ಮ ಇಚ್ಛಿತ ಪುರುಷನನ್ನೇ

ಹುಡುಕಿಕೊಂಡು ದಾಂದಳೆಯನ್ನುಂಟು ಮಾಡುವರು. ಅಂತವರು ನಮ್ಮ ಕಟ್ಟಳೆಗಳಿಗೆ ಒಳಪಡುವರೆಂಬುದು ಕನಸಿನಲ್ಲಿಯಾದರೂ ನಂಬಲಾಗದ ವಿಚಾರ! ಇದಕ್ಕೆಂದೇ ನಮ್ಮವರು, ಬಾಲ್ಯವಿವಾಹವನ್ನೇ ರೂಢಿ ಯಾಗಿಟ್ಟು, ಅದರಂತೆ ನಡೆಸುತ್ತ ಬಂದಿರುವರು. ಹೇಗೋ ನಮ್ಮ ಹಿರಿಯರು ನಡೆದಂತೆ ನಡೆಯ ಬೇಕಲ್ಲದೆ ಬೇರೆ ದಾರಿಗೆ ಹೋಗಬಾರದು."(ನಂಜನಗೂಡು ತಿರುಮಲಾಂಬ :೧೯೧೬; ೨೮.)

ವಿಶ್ವನಾಥರಾಯ ಹೊಂದಿರುವ ಈ ತೀರ್ಮಾನ ಬದಲಾವಣೆಯನ್ನು ಒಪ್ಪಿಕೊಳ್ಳದ ಹಳೆ ತಲೆಮಾರಿನ ತರ್ಕವಾಗಿದೆ. ಆ ಕಾಲದಲ್ಲಿ ತಂದೆ ತಾಯಿಗಳು ಕುರುಡರಾಗಿದ್ದರೆ ಮಕ್ಕಳು ಕಣ್ಣು ಮುಚ್ಚಿಕೊಂಡು ಕುರುಡರಾಗಿರಬೇಕು ಎಂದು ಬದುಕಿದವರೆ ಹೆಚ್ಚೆಂದು ಅನಿಸುತ್ತದೆ. ಈ ಮನೋಭಾವ ಆ ಯುಗಧರ್ಮಕ್ಕೆ ಸಹಜವೇ ಆಗಿದೆ. ಧರ್ಮಾಚಾರ, ಕುಲಾಚಾರವನ್ನು ಮೀರುವುದೆಂದರೆ, ಅವರಿಗೆ ಆತ್ಮಹತ್ಯೆ ಮಾಡಿಕೊಂಡು ಬಿಟ್ಟಂತೆ. ಆದರೆ, ನಾಗೇಶರಾಯನ ನಿರ್ಧಾರಗಳಲ್ಲಿ ಸಮಾಜವು ಬದಲಾಗಬೇಕು, ಜನತೆ ನಾಗರಿಕರು, ಸುಸಂಸ್ಕೃತರಾಗಬೇಕೆಂಬ ತೀವ್ರ ತುಡಿತ ಪ್ರಕಟಗೊಳ್ಳುತ್ತದೆ. ಇದು ಆ ಕಾಲದ ಸುಧಾರಕರ ಮೂಲ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಬಾಲ್ಯವಿವಾಹದ ಕುರಿತ ಆತನ ಅಭಿಪ್ರಾಯ ಅತ್ಯಂತ ಆರೋಗ್ಯಪೂರ್ಣವಾದುದು.

"ನಾಗೇಶ - ನನ್ನ ಮತವಿಷ್ಟೇ ! ತಿಳಿವಿಲ್ಲದ ಎಳೆಯರನ್ನು ಬಲಾತ್ಕರಿಸಿ ಸಿಕ್ಕಿದವರಿಗೆ ಕೊಡುವುದು ತಪ್ಪು. ವರವಿಕ್ರಯವೆಂಬ ಸಾಂಕ್ರಾಮಿಕ ರೋಗವು ಹುಟ್ಟಡಗಿ ಹೋಗುವವರೆಗೂ, ನಾನು ನನ್ನ ಮಿತ್ರಪರಿವಾರದವರೂ ಕನ್ಯೆಯರನ್ನು ವೃಥಾ ಕುಟುಕರ ಬಾಯಲ್ಲಿ ಹಾಕಲಾರೆವು. ಹೆಂಡತಿಯರ ತವರ್ಮನೆಯಿಂದ ದೊರೆಕೊಳ್ಳುವ ದ್ರವ್ಯದಿಂದಲೇ ಜೀವಿಸಬೇಕೆಂಬ ಹೆಂಗಂಡುಗಳಿಗೆ ನಮ್ಮ ಹೆಣ್ಣು ಮಕ್ಕಳನ್ನು ಕೊಟ್ಟು, ಸುಖ ಸಮಾಧಾನದ ಮಾತಿಲ್ಲದೆ ನಿರಂತರವೂ ಹಲುಬುವವರ ಸಂತಾಪಕ್ಕೂ ಶಾಪಕ್ಕೂ ನಾವೇ ಕಾರಣರಾಗಬೇಕೆಂಬ ದುರಾಶೆ, ನಮ್ಮನ್ನು ಎಂದೂ, ಹೇಗೂ ಮುಟ್ಟುವಂತಿಲ್ಲ. ನಮ್ಮವರೆಲ್ಲರೂ ಈ ಬಗೆಯಾದ ಮತೈಕ್ಯದಿಂದ ಹಟತೊಟ್ಟು ನಿಂದರೆ ನಿಮ್ಮವರ ಹೆಮ್ಮೆಯೂ ಮಗ್ಗಿ ಹೋಗಬಹುದು. " (ತಿರುಮಲಾಂಬ ನಂಜನಗೂಡು : ೧೯೧೬ ; ೨೩)

ಕಲ್ಯಾಣಮ್ಮನವರ ಕಾದಂಬರಿ **ಪ್ರಿಯಂವದಾ**ದಲ್ಲಿ ನಾಯಕಿ ಬಾಲ್ಯ ವಿವಾಹಿತೆ. **ನಿರ್ಭಾಗ್ಯ ವನಿತೆ**ಯ ಇಂದಿರೆಯದ್ದು ಒಂಬತ್ತನೆಯ ವರ್ಷಕ್ಕೆ ನಡೆಯುವ ವಿವಾಹ. ಇಂದಿರೆಯ ಬಾಲ್ಯವಿವಾಹದ ಸಂದರ್ಭದಲ್ಲಿ ಕಲ್ಯಾಣಮ್ಮ ಆ ಕಾಲದ ಮೂರು ತಲೆಮಾರಿನ ವ್ಯಕ್ತಿಗಳು ಬಾಲ್ಯ ವಿವಾಹದ ಕುರಿತಂತೆ ಎದುರಿಸುವ ಸಮಸ್ಯೆ - ಸವಾಲುಗಳನ್ನು ದೀರ್ಘವಾಗಿ ನಿರೂಪಿಸಿದ್ದಾರೆ. 'ನಿರ್ಭಾಗ್ಯ ವನಿತೆ'ಯಲ್ಲಿ ಇಂದಿರೆಯ ತಂದೆಗೆ ಬಾಲ್ಯ ವಿವಾಹದ ಕುರಿತು ಯಾವುದೇ ಒಳ್ಳೆಯ ಅಭಿಪ್ರಾಯವಿಲ್ಲದಿದ್ದರೂ, ತಾಯಿಯ ಮಾತಿಗೆ ಕಟ್ಟುಬಿದ್ದು ಮಗಳು ಇಂದಿರೆಯನ್ನು ಸಹೋದರಿಯ ಮಗನಾದ ಹದಿನಾರು ವರ್ಷದ ನಾರಾಯಣನಿಗೆ ವಿವಾಹ ಮಾಡಿಸಲು ತೀರ್ಮಾನಿಸುತ್ತಾನೆ. ಇಂದಿರೆಯ ಅಣ್ಣ (ಶಚೀಂದ್ರ) ಬಹು ವಿಧದಲ್ಲಿ ತಂದೆಗೆ ಮನವರಿಕೆ ಮಾಡಿದರೂ, ಅದು ವ್ಯರ್ಥವಾಗುತ್ತದೆ. ಸತೀಶನಿಗೆ ಬಾಲ್ಯವಿವಾಹ ಒಳಿತು- ಕೆಡುಕಿನ ಅರಿವು ಸ್ಪಷ್ಟವಾಗಿಯೇ

ಇದೆ. ಆದರೆ ತಂದೆ ಸತ್ತು ಎರಡು ವರ್ಷದಿಂದಲೇ ಸಾಕಿದ ತಾಯಿಯ ಸಂಕಷ್ಟಗಳ ಅರಿವುಳ್ಳವನ್ನಾಗಿ ಆಕೆಯ ಮನಸ್ಸನ್ನು ನೋಯಿಸದವನಾಗಿದ್ದಾನೆ. ಆತನ ಮನಸ್ಸಿನ ತಾಕಲಾಟ, ತುಮುಲ, ಸಹಜವಾಗಿಯೇ ತೋರುತ್ತದೆ.

"ತಾನೋ ವಿದ್ಯಾವಂತನು, ಬಾಲ್ಯವಿವಾಹವನ್ನು ಮಾಡಕೂಡದೆಂಬ ಮತವುಳ್ಳವನು. ತನ್ನ ಪುತ್ರನಾದ ಶಬೇಂದ್ರನು ಬಾಲ್ಯವಿವಾಹ ಮಾಡಕೂಡದೆಂದು ಅನೇಕ ಕಡೆ ಹೇಳಿರುವನು. ತಾನು ತನ್ನ ಮಿತ್ರರಿಗೆಲ್ಲ ಬಾಲ್ಯವಿವಾಹವನ್ನು ಮಾಡಕೂಡದೆಂದು ಬೋಧಿಸುತ್ತಿರುವವನು. ಇಷ್ಟಲ್ಲದೆ ತನ್ನ ಸಹೋದರಿಯ ಪುತ್ರನು ಮೂಢ ಶಿಖಾಮಣಿಯೆಂಬುದನ್ನು ಬಲ್ಲನು. ಅಂಥ ಮೂಢನಿಗೆ ಅತಿಪ್ರೇಮದಿಂದ ಸಾಕಿದ ಇಂದಿರೆಯನ್ನು ವಿವಾಹ ಮಾಡಿಕೊಡಲು ಸಮ್ಮತಿಯಿಲ್ಲ. ತನ್ನ ಪತ್ನಿಯಾದ ಸ್ವರ್ಣಳಿಗೆ ಅವಳ ಸಹೋದರನ ಪುತ್ರನಾದ ಸುಂದರೇಶನಿಗೆ ಕೊಡಬೇಕೆಂದು ಇಷ್ಟ. ಅವನು ಇಂದಿರೆಗೆ ತಕ್ಕ ವರನೇ ಸರಿ, ಎಲ್ಲರ ಇಷ್ಟವೂ ಹೀಗೆಯೇ ಮಾಡಬೇಕೆಂದಿತ್ತು. ತನ್ನ ತಾಯಿಗೊಬ್ಬಳಿಗೋಸ್ಕರ ನಾರಾಯಣನಿಗೆ ಕೊಡ ಬೇಕಾಗಿತ್ತು. ತನ್ನ ತಾಯಿಯು ವ್ಯಥೆ ಪಡುವುದನ್ನು ಮಾತ್ರ ಸತೀಶನು ಸಹಿಸಲಾರನು."
(ಸುಮಿತ್ರಾ ಬಾಯಿ (ಸಂ) : ೧೯೯೨ ; ೨೭೮)

ಸತೀಶನ ಮಗ ಶಬೇಂದ್ರನಿಗೆ ಮಾತ್ರ 'ಬಾಲ್ಯ ವಿವಾಹ'ದ ಕೆಡುಕಿನ ಪರಿಣಾಮಗಳ ಸ್ಪಷ್ಟ ತಿಳುವಳಿಕೆ ಇದೆ. ಆದುದರಿಂದಲೇ ತಂದೆಯ ಜೊತೆ ವಾದಿಸುತ್ತಾನೆ. ಅಜ್ಜಿ ಮತ್ತು ತಂದೆಯ ನಿರ್ಣಯಗಳಿಂದ ಇಂದಿರೆ ಬದುಕಿನಲ್ಲಿ ಉಂಟಾಗಬಹುದಾದ ಹಾನಿಯ ಕುರಿತು ಮನವರಿಕೆ ಮಾಡಲು ಪ್ರಯತ್ನಿಸುತ್ತಾನೆ. ಆದರೆ ಇದು ವ್ಯರ್ಥವಾಗಿ ಹತ್ತು ವರ್ಷದ ಇಂದಿರೆಯ ವಿವಾಹ ಹದಿನಾರು ವರ್ಷದ ನಾರಾಯಣನ ಜೊತೆಗೆ ನಡೆಯುತ್ತದೆ. ಇದು ಉದಾರವಾದಿ ಸಾಂಸ್ಕತಿಕ ನೆಲೆಯ ಸಂಘರ್ಷದ ರೂಪವಾಗಿ ಪ್ರಕಟಗೊಂಡಿದೆ.

**ವಿಧವೆಯರ ಸ್ಥಿತಿಗತಿ :**

ವಯಸ್ಸು, ವಿದ್ಯೆ, ಗುಣ, ಶೀಲಸ್ವಭಾವಗಳನ್ನು ನೋಡಿ ಮದುವೆ ಮಾಡಬೇಕು ಎನ್ನುವ ತಂದೆ ತಾಯಿಗಳು ಅತಿ ವಿರಳ. ಹಣ-ರೂಪ ಎರಡಿದ್ದರೆ ಸಾಕು ಮದುವೆ ಮಾಡಬಹುದು ಎಂದು ನಂಬಿದವರೆ ಹೆಚ್ಚು. ಬಾಲ್ಯ ವಿವಾಹದಲ್ಲಿ ವಿವಾಹಿತ ಗಂಡು-ಹೆಣ್ಣಿಗೆ ಅವರ ಅಭಿಪ್ರಾಯವನ್ನು ಹೇಳುವ ಅವಕಾಶವಿರಲಿಲ್ಲ. ಹೆಚ್ಚಾಗಿ, ಹಿರಿಯರ ತೀರ್ಮಾನವನ್ನು ವಿಮರ್ಶಿಸುವ ವಯಸ್ಸು, ಅನುಭವ, ತಿಳುವಳಿಕೆ ಅವರಲ್ಲಿ ಇರುತ್ತಿರಲಿಲ್ಲ. ಇದರಿಂದ ಉಂಟಾಗುವ ಪರಿಣಾಮಗಳ ಕಾಳಜಿ ಆ ಅಪ್ರಾಪ್ತವಯಸ್ಸಿನಲ್ಲಿ ಸಾಧ್ಯವೂ ಇರುತ್ತಿರಲಿಲ್ಲ. ಆದರೆ ಹಿರಿಯರು ಮಾತ್ರ ಸುಲಭಕ್ಕೆ ತಮ್ಮ ಜೀವನ ಶ್ರದ್ಧೆ, ನಂಬಿಕೆಗಳನ್ನು ಬದಲಾಯಿಸಿಕೊಂಡು ಬದುಕುತ್ತಿರಲಿಲ್ಲ. ಇದರ ಪರಿಣಾಮವಾಗಿ ಹೆಣ್ಣು ಮಕ್ಕಳು ಅತೀ ಸಣ್ಣ ವಯಸ್ಸಿನಲ್ಲಿ ವಿಧವೆಯರಾಗಬೇಕಾಗುತಿತ್ತು. ಅಪಘಾತ, ರೋಗರುಜಿನ, ಆಕಸ್ಮಿಕ ಮರಣಗಳಿಂದಾಗಿ ಅತಿ ಸಣ್ಣ ವಯಸ್ಸಿನಲ್ಲಿ ವಿಧವೆಯರಾದರೆ ಅವರಿಗೆ ಮರು ಮದುವೆಯ ಯಾವುದೇ ಅವಕಾಶಗಳು ಇರುತ್ತಿರಲಿಲ್ಲ. 'ವಿಧವಾ ವಿವಾಹ' ಎಂಬುದು ಆ ಕಾಲಕ್ಕೆ ಬಹುದೊಡ್ಡ ಸವಾಲಾಗಿದೆ. ಉದಾರವಾದಿ ಸಾಂಸ್ಕೃತಿಕ ನೆಲೆಯು 'ವಿಧವಾ ವಿವಾಹ'ವನ್ನು ಮಾನವೀಯವಾಗಿ ನೈತಿಕ ಹಕ್ಕೊತ್ತಾಯದ ರೀತಿಯಲ್ಲಿ ಪ್ರತಿಪಾದಿಸುತ್ತದೆ. ಆದರೆ, ವಿಧವಾ ವಿವಾಹದ ಕುರಿತಂತೆ ನಡೆದಿರುವ ಲೇಖಕಿಯರ ಜಿಜ್ಞಾಸೆ ಹೆಚ್ಚು ಸಾಮಾಜಿಕವಾಗಿರದೆ ಕೌಟುಂಬಿಕ ಸ್ವರೂಪವನ್ನೇ

ಹೊಂದಿದೆ. ಎಂದರೆ, 'ವಿಧವಾ ವಿವಾಹ'ದಿಂದ ಉಂಟಾಗಬಹುದಾದ ಸಾಮಾಜಿಕ ಪಲ್ಲಟಗಳಿಗಿಂತ ಹೆಚ್ಚಾಗಿ ಕುಟುಂಬದೊಳಗಿನ ಪರಿವರ್ತನೆಯನ್ನು ಕುರಿತು ಯೋಚಿಸಿದ ನೆಲೆಗಟ್ಟೆ ಹೆಚ್ಚಿನ ಕಾದಂಬರಿಗಳಲ್ಲಿ ಕಂಡುಬರುತ್ತದೆ.

ತಿರುಮಲಾಂಬ ಅವರ **ನಭಾ** ಮತ್ತು **ವಿರಾಗಿಣಿ** ಕಾದಂಬರಿಗಳಲ್ಲಿ 'ವಿಧವಾ ಚಾರಿತ್ರ್ಯದ ಪವಿತ್ರ್ಯವೇ' ಮುಖ್ಯವಾಗುತ್ತದೆ. ವಿಧವೆ 'ಚಿರಸನ್ಯಾಸಿನಿ'ಯಾಗಿ ಉಳಿಯುವುದೇ ಇಲ್ಲಿನ ಪರಿಹಾರ. ಹೀಗೆ 'ಚಿರಸನ್ಯಾಸಿನಿ'ಯಾಗಿ ಉಳಿಯಲು ಪಡುವ ಕಷ್ಟ, ಎದುರಿಸಬೇಕಾದ ಸವಾಲುಗಳನ್ನೇ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳು ಪ್ರಧಾನವಾಗಿ ಚರ್ಚಿಸುತ್ತವೆ. ಸಣ್ಣ ವಯಸ್ಸಿನಲ್ಲಿ ಇನ್ನೂ ಅಪ್ರಾಪ್ತವಯಸ್ಸಿನಲ್ಲಿರುವಾಗಲೇ 'ನಭಾ' ವಿಧವೆಯಾಗುತ್ತಾಳೆ. ಸಾಂಕ್ರಾಮಿಕ ರೋಗಕ್ಕೆ ತುತ್ತಾದ ಆಕೆಯ ಗಂಡ ಕೊನೆಯುಸಿರೆಳೆಯುವ ಮುನ್ನ 'ನಭಾ'ಳಿಗೆ ಪತ್ರವೊಂದನ್ನು ಬರೆದಿರುತ್ತಾನೆ. ಆ ಪತ್ರದಲ್ಲಿ ನಭಾಳಿಗೆ ಬ್ರಹ್ಮಚರ್ಯವೇ ಸುಲಭ ಮತ್ತು ಸುಖದಾಯಕ. ಆದ್ದರಿಂದ ಅದನ್ನೇ ಅವಳು ಅನುಸರಿಸಬೇಕೆಂದು ಆಜ್ಞೆಯಾಗಿರುತ್ತದೆ. ಅಲ್ಲದೆ, 'ವಿಷಯೋಪಭೋಗ'ಗಳಿಂದಾಗಿ ಚಿರಕಳಂಕಿನಿಯಾಗದೆ, ವಿವೇಕದಿಂದ ಉಭಯ ಕುಲವನ್ನೂ ಉದ್ಧರಿಸಬೇಕೆಂಬ ಹಂಬಲವನ್ನು ನಭಾಳ ಪತಿಯು ಬರೆದ ಪತ್ರದಲ್ಲಿ ವ್ಯಕ್ತಪಡಿಸಿರುತ್ತಾನೆ. ನಭಾಳ ಗಂಡನಾದ ಶ್ರೀನಿವಾಸನ ಪತ್ರವು ನಭಾಳ ಬದುಕನ್ನು ರೂಪಿಸುತ್ತದೆ. ಮುಂದೆ, ಅವಳ ಚಿಕ್ಕಪ್ಪನಾದ ಚಿದಾನಂದನ ಆಶ್ರಯದಲ್ಲಿ ಬದುಕುವ ನಭಾಳಿಗೆ ಯೋಗ್ಯನೂ, ಯುವಕನೂ ಆದ ರಾಜಶೇಖರನು ವಿವಾಹದ ಪ್ರಸ್ತಾಪವನ್ನು ಮುಂದಿಡುತ್ತಾನೆ; ಒತ್ತಾಯಿಸುತ್ತಾನೆ. ಆದರೆ, ನಭಾಳು ಚಿಕ್ಕಪ್ಪನ ಮನೆಯನ್ನು ತೊರೆಯುವ ನಿರ್ಧಾರವನ್ನು ಮಾಡುತ್ತಾಳೆ. ಮತ್ತು ರಾಜಶೇಖರನನ್ನು ಮದುವೆಯಾಗುವುದು ಪಾಪಕಾರ್ಯವೆಂಬಂತೆ ಆಕೆ ಭಾವಿಸುತ್ತಾಳೆ. ಹೀಗೆ ನಭಾ ಕಾದಂಬರಿಯಲ್ಲಿನ ನಾಯಕಿ 'ವಿಧವಾ ವಿವಾಹ'ದ ಸಾಧ್ಯತೆಯನ್ನೇ ಅಲ್ಲಗಳೆಯುತ್ತಾಳೆ. ವಿಧವಾ ವಿವಾಹದ ಕುರಿತಂತೆ ಆಕೆಯ ಆಲೋಚನೆ ಆ ಕಾಲದ ದ್ವಂದ್ವವೆಂಬಂತೆ ನಿರೂಪಿತಗೊಂಡಿದೆ.

> "ಆವ ಕನ್ಯೆಯು ದಾನವಾಗದೆ ಸ್ವೇಚ್ಛೆಯಿಂದ ವರನನ್ನು ವರಿಸುವಳೋ ಅಂಥವಳು ಅವನನ್ನು ಬಿಟ್ಟು ಅಥವಾ ಆ ವರನು ಮೃತನಾದ ಅನಂತರ ಮತ್ತೊಬ್ಬನನ್ನು ವರಿಸಬಹುದು. ಶೂದ್ರಾಚಾರದಲ್ಲಿ ಇದನ್ನು ಚೆನ್ನಾಗಿ ತಿಳಿಯಬಹುದು. ಶೂದ್ರಾದಿಗಳಲ್ಲಿ 'ಕೂಡುವಳಿ' ಎಂಬ ಪದ್ಧತಿಯುಂಟಷ್ಟೆ ಆ ರೀತಿಯಾಗಿಯೇ ಇದಾಗುವುದು. ಅದು ಇಹಪರ ತತ್ವಜ್ಞರಾಗಿ ಆಸ್ತಿಕರೆನ್ನಿಸಿರುವ ನಮ್ಮ ಭಾರತೀಯರಿಗೆ ಅಷ್ಟಾಗಿ ಸುಖಕರವಾಗಲಾರದು. ಹಾಗೆ ಮಾಡುವುದರಿಂದ ನಮ್ಮ ದೇಶದ ಧರ್ಮ ಜಾಗ್ರತೆಯೇ ನಷ್ಟವಾಗಿ, ಹಲವು ವಿಧ ಕಷ್ಟ ಕ್ಲೇಶಗಳುಂಟಾಗುವುದರಲ್ಲಿ ಅಡ್ಡಿಯಿಲ್ಲ." [ವಿಜಯಾದಬ್ಬೆ (ಸಂ) : ೧೯೯೨ ; ೫೩.]

ನಭಾಳಿಂದ ಹೇಳಿಸುವ ಈ ಮಾತುಗಳು ಮೂಲಭೂತವಾಗಿ ವಿಧವಾ ವಿವಾಹದ ಕುರಿತು ತಿರುಮಲಾಂಬ ಅವರ ಧೋರಣೆಯೆ ಆಗಿದೆ. ವೈಧವ್ಯವನ್ನು ಸಹಜವೆಂಬಂತೆ ಸ್ವೀಕರಿಸಿ, ಬದುಕುವ ಮೇಲ್ವರ್ಗದ ನಂಬಿಕೆ ನಡಾವಳಿಗಳನ್ನೇ ತಿರುಮಲಾಂಬ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಯಲ್ಲಿ ಸಮರ್ಥಿಸಿರುವುದು ಮಾತ್ರವಲ್ಲ ವೈದಿಕೇತರ ಹಲವು ಸಮಾಜಗಳಲ್ಲಿ ವಿಧವಾ ವಿವಾಹವೆಂಬುದು ಪ್ರಚಲಿತದಲ್ಲಿದ್ದರೂ ಅದರ ಪೂರ್ಣರೂಪದ

ವಿಮರ್ಶೆಯನ್ನು ನಿರಾಕರಿಸಲಾಗಿದೆ. ವಿಧವೆಗೆ ಮರು ವೈವಾಹಿಕ ಜೀವನ ಅಪಮಾನವೆಂದೇ, ಈ ಎರಡು ಕಾದಂಬರಿಗಳು ಸಾಧಿಸುತ್ತವೆ. ಭಾರತೀಯ ವೈದಿಕ ವಿಧವೆಯರಲ್ಲಿ ಬಾಲವಿಧವೆಯರೇ ಹೆಚ್ಚು. ಅಪ್ರಾಪ್ತ ವಯಸ್ಸಿನಲ್ಲೇ ವಿಧವೆಯರಾಗುವ ಇವರಿಗೆ ದೀರ್ಘಕಾಲದ ವೈಧವ್ಯದ ಜೀವನದಿಂದ ಬದುಕಿನ 'ನೈಸರ್ಗಿಕ ನ್ಯಾಯ'ವೇ ಸಿಗದೇ ಹೋಗುತ್ತದೆ. ಮರುವಿವಾಹಿತರಾಗದೆ ಜೀತದಾಳುಗಳೆಂಬಂತೆ ಕಟುನಿಷ್ಠೆಯಿಂದ ಬಾಳುವ ವಿಧವೆಯರ ಬಗ್ಗೆ ತಿರುಮಲಾಂಬ ಅವರಿಗೆ ಸಹಾನುಭೂತಿ ಇದೆ. ಆದರೆ ಅದು ಕೇವಲ ಬಾಹ್ಯ ರೂಪದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆಯೇ ವಿನಃ ಜೀವಸತ್ವದ ಅಂತರ್ಯದ ನೆಲೆಯಲ್ಲಿ ಅಲ್ಲ. ಅಂದರೆ, ವಿಧವೆಯರ ಬಾಹ್ಯ ವಿರೂಪನದ ಬಗ್ಗೆ, ಕಟುವಾಗಿ ವಿರೋಧಿಸುವ ತಿರುಮಲಾಂಬ 'ವಿಧವಾ ಶಿಕ್ಷಣ'ದ ಮೂಲಕ 'ಸಚಾರಿತ್ರ್ಯ' ಬದುಕಿಗೆ ಮಹತ್ವ ನೀಡುತ್ತಾರೆ. ವಿಧವೆಯರ ಕೇಶ ವಿರೂಪನದಂಥ ಆಚರಣೆಯ ಕುರಿತು ಅವರ ನಿಲುವು ಹೆಚ್ಚು ಪ್ರಗತಿಪರವಾಗಿದೆ. ಆದುದರಿಂದಲೇ ಕೇಶ ಮುಂಡನದ ಚರ್ಚೆ ಅದರ ಪರ - ವಿರುದ್ಧ ಮಗ್ಗಲುಗಳಲ್ಲಿ, ಪುರೋಗಾಮಿ ಪ್ರತಿಗಾಮಿ ರೂಪದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ.

'ವಿಧವಾ ಶಿಕ್ಷಣ'ದ ಸಾಕಾರ ರೂಪವಾಗಿ 'ಆನಂದ ಭವನ' ಎಂಬ ಅಬಲಾಶ್ರಮದ ಸ್ಥಾಪನೆ 'ವಿರಾಗಿಣಿ' ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ. 'ಸ್ತ್ರೀ ಜನಾಭ್ಯುದಯಕ್ಕೆ'- 'ದೇಶಭಾಷೋನ್ನತಿಗೆ' ವಿರಾಗಿಣಿಯ ಪೂರ್ಣ ಬದುಕು ಮೀಸಲಾಗುತ್ತದೆ. ನಭಾ ವಿರಾಗಿಣಿಯಾಗಿ ಅವಳ ಜೀವನಕ್ಕೆ ಮಾರ್ಗ ಕಂಡುಕೊಳ್ಳುತ್ತಾಳೆ.

> "ಶಾಂತಿ-ಧೃತಿ- ಕ್ಷಮೆ-ದಮ- ಸತ್ಯ- ಶೌಚಾದಿ ಸಕಲ ಗುಣೋಪೇತವಾದ ಸತ್ವರೂಪವೇ ಸಾರ್ವಭೌಮ ಪದವಿಯನ್ನು ಹೊಂದ ತಕ್ಕುದೆಂಬುದನ್ನು ಪ್ರದರ್ಶಿಸಬೇಕಾದುದರಿಂದ ಈ ನಮ್ಮ ವಿರಾಗಿಣಿಯನ್ನು ಇಲ್ಲಿ 'ಆನಂದ ಭವನ'ದ ಮಂದಿರಾಧ್ಯಕ್ಷಳನ್ನಾಗಿ ಮಾಡಲಾಗಿದೆ."
> (ವಿಜಯಾದಬ್ಬೆ (ಸಂ) : ೧೯೯೨ ; ೨೪೮.)

ಇದು ವಿಧವೆ ತನ್ನ ಜೀವನದಲ್ಲಿ ಹೊಂದಿರಬೇಕಾಗುವ ಗುಣಧರ್ಮಗಳನ್ನು, ಸಾಧಿತ ಮಾರ್ಗಗಳನ್ನು ನಿರ್ದೇಶಿಸುತ್ತದೆ. 'ವಿಧವಾ ವಿವಾಹ'ದ ಕುರಿತಂತೆ ಸುಧಾರಣೆಗಳು ಜರುಗಿದ ಮಹತ್ವದ ಸಂದರ್ಭದಲ್ಲೇ ತಿರುಮಲಾಂಬ ಅವರು ಪ್ರತಿಪಾದಿಸುವ 'ವಿಧವಾ ಜೀವನ ಮೌಲ್ಯ'ಗಳು ಅವರ ಕಾಲದ ಪುರೋಗಾಮಿ ಮನಸ್ಥಿತಿಯ ಸಮಬಿಂಬವಾಗಿ ಪ್ರಕಟಗೊಳ್ಳುತ್ತದೆ. ಅಲ್ಲದೆ ಬದುಕನ್ನು ಪರಿಪೂರ್ಣವಾಗಿ ಸ್ವೀಕರಿಸಿದ ಲೇಖಕಿಯ ಸಹಜ ತೊಳಲಾಟವೆಂಬಂತೆ ಕೂಡ ಆನಿಸುತ್ತದೆ. ಈ ದ್ವಂದ್ವಗಳನ್ನು ಕಲ್ಯಾಣಮ್ಮನವರ ಕೃತಿಗಳು ಮೀರುತ್ತವೆ. **ನಿರ್ಭಾಗ್ಯ ವನಿತೆ** ಕಾದಂಬರಿಯು ವಿಧವಾ ವಿವಾಹದ ಕುರಿತು ದೀರ್ಘವಾಗಿ ವಿವೇಚಿಸುವ ಕೃತಿ. ಅನಾರೋಗ್ಯ ಪೀಡಿತನಾದ ಇಂದಿರೆಯ ಪತಿ ನಾರಾಯಣನ ಮರಣ ಇಂದಿರೆಯ ಬಾಳಿಗೆ ಮುಳುವಾಗುತ್ತದೆ. ವಿದ್ಯಾವಂತರಾದ ತಂದೆ, ಅಣ್ಣ, ಭಾವಂದಿರು ಅವಳ ವೈಧ್ಯವ್ಯದ ಕುರಿತು ಚಿಂತಿತರಾಗುತ್ತಾರೆ. ಇಂದಿರೆಯ ವೈಧವ್ಯವನ್ನು ನೆನೆದೇ ಅವಳ ತಾಯಿ ಮರಣಹೊಂದುತ್ತಾಳೆ. ಸಮಸ್ಯೆ ಗಂಭೀರ ಸ್ವರೂಪವನ್ನು ಪಡೆದುಕೊಳ್ಳುವುದೇ ಇಲ್ಲಿ. ಹೆಂಡತಿಯನ್ನು ಕಳೆದುಕೊಂಡ ಜೀವನದ ಲೌಕಿಕ ಅನುಭವವನ್ನು ಸಂಪೂರ್ಣ ಪಡೆದವನಾದ ತಂದೆ, ಗಂಡನನ್ನು ಕಳೆದುಕೊಂಡ ಜೀವನವೆಂದರೇನೆಂದೇ ಅರಿಯದ ಮಗಳು. ಈ ಎರಡು ಚಿತ್ರಣಗಳು ಏಕಕಾಲಕ್ಕೆ ಬಿಂಬಿತಗೊಳ್ಳುವುದರಿಂದ ಸಮಾಜದ 'ವಿಧವೆ'- 'ವಿಧುರ' ಈ ಎರಡು ಅವಸ್ಥೆಗಳು

ಪಡೆಯುವ ಸಾಮಾಜಿಕ ನ್ಯಾಯ ಪಲ್ಲಟವನ್ನು ಒಟ್ಟಿಗೆ ತೆರೆದಿಡುತ್ತದೆ. ನಲವತ್ತಐದು ವರ್ಷದ ಸತೀಶ ಹದಿನಾಲ್ಕು ವರ್ಷದ ಹೆಣ್ಣನ್ನು ಹೆಂಡತಿಯ ಶ್ರಾದ್ಧ ಕ್ರಿಯೆ ಮುಗಿಯುತ್ತಿದ್ದಂತೆ ವಿವಾಹವಾಗಲು ನಿಶ್ಚೈಸಿ ಬಿಡುತ್ತಾನೆ. ಈ ಸ್ಥಿತಿಯನ್ನು ವಿದ್ಯಾವಂತ ಮಗ ಶಚೀಂದ್ರನ ಮನಸ್ಸು ಮಾತ್ರ ಪೂರ್ಣರೂಪದಲ್ಲಿ ವಿಮರ್ಶಿಸುತ್ತದೆ. ತಂದೆಯ ಪುನರ್ವಿವಾಹ ನಿಶ್ಚಯ ಹಾಗೂ ಬಾಲ್ಯವಿವಾಹವಾಗಿ ಬಾಲವಿಧವೆಯಾಗಿರುವ ತಂಗಿ ಇಬ್ಬರ ಕುರಿತು ಆತನ ಮನಸ್ಸು ಚಿಂತಿಸುತ್ತದೆ.

> "ಪುರುಷನನ್ನೇ ಸ್ಪರ್ಶಿಸಿ ಅರಿಯದ ಕೇವಲ ಬಾಲೆಯರಾದ ಅಬಲೆಯರು ಪತಿವಿಯೋಗ ಹೊಂದಿದರೆ ಮತ್ತೊಬ್ಬನನ್ನು ವರಿಸಕೂಡದಂತೆ. ಜೀವಿತ ಕಾಲವನ್ನೆಲ್ಲಾ ಚಿಂತಿಸಿ ಕಂಡಕಂಡವರಿಂದ ತಿರಸ್ಕರಿಸಲ್ಪಟ್ಟು ಕಾಲವನ್ನು ಕಳೆಯಬೇಕಂತೆ. ಏತಕ್ಕಾಗಿ ಹೀಗಿರಬೇಕು? ಸ್ವಾರ್ಥವನ್ನುದ್ದೇಶಿಸಿ ಮತಿಹೀನತೆಯಿಂದಲು, ಪರ ವಿಶ್ವಾಸದಿಂದಲೂ ಕೂಡಲು ಕನ್ಯೆಯನ್ನರ್ಪಿಸುವಂತೆ ಎಲ್ಲರ ತೃಪ್ತಿಗಾಗಿ ಅಬಲೆಯರನ್ನು ಗುರಿಮಾಡಿ ನಾಲ್ಕು ದಿನಗಳ ಸ್ವಪ್ನದಂತೆಯೂ ಹುಡುಗರ ಬೊಂಬೆಯಾಟದಂತೆಯೂ, ಪುಷ್ಪಹಾರಗಳನ್ನು ಧರಿಸಿಕೊಂಡು ಸಭಾಮಧ್ಯದಲ್ಲಿ ಕುಳಿತಿದ್ದಕ್ಕೆ ಈ ಶಿಕ್ಷೆಯಂತೆ. ಮತ್ತು ತನ್ನ ಯೌವ್ವನ ಕಾಲದಲ್ಲಿ ವಿವಾಹಿತನಾಗಿ ಸುಖವನ್ನನುಭವಿಸಿ ಮಕ್ಕಳನ್ನು ಪಡೆದು ಇರತಕ್ಕ ಪುರುಷನೋರ್ವನು ತನ್ನ ವಯೋಧಿಕ ಕಾಲದಲ್ಲಿ ವಿಧುರನಾದರೆ ಅವನು ಮಾತ್ರ ಬಾಲಪ್ರಾಯದ ಕನ್ಯೆಯನ್ನು ವರಿಸಬಹುದಂತೆ! ಏನನ್ಯಾಯ? ವೃದ್ಧಕಾಲದ ಆದರಣೆಗೋಸ್ಕರ ವಿವಾಹವಾಗುವ ಪುರುಷರು ಜೀವಿತಕಾಲವೆಲ್ಲಾ ಆದರವಿಲ್ಲದೆ ತಪಿಸುತ್ತಿರುವ ಅಬಲೆಯರ ವಿಷಯವನ್ನು ಏತಕ್ಕೆ ಯೋಚಿಸ ಕೂಡದು? ಈ ವಿಧಿಯನ್ನು ಸಹಿಸುವರಾರು? ಎಲ್ಲಾ ವಿಧಿಯ ವಿಚಿತ್ರ ಎಂದು ಪ್ರಲಾಪಿಸುವನು." [ಸುಮಿತ್ರಾ ಬಾಯಿ (ಸಂ) : ೧೯೯೨ ; ೩೦೯]

ಶಚೀಂದ್ರನು ಎಷ್ಟು ತಡೆದರೂ ಆತನ ತಂದೆಯ ವಿವಾಹವು ನಡೆದುಹೋಗುತ್ತದೆ. ಈ ಸ್ಥಿತಿ ಆ ಕಾಲದ ಎಲ್ಲಾ ಮೇಲ್‌ಜಾತಿಗಳಲ್ಲಿ ಕಂಡುಬರುವ ಸಮಸ್ಯೆಯಾಗಿದೆ. ನಲ್ವತ್ತೈದುವರ್ಷದ ವಿಧುರ ಹದಿನಾಲ್ಕು ವರ್ಷದ ಹೆಣ್ಣನ್ನು ಮದುವೆಯಾದ ಎಂದಾದರೆ, ಇದು ಆ ಕಾಲಕ್ಕೆ ಅತಿ ಸ್ವಾಭಾವಿಕ. ಏಕೆಂದರೆ, ವಿವಾಹದ ವಯಸ್ಸೇ ಎಂಟು, ಹತ್ತು ವರ್ಷವಾಗಿರುವಲ್ಲಿ, ಹದಿನಾಲ್ಕು ವರ್ಷದ ಹೆಣ್ಣೆಂದರೆ ಅಂದಿನ ಕಾಲದಲ್ಲಿ ಪ್ರಬುದ್ಧೆ, ಪ್ರಾಯಕ್ಕೆ ಬಂದವಳೇ ಆಗಿರುತ್ತಿದ್ದಳು. ಇಲ್ಲಿ ವಿಧವೆಯರಿಗೆ ಮರುವಿವಾಹದ ಅವಕಾಶವಿಲ್ಲ. ಆದರೆ ವಿಧುರರಿಗೆ ಉಂಟು. ಅವರು ಮದುವೆಯಾಗುವುದಿದ್ದರೂ ಅವಿವಾಹಿತ ಕನ್ಯೆಯನ್ನೇ ಆಗಬೇಕಾಗಿತ್ತು. ಪುರುಷ ಕೇಂದ್ರಿತ ಸಮಾಜದಲ್ಲಿ ಧಾರ್ಮಿಕ ನಿಯಮಾವಳಿಗಳು ಕೂಡ ಪುರುಷರಿಗೆ ಪೂರಕವಾಗಿ ಇರುವುದರಿಂದ ಅದರಲ್ಲಿ ಹೆಣ್ಣಿಗೆ 'ಕನಿಷ್ಠದ' ನ್ಯಾಯ ದೊರೆಯಬೇಕಿದ್ದರೂ ಬಹುದೊಡ್ಡ ಚಳುವಳಿಯೇ ನಡೆಯಬೇಕು. ವಿಧವೆಯರ ಪುನರ್ವಿವಾಹದ ಹಕ್ಕೊತ್ತಾಯವು ಕೂಡ ಇದೇ ರೀತಿಯದು. ಪುರೋಹಿತಶಾಹಿ ಪುರುಷಕೇಂದ್ರಿತ ಸಮಾಜದ ಬೇರುಗಳು ಧರ್ಮದ ಬುನಾದಿಯಲ್ಲಿ ಇರುವುದರಿಂದ ಸ್ತ್ರೀಯ ಬದುಕಿನ ಮೂಲಭೂತ ಸಮಸ್ಯೆಗಳೆಲ್ಲವೂ ಧರ್ಮವನ್ನು ಪ್ರಶ್ನಿಸುತ್ತವೆ, ಅಲುಗಾಡಿಸುತ್ತವೆ. ಇಂದಿರೆಯನ್ನು ಮರು ವಿವಾಹವಾಗಲು ಮುಂದೆ ಬರುವ ಆಕೆಯ ಸೋದರ ಸಂಬಂಧಿ ಸುಂದರೇಶನಿಗೂ 'ವಿಧವಾ ವಿವಾಹ'ಕ್ಕೆ ಧರ್ಮಸಮ್ಮತಿಯ ಪ್ರಶ್ನೆಯೇ ಗಂಭೀರ ಸ್ವರೂಪದಲ್ಲಿ

ಕಾಡುತ್ತದೆ. ಸುಂದರೇಶ ಹಾಗೂ ಶಚೀಂದ್ರ ಇಬ್ಬರೂ ಇಂದಿರೆಯ ಪುರ್ನವಿವಾಹಕ್ಕೆ ಧರ್ಮ ಸಮ್ಮತಿಯನ್ನು ಪಡೆಯುವ ಹಲವು ಪ್ರಯತ್ನಗಳನ್ನು ನಡೆಸುತ್ತಾರೆ. ಯಾವುದರಿಂದಲೂ ಮನಸ್ಸಿಗೆ ಸಮ್ಮತವಾಗುವ ತೀರ್ಮಾನವನ್ನು ಪಡೆಯುವುದು ಅವರಿಗೆ ಸಾಧ್ಯವಾಗದೆ ಹೋಗುತ್ತದೆ. (ಸುಮಿತ್ರಾ ಬಾಯಿ(ಸಂ): ೧೯೯೨ ; ೩೩೫......೩೪೨.)

ಕೊನೆಗೆ, ಇಂದಿರೆ ಹಾಗೂ ಸುಂದರೇಶ ಈ ಕಾರ್ಯದಲ್ಲಿ ಸಮಾಜದ ಒಪ್ಪಿಗೆ ಪಡೆಯುವಲ್ಲಿ ವಿಫಲರಾಗುತ್ತಾರೆ. ಅನ್ಯ ಮಾರ್ಗವಿಲ್ಲದೆ, ಕಲ್ಕತ್ತೆಗೆ ಹೋಗಿ ಅಲ್ಲಿನ ಬ್ರಹ್ಮ ಸಮಾಜವನ್ನು ಸೇರಿ ಅವರ ವಿವಾಹ ಕಾರ್ಯ ಜರುಗುತ್ತದೆ. ಇಂದಿರೆ ಹಾಗೂ ಸುಂದರೇಶನ ಪುರ್ನವಿವಾಹ ಕಾದಂಬರಿಯ ನೆಲೆಯಲ್ಲಿ ಸಮಸ್ಯೆಯೊಂದರ ಮೂಲ ಪರಿಹಾರವಾಗಿದೆ. ವಿವಾಹದ ಮಾರ್ಗವಲ್ಲದೆ ಉಳಿದಂತೆ ಗಂಡು ಹೆಣ್ಣಿನ ಸಹಜ ಪ್ರೀತಿಗೆ, ಹೊಂದಾಣಿಕೆಗೆ ಅನ್ಯದಾರಿಗಳಿಲ್ಲ. ಗಂಡು- ಹೆಣ್ಣಿನ ಸಂಬಂಧಗಳಲ್ಲಿ ವಿವಾಹದಿಂದಾಗಿ 'ನೈಸರ್ಗಿಕ ನ್ಯಾಯ' ದೊರಕಿಸಿಕೊಳ್ಳುವುದು ಭಾರತೀಯ ಸಮಾಜದಲ್ಲಿ ಅನಿವಾರ್ಯ. ಹೀಗಿರುವಲ್ಲಿ ಅಂತಹ ವಿವಾಹ ಸಂಸ್ಥೆಯೇ ಶೋಷಣೆಯ ಮೂಲ ರೂಪದಲ್ಲಿದ್ದು, ಅದನ್ನು ಹೇಗೆ ಬೇಕೆಂದರೆ ಹಾಗೆ ಬದಲಾಯಿಸುವುದು ಅಸಾಧ್ಯ. ಇದಕ್ಕೆ ಮುಖ್ಯಕಾರಣ, ಭಾರತೀಯ ಸಮಾಜದಲ್ಲಿ ಮೇಲ್ಜಾತಿಗಳಲ್ಲಿ 'ಧರ್ಮ'ವನ್ನು ಹೆಚ್ಚು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬ ಅಪೇಕ್ಷೆ ಇರುವುದು. ಧಾರ್ಮಿಕ ಪಂಥೀಯ ಸ್ವಂತಿಕೆಯನ್ನು ಜಾತೀಯ ಸ್ವರೂಪದ ಅಡಿಯಲ್ಲಿ ನೋಡಲಾಗುತ್ತಿದ್ದುದರಿಂದ ಜಾತಿಯೊಂದರ ಲಕ್ಷಣ ಮೂಲಭೂತವಾಗಿ 'ವಿವಾಹ ನಿಯಮ'ಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತದೆ. ವಿವಾಹದ ನಿಯಮಗಳಿಗೆ ಸಂಬಂಧಿಸಿದ ಪೂರ್ಣ ರೂಪದ ವಿವರಗಳು ತಿರುಮಲಾಂಬ ಮತ್ತು ಆರ್ ಕಲ್ಯಾಣಮ್ಮ ಕೃತಿಗಳಲ್ಲಿ ಕಾಣಿಸಿಕೊಳ್ಳುವ ಬಗೆ ಜಾತಿಯ ಸ್ವರೂಪದ ನೆಲೆಯಿಂದಲೂ ಮುಖ್ಯವಾಗುತ್ತದೆ.

**ವಿವಾಹದ ಆಚರಣೆ :**

'ವಿವಾಹ' ಕ್ರಿಯೆಯ ವಿವರಗಳ ಮೂಲಕವಾಗಿ ಹಿಂದೂ ಸಮಾಜದ (ಅದರಲ್ಲೂ ವೈದಿಕ ಸಮಾಜದ) ಅರ್ಥಹೀನ ಆಚರಣೆಗಳನ್ನು ಇಬ್ಬರು ಲೇಖಕಿಯರು ತಮ್ಮದೇ ಆದ ನೆಲೆಯಿಂದ ವಿಮರ್ಶಿಸಿದ್ದಾರೆ. ತಿರುಮಲಾಂಬ ಅವರ **ಮಾತೃನಂದಿನಿ**ಯಲ್ಲಿ ಹಾಗೂ ಕಲ್ಯಾಣಮ್ಮನವರ **ನಿರ್ಭಾಗ್ಯ ವನಿತೆ**ಯಲ್ಲಿ ಪ್ರಕಟಗೊಳ್ಳುವ ಮದುವೆಯ ಚಿತ್ರಣದಲ್ಲಿ ೧೯ನೆ ಶತಮಾನದ ಹಿಂದೂ ಸಮಾಜದ ಆಡಂಬರಪ್ರಿಯತೆ-ದುಂದುಗಾರಿಕೆ- ವಿಷಯ ಲೋಲುಪತೆ- ಅರ್ಥವಿಲ್ಲದ ಪರಂಪರಾಗತ ಆಚರಣೆ- ನಂಬಿಕೆಗಳ ನಿರ್ದಿಷ್ಟವಾದ ಚರ್ಚೆ ಇದೆ. ಇದು ವಿವಾಹದ ಸ್ವರೂಪವನ್ನು ಕುರಿತ ಸಾಮಾಜಿಕ ಚರ್ಚೆ ಆ ಕಾಲದ ತುರ್ತುಗಳಲ್ಲಿ ಒಂದಾಗಿತ್ತು ಎಂಬುದನ್ನು ನಿರೂಪಿಸುತ್ತದೆ. ವಿವಾಹ ಸಂದರ್ಭದಲ್ಲಿ ನೀಡುವ 'ವರದಕ್ಷಿಣೆ'ಯ ಕುರಿತು 'ಮಾತೃ ನಂದಿನಿ'ಯಲ್ಲಿ ವಿಸ್ತಾರವಾದ ಮಾಹಿತಿಗಳು ಸಿಗುತ್ತವೆ. (ನಂಜನಗೂಡು ತಿರುಮಲಾಂಬ : ೧೯೧೬ ;೨೧೦. ೨೧೧) ಮಾತೃ ನಂದಿನಿಯ ಎಲ್ಲಾ ಕೇಂದ್ರ ಪಾತ್ರಗಳು (ನಾಗೇಶರಾಯ, ಶರಚ್ಚಂದ್ರ, ನಾಗಾನಂದ, ಅಚಲಚಂದ್ರ, ನಂದಿನಿ, ಸ್ವರ್ಣಾ) 'ವರದಕ್ಷಿಣೆ'ಯನ್ನು ಕೊಡುವ- ತೆಗೆದುಕೊಳ್ಳುವ ರೂಢಿ ನಿಯಮದ ಬಗ್ಗೆ ತೀವ್ರರೂಪದಲ್ಲಿ ವಿರೋಧವನ್ನು ವ್ಯಕ್ತಪಡಿಸುತ್ತವೆ. ವಿವಾಹದ ಕುರಿತ ಸಿದ್ಧಾಂತಗಳು ಸೃಜನಶೀಲ ಪ್ರಕ್ರಿಯೆಯಾಗುವ ಸಂಕೀರ್ಣ ವಿದ್ಯಮಾನ 'ಮಾತೃನಂದಿನಿ'ಯ ಮುಖ್ಯಶಕ್ತಿಯಾಗಿ

ಬಿಂಬಿತಗೊಂಡಿದೆ. ಬಹು ಮಟ್ಟಿಗೆ 'ಮಾತೃನಂದಿನಿ' ಕೃತಿಯ 'ರಚನಾಬಂಧ' ವಿವಾಹದ ಮೂಲಭೂತ ಶಕ್ತಿ ಮತ್ತು ವಿದ್ಯಮಾನಗಳಿಗೆ ಸಿದ್ಧಾಂತರೂಪೀ ವಿವರಣೆಗಳನ್ನು ನೀಡುವುದನ್ನು ಕಾದಂಬರಿಯ ಉದ್ದಕ್ಕೂ ಗಮನಿಸಬಹುದು. ಅದು ನಾಗಾನಂದ- ನಂದಿನಿ, ಅಚಲಚಂದ್ರ-ಸ್ವರ್ಣಾ ಇವರುಗಳ ಪ್ರೌಢ ವಿವಾಹದಲ್ಲಿ ಪರಿಪೂರ್ಣತೆಯನ್ನು ಪಡೆದುಕೊಂಡಿದೆ. (ನಂಜನಗೂಡು ತಿರುಮಲಾಂಬ : ೧೯೧೬ ; ೨೧೩.)

ವಸಾಹತು ಆಳ್ವಿಕೆಯಲ್ಲಿ ಉತ್ತಮ ಇಂಗ್ಲಿಷ್‌ವಿದ್ಯಾಭ್ಯಾಸ, ಕೈತುಂಬ ಸಂಬಳ ತರುವ ಸರಕಾರಿ ಉದ್ಯೋಗಗಳಿಂದಾಗಿ ಸುಶಿಕ್ಷಿತ ವಿದ್ಯಾವಂತ ವರ್ಗದ ಸಾಮಾಜಿಕ, ಆರ್ಥಿಕ ಸ್ಥಾನಮಾನ ಉಳಿದ ವರ್ಗದವರಿಗಿಂತ ಭಿನ್ನವಾಗಿದ್ದು ಉನ್ನತಮಟ್ಟದಿಂದ ಕೂಡಿದ್ದಾಗಿದೆ. ಸುಶಿಕ್ಷಿತ ವಿದ್ಯಾವಂತ ವರ್ಗದ ಯುವಕರಿಗೆ ಮದುವೆ ಮಾರುಕಟ್ಟೆಯಲ್ಲಿ ಬೇಡಿಕೆ ಉಂಟಾಗಿದ್ದು, ಇದು ಸಾಮಾಜಿಕ ಶೈಕ್ಷಣಿಕ ಬೆಳವಣಿಗೆಯ ಪ್ರತಿಫಲನವೇ ಆಗಿದೆ. ಇದರಲ್ಲಿ ಇಂಗ್ಲಿಷ್ ವಿದ್ಯಾವಂತ ಯುವಕರು ಅವರ ಹೆಂಡತಿಯರೊಡನೆ ವರ್ತಿಸುವ ರೀತಿ ಹೊಸದಾಗಿದ್ದು ಪೂರ್ವದ ದಾಂಪತ್ಯ ಸಂದರ್ಭಗಳಿಗೆ ಹೋಲಿಸಿದರೆ ಹೆಚ್ಚು ಉದಾರವಾದದ್ದು (ಬ್ರಿಟಿಷ್ ದೊರೆಗಳು ದೊರೆಸಾನಿಗಳ ಬದುಕು ಅವರಿಗೆ ಮಾದರಿ). ಅವರ ನಡವಳಿಕೆಗಳಲ್ಲಿ ಸ್ವಲ್ಪ ಮಟ್ಟಿಗಾದರೂ ಸಮಾನತೆಯನ್ನು ಗುರುತಿಸಬಹುದಾಗಿದ್ದ ಕಾರಣದಿಂದಾಗಿ ಹಣವಂತ ತಂದೆ ತಾಯಿಗಳು ತಮ್ಮ ಅಳಿಯಂದಿರು ಇಂಗ್ಲಿಷ್ ಕಲಿತವರಾಗಿರಲಿ ಎಂದು ಆಸೆ ಪಡುತ್ತಿದ್ದರು ಹಾಗೂ ಅದಕ್ಕೆ ಯಾವ ಬೆಲೆ ತೆರಲೂ ಸಿದ್ಧವಾಗಿದ್ದರು. ಇದು ವರದಕ್ಷಿಣೆಯನ್ನು ಒಂದು ಪಿಡುಗಾಗಿ ಸಮಾಜದಲ್ಲಿ ಮಾರ್ಪಡಿಸಲು ಒತ್ತಾಸೆ ನೀಡಿದೆ. *೧೧

> "ಆರಂಭದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸದ ಹೆಚ್ಚಿನ ಲಾಭ ಪಡೆದವರು ಬ್ರಾಹ್ಮಣರಾದುದರಿಂದ ಈ ದುಷ್ಟ ಪದ್ಧತಿಯನ್ನು ಪರಿಚಯಿಸಿದವರೂ ಅವರೇ ಆಗಿದ್ದಾರೆ. ಕೆಲವೊಂದು ಅಪವಾದಗಳನ್ನು ಬಿಟ್ಟರೆ ಬ್ರಾಹ್ಮಣರು ತಮ್ಮ ಕನ್ಯೆಯರನ್ನು ಮದುವೆ ಮಾಡಿಕೊಡಲು ಕಷ್ಟಪಡಲಾರಂಭಿಸಿದುದರ ನಂತರ ವರನೆಂಬುವವನು ವಿದ್ಯಾವಂತನಿರಲಿ, ಅವಿದ್ಯಾವಂತನಿರಲಿ ವರದಕ್ಷಿಣೆ ಕಡ್ಡಾಯವೆನ್ನುವ ಹಂತ ಮುಟ್ಟಿತು. ಆದ್ದರಿಂದ ಅವಿವಾಹಿತ ಕನ್ಯೆಯರ ಸಂಖ್ಯೆ ಹೆಚ್ಚಿತು. ಆರಂಭದಲ್ಲಿ ಬ್ರಾಹ್ಮಣ ಕುಟುಂಬಗಳಲ್ಲಿ ಆರಂಭವಾದ ಈ ಪದ್ಧತಿ ಇಂದು ಎಲ್ಲ ಜಾತಿಯ, ಎಲ್ಲ ಧರ್ಮಗಳ ಕುಟುಂಬಗಳಲ್ಲೂ ವ್ಯಾಪಕವಾಗಿ ಹಬ್ಬಿದೆ. ಅಷ್ಟೇ ಅಲ್ಲ, ಹೆಣ್ಣು ದುಡಿಯುವವಳಿರಲಿ, ಇಲ್ಲದಿರಲಿ ಎಲ್ಲರನ್ನೂ ಇದು ತನ್ನ ತೆಕ್ಕೆಗೆ ತೆಗೆದುಕೊಂಡಿದೆ." (ಗಾಯತ್ರಿ ಎನ್ : ೧೯೯೧; ೭೪)

ಕಲ್ಯಾಣಮ್ಮನವರ **ಪ್ರಿಯಂವದಾ** ಕಾದಂಬರಿ 'ವರದಕ್ಷಿಣೆ'ಯ ದುಷ್ಟ ಪರಿಣಾಮವನ್ನು ಅನಾವರಣಗೊಳಿಸುತ್ತದೆ.. ಲೇಖಕಿಯೇ ಕೃತಿಯ ಪೀಠಿಕೆಯಲ್ಲಿ ಹೇಳುವಂತೆ 'ನಮ್ಮ ಹಿಂದೂ ಜನಾಂಗದಲ್ಲಿರುವ ಇಂತಹ ದುಷ್ಟ ಪದ್ಧತಿಗಳನ್ನು ನಿರ್ಮೂಲ ಮಾಡಿ ಜನಾಂಗವು ಅತ್ಯುನ್ನತ ಸ್ಥಿತಿಯಲ್ಲಿ ಬಾಳಬೇಕೆನ್ನುವುದೇ ಈ ಚಿಕ್ಕ ಪುಸ್ತಕವನ್ನು ಬರೆದ ಉದ್ದೇಶವು' ಎನ್ನುವ ಮಾತುಗಳಿಂದ ವ್ಯಕ್ತವಾಗುತ್ತದೆ. ಪ್ರಿಯಂವದೆಯು ವಿವಾಹಿತಳಾಗಿದ್ದರೂ ವರದಕ್ಷಿಣೆಯನ್ನು ನೀಡಲಿಲ್ಲವೆಂಬ ಕಾರಣದಿಂದ ಅತ್ತೆ ಗಂಡನಮನೆಗೆ ಕರೆಸಿಕೊಳ್ಳುವುದಿಲ್ಲ. ತವರಿನಲ್ಲೇ ಉಳಿವ ಪ್ರಿಯಂವದೆಯ ಪರಿಸ್ಥಿತಿಯನ್ನು ಶಕ್ತವಾಗಿ ಅರ್ಥಮಾಡಿಕೊಳ್ಳುವ ಅವಳ ಪತಿ ಪ್ರಿಯಂವದೆಯನ್ನು ಅವಳ ತವರಿನಿಂದಲೇ ಓದಿಸುವ, ಪದವಿಯನ್ನು ಪಡೆದುಕೊಳ್ಳುವ ಏರ್ಪಾಡು

ಮಾಡುತ್ತಾನೆ. ಆ ಮೂಲಕ ಪ್ರಿಯಂವದೆ ಹಾಗೂ ಸತ್ಯೇಂದ್ರ ಇಬ್ಬರು ಸೇರಿ ಧನದಾಹಿ ಅನ್ನಪೂರ್ಣೆಯಲ್ಲಿ ಪರಿವರ್ತನೆಯನ್ನು ಉಂಟುಮಾಡುತ್ತಾರೆ. (ಕಲ್ಯಾಣಮ್ಮ .ಆರ್ : ೧೯೨೨.೧.೩೫) ಪೂರ್ವ ನಿರ್ಧಾರಿತ ಮೌಲ್ಯಗಳ ಶೋಧನೆಗೆ, ಸಮರ್ಥನೆಗೆ 'ವಿವಾಹ' ಒಂದು ವಸ್ತು ಚೌಕಟ್ಟು ಮಾತ್ರ. ವಿವಾಹದ ಕ್ರಮಘನ್ನೇ ಸಮಗ್ರವಾಗಿ ಶೋಧಿಸಿದರೆ ಬರುವ ಮೌಲ್ಯಾತ್ಮಕ ತೀರ್ಮಾನಗಳು ಜೀವನ ದರ್ಶನವನ್ನೇ ಪ್ರಶ್ನಿಸುವಂಥವು. ಈ ಕಾರಣಗಳಿಂದಾಗಿ ವಿವಾಹದ ಮೌಲ್ಯಗಳು ಕೇವಲ ಮಧ್ಯಮವರ್ಗದವೇ ಎನ್ನುವ ಚರ್ಚೆ ಇಲ್ಲಿ ಮುಖ್ಯವಾಗುವುದಿಲ್ಲ. ಏಕೆಂದರೆ ಮೌಲ್ಯಗಳು ಯಾವಾಗಲೂ ಸಾಪೇಕ್ಷವಾದವು. ಮೌಲ್ಯಕ್ಕಿರುವ ಪರಿಸರದ ಸ್ವರೂಪದ ಮೇಲೆ ಇದು ನಿರ್ಧಾರವಾಗುತ್ತದೆ. ಈ ಮುಖ್ಯ ಅಂಶಗಳಿಂದಾಗಿ ತಿರುಮಲಾಂಬ ಹಾಗೂ ಕಲ್ಯಾಣಮ್ಮನವರ ಕಾದಂಬರಿಗಳಲ್ಲಿ ವಿವಾಹ ರಚನೆ ಮನುಷ್ಯನ ಜೀವನ ಕ್ರಮದಲ್ಲಿ ಪ್ರಕಟವಾಗುವ ವಿವಾಹ ಮೌಲ್ಯಗಳಂತೆ ಕಾಣಿಸಿಕೊಳ್ಳುತ್ತವೆ.

**ಮೊದಲಕಟ್ಟಿನ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ವಿವಾಹದ ಸ್ವರೂಪ:**

ಮೇಲಿನ ಎಲ್ಲ ವಿವರಗಳಿಂದ ಮೊದಲಕಟ್ಟಿನ ವಿವಾಹದ ಸ್ವರೂಪವನ್ನು ಸಂಗ್ರಹವಾಗಿ ಈ ಕೆಳಗಿನಂತೆ ಕಂಡುಕೊಳ್ಳಬಹುದು.

೧. ಮೊದಲ ಕಟ್ಟಿನ ಕಾದಂಬರಿಗಳು ವಿವಾಹ- ಆ ಕುರಿತ ಬದುಕಿನ ತಾತ್ವಿಕ ರಚನೆಗಳಾಗಿವೆ.

೨. ಉದಾರವಾದಿ ಸಾಂಪ್ರದಾಯಿಕ ಧೋರಣೆಯು ವಿವಾಹದ ಸ್ವರೂಪವನ್ನು ನಿರ್ದಿಷ್ಟಪಡಿಸಿದೆ.

೩. ಉದಾರವಾದಿ ಸಾಂಸ್ಕೃತಿಕ ಪರಿಷ್ಕರಣದ ರಚನಾತ್ಮಕ ಗುಣವನ್ನು ವಿವಾಹದ ಸ್ವರೂಪದಲ್ಲಿ ಗುರುತಿಸಬಹುದು.

೪. ವಿವಾಹದ ಕುರಿತ ಹಿಂದೂ ಸನಾತನ ಧರ್ಮದ ಸತ್ವವನ್ನು ಪ್ರತಿಪಾದಿಸುವುದು ಮೊದಲ ಕಟ್ಟಿನ ಕಾದಂಬರಿಗಳ ಮೂಲ ನಿಲುವಾಗಿದೆ.

೫. ಸ್ತ್ರೀಯರ ಬದುಕಿನ ಸ್ಥಾನಮಾನ- ಸಾಮಾಜಿಕ ಕಾಳಜಿಯ ಕುರಿತು ಮೊದಲಕಟ್ಟಿನ ಕಾದಂಬರಿಗಳಲ್ಲಿ ಪ್ರಕಟವಾಗುವ ವಿವಾಹದ ಸ್ವರೂಪ ಐತಿಹಾಸಿಕವಾಗಿ ಗಮನಾರ್ಹವಾಗಿದೆ.

೬. ಮೊದಲಕಟ್ಟಿನ ವಿವಾಹದ ಆಚರಣೆಯ ಚಿತ್ರಣ ತೆಳುವಾದ ಚೌಕಟ್ಟನ್ನು ಹೊಂದಿದೆ.

೭. ವಿವಾಹದ ಕುರಿತ ಪ್ರಗತಿಪರ ಆಲೋಚನೆಗಳು ಮೇಲ್‌ಸ್ತರದಲ್ಲಿ ಬಿಂಬಿತಗೊಂಡಿವೆ.

೮ ವಿವಾಹದಂತಹ ವಿಚಾರಗಳ ಬದಲಾವಣೆಗಳಲ್ಲಿ ಸಮಾಜವನ್ನು ಎದುರುಹಾಕಿಕೊಳ್ಳುವ ಗೊಂದಲ ಮೊದಲಕಟ್ಟಿನ ಕಾದಂಬರಿಗಳಲ್ಲಿ ಎದ್ದು ಕಾಣುತ್ತದೆ.

### ೩.೨.೨ ಮೊದಲ ಕಟ್ಟಿನ ಕಾದಂಬರಿಗಳು : ದಾಂಪತ್ಯದ ಸ್ವರೂಪ.

ಗಂಡು-ಹೆಣ್ಣಿನ ಲೈಂಗಿಕ ಜೀವನವನ್ನು ಕಾನೂನು ಬದ್ಧಗೊಳಿಸುವ 'ವಿವಾಹ'ದಿಂದಾಗಿ ವ್ಯಕ್ತಿಗಳ ಜೀವನ ಮೂಲಭೂತ ಬದಲಾವಣೆಗಳನ್ನು ಪಡೆದುಕೊಳ್ಳುತ್ತದೆ. ಎಷ್ಟೇ ಸೌಮ್ಯಗುಣಗಳನ್ನು ಇದೆ ಎಂದು ಭಾವಿಸಿದರೂ ಪ್ರತಿ ವ್ಯಕ್ತಿಗಳೂ ಒಬ್ಬರಿಗಿಂತ ಮತ್ತೊಬ್ಬರು ಭಿನ್ನ. ಹೆಣ್ಣು- ಗಂಡುಗಳೆಂಬ ನೈಸರ್ಗಿಕ ಭಿನ್ನತೆಯು ಎಷ್ಟು ಸಹಜವೊ ಹಾಗೆಯೇ ಹೆಣ್ಣು -ಹೆಣ್ಣುಗಳಲ್ಲಿ, ಗಂಡು -ಗಂಡುಗಳಲ್ಲಿ ಭಿನ್ನತೆ ಎಂಬುದು ಸಹಜ.

ಇಂತಹ ಸಹಜ ಭಿನ್ನತೆಯ ಸ್ವರೂಪವನ್ನು ನಾವು 'ವೈವಾಹಿಕ ಸ್ವರೂಪ'ವನ್ನು ನಿರ್ಧರಿಸುವಲ್ಲಿ ಗಮನದಲ್ಲಿಡುವುದು ಅತಿ ಮುಖ್ಯ. ಭಾರತೀಯ ಸಂದರ್ಭದಲ್ಲಿ ವಿವಾಹದ ನಿರ್ಣಯ ಜವಾಬ್ದಾರಿಗಳು ಸಂಪೂರ್ಣವಾಗಿ ಕುಟುಂಬದ ಹಿರಿಯರಿಗೆ ಸಂಬಂಧಿಸಿದ್ದಾಗಿರುತ್ತದೆ. ಗಂಡು-ಹೆಣ್ಣಿನ ಪರಸ್ಪರ ಒಪ್ಪಿಗೆಯ ಪ್ರಶ್ನೆ ಇಲ್ಲಿ ಏಳುವುದಿಲ್ಲ. ಕಾರಣ, ಅಪ್ರಾಪ್ತ ವಯಸ್ಸಿನಲ್ಲಿ ನಡೆಯುವ ವಿವಾಹ ಕ್ರಿಯೆ ಮಕ್ಕಳಿಗೆ ಒಂದು ಆಟವಾಗಿಯೇ ತೋರುತ್ತದೆ. ಅಲ್ಲದೇ, ತಮ್ಮ ಜೀವನ ಸಂಗಾತಿಗಳನ್ನು ಆಯ್ಕೆ ಮಾಡುವ ಪಕ್ವತೆಯೂ ಅವರಲ್ಲಿರುವುದಿಲ್ಲ. ಇಂತಹ ವಿವಾಹ ವ್ಯವಸ್ಥೆಯಲ್ಲಿ ಮದುವೆಯಾಗುವ ಗಂಡು - ಹೆಣ್ಣಿಗೆ ಮೂಲಭೂತವಾದ ಜೈವಿಕ ಅರ್ಹತೆಯೂ ಇರುವುದಿಲ್ಲ. ಮನೆಯ ಹಿರಿಯರ ತೀರ್ಮಾನಗಳಿಂದಾಗಿ ಹುಟ್ಟುವ ಈ ಸಂಬಂಧ ಪ್ರಕ್ರಿಯೆಯಲ್ಲಿ ಸಮಾನ ಆಸಕ್ತಿ, ಮನೋಭಾವ, ಧೋರಣೆಗಳನ್ನು ಹುಡುಕುವುದೂ ಅಸಾಧ್ಯ. ಆದರೆ, ಎಲ್ಲಾ ಮನೆಗಳಲ್ಲೂ ಹೆಣ್ಣಿಗೆ 'ಹೆಂಡತಿ'ಯಾಗಿ ಹೇಗೆ ಬಾಳಬೇಕೆನ್ನುವ ಶಿಕ್ಷಣವನ್ನು ನೀಡಲಾಗುತ್ತದೆ. ಬಾಲ್ಯದಿಂದಲೇ 'ಹೆಂಡತಿ'ಯ ಜವಾಬ್ದಾರಿ, ಕರ್ತವ್ಯಗಳ ಸ್ಪಷ್ಟವಾದ ತಿಳುವಳಿಕೆ ನೀಡುವುದರಿಂದ ಹೆಣ್ಣು ಮಕ್ಕಳಿಗೆ ಗಂಡನ ಮನೆಗೆ ಹೊಂದಿಕೊಂಡು ಬದುಕುವುದು ಮನವರಿಕೆಯಾಗಿರುತ್ತದೆ. ಆದರೆ ಮದುವೆಯಾಗುವ ಗಂಡಿಗೆ ಇಂತಹ ಶಿಕ್ಷಣ ಸಿಗುತ್ತದೆ ಎಂದು ಹೇಳುವುದು ಕಷ್ಟ. ಇಂತಹ ಸಾಂಸ್ಕೃತಿಕ ಸನ್ನಿವೇಶದಲ್ಲಿ ವಿವಾಹಿತ ದಂಪತಿಗಳ ಬದುಕು ಪರಿಪೂರ್ಣತೆಯನ್ನು ಹೊಂದಿರುತ್ತದೆ. ಎಂದು ನಿರ್ಣಯಿಸುವುದು ಅಸಾಧ್ಯ. ಆದರೆ, ಇಂತಹ ಸಂದರ್ಭಗಳಲ್ಲಿ ಹಿರಿಯರ ಬದುಕು- ಅವರ ಆದರ್ಶಪಾಲನೆಯೇ ಕಿರಿಯ ತಲೆಮಾರಿಗೆ ಆದರ್ಶಪ್ರಾಯ ಮಾರ್ಗದರ್ಶನವಾಗಿ ಬಿಡುತ್ತದೆ. ತಿರುಮಲಾಂಬ,ಆರ್. ಕಲ್ಯಾಣಮ್ಮನವರು ಚಿತ್ರಿಸಿರುವ ಕಾದಂಬರಿಯ ದಾಂಪತ್ಯ ಚಿತ್ರಣವು ಮೇಲಿನ ನಿಲುವುಗಳಿಂದಲೇ ಕೂಡಿದೆ. ತಿರುಮಲಾಂಬ ಅವರ **ನಭಾ, ವಿರಾಗಿಣಿ, ಗಿರಿಜಾಬಾಯಿ, ಮಣಿಮಾಲಾ, ಮಾತೃನಂದಿನಿ** ಈ ಕೃತಿಗಳ ದಾಂಪತ್ಯದ ಚಿತ್ರಣಗಳಲ್ಲಿ ಎರಡು ಮಾದರಿಗಳನ್ನು ಗುರುತಿಸಬಹುದು.

ಅ) ಸಿದ್ಧ ಮಾದರಿಯ ಆದರ್ಶ ವೈವಾಹಿಕ ಸ್ವರೂಪ.

ಆ) ವಿರುದ್ಧ ಮಾದರಿಯ ತೆಳು ರಚನೆಯ ವೈವಾಹಿಕ ಸ್ವರೂಪ.

**ಅ) ಆದರ್ಶ ವೈವಾಹಿಕ ಸ್ವರೂಪ :** ಇದು ವಿವಾಹಿತ ಎಲ್ಲಾ ವ್ಯಕ್ತಿಗಳು ಅನುಸರಿಸಬೇಕಾದ ಅನುಕರಣ ಯೋಗ್ಯ ವೈವಾಹಿಕ ಸ್ವರೂಪ. ಇಲ್ಲಿನ ದಂಪತಿಗಳು ಸುಶಿಕ್ಷಿತರು, ಸುಸಂಸ್ಕೃತರು. ಇದರಲ್ಲಿ ಹೆಂಡತಿಯಾದವಳು ಗಂಡನ ಸಹ ಧರ್ಮಿಣಿ, ಬಾಳ ಸಂಗಾತಿ ಮನೆಯ ಸಮಸ್ತ ಜವಾಬ್ಧಾರಿಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುವವಳು. ಕುಟುಂಬದ ಎಲ್ಲಾ ಸದಸ್ಯರನ್ನು ಓಲೈಸಿ ಬಾಳುವವಳು. ಆದರ್ಶ ಪತ್ನಿ. ಆದರ್ಶ ತಾಯಿ. ಗಂಡನಾದವನೂ ಕೂಡ 'ಪೂರ್ಣ ಪುರುಷತ್ವ'ವನ್ನು ಹೊಂದಿದವನು. ಕುಟುಂಬದ ಜವಾಬ್ದಾರಿಗಳನ್ನು ಹೆಂಡತಿಯೊಂದಿಗೆ ಹಂಚಿಕೊಂಡವನು. ಮನೆಯ ಹೊರಗೆ ಒಳ್ಳೆಯ ಹೆಸರನ್ನು ಗಳಿಸಿಕೊಂಡವನು. ಉಳಿದ ಗಂಡಸರಿಗಿಂತ ಯೋಗ್ಯಸ್ಥ. ಹೆಂಡತಿಯನ್ನು, ಮಕ್ಕಳನ್ನು, ಗೌರವಿಸುವ ಆದರ್ಶ ಪುರುಷ. ಇಂತಹ ಪರಿಪೂರ್ಣ ವ್ಯಕ್ತಿತ್ವದ ಆರೋಗ್ಯಪೂರ್ಣ ವೈವಾಹಿಕ ಸ್ವರೂಪ ರಚನೆಯನ್ನು ತಿರುಮಲಾಂಬ ಅವರು ಚಿದಾನಂದ-ರಮಾಮಣಿ (ವಿರಾಗಿಣಿ), ಗಿರಿಜಾಬಾಯಿ- ಯೋಗಾನಂದ (ಗಿರಿಜಾಬಾಯಿ), ಶಚೀಕಾಂತ-ಮಣಿಮಾಲೆ(ಮಣಿಮಾಲಾ)ಯರ ದಾಂಪತ್ಯ ಚಿತ್ರಣದಲ್ಲಿ ಚಿತ್ರಿಸಿದ್ದಾರೆ. ಕಲ್ಯಾಣಮ್ಮನವರ

'ಪ್ರಿಯಂವದಾ' ಮತ್ತು 'ನಿರ್ಭಾಗ್ಯವನಿತೆ'ಯಲ್ಲಿನ ಸತ್ಯೇಂದ್ರ - ಪ್ರಿಯಂವದೆ, ಸುಂದರೇಶ- ಇಂದಿರೆಯರ ದಾಂಪತ್ಯವು ಕೂಡ ಇಂತಹ ಸಿದ್ಧ ಮಾದರಿಯದ್ದೇ ಆಗಿದೆ. ವೈವಾಹಿಕ ಬದುಕಿನಲ್ಲಿ ಗಂಡು - ಹೆಣ್ಣು ಇಬ್ಬರದ್ದೂ ನಿರ್ಣಾಯಕ ಸ್ಥಾನ. ಗಂಡ - ಹೆಂಡತಿ ಪರಸ್ಪರ ಅನುವರ್ತಿಗಳಾಗಿದ್ದರೆ ಮಾತ್ರ ಸಂತೃಪ್ತ ಸಹಬಾಳ್ವೆ ಸಾಧ್ಯ., ಈ ಪ್ರಧಾನ ಆಶಯವನ್ನು ತಿರುಮಲಾಂಬ ಮತ್ತು ಕಲ್ಯಾಣಮ್ಮನವರ ಎಲ್ಲಾ ಕಾದಂಬರಿಗಳು ಬಹು ದೀರ್ಘವಾಗಿ ಚರ್ಚಿಸುತ್ತವೆ. ತಿರುಮಲಾಂಬ 'ವಿರಾಗಿಣಿ' ಕಾದಂಬರಿಯಲ್ಲಿ ನಿರೂಪಕಿಯ ಮಾತುಗಳ ಮೂಲಕ ಇದನ್ನು ದಟ್ಟವಾಗಿ ಬಿಂಬಿಸಿರುವುದು ವ್ಯಕ್ತವಾಗುತ್ತದೆ.

> "ಲೋಕದಲ್ಲಿ ದಾಂಪತ್ಯಾನುಕೂಲವು ಆರಲ್ಲಿರುವುದೋ ಅವರೇ ಭಾಗ್ಯಶಾಲಿಗಳು! ಪತಿಯೊಲ್ಮೆಗೆ ಪಾತ್ರಳಾದ ಸತಿಗೆ ಮತ್ತಾವ ಪರವಸ್ತುವೂ ಬೇಕಾಗಿರುವುದು ಸಮಸ್ತವನ್ನೂ ಪತಿಸೇವೆಯೊಂದದಿಂದಲೇ ದೊರಕಿಸಿಕೊಳ್ಳಬಹುದೆಂಬ ಆತ್ಮ ಸಂತೋಷವೂ ಅವಳ ಹೃದಯದಲ್ಲಿ ನಿತ್ಯವೂ ನೆಲೆಗೊಂಡಿರುವುದು. ಅಂತೆಯೇ ಹಿತೈಷಿಣೀ ಸತೀಲಾಭವುಳ್ಳ ಪತಿಯಾವನೋ ಅವನೇ ಚತುರ್ವಿಧ ಪುರುಷಾರ್ಥಗಳನ್ನೂ ಹೊಂದತಕ್ಕವನೆಂದರೆ ಅತ್ಯುಕ್ತಿಯಲ್ಲ. ಪರಸ್ಪರ ದ್ವೇಷಭಾವವುಳ್ಳ ಧರ್ಮಾರ್ಥಕಾಮಗಳು ಪರಸ್ಪರೈಕಮತ್ಯದಿಂದ ಆರಲ್ಲಿ ಕಲೆತಿರುವುದೋ ಅವರಲ್ಲಿಯೇ ಶಾಶ್ವತ ಸುಖಾನಂದದಾಯಕವಾದ ಮುಕ್ತಿಯೂ ಸ್ವತಸ್ಸಿದ್ಧವೆಂದೇ ಭಾವಿಸಬೇಕು." (ವಿಜಯಾದಬ್ಬೆ (ಸಂ) : ೧೯೯೨ ; ೧೦೬.)

ಅನುರೂಪ ದಾಂಪತ್ಯವನ್ನು ಆರೋಗ್ಯಪೂರ್ಣ ಎಂದು ಭಾವಿಸುವ ತಿರುಮಲಾಂಬ ಇದರಲ್ಲಿ ಹೆಂಡತಿಯ ಪಾತ್ರವೇ ಹೆಚ್ಚಿನದೆಂದು ಪ್ರತಿಪಾದಿಸುತ್ತಾರೆ. ಅಲ್ಲದೆ ಅದು ಅಂದಿನ ಸಮಾಜದಲ್ಲಿ ಅತಿ ವಿರಳವೆಂದು ಗುರುತಿಸುತ್ತಾರೆ.

> "ಆವ ಮಹಿಳೆ ಪತಿಯೇ ಸತಿಯ ಜೀವನ ಸಾರ ಸರ್ವಸ್ವವೆಂದು ಅನನ್ಯ ಭಾವದಿಂದ ಪವಿತ್ರ ಚಿತ್ತಳೋ, ಆವ ಸತೀ ಮಣಿಯ ಪ್ರತಿಭಾವಿಶೇಷವು ಗೃಹ ರಾಜ್ಯದಲ್ಲಿ ಕ್ಷುದ್ರಕಲಹಾದಿ ದುರಾಗ್ರಹಗಳಿಗೆಡೆಯಾಗದಿರುವುದೋ ಅಂತಹ ನಾರಿಯ ಮೇಲೆ ಹೇಳಲ್ಪಟ್ಟ ದಿವ್ಯ ಸುಖಾನುಭವಕ್ಕೆ ಪವಿತ್ರಾಶ್ರಯವು. ಅವಳೇ ಚತುರ್ವಿಧ ಪುರುಷಾರ್ಥವನ್ನೂ ಸಾಧಿಸಿಕೊಡತಕ್ಕ ಪಾತ್ರ ಸ್ವರೂಪಿಣಿಯು ! ಆದರೆ ಇಂತಹ ನಾರೀಮಣಿಯರನ್ನು ಪಡೆಯುವುದು ಕೇವಲ ದುರ್ಲಭವೇ ಸರಿ. ಏಕೆಂದರೆ ನಮ್ಮ ಅವಲೋಕನಕ್ಕೊಳಪಟ್ಟ ಗೃಹರಾಜ್ಯಗಳಲ್ಲಿ ಮೇಲೆ ಹೇಳಲ್ಪಟ್ಟ ನಾರೀ ಮಣಿಯರು ವಿರಳವಾಗಿರುವುದು ಸಂತಾಪಜನಕವಾಗಿಯೇ ಕಾಣುತ್ತಿರುವುದು." (ವಿಜಯಾದಬ್ಬೆ (ಸಂ) : ೧೯೯೨ ; ೧೧೦.)

ವೈವಾಹಿಕ ಜೀವನದಲ್ಲಿ ಸಂಪೂರ್ಣ ಆದರ್ಶ ರೂಪದ ಇಂತಹ ಸಿದ್ಧಮಾದರಿಗಳು ಸಮಾಜದಲ್ಲಿ ವಾಸ್ತವ ಬದುಕಿನಲ್ಲಿ ಕಾಣುವುದು ದುರ್ಲಭ ಎಂಬುದಾಗಿ ಲೇಖಕಿಯೇ ಹೇಳುತ್ತಾರೆ. ಆದರೆ ಇಲ್ಲಿ ವಿಶ್ಲೇಷಿಸಬೇಕಾದ ಮಹತ್ವದ ಅಂಶವೆಂದರೆ, ಉದಾರವಾದಿ ಸಾಂಸ್ಕೃತಿಕ ಸನ್ನಿವೇಶ 'ಹುಟ್ಟು ಹಾಕಿದ' ಅಥವಾ 'ಅಪೇಕ್ಷಿಸುವ' 'ದಾಂಪತ್ಯದ ಸ್ವರೂಪ' ಯಾವ ಬಗೆಯದ್ದು ಎಂಬುದು. ನಿಗದಿತ ವರ್ಗದಲ್ಲಿನ ಸ್ತ್ರೀ ವಾಚಕರನ್ನೇ ಗೃಹೀತವಾಗಿಟ್ಟುಕೊಂಡು ಮೊದಲ ಕಟ್ಟಿನ ಈ ಇಬ್ಬರು ಲೇಖಕಿಯರು ಕೂಡ 'ವೈವಾಹಿಕ ಜೀವನದೃಷ್ಟಿ'ಯನ್ನು

ಗುರುತಿಸಿರುವುದು ಮುಖ್ಯ ಅಂಶವಾಗಿದೆ. ಈ ಸಂದರ್ಭದಲ್ಲಿ ಕಾದಂಬರಿಗಳ 'ಮಧ್ಯಬಿಂದು' (ಕೇಂದ್ರ ಪಾತ್ರ) ಸ್ತ್ರೀಯೇ ಆಗಿದ್ದರೂ ಅವಳು ಮಾರ್ಗದರ್ಶಕಳೇನೂ ಅಲ್ಲ. ಮನಸಾರೆ ಪತಿಯ ಲಾಭದಲ್ಲಿಯೇ ತಮ್ಮ ಜೀವನದ ಸರ್ವಸ್ವವೂ ಅಡಗಿರುವುದೆಂದು ನಂಬಿ ಬದುಕುವ ಇಂತಹ ಪಾತ್ರಗಳು ಕೊನೆಗೆ ಉದ್ಧಾರವಾಗುವುದು ಪುರುಷರಿಂದಲೇ. ತಿರುಮಲಾಂಬ ಹಾಗೂ ಕಲ್ಯಾಣಮ್ಮ ಅವರು ಯಾವ ಅಂಶಗಳನ್ನು ದಾಂಪತ್ಯದ ಸ್ವರೂಪದ ನೆಲೆಯಲ್ಲಿ ಮಹತ್ವದ್ದು ಎಂಬುದಾಗಿ ಆಯ್ಕೆಮಾಡಿಕೊಂಡಿದ್ದಾರೆ ಎಂಬುದನ್ನು ಗಮನಿಸುವಾಗ 'ಪುರುಷಪೂರಕ ವೈವಾಹಿಕ ಸ್ವರೂಪಕ್ಕೆ' ಕೇಂದ್ರ ಗಮನ ಎಂಬುದು ಸ್ಪಷ್ಟವಾಗುತ್ತದೆ. 'ವೈವಾಹಿಕ ಜೀವನ ಮೌಲ್ಯ'ವೆಂಬುದು ಇಲ್ಲಿ ಹೆಣ್ಣಿನ ನೆಲೆಯಿಂದ ನಿರೂಪಿತಗೊಂಡಿಲ್ಲ. ಬದಲು ಗಂಡಿಗೆ ಪೂರಕವಾಗಿ ರೂಪುಗೊಂಡಿದೆ. ಸ್ತ್ರೀ ಶಿಕ್ಷಣಕ್ಕೆ ಮಹತ್ವವನ್ನು ನೀಡುವ ಹಿನ್ನೆಲೆಯಲ್ಲಿಯೂ ಇದು ಹೆಚ್ಚು ಸುದೃಢವಾದಂತೆ ತೋರುತ್ತದೆ. ವಿರಾಗಿಣಿ ಕಾದಂಬರಿಯಲ್ಲಿನ ನಾಯಕಿ ವಿಧವೆ. ಬಾಲ್ಯದಲ್ಲೇ ತನ್ನ ಗಂಡನನ್ನು, ಅವನ ಸಹಾಚರ್ಯ ಏನೆಂದು ತಿಳಿಯುವ, ಮುನ್ನವೇ ಕಳೆದುಕೊಂಡ ನಭಾ, ಶಿಕ್ಷಣವನ್ನು ಪಡೆದು ತನ್ನ ಬದುಕಿನ ದಾರಿಯನ್ನು ದೀನ ದಲಿತರ ಉದ್ಧಾರಕ್ಕಾಗಿ ಕಳೆಯುತ್ತಾಳೆ. ದಾಂಪತ್ಯವೆಂದರೇನೆಂದೇ ಅರಿಯದ ಅವಳಲ್ಲೂ ಒಂದು ಕಲ್ಪನೆಯಿದೆ. ಪತಿಗೆ ಸೇವಕಳಾಗಿ, ಆಜ್ಞಾರ್ಥಿಯಾಗಿ, ತನ್ನತನವನ್ನು ನೀಗಿಸಿಕೊಂಡು ಬದುಕುವುದೇ 'ಸತಿಧರ್ಮ'ವೆಂದು ಅವಳ ತಿಳುವಳಿಕೆ. ಇದನ್ನೇ ಅವಳು ಸಮೂಹದ ಸ್ತ್ರೀಯರಿಗೂ ಮನವರಿಕೆ ಮಾಡುವ ಪ್ರಯತ್ನ ಮಾಡುತ್ತಾಳೆ.

> "ವಿರಾ :- ತುಂಗ! ಈ ಮಾತು ಹೆಂಗಸರ ಬಾಯಿಯಿಂದ ಎಂದೂ ಬರಬಾರದು. ಲೋಕದಲ್ಲಿ ತಾಯಿ, ತಂದೆ, ಅಕ್ಕ, ಅಣ್ಣ, ತಂಗಿ, ತಮ್ಮ, ಮಾವ, ಭಾವ ಮುಂತಾದ ನೆಂಟರಿಷ್ಟರು ಗಳಿಂದಾಗುವ ಸುಖಕ್ಕೆ ಎಲ್ಲೆಯುಂಟು. ಪತಿಯ ವಿಚಾರವು ಹಾಗಲ್ಲ. ಜೀವಿಸಿರುವಾಗಲೂ ಸತ್ತ ಮೇಲೆಯೂ ಆತನಿಂದ ದೊರೆಕೊಳ್ಳಬಹುದಾದ ಸುಖಾನಂದವೇ ನಿತ್ಯಾನಂದವೆನಿಸುವುದು! ಅದೇ ಅನಂತವಾದುದು. ಸತಿಯ ಸರ್ವಸ್ವವೂ ಅವಳ ಕೈ ಹಿಡಿದ ಸ್ವಾಮಿಯೇ ಅಲ್ಲದೆ ಬೇರಿಲ್ಲ. ಅಂತಹ ಸತೀ ಜೀವನಸಾರ ಸರ್ವಸ್ವಕ್ಕೆ ತಮ್ಮ ಭೋಗ ಸುಖಸಂಪದವೆನಿಸುವ ತನುಮನ ಧನಗಳನ್ನು ಸಮರ್ಪಿಸಿಯೂ ಆತನ ಪರೋಕ್ಷದಲ್ಲಿ ಆತ್ಮನಿಗೆ ಅಹಿತವನ್ನುಂಟು ಮಾಡುವ ದುರ್ವಿಷಯಕ್ಕೆ ಗಮನಿಸಬಹುದೇ". (ವಿಜಯಾದಬ್ಬೆ (ಸಂ) : ೧೯೮೨; ೧೨೮.)

ವಿರಾಗಿಣಿಯ ಈ ಮಾತುಗಳು ಆ ಕಾಲದ ಸಾಂಸ್ಕೃತಿಕ ಸಂದರ್ಭದಲ್ಲಿ ಹುಟ್ಟುಹಾಕಿದ ದಾಂಪತ್ಯದ ಮೌಲ್ಯಗಳಾಗಿವೆ. ವಸಾಹತುಶಾಹಿ ಸಂಸ್ಕೃತಿಗೆ ಪರ್ಯಾಯವಾಗಿ ಕಟ್ಟಲಾದ ದೇಸಿ ಸಂಸ್ಕೃತಿಯು 'ವಿಧವೆಯ ಪಾವಿತ್ರ್ಯ'ಕ್ಕೆ ಅಪಾರ ಮನ್ನಣೆ ನೀಡಿದೆ. ಹಾಗೆಯೇ 'ಸತೀತ್ವ'ದ ಪ್ರತಿಮೆಗಳನ್ನು ಕೂಡ ವೈಭವೀಕರಿಸಿದೆ. ಪುರುಷನ ಶ್ರೇಯಸ್ಸಿಗೆ, ಆತನ ಬದುಕಿನ ಯಶಸ್ಸಿಗೆ ಆತನಿಗೆ ದೊರೆತ 'ಸಾಧ್ವಿಸತಿ'ಯೇ ಕಾರಣ ಎಂಬುದಾಗಿ ನಿರ್ವಚಿಸುವ ಕೃತಿಯ ಎಲ್ಲಾ ಚರಿತ್ರೆಯು ಕಡ್ಡಾಯವಾಗಿ 'ಹೆಣ್ಣು ಗಂಡಿಗೆ ಅಧೀನ' ಎಂಬುದನ್ನು ಮಾನ್ಯಮಾಡುತ್ತದೆ. ಹೊರ ಲೋಕದ ಸತ್ಯಗಳು ಗಾಢವಾಗಿ ಕಣ್ಮರೆಗೊಳ್ಳುವುದು ಕೂಡ ಕೃತಿಯ ಇಂತಹ ಪಾತ್ರಗಳ ಒಳಬಾಳಿನಲ್ಲಿಯೇ ಆಗಿದೆ. ಕೃತಿಯ ಅನುಭವದ ಚೌಕಟ್ಟಿನೊಳಗೆ ತಿರುಮಲಾಂಬ ಹಾಗೂ ಕಲ್ಯಾಣಮ್ಮನವರ ಸಾಂಸ್ಕೃತಿಕ ನೆಲೆಯನ್ನು ವಿವೇಚಿಸುವುದರಿಂದಲೂ 'ಪುರುಷ ಸಾಕ್ಷಿ ಪ್ರಜ್ಞೆ' ಇವರ

ಕಾದಂಬರಿಗಳಲ್ಲಿ ಹೇಗೆ ಗೋಚರವಾಗುತ್ತದೆ ಎಂಬುದನ್ನು ತಿಳಿಯುವುದು ಸಾಧ್ಯವಿದೆ. ಈ ಕಾರಣದಿಂದ **ನಭಾ, ವಿರಾಗಿಣಿ, ಮಾತೃನಂದಿನಿ, ಮಣಿಮಾಲಾ, ಗಿರಿಜಾಬಾಯಿ** ಹಾಗೂ **ಪ್ರಿಯಂವದಾ, ನಿರ್ಭಾಗ್ಯವನಿತೆ** ಈ ಎಲ್ಲ ಕಾದಂಬರಿಗಳ ಕೇಂದ್ರ ಪಾತ್ರಗಳು ಉದ್ಧಾರವಾಗುವುದು ಪುರುಷರಿಂದ. ಒಂದರ್ಥದಲ್ಲಿ ಅವರವರ ಗಂಡಂದಿರಿಂದ. ಇಂತಹ ಏಕಮುಖ ದಾಂಪತ್ಯದ ವೈಭವೀಕರಣ ಚಿತ್ರಣದ ಉದ್ದೇಶದ ಕಡೆಗೆ ಗಮನ ಹರಿಸುವುದಾದರೆ, ಕೆಳಗಿನ ಅಂಶಗಳು ಸ್ಪಷ್ಟವಾಗುತ್ತವೆ. ೧)ಹಿಂದೂ ಸಂಸ್ಕೃತಿಯ ಹಿರಿಮೆಯನ್ನು ಸಾರುವುದು. ೨)ಅನ್ಯ ಸಂಸ್ಕೃತಿಯಿಂದ ಪ್ರಭಾವಿತಗೊಂಡ ದೇಸಿ ಸಂಸ್ಕೃತಿಯನ್ನು ಪರಿಷ್ಕರಿಸುವುದು. ೩) ಪಾಶ್ಚಾತ್ಯ ಶಿಕ್ಷಣದ ಅಂಗವಾಗಿ ಚಾಲ್ತಿಗೆ ಬಂದ ಸ್ತ್ರೀ ಶಿಕ್ಷಣದ ಮೌಲ್ಯಗಳನ್ನು ದೇಸಿ ಸಂಸ್ಕೃತಿಯ ನೆಲೆಯಲ್ಲಿ ನಿರ್ದಿಷ್ಟಪಡಿಸುವುದು. ಹಾಗೂ ೪) ಪುರುಷಕೇಂದ್ರಿತ ದಾಂಪತ್ಯ ಸಂರಚನೆಯನ್ನು ಸ್ಥಿರೀಕರಿಸುವುದು. ವಸಾಹತುಶಾಹಿ ರಾಜಕಾರಣದ ವರ್ತುಲವು ಸಮಾಜದ ಸಮಸ್ತ ಆಯಾಮಗಳನ್ನು ಪ್ರವೇಶಮಾಡಿದ ಹಿನ್ನೆಲೆಯಲ್ಲಿ ಭಾರತೀಯ ಸಮಾಜದ ವಿವಾಹ ಮತ್ತು ಅದಕ್ಕೆ ಸಂಬಂಧಿಸಿದ ಅಂಗಗಳ ಆಮೂಲಾಗ್ರ ಪರಿಷ್ಕರಣಕ್ಕೆ ತೊಡಗಿದವು. ಕಲ್ಯಾಣಮ್ಮನವರ ನಿರ್ಭಾಗ್ಯವನಿತೆಯಲ್ಲಿ ಹಿಂದೂ ಸುಧಾರಣಾ ವೇದಿಕೆಗಳ ಕಾರ್ಯಾಚರಣೆಯ ದೀರ್ಘಮಾಹಿತಿ ಸುಂದರೇಶನ ಭಾಷಣಗಳ ಮೂಲಕ ಲಭಿಸುತ್ತದೆ. (ಸುಮಿತ್ರಾ ಬಾಯಿ (ಸಂ) : ೧೯೯೨; ೩೩೫.. ೩೪೬.) ಸ್ತ್ರೀ ಶಿಕ್ಷಣಕ್ಕೆ ಮಹತ್ವ ಲಭಿಸಿದ ಪರಿಣಾಮದಿಂದಾಗಿ ಕೂಡ ಶಿಕ್ಷಣದ ಮೂಲಕವಾಗಿ 'ಪರಿಪೂರ್ಣ ಹೆಂಡತಿ'ಯಾಗುವ 'ಪರಿಪೂರ್ಣತಾಯಿ'ಯಾಗುವ ಮೌಲ್ಯಗಳು ರಚನೆಗೊಂಡವು.

> "ಪಾಠಶಾಲೆಯ ಸಂಗಡವೇ ಮರೆಯುವ ವಿದ್ಯೆಯಾದ ಭೂಗೋಳ, ಚರಿತ್ರೆ ಮೊದಲಾದವುಗಳಿಂದೇನು ಪ್ರಯೋಜನ. ಅಭ್ಯಾಸಕ್ಕೆ ತರುವ ವಿದ್ಯೆಯು ಬೇಕು. ಆರಂಭ ದಿಂದಲೂ ನಮ್ಮ ಸ್ತ್ರೀಯರನ್ನು ಸುಶಿಕ್ಷಾ ರೂಪವಾದ ವಿದ್ಯೆಯಿಂದ ಪ್ರೋತ್ಸಾಹಿಸಿದ್ದರೆ ನಮ್ಮೀನಾಡಿನಲ್ಲಿ ಶತಮಾನಾದಿಗಳಿಂದ ಪರಸ್ಪರ ಸನ್ಮೈತ್ರಿಯೂ ಸಹಜ ಸೌಹಾರ್ದಭಾವವೂ ಸದಾಚಾರನ ಸ್ಥಿರರಾಜ್ಯಭಾರದಿಂದ ದುರಾಚಾರನ ನಿಗ್ರಹವೂ ಸಹಜವಾಗಿಯೇ ಆಗುತ್ತಿದ್ದಿತು. ಈಗಲಾದರೂ ಸುಶಿಕ್ಷೆಯು ಹೆಚ್ಚುವಂತೆ ಮಾಡಿ ಸ್ತ್ರೀಯರಿಗೆ ಉಚಿತ ವಿದ್ಯಾಭ್ಯಾಸವನ್ನು ಮಾಡಿಸಿ, ದೇಶವು ಅಭಿವೃದ್ಧಿಗೆ ಬರುವಂತೆ ಪ್ರಯತ್ನಿಸುವುದು ಶ್ರೇಯಸ್ಕರವು. ಈಗಳಿನ ವಿದ್ಯೆಯ ಸ್ವಚ್ಛಂದತೆಯ ದೆಸೆಯಿಂದ ಸತ್ಪುರುಷರ ಸಮಾಜವೂ ಅಪವಾದ ನೆಲದಿಂದ ದಹಿಸಿಹೋಗುವ ದುಷ್ಕಾಲವೂ ಬಂದೊದಗಿರುವುದು. ಪರಿಣಾಮವೀರೀತಿಯಾಗಿರುವುದ ರಿಂದಲೇ ಸ್ತ್ರೀ ವಿದ್ಯಾಭ್ಯಾಸಕ್ಕೆ ನಿಷೇಧವುಂಟಾಗಿರುವುದು." (ವಿಜಯಾದಬ್ಬೆ (ಸಂ) :೧೯೯೨; ೬೧.)

ನಭಾ ಕಾದಂಬರಿಯ ನಾಯಕಿಯ ಈ ನಿಲುವು ವಾಸ್ತವದಲ್ಲಿ ತಿರುಮಲಾಂಬ ಅವರದ್ದೂ ಆಗಿದೆ. ಶಿಕ್ಷಣ ಎನ್ನುವುದು ಸ್ತ್ರೀಯರಲ್ಲಿ ಪರಂಪರೆಗೆ ಪೂರಕವಾಗಿರಬೇಕೆ ಹೊರತು ಅದನ್ನು ತೊರೆದು ಅಲ್ಲ ಎನ್ನುವುದು ಧೋರಣೆ. ಶಿಕ್ಷಿತ ಸ್ತ್ರೀ ಕುಲ ಹಿಂದುತ್ವವನ್ನು ಪ್ರತಿಷ್ಠಾಪಿಸಿಕೊಳ್ಳಬೇಕೆಂಬುದೇ ಆಗಿದೆ. ಅಲ್ಲದೆ, 'ಆರ್ಯಕುಲಾಂಗನೆ' ಆಗಿರುವುದೇ 'ಹೆಂಡತಿ'ಯಾದವಳ ಮೂಲ ಗುಣಲಕ್ಷಣವಾಗಿದೆ. ಆದುದರಿಂದಲೇ ಈ ಲೇಖಕಿಯರ ಕಾದಂಬರಿಗಳ ಎಲ್ಲಾ ನಾಯಕಿಯರೂ ಸುಶಿಕ್ಷಿತ ಆರ್ಯಕುಲಾಂಗನೆಯರೇ ಆಗಿದ್ದಾರೆ.

ಸ್ತ್ರೀಯರಿಗೆ ಪುರುಷರ ಹೊರತಾಗಿ ಪ್ರತ್ಯೇಕವಾದ ಅಸ್ತಿತ್ವವಿದೆ ಎಂಬುದನ್ನೇ ನಿರಾಕರಿಸುವ ಸನಾತನ ಹಿಂದೂ ಧರ್ಮದಲ್ಲಿ ವಿವಾಹ - ಕುಟುಂಬಕ್ಕೆ ಸಂಬಂಧಿಸಿದ ಎಲ್ಲಾ ಆಯಾಮಗಳು ಪುರುಷ ಮೂಲೀಯವೇ ಆಗಿದೆ. ಹಿಂದೂ ಸಂಸ್ಕೃತಿಯನ್ನು ಶಕ್ತವಾಗಿ ಪ್ರತಿಬಿಂಬಿಸುವ ಮೊದಲ ಕಟ್ಟಿನ ಲೇಖಕಿಯರು 'ದಾಂಪತ್ಯದ'ದ ಕುರಿತು ಪಿತೃಪ್ರಧಾನ ಮೌಲ್ಯಗಳನ್ನೇ ಪ್ರತಿಪಾದಿಸುತ್ತಾರೆ. ವಿಜಯಾದಬ್ಬೆ ಗುರುತಿಸಿರುವಂತೆ ತಿರುಮಲಾಂಬ ಅವರ ಮೊದಲ ಕಾದಂಬರಿ 'ಸುಶೀಲೆ'ಯನ್ನು ಲೇಖಕಿ ಓದುಗರಿಗೆ ಅರ್ಪಿಸಿರುವುದು ಕೂಡ ಪಿತೃಪ್ರಧಾನ ಮೌಲ್ಯಗಳಿಗೆ ಬದ್ಧವಾಗಿಯೇ ಆಗಿದೆ.

> "ಪತಿದೇವಾ ಪರಂದೈವಂ ಪತಿ ಸೇವಾ ಕುಲವಧೂಶ್ಯರಣಮ್ ಪತ್ಯುರ್ನಾನ್ಯತ್ ಪರಮಿಹ ಪತಿಪದಮೇಕ ಸ್ಮರೇನಿತ್ಯಂ ಎಂಬ ಶ್ಲೋಕವನ್ನು ಉಧೃತಗೊಳಿಸುತ್ತಾ 'ಆರಾಧ್ಯದೇವ'ನೂ 'ಅಂತರಂಗವಾಸಿ'ಯೂ ಆದ ತಮ್ಮ ಸ್ವಾಮಿಯಚರಣಾರವಿಂದದಲ್ಲಿ ಸುಶೀಲೆ ಯನ್ನು ಲೇಖಕಿ ಸಮರ್ಪಿಸಿದ್ದಾರೆ. ಕಾದಂಬರಿಯ ಪ್ರಬಂಧ ಧ್ವನಿಯೂ ಇದೆ ಆಗಿದೆ." (ವಿಜಯಾ ದಬ್ಬೇ (ಸಂ): ೧೯೯೨; ೨೫)

ಪುರುಷ ಪ್ರಧಾನ ಸಮಾಜವು ಸೃಷ್ಟಿಸಿದ ಮೌಲ್ಯಗಳು ಸ್ತ್ರೀಯರ ತಲೆಯನ್ನು ಹೊಕ್ಕು ಅಲ್ಲಿ ಎಷ್ಟು ಭದ್ರವಾಗಿ ನೆಲೆಯೂರಿದೆ ಎಂಬುದಕ್ಕೆ ತಿರುಮಲಾಂಬ ಅವರು ಚಿತ್ರಿಸುವ 'ದಾಂಪತ್ಯದ ಸ್ವರೂಪ'ವೇ ಆಧಾರವಾಗಿದೆ. ಅವರ ಕಾದಂಬರಿಗಳ ಈ ನಿಲುವು ಬದಲಾವಣೆಯಲ್ಲಿ ಆಸಕ್ತರಾದವರ ವಿರೋಧವನ್ನು ಗಳಿಸಿದಂತೆ ಸಾಂಪ್ರದಾಯಸ್ಥರ ಪುರಸ್ಕಾರವನ್ನೂ ಗಳಿಸಿತ್ತು ಎಂಬುದಾಗಿ ಜೆ.ಎಸ್. ಚಕ್ರವರ್ತಿ ಎಂಬವರು ತಿರುಮಲಾಂಬ ಅವರಿಗೆ ಬರೆದ ಪತ್ರದ ಮೂಲಕ ವ್ಯಕ್ತವಾಗುತ್ತದೆ.

> " I read your last book Nabha with very great interest and was much impressed with the excellence of its style and the nobleness of the thought expounded "
> (ವಿಜಯಾದಬ್ಬೆ (ಸಂ) :೧೯೯೨; ೩೨.)

> "ಸಾಂಪ್ರದಾಯಿಕ ಆವರಣದಲ್ಲಿ ಹಿತಕರವಾಗಿ ಕಾಣುವ ಮೌಲ್ಯಗಳನ್ನು ತಿರುಮಲಾಂಬರ ಕಾದಂಬರಿಗಳು ಪ್ರತಿಪಾದಿಸಿದ್ದರಿಂದಲೇ ಆ ಕಾದಂಬರಿಗಳನ್ನು ಬೆಂಬಲಿಸಿದ್ದುಂಟು: ಮಾತೃನಂದಿನಿ, ವಿರಾಗಿಣಿ, ನಭಾ, ವಿದ್ಯುಲ್ಲತೆಗಳಂತಹ ಇವರ ಕೆಲವು ಕೃತಿಗಳನ್ನಾದರೂ ಪ್ರತಿ ಕನ್ನಡಿಗನು ತನ್ನ ಮನೆಯಲ್ಲಿಡುವನೆಂದು ನಾವು ನಂಬುವೆವು. ಯಾಕೆಂದರೆ ಗೃಹಸ್ಥರು ತಮ್ಮ ಗೃಹಿಣಿಯರಿಗೆ ತೋರಿಸತಕ್ಕ ಪುಸ್ತಕಗಳು ಇವಾಗಿವೆ. ಎಂದು ಆಗ ಜಯ ಕರ್ನಾಟಕ ಪತ್ರಿಕೆಯು ಬರೆಯಿತು." (ವಿಜಯಾದಬ್ಬೆ (ಸಂ) : ೧೯೯೨ ;೩೨.)

ಆದರ್ಶ ವೈವಾಹಿಕ ಸ್ವರೂಪದ ಚಿತ್ರಣದಲ್ಲಿ ತಿರುಮಲಾಂಬ ಹಾಗೂ ಆರ್ ಕಲ್ಯಾಣಮ್ಮನವರಲ್ಲಿ ಹೆಚ್ಚಿನ ಭಿನ್ನತೆಯನ್ನು ಗುರುತಿಸುವುದು ಸಾಧ್ಯವಿಲ್ಲ. ಕಾರಣ,ಆರ್ ಕಲ್ಯಾಣಮ್ಮನವರ ಪ್ರಿಯಂವದಾ, ನಿರ್ಭಾಗ್ಯವನಿತೆಯ ದಾಂಪತ್ಯದ ಸ್ವರೂಪದ ಕೇಂದ್ರ ಪುರುಷ ಸಂರಚನೆಯ ಸ್ಥಿರೀಕರಣವೇ ಆಗಿದೆ.

**ವಿರುದ್ಧ ಮಾದರಿಯ ತೆಳು ರಚನೆಯ ವೈವಾಹಿಕ ಸ್ವರೂಪ** : ವಿರುದ್ಧ ಮಾದರಿಯ ತೆಳು ರಚನೆಯ ವೈವಾಹಿಕ ಸ್ವರೂಪದಲ್ಲಿ ಕಪ್ಪು ಬಿಳುಪಿನ ಪಾತ್ರ ರಚನೆಗಳೇ ಈ ಎರಡೂ ಲೇಖಕಿಯರಲ್ಲಿ ಪ್ರಧಾನವಾಗಿ ಕಾಣುತ್ತವೆ. ತಿರುಮಲಾಂಬ ಅವರ ನಭಾ ಕಾದಂಬರಿಯ ಶರಾವತಿ- ಶಂಕರನಾಥ ವಿರಾಗಿಣಿಯ

ರಘುನಾಥ - ಕೃಷ್ಣವೇಣಿ, ಚಂದ್ರಭಾಗ- ಮಕರಂದ, ಗಿರಿಜಾಬಾಯಿಯ ಯೋಗಾನಂದ ಮತ್ತು ಆತನ ಮೊದಲ ಪತ್ನಿ ಸತ್ಯಭಾಮ. ಇವರ ವೈವಾಹಿಕ ಸ್ವರೂಪ ಅವಗುಣಗಳನ್ನು ಹೊಂದಿರುವ ನೆಮ್ಮದಿ, ಸುಖ ಕಾಣದ ದಾಂಪತ್ಯ ರಚನೆಗಳಾಗಿವೆ. ಗಂಡ ಒಳ್ಳೆಯವನಾಗಿದ್ದರೆ, ಹೆಂಡತಿ ಕೆಟ್ಟವಳು, ಹೆಂಡತಿ ಒಳ್ಳೆಯವಳಾಗಿದ್ದರೆ ಗಂಡ ಕೆಟ್ಟವನು. ಈ ಅಸಮತೋಲ ದಾಂಪತ್ಯವು ತಮ್ಮ ಜೀವನವನ್ನು ಹಾಳುಮಾಡುವುದಲ್ಲದೆ ಕೌಟುಂಬಿಕ ನೆಮ್ಮದಿಗೆ, ಸುಖಕ್ಕೆ ಭಂಗತರುವಂತಹುದಾಗಿದೆ. ಇಂತಹ ವೈವಾಹಿಕ ಬದುಕಿನಲ್ಲಿ ಸ್ತ್ರೀಯರ ಮನೆಯೊಳಗಿನ ಬದುಕು ಕೂಡ ಸಂಘರ್ಷಮಯವಾಗಿದೆ. ವಿರಾಗಿಣಿ ಕಾದಂಬರಿಯಲ್ಲಿ ಕಾಣುವ ಕೃಷ್ಣವೇಣಿ, ಚಂದ್ರಭಾಗೆಯರ ಬದುಕು ಇದೇ ತೆರನದ್ದು. ಗಂಡನಿಂದ ಮಾನಸಿಕ ಸುಖ ಕಾಣದ ದಾಂಪತ್ಯ ಬದುಕನ್ನು ನೀರಸಗೊಳಿಸುತ್ತದೆ. ಇಲ್ಲಿ ಮನೆ ಎಂದರೆ, ಆಶ್ರಯ, ಆಧಾರ. ಗಂಡನೇ ಆಶ್ರಯದಾತ. ಈ ಅರ್ಥ ಸಂದರ್ಭಗಳಲ್ಲಿ ಸ್ತ್ರೀಯ ಅಸ್ತಿತ್ವ ಒಂದು ಯಂತ್ರವೆಂಬಂತೆ ಪ್ರಕಟಗೊಳ್ಳುತ್ತದೆ. ತಿರುಮಲಾಂಬ ಹಾಗೂ ಕಲ್ಯಾಣಮ್ಮನವರು ಚಿತ್ರಿಸುವ ತೆಳುರಚನೆಯ ವೈವಾಹಿಕ ಸಂಬಂಧಗಳು ಪೂರ್ವದ ದಾಸ್ಯವನ್ನು ಕಿತ್ತೊಗೆಯಲಾಗದ ಮತ್ತು ಹೊಸ ಜವಾಬ್ದಾರಿಗಳನ್ನು ರೂಢಿಗತಗೊಳಿಸಿಕೊಳ್ಳಲಾಗದ ರಚನೆಗಳಾಗಿವೆ. ಸ್ತ್ರೀ-ಪುರುಷ ಸಂಬಂಧದಲ್ಲಿನ ಮೂಲರೂಪದ ಈ ಅಸಮಾನತೆ, ಪುರುಷನ ವಿಷಯದಲ್ಲಿ ಸ್ತ್ರೀಯ ಪಾರಂಪರಿಕ ಅವಲಂಬನೆ, ತ್ಯಾಗ, ಸಮರ್ಪಣೆಗಳ ಭೂಮಿಕೆಯದ್ದೇ ಆಗಿದೆ. ಆದರೆ ಇಂತಹ ದಾಂಪತ್ಯವನ್ನು ಗಮನಿಸಿದರೆ, (ಶರಾವತಿ - ಶಂಕರಾನಂದ, ಕೃಷ್ಣವೇಣಿ - ರಘುನಾಥ ; ಚಂದ್ರಭಾಗೆ - ಮಕರಂದ, ಪ್ರಿಯಂವದಾ- ಸತ್ಯೇಂದ್ರ, ಸತೀಶ - ಸ್ವರ್ಣ) ಇಲ್ಲಿ ಸಾಂಸಾರಿಕ ಜವಾಬ್ದಾರಿಯಂಥ ಸ್ಥಿರೀಕೃತ ಪ್ರಕ್ರಿಯೆಯಲ್ಲಿನ ನಿರ್ಣಯವು ಸ್ತ್ರೀಯ ಕೈಯಲ್ಲಿಯೇ ಇದೆ. ಹಾಗೆ ಭಾವಿಸುವಾಗ ಸಂಸಾರ ನಿರ್ವಹಣೆಯ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯ ಪುರುಷರಲ್ಲೇ ಇದೆ ಎನ್ನುವ ಅಂಶವು ಕೂಡ ಮುಖ್ಯವಾಗುತ್ತದೆ.

### ೩.೨.೩. ಮೊದಲ ಕಟ್ಟಿನ ಕಾದಂಬರಿಗಳು: ಕೌಟುಂಬಿಕ ಸ್ವರೂಪ.

ತಿರುಮಲಾಂಬ ಹಾಗೂ ಕಲ್ಯಾಣಮ್ಮನವರ ಕಾದಂಬರಿಗಳ ರಚನಾತ್ಮಕ ಮೂಲ ಮಾದರಿಯೇ ಕುಟುಂಬ ಕೇಂದ್ರವಾದದ್ದು. ಕಾದಂಬರಿಯ ಎಲ್ಲ ವಿದ್ಯಮಾನಗಳು, ಎಲ್ಲ ವಿವರಗಳು ತೆರೆದುಕೊಳ್ಳುವುದು 'ಕುಟುಂಬ ಮೂಲ'ದಿಂದ ವ್ಯಕ್ತಿಗಳ ಬದುಕಿನ ಸಫಲತೆ ಮತ್ತು ವಿಫಲತೆಯನ್ನು ಗುರುತಿಸುವಲ್ಲಿ ಕುಟುಂಬದ ಪಾತ್ರ ಅತ್ಯಂತ ಮಹತ್ವದ್ದು. ಕುಟುಂಬ ರೂಪುಗೊಳ್ಳುವುದೇ ರಕ್ತಸಂಬಂಧ, ವೈವಾಹಿಕ ಸಂಬಂಧಗಳಿಂದ. ಆದುದರಿಂದ ಈ ಸಂಬಂಧಗಳು ಹೆಚ್ಚು ಕಡಿಮೆ ಶಾಶ್ವತ ಸಂಬಂಧಗಳಾಗಿರುತ್ತವೆ. ಮೊದಲಕಟ್ಟಿನ ಕಾದಂಬರಿಗಳ ಕೌಟುಂಬಿಕ ಸ್ವರೂಪವನ್ನು ಅಧ್ಯಯನ ಮಾಡುವಾಗ 'ಕೂಡು ಕುಟುಂಬ' ಹಾಗೂ 'ಸರಳ ಕುಟುಂಬ' ಈ ಎರಡು ಮಾದರಿಗಳು ಕಾಣಸಿಗುತ್ತವೆ.

**ಕೂಡು ಕಟುಂಬ :**

ಮೊದಲಕಟ್ಟಿನ ಕಾದಂಬರಿಗಳು ಬಿಂಬಿಸುವ 'ಕೂಡು ಕುಟುಂಬದ ಸ್ವರೂಪ' ಬಹಳ ಸಂಕೀರ್ಣವಾದದ್ದು. ಬದುಕಿನ ಅವಿಭಾಜ್ಯ ಅಂಗವಾಗಿರುವ ಈ ಕೌಟುಂಬಿಕ ಸ್ವರೂಪಗಳು ಆಯಾ ಕುಟುಂಬ ಸದಸ್ಯರಿಗೆ ರಕ್ತಗತವಾದ ಅಂಶವಾಗಿಯೂ ವ್ಯಕ್ತವಾಗುತ್ತದೆ. ರಕ್ತಗತವಾದುದ್ದು ಎಂದು ಹೇಳುವ ಕಾರಣವೆಂದರೆ,

ಅದು ಅತ್ಯಂತ ಸಹಜವಾದ ಅಂಶ ಎಂಬುದೇ ಆಗಿದೆ. ಕೂಡುಕುಟುಂಬದ ರಚನೆಗಳು ಆಯಾಯ ಸಾಂಸ್ಕೃತಿಕ ಸಂದರ್ಭದಲ್ಲಿ ಅದರದೇ ಆದ ಅನನ್ಯತೆಯನ್ನು ಬಿಂಬಿಸುತ್ತವೆ. ಈ ಅನನ್ಯತೆಯು ಆಯಾಯ ಸಂದರ್ಭದ ಕೌಟುಂಬಿಕ ಸ್ವರೂಪ, ಅದು ಎದುರಿಸುವ ಸಂಘರ್ಷ, ಸಮಸ್ಯೆಗಳನ್ನು ನಿರ್ವಹಿಸುವ ರೀತಿ, ಕೈಗೊಳ್ಳುವ ತೀರ್ಮಾನಗಳ ನೆಲೆಯಿಂದ ವ್ಯಕ್ತವಾಗುತ್ತದೆ. ಸಮಾಜದ ಮೂಲಭೂತ ಘಟಕವಾಗಿ 'ಕುಟುಂಬ'ವನ್ನು ಪರಿಗಣಿಸುವ ನೆಲೆಯು 'ಕೂಡು ಕುಟಂಬದ ಸಾಂಸ್ಕೃತಿಕ ಅನನ್ಯತೆ'ಯನ್ನು ಕಂಡುಕೊಳ್ಳಲು ಸಹಕಾರಿಯಾಗುತ್ತದೆ. ಕೂಡು ಕುಟುಂಬದಲ್ಲಿ ಏಳುವ ಸಮಸ್ಯೆಗಳ ಪರಿಹಾರ ಪುರುಷ ಕೇಂದ್ರಿತವಾಗಿಯೇ ಇರುತ್ತದೆ. ಕೂಡು ಕುಟುಂಬದಲ್ಲಿ ಯಾವುದೇ ಪ್ರಶ್ನೆಗಳಿರಬಹುದು, ವಿವಾಹ, ವೈಧವ್ಯ, ಸಾವು, ಹುಟ್ಟು ಈ ಕುರಿತ ನಂಬಿಕೆ - ಆಚರಣೆ, ನಿರ್ಣಯಗಳೆಲ್ಲವೂ ಪುರುಷರ ಅಥವಾ ಅವರ ಅಧಿಕಾರವನ್ನು ಮಾನ್ಯಮಾಡುವ ಹೆಂಗಸರದ್ದಾಗಿರುತ್ತದೆ. ಮೊದಲಕಟ್ಟಿನ ಕಾದಂಬರಿಗಳು ಕೂಡ ಇದನ್ನೇ ಪ್ರತಿನಿಧಿಸುತ್ತವೆ. **ನಭಾ, ವಿರಾಗಿಣಿ, ಮಾತೃನಂದಿನಿ, ಗಿರಿಜಾಬಾಯಿ, ಮಣಿಮಾಲಾ, ಪ್ರಿಯಂವದಾ, ನಿರ್ಭಾಗ್ಯವನಿತೆ,** ಈ ಕಾದಂಬರಿಗಳ ಕುಟುಂಬಗಳು ಕೂಡು ಕುಟುಂಬದ ಸ್ವರೂಪದವು. ಇವು ಪುರೋಹಿತಶಾಹಿ, ಪುರುಷಕೇಂದ್ರಿತ ನೆಲೆಯನ್ನೇ ಹೊಂದಿವೆ. ನಭಾಳ ವೈಧವ್ಯ -ಹಾಗೂ ಅವಳು ವಿರಾಗಿಣಿಯಾಗಿ ಬದುಕು ಸಾಗಿಸುವ ತೀರ್ಮಾನಗಳು ಕೂಡು ಕುಟುಂಬದ ಜಟಿಲ ಸ್ವರೂಪಕ್ಕೆ ಉತ್ತಮ ಉದಾಹರಣೆಯಾಗಿದೆ. ಬಾಲ ವಿಧವೆಯಾಗಿರುವ ನಭಾ ಮರು ವಿವಾಹದ ಅವಕಾಶವನ್ನೆಲ್ಲಾ ಮುಕ್ತವಾಗಿ ನಿರಾಕರಿಸುತ್ತಾಳೆ. ಇದು ಅವಳ ತೀರ್ಮಾನವಾಗಿ ಶಕ್ತವಾಗಿ ಬಿಂಬಿತಗೊಂಡಿದ್ದರೂ ಕೂಡ ಆ ತೀರ್ಮಾನದ ಹಿಂದೆ ಅವಳು ಬದುಕುವ ಕುಟುಂಬದ ಆವರಣ ಬೀರಿರಬಹುದಾದ ಪರಿಣಾಮ ಪ್ರಧಾನವಾಗಿದೆ. 'ವಿರಾಗಿಣಿ'ಯಾಗಿ ಅವಳು ಬದುಕನ್ನು ಎದುರಿಸುವ ರೀತಿ ಪುರೋಹಿತಶಾಹಿ ಕುಟುಂಬ ವ್ಯವಸ್ಥೆ ವಿಧವೆಯೊಬ್ಬಳನ್ನು ಬಾಳಿಸುವ ವಿಚಾರಗಳು ಕೂಡ ಇಲ್ಲಿ ಮುಖ್ಯ. ವಿರಾಗಿಣಿಗೆ ಆಶ್ರಯ ನೀಡಿದ ರಘುನಾಥನ ತಾಯಿ ಲಕ್ಷ್ಮೀದೇವಮ್ಮ ಮತ್ತು ಹೆಂಡತಿ ಕೃಷ್ಣವೇಣಿ ವಿರಾಗಿಣಿ ಅವರ ಮನೆಯಲ್ಲಿ ಇರುವುದರ ಬಗ್ಗೆ ತೀವ್ರವಾಗಿ ಆಕ್ಷೇಪ ವ್ಯಕ್ತಪಡಿಸುತ್ತಾರೆ.

> "ವಿರಾಗಿಣಿಯ ನಡತೆ ಸರಿಯಾಗಿಲ್ಲವೆಂದೂ ಇವಳು ಸ್ವೇಚ್ಛಾಚಾರಿಣಿಯೆಂದೂ ಇವಳ ಅಕಾರ್ಯದಿಂದಲೇ ತಾನು ಪಿಶಾಚವಾಗಿರುವೆನೆಂದೂ ಇವಳ ಗಂಡನು ಹೇಳಿರುವನು."
> (ವಿಜಯಾದಬ್ಬೆ : ೧೯೯೨ ; ೨೦೪)

ಈ ಬಗೆಯಲ್ಲಿ ಅವಳ ಚಾರಿತ್ರ್ಯದ ಕುರಿತು ಕೆಟ್ಟ ರೀತಿಯಲ್ಲಿ ಮಾತನಾಡುತ್ತಿರುತ್ತಾರೆ. ಆದರೆ, ರಘುನಾಥನಿಗೆ ವಿರಾಗಿಣಿಯ 'ಪವಿತ್ರಜೀವನ'ದ ಪೂರ್ಣ ಅರಿವಿದೆ. ಆದುದರಿಂದಲೇ ಆತ ಅವಳ ಪರವಾಗಿ ಅವರಲ್ಲಿ ಪ್ರತಿಕ್ರಿಯಿಸುತ್ತಾನೆ.

> "ರಘು (ವ್ಯಗ್ರವಾಗಿ, ತಾಯಕಡೆ ತಿರುಗಿ) ಅಮ್ಮ ನಿಮ್ಮನ್ನು ಈವರೆಗೂ ಮಾತೃಭಾವನೆಯಿಂದ ಮನ್ನಿಸಿದ್ದೆನು. ಆದರೆ ನಿಮ್ಮ ದುರ್ಭಾಷೆಗಳು ನನ್ನ ಸಹನೆಯನ್ನು ತಪ್ಪಿಸಿದೆ! ನಿಮ್ಮ ಸೊಸೆಗೆ ಆವರಿಸಿರುವುದು ಪಿಶಾಚವೆ? ಎಂತಹದು? ಮಾತ್ಸರ್ಯ ಮಹಾಪುರುಷನಲ್ಲವೆ? ಮಾತ್ಸರ್ಯವೆಂಬ ಕಿಚ್ಚಿಗೆ ಇವಳೇ ಇಲ್ಲಿ ಹೊಂಚು ಕೇಳುತ್ತಿರುವ ನಿಮ್ಮ ಮಗಳೇ ಮಳೆಯಾಗಿರುವಳು. ಕಿಚ್ಚಿಗೆ ಮಳೆಯೂ ಪ್ರೋತ್ಸಾಹ ಮಾಡುತ್ತಿದ್ದುದು ಸಾಲವೆಂದು

ಬಿರುಗಾಳಿಯಾಗಿ ಶರಾವತಿಯೂ ಸೇರಿರುವಳು. ಈ ಮೂವರ ದಾಂಧಳೆಯೇ ಈ ಮನೆಯ ಸ್ಮಶಾನರೂಪಕ್ಕೆ ಕಾರಣವಾಗಿರುವುದು. ಅಮ್ಮ! ಈ ನಿಮ್ಮ ತಂಗಿ ತನ್ನ ದಾರಿಗೇ ಸೊಸೆಯನ್ನು ಸೇರಿಸಲು ಬಂದಿರುವಳು! ಸಂತೋಷ: ಆದರೆ ನಾನು ಎರಡನೆಯ ಶಂಕರನಾಥನಾಗಿದ್ದರಲ್ಲವೇ ಕೃಷ್ಣೆಯನ್ನೂ ಎರಡನೆಯ ಶರಾವತಿಯಂತೆ ಬಿಡಬಹುದಾಗಿದ್ದಿತು. ನಾನು ಶಂಕರನಾಥನಲ್ಲ ರಘುನಾಥ! ಈ ಬಗೆಯ ದುಶ್ಚೇಷ್ಟೆಗಳಿಗೆ ಇನ್ನು ಮುಂದೆ ಅವಕಾಶವಿರಲಾರದು. ತುಂಗೆ, ತನ್ನ ವಿಷದ ಹಲ್ಲಿಂದ ಕಡಿಯ ಬಂದರೇನಾದೀತು? ಹೇಗೂ ಅವಳ ಮಾರ್ಗಕ್ಕೆ ಕಂಟಕವೊಡ್ಡಿದುದಾಯಿತು. ಇನ್ನೇನೂ ಮಾಡುವಂತಿಲ್ಲ ವಿರಾಗಿಣಿಯನ್ನು ಹೊರಡಿಸ ಬೇಕೆಂದಿರುವಿರಲ್ಲವೆ ? ಈ ನಿಮ್ಮ ದುರುದ್ಯಮವು ಖಂಡಿತವಾಗಿಯೂ ಸಾಗುವುದಿಲ್ಲವೆಂದು ತಿಳಿಯಿರಿ ; ಇವಳನ್ನು ಆನಂದಮಂದಿರದ ಪೂಜ್ಯಸ್ಥಾನದಲ್ಲಿ ನೆಲೆಗೊಳಿಸುವಂದಿನವರೆಗೂ ಈ ಮನೆಯಿಂದ ಆರೂ ಇವಳನ್ನು ಹೇಗೂ ಹೊರಡಿಸಲು ಶಕ್ತರಾಗರು! ಅಂತಹ ಉತ್ಸವಕಾಲವು ಇನ್ನು ಮಾಸಾವಧಿಯಲ್ಲಿಯೇ ನಿಮ್ಮ ಕಣ್ಣೆದಿರಿಗೆ ನಿಲ್ಲುವುದನ್ನು ನೋಡುವಿರಿ! ಚೆನ್ನಾಗಿ ತಿಳಿದಿರಿ! !ಎಚ್ಚತ್ತಿರಿ! ! ! ಅಷ್ಟೇ ಅಲ್ಲ ; ಇನ್ನು ಮುಂದೆ ನಿಮ್ಮ ಅಬಲಾ ದೌರ್ಜನ್ಯವನ್ನು ಪ್ರಕಾಶಿಸಲು, ಇಲ್ಲಸಲ್ಲದ ಆವೇಶವೆಂದೂ ರೋಗವೆಂದೂ ನಟಿಸುವುದಾದರೆ ಆ ಸುದ್ದಿ ನನ್ನ ಕಿವಿಯನ್ನು ಮುಟ್ಟಿದಾಗಲೇ ನಟರು ಆರೇ ಆಗಿರಲಿ, ಬಹಿಷ್ಕೃತರಾಗುವರು. ಅಂತಹವರಲ್ಲಿ ಮಾತೃಭಕ್ತಿ, ಗೌರವವಾಗಲೀ ಸೋದರ ವಾತ್ಸಲ್ಯವಾಗಲೀ ಪತ್ನೀ ಪ್ರೇಮವಾಗಲೀ ತಡೆಯಾಗುವುದೆಂದು ತಿಳಿಯದಿರಿ! ಮರೆತು ಕುಣಿದಾಡಿ ಮನೆಬಿಟ್ಟು ಹೊರಸಾಗುವಂತೆ ಮಾಡಿಕೊಳ್ಳದೆ ಮಾನವನ್ನು ಕಾಪಾಡಿಕೊಳ್ಳಿರಿ!".(ವಿಜಯಾದಬ್ಬೆ (ಸಂ) : ೧೯೯೨ ;೨೦೬.)

ರಘುನಾಥನ ಮೇಲಿನ ಮಾತುಗಳಿಂದ ಆತನ ಕೌಟುಂಬಿಕ ಬಿಕ್ಕಟ್ಟು, ವಿರಾಗಿಣಿಯು ಎದುರಿಸುತ್ತಿರುವ ಸನ್ನಿವೇಶದ ಸ್ಪಷ್ಟ ಅರಿವಾಗುತ್ತದೆ. ಕೌಟುಂಬಿಕ ಸ್ವಾಸ್ಥ್ಯದ ನೆಲೆಯಲ್ಲಿ ಕುಟುಂಬದಲ್ಲಿನ ಸ್ತ್ರೀ ಮತ್ತು ಪುರುಷರ ವರ್ತನೆ ಪರಸ್ಪರ ಸಹಕಾರಿಯಾಗಿರಬೇಕಾದದ್ದು ಅನಿವಾರ್ಯ. ಹಾಗಿಲ್ಲದೆ ಇದ್ದಲ್ಲಿ ಅದು ಮನೆಯ ಆರೋಗ್ಯವನ್ನು- ನೆಮ್ಮದಿಯ ಜೀವನವನ್ನು ಸಂಪೂರ್ಣ ಹಾಳುಗೆಡಹುತ್ತದೆ. ಇಂತಹ ಕೌಟುಂಬಿಕ ಸ್ವರೂಪವನ್ನು ಗಿರಿಜಾಬಾಯಿ ಕಾದಂಬರಿಯ ಯೋಗಾನಂದನ ಕುಟುಂಬದಲ್ಲಿಯೂ ಗಮನಿಸಬಹುದು. ಯೋಗಾನಂದನ ಎರಡನೆಯ ಪತ್ನಿ ಗಿರಿಜಾಬಾಯಿಯ ಪ್ರವೇಶದಿಂದಾಗಿ ಸಂಪೂರ್ಣ ಮನೆಯ ವಾತಾವರಣವೇ ಬದಲಾಗುತ್ತದೆ. ಪತಿ ಎರಡನೇ ವಿವಾಹವಾಗುವುದನ್ನು ಯಾವೊಬ್ಬ ಹೆಣ್ಣು ಸಹಿಸಿಕೊಳ್ಳುವುದು ಕಷ್ಟಸಾಧ್ಯ. ಯೋಗಾನಂದನ ಹೆಂಡತಿ ಸತ್ಯಭಾಮೆಗೆ ಕೂಡ ಇದನ್ನು ತಾಳಿಕೊಳ್ಳುವುದು ಕಷ್ಟವಾಗುತ್ತದೆ. ಎರಡನೆಯ ವಿವಾಹವಾದ ಯೋಗಾನಂದನಿಗೆ ಹೆಂಡತಿಯಿಂದ ದೊರೆಯುವ ಸುಖ, ಮಕ್ಕಳು ಇದ್ದರೂ ಆತನ ಮರುಮದುವೆ ಮತ್ತು ಅದರಿಂದ ಉಂಟಾದ ಪರಿವರ್ತನೆ ಸಂಪೂರ್ಣವಾಗಿ ಆತನ ಮನೆಯ ವಾತಾವರಣವನ್ನು ಹಾಳುಗೆಡಹುತ್ತದೆ.

"ಮೊದಲು ತನ್ನ ವಿಷಯದಲ್ಲಿಯೂ ಮನೆಯವರ ವಿಷಯದಲ್ಲಿಯೂ ಉದಾಸೀನದಿಂದ ವರ್ತಿಸುತ್ತಿದ್ದ ಪತಿಯು ಈಗ ಗಿರಿಜೆಯಲ್ಲಿ ತೋರುತ್ತಲಿದ್ದ ಆದರವನ್ನೂ ಅವಳು ಬಂದ ಬಳಿಕ

ಉಂಟಾದ ಆತನ ಪರಿವರ್ತನೆಯನ್ನೂ ನೋಡಿ ಅಸಹನೆಯು ಈರ್ಷ್ಯೆಯಾಗಿ ತಿರುಗಿತು. ಗಿರಿಜೆಯ ಬಳಿಯಲ್ಲಿ ಮಾತಿಲ್ಲ- ಕಥೆಯಿಲ್ಲ ; ಅವಳ ಬಳಿಯಲ್ಲಿ ತಾನು ಮಾತನಾಡದಿದ್ದರೆ ಬಿಡಲಿ, ಮತ್ತಾರಾದರೂ ಮಾತನಾಡಿದರೂ ಸತ್ಯಭಾಮೆಗೆ ಸಹನವಾಗಲಿಲ್ಲವೆಂದೇ ಹೇಳಬಹುದು. ಪತಿಯ ಮೇಲಿನ ಆಗ್ರಹವೂ ಮಿತಿಮೀರಿತು. ಆತನು - ತಾನಾಗಿ ಬಂದುಮಾತನಾಡಿಸಿದಾಗ ಮುಖ ತಿರುಗಿಸುವುದೂ ದೂರಸರಿದು ಹೋಗುವುದು, ಊಟಕ್ಕೆ ಬಡಿಸುವಾಗಲೂ ಧುಮುಧುಮುಗುಟ್ಟುವುದೂ ಆತನನ್ನು ಆತನ ಮಿತ್ರರನ್ನೂ ಕುರಿತು ನಿಷ್ಠುರಮಾಡುವುದು ಹೀಗಾಯಿತು. ಸಾಲದುದಕ್ಕೆ ಇದೇ ಸಮಯದಲ್ಲಿಯೇ ಅವಳ ತಂಗಿಯೂ ಬಂದು ಅವಳ ಉಬ್ಬಸವನ್ನು ಹೆಚ್ಚಿಸಲು ಬೇಕಾದ ಅಪಥ್ಯವನ್ನೆಲ್ಲಾ ಮಾಡಿಸಿಬಿಟ್ಟಳು! ಕಿವಿ ಮಾತಿನಿಂದ ಮತ್ತಷ್ಟು ಉಬ್ಬಿಸಿದಳು ; ಅವಳ ಅತ್ತೆಗೆ ಚಾಡಿ ಹೇಳಿ ಮನಸ್ಸನ್ನು ತಿರುಗಿಸಿದಳು. ಸಾಲದುದಕ್ಕೆ ಅವಳ ಮಾತಿಗೆ ಅಸ್ತುಕಾರವನ್ನು ಹಾಕಲು ಕಲಹಾಶನ ಸ್ವಭಾವದವನಾದ ಬ್ರಾಹ್ಮಣನೊಬ್ಬನು ಮನೆಯಲ್ಲಿದ್ದನು. ಮೂರು ಕೂಡಿದುದು ಪೂರ್ವ ಸುಕೃತವೆಂಬಂತೆ ಇವೆಲ್ಲಾ ಸೇರಿದುದರಿಂದ ಗಿರಿಜಾ-ಯೋಗಾನಂದರಿಗೆ ಕುಜ-ಕೇತು ಭಕ್ತಿಗಳ ಮಹತ್ಫಲಾನುಭವದಂತಹ ಅನುಭವವುಂಟಾಯಿತು." (ವಿಜಯಾದಬ್ಬೆ (ಸಂ): ೧೯೯೨ ; ೪೭೮, ೪೭೯).

ಕಾದಂಬರಿಗಳ ಆವರಣದಲ್ಲಿ ಕೌಟುಂಬಿಕ ವಿವರಗಳು ನಿರ್ದಿಷ್ಟವಾದ ಪರಿಸ್ಥಿತಿಯನ್ನು ಅನಾವರಣ ಮಾಡುವ ಸಲುವಾಗಿ ಕಾಣಿಸಿಕೊಳ್ಳುತ್ತದೆ. ಬದುಕಿನ ಬಿಕ್ಕಟ್ಟಿನ ಸನ್ನಿವೇಶಗಳಿಗೆ ಕುಟುಂಬದ ಸದಸ್ಯರು ಪ್ರತಿಕ್ರಿಯಿಸುವ ರೀತಿ ಕುಟುಂಬದ ಭಾವನಾತ್ಮಕ ಸಂಬಂಧದಲ್ಲಿ ಮುಖ್ಯವಾಗುತ್ತದೆ. ಕುಟುಂಬವು ಎದುರಿಸುವ ಪರಿಸ್ಥಿತಿಯ ಮೇಲೆ ಅದರ ಸಂಬಂಧ ಮೌಲ್ಯಗಳು ನಿರ್ಧಾರವಾಗುತ್ತವೆ. ಈ ಸಂಬಂಧಗಳು ಋಣಾತ್ಮಕವಾಗಿರಬಹುದು ಅಥವಾ ಧನಾತ್ಮಕವಾಗಿರಬಹುದು. ಆದರೆ ಕುಟುಂಬ ಇದನ್ನು ಹಲವು ನೆಲೆಯಲ್ಲಿ ಒಪ್ಪಿಕೊಳ್ಳುತ್ತದೆ. ಬಾಲ್ಯ ವಿವಾಹವನ್ನು ತೀವ್ರವಾಗಿ ಪ್ರತಿರೋಧಿಸುವ **ಮಾತೃನಂದಿನಿ ನಿರ್ಭಾಗ್ಯವನಿತೆ** ಈ ಕಾದಂಬರಿಗಳಲ್ಲಿಯೂ ನಾವು ಇದನ್ನು ಗುರುತಿಸಬಹುದು. ನಂದಿನಿಯ ವೈಚಾರಿಕ ಮನೋಭಾವ ಅವಳು ತಳೆಯುವ ಪ್ರೌಢವಿವಾಹದ ಕುರಿತ ನಿಲುವು ಸಂಪೂರ್ಣವಾಗಿ ನಾಗೇಶರಾಯನ ಕುಟುಂಬದ ಮೇಲೆ ಪರಿಣಾಮ ಬೀರುತ್ತದೆ. ಅಲ್ಲದೆ, ನಾಗೇಶರಾಯ ಪ್ರಬಲವಾಗಿ ಬಾಲ್ಯವಿವಾಹವನ್ನು ವಿರೋಧಿಸುವಂತೆ ಮಾಡುತ್ತದೆ. ಈ ಎಲ್ಲ ವಿವರಗಳು ನಾಗೇಶರಾಯನ ಕುಟುಂಬ ಎದುರಿಸುವ ಸಂಘರ್ಷವಾಗಿ ದಾಖಲಾಗಿದೆ. (ನಂಜನಗೂಡು ತಿರುಮಲಾಂಬ: ೧೯೨೭; ೯೦-೧೪೦)

**ನಿರ್ಭಾಗ್ಯವನಿತೆ**ಯಲ್ಲಿ ಸತೀಶನ ಕುಟುಂಬ ಈ 'ಬಾಲ್ಯವಿವಾಹ' ಹಾಗೂ 'ವರದಕ್ಷಿಣೆ'ಯ ಕುರಿತು ಭಿನ್ನ ನಿಲುವನ್ನು ತಾಳುವ ಅನಿವಾರ್ಯವೇರ್ಪಡುತ್ತದೆ. 'ಬಾಲ್ಯವಿವಾಹ' ವರದಕ್ಷಿಣೆಯ ಕೆಡುಕಿನ ಬಗ್ಗೆ ಸ್ಪಷ್ಟ ತಿಳುವಳಿಕೆ ಇದ್ದೂ ಕೂಡ ಸತೀಶ ತನ್ನ ಮಗಳಾದ ಇಂದಿರೆಯನ್ನು ತಾಯಿಯ ಮಾತಿಗೆ ಕಟ್ಟುಬಿದ್ದು ಸೋದರಳಿಯನಿಗೆ ಮದುವೆ ಮಾಡಿಕೊಡುತ್ತಾನೆ. ತಂದೆ ಇಲ್ಲದ ಸತೀಶನನ್ನು ತಾಯಿ ಯಾವುದಕ್ಕೂ ಕೊರತೆ ಇಲ್ಲದೆ ಸಾಕಿದ್ದಾಳೆ ಎನ್ನುವ ಕಾರಣ ಸತೀಶನಲ್ಲಿ ಬಾಲ್ಯವಿವಾಹ, ವರದಕ್ಷಿಣೆಯ ಬಗ್ಗೆ ಇದ್ದ

ವೈಚಾರಿಕ ತಿಳುವಳಿಕೆಯನ್ನು ತಳ್ಳಿಹಾಕುವಂತೆ ಮಾಡುತ್ತದೆ. ಮನೆಯ ಆಡಳಿತ, ನಿರ್ವಹಣೆ ಆತನಿಗೆ ಸಂಬಂಧಪಟ್ಟ ಅಂಶವಾದರೂ ತಾಯಿಯ ಮಾತನ್ನು ಮೀರಲಾರದ ಮಗನಾಗಿ ಆತ ಕಾಣಿಸಿಕೊಳ್ಳುತ್ತಾನೆ. ಕುಟುಂಬದ ತೀರ್ಮಾನ ಅಂತಿಮವಾಗಿ ಆತನ ತಾಯಿಯ ಮಾತಿನಂತೆ ಆಗುತ್ತದೆ. ಪರಂಪರಾಗತ ರೂಢಿನಿಯಮಗಳು ಆಚರಣೆಗಳು ಹೇಗೆ 'ಕುಟುಂಬ'ದಿಂದ ಪೋಷಿತವಾಗುತ್ತವೆ. ಎಂಬುದಕ್ಕೆ ಸತೀಶನ ಕುಟುಂಬ ಉತ್ತಮ ಉದಾಹರಣೆಯಾಗಿದೆ. ಇದಕ್ಕಿಂತ ಭಿನ್ನ ನೆಲೆಯಲ್ಲಿ ಸತೀಶನ ಸಹೋದರಿಯ ಕುಟುಂಬವು ಬಿಂಬಿತಗೊಂಡಿದೆ. ಆ ಮನೆಯ ಸಮಸ್ತ ಆಡಳಿತ ಉಪೇಂದ್ರನ ಸಹೋದರಿ ಕಾಳಿಮಣಿಯದ್ದು. ಅವಳ ಸ್ವಭಾವದಂತೆ ಆ ಕುಟುಂಬದ ವಾತಾವರಣವೂ ಪ್ರಕಟಗೊಳ್ಳುತ್ತದೆ.

> "ಕುಟುಂಬಕ್ಕೆ ಹಿರಿಯವಳಾದದ್ದರಿಂದಲೂ, ಆ ಕುಟುಂಬದಲ್ಲಿರುವವರು ಯಾವ ಕಾರ್ಯವನ್ನೂ ಅವಳ ಅನುಮತಿ ಇಲ್ಲದೆ ಮಾಡುತ್ತಿರಲಿಲ್ಲ. ಅವಳು ಹೇಳಿದ್ದೇ ಕಟ್ಟಳೆ. ಅವಳೇ ಅವಳ ಸಹೋದರರಿಗೆ ಮಂತ್ರಿ. ಅವಳು ಸ್ವಭಾವದಲ್ಲಿ ಮಹಾ ಪಾತಕಿ. ತನ್ನ ಸಹೋದರರ ವಿಷಯದಲ್ಲಿ ಸ್ವಲ್ಪ ವಿಶ್ವಾಸವುಳ್ಳವಳಾಗಿದ್ದರೂ ಅವರ ಪತ್ನಿಯರ ವಿಷಯದಲ್ಲಿ ಬಹಳ ಕಾಠಿಣ್ಯಳಾಗಿದ್ದಳು. ಅವರನ್ನು ಬಹಳ ಹಿಂಸೆಪಡಿಸುವಳು. ಇವಳ ಅಪ್ಪಣೆ ಇಲ್ಲದೆ ಅವರು ಗಂಡನೊಂದಿಗೆ ಕೂಡ ಮಾತನಾಡಕೂಡದು. ಅವರು ಹೊಟ್ಟೆ ತುಂಬಾ ಊಟ ಮಾಡುವುದಕ್ಕೆ ಕೂಡ ಸಮ್ಮತಿಪಡಳು. ತಿಂಗಳಿಗೆ ಇಪ್ಪತ್ತೇಳು ದಿನಗಳು ತಂಗಳನ್ನವನ್ನೂ ಹಳಸಿದ ಹುಳಿಯನ್ನೂ ಅವರಿಗೆ ಬಡಿಸುವಳು. ಏನಾದರೂ ತಿಂಡಿ ಮಾಡಿದರೆ ಅದನ್ನು ತಾನು ಒಳಗಿಟ್ಟು ಬೀಗ ಹಾಕಿಕೊಂಡು ತನ್ನ ಸಹೋದರರಿಗೂ ಕೊಟ್ಟು ತಾನೂ ಸದಾ ತಿನ್ನುವಳು. 'ಇತರರ ಮನೆ ಹುಡುಗಿ' 'ಇತರರ ಮನೆ ಹುಡುಗಿ' ಎಂದು ಮಾತುಮಾತಿಗೂ ಅನ್ನುವಳು. ತಮ್ಮನ್ನು ನಂಬಿ ಅವರು ತಮ್ಮ ತಾಯಿ ತಂದೆಯರನ್ನು ತ್ಯಜಿಸಿ ಬಂದಿರುವುದನ್ನು ಮಾತ್ರ ನೆನಸಳು. ಅಡುಗೆಗೆ ಬೇಕಾದ ಪದಾರ್ಥಗಳನ್ನು ತೆಗೆದಿಡುವಂತೆ ಮೊರದಲ್ಲಿ ತೆಗೆದಿಡುವಳು. ಹೀಗೆ ಮಾಡುವಾಗಲೇ ಅಕ್ಕಿ ಬೇಳೆ ಪದಾರ್ಥಗಳನ್ನು ತಿಂದು ಬಿಡುವುದಾಗಿಯೂ ದಿನ ಬಿಟ್ಟು ದಿನ ಎಣ್ಣೆ ಒತ್ತಿಕೊಂಡು ಸ್ನಾನಮಾಡಿ ಬಿಡುವುದಾಗಿಯೂ, ಕಳ್ಳತನದಿಂದ ತುಪ್ಪವನ್ನೆಲ್ಲಾ ತಿಂದುಬಿಡುವುದಾಗಿಯೂ ರಗಳೆಮಾಡುವಳು. ಸದಾ ಸಹೋದರರೊಂದಿಗೆ ಚಾಡಿ ಹೇಳಿಕೊಂಡು ತಾನು ಈ ವಿಧಿಗೆ ಸಿಲುಕಿ ಅವರುಗಳ ಮಧ್ಯೆ ಇರುವುದರಿಂದಲ್ಲವೇ ಇಷ್ಟು ಹಿಂಸೆಪಡುತ್ತೀರಿ ಎಂದು ಗೋಳಾಡುವಳು. ಕಾಳೀಮಣಿಯು ಮಾತನಾಡುವುದರಲ್ಲಿಯೂ, ತಾನು ಹಿಡಿದ ಕಾರ್ಯವನ್ನು ಸಾಧಿಸುವುದರಲ್ಲಿಯೂ ಬಹಳ ಸಮರ್ಥಳು. ಮೊದಲನೇ ತಂತ್ರವಾದ ಕಣ್ಣೀರನ್ನು ಸುರಿಸಲು ಮೊದಲು ಮಾಡಿದರೆ ಅವಳ ಪರಿತಾಪಸ್ಥಿತಿಯನ್ನೂ, ಅವಳು ತಮಗೆ ಮಾಡುವ ಉಪಚಾರಗಳನ್ನೂ ನೋಡಿದ ಸಹೋದರರು ಅವಳ ಮಾತಿನಂತೆ ತಮ್ಮ ಹೆಂಡತಿಯನ್ನು ಚೆನ್ನಾಗಿ ಪ್ರಹರಿಸುವರು. ಇವಳ ಮಿತ್ರಬೇಧದಿಂದಲೇ ಉಪೇಂದ್ರನ ಮೂರನೇ ಸಹೋದರನ ಹೆಂಡತಿಯನ್ನು ಕಾರಣವಿಲ್ಲದೆ ನಿವೃತ್ತಿಮಾಡಿ ಎರಡನೇ ಮದುವೆಯನ್ನು ಮಾಡಿಸಿದ್ದರು. ಮಕ್ಕಳನ್ನು ಸಾಕುವ

ವಿಷಯದಲ್ಲಂತೂ ಹೇಳತೀರದು. ಒಬ್ಬಳ ಮಕ್ಕಳನ್ನು ಒಂದು ವಿಧವಾಗಿಯೂ ಮತ್ತೊಬ್ಬಳ ಮಕ್ಕಳನ್ನು ಮತ್ತೊಂದು ವಿಧವಾಗಿಯೂ ನೋಡುವಳು. ಈ ವ್ಯತ್ಯಾಸವು ಇವಳ ಸಹೋದರರ ಪತ್ನಿಯರು ಇರುವ ಅನುಕೂಲಕ್ಕೆ ತಕ್ಕಂತೆ ಇರುವುದು. ಇವಳು ಮಾಡುವ ಇಷ್ಟೊಂದು ಅಕ್ರಮಗಳೂ ಸಹೋದರರಿಗೆ ತಿಳಿಯದು. ಗಂಡನೊಂದಿಗೆ ಮಾತನಾಡಲು ಹೆಂಡತಿಗೆ ಅವಕಾಶ ಸಿಕ್ಕಿದರಲ್ಲವೇ ಅವನಿಗೆ ತಿಳಿಯುವುದು! ಇವಳ ಏರ್ಪಾಡಿನಿಂದಲೇ ಇವಳ ತಂಗಿಯ ಮಗಳನ್ನು ನಾರಾಯಣನಿಗೆ ಕೊಡಲು ತಪ್ಪಿದ್ದು. ಇಂಥಾ ಸಂಸಾರವು ಸುಖವಲ್ಲವೇ?". (ಸುಮಿತ್ರಾಬಾಯಿ ಬಿ.ಎನ್. : ೧೯೯೨ ; ೨೭೭ ೨೭೮.)

ಕಾಳಿಮಣಿಯ ಸ್ವಭಾವ ಸಂಪೂರ್ಣ ಕುಟುಂಬವನ್ನು ನಿಯಂತ್ರಣದಲ್ಲಿ ಇಡುವ ರೀತಿಯದ್ದು. ಇದಕ್ಕೆ ಕಾಳಿಮಣಿಯ ಅತೃಪ್ತ ದಾಂಪತ್ಯ ಜೀವನವೇ ಕಾರಣವೆನಿಸುತ್ತದೆ. ವಿವಾಹವಾದ ಕೆಲವು ದಿನಗಳಲ್ಲಿ ವಿಧವೆಯಾದ ಕಾಳಿಮಣಿಗೆ ದಾಂಪತ್ಯ ಜೀವನದ ಕನಿಷ್ಠ ಅನುಭವವೂ ಇಲ್ಲದೆ ಇರುವುದು ಅವಳ ಅತೃಪ್ತ ಮನಸ್ಥಿತಿಗೆ ಕಾರಣವಾಗಿದೆ. ಅಲ್ಲದೆ, ಅದು ಹಲವು ಸ್ವರೂಪದಲ್ಲಿ ಕುಟುಂಬಸ್ಥರನ್ನು ನಡೆಸಿಕೊಳ್ಳುವುದರಲ್ಲಿ ಕಾಣಿಸಿಕೊಳ್ಳುತ್ತದೆ. ಕುಟುಂಬದಲ್ಲಿ ವಿಧವೆಯರ ಬಗೆಗಿನ ಅವಹೇಳನ, ಅವರ ಬದುಕನ್ನು ಗೌಣವಾಗಿ ಪರಿಗಣಿಸುವ ಸನ್ನಿವೇಶಗಳ ಚಿತ್ರಣ ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಯಥೇಚ್ಛವಾಗಿ ಕಾಣಿಸಿಕೊಳ್ಳುತ್ತವೆ. ಆದರೆ, ವಿಧವೆಯರಾದ ಅಕ್ಕ, ಅತ್ತೆ, ತಾಯಿಯಂದಿರು ಹೇಗೆ ಕುಟುಂಬದ ಸ್ವಾಸ್ಥ್ಯವನ್ನು ಹಾಳುಗೆಡಹುತ್ತಾರೆ ಎಂಬುದಕ್ಕೆ ನಿದರ್ಶನಗಳು ಸಿಗುವುದು ವಿರಳ. ಕೌಟುಂಬಿಕ ಸಮಸ್ಯೆಗಳಿಗೆ ಇಂತಹ ಮನಸ್ಥಿತಿಗಳ ಕುಟುಂಬ ನಿರ್ವಹಣೆಯಿಂದ ಪರಿಹಾರ ಸಿಗುವುದು ಕೂಡ ದುರ್ಲಭ. ಕಾಳೀಮಣಿ ವರದಕ್ಷಿಣೆಯನ್ನು, ಬಾಲ್ಯವಿವಾಹವನ್ನು ಬಯಸುವ ಒಂದು ರೂಪವಾದರೆ, ಪ್ರಿಯಂವದಾ ಕಾದಂಬರಿಯಲ್ಲಿ ಬರುವ ಸತ್ಯೇಂದ್ರನ ತಾಯಿ ಆ ರೂಪದ ಮತ್ತೊಂದು ಮುಖವಾಗಿ ಕಾಣಿಸಿಕೊಳ್ಳುತ್ತಾಳೆ. ಸತ್ಯೇಂದ್ರನಿಗೆ ಅನುರೂಪಳಾದ ಪ್ರಿಯಂವದೆಯನ್ನು ವಿವಾಹವಾಗಿದ್ದರೂ, ಆತನ ತಾಯಿ ವರದಕ್ಷಿಣೆಯ ಸಲುವಾಗಿ ಮಗನಿಗೆ ಎರಡನೆಯ ವಿವಾಹ ಮಾಡಬೇಕೆಂದು ನಿಶ್ಚಯಿಸುತ್ತಾಳೆ. ಮಗನಿಗೆ ಮೊದಲ ಹೆಂಡತಿ ಇದ್ದರೂ, ಮರುಮದುವೆ ಮಾಡಿಸುವ ಅವಳ ತರ್ಕ ಬೇರೆ ರೀತಿಯಲ್ಲಿ ಪ್ರಕಟಗೊಳ್ಳುತ್ತದೆ.

"ರಜಾ ಮುಗಿಯುವುದರೊಳಗೆ ಮಗನಿಗೆ ದ್ವಿತೀಯ ವಿವಾಹವನ್ನು ಮಾಡಿ ಬಿಡಬೇಕೆಂದು ಅನ್ನಪೂರ್ಣೆಯು ಅವಸರ ಪಟ್ಟಳು. ಸತ್ಯೇಂದ್ರನು ಇನ್ನು ವಿವಾಹವ್ಯಾತಕ್ಕೆಂದನು. ಸಂತಾನವೃದ್ಧಿಗೆಂದು, ಸುಖ ಸಂತೋಷಗಳಿಗೂ ಎಂದು ತಾಯಿಯು ಬಹು ವೈಯ್ಯಾರದಿಂದ ಹೇಳಿದಳು. ಅದಕ್ಕೆ ಸತ್ಯೇಂದ್ರನು ಅಂತಹ ಸುಖವು ತನಗವಶ್ಯವಿಲ್ಲವೆಂದೂ ತನ್ನ ತಮ್ಮನಾದ ಉಪೇಂದ್ರನಿಗೆ ಮಾಡುವುದು ಉತ್ತಮವೆಂದೂ ಹೇಳಿದನು. ಉಪೇಂದ್ರನು ವಿದ್ಯಾವಿಹೀನ ನಾದುದರಿಂದ ಅವನಿಗೆ ಹೆಣ್ಣು ಕೊಡುವವರು ವರದಕ್ಷಿಣೆ ಕೊಡಲಾರರೆಂದು ತಾಯಿಯು ಹೇಳಲು, ಹಣವು ಯಾತಕ್ಕೆಂದು ಮಗನು ಕೇಳಿದನು. ಅದಕ್ಕೆ ತಾಯಿಯು ಕುಮಾರಾ! ಇಲ್ಲಿ ನೋಡು ಮಿಕ್ಕ ಮಕ್ಕಳ ಕ್ಷೇಮಾರ್ಥವಾಗಿ ಹೇಳುತ್ತೇನೆ. ನಿನಗೆ ಹೆಣ್ಣು ಕೊಡುವವರು ೨೦೦೦ ರೂಪಾಯಿ ವರದಕ್ಷಿಣೆ ಕೊಡುವುದಾಗಿ ಹೇಳುವರು. ಮಾಂಗಲ್ಯಧಾರಣ ಮಾಡಿದ ಮಾತ್ರಕ್ಕೆ

ಯಾವ ಕಷ್ಟವೂ ಇಲ್ಲದೇ ದೊಡ್ಡ ಗಂಟು ಸಿಕ್ಕುವುದು. ನೀನ್ಯಾತಕ್ಕೆ ಬೇಡವೆನ್ನುವೆ ? ಎಷ್ಟೋ ಮನೆಗಳಲ್ಲಿ ಈ ರೀತಿ ನಡೆದಿದೆ ಎಂದಳು." (ಕಲ್ಯಾಣಮ್ಮ ಆರ್ : ೧೯೨೨; ೧೧.)

ಹೆಣ್ಣಿನ ಶೋಷಣೆಯ ನೆಲೆಗಳು ಹಲವು. ಅವು, ಪುರುಷ ನಿಷ್ಠ ಸಮಾಜದಲ್ಲಿ ಪ್ರಕಟಗೊಳ್ಳುವ ಬಗೆಗಳು ಕೂಡ ನಾನಾ ರೂಪದಲ್ಲಿರುತ್ತವೆ. ಪರಂಪರೆಯನ್ನು ಅತಿ ನಿಷ್ಠೆಯಿಂದ ಕಾಯ್ದುಕೊಂಡು ಬಂದ ಈ ವ್ಯವಸ್ಥೆಯಲ್ಲಿ ಸ್ತ್ರೀಯರಿಂದಲೇ ಸ್ತ್ರೀಶೋಷಣೆ ನಡೆಯುವುದು ಮೇಲು ರೂಪದಲ್ಲಿ ಕಾಣಿಸಿಕೊಳ್ಳುವ ಪ್ರಕ್ರಿಯೆ. ಮೊದಲ ಕಟ್ಟಿನ ಕಾದಂಬರಿಗಳನ್ನು ಕೌಟುಂಬಿಕ ಹಿನ್ನೆಲೆಯಲ್ಲಿ ಅಧ್ಯಯನ ನಡೆಸುವಾಗಲೂ ಈ ಅಂಶ ಪ್ರಕಟಗೊಳ್ಳುತ್ತದೆ. ಆದರೆ ಮೂಲದಲ್ಲಿ ಅವಲೋಕನ ನಡೆಸುವಾಗ ಸ್ತ್ರೀಯರಿಂದಲೇ ಸ್ತ್ರೀಶೋಷಣೆ ಎನ್ನುವ ದುರಂತ ಕೌಟುಂಬಿಕ ನೆಲೆಯ ದೊಡ್ಡ ಪಿಡುಗಾಗಿ ವ್ಯಕ್ತವಾಗುವುದಾದರೂ ಶೋಷಣೆ ನಡೆಸುವ ಸ್ತ್ರೀ ವರ್ಗ ಪುರುಷನಿಷ್ಠ ಸಂಪ್ರದಾಯಗಳನ್ನು ಮೌಲ್ಯಗಳನ್ನು ಮಾನ್ಯಮಾಡಿ, ಒಂದು ಕಾಲಕ್ಕೆ ಶೋಷಿತರಾಗಿ ಬದುಕಿದವರೇ ಆಗಿದ್ದಾರೆ ಎಂಬುದು ಕೂಡ ವ್ಯಕ್ತವಾಗುತ್ತದೆ. ಕೂಡು ಕುಟುಂಬದ ಸಂದರ್ಭದಲ್ಲಿ ಇದನ್ನು ಸ್ಪಷ್ಟಪಡಿಸಿ ಕೊಳ್ಳುವುದಾದರೆ, ಯಾವ ಸ್ತ್ರೀ ಯೌವ್ವನದ ಕಾಲದಲ್ಲಿ ಪುರುಷರ ದಬ್ಬಾಳಿಕೆಯನ್ನು ಮಾನ್ಯಮಾಡಿರುತ್ತಾಳೋ ಅವಳ ಅರಿವಿಲ್ಲದೆ ಮನಃಶಾಸ್ತ್ರೀಯವಾಗಿ ಅವಳಲ್ಲಿ ಕಂಡು ಬರುವ ಪರಿವರ್ತನೆಯಿಂದ ಅವಳು ತನ್ನ ಇಳಿ ವಯಸ್ಸಿನಲ್ಲಿ ಮನೆಯಲ್ಲಿ ಉಳಿದ ಸ್ತ್ರೀಯರ ಮೇಲೆ ವಿನಾಕಾರಣ ರೇಗುವುದು, ದೂಷಿಸುವುದು, ಅಸೂಯೆ ವ್ಯಕ್ತಪಡಿಸುವುದು ಮಾಡುತ್ತಾಳೆ. ಇದು ಅವಳ ವ್ಯಕ್ತಿತ್ವದ ದಮನದ ಶಮನ ರೂಪವಾಗಿಯೇ ಪ್ರಕಟಗೊಳ್ಳುತ್ತದೆ. 'ತನಗೆ ದಕ್ಕದ್ದು ಉಳಿದವರಿಗೆ ಬೇಡ' ಎನ್ನುವ ಕಾಳೀಮಣಿ, ಅನ್ನಪೂರ್ಣೆ, ಶರಾವತಿಯರಂತಹ ಪಾತ್ರಗಳ ಮನೋವ್ಯಾಪಾರ ಈ ಮಾದರಿಯದ್ದೇ ಆಗಿದೆ.

**ಸರಳ ಕುಟುಂಬ**

ಮೊದಲಕಟ್ಟಿನ ಕಾದಂಬರಿಗಳು ಚಿತ್ರಿಸುವ ಸರಳ ಕುಟುಂಬಗಳನ್ನು ಅವಲೋಕಿಸುವಾಗ, ಕೂಡು ಕುಟುಂಬದ ಸ್ವರೂಪ ಚಿತ್ರಕ್ಕಿಂತ ಭಿನ್ನವಾದ ನೂತನ ಆಯಾಮವೊಂದು ಕೌಟುಂಬಿಕ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತದೆ. 'ನಭಾ' ಕಾದಂಬರಿಯ ಚಿದಾನಂದ ಮತ್ತು ರಮಾಮಣಿಯರ ಕುಟುಂಬ ಇದಕ್ಕೆ ನಿದರ್ಶನ. 'ಶಾಮನಗರದ ತಹಸೀಲ್‌ದಾರ್' ಆದ ಚಿದಾನಂದನಿಗೆ ಜೀವನದ ಬಗ್ಗೆ ಒಂದು ಆದರ್ಶವಿದೆ. ಆತನ ಆಲೋಚನೆಗಳಿಗೆ ತಕ್ಕ ವಿದ್ಯಾವಂತೆಯಾದ ಪತ್ನಿ ರಮಾಮಣಿಯಾಗಿರುತ್ತಾಳೆ. ಅವರಿಬ್ಬರ ಜೀವನ ಸಂಸ್ಕಾರಗಳು ನಭಾಳ ಬದುಕಿನಲ್ಲಿ ಒಂದು ಗುರಿಯನ್ನು ಸ್ಥಾಪಿಸುತ್ತದೆ. ಸುಶಿಕ್ಷಿತೆಯಾಗುವ, ಆನಂದ ಮಂದಿರವೆಂಬ ಆಶ್ರಮವನ್ನು ಕಟ್ಟುವ ಕನಸನ್ನು ನಭಾಳಲ್ಲಿ ಅದು ಬೀಜರೂಪದಲ್ಲಿ ಮೂಡಿಸುತ್ತದೆ. ಇದೇ ಮುಂದೆ ನಭಾಳನ್ನು ವಿರಾಗಿಣಿಯಾಗಿ ರೂಪಿಸುವುದಕ್ಕೆ ಕಾರಣವಾಗುತ್ತದೆ. ಚಿದಾನಂದನ ಕುಟುಂಬವು ಸಮಾಜದ ಪಲ್ಲಟಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸುವ ಕಾರಣದಿಂದಾಗಿ ನಭಾಳಿಗೆ ಮರುಮದುವೆಯ ಅವಕಾಶದ ಕುರಿತಾಗಿ, ಗಂಭೀರವಾಗಿ ಯೋಚಿಸುತ್ತದೆ. ಹಾಗೂ ನಭಾಳಲ್ಲಿ ಮರು ಮದುವೆಯ ಬಗ್ಗೆ ಇರುವ ಅಭಿಪ್ರಾಯವನ್ನು ಕುಟುಂಬ ಮಾನ್ಯ ಮಾಡುತ್ತದೆ. ಅಂದರೆ ಸಮಸ್ಯೆಯೊಂದನ್ನು ಎಲ್ಲಾ ಮೂಲಗಳಿಂದ ಪರಿಶೀಲಿಸುವ ಶಕ್ತಿ ಈ ಸರಳ ಕುಟುಂಬಕ್ಕೆ ಸಾಧ್ಯವಾಗುತ್ತದೆ. 'ಮಣಿಮಾಲಾ' ಕಾದಂಬರಿಯಲ್ಲಿ ಬರುವ

ಶಬೇಂದ್ರ ಕುಟುಂಬದ ಸುಭದ್ರತೆಯಿಂದಾಗಿ ಮಾತ್ರ ಮಣಿಮಾಲೆಗೆ ಹಲವು ರೀತಿಯಿಂದ ತನ್ನ ಸತೀತ್ವವನ್ನು ಸಾಬೀತುಪಡಿಸಲು ಸಾಧ್ಯವಾಗುತ್ತದೆ.

> "ಮಣಿಮಾಲೆ ಪತಿದ್ರೋಹಕ್ಕೆಡೆಯೂ ಆಗದೆ ಮಿತ್ರ ಭ್ರಾತೃ ಸುಹೃದ್ಬಂಧು ದ್ರೋಹಕ್ಕೂ ಎಡೆಗೊಡದೆ ತನ್ನ ಸತೀ ಧರ್ಮ, ಸ್ತ್ರೀ ಕರ್ತವ್ಯ, ಸೋದರೀ ವಿಶ್ವಾಸಗಳನ್ನು ಕಾಪಾಡಿಕೊಂಡು ಬಂದಳು." (ಸುಮಿತ್ರಾ ಬಾಯಿ ಬಿ.ಎನ್ : ೧೯೯೨ ; ೬೨೩)

ಮಣಿಮಾಲೆ ತನ್ನ ವ್ಯಕ್ತಿತ್ವವನ್ನು ಪೂರ್ಣರೂಪದಲ್ಲಿ ಬೆಳಸಿಕೊಳ್ಳಲು ಕೂಡ ಅವಳು ಹೊಂದಿರುವ ಸರಳ ಕುಟುಂಬವೇ ಕಾರಣ. ಕೂಡು ಕುಟುಂಬದಿಂದ ಉದ್ಯೋಗದ ನಿಮಿತ್ತ ಬೇರ್ಪಟ್ಟು ಪರ ಊರಿನಲ್ಲಿ ಸಂಸಾರ ಹೂಡುವ ನಿರ್ಭಾಗ್ಯವನಿತೆಯ ಶಬೇಂದ್ರನ ಹಾಗೂ ಸುಧಾಕರನ ಕುಟುಂಬ ಕೂಡ ಪ್ರಗತಿಪರ ಮಾದರಿ ಕುಟುಂಬವಾಗಿ ಬೆಳವಣಿಗೆಯಾಗುವ ಲಕ್ಷಣವನ್ನು ಹೊಂದಿದೆ. ಪ್ರಾಥಮಿಕ ನೆಲೆಯಲ್ಲಿ ಕಾಣಿಸಿಕೊಳ್ಳುವ ಈ ಸರಳ ಕುಟುಂಬಗಳ ಸಂರಚನೆಗಳನ್ನು ಮೊದಲಕಟ್ಟಿನ ಕಾದಂಬರಿಗಳು ಧನಾತ್ಮಕವಾಗಿಯೇ ಚಿತ್ರಿಸುತ್ತವೆ. ಕೂಡು ಕುಟುಂಬವೇ ಆಗಲಿ, ಸರಳ ಕುಟುಂಬವೇ ಆಗಲಿ ಕುಟುಂಬದ ಜವಾಬ್ದಾರಿ ಸ್ತ್ರೀಯರದ್ದಾಗಿರಲಿ, ಪುರುಷರದ್ದಾಗಿರಲಿ ವಿವೇಚನಾ ಪೂರ್ಣ ವ್ಯಕ್ತಿತ್ವಗಳು ಮಾತ್ರ ಉತ್ತಮ ಯಜಮಾನಿಕೆಯನ್ನು ನಡೆಸಬಲ್ಲವೆಂಬುದನ್ನು ಮೊದಲಕಟ್ಟಿನ ಕಾದಂಬರಿಗಳು ನಿರೂಪಿಸುತ್ತವೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ತಿರುಮಲಾಂಬ ಚಿತ್ರಿಸುವ ಕೌಟುಂಬಿಕ ಸ್ವರೂಪದಲ್ಲಿನ ಪಾತ್ರಗಳ ಜವಾಬ್ದಾರಿಗಳ ಬಗ್ಗೆ ಬರೆಯುತ್ತಾ ಕೆಳಗಿನ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

> "ಈ ಪುಸ್ತಕಗಳಲ್ಲಿ ನಾಯಿಕೆಯರಾಗಿರುವ ವಿದ್ಯಾವತಿಯರನೇಕರಲ್ಲಿ ಸ್ವಲ್ಪವೂ ಇಂಗಿತ ಜ್ಞಾನವಿಲ್ಲದೆ ಲೆಕ್ಚರನ್ನು ಕೊಡುವ ಅಭ್ಯಾಸ ಪ್ರಬಲವಾಗಿರುವುದನ್ನು ಕಂಡು ನಮಗೆ ಬಹಳ ವಿಷಾದವುಂಟಾಗಿದೆ." (ಮಾಸ್ತಿ ವೆಂಕಟೇಶ ಅಯ್ಯಂಗಾರ್ : ೧೯೨೭; ೬೨)

'ಸತೀ ಹಿತೈಷಿಣೀ ಗ್ರಂಥಮಾಲೆ'ಯ ಧೋರಣೆಗಳ ಬಗ್ಗೆ ನಕರಾತ್ಮಕವಾಗಿ ಅಭಿಪ್ರಾಯ ವ್ಯಕ್ತಪಡಿಸುವ ಮಾಸ್ತಿಯವರು ತಿರುಮಲಾಂಬ ಅವರ ಮಿತಿಗಳನ್ನು ಗುರುತಿಸುವಲ್ಲಿ ಉತ್ಸಾಹಿತರಾಗುತ್ತಾರೆಯೇ ವಿನಾ ಮಿತಿಗಳ ಕಾರಣಗಳನ್ನು ಗಮನಿಸುವುದಿಲ್ಲ. ತಿರುಮಲಾಂಬ ಅವರು ನೀಡುವ ಕೌಟುಂಬಿಕ ವೃತ್ತಾಂತ ಪ್ರಧಾನವಾದ ಕಾದಂಬರಿಗಳಲ್ಲಿ ಅವರು ಚಿತ್ರಿಸುವ 'ನಾಯಕಿ'ಯರೇ ಕೇಂದ್ರ. ಉಳಿದಂತೆ ಬರುವ ವಿವರಗಳೆಲ್ಲವೂ ಅಧೀನಪಾತ್ರಗಳಾಗಿರುವುದರಿಂದ ಪೂರ್ವಭಾವಿಯಾಗಿ ನಿರ್ಧರಿತಗೊಂಡ ಮೌಲ್ಯ ಪ್ರತಿಪಾದನೆಗೆ ಪ್ರಧಾನ ಒತ್ತು ಪ್ರಾಪ್ತವಾಗುತ್ತದೆ. ಬೆಳೆಯುವ ಬಾಲಕಿಯರು, ಗೃಹಿಣೀತ್ವವನ್ನು ಒಪ್ಪಿಬಾಳುವ ಸ್ತ್ರೀಯರು ಮತ್ತು ಇಂಥ ಅವಕಾಶಗಳಿಂದ ವಂಚಿತರಾದ ವಿಧವೆಯರು ಇಂಥವರ ವ್ಯಕ್ತಿತ್ವ, ವಿಚಾರಗಳನ್ನು ತಿದ್ದಿ ರೂಪಿಸುವ ಹೊಣೆ ಮೊದಲಕಟ್ಟಿನ ಕಾದಂಬರಿಗಳ ಕುಟುಂಬಗಳಿಗಿವೆ. ಈ ಹೊಣೆಗಾರಿಕೆಯಲ್ಲಿ ಪರಂಪರೆಯನ್ನು ಪ್ರತಿಭಟಿಸುವ ನಿಲುವನ್ನು ಕಾಣುವುದು ಅಸಾಧ್ಯ. ಆದರೆ, ಸಮಾಜದ ನಂಬಿಕೆಗಳ ಸರಿತಪ್ಪುಗಳನ್ನು ಗ್ರಹಿಸುವಲ್ಲಿ ಯಾವುದನ್ನೂ ಅಗೌರವದಿಂದ ಕಾಣದೆ ದೋಷವನ್ನು ತಿದ್ದುವ ಸುಧಾರಕರ ದಾರಿ ಕೌಟುಂಬಿಕ ನಿರ್ವಹಣೆಯ ನಾಯಕಿಯರಲ್ಲಿದೆ. ಸ್ತ್ರೀಯರು ತಮ್ಮಲ್ಲೇ ಹುದುಗಿರುವ ಸತ್ವವನ್ನು ಗುರುತಿಸಿಕೊಳ್ಳದೆ ಅಜ್ಞಾನ, ಆಲಸ್ಯಗಳಲ್ಲಿ ಮುಳುಗಿರುವುದೇ ಅವರ ದಾಸ್ಯದ ಮೂಲ. ಈ ಸತ್ವವನ್ನು ಸಾಮಾಜಿಕ ಕ್ರಿಯಾಚರಣೆಯ ಮೂಲಕ ಮತ್ತೆ

ಪಡೆಯುವುದೇ ಸ್ತ್ರೀಯರ ಕೌಟುಂಬಿಕ ಸ್ವಾತಂತ್ರ್ಯದ ಅರ್ಥ. ಅದೇ ಅವರ ಬಿಡುಗಡೆಯ ಹಾದಿ ಎಂಬುದು ಮೊದಲ ಕಟ್ಟಿನ ಲೇಖಕಿಯರ ಗ್ರಹಿಕೆಯಾಗಿದೆ. ಆದುದರಿಂದಲೇ ಕೌಟುಂಬಿಕ ನೆಲೆಯಲ್ಲಿ ಪುರುಷನಿಗೆ ಸ್ತ್ರೀ ಪ್ರತಿಸ್ಪರ್ಧಿ ಎಂಬ ನಿಲುವಿನಿಂದ ಹೊರಡುವ ಸ್ವಾತಂತ್ರ್ಯ, ಸಮಾನತೆಗಳ ಪರಿಗ್ರಹಿಕೆಗಳನ್ನು ಅವರು ಸ್ಪಷ್ಟವಾಗಿ ತಳ್ಳಿಹಾಕುತ್ತಾರೆ. ಈ ರೀತಿ ಕೌಟುಂಬಿಕ ನೀತಿ ಬೋಧನೆಗೆ, ಸಾಮಾಜಿಕ ವಿಮರ್ಶೆಗೆ ಸಾಹಿತ್ಯವನ್ನು ಸಾಧನವೆಂದು ಸ್ವೀಕರಿಸುವಲ್ಲಿ ಕಲ್ಯಾಣಮ್ಮನವರ ಧೋರಣೆಗಳು ತಿರುಮಲಾಂಬ ಅವರ ಧೋರಣೆಗಳಿಗೆ ಬದ್ಧವಾಗಿಯೇ ಇವೆ.

> "'ಪ್ರಿಯಂವದಾ' 'ನಿರ್ಭಾಗ್ಯವನಿತೆ' ಈ ಎರಡೂ ಕಾದಂಬರಿಗಳಲ್ಲಿನ ಕೌಟುಂಬಿಕ ಸ್ವರೂಪ ತಿರುಮಲಾಂಬ ಚಿತ್ರಿಸಿದ ಕೌಟುಂಬಿಕ ಸ್ವರೂಪದಂತೆಯೇ ಇದೆ. ಈ ಕಾದಂಬರಿಗಳಲ್ಲಿಯೂ ಪಾತ್ರಗಳ ಏಳಿಗೆ ಮತ್ತು ಅವನತಿ ಕುಟುಂಬಗಳ ನೆಲೆಯಲ್ಲೇ ಸಾಧಿತಗೊಂಡಿದೆ. ಉದ್ದೇಶಿತ ಗುರಿಸಾಧನೆಯ ಚರ್ಚೆಯೇ ಕಾದಂಬರಿಯ ಒಳಹರಿವು ಆಗಿರುವುದರಿಂದ ಕೌಟುಂಬಿಕ ವೃತ್ತಾಂತಗಳ ಸಮಗ್ರ ದಾಖಲೆಗಳು ಇಲ್ಲಿ ಅಪರಿಪೂರ್ಣವಾಗಿವೆ. ಅಲ್ಲದೆ, ಪಾತ್ರಗಳೆಲ್ಲವೂ ಆಯಾ ಸಂದರ್ಭಕ್ಕೆ ಹುಟ್ಟಿಕೊಂಡು ಪಾತ್ರಗಳ ಯೋಜಿತಕಾರ್ಯ ಮುಗಿಯುತ್ತಿದ್ದಂತೆ ನಿರ್ಗಮನವಾಗಿ ಬಿಡುತ್ತವೆ. ಇದರ ಪರಿಣಾಮವಾಗಿ 'ಪ್ರಿಯಂವದಾ', 'ನಿರ್ಭಾಗ್ಯವನಿತೆ'ಯ ನೆಲೆಯಲ್ಲಿ ಪೂರ್ಣರೂಪದ ಕೌಟುಂಬಿಕ ಸ್ವರೂಪವನ್ನು ದಾಖಲಿಸುವುದು ಅಸಾಧ್ಯ. 'ಸಕಲ ವಿಧವಾದ ಧರ್ಮ, ಅರ್ಥ, ಕಾಮ, ಮೋಕ್ಷ ಮೊದಲಾದ ಸಾಧನಗಳಿಗೂ ಗೃಹವೇ ಮುಖ್ಯಸ್ಥಾನವು. ಆದುದರಿಂದಲೇ (Charity begins at home) ಧರ್ಮಕ್ಕೆ ಮೂಲ ಸ್ಥಾನವು ಗೃಹವೇ ಎಂದು ಹೇಳುವರು." (ಸುಮಿತ್ರಾ ಬಾಯಿ ಬಿ.ಎಸ್: ೧೯೯೨; ೩೪೪)

ಈ ಮಾತುಗಳ ಮೂಲಕ ಹಾಗೂ **ನಿರ್ಭಾಗ್ಯವನಿತೆ**ಯ ಉಪಸಂಹಾರ ಭಾಗದಲ್ಲಿನ ಕೌಟುಂಬಿಕ ನೆಲೆ-ವಿಧವೆಯ ಸ್ಥಾನಮಾನದ ದೀರ್ಘರೂಪದ ಚರ್ಚೆಯ ಮೂಲಕ ಮನೆ- ಕುಟುಂಬಗಳೇ ವ್ಯಕ್ತಿಗಳ ವ್ಯಕ್ತಿತ್ವ ವಿಕಾಸನದ ಮೂಲ ಎಂಬುದಾಗಿ ಪ್ರತಿಬಿಂಬಿತವಾಗುತ್ತದೆ. ಸೂಕ್ಷ್ಮವಾಗಿ ಅವಲೋಕಿಸಿದರೆ ಸ್ತ್ರೀ ಶಿಕ್ಷಣ, ವಿಧವಾ ವಿವಾಹದಂತಹ ಕೌಟುಂಬಿಕ ಅನಿವಾರ್ಯತೆಗಳು ಸಾಂಪ್ರದಾಯಿಕ ನೆಲೆಯಿಂದ ಹೊರಟು ಕ್ರಮವಾಗಿ ಸಮಕಾಲೀನ ಅವಶ್ಯಕತೆಗಳ ಅರಿವಿನೊಂದಿಗೆ ಹೆಚ್ಚು ಪುರೋಗಾಮಿಯಾಗುತ್ತಾ ಸಾಗುವುದು ಪ್ರಕಟಗೊಳ್ಳುತ್ತದೆ. ನಿರ್ಭಾಗ್ಯವನಿತೆಯಲ್ಲಿ ಶಚೇಂದ್ರನು ವಿಧವಾ ವಿವಾಹದ ಅನಿವಾರ್ಯದ ಬಗ್ಗೆ ಜನರಿಗೆ ಮಾಡುವ ಭಾಷಣದ ಮಾತುಗಳಲ್ಲಿ

> "'ವಿಧವಾ ವಿವಾಹ' ಮಾತ್ರ ಅನಿವಾರ್ಯವೆಂತಲೂ ಉಳಿದಂತೆ ಧರ್ಮನಿಷ್ಠೆಯನ್ನು ಕಾಯ್ದಿಕೊಂಡಿರಿ". (ಸುಮಿತ್ರಾ ಬಾಯಿ ಬಿ.ಎನ್: ೧೯೯೨ ; ೩೩೫...೩೪೬)

ಎನ್ನುವ ಮಾತುಗಳು ಕುಟುಂಬ, ಪಾತಿವ್ರತ್ಯಗಳನ್ನು ಬಿಟ್ಟರೆ ಪರ್ಯಾಯ ಮಾರ್ಗಗಳನ್ನು ಸಂಪೂರ್ಣವಾಗಿ ನಿರಾಕರಿಸುತ್ತವೆ. ಕಲ್ಯಾಣಮ್ಮನವರ ಈ ರೀತಿಯ ವೈಚಾರಿಕ ದ್ವಂದ್ವದ ಬಗ್ಗೆ ನೇಮಿಚಂದ್ರ ಅವರ ಅಭಿಪ್ರಾಯ ಹೀಗಿದೆ.

"ಶಿಕ್ಷಣ, ಸ್ವಾವಲಂಬನೆಯ ವಿಷಯದಲ್ಲಿ ಸಂಪ್ರದಾಯದ ಸರಹದ್ದಿನಾಚೆಗೆ ಜಿಗಿದರೂ ಸ್ತ್ರೀಗೆ ತನ್ನ ಗೃಹರಾಜ್ಯ ಪರಿಪಾಲನೆ ಮುಖ್ಯ ಕರ್ತವ್ಯ ಎಂಬುದೇ ಅವರ ಮೂಲದನಿ... ಸ್ತ್ರೀಯ ಶಿಕ್ಷಣ ಉದ್ಯೋಗ ಉಳಿತಾಯ ಎಲ್ಲವೂ ಗೃಹಿಣಿ ಪಾತ್ರದತ್ತ ಕೇಂದ್ರೀಕೃತವಾಗಿದೆ. ಈ ಬಗೆಯಲ್ಲಿ ಎರಡು ದಿಕ್ಕಿನ ಚಿಂತನೆಗಳನ್ನೊಳಗೊಂಡ 'ಸರಸ್ವತಿ' ಸಾಂಪ್ರದಾಯಿಕ ನೆಲದ ಬೇರುಗಳನ್ನು ಕಿತ್ತೊಗೆಯದೆಯೇ ಹೊಸ ಮುಗಿಲಿನತ್ತ, ಹೊಸ ವಿಚಾರದತ್ತ ಕೈ ಚಾಚಿದ ಕಲ್ಯಾಣಮ್ಮನವರ ನಿಲುವನ್ನು ಸ್ಪಷ್ಟಪಡಿಸುತ್ತದೆ." (ನೇಮಿಚಂದ್ರ :೧೯೯೧; ೧೩-೭೦)

ಪ್ರಗತಿಪರತೆ ಎನ್ನುವುದು ಒಂದು ಮೂಲದ್ರವ್ಯವಾಗಿ ಬದುಕಿನಲ್ಲಿ ಇಡಿಯಾಗಿ ವ್ಯಕ್ತಗೊಳ್ಳುವುದಿಲ್ಲ. ಹೀಗಾಗಿ ಉದಾರವಾದಿ ಸಾಂಸ್ಕೃತಿಕ ಪರಿಸರ ಮೊದಲಕಟ್ಟಿನ ಕಾದಂಬರಿಕಾರರ ಪ್ರಜ್ಞೆಯ ಮೇಲೆ ಗಾಢ ಪರಿಣಾಮ ಬೀರಿರುವ ಸಂಗತಿ ವಾಸ್ತವ.

"ಕುಟುಂಬವನ್ನು ಸಮಾಜದ ಬಹು ನಿರ್ಣಾಯಕ ಘಟಕವೆಂದು ಭಾವಿಸುವ ಈ ಸಮಾಜದಲ್ಲಿ ಕಲ್ಯಾಣಮ್ಮ!! ಪುರುಷರ ಆಶ್ರಯವಿಲ್ಲದ ಮಹಿಳೆಯರ ಆರ್ಥಿಕ ಸ್ವಾವಲಂಬನೆಯನ್ನು!! ಆ ಆಶ್ರಯವಿರುವ ಗೃಹಿಣಿಯರಿಗಾಗಿ ಸಣ್ಣ ಉಳಿತಾಯ ಕೈಗಾಸು ಸಂಪಾದನೆ ಮತ್ತು ಬಡವರಿಗಾಗಿ ಅದನ್ನು ವ್ಯಯಿಸುವ ವಿಚಾರಗಳನ್ನು ಪ್ರತಿಪಾದಿಸಿದರು. ಆದರೆ ವಿದ್ಯಾವತಿಯರಾದ ಎಲ್ಲಾ ಸ್ತ್ರೀಯರೂ ಸಾರ್ವಜನಿಕ ಕ್ಷೇತ್ರಗಳಲ್ಲಿ ದುಡಿಯುವ ಕಾಲವೊಂದು ಮುಂದೆ ಬರಬಹುದು ಎಂಬ ನಿರೀಕ್ಷೆಯೂ ಅವರಿಗಿತ್ತು." (ಸುಮಿತ್ರಾಬಾಯಿ ಬಿ.ಎನ್. : ೧೯೯೨ ; ೧೦೦)

ಈ ಅಭಿಪ್ರಾಯ ಇಲ್ಲಿ ಗಮನಾರ್ಹ. ಕೌಟುಂಬಿಕ ಬದುಕಿನಲ್ಲಿ ಗೃಹಿಣಿಯರು ಒಳಗಾಗುತ್ತಿದ್ದ ಅನ್ಯಾಯಗಳ ಬಗೆಗಳನ್ನು ಕಲ್ಯಾಣಮ್ಮ ತಮ್ಮ ಕಾದಂಬರಿಗಳಲ್ಲಿ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಬಾಲ್ಯವಿವಾಹ, ವರದಕ್ಷಿಣೆ, ವೈಧವ್ಯದ ಸಮಸ್ಯೆಗಳಲ್ಲಿ ಕುಟುಂಬದ ದ್ವಿಸ್ತರ ನೀತಿಯಿಂದ ಸ್ತ್ರೀಯರಿಗಾಗುವ ಅನ್ಯಾಯಗಳನ್ನು ಪ್ರಿಯಂವದೆ, ಆಕೆಯ ವಿಧವೆತಾಯಿ, ಅತ್ತೆ, ನಾದಿನಿಯರ ಪಾತ್ರಗಳಲ್ಲಿ, 'ನಿರ್ಭಾಗ್ಯವನಿತೆ'ಯ ಇಂದಿರೆ, ಸ್ವರ್ಣ ಮುಂತಾದ ಪಾತ್ರಗಳಲ್ಲಿ ಲೇಖಕಿ ಗ್ರಹಿಸಿದ್ದಾರೆ. ಆದರೆ ಈ ಎಲ್ಲ ಸಮಸ್ಯೆಗಳ ಆಳದಲ್ಲಿರುವ ವ್ಯವಸ್ಥೆಯ ಶಕ್ತಿಗಳನ್ನು ಗ್ರಹಿಸುವಲ್ಲಿ ಅವರು ತಮ್ಮ ಕಾಲದ ನಂಬಿಕೆಗಳಿಗೆ ಬದ್ಧರಾಗಿ ಉಳಿದಿದ್ದಾರೆ. ತಿರುಮಲಾಂಬ ಅವರಿಗಿಂತ ಕಲ್ಯಾಣಮ್ಮನವರ ರಚನೆಗಳಲ್ಲಿ ಪ್ರಖರವಾದ ವೈಚಾರಿಕತೆ, ಪ್ರಗತಿಪರ ಅಂಶಗಳನ್ನು ಓದುಗರಿಗೆ ತಲುಪಿಸುವ ತೀವ್ರ ಕಾಳಜಿ ಇದೆ. ಇದು ವಸಾಹತುಶಾಹಿ ಇಂಡಿಯಾದ ಜನರ ರೀತಿ ನೀತಿಗಳಿಗೆ, ಪಲ್ಲಟವಾಗುತ್ತಿದ್ದ ಜೀವನ ಮೌಲ್ಯಗಳಿಗೆ ಲೇಖಕಿಯ ಪ್ರತಿಕ್ರಿಯೆಯಾಗಿ ಕಂಡು ಬರುತ್ತದೆ.

"ತಮ್ಮ ಸಮಕಾಲೀನ ಸಾಹಿತ್ಯ ಧೋರಣೆಗಳಿಗಿಂತ ಭಿನ್ನವಾದ ಹಳೆಯದೊಂದು ಮಾದರಿಯನ್ನು ಅನುಸರಿಸಿದ್ದುದರಿಂದ ಕಲ್ಯಾಣಮ್ಮ ಮತ್ತು ತಿರುಮಲಾಂಬ ಕನ್ನಡ 'ಸಾಹಿತ್ಯದ ಇತಿಹಾಸಕಾರರ ದೃಷ್ಟಿಯಲ್ಲಿ' ಮೊದಲ ಹಂತದ ಲೇಖಕಿಯರು 'ಸ್ತ್ರೀ ಜಾಗೃತಿಗೆ ಯತ್ನಿಸಿದವರು' ಎಂಬುದಕ್ಕಿಂತ ಹೆಚ್ಚಿನ ಗಣನೆಯನ್ನು ಪಡೆಯದೆ ಹೋದವು ಎಂದು ತೋರುತ್ತದೆ." *೧೨ (ಸುಮಿತ್ರಾ ಬಾಯಿ ಬಿ.ಎನ್: ೧೯೯೨; ೮೬.)

### ೩.೩ ಕೂಡು ಕಟ್ಟಿನ ಕಾದಂಬರಿಗಳು:

ತ್ರಿವೇಣಿ ಮತ್ತು ಇಂದಿರಾ.ಎಂ.ಕೆ. ಅವರ ಕಾದಂಬರಿಗಳನ್ನು ಕೂಡುಕಟ್ಟಿನ ಕಾದಂಬರಿಗಳು ಎಂದು ಪರಿಗಣಿಸಿರುವುದು ಕಾದಂಬರಿ ರಚನೆಗೊಂಡ ಕಾಲಕ್ಕೆ ಸಂಬಂಧಿಸಿದಂತೆ ಅಲ್ಲ ಎಂಬುದನ್ನು ಮೊದಲೇ ಸ್ಪಷ್ಟಪಡಿಸಬೇಕಾಗುತ್ತದೆ. ಹಾಗೆ ನೋಡಿದರೆ ಉದಾರವಾದಿ ಸಾಂಸ್ಕೃತಿಕ ನೆಲೆ ಎನ್ನುವ ಹರವಿನಲ್ಲಿ ಚರ್ಚಿತಗೊಳ್ಳುವ ತಿರುಮಲಾಂಬ, ಕಲ್ಯಾಣಮ್ಮ, ತ್ರಿವೇಣಿ, ಇಂದಿರಾ.ಎಂ.ಕೆ ಕಾಲದ ವ್ಯಾಪ್ತಿಯಲ್ಲಿ ಹೆಚ್ಚು ಕಡಿಮೆ ಮುಕ್ಕಾಲು ಶತಮಾನವನ್ನು ಪ್ರತಿನಿಧಿಸುವವರಾಗುತ್ತಾರೆ. ಉದಾರವಾದಿ ಸಾಂಸ್ಕೃತಿಕ ನೆಲೆ ಸ್ವಾತಂತ್ರ್ಯ ಪೂರ್ವ- ಸ್ವಾತಂತ್ರ್ಯೋತ್ತರ ಭಾರತವನ್ನು ಒಳಗುಮಾಡಿಕೊಳ್ಳುತ್ತದೆ. ಇದರಿಂದಾಗಿ ಈ ನಾಲ್ಕು ಜನ ಲೇಖಕಿಯರ ಪಠ್ಯಗಳನ್ನು ಒಂದೇ ಚೌಕಟ್ಟಿನೊಳಗೆ ಇಟ್ಟು ನೋಡುವುದು ಸಾಧ್ಯವಾಗುತ್ತದೆ. ಈ ನಾಲ್ಕು ಲೇಖಕಿಯರ ಬರಹಕ್ಕೆ ಸಂಬಂಧಿಸಿ ಹೇಳುವುದಾದರೆ, ತಿರುಮಲಾಂಬ ಮತ್ತು ಕಲ್ಯಾಣಮ್ಮ ಇವರ ಬರಹಗಳು ಪರಸ್ಪರ ಏಕಕಾಲೀಕವಾದವುಗಳು. ಅಂತೆಯೇ ಇವರ ಕಾದಂಬರಿ ಪಠ್ಯವನ್ನು ಮೊದಲ ಕಟ್ಟಿನ ಕಾದಂಬರಿಗಳೆಂದು ಚರ್ಚಿಸುವುದು ಸಮರ್ಪಕವಾಗಿ ಬಿಡುತ್ತದೆ. ಈ ಲೇಖಕಿಯರಿಂದ ತ್ರಿವೇಣಿ ಮತ್ತು ಇಂದಿರಾ.ಎಂ.ಕೆ ಅವರ ಬರಹಗಳಿಗೆ ಮೂವತ್ತು ನಲವತ್ತು ವರ್ಷಗಳ ಅಂತರವಿದೆ. ಆದರೆ, ವಿವಾಹ ಮತ್ತು ಕುಟುಂಬ ಸಂಸ್ಥೆಯ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಗಮನಾರ್ಹ ಪಲ್ಲಟವನ್ನು ಗುರುತಿಸುವುದು ಸಂಕೀರ್ಣವಾದ ಅಂಶವಾಗಿದೆ. ಎಂದರೆ, ನಿರ್ದಿಷ್ಟ ಬ್ರಾಹ್ಮಣ ಸಮುದಾಯದಲ್ಲಿ ವಿವಾಹ ಮತ್ತು ಕುಟುಂಬಕ್ಕೆ ಸಂಬಂಧಿಸಿದಂತೆ ವಿಶೇಷವಾದ ಬದಲಾವಣೆಗಳನ್ನು ಗುರುತಿಸುವುದು ಕಷ್ಟವಾಗುತ್ತದೆ. ತಿರುಮಲಾಂಬಾ ಅವರಿಂದ ಪ್ರಾರಂಭವಾದ ಕಾದಂಬರಿ ಚೌಕಟ್ಟಿನ (ಕುಟುಂಬ ಕೇಂದ್ರಿತವಾಗಿ) ಪರಂಪರೆ ಸ್ಥೂಲವಾಗಿ ಇಂದಿರಾ.ಎಂ.ಕೆ ಅವರ ಕಾದಂಬರಿಗಳ ಕಾಲಘಟ್ಟದವರೆಗೂ ಅದೇ ಸತ್ವ ಹಾಗೂ ಮಿತಿಗಳೊಡನೆ ಮುಂದುವರಿಯುತ್ತದೆ. ಈ ಉದಾರವಾದಿ ಸಾಂಸ್ಕೃತಿಕ ನೆಲೆಯಲ್ಲಿ ಚರ್ಚೆಗೆ ಎತ್ತಿಕೊಂಡಿರುವ ನಾಲ್ಕು ಜನ ಲೇಖಕಿಯರ ಕಾದಂಬರಿಗಳಲ್ಲೂ ಪರಂಪರಾಗತ ಹಿಂದೂ ಕುಟುಂಬಗಳ (ಬ್ರಾಹ್ಮಣ ಸಮಾಜದ) ಬಗ್ಗೆ ಇದ್ದ ದ್ವಂದ್ವ ಮನೋಭಾವಗಳು ಪ್ರತಿಫಲಿಸುತ್ತವೆ. ಈ ಮುಖ್ಯ ಕಾರಣದಿಂದಾಗಿ ಕೂಡುಕಟ್ಟಿನ ಕಾದಂಬರಿಗಳು ಎಂದು ತ್ರಿವೇಣಿ ಮತ್ತು ಇಂದಿರಾ.ಎಂ.ಕೆ ಇವರ ಕಾದಂಬರಿಗಳನ್ನು ಗಮನಿಸಬೇಕಾಗುತ್ತದೆ. ಈ ಲೇಖಕಿಯರ ಕಾದಂಬರಿಗಳು ವಿವಾಹ-ಕುಟುಂಬ ಸಂಸ್ಥೆಯನ್ನು ಕುರಿತು ಸ್ತ್ರೀಯರಿಗೆ ಇರುವ ತೀವ್ರ ದ್ವಂದ್ವ ಭಾವನೆಗಳು, ಆಕರ್ಷಣೆ- ವಿಕರ್ಷಣೆಗಳನ್ನು ಬಿಂಬಿಸುತ್ತವೆ. ಆದರೆ, ಅಧ್ಯಯನದಲ್ಲಿ ಕೂಡುಕಟ್ಟಿನ ಕಾದಂಬರಿಗಳೆಂದು ಇಬ್ಬರು ಕಾದಂಬರಿಕಾರ್ತಿಯರ ಪ್ರಾತಿನಿಧಿಕ ಕೃತಿಗಳನ್ನಷ್ಟೇ ಗಮನಿಸಲಾಗಿದೆ. *೧೩ ತ್ರಿವೇಣಿಯವರ ಒಂಬತ್ತು ಕೃತಿಗಳನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಅವುಗಳೆಂದರೆ, **ಹೂವು ಹಣ್ಣು** (೧೯೫೦), **ಅಪಸ್ವರ** (೧೯೫೩), **ಕೀಲು ಗೊಂಬೆ** (೧೯೫೬), **ಅಪಜಯ** (೧೯೫೬), **ಕಂಕಣ** (೧೯೫೭), **ಮುಕ್ತಿ** (೧೯೫೯), **ಕಾಶೀಯಾತ್ರೆ** (೧೯೬೨), **ಶರಪಂಜರ** (೧೯೬೨) **ಹಣ್ಣೆಲೆ ಚಿಗುರಿದಾಗ** (೧೯೬೩) ಇಂದಿರಾ.ಎಂ.ಕೆ ಅವರು ಬರೆದ ೪೧ ಕಾದಂಬರಿಗಳಲ್ಲಿ ಈ ಅಧ್ಯಯನದಲ್ಲಿ ೯ ಕಾದಂಬರಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ತುಂಗ ಭದ್ರ (೧೯೬೩), **ಹೆಣ್ಣಿನ ಆಕಾಂಕ್ಷೆ** (೧೯೬೬), **ಗೆಜ್ಜೆಪೂಜೆ** (೧೯೬೬), ಮನತುಂಬಿದ ಮಡದಿ (೧೯೬೯),

**ಚಿದ್ವಿಲಾಸ** (೧೯೭೧), **ಸದಾನಂದ** (೧೯೭೫), **ಮಧುವನ** (೧೯೭೬), **ಫಣಿಯಮ್ಮ** (೧೯೭೬) **ಸೂತ್ರಧಾರ** (೧೯೮೪). ಉದಾರವಾದಿ ಸಾಂಸ್ಕೃತಿಕ ನೆಲೆಯಲ್ಲಿ ವ್ಯಕ್ತವಾಗುವ ಮೊದಲ ಕಟ್ಟಿನ ಕಾದಂಬರಿಗಳು ಹಾಗೂ ಕೂಡು ಕಟ್ಟಿನ ಕಾದಂಬರಿಗಳಲ್ಲಿ 'ಸ್ತ್ರೀ ಮತ್ತು ವಿವಾಹ'ವನ್ನು ಕುರಿತ ಚರ್ಚೆ ಮುಖ್ಯವಾದುದು. ಇದನ್ನು 'ಒಂದು ಮಹತ್ವ'ದ ಅಂಶವಾಗಿ ಅಥವಾ 'ಒಂದು ಮಿತಿ'ಯಾಗಿ ಗುರುತಿಸುವುದಕ್ಕೆ ವಿಮರ್ಶೆಯಲ್ಲಿ ಸಾಧ್ಯ. ಆದರೆ ಮಹಿಳೆಯರ ಸಾಹಿತ್ಯದಲ್ಲಿ ಇದು ಒಂದು ಸಾಮಾಜಿಕ ವಾಸ್ತವವಾಗಿ ಪ್ರಕಟಗೊಳ್ಳುತ್ತದೆ. ಸ್ತ್ರೀಯರ ಎಲ್ಲಾ ಬೆಳವಣಿಗೆಗಳು, ಸಮಸ್ಯೆಗಳು ಹುಟ್ಟಿನಿಂದ ಮೊದಲುಗೊಂಡು ಸಾವಿನವರೆಗೆ ವಿವಾಹದ ಪರಿಧಿಯಲ್ಲೇ ಸುತ್ತುತ್ತಿರುತ್ತವೆ. ಪುರುಷನಿಷ್ಠ ಸಮಾಜದಲ್ಲಿ ಸ್ತ್ರೀಯರಿಗೆ ಇದೊಂದು ಅನಿವಾರ್ಯ. ಸ್ತ್ರೀಯರ ಸಂಪೂರ್ಣ ಬದುಕು ವಿವಾಹದ ಕುರಿತ ನಿರ್ಧಾರಗಳಲ್ಲಿ ಹುದುಗಿರುತ್ತದೆ. ಸಮ್ಮತಿ, ವಿರೋಧ, ಹೊಂದಾಣಿಕೆ, ಹೋರಾಟ, ಸುಖ, ದುಃಖ ಯಾವುದೇ ಇರಲಿ ವಿವಾಹದ ಕೇಂದ್ರವನ್ನು ಲಕ್ಷ್ಯದಲ್ಲಿರಿಸಿಯೇ ಸ್ತ್ರೀಯರು ಬದುಕಬೇಕಾಗುತ್ತದೆ. ಸ್ತ್ರೀಯರ ಬದುಕನ್ನು ಸಮಗ್ರವಾಗಿ ಆವರಿಸಿರುವ ಈ ಸಾಮಾಜಿಕ ಅನಿವಾರ್ಯತೆಯನ್ನು ಅರ್ಥೈಸಿಕೊಳ್ಳುವುದು ಸಂಕೀರ್ಣವಾದ ಪ್ರಶ್ನೆಯಾಗಿದೆ. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ 'ಎರಡನೆಯ ತಲೆಮಾರು' ಎಂದು ಗುರುತಿಸುವ ತ್ರಿವೇಣಿ ಮತ್ತು ಇಂದಿರಾ.ಎಂ. ಕೆ. ಅವರ ಕಾದಂಬರಿಗಳು ವಿವಾಹ ಸಂಸ್ಥೆಯನ್ನು ವಿಸ್ತೃತ ಚರ್ಚೆಗೆ ಒಳಗು ಮಾಡುತ್ತವೆ. ಬಹುತೇಕ ಅವರ ಎಲ್ಲಾ ಕಾದಂಬರಿಗಳು ಕೂಡ ಸ್ತ್ರೀಯರಿಗೂ ಹಾಗೂ ವಿವಾಹ ಸಂಸ್ಥೆಗೂ ಇರುವ ಸಂಬಂಧಗಳನ್ನು, ಸ್ವರೂಪಗಳನ್ನು ಚರ್ಚಿಸುತ್ತವೆ. 'ವಿವಾಹವು' ಸ್ತ್ರೀಯರ ಬದುಕಿನಲ್ಲಿ ತೆರೆದಿಡುವ ಎಲ್ಲಾ ಸಾಧ್ಯತೆಗಳನ್ನು ವಿಶ್ಲೇಷಿಸುತ್ತವೆ. ಅಲ್ಲದೆ, 'ವಿವಾಹದ' ಪರಿಣಾಮವಾಗಿ ವ್ಯಕ್ತವಾಗುವ ಎಲ್ಲಾ ಸಮಸ್ಯೆಗಳ ವ್ಯಾಪಕ ನೋಟವನ್ನು ತ್ರಿವೇಣಿ ಹಾಗೂ ಇಂದಿರಾ.ಎಂ.ಕೆ ಅವರ ಕಾದಂಬರಿಗಳು ನೀಡುತ್ತವೆ. 'ವಿವಾಹ' ಮತ್ತು ಆ ಮೂಲಕವಾಗಿ ಹುಟ್ಟುವ ಹಲವು ಸಮಸ್ಯೆಗಳನ್ನು ಕೂಡುಕಟ್ಟಿನ ಕಾದಂಬರಿಗಳು ಚರ್ಚಿಸುವುದರಿಂದ ಇಲ್ಲಿ ಸ್ತ್ರೀಯ ಬದುಕು-ಚಿತ್ರಗಳು ಮುಖ್ಯವಾಗುತ್ತವೆ. ಕೂಡುಕಟ್ಟಿನ ಕಾದಂಬರಿಗಳು ಆಯ್ಕೆ ಮಾಡಿಕೊಳ್ಳುವ ವಸ್ತು - ತಂತ್ರ ನಿರ್ವಹಣಾ ಕೌಶಲವೇ ಇದನ್ನು ನಿರ್ದೇಶಿಸುತ್ತಿರುತ್ತವೆ. ಹೀಗಾಗಿ ಪ್ರಧಾನವಾಹಿನಿಯಲ್ಲಿನ ಸಾಹಿತ್ಯಕ್ಕಿಂತ ಭಿನ್ನ ಮಾದರಿಯ ಸ್ವರೂಪವನ್ನು ಕೂಡಕಟ್ಟಿನ ಕಾದಂಬರಿಗಳು ಪಡೆದುಕೊಳ್ಳುವುದು ಸಹಜವಾಗಿದೆ. ಈವರೆಗಿನ 'ಸಾಹಿತ್ಯ ವಿಮರ್ಶೆ'ಯು ತ್ರಿವೇಣಿ ಮತ್ತು ಇಂದಿರಾ.ಎಂ.ಕೆ. ಅವರ ಸಾಹಿತ್ಯವನ್ನು ಮಾನ್ಯ ಮಾಡಿರುವ ಮಾನದಂಡಗಳು ಇಲ್ಲಿ ಮುಖ್ಯವೆಂದು ಪರಿಗಣಿತಗೊಳ್ಳದಿರುವ ಕಾರಣವೂ ಇದಾಗುತ್ತದೆ. ಈ ಕಾರಣಗಳಿಂದಾಗಿ ಸಮಗ್ರತೆಯನ್ನು - ಪರಿಪೂರ್ಣತೆಯನ್ನು ಸಾಧಿಸಿಕೊಳ್ಳುವ ನೆಲೆಯಿಂದ ಕೂಡುಕಟ್ಟಿನ ಕಾದಂಬರಿಗಳ ವಿವಾಹದ ಸ್ವರೂಪವನ್ನು ನಿರ್ದಿಷ್ಟ ಲೇಖಕಿಯರ ಹಿನ್ನೆಲೆಯಲ್ಲಿ ಪ್ರತ್ಯೇಕವಾಗಿ ಚರ್ಚಿಸಬೇಕಾಗುತ್ತದೆ. ಮಾತ್ರವಲ್ಲ ಪ್ರತ್ಯೇಕ ಗ್ರಹಿಕೆಯ ನೆಲೆಯಿಂದಲೇ ಒಟ್ಟಂದದ ನಿರ್ಣಯವನ್ನು ಕಂಡುಕೊಳ್ಳಬೇಕಾಗುತ್ತದೆ. ಕೂಡುಕಟ್ಟಿನ ವಿವಾಹ ಸ್ವರೂಪವೆಂಬುದನ್ನು ಗುರುತಿಸುವಾಗ ಈ ಕೆಳಗಿನ ಅಂಶಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ.

೧) ವಿವಾಹದ ಕುರಿತಂತೆ ಸ್ತ್ರೀಗೆ ಆಯ್ಕೆಯ ಸ್ವಾತಂತ್ರ್ಯವಿಲ್ಲದಿರುವುದು.

೨) ಸ್ತ್ರೀ ಆರ್ಥಿಕವಾಗಿ ಪರಾವಲಂಬಿಯಾಗಿರುವುದು.

೩) ವಿಧವೆಗೆ ಪುನರ್ವಿವಾಹಕ್ಕೆ ಅವಕಾಶಗಳಿಲ್ಲದಿರುವುದು.

೪) ಸ್ತ್ರೀ ಎನ್ನುವ ಕಾರಣದಿಂದಾಗಿ ವಿವಾಹದ ನಿರ್ಧಾರದಲ್ಲಿ ಕುಟುಂಬ ಹಾಗೂ ಕುಟುಂಬದ ಹೊರಗೆ ಶೋಷಣೆಗೆ ಒಳಗಾಗುವುದು.

೫) ಸ್ತ್ರೀಗೆ ತನ್ನದೇ ಆದ ವೃತ್ತಿ ಜೀವನವಿದ್ದರೆ, ಅವಳು ವಿವಾಹ ಹಾಗೂ ವೃತ್ತಿ ಜೀವನಗಳ ನಡುವೆ ಘರ್ಷಣೆಗೆ ಒಳಗಾಗುವುದು.

ಕೊಡುಕಟ್ಟಿನ ಒಂದೊಂದು ಕಾದಂಬರಿಯೂ ಮೇಲಿನ ಕಾರಣಗಳಿಂದಾಗಿ ನಲುಗುತ್ತಿರುವ ಸ್ತ್ರೀಯರ ದಮನೀಯ ಜೀವನವನ್ನು ದಾಖಲಿಸುತ್ತದೆ. ಈ ಅಂಶಗಳ ಭೂಮಿಕೆಯಲ್ಲಿ ತ್ರಿವೇಣಿ ಹಾಗೂ ಇಂದಿರಾ.ಎಂ.ಕೆ. ಅವರ ಕಾದಂಬರಿಗಳಲ್ಲಿನ ವಿವಾಹ ಸ್ವರೂಪವನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

### ೩.೩.೧ ಕೊಡುಕಟ್ಟಿನ ಕಾದಂಬರಿಗಳು : ವಿವಾಹದ ಸ್ವರೂಪ.

**ತ್ರಿವೇಣಿಯ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹದ ಸ್ವರೂಪ :**

ತ್ರಿವೇಣಿಯವರ ಎಲ್ಲ ಕಾದಂಬರಿಗಳ ಮುಖ್ಯ ಸಂವಿಧಾನವೇ ವಿವಾಹ. ಅವರ ಕಾದಂಬರಿಗಳ ಎಲ್ಲಾ ನಾಯಕಿಯರೂ ಈ ಸಂಸ್ಥೆಯನ್ನು ಹಾದು ಹೋದವರೆ. ಅವರ ಕಾದಂಬರಿಗಳಲ್ಲಿ 'ಸಮಸ್ಯೆಯ ಆರಂಭವಾಗಿ' ಹಾಗೂ 'ಸಮಸ್ಯೆಯ ನಿಲುಗಡೆಯಾಗಿ' 'ವಿವಾಹ'ವನ್ನು ಚಿತ್ರಿಸಿರುವುದು ವ್ಯಕ್ತವಾಗುತ್ತದೆ. ಇದರಿಂದಾಗಿ ತ್ರಿವೇಣಿಯವರ ಕಾದಂಬರಿಗಳು ಚಿತ್ರಿಸುವ 'ಸೀಮಿತ ಸಾಮಾಜಿಕ ವ್ಯಾಪ್ತಿ'ಯಲ್ಲಿ ವಿವಾಹವೆಂಬುದು ನಿರ್ಣಾಯಕ ಪಾತ್ರವಹಿಸುತ್ತದೆ. ವಿವಾಹವು ಉಂಟುಮಾಡುವ ಜೀವನಾವರ್ತದ ಬದಲಾವಣೆಗಳಲ್ಲಿ ಲೇಖಕಿಗೆ ಗಾಢ ನಂಬಿಕೆ ಇದೆ. ಈ ಕಾರಣದಿಂದಲೇ ಅವರ ಎಲ್ಲಾ ಕಾದಂಬರಿಗಳಲ್ಲಿ ಇದು ಆವರ್ತನಗೊಳ್ಳುತ್ತ ಸಾಗುತ್ತದೆ. ಇದನ್ನು ಕಾದಂಬರಿಗಳ ಶೀರ್ಷಿಕೆಗಳೇ ಸಮರ್ಥಿಸುತ್ತವೆ. **ಕಂಕಣ, ಕಾಶೀಯಾತ್ರೆ, ಬಾನು ಬೆಳಗಿತು, ಅವಳ ಮನೆ, ಹೂವು- ಹಣ್ಣು, ವಸಂತಗಾನ** ಮುಂತಾದ ಹೆಸರುಗಳು ವಿವಾಹಸಂಸ್ಥೆಯ ಒಂದು ಪಾರ್ಶ್ವವನ್ನು ದರ್ಶಿಸಿದರೆ, **ಅಪಸ್ವರ- ಅಪಜಯ, ಕೀಲುಗೊಂಬೆ, ಶರಪಂಜರ, ಮುಕ್ತಿ** ಮುಂತಾದವು ಮತ್ತೊಂದು ಮಗ್ಗಲನ್ನು ಬಿಂಬಿಸುತ್ತವೆ. ತ್ರಿವೇಣಿಯವರ ಕಾದಂಬರಿಗಳು ಬಿಂಬಿಸುವ ವಿವಾಹದ ಕೆಲವು ಮಾದರಿಗಳನ್ನು ಈ ಕೆಳಗಿನಂತೆ ಪರಿಶೀಲಿಸಬಹುದು.

ಅ) ಜೀವನದ ಸಂಗಾತಿಗಳನ್ನು ತಾವೇ ಆಯ್ಕೆ ಮಾಡಿಕೊಳ್ಳುವ ಸ್ತ್ರೀಯರು.

ಆ) ವಿವಾಹದಲ್ಲಿ ಆಯ್ಕೆಯ ಅವಕಾಶಗಳಿಲ್ಲದೆ ಕುಟುಂಬದವರ ನಿರ್ಧಾರಕ್ಕೆ ಬದ್ಧರಾದವರು.

ಇ) ಕುಟುಂಬದ ಆಯ್ಕೆ ಮತ್ತು ಸ್ವಂತ ಆಯ್ಕೆಗಳನ್ನು ಜಾಣತನದಿಂದ ಸರಿಹೊಂದಿಸಿಕೊಂಡವರು.

ಉದಾರವಾದಿ ಸಾಂಸ್ಕೃತಿಕ ನೆಲೆ ಹುಟ್ಟು ಹಾಕಿದ ವಿವಾಹದ ನೂತನ ಆಯಾಮದಲ್ಲಿ ಪಟ್ಟಣ ನಗರಗಳ ಸಾಮಾಜಿಕ ಹೊಸ ಸನ್ನಿವೇಶಗಳಲ್ಲಿ ಯುವಕ - ಯುವತಿಯರಿಗೆ ಬೆರೆಯುವ ಅವಕಾಶ ಹೆಚ್ಚಾಗಿದೆ. ಇದು ಇತರ ಜನಾಂಗ, ಜಾತಿ, ವರ್ಣ, ಆರ್ಥಿಕ ವರ್ಗ ಮತ್ತು ಧರ್ಮದವರ ಬಗ್ಗೆ ಹಿಂದೆ ಇದ್ದ ಪೂರ್ವಾಗ್ರಹಗಳನ್ನು ನೀಗಿಸಿಕೊಳ್ಳುವ ಅವಕಾಶ ಕಲ್ಪಿಸಿಕೊಟ್ಟಿದೆ. ಯುವಕ ಯುವತಿಯರ ಪರಿಸರ ಮತ್ತು ಲಿಂಗ ಇವೆರಡು ಅಂಶಗಳೂ ಅವರ ಅಭಿರುಚಿಗಳನ್ನು ನಿರ್ಧರಿಸುತ್ತವೆ. ಸಣ್ಣನಗರ, ಉಪನಗರ, ಮತ್ತು ಹಳ್ಳಿಗಾಡಿನವರು ಅವರವರ ಪರಿಸರಕ್ಕೆ ತಕ್ಕಂತಹ ಅಭಿರುಚಿಗಳನ್ನೂ ಮತ್ತು ದೊಡ್ಡ ನಗರಗಳಲ್ಲಿರುವವರು ಅವರ ಪರಿಸರ

ಹಾಗೂ ದೊರೆಯುವ ಅವಕಾಶಗಳಿಗೆ ಅನುಗುಣವಾದ ಅಭಿರುಚಿಗಳನ್ನೂ ಬೆಳಸಿಕೊಳ್ಳುತ್ತಾರೆ. ಹೀಗಾಗಿ ಪಟ್ಟಣ ಪ್ರದೇಶದ ವಿದ್ಯಾವಂತ ಯುವಕ- ಯುವತಿಯರಿಗೆ ಪರಸ್ಪರ ಅರ್ಥೈಸಿಕೊಳ್ಳುವ ಅವಕಾಶಗಳು ಹೆಚ್ಚಾಗಿರುತ್ತವೆ. ವಸಾಹತುಶಾಹಿ - ವಸಾಹತೋತ್ತರ ಈ ಸಂದರ್ಭ ಜೀವನದ ಸಂಗಾತಿಗಳನ್ನು ಪರಸ್ಪರ (ಗಂಡು- ಹೆಣ್ಣು) ಆಯ್ಕೆ ಮಾಡಿಕೊಳ್ಳುವ ಸಾಮಾಜಿಕ ಪಲ್ಲಟಕ್ಕೆ ಕಾರಣವಾಗಿದೆ.

ಸಂಪ್ರದಾಯಸ್ಥ ಸಮಾಜಕ್ಕೆ ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಅಪರಿಚಿತವಾಗಿದ್ದ ಅಂಶವೆಂದರೆ, ಸ್ತ್ರೀಯರು ತಮ್ಮ ಜೀವನದ ಸಂಗಾತಿಗಳನ್ನು ತಾವೇ ಆಯ್ಕೆ ಮಾಡಿಕೊಳ್ಳುವುದು. ಜೀವನ ಸಂಗಾತಿಯ ಆಯ್ಕೆಯನ್ನು ಮಂಡಿಸುವುದು ಮತ್ತು ತಮ್ಮ ಆಯ್ಕೆಯಲ್ಲಿ ಗೆಲ್ಲುವುದು ಇವೆರಡನ್ನು ಸಾಧಿಸುವ ಸ್ತ್ರೀಯರ ಮಾದರಿಗಳು ತ್ರಿವೇಣಿಯವರ ಕಾಲಕ್ಕೆ ಹೊಸದೇ ಆಗಿದೆ. ಇಂತಹ ಸಾಧ್ಯತೆಗಳನ್ನು, ವಿವಾಹ ಪೂರ್ವದ ಗಂಡು- ಹೆಣ್ಣುಗಳ ಒಡನಾಟವನ್ನು ಹಲವು ಕಾದಂಬರಿಗಳು ವಿವರಿಸುತ್ತವೆ. ನಿರ್ದಿಷ್ಟ ಸಾಮಾಜಿಕ ನೆಲೆಯಲ್ಲಿ ಹೀಗೆ ವಿವಾಹ ಪೂರ್ವದಿನಗಳ ಗಂಡಿನ ಒಡನಾಟದ ಅವಕಾಶವನ್ನು ಕಲ್ಪಿಸಿದ್ದು ತ್ರಿವೇಣಿಯವರ ಕಾಲಕ್ಕೆ ಒಂದು ಮುಖ್ಯ ಪಲ್ಲಟ. ಏಕೆಂದರೆ ಸಾಂಪ್ರದಾಯಿಕ ಕುಟುಂಬಗಳಲ್ಲಿ ಅಸಾಧ್ಯ ಮತ್ತು ಅಸಂಭವವಾಗಿದ್ದ ಒಂದು 'ನೂತನ ಅವಕಾಶ' ಹೆಣ್ಣಿಗೆ ಇಲ್ಲಿ ಪ್ರಾಪ್ತವಾಗಿದೆ. ತ್ರಿವೇಣಿಯವರ ಕಥಾ ಹಂದರ ಇಂಥ ವಿನೂತನ ಅವಕಾಶವನ್ನು ಸ್ತ್ರೀಯರಿಗೆ ಕಲ್ಪಿಸಲು ತೀವ್ರವಾಗಿ ತುಡಿಯುತ್ತದೆ. 'ವಸಂತಗಾನ'ದ ಸರಳ, 'ಬೆಳ್ಳಿಮೋಡ'ದ ಇಂದಿರ, 'ಶರಪಂಜರ'ದ ಕಾವೇರಿ, 'ಹೃದಯಗೀತ'ದ ಪದ್ಮಿನಿ, 'ಬಾನುಬೆಳಗಿತು'ವಿನ ಕಲ್ಯಾಣಿ, 'ಅವಳಮನೆ'ಯ ಸರೋಜಿನಿ ಹೀಗೆ ಹಲವು ಹುಡುಗಿಯರು ತಮ್ಮನ್ನು ಮದುವೆಯಾಗುವ ಅಥವಾ ಮದುವೆಯಾಗುವರೆಂದು ತಿಳಿವ ಹುಡುಗರೊಂದಿಗೆ ಗುರುತಿಸಿಕೊಳ್ಳುತ್ತಾರೆ. ತ್ರಿವೇಣಿಯವರ ಕಾದಂಬರಿಗಳಲ್ಲಿ ವಿವಾಹದ ಸ್ವರೂಪವನ್ನು ಗುರುತಿಸುವಲ್ಲಿ ಅತಿ ಮಹತ್ವಾಕಾಂಕ್ಷೆಯ ಕೃತಿ **ಕಂಕಣ** ಮತ್ತು **ಮುಕ್ತಿ** ಅವರ ಉಳಿದೆಲ್ಲಾ ಕಾದಂಬರಿಗಳು ಒಂದು ಕೇಂದ್ರ ಪಾತ್ರವನ್ನು ಲಕ್ಷ್ಯದಲ್ಲಿಟ್ಟುಕೊಂಡು ರಚನೆಗೊಂಡಿದ್ದರೆ, ಕಂಕಣ ಮತ್ತು ಮುಕ್ತಿ ಕಾದಂಬರಿಗಳು ಒಂದು ವ್ಯಕ್ತಿಯನ್ನು ಲಕ್ಷ್ಯದಲ್ಲಿ ಇಟ್ಟುಕೊಳ್ಳದೆ, ಇಡೀ ಸಮಾಜದ ವಿಸ್ತೃತ ಬದುಕನ್ನು ಬಹಿರಂಗಪಡಿಸುತ್ತದೆ. ಅಂದರೆ, ಈ ಕಾದಂಬರಿಗಳಲ್ಲಿ ಒಂದು ವಿಶಾಲ ನೆಲೆಯಲ್ಲಿ ಸ್ವಾತಂತ್ರ್ಯೋತ್ತರ ಇಂಡಿಯಾದ, ತೀವ್ರವಾಗಿ ಬದಲಾಗುತ್ತಿರುವ ಸಾಮಾಜಿಕ ಪಲ್ಲಟಗಳನ್ನು ಮತ್ತು ಜೀವನ ಶೈಲಿಯನ್ನು ದಾಖಲಿಸುವ ಪ್ರಯತ್ನ ಪ್ರಕಟವಾಗುತ್ತದೆ. ವಿವಾಹವೆಂಬ ಸಾಮಾಜಿಕ ಸಂಸ್ಥೆ ಸಮಾಜದ ಆ ಸಂಕ್ರಮಣ ಕಾಲದ ಮೌಲ್ಯಗಳನ್ನು ಪರೀಕ್ಷಿಸುವ ಮಾನದಂಡವಾಗಿದೆ. ಈ ಎರಡು ಕಾದಂಬರಿಗಳಲ್ಲಿ ಆರು ಜನ ತರುಣಿಯರ ಬದುಕಿನ ನಿರ್ಣಾಯಕ ಘಟ್ಟದ ಸವಾಲುಗಳ ಸುತ್ತ ಕಥೆ ಬೆಳೆಯುತ್ತದೆ. ಇಲ್ಲಿನ ತರುಣಿಯರು ತಮ್ಮ ಕಾಲೇಜು ಶಿಕ್ಷಣವನ್ನು ಮುಗಿಸಿ, ನಿಜ ಜೀವನಕ್ಕೆ ಕಾಲಿಡುವ ಸಂದರ್ಭದಿಂದ ಕಾದಂಬರಿ ಪ್ರಾರಂಭವಾಗುತ್ತದೆ. ಅವರೆಗೂ ತಮ್ಮ ತರಗತಿಗಳು, ಶಿಕ್ಷಕರು, ಪಠ್ಯಪುಸ್ತಕಗಳು ಮತ್ತು ಪರೀಕ್ಷೆಯ ಸಂಭಾವ್ಯ ಪ್ರಶ್ನೆಗಳು ಇವುಗಳಲ್ಲಿಯೇ ಮುಳುಗಿದ್ದು ವಾಸ್ತವ ಬದುಕನ್ನು ಎದುರಿಸಲು ಸಿದ್ಧರಿಲ್ಲದ ಅವರ ಸ್ಥಿತಿಗಳನ್ನು ನಿರೂಪಕಿ ವಿಶ್ಲೇಷಿಸುವಂತೆ:

"ಆರು ಜನ ಹುಡುಗಿಯರ ಮನಸ್ಸಿನಲ್ಲಿಯೂ ಮುಂದೇನು, ಮುಂದೇನು ಎಂಬ ಪ್ರಶ್ನೆ ಭೂತಾಕಾರ ತಾಳಿ ನಿಂತಿತ್ತು. ಹುಟ್ಟಿದಾಗಿನಿಂದ ಹಿಡಿದು ಇಲ್ಲಿಯವರೆಗೆ, ಅವರು ಒಂದು

ದಿನವನ್ನೂ ವ್ಯರ್ಥವಾಗಿ ಕಳೆದಿರಲಿಲ್ಲ. ನರ್ಸರಿ ಸ್ಕೂಲ್, ಪ್ರೈಮರಿ, ಮಿಡಲ್, ಹೈಸ್ಕೂಲ್, ಕಾಲೇಜು, ಡಿಗ್ರಿ ಪರೀಕ್ಷೆ ಎಲ್ಲವೂ ಒಂದಾದ ಮೇಲೊಂದರಂತೆ ಬಂದು ಅವರ ಸಮಯದ ಬಹುಭಾಗವನ್ನು ನುಂಗಿ ಹಾಕಿದ್ದವು. ಅವರು ವಿದ್ಯಾರ್ಥಿಗಳಾಗಿದ್ದ ಕಾಲದಲ್ಲಿ, ಬೇಸಿಗೆ ರಜಾ ಕಾಲಿರಿಸಿದಾಗಲೆಲ್ಲಾ ಅವರಿಗೆ ತುಂಬಾ ಬೇಸರವಾಗುತ್ತಿತ್ತು. ನಾಳೆಯಿಂದ ತಾವ್ಯಾರೂ ವಿದ್ಯಾರ್ಥಿಯರಲ್ಲ, ಹೊಸ ಬಗೆಯ ಜೀವನದಲ್ಲಿ ತಾವು ಕಾಲಿರಿಸಬೇಕು. ಮದುವೆಯೇ? ಉದ್ಯೋಗವೇ? ಅವರಿಗೆ ಉಳಿದಿದ್ದು ಎರಡು ದಾರಿ ಮಾತ್ರ. ತಾಯಿ ತಂದೆ ಸೂಚಿಸಿದ, ಆರಿಸಿದ ವರನನ್ನು ಒಪ್ಪಿ ಮದುವೆಯಾಗಿ ಗೃಹಸ್ಥ ಜೀವನದಲ್ಲಿ ಕಾಲಿರಿಸಬೇಕು. ಇಲ್ಲವೇ ಯಾವುದಾದರೊಂದು ಕೆಲಸವನ್ನು ಹಿಡಿದು, ಸಂಪಾದಿಸಿ ತಂದು ಹಾಕುವ ಸದಸ್ಯಳಾಗಬೇಕು." (ತ್ರಿವೇಣಿ: ೧೯೫೭ ; ೧೯-೨೦).

ಎರಡೂ ಕಾದಂಬರಿಗಳು ಚಿತ್ರಿಸುವ ಈ ಆರು ಜನ ಗೆಳತಿಯರು, ಆಧುನಿಕ ಭಾರತೀಯ ಸ್ತ್ರೀಯರ ಆರು ವಿಭಿನ್ನ ಮಾದರಿಗಳನ್ನು ಹಾಗೂ ದೃಷ್ಟಿಕೋನಗಳನ್ನು ಪ್ರತಿನಿಧಿಸುತ್ತಾರೆ. ಕಂಕಣದ ಮುಖ್ಯ ಪಾತ್ರ ರಮಾ. ಬಡ ಕುಟುಂಬವೊಂದರ ಹಿರಿಯ ಮಗಳು. ಆಕೆಯ ತಂದೆಯ ಅಕಾಲ ಮರಣದ ನಂತರ ತಾಯಿ, ಇಬ್ಬರು ತಂಗಿಯರು, ಒಬ್ಬ ತಮ್ಮ- ಇವರೆಲ್ಲರ ಜವಾಬ್ದಾರಿಯನ್ನು ಅವಳು ಹೊರಬೇಕಾಗುತ್ತದೆ. ಕಾಲೇಜಿನ ದೀರ್ಘ ಕಾಲಾವಧಿ ರಜಗಳಲ್ಲಿ ಮನೆ ಪಾಠ ಮಾಡಿ ಸಂಸಾರ ಜವಾಬ್ದಾರಿಯನ್ನು ನಿಭಾಯಿಸುತ್ತಾಳೆ. ಈ ಪರಿಣಾಮದಿಂದಾಗಿ ಅತಿ ಗಂಭೀರ ಪ್ರವೃತ್ತಿಯ ಆಕೆ ಇತರರೊಡನೆ ಹೆಚ್ಚು ಬೆರೆಯುವುದಿಲ್ಲ. ತನ್ನ ತಮ್ಮ ಹಾಗೂ ತಂಗಿಯರಿಬ್ಬರ ಓದು ಮುಗಿದು ಮದುವೆಯಾಗುವ ತನಕ ತನ್ನ ಮದುವೆಯ ಕುರಿತು ಯಾವ ಯೋಚನೆಯೂ ಇಲ್ಲವೆಂಬುದು ಆಕೆಯ ದೃಢ ನಿರ್ಧಾರವಾಗಿರುತ್ತದೆ.

ರಮಾಗೆ ವಿರುದ್ಧ ಪಾತ್ರ ಕಸ್ತೂರಿಯದು. ಯಾವಾಗಲೂ ಧೈರ್ಯದಿಂದ ಮುನ್ನುಗ್ಗುವ ಚತುರೆ ಕಸ್ತೂರಿಗೆ ಯಾವುದೇ ಜವಾಬ್ದಾರಿಗಳಿರುವುದಿಲ್ಲ. ಆದುರಿಂದಲೇ ಅವಳು ತರುಣರೊಂದಿಗೆ ಮುಕ್ತವಾಗಿ ವ್ಯವಹರಿಸುವವಳಾಗಿರುತ್ತಾಳೆ. ಸದಾ ಜೀವನೋತ್ಸಾಹದಿಂದ ಇರುವ ಕಸ್ತೂರಿ ತನ್ನ ವೇಳೆಯನ್ನು ತರುಣರ ಹಾಗೂ ಪುಸ್ತಕಗಳ ಸಂಗದಲ್ಲಿ ಸಮವಾಗಿ ಹಂಚಿಕೊಂಡಿದ್ದಾಳೆ. ವೇದವಲ್ಲಿಯು ಶ್ರೀಮಂತಳಾದರೂ, ಮದುವೆಯಾಗಲು ಹೆಣ್ಣಿಗೆ ಇರಲೇಬೇಕೆಂದು ಪರಿಗಣಿಸಲ್ಪಟ್ಟಿರುವ ಬಣ್ಣ (ಬಿಳಿ) ಅವಳಿಗಿಲ್ಲ. ವೇದವಲ್ಲಿಯಷ್ಟೇ ಅಂಬಿಕಾ ಕೂಡಾ ಶ್ರೀಮಂತಳೇ. ಬದುಕಿನಿಂದ ಹೆಚ್ಚೇನನ್ನೂ ಅಪೇಕ್ಷಿಸದ ಅವಳು ತನ್ನ ಪಾಲಿಗೆ ಬಂದ ಬದುಕನ್ನು ತೃಪ್ತಿಯಿಂದ ಸ್ವೀಕರಿಸುತ್ತಾಳೆ. ಇವಳ ನೆಲೆಗಿಂತ ಭಿನ್ನವಾದದ್ದು ಸುಶೀಲಾಳದ್ದು. ಸುಶೀಲಾ ಬದುಕಿನಲ್ಲಿ ದೊರಕಿದಷ್ಟು ತೃಪ್ತಿ ಪಡದ ಹೆಣ್ಣು. ಅವಳಿಗೆ ತನ್ನ ಮುಂದಿನ ಬದುಕನ್ನು ತನ್ನ ಇಚ್ಛೆಗನುಸಾರವಾಗಿ ರೂಪಿಸಿಕೊಳ್ಳಬೇಕೆಂಬ ಛಲವಿದೆ. ಕೊನೆಯ ಪಾತ್ರವಾದ ಅಮೃತಳಿಗೆ ಇತ್ತ ಬಡತನದಿಂದಾಗಿ ಮದುವೆಯಾಗಲೂ ಸಾಧ್ಯವಿಲ್ಲ. ಅತ್ತ ತನ್ನ ತಂದೆ ತಾಯಿಗಳ ವಿರೋಧದಿಂದ ಮನೆಯ ಹೊರಗೆ ಯಾವುದಾದರೂ ಕೆಲಸ ಮಾಡಲೂ ಸಾಧ್ಯವಿಲ್ಲ. ಯಾವ ನಿಶ್ಚಿತ ಗುರಿಯೂ ಇಲ್ಲದೆ ಜೀವನ ಪ್ರವಾಹದಲ್ಲಿ ತೇಲುತ್ತಾ ಹೋಗುತ್ತಾಳೆ.

ವಿವಾಹವೆಂಬ ಸಾಮಾಜಿಕ ಸಂಸ್ಥೆಯ ಆಯ್ಕೆಯಲ್ಲಿ ಒಂದಲ್ಲಾ ಒಂದು ಕಾರಣಗಳಿಗಾಗಿ ಈ ಆರು ಜನ ಹುಡುಗಿಯರೂ ಸೋಲುತ್ತಾರೆ. ಅವರಲ್ಲಿ ತನ್ನ ಬದುಕನ್ನು ಕಠೋರವಾಗಿ ಕೊನೆಗಾಣಿಸುವವಳು ಕಸ್ತೂರಿ. ಗೆಳತಿಯರೆಲ್ಲರೂ ಒಮ್ಮೆ ಊಟಿಗೆ ಪ್ರವಾಸ ಹೋದಾಗ ಅಂಬಿಕೆಯ ಅಣ್ಣನ ಕೃತಕ ಪ್ರೇಮದ ಆಶ್ವಾಸನೆಗಳಿಗೆ ಅವಳು ಬಲಿಯಾಗುತ್ತಾಳೆ. ಕಸ್ತೂರಿಯ ಹೆತ್ತವರು ಆಕೆಯ ಮದುವೆಯನ್ನು ನಡೆಸಲು ನಿಶ್ಚಯಿಸಿದಾಗ, ಕಸ್ತೂರಿಯು ಅಂಬಿಕೆಯ ಅಣ್ಣನಿಗೆ ದೀರ್ಘ ಪತ್ರವೊಂದನ್ನು ಬರೆದು ಅದರಲ್ಲಿ ತನ್ನ ಭಾವನೆಗಳನ್ನು ಸ್ಪಷ್ಟವಾಗಿ ತಿಳಿಸುತ್ತಾಳೆ. ಆದರೆ ಸಂವೇದನಾಶೂನ್ಯನಾಗಿ ಅವನು ಆ ಪ್ರೇಮ ಪತ್ರವನ್ನು ತನ್ನ ತಂಗಿ ಅಂಬಿಕಾಗೆ ತೋರಿಸುವುದೇ ಅಲ್ಲದೆ, ಕಸ್ತೂರಿಯನ್ನು ನೀತಿಗೆಟ್ಟವಳೆಂದು ಪ್ರಚಾರ ಮಾಡುತ್ತಾನೆ. ಈ ಕಾರಣದಿಂದಾಗಿ ಎಲ್ಲರೂ ಅವಳನ್ನು ದೂರ ಮಾಡುತ್ತಾರೆ. ತನ್ನ ಕುಟುಂಬಕ್ಕಾದ ಈ ಅಪಕೀರ್ತಿಯನ್ನು ತಾಳಲಾರದೆ ಕಸ್ತೂರಿ ರೈಲಿನಡಿಗೆ ಬಿದ್ದು ಆತ್ಮಹತ್ಯೆಮಾಡಿಕೊಳ್ಳುತ್ತಾಳೆ. ತನ್ನ ಕಪ್ಪು ಬಣ್ಣದಿಂದಾಗಿ ದೀರ್ಘಕಾಲ ಮದುವೆಯಾಗದೇ ಉಳಿಯುವ ವೇದವಲ್ಲಿ, ಕೊನೆಗೆ ತನ್ನ ಸಂಗೀತದ ಶಿಕ್ಷಕನೊಡನೆ ಓಡಿ ಹೋಗುತ್ತಾಳೆ. ಅವನು ಕ್ರಿಶ್ಚಿಯನ್ ಆದ್ದರಿಂದ ಅವಳ ತಂದೆ ತಾಯಿಯರು ಅವಳೊಡನೆ ಸಂಪೂರ್ಣವಾಗಿ ಸಂಬಂಧವನ್ನು ಕಡಿದುಕೊಳ್ಳುತ್ತಾರೆ. ಮೊದಲಿನ ಸಂಭ್ರಮ ಹೆಚ್ಚುದಿನ ಉಳಿಯದೆ ಅವಳಿಗೆ ಗಂಡನ ಹೆಣ್ಣು-ಹೆಂಡದ ದೌರ್ಬಲ್ಯ ಗೊತ್ತಾಗುತ್ತದೆ. ಕೊನೆಗೆ ತಾನೇ ಒಂದು ಕೆಲಸಕ್ಕೆ ಸೇರಿಕೊಳ್ಳುವ ಮೂಲಕ ವೇದವಲ್ಲಿಯ ಬದುಕು ಒಂದು ದಡ ಕಾಣುತ್ತದೆ. ಅಮೃತ ಇತ್ತ ಕೆಲಸವೂ ಇಲ್ಲದೆ ಅತ್ತ ಮದುವೆಯೂ ಆಗದೆ ನೀರಸ ಬದುಕನ್ನು ಕಳೆಯುತ್ತಾಳೆ. ಮದುವೆಯಾಗದ ಸುಶೀಲ, ಗಂಡುಗಳ ಅಹಂನಿಂದ ರೋಸಿಹೋಗಿ, ಕೊನೆಗೆ ಸಿಕ್ಕಿದ ಗಂಡಿನೊಡನೆ ಓಡಿಹೋಗುತ್ತಾಳೆ. ಆರು ಜನ ಹುಡುಗಿಯರಲ್ಲಿ ಮದುವೆಯೆಂಬ ಸಂಸ್ಥೆಯೊಡನೆ ಹೋರಾಟದಲ್ಲಿ ಯಶಸ್ವಿಯಾಗುವವಳೆಂದರೆ ಅಂಬಿಕಾ ಒಬ್ಬಳೇ. ಅವಳಿಗೆ ಬದುಕಿನ ಬಗ್ಗೆ ಅವಳದೇ ಆದ ಮಹಾತ್ವಾಕಾಂಕ್ಷೆಗಳಾವುದೂ ಇರುವುದಿಲ್ಲ. ಎಲ್ಲ ಭಾರತೀಯ ಸ್ತ್ರೀಯರಂತೆ ತನಗೂ ಪತಿಯನ್ನು ಆರಿಸುವ ಸ್ವಾತಂತ್ರ್ಯವಿಲ್ಲವೆಂಬುದನ್ನು ಒಪ್ಪಿಕೊಂಡು ಹೆತ್ತವರ ಆಯ್ಕೆಯಲ್ಲಿಯೇ ಸಂಪೃಪ್ತಳಾಗುತ್ತಾಳೆ. ಕಾದಂಬರಿಯ ಒಳಾವರಣದಲ್ಲಿ ನಿಧಾನವಾಗಿ ಈ ಮದುವೆಯೆಂಬ ಜೂಜಿನಲ್ಲಿ ಅಂಬಿಕಾ ಗೆದ್ದಳೆಂಬುದು ಅರಿವಿಗೆ ಬರುತ್ತದೆ. ಪ್ರೇಮ ಮತ್ತು ಮದುವೆ ಇವುಗಳ ಮಧ್ಯೆ ರಮಾಳ ಸಂಘರ್ಷ ಹೆಚ್ಚು ಸಂಕೀರ್ಣ. ಶಿಕ್ಷಣವನ್ನು ಮುಗಿಸಿದ ಕೂಡಲೇ ರಮಾ ಒಂದು ಟ್ಯುಟೋರಿಯಲ್ ಕಾಲೇಜಿನಲ್ಲಿ ಅಧ್ಯಾಪಿಕೆಯಾಗಿ ಸೇರ್ಪಡೆಗೊಳ್ಳುತ್ತಾಳೆ. ಅವಳೊಬ್ಬಳ ಸಂಬಳ ಸಂಸಾರದ ಮತ್ತು ಅವಳ ತಮ್ಮ, ತಂಗಿಯರ ಬೇಡಿಕೆಗಳನ್ನು ಪೂರೈಸಲು ಸಾಲದಾಗುತ್ತದೆ. ತನ್ನ ಕಾಲೇಜಿನಲ್ಲಿ ಹಗಲು ದುಡಿದು, ರಾತ್ರಿಶಾಲೆಯಲ್ಲಿ ಓದು ಮುಂದುವರೆಸುತ್ತಿರುವ ವಿಶಿಷ್ಟ ವ್ಯಕ್ತಿ ರಘುವಿನ ಪರಿಚಯವಾಗಿ ನಿಧಾನವಾಗಿ ಪರಸ್ಪರ ಪ್ರೇಮ ಬೆಳೆದು ಅವರಿಬ್ಬರೂ ಮದುವೆಯಾಗಲು ನಿರ್ಧರಿಸುತ್ತಾರೆ. ಆದರೆ ತಮ್ಮ ಜವಾಬ್ದಾರಿಗಳು ಮುಗಿಯುವವರೆಗೂ ಅವರು ಕಾಯಬೇಕಾಗಿರುತ್ತದೆ. ಆದರೆ, ಬಡತನದಿಂದ ಬೇಸತ್ತು ಅವಳ ತಮ್ಮ ಚಿಕ್ಕಪುಟ್ಟ ಕಳ್ಳತನ ಮಾಡಲು ಪ್ರಾರಂಭಿಸುತ್ತಾನೆ. ಮತ್ತು ತಂಗಿಯೊಬ್ಬಳು ಕೆಟ್ಟದಾರಿಯನ್ನು ಹಿಡಿಯುತ್ತಾಳೆ. ಕರ್ತವ್ಯ ಪ್ರಜ್ಞೆಯಿಂದ ತನ್ನ ಕುಟುಂಬದ ಒಳಿತಿಗಾಗಿ ತನ್ನ ಸುಖವನ್ನು ಬಲಿಕೊಡಲು ನಿರ್ಧರಿಸಿ ರಮಾ ತುಂಬಾ ಆಸ್ತಿಯುಳ್ಳ ಒಬ್ಬ ಕುರುಡನನ್ನು ಮದುವೆಯಾಗಲು ನಿರ್ಧರಿಸುತ್ತಾಳೆ. ಅವನು ಇವಳ ತಂಗಿಯರ ಮದುವೆ ಮಾಡಲು ಮತ್ತು ತಮ್ಮ ಬದುಕಿನಲ್ಲಿ ಭದ್ರವಾಗಿ ನಿಲ್ಲಲು ಸಹಾಯ

ಮಾಡಲು ಒಪ್ಪುತ್ತಾನೆ. ಹೀಗೆ ಸಮಾಜದಲ್ಲಿರುವ ಕಠೋರ ವೈವಾಹಿಕ ವ್ಯವಸ್ಥೆಯು ಅಂಬಿಕಾಳನ್ನು ಹೊರತುಪಡಿಸಿ ಉಳಿದ ಗೆಳತಿಯರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಬದುಕಿನಲ್ಲಿ ತೀವ್ರ ಸೋಲನ್ನು ಅನುಭವಿಸುವಂತೆ ಮಾಡುತ್ತದೆ. ಎಲ್ಲ ಕಾರಣಗಳಿಗೂ ಸಂಧಾನಕ್ಕೆ ಒಳಪಡುವ, ನಿಸ್ವಾರ್ಥಿ ಮತ್ತು ಪುರುಷಾನುವರ್ತಿಯಾದ ಸ್ತ್ರೀ ಮಾದರಿಯನ್ನು ಎತ್ತಿ ಹಿಡಿಯುವಂತಹ ರಚನಾ ಬಂಧವನ್ನು ಹೊಂದಿರುವ 'ಕಂಕಣ' ಮತ್ತು 'ಮುಕ್ತಿ' ಎರಡೂ ಕಾದಂಬರಿಗಳಲ್ಲಿ ಸ್ವ-ವ್ಯಕ್ತಿತ್ವವಿಲ್ಲದ ಅಂಬಿಕಾ ಮಾತ್ರ ಸಫಲ ಜೀವನ ನಡೆಸುತ್ತಾಳೆ. ಈ ಸರಳೀಕೃತ ತೀರ್ಮಾನಕ್ಕಿಂತಲೂ ಆಚೆಗೆ ಕಾದಂಬರಿಯನ್ನು ವಿಶ್ಲೇಷಿಸಿದರೆ, ಸಂಕ್ರಮಣಕಾಲದ ಭಾರತೀಯ ವಿವಾಹ ಸ್ವರೂಪದ ಅರ್ಥಪೂರ್ಣ ವಿವರಣೆ ಸಿಗುತ್ತದೆ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಆಧುನಿಕತೆಯು ಪ್ರವೇಶಿಸುವುದಕ್ಕೆ ಪೂರ್ವದಲ್ಲಿ ವಿದ್ಯಾಭ್ಯಾಸ ಮತ್ತು ಆರ್ಥಿಕ ಸ್ವಾತಂತ್ರ್ಯ ಇವೆರಡರಿಂದಲೂ ವಂಚಿತಳಾದ ಸ್ತ್ರೀ, ತನ್ನ ಪತಿ (ಕುಟುಂಬದ ಹಿರಿಯರು ಆರಿಸಿದ ಪತಿ) ಮತ್ತು ಸಂಸಾರದಲ್ಲಿಯೇ ತೃಪ್ತಿಯನ್ನು ಕಂಡುಕೊಳ್ಳುತ್ತಿದ್ದಳು. ಹಾಗೆಯೇ ಅವಳನ್ನು ಬೆಳೆಸಲಾಗುತ್ತಿತ್ತು. ಶ್ರದ್ಧಾಮಯಿ ಪತ್ನಿ ಹಾಗೂ ಪ್ರೇಮಮಯಿ ತಾಯಿ ಇವರೆಡು ಪಾತಳಿಗಳ ಹೊರತು ತನ್ನದೇ ಆದ ಅನನ್ಯತೆಯೊಂದು ಭಾರತೀಯ ಸ್ತ್ರೀಗೆ ಇರಲಿಲ್ಲ.

**ಉದಾರವಾದಿ ಸಾಂಸ್ಕೃತಿಕ ನೆಲೆಯು ಹುಟ್ಟು ಹಾಕಿದ ವಿವಾಹದ ವೈರುಧ್ಯ :**

ವಿದ್ಯಾಭ್ಯಾಸ ಹಾಗೂ ಅದು ಕೊಡ ಮಾಡಿದ ನೂತನ ವಿಚಾರಧಾರೆಯು ಸ್ತ್ರೀಯ ಬದುಕಿನಲ್ಲಿ ಬದಲಾವಣೆಯನ್ನು ಉಂಟು ಮಾಡುವಲ್ಲಿ ಪ್ರಧಾನ ಕಾರಣವಾಗಿದೆ. ಆದರೆ ಉದಾರವಾದಿ ಸಾಂಸ್ಕೃತಿಕ ಬೆಳವಣಿಗೆಯಷ್ಟೇ ಸುಲಭವಾಗಿ ಸ್ತ್ರೀಯ ಮೇಲಿದ್ದ ಸಂಪ್ರದಾಯ ಹಾಗೂ ಪಾರಂಪರಿಕ ವ್ಯವಸ್ಥೆಗಳ ಬಂಧನ ಸಡಿಲಗೊಳ್ಳಲಿಲ್ಲ. ಪಾಶ್ಚಾತ್ಯ ಆಧುನಿಕ ಶಿಕ್ಷಣ ಮತ್ತು ಪಾರಂಪರಿಕ ವಿವಾಹ ಹಾಗೂ ಕುಟುಂಬ ವ್ಯವಸ್ಥೆ ಇವುಗಳಿಗೆ ಬದ್ಧವಾದ ಭಾರತೀಯ ಸ್ತ್ರೀಯರ ಬದುಕು ದ್ವಂದ್ವತೆಯ ಹಾಗೂ ವೈರುಧ್ಯಗಳ ಗೂಡಾಗಿ ಪರಿಣಮಿಸಿದೆ. ಈ ಅನುಭವವನ್ನು ತ್ರಿವೇಣಿಯರ ಎಲ್ಲ ಕಾದಂಬರಿಗಳು ಪರಿಪೂರ್ಣವಾಗಿ ಒಡಮೂಡಿಸಿವೆ. ಇದು ಹೆಚ್ಚು ಪ್ರಖರವಾಗಿ **ಕಂಕಣ** ಮತ್ತು **ಮುಕ್ತಿ**ಯಲ್ಲಿ ಅಭಿವ್ಯಕ್ತಗೊಂಡಿವೆ. 'ಕಂಕಣ'ದ ಆರು ಸ್ತ್ರೀಯರು ಸಂಕ್ರಮಣ ಕಾಲದ ಸಮಾಜಗಳಲ್ಲಿ ಸಾಧಾರಣವಾಗಿ ಕಂಡು ಬರುವ ಎರಡು ವಾಸ್ತವಗಳಲ್ಲಿ ತೊಳಲಾಡುತ್ತಾರೆ. ಒಂದು ತನ್ನ ಮೂಲ ಬೇರನ್ನು ಉಳಿಸಿಕೊಂಡ ಸಂಪ್ರದಾಯ ಬದ್ಧ ಸಮಾಜದ ವಾಸ್ತವ. ಮತ್ತೊಂದು ಆಧುನಿಕತೆಯ ಎಲ್ಲ ಆಕರ್ಷಣೆಯನ್ನು ಬಿಂಬಿಸುವ ಆಗತಾನೇ ಹುಟ್ಟಿಕೊಂಡ ನೂತನ ಸಮಾಜದ ವಾಸ್ತವ. ಈ ಎರಡು ವಾಸ್ತವಗಳಲ್ಲಿ ಅವರವರ ಅಸ್ತಿತ್ವಗಳಿಗಾಗಿ ಹೋರಾಡುವ ಆರು ಗೆಳತಿಯರ ಜೀವನ ಸಹಜವಾಗಿ ಸಂಘರ್ಷಮಯವಾದದ್ದು ಹಾಗೂ ದುರಂತಮಯವಾದದ್ದು. ಈ ಹಿನ್ನೆಲೆಯಲ್ಲಿ ಅಂಬಿಕಾಳ ಬದುಕಿನಿಂದಲೇ ಸಮರ್ಥನೆ ಸಿಗುತ್ತದೆ. ಆರು ಜನ ಗೆಳತಿಯರಲ್ಲಿ ಅಂಬಿಕಾಳ ಬದುಕು ಮಾತ್ರ ಸಹನೀಯವಾಗಿ ಸುಖಮಯವಾಗಿ ಚಿತ್ರಿತಗೊಂಡಿದೆ. ಇಂತಹ ಅವಳ ಬದುಕನ್ನು ಗಮನಿಸಿದರೆ, ಅವಳಿಗೆ ಆಸ್ತಿಯಿದೆ. ಆದರೂ ಅವಳನ್ನು ಮದುವೆಯಾಗುವವ ಅವಳನ್ನು ನೋಡಿ, ತೂಗಿ ಒಪ್ಪುತ್ತಾನೆ. ಒಪ್ಪಿಗೆಯ ನಂತರ ಅವನಿಗೆ ದೊಡ್ಡ ಮೊತ್ತದ ವರದಕ್ಷಿಣೆಯನ್ನು ಕೊಡಬೇಕಾಗುತ್ತದೆ. ಕಸ್ತೂರಿಯನ್ನು ನೋಡಲು ಬಂದ ತರುಣ ಅವಳನ್ನು ಮೆಚ್ಚಿ ವರದಕ್ಷಿಣೆಯಿಲ್ಲದೆ ಮದುವೆಯಾಗಲು ಸಿದ್ಧನಿರುತ್ತಾನೆ. ಆದರೆ ಆ ಹುಡುಗನ ತಂದೆ ತಾಯಿಗಳು ಹುಡುಗಿಯ

ಜಾತಕದಲ್ಲಿ ದೋಷವಿದೆ ಎಂಬ ಕಾರಣಕ್ಕಾಗಿ ಒಪ್ಪುವುದಿಲ್ಲ. ಕೆಲವು ಗಂಡುಗಳು ತುಂಬಾ ಓದಿದ್ದಾಳೆಂದು ಅಮೃತಳನ್ನು ಒಪ್ಪದೇ ಹೋದರೆ ಮತ್ತೆ ಕೆಲವರು ಅವಳಿಗೆ ಸಂಗೀತವು ಗೊತ್ತಿಲ್ಲವೆಂದು ತಿರಸ್ಕರಿಸುತ್ತಾರೆ. ಜಾತಕ ಹೊಂದುವುದಿಲ್ಲವೆಂದು ತಿರಸ್ಕರಿಸಿದವರು ಇದ್ದಾರೆ. ವೇದವಲ್ಲಿ ಸಂಗೀತ ಕಲಿತಿದ್ದಾಳೆ, ಓದಿದ್ದಾಳೆ. ಆದರೆ ಅವಳ ಬಣ್ಣ ಕಪ್ಪಾಗಿರುವುದರಿಂದ ಮದುವೆಯಾಗುವುದೇ ಕಷ್ಟ. ಇಂತಹ ಸ್ತ್ರೀಯರ ಚಿತ್ರಣಗಳು ಆಧುನಿಕ ಸ್ತ್ರೀಯರು ಬದುಕುವ ಅಸಾಧ್ಯ ಹಾಗೂ ಅಸಂಬದ್ಧ ಸಮಾಜ ವ್ಯವಸ್ಥೆಯ ವಾಸ್ತವಗಳನ್ನು ತೆರೆದಿಡುತ್ತವೆ. ಸಂಪ್ರದಾಯ ಹಾಗೂ ಆಧುನಿಕತೆಯ ದ್ವಂದ್ವಮಾನ ಯುಗದಲ್ಲಿ ಬದುಕುವ ಸ್ಥಿತಿಯನ್ನು ಕಾದಂಬರಿ ಒಂದು ಸಂದರ್ಭದಲ್ಲಿ ಅಮೃತಾಳ ಬದುಕಿನ ಮೂಲಕ ಅನಾವರಣ ಮಾಡುತ್ತದೆ. ಐದು ವರ್ಷದಲ್ಲಿ ಹನ್ನೆರಡು ಬಾರಿ ಸಂಭಾವ್ಯವರಗಳೆದುರು ಕುಳಿತು, ಅನಂತರ ಅವರಿಂದ ತಿರಸ್ಕೃತಳಾಗುವ ಅಮೃತಾ ತನ್ನ ಮನಸ್ಸನ್ನು ರಮಾಳೊಡನೆ ಹೀಗೆ ಹೇಳಿಕೊಳ್ಳುತ್ತಾಳೆ.

> "ಹೂಂ ನನಗೇನೋ ಹಳೆಯ ಪದ್ಧತಿ ಸರಿಹೋಗೋದಿಲ್ಲಮ್ಮ ಹುಡುಗೀಗೆ ಅಲಂಕಾರ ಮಾಡಿ ಹುಡುಗನಿಗೆ ತೋರಿಸೋದೆ ಇವೆಲ್ಲಾ ತೀರಾ ಅನಾಗರಿಕತೆಗೆ ಸೇರಿದ್ದು. ವಯಸ್ಸಿಗೆ ಬಂದ ಹುಡುಗಿಯನ್ನು ಸೌಂದರ್ಯ ಪ್ರದರ್ಶನಕ್ಕೆ ಕೂರಿಸಿದಾಗ ಅವಳು ನೊಂದುಕೊಳ್ಳುವುದಿಲ್ಲವೇ? ಈ ರೀತಿಯ ವಧೂ ಪರೀಕ್ಷೆಯಿಂದ ಹುಡುಗಿಯ ರೂಪ ಗೊತ್ತಾಗುತ್ತದೆಯೇ ಹೊರತು ಗುಣ ಏನು ತಿಳಿಯುತ್ತದೆ? ಆದುದರಿಂದ ಪ್ರೇಮ ವಿವಾಹವೇ ಸರಿ.
>
> ನಮ್ಮಲ್ಲಿ ಅದಕ್ಕೆ ಅವಕಾಶವೇ ಇಲ್ಲವಲ್ಲಾ ರಮಾ ರಾಗ ಎಳೆದಳು.
>
> ಅದೂ ನಿಜಾನ್ನು ನಮ್ಮ ಜನ ಇನ್ನೂ ಮುಂದುವರಿಯಬೇಕು ಯುವಕ ಯುವತಿಯರಿಗೆ ಸಲಿಗೆಯಿಂದಿರುವ ಅವಕಾಶ ಕಲ್ಪಿಸಿಕೊಡಬೇಕು. ಆಗ ಹುಡುಗ ಹುಡುಗಿ ಮೆಚ್ಚಿ ತಾವೇ ಮದುವೆಯಾಗುತ್ತಾರೆ. ಇದರಿಂದ ತಂದೆ ತಾಯಿಯರ ಜವಾಬ್ದಾರಿಯೂ ಕಡಿಮೆಯಾಗುತ್ತದೆ.
>
> ರಮಾ ನಗುತ್ತಾ 'ನಿನ್ನ ಯೋಚನೆಯೇನೋ ಚೆನ್ನಾಗಿದೆ. ಆದರೆ ನಮ್ಮ ಕಡೆ ಹುಡುಗ ಹುಡುಗಿಯರು ಪರಸ್ಪರ ಪರಿಚಿತರಾಗೋದಕ್ಕೆ ಅವಕಾಶ ಎಲ್ಲಿದೆ? ಪಾಶ್ಚಿಮಾತ್ಯ ದೇಶಗಳಲ್ಲಿ ಪಾರ್ಟಿಗಳು, ನೃತ್ಯಕೂಟಗಳು, ವಿಹಾರ ಕೂಟಗಳು, ಕ್ಲಬ್ಬುಗಳು, ಆಫೀಸುಗಳು ಈ ಉತ್ಸವಗಳಿಂದಾಗಿ ಪರಸ್ಪರ ಪರಿಚಿತರಾಗುತ್ತಾರೆ. ನಮ್ಮ ಕಡೆ ಅದಕ್ಕೆ ಅವಕಾಶವೇ ಇಲ್ಲವಲ್ಲಾ?
>
> ನೀನೇ ಮೇಲ್ಪಂಕ್ತಿ ಹಾಕಿಬಿಡು ನಾವೆಲ್ಲಾ ನಿನ್ನನ್ನು ಹಿಂಬಾಲಿಸುತ್ತೇವೆ.
>
> ಅಷ್ಟೊಂದು ಧೈರ್ಯ ನನಗಿದ್ದರೆ ನಾನು ಎಂದೋ ಮದುವೆಯಾಗಿರುತ್ತಿದ್ದೆ. ನನಗೆ ಆ ಧೈರ್ಯವೂ ಇಲ್ಲ. ಈ ಬಗೆಯ ಜೀವನಾನೂ ಇಷ್ಟವಿಲ್ಲ. ನಾವು ಹುಟ್ಟಿರೋದು ಕೇವಲ ಬಿ.ಎ. ಪಾಸು ಮಾಡಿ ಮನೇಲಿ ಕುಳಿತುಕೊಳ್ಳೋಕ್ಕೇನೇ ರಮಾ... "(ತ್ರಿವೇಣಿ : ೧೯೫೭; ೭೯-೮೧)

ಈ ಸಂದರ್ಭದಲ್ಲಿನ ಅಮೃತಾಳ ಮಾತು ಸಾಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಸಿಕ್ಕಿ ತೊಳಲಾಡುವ ಸ್ತ್ರೀಯರ ಸ್ಥಿತಿಯನ್ನು ದಾಖಲಿಸುತ್ತದೆ. ಸಂಕ್ರಮಣ ಕಾಲದ ಸಮಾಜದಲ್ಲಿ ವಿವಾಹದ ಸ್ವರೂಪವನ್ನು

ಜಟಿಲವಾಗಿಸುವ ಮತ್ತೊಂದು ಪ್ರಮುಖ ಅಂಶ ನಿರುದ್ಯೋಗ. ತಮ್ಮ ಪಾರಂಪರಿಕ ಕುಲ ಕಸುಬುಗಳನ್ನು ತೊರೆದು ಹೆಚ್ಚು ಹೆಚ್ಚು ಹಳ್ಳಿಗಳಿಂದ ಪಟ್ಟಣಗಳಿಗೆ ವಲಸೆ ಬರಲಾರಂಭಿಸಿದಾಗ, ಅವರೆಲ್ಲರೂ ಒಂದೇ ವಿಧವಾದ ಬೌದ್ಧಿಕ ಮಟ್ಟದ ಉದ್ಯೋಗಕ್ಕಾಗಿ ಸ್ಪರ್ಧಿಸುತ್ತಾರೆ. ಸ್ಪರ್ಧೆಯಲ್ಲಿ ಯಶಸ್ಸು ಕಾಣದವರು ತಮ್ಮ ಹಾಗೂ ಇತರರ ಬದುಕನ್ನು ಛಿದ್ರಗೊಳಿಸುತ್ತಾರೆ. ಎಂ.ಎ.ಪದವೀಧರನಾದ ಶೇಷಾದ್ರಿಯೆಂಬ ತರುಣ ಸುಶೀಲಳನ್ನು ನೋಡಿ ಮೆಚ್ಚುತ್ತಾನೆ. ಆದರೆ ನಿರುದ್ಯೋಗದ ಕಾರಣದಿಂದಾಗಿ ಆತನಿಗೆ ಮದುವೆಯಾಗಲು ಆಗುವುದಿಲ್ಲ.

> "ನನಗೆ ಕೆಲಸವಾಗುವುದಕ್ಕೆ ಮುಂಚೆ ಮದುವೆಯಾಗುವುದಿಲ್ಲ. ನನ್ನ ಹೆಂಡತಿಯನ್ನು ಸಾಕುವ ಶಕ್ತಿ ನನಗೆ ಬಂದ ಮೇಲೆ ಸಂಸಾರಿಯಾಗಲು ನನ್ನದೇನೂ ಅಡ್ಡಿಯಿಲ್ಲ." (ತ್ರಿವೇಣಿ :೧೯೫೭; ೮೧)

ಆದರೆ ಶೇಷಾದ್ರಿಯ ನೌಕರಿಯ ಬೇಟೆ ಮುಂದುವರಿಯುತ್ತಲೇ ಇರುತ್ತದೆ. ಒಮ್ಮೆ ಒಂದು ಕಾಲೇಜಿನಲ್ಲಿ ಲೆಕ್ಚರರ್ ಕೆಲಸ ಸಿಕ್ಕಿತು ಎನ್ನುವಷ್ಟರಲ್ಲಿ ಅದನ್ನು ನಿವೃತ್ತರೊಬ್ಬರಿಗೆ ಕೊಡಲಾಗುತ್ತದೆ. ಇದರಿಂದ ಶೇಷಾದ್ರಿ ಎಷ್ಟು ಹತಾಶನಾಗುತ್ತಾನೆಂದರೆ ಒಂದು ದಿನ ಇದ್ದಕ್ಕಿದ್ದಂತೆ ಅವನು ಕಾಣೆಯಾಗುತ್ತಾನೆ. ಶೇಷಾದ್ರಿಯ ಮಾಯವಾಗುವುದರೊಂದಿಗೆ ಸುಶೀಲಳ ಮದುವೆಯ ಕನಸುಗಳೂ ದೂರವಾಗುತ್ತವೆ. ಬೇಸತ್ತು ಸ್ವಚ್ಛಂದ ಬದುಕನ್ನು ಬಾಳಲು ನಿರ್ಧರಿಸುವಾಗ ಸುಶೀಲಾ ತನ್ನೆಲ್ಲಾ ನೋವನ್ನು ರಮಾಳೊಡನೆ ಬಿಚ್ಚಿಡುತ್ತಾಳೆ :

> "ಹುಡುಗಿಯರು ಅವಿವಾಹಿತರಾಗಿಯೇ ಉಳಿಯುವುದಕ್ಕೆ ಹಿನ್ನೆಲೆಯಾಗಿ ತರುಣರ ಸಮಸ್ಯೆಯೂ ಇದೆಯಲ್ಲವೇ? ಉದ್ಯೋಗವಿಲ್ಲದ ಯಾವ ತರುಣ ವಿವಾಹವಾಗಲು ಒಪ್ಪುತ್ತಾನೆ ? ಅವನಿಗೆ ಉದ್ಯೋಗ ಸಿಕ್ಕುವುದು ತಡವಾದಂತೆ ಹುಡುಗಿಯರಿಗೆ ಮದುವೆಯಾಗುವುದೂ ಸಹಜವಾಗಿಯೇ ತಡವಾಗುತ್ತಿದೆ. ಇನ್ನು ಕೆಲವರು ತಮ್ಮ ಊರನ್ನು ನೆಚ್ಚಿಕೊಂಡಿದ್ದರೆ ಆಗುವುದಿಲ್ಲ ಎಂದರಿತು, ಹೊರಗಿನ ಊರುಗಳಿಗೆ ಕೆಲಸ ಆರಿಸಿಕೊಂಡು ಹೋಗುತ್ತಾರೆ. ಅಲ್ಲಿ ಕೆಲಸ ಸಿಕ್ಕಿದ ಮೇಲೆ ಅವರು ತಮ್ಮ ಆಫೀಸಿನಲ್ಲಿಯೇ ಕೆಲಸ ಮಾಡುವ ಹುಡುಗಿಯರೊಡನೆ ಓಡಾಡುತ್ತಾರೆ. ಆ ಹುಡುಗಿಯರೂ ನಮ್ಮಂತೆಯೇ ಮದುವೆಯಿಲ್ಲದೇ ಮನೆಯಲ್ಲಿಯೇ ಕುಳಿತಿರಲು ಬೇಸರವಾಗಿ ಕೆಲಸಗಳಿಗೆ ಸೇರಿಕೊಂಡಿರುತ್ತಾರೆ. ಲೈಂಗಿಕ ಜೀವನದ ಸಂಪೂರ್ಣ ರಹಸ್ಯ ಅವರಿಗೆ ತಿಳಿದಿರುತ್ತದೆ. ತೊಡಕಾಗದಂತೆ ಇರುವುದು ಹೇಗೆ ಎಂಬುದೂ ಅವರಿಗೆ ಗೊತ್ತು. ಹೀಗಾಗಿ ಸಂಸಾರದ ಜವಾಬ್ದಾರಿ ಹೊರದೆ ಸುಖ ಸಿಕ್ಕುವುದಾದರೆ, ಯಾಕೆ ಹೀಗೆ ಇರಬಾರದು ಎನ್ನುವ ಮನೋಧರ್ಮ ಇಬ್ಬರಲ್ಲಿಯೂ ಬೆಳೆದು ಬರುತ್ತದೆ." (ತ್ರಿವೇಣಿ : ೧೯೫೭ ; ೯೯)

ಸ್ತ್ರೀ ಮತ್ತು ವಿವಾಹ ವ್ಯವಸ್ಥೆಯ ಬಗ್ಗೆ ಕಾದಂಬರಿಯ ಕೇಂದ್ರ ಗಮನ, ವಿವಾಹ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ಪುರುಷನ ಯಾಜಮಾನ್ಯಕ್ಕೆ ಮತ್ತು ಅಂತಹ ಯಾಜಮಾನ್ಯದಿಂದ ಸ್ತ್ರೀಗೆ ಮುಕ್ತಿ ದೊರಕುವ ಸಾಧ್ಯತೆಗಳ ಬಗ್ಗೆ ಎಂದು ಹೇಳಬಹುದು. ಸ್ವಾತಂತ್ರ್ಯೋತ್ತರ ಇಂಡಿಯಾದ ಸಮಾಜವು ಪುರುಷ ಪ್ರಧಾನವಾಗಿಯೇ ಇರುವುದರಿಂದ, ಚಾಲ್ತಿಯಲ್ಲಿರುವ ನಿರ್ಧರಿತಗೊಂಡ ವಿವಾಹಗಳು ಈ ಪ್ರಾಧಾನ್ಯವನ್ನೇ ಮುಂದುವರಿಸುತ್ತವೆ. ಸ್ತ್ರೀಯನ್ನು ನೋಡಿ, ಪರೀಕ್ಷಿಸಿ, ಆಯ್ಕೆ ಮಾಡುವವನು ಪುರುಷ. ಈ ನೆಲೆಯಲ್ಲಿ

ಹೆಣ್ಣು ನಿಷ್ಕ್ರಿಯವಾಗಿದ್ದು ವಸ್ತುವಿನಂತೆ ಮಾರಾಟಕ್ಕೆ ಒಳಗಾಗುವವಳು. ಹೆಣ್ಣಿನ ಮದುವೆಯನ್ನು ಕುರಿತು ಗಂಡಿಗಿರುವ ಇಂತಹ ನಿಲುವನ್ನು ಕೃತಿಯಲ್ಲಿ ಮುದುಕಿಯೊಬ್ಬಳು ಹೀಗೆ ಸಂಗ್ರಹವಾಗಿ ಹೇಳುತ್ತಾಳೆ :

> "ಸರಿಯಾದ ವರ ಎಂದರೇನಮ್ಮ ಹೊಟ್ಟೆಗೆ ಬಟ್ಟೆಗೆ ನೆಮ್ಮದಿಯಾಗಿದ್ದರೆ ಸಾಲದೆ?.......... ಹೆಣ್ಣು ಹುಡುಗಿಯರಿಗೆ ಸರಿಯಾದ ವಯಸ್ಸಿಗೆ ಮದುವೆ ಮಾಡಿಬಿಡಬೇಕು." (ತ್ರಿವೇಣಿ :೧೯೫೯; ೧೦೨)

ಸೂಕ್ತ ಕಾಲದಲ್ಲಿ ಮದುವೆಯಾಗಬೇಕಾದ ಅವಿವಾಹಿತ ಸ್ತ್ರೀಯರ ಸ್ಥಿತಿಯನ್ನು ಇದು ತೆರೆದಿಡುತ್ತದೆ.

ವಿಧವೆಯರ ಸ್ಥಿತಿಯನ್ನು ಗಂಭೀರ ಹಾಗೂ ಮನೋವೈಜ್ಞಾನಿಕ ಶೈಲಿಯಲ್ಲಿ ಬಹಳ ಅರ್ಥಪೂರ್ಣವಾಗಿ **ಹೆಣ್ಣಿಲೆ ಚಿಗುರಿದಾಗ** ತೆರೆದಿಡುತ್ತದೆ. ಹೆತ್ತವರ ಹಠಸಾಧನೆ, ವಿಧವಾ ವಿವಾಹ ಇವೇ ಮುಂತಾದ ವಸ್ತುಗಳು ಕನ್ನಡ ಕಾದಂಬರಿಗೆ ಹೊಸದೇನಲ್ಲ. ತಿರುಮಲಾಂಬ, ಕಲ್ಯಾಣಮ್ಮನವರ ಕಾದಂಬರಿಗಳು ಕೂಡ ಈ ಕುರಿತು ಮಹತ್ವದ ಒಳನೋಟಗಳನ್ನು ದಾಖಲಿಸುತ್ತವೆ. ಆದರೆ 'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ವೈಶಿಷ್ಟ್ಯವೆಂದರೆ ವಿಧವಾ ವಿವಾಹ, ಪ್ರೇಮವಿವಾಹದಂತಹ ವಿಷಯಗಳು ಕಾದಂಬರಿಯ ವೈಪರೀತ್ಯಕ್ಕೆ ಹಾಗೂ ವೈಲಕ್ಷಣಗಳಿಗೆ ಪೂರಕವಾಗಿ ಬರುತ್ತವೆ. ಹೆಣ್ಣಿಲೆ ಚಿಗುರಿದಾಗ ಕಾದಂಬರಿ ಪರಿಪೂರ್ಣವಾಗಿ ಚಿತ್ರಿಸುವ ಪಾತ್ರ ರಾಯರದ್ದು.

> "ಆಧುನಿಕ ಕನ್ನಡ ಕಾದಂಬರಿಯ ಚಿರಕಾಲ ನೆನಪಿನಲ್ಲುಳಿಯುವ ಪಾತ್ರಗಳಲ್ಲಿ ರಾಯರ ಪಾತ್ರವೂ ಒಂದು. ಅತ್ಯಂತ ಎಚ್ಚರಿಕೆ ಮತ್ತು ತಾಳ್ಮೆಯಿಂದ ರೂಪಿಸಲ್ಪಟ್ಟಿರುವ ಈ ಪಾತ್ರ ಭಾಗಶಃ ವೈನೋದಿಕವಾಗಿದ್ದರೆ ಭಾಗಶಃ ಕರುಣಾಜನಕವಾಗಿದೆ. ಛಾರ್ಲ್ಸ್‌ಡಿಕನ್ಸ್ ತನ್ನ ಪಿಕ್‌ನಿಕ್ ಪೇಪರ್ಸ್‌ನಲ್ಲಿ ಮಾಡುವಂತೆ, ತ್ರಿವೇಣಿಯವರು ಈ ಕಾದಂಬರಿಯಲ್ಲಿ ರಾಯರ ವಿಲಕ್ಷಣ ವರ್ತನೆಗಳನ್ನು ಒಂದಾದನಂತರ ಮತ್ತೊಂದರಂತೆ ಪ್ರದರ್ಶಿಸುತ್ತಾರೆ." (ರಾಮಚಂದ್ರನ್ ಸಿ.ಎನ್: ೧೯೯೬; ೫೮.)

ಕಾದಂಬರಿಯ ಮಧ್ಯಭಾಗದಲ್ಲಿ ಕೃತಿಗೆ ಒಂದು ಗಂಭೀರ ಆಯಾಮ ಪ್ರಾಪ್ತವಾಗುತ್ತದೆ. ಮದುವೆಯಾದ ಸ್ವಲ್ಪ ಸಮಯದಲ್ಲಿ ರಾಯರ ಅಳಿಯ ಸಾಯುತ್ತಾನೆ. ಮತ್ತು ಕೊನೆಯ ಮಗ ಮನೆತನದ ರೀತಿನೀತಿಗಳಿಗೆ ವಿರುದ್ಧವಾಗಿ ನಟಿಯೊಬ್ಬಳನ್ನು ಮದುವೆಯಾಗಲು ನಿರ್ಧರಿಸುತ್ತಾನೆ. ಈ ಕಾರಣಗಳಿಂದಾಗಿ ಉದ್ಭವಿಸುವ ನಿರೀಕ್ಷಿತ ಸಂಘರ್ಷಗಳನ್ನು ಲೇಖಕಿ ಸಂಯಮಪೂರ್ಣವಾಗಿ ದಾಖಲಿಸುತ್ತಾರೆ. ರಾಯರು ವಿವೇಚನಾಶೂನ್ಯರಾಗಿ ತಮ್ಮ ಮಗನ ಮದುವೆಯ ವಿರುದ್ಧ ಹಠ ಹಿಡಿದು ಕೂರುತ್ತಾರೆ. ಆದರೆ ಮಗನು ತಂದೆಯ ವಿರೋಧವನ್ನು ಲೆಕ್ಕಿಸದೆ, ಅವಳನ್ನೇ ಮದುವೆಯಾಗಿ ಮನೆಬಿಟ್ಟು ಹೋಗುತ್ತಾನೆ. ಈ ಮಧ್ಯೆ ವಿಧವೆಯಾದ ಮಗಳು, ಕಿರಿವಯಸ್ಸಿನಲ್ಲಿಯೇ ವಿಧುರನಾದ ಒಬ್ಬನನ್ನು ಪ್ರೇಮಿಸಿ, ಮದುವೆಯಾಗಲು ಸಿದ್ಧಳಾಗುತ್ತಾಳೆ. ಸಂಪ್ರದಾಯಸ್ಥರಾದ ರಾಯರು ಸ್ತ್ರೀಯ ಪುನರ್ವಿವಾಹವನ್ನು ಒಪ್ಪದೆ ಮಗಳ ವಿಚಾರವನ್ನು ವಿರೋಧಿಸುತ್ತಾರೆ. ಆದರೆ ಮಗಳಾದರೋ ತನ್ನ ಅಣ್ಣನಂತೆ ತಂದೆಯ ಭಾವನೆಗಳಿಗೆ ನೋವುಂಟು ಮಾಡಲಿಚ್ಛಿಸದೆ, ಅವಿವಾಹಿತಳಾಗಿಯೇ ಉಳಿಯಲು ನಿರ್ಧರಿಸುತ್ತಾಳೆ. ಮಗಳ ಈ ತ್ಯಾಗವು ನಿಧಾನವಾಗಿ ರಾಯರ ಕಣ್ತೆರೆಸಿ, ಅವರು ಹೊಸ ದೃಷ್ಟಿಕೋನದಿಂದ ಪ್ರಪಂಚವನ್ನು ನೋಡುವಂತೆ ಮಾಡುತ್ತದೆ. ಕೊನೆಗೆ

ತಮ್ಮ ಮನಸ್ಸು ಬದಲಾಯಿಸಿ ರಾಯರು ಮಗಳ ಪುನರ್ವಿವಾಹಕ್ಕೆ ಒಪ್ಪಿ ಆಶೀರ್ವಾದ ಮಾಡುತ್ತಾರೆ. 'ಹೆಣ್ಣಿಲೆ ಚಿಗುರಿದಾಗ' ಕಾದಂಬರಿಯ ನಾಯಕಿ ಮಾಲತಿ ವಿಧವೆ. ಆಕೆಯ ಮರು ಮದುವೆಗೆ ಅವಕಾಶವಿರುವಂತೆ ಕಥೆ ಬೆಳೆಯುತ್ತದೆ. ಅಂದರೆ ಆಕೆಯ ಮದುವೆ ವೈವಾಹಿಕ ಸಂಬಂಧದ ನೆಲೆಗಳಿಗೆ ಮತ್ತು ಜವಾಬ್ದಾರಿಗೆ ಪಕ್ಕಾಗಿರುವುದಿಲ್ಲ. ಇಂಥ 'ಸಂಘರ್ಷರಹಿತ' ಸಂದರ್ಭದಲ್ಲೂ ಮರು ಮದುವೆಯೆನ್ನುವುದು ಒಂದು ಸಾಮಾಜಿಕ ಪಲ್ಲಟದ ಸಂಗತಿಯಾಗಿ ಕಾದಂಬರಿಯಲ್ಲಿ ಚಿತ್ರಿತವಾಗುವುದಿಲ್ಲ. ಕುಟುಂಬದ ವಿವಿಧ ಸದಸ್ಯರ ಮಾನಸಿಕ ಸಂಬಂಧಗಳ ಹೊಯ್ದಾಟದ ಮೂಲಕವೇ ಮಾಲತಿ ಇನ್ನೊಂದು ಮದುವೆಗೆ 'ಅರ್ಹ'ಳಾಗುತ್ತಾಳೆ. ಇನ್ನೊಂದು ಮದುವೆ ಅವಳ ಮಾನಸಿಕ ಆಯ್ಕೆಯಾಗಿದ್ದರೂ ಅದು ಕೌಟುಂಬಿಕ ಚೌಕಟ್ಟಿನಲ್ಲೇ ಪ್ರಕಟಗೊಳ್ಳುತ್ತದೆ. ಅಂದರೆ, ಮರುಮದುವೆಯಂತಹ ಸಂಗತಿಗಳೂ ತ್ರಿವೇಣಿಯವರಿಗೆ ಇಲ್ಲಿ ಸಾಮಾಜಿಕ ಪಲ್ಲಟದ ನಿದರ್ಶನಗಳಾಗಿ ಮುಖ್ಯವಾಗುವುದಿಲ್ಲ. ಅಂತಹ ಅನುಭವಗಳಿಗೆ ಒಳಗಾಗುವ ವ್ಯಕ್ತಿ ಹಾಗೂ ಕುಟುಂಬ ಸಂಬಂಧಗಳು ಅವರಿಗೆ ಮುಖ್ಯವೆನಿಸುತ್ತವೆ.

'ವಿಧವಾ ವಿವಾಹ'ದ ಸಾಮಾಜಿಕ ವಿಶ್ಲೇಷಣೆಯ ಒಂದು ನೋಟ **ಕೀಲು ಗೊಂಬೆ**ಯಲ್ಲಿ ವ್ಯಕ್ತವಾಗುತ್ತದೆ. ಈ ಕಾದಂಬರಿಯಲ್ಲಿನ ಬಾಲ ವಿಧವೆ ಸಾವಿತ್ರಮ್ಮ ಆಸ್ಪತ್ರೆಯಲ್ಲಿರುವ ದುರ್ದೈವಿ ಹೆಂಗಸು. ಆಸ್ಪತ್ರೆಯ ವಾರ್ಡಿನ ಎಲ್ಲರ ಗೇಲಿ ತಿರಸ್ಕಾರಕ್ಕೆ ಗುರಿಯಾಗುವವಳು. ಅವಳು ಅಡುಗೆಯವಳಾಗಿ ಕೆಲಸ ಮಾಡುತ್ತಿದ್ದ ಶ್ರೀಮಂತರೊಬ್ಬರ ಮನೆಯಲ್ಲಿ ಆ ಮನೆಯ ಯಜಮಾನನಿಂದ ಬಲಾತ್ಕಾರಕ್ಕೆ ಒಳಗಾಗುತ್ತಾಳೆ. ಪರಿಣಾಮ ಇವಳೊಬ್ಬಳೇ ಆ ಪಾಪದ ಫಲವನ್ನು ಉಣ್ಣಬೇಕಾಗುತ್ತದೆ. ಸಮಾಜಕಾರ್ಯಕರ್ತೆ ಮಧುರವಾಣಿ ಅವಳಿಗೆ ಹೇಳುವಂತೆ ಸ್ತ್ರೀಯರನ್ನು ಸದಾ ತನ್ನೊಡೆತನದಲ್ಲಿಡಲು ಗಂಡಸು ಮಾಡುವ ಅನೇಕ ಕ್ರಮಗಳಲ್ಲಿ ಇದೂ ಒಂದು:

> "ಚಿಕ್ಕ ವಯಸ್ಸಿನಲ್ಲಿ ಗಂಡ ಸತ್ತರೆ ಮದುವೆ ಮಾಡ್ಕೋಬಾರ್ದು ಹೆಣ್ಣು ಅಂತ ಕಾನೂನು ಮಾಡಿರುವ ಸಮಾಜದ ತಪ್ಪು. ಆ ಸಮಾಜಾನ ಎದುರಿಸಿ ಅನಾಥೆಯನ್ನು ಸೌಭಾಗ್ಯವತಿಯನ್ನಾಗಿ ಮಾಡಲು ಹಿಂಜರಿಯುವ ಹೇಡಿ ಗಂಡಸಿನ ತಪ್ಪು. ಗಂಡಸು, ಇನ್ನೂ ಮೃಗವಾಗಿಯೇ ಇದ್ದಾನೆ ಎನ್ನುವುದಕ್ಕೆ ನಿಮ್ಮ ಈಗಿನ ಸ್ಥಿತಿಯೇ ಸಾಕ್ಷಿ." (ತ್ರಿವೇಣಿ: ೧೯೫೬; ೧೬೦ - ೧೬೧)

ಸ್ತ್ರೀಯರ ಇಂತಹ ಹೀನಾಯ ಸ್ಥಿತಿಗೆ ಕಾರಣವೆಂದರೆ ನಮ್ಮ ಸಮಾಜದಲ್ಲಿ ಸ್ತ್ರೀಯರಿಗೆ ಒಂದು ನ್ಯಾಯ, ಪುರುಷರಿಗೆ ಒಂದು ನ್ಯಾಯವಿರುವುದು. ಪುರುಷರ ವಿವಾಹೇತರ ಸಂಬಂಧಗಳ ವ್ಯವಹಾರಗಳು ದುರ್ಲಕ್ಷ್ಯಕ್ಕೆ ಒಳಗಾದರೆ, ಪ್ರಕೃತಿಯೇ ಆ ಸಂಬಂಧ ವ್ಯವಹಾರಗಳಿಗೆ ಸ್ತ್ರೀಯರನ್ನು ಜವಾಬ್ದಾರನ್ನಾಗಿಸುತ್ತದೆ.

ವಿವಾಹದ ತಮ್ಮ ಆಯ್ಕೆಗಳನ್ನು ಗೊಂದಲದಿಂದಲೇ ಎದುರಿಸುವ ತ್ರಿವೇಣಿಯವರ ಹೆಚ್ಚಿನ ಸ್ತ್ರೀಪಾತ್ರಗಳ ಸಂದರ್ಭ ಅಭದ್ರತೆಯಿಂದ ಕೂಡಿದ್ದಾಗಿದೆ. ಇದು ವಿವಾಹದ 'ಆರ್ಥಿಕ ನೆಲೆ'ಯ ಪ್ರಶ್ನೆಯಿಂದಲೂ ಕೂಡಿದ್ದಾಗಿರಬಹುದು. **ಕಾಶೀಯಾತ್ರೆ** ಇದನ್ನು ಮತ್ತೊಂದು ಆಯಾಮದಿಂದ ನೋಡಲು ಪ್ರಯತ್ನಿಸಿದೆ. ಈ ಕಾದಂಬರಿಯಲ್ಲಿ ಪ್ರಶ್ನೆಯಾಗಿ ಕಾಡುವುದು ಮಂಗಳೆಯ ಮದುವೆ. ಕೆಳಮಧ್ಯಮ ವರ್ಗದ ಕುಟುಂಬದ ಹಿನ್ನೆಲೆಯಲ್ಲಿ ಮದುವೆ ಎಂಬುದು ತಂದೆ ತಾಯಿಗಳಿಗೆ ದೊಡ್ಡ ಜವಾಬ್ದಾರಿ. ಮಂಗಳೆಯ

ಮದುವೆಗೆ ನಾಟಕೀಯವಾಗಿ ನೆರವಾಗುವವರು ವಿಧವೆ ಪಾತಮ್ಮ. ತಮ್ಮ ಜೀವನ ನಿರ್ವಹಣೆಗಾಗಿ ಸುತ್ತಮುತ್ತಣ ಮನೆಗಳಲ್ಲಿ ದುಡಿಯುತ್ತಾ ಬಂದದ್ದರಲ್ಲಿ ಮಿಗಿಸಿ ಹಣ ಕೂಡಿಟ್ಟ ಪಾತಮ್ಮನ ಜೀವನ ಧ್ಯೇಯವೇ ಕಾಶೀಯಾತ್ರೆಗೆ ಹೋಗುವುದಾಗಿರುತ್ತದೆ. ಇದೇ ಹಣವನ್ನು ಮಂಗಳೆಯ ಮದುವೆಗಾಗಿ ಅವರು ನೀಡುತ್ತಾರೆ, 'ಕಾಶೀಯಾತ್ರೆ' ಈ ಪದಕ್ಕೆ ಕಾದಂಬರಿಯಲ್ಲಿ ಎರಡು ನೆಲೆಯಲ್ಲಿ ಅರ್ಥ ಪ್ರಾಪ್ತಿಯಾಗುತ್ತದೆ. ಕಾಶೀಯಾತ್ರೆಯಲ್ಲಿ ವರದಕ್ಷಿಣೆಯ ಪ್ರಶ್ನೆಯನ್ನು ಸಂಕೀರ್ಣವಾಗಿ ಬಿಂಬಿಸುವ ಪ್ರಯತ್ನವಿದೆ. ಮಂಗಳೆಯನ್ನು ವಿವಾಹವಾಗ ಬಯಸುವ ವರ ನರಹರಿ ವೈದ್ಯ. ಆದರೆ ಆತನ ಹಿರಿಯರು ಈ ಮದುವೆಯಲ್ಲಿ ವರದಕ್ಷಿಣೆಯನ್ನು ಅಪೇಕ್ಷಿಸುತ್ತಾರೆ. ವಿವಾಹದಲ್ಲಿನ ಆರ್ಥಿಕ ಪ್ರಶ್ನೆಯನ್ನು ಒಂದು ಒಗಟಿನಂತೆ ಪರಿಗಣಿಸಿ ಅದನ್ನು ಬಿಡಿಸುವ ಕಥೆಯನ್ನು ಇಲ್ಲಿ ಕಟ್ಟಲಾಗಿದೆ. ಹೆಣ್ಣಿಗೆ ಕುಟುಂಬ ಪಲ್ಲಟದಂತಹ ಗಳಿಗೆಯನ್ನು ಸೃಷ್ಟಿಸುವ ವಿವಾಹದಲ್ಲಿ, ಪಠ್ಯದ ಒಳಗೆ ವರದಕ್ಷಿಣೆಯ ಕಾರಣ, ಪರಿಣಾಮಗಳು ಮುಖ್ಯವಾಗುವುದೇ ಇಲ್ಲ. ಮಂಗಳೆಯನ್ನು ತನ್ನ ಜೀವನ ಸಂಗಾತಿಯೊಡನೆ ಮದುವೆಗೆ ಮೊದಲೇ ಒಡನಾಡುವ ಒಂದು ಅವಕಾಶವನ್ನು ಕಲ್ಪಿಸುವ ಮೂಲಕ 'ಅಪಾಯಕಾರಿ ಸ್ಥಿತಿ'ಯಲ್ಲಿ ಆಕೆಯನ್ನು ನಿಲ್ಲಿಸಲಾಗುತ್ತದೆ. ಬಹುಶಃ ಕಾದಂಬರಿ ಪಠ್ಯ ಹೆಣ್ಣಿಗೆ ಕಲ್ಪಿಸುವ ವಿವಾಹ ಪೂರ್ವ ಒಡನಾಟದ ಅವಕಾಶ ಎಷ್ಟು ನಾಜೂಕಾದುದು ಎಂಬುದಕ್ಕೆ ಇದು ಒಂದು ಮಾದರಿಯಾಗಿದೆ.

ವಿವಾಹಗಳು ನೆರವೇರುವುದರಲ್ಲಿ ಇರುವ ಇನ್ನೊಂದು ಶರತ್ತು ಜಾತಿಗೆ ಸಂಬಂಧಿಸಿದ್ದು. ಈ ಪ್ರಶ್ನೆಯನ್ನು ತ್ರಿವೇಣಿಯವರು ಹೆಚ್ಚು ವಿವರಗಳಲ್ಲಿ ಚರ್ಚಿಸಹೋಗಿಲ್ಲ. ಅಂಥ ಪ್ರಸಂಗಗಳು ಅವರ ಎರಡು ಕಾದಂಬರಿಗಳಲ್ಲಿ ಮಾತ್ರ ಬರುತ್ತವೆ. **ಮುಕ್ತಿ**ಯಲ್ಲಿ ವರದಿಯಾಗುವ ಅಯ್ಯಂಗಾರ್- ಕ್ರಿಶ್ಚಿಯನ್ ಮದುವೆ ಅಂಥ ಒಂದು ಸಂದರ್ಭ. ವೇದವಲ್ಲಿ ಅಯ್ಯಂಗಾರ್ ಹುಡುಗಿಯಾಗಿದ್ದು ಹಲವು ಕಾರಣಗಳಿಂದಾಗಿ ಜಾತಿಯಲ್ಲಿ ವಿವಾಹಕ್ಕೆ ಒಳಗಾಗದ ಹೆಣ್ಣು ಕೊನೆಗೆ ಸಂಗೀತ ಮಾಸ್ಟರ್ ಒಬ್ಬನ ಜೊತೆ ಮನೆಯವರ ಕಣ್ಣು ತಪ್ಪಿಸಿ ಹೋಗಿ ಮದುವೆಯಾಗುತ್ತಾಳೆ. **ಹೆಣ್ಣಿಲೆ ಚಿಗುರಿದಾಗ** ಕಾದಂಬರಿಯಲ್ಲಿ ಶಿವು ಅನ್ಯಜಾತಿಗೆ ಸೇರಿದ ಜಯಂತಿಯನ್ನು ಮದುವೆಯಾಗಬಯಸುತ್ತಾನೆ. ಆಕೆ ಅನ್ಯಜಾತಿಗೆ ಸೇರಿದವಳು ಎನ್ನುವ ಒಂದು ಸಂಗತಿ ಕುಟುಂಬದ ಶಾಂತಿಯನ್ನು ಕದಡುತ್ತದೆ. ಈ ಪರಿಸ್ಥಿತಿಯಲ್ಲಿ ಶಿವು ಜಯಂತಿಯನ್ನು ಕೊನೆಗೂ ಮದುವೆಯಾಗುತ್ತಾನೆ. ಜಾತೀಯ ನೆಲೆಯಲ್ಲಿ ಹುಟ್ಟುವ ವಿವಾಹದ ಸಂಘರ್ಷ ಕುಟುಂಬದ ನೆಲೆಯಲ್ಲಿ ಮಾತ್ರ ಇಲ್ಲಿ ಕಾಣಿಸಿಕೊಳ್ಳುತ್ತದೆ. ಹೀಗೆ ವಿವಿಧ ವಿನ್ಯಾಸಗಳಲ್ಲಿ, ಮಾದರಿಗಳ ವಿವಿಧ ರೂಪದಲ್ಲಿ ತ್ರಿವೇಣಿಯವರ ಹೆಚ್ಚಿನ ಕಾದಂಬರಿಗಳಲ್ಲಿ ವಿವಾಹ ಒಂದು ಅಧಿಕೃತ ಸಂವಿಧಾನವಾಗಿ ಕಾಣಬರುತ್ತದೆ. ವಿವಾಹದ ಪಾರಂಪರಿಕ ನೆಲೆಗೆ ಒಂದು ಹೊಸ ಅವಕಾಶ ಪ್ರಾಪ್ತಿಯಾಗುವುದು ತ್ರಿವೇಣಿಯವರ ಕಾದಂಬರಿಗಳಲ್ಲಿ ಬಿಂಬಿತಗೊಳ್ಳುವ ವಿವಾಹದ ತಾತ್ವಿಕ ನಿಲುವಾಗಿದೆ. 'ವಿವಾಹ'ದ ಹೊರತು ಮತ್ತೊಂದು ನೆಲೆ ಅವರ ಕಾದಂಬರಿಯಲ್ಲಿ ಸ್ತ್ರೀಯರಿಗೆ ಕಂಡುಕೊಳ್ಳುವುದು ಸಾಧ್ಯವಾಗದಿದ್ದರೂ 'ಆಯ್ಕೆ'ಗೆ ಸಿಗುವ ಒಂದಷ್ಟು ಅವಕಾಶಗಳು 'ಆರ್ಥಿಕ ಸ್ವಾತಂತ್ರ್ಯ' ಬೀಜರೂಪದ್ದೇ ಆದರೂ ಗಮನಾರ್ಹವಾಗಿದೆ.

'ವಿವಾಹ ಬಾಹಿರ' ಸಂಬಂಧಗಳ ಬಗ್ಗೆ **ಹೂವುಹಣ್ಣು, ತಾವರೆಕೊಳ, ಸೋತುಗೆದ್ದವಳು** ಈ ಪಠ್ಯಗಳು ಗಮನಹರಿಸುತ್ತವೆ. ಆದರೆ ಅವುಗಳ ತಾತ್ವಿಕ ನೆಲಗಟ್ಟು ಸಮರ್ಥನೆಗೊಳ್ಳದೆ

ವ್ಯಕ್ತಿ ಕೇಂದ್ರಿತವಾಗಿ ಪಾರ್ಶ್ವಿಕವಾಗಿಯೇ ಅಭಿವ್ಯಕ್ತಿಯನ್ನು ಪಡೆಯುತ್ತವೆ. ಈ ಕಾರಣಕ್ಕಾಗಿ 'ವಿವಾಹ ಬಾಹಿರ' ಸಂಬಂಧಗಳು ಅಂತಿಮವಾಗಿ ಬದುಕಿನಲ್ಲಿ ಬದ್ಧತೆಯನ್ನು ಕಾಯ್ದುಕೊಳ್ಳದೆ ಪೇಲವವಾಗುತ್ತದೆ. ಈ ಸಂಬಂಧಗಳಲ್ಲಿ ಪ್ರಣಯವಿದೆ. ಬದ್ಧತೆ ಇಲ್ಲ. ಇದರಿಂದಾಗಿ, ವಿವಾಹ ಬಾಹಿರ ಸಂಬಂಧಗಳ ಜವಾಬ್ದಾರಿಯನ್ನು ರಮಾ, ಸುಶೀಲಾ, ಮಾಲತಿಯವರಂತಹ ಹೆಣ್ಣುಗಳೇ ಹೊರಬೇಕಾಗುತ್ತದೆ.

**ಇಂದಿರಾ.ಎಂ.ಕೆ. ಅವರ ಕಾದಂಬರಿಗಳಲ್ಲಿನ ವಿವಾಹದ ಸ್ವರೂಪ:**

**ತುಂಗಭದ್ರ** (೧೯೬೩) ಕಾದಂಬರಿಯಿಂದ ತೊಡಗಿ **ಸೂತ್ರಧಾರಿ** (೧೯೮೪)ರವರೆಗೆ ೮೧ ಕಾದಂಬರಿಗಳನ್ನು ರಚಿಸಿರುವ ಇಂದಿರಾ.ಎಂ.ಕೆ. ಅವರ ಬರವಣಿಗೆಯ ಕೇಂದ್ರ ವಿವಾಹ, ದಾಂಪತ್ಯ, ಕೌಟುಂಬಿಕ ನಿರೂಪಣೆಗಳೇ ಆಗಿವೆ. ಇಲ್ಲಿ ಪ್ರಾದೇಶಿಕ ಆಯಾಮದ ತಳಹದಿಯಿಂದಲೇ ಇವುಗಳ ಚಿತ್ರಣವಿದೆ. ತ್ರಿವೇಣಿಯವರಂತೆ ಇಂದಿರಾ.ಎಂ.ಕೆ. ಕೂಡ ವಿವಾಹದ ಮೂಲ ಪಾತಳಿಯಿಂದಲೇ ಸಮಾಜವನ್ನು, ಜೀವನವನ್ನು, ಪರಿಗ್ರಹಿಸುವ ಪ್ರಯತ್ನವನ್ನು ನಡೆಸಿರುವುದು ನಿಜ. ಆದರೆ ಕಾಲಮಾನದ ದೃಷ್ಟಿಯಿಂದ ಸುಮಾರು ನೂರು, ನೂರೈವತ್ತು ವರ್ಷಗಳ ಅವಧಿಯನ್ನು ಅಂದರೆ, ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಮಲೆನಾಡಿನ ಜೀವನ ಚಿತ್ರಣವನ್ನು ಬಿಂಬಿಸಿರುವುದು ವ್ಯಕ್ತವಾಗುತ್ತದೆ. ಈ ನೆಲೆಯಲ್ಲಿ ವಿವಾಹದಂತಹ ಸಂಸ್ಥೆ ಹುಟ್ಟು ಹಾಕಿರುವ ಪಾರಂಪರಿಕ ಸಮಸ್ಯೆಯು ಆಧುನಿಕ ಸಮಾಜದಲ್ಲಿ ಪಲ್ಲಟಗೊಂಡ ಬಗೆಯ ದೀರ್ಘ ವೃತ್ತಾಂತವಿದೆ. ವಿವಾಹ ಸಂವಿಧಾನದ ಮೂಲಕವಾಗಿಯೇ ಸಾಮಾಜೀಕರಣಕ್ಕೆ ಒಳಗಾಗುವ ವ್ಯಕ್ತಿತ್ವಗಳು ಇಂದಿರಾ.ಎಂ.ಕೆ. ಅವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತವೆ.

**ವಿವಾಹದ ನೂತನ ಆಯಾಮ :**

ತ್ರಿವೇಣಿಯವರ **ಕಂಕಣ**, ಇಂದಿರಾ.ಎಂ.ಕೆ. ಅವರ **ಚಿದ್ವಿಲಾಸ** ಇವು ವಸ್ತುವಿನ ದೃಷ್ಟಿಯಿಂದ ಒಂದನ್ನೊಂದು ಹೋಲುವ ಕೃತಿಗಳು. ಚಿದ್ವಿಲಾಸ ಕಾದಂಬರಿಯನ್ನು ಕಾಲೇಜು ವಿದ್ಯಾರ್ಥಿಗಳಾದ ಭಾವನಾ, ರಮಾ, ಹಂಸಾ, ಕರುಣಾ, ಪರಿಮಳ, ಕೋಕಿಲ, ವಿವೇಕಾನಂದ, ರಾಧಾಕೃಷ್ಣ, ಮನೋಹರ ಗುಪ್ತಾ ಈ ಪಾತ್ರಗಳ ಜೀವನದ ಸುತ್ತ ಹೆಣೆಯಲಾಗಿದೆ. ಕಾದಂಬರಿ ನಂದೀ ಬೆಟ್ಟಕ್ಕೆ ಪ್ರವಾಸ ಬಂದ ವಿದ್ಯಾರ್ಥಿಗಳು ತಮ್ಮ ಮುಂದಿನ ಜೀವನದ ಬಗೆಗೆ ಒಬ್ಬೊಬ್ಬರು ಒಂದೊಂದು ಬಗೆಯ ಕನಸು ಕಟ್ಟುವಲ್ಲಿಂದ ಆರಂಭವಾಗುತ್ತದೆ. ವಯಸ್ಸಿಗೆ ಮೀರಿದ ಗಾಂಭೀರ್ಯ, ತಿಳುವಳಿಕೆ, ಪುಕ್ಕಲು ಸ್ವಭಾವದ ಭಾವನಾ ಬಡ ಕುಟುಂಬದವಳು. ಮೂವರು ತಂಗಿಯರು, ಒಬ್ಬ ತಮ್ಮ ಹಾಗೂ ಕಾಯಿಲೆಯಿಂದ ಹಾಸಿಗೆ ಹಿಡಿದ ವಿಧವೆ ತಾಯಿ ಇವರನ್ನು ಸಾಕುವ ಜವಾಬ್ದಾರಿಯ ಸ್ಥಾನದಲ್ಲಿರುವವಳು. ತಾನು ಬಿ.ಎಡ್. ಮುಗಿಸಿ ಕೆಲಸಕ್ಕೆ ಸೇರುವ ತೀರ್ಮಾನ ಏನಿದೆ ಹಾಗೇ ಬಿ.ಎಡ್.ಗೆ ಸೇರುತ್ತಾಳೆ. ಭಾವನಾಳ ಮೊದಲ ತಂಗಿ ರೂಪ ಧೈರ್ಯಸ್ಥೆ. ಮನೆಯ ಯಾವುದೇ ತಾಪತ್ರಯಗಳನ್ನು ಅಂಟಿಸಿಕೊಳ್ಳದೇ ಓಡಾಡುತ್ತಾಳೆ. ಅಲ್ಲದೆ, ತಾನು ಪ್ರೀತಿಸಿದ ಯುವಕನೊಂದಿಗೆ ಅಂತರ್‌ಜಾತೀಯ ವಿವಾಹವಾಗಿ ದೆಹಲಿಗೆ ಹೊರಟು ಹೋಗುತ್ತಾಳೆ. ಎರಡನೆಯ ತಂಗಿ ಮಮತಾಗೆ ಮನೆಯ ಪರಿಸ್ಥಿತಿಯ ಅರಿವಿದೆ. ಆದ್ದರಿಂದ ಆಕೆ ತನ್ನ ಶಿಕ್ಷಣವನ್ನು ಹೈಸ್ಕೂಲಿಗೇ ಮುಗಿಸಿ ಮನೆಯಲ್ಲಿ ತಾಯಿಯ ಸೇವೆ. ಮನೆಗೆಲಸವನ್ನು ಮಾಡಿಕೊಂಡಿರುತ್ತಾಳೆ. ಪ್ರೇಮಾ, ಆತ್ಮ ಇನ್ನೂ ಚಿಕ್ಕವರು. ಬೆಳೆದಂತೆ ಅವರ ಅಭಿರುಚಿಗಳೇ ಬೇರೆಯಾಗುತ್ತವೆ. ಭಾವನಾಳ ಗೆಳತಿಯರಲ್ಲಿ ಕರುಣಾ, ಲಾಯರ್ ಆಗುತ್ತಾಳೆ. ಹಂಸ ಮೆಡಿಕಲ್ ಕಾಲೇಜಿಗೆ

ಸೇರುತ್ತಾಳೆ. ಬಂದುದನ್ನು ಸಂತೋಷದಿಂದ ಸ್ವೀಕರಿಸುವ ಕೋಕಿಲ ತಂದೆ-ತಾಯಿ ಗೊತ್ತು ಮಾಡಿದ ಡಾಕ್ಟರೇಟ್ ಪದವೀಧರನೊಂದಿಗೆ ಮದುವೆಯಾಗಿ ಜೀವನದಲ್ಲಿ ತೃಪ್ತಿ ಪಡೆಯುತ್ತಾಳೆ. ಬಡಕುಟುಂಬದ ಮನೋರಮಾ ಕೆಲಸಕ್ಕೆ ಸೇರಿ ಕೊನೆಗೆ ತನ್ನ ಸಹೋದ್ಯೋಗಿಯೊಂದಿಗೆ ಹಿರಿಯರ ಸಮ್ಮತಿ ಪಡೆದು ಮದುವೆಯಾಗುತ್ತಾಳೆ. ಎಲ್ಲದಕ್ಕೂ ತೀವ್ರವಾಗಿ ಸ್ಪಂದಿಸುವ ಹಂಸ ಅವಿವೇಕದಿಂದ ತನ್ನ ಜೀವನವನ್ನು ಕೊನೆಗಾಣಿಸಿಕೊಳ್ಳುವುದಲ್ಲದೆ ಮಾಯಾಳ ಭಾವೀ ಪತಿಯನ್ನು ಕೊಂದು ಮೂರು ಕುಟುಂಬಗಳಿಗೆ ಸಮಸ್ಯೆಯನ್ನು ತಂದೊಡ್ಡುತ್ತಾಳೆ. ಪುಕ್ಕಲು ಸ್ವಭಾವದವಳೂ, ಸಂಪ್ರದಾಯ ಶೀಲೆಯೂ ಆದ ಭಾವನಾ ಜೀವನದಲ್ಲಿ ಎದುರಾಗುವ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸುತ್ತಾಳೆ. ಪರಿಸ್ಥಿತಿಗೆ ತಕ್ಕಂತೆ ಬದಲಾಗುವ ಅವಳ ಮನೋಭಾವನೆ ಎದುರಾಗುವ ಸಮಸ್ಯೆಗಳಿಗೆ ಆಕೆ ಕಂಡುಕೊಳ್ಳುವ ಪರಿಹಾರ ಇವುಗಳ ನಿರೂಪಣೆ ಸಹಜವಾಗಿ ಬೆಳವಣಿಗೆ ಹೊಂದಿದೆ. ತನ್ನ ತಾಯಿ, ತಂಗಿ, ತಮ್ಮ ಇವರಿಗಾಗಿ ತನ್ನ ಯೌವ್ವನದ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ ತಂದೆಯ ಸ್ಥಾನದಲ್ಲಿ ನಿಂತು ಮನೆತನದ ಎಲ್ಲ ಜವಾಬ್ದಾರಿಗಳನ್ನು ತೂಗಿಸಿಕೊಂಡು ಹೋಗುತ್ತಾಳೆ. ಎಲ್ಲರ ಮದುವೆ ಮುಗಿಸಿ ಕೊನೆಗೆ ಏಕಾಂಗಿಯಾಗಿ ಉಳಿಯುತ್ತಾಳೆ. ಚಿದ್ವಿಲಾಸ ಪಠ್ಯವು ವಿವಾಹವನ್ನು ಸಾಮಾಜಿಕ ಪ್ರಕ್ರಿಯೆಯಾಗಿ ನೋಡುತ್ತದೆ. ಹಾಗೆಯೇ ಹಲವು ಆಯಾಮಗಳಿಂದ ವಿವಾಹದ ಕುರಿತ ತೀರ್ಮಾನಗಳನ್ನು ನೀಡುತ್ತದೆ. ವ್ಯಕ್ತಿ ಬದುಕಿನಲ್ಲಿ ವಿವಾಹ ಎದುರು ಮಾಡುವ ಅವಕಾಶಗಳು-ಆಯ್ಕೆಗಳು, ಸಂದರ್ಭಗಳ ಸಂಕೀರ್ಣತೆಗಳು ಮತ್ತು ಸಂದರ್ಭಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ, ವೈಫಲ್ಯಗೊಳ್ಳುವ ಹಲವು ಮೂಲಗಳಲ್ಲಿ ಪರಿಶೀಲಿಸುವ ವಿಸ್ತಾರವಾದ ಚೌಕಟ್ಟು ಚಿದ್ವಿಲಾಸ ಕಾದಂಬರಿಯದ್ದು. ವಿವಾಹದ ನೆಲೆಯಲ್ಲಿ ಕಾದಂಬರಿಯಲ್ಲಿ ಬರುವ ಎಲ್ಲ ಪಾತ್ರಗಳು ಸ್ವಾಭಾವಿಕ ಬೆಳವಣಿಗೆಯನ್ನು ಹೊಂದಿ ಮುಕ್ತಾಯವಾಗುತ್ತವೆ. ಯುವಪೀಳಿಗೆ ಎದುರಿಸುತ್ತಿರುವ ನಿರುದ್ಯೋಗ, ಬಡತನ, ಅಂತರ್ಜಾತಿಯ ವಿವಾಹದ ಸಮಸ್ಯೆಯ ವಿಶ್ಲೇಷಣೆ ಇಲ್ಲಿ ಸಾಧ್ಯವಾಗಿದೆ. ವಾಸ್ತವ ಸಮಸ್ಯೆಗಳು ಬದುಕಿನೊಂದಿಗೆ ನಡೆಸುವ ಮುಖಾಮುಖಿಯೇ ಇಲ್ಲಿ ಪ್ರಧಾನ. ಬಡತನದಿಂದಾಗಿ ವಿವಾಹದ ಅವಕಾಶಗಳಿಂದ ವಂಚಿತಳಾಗಿ ಭಾವನಾ ಕೆಲಸಕ್ಕೆ ಸೇರಿ ಎಲ್ಲ ಜವಾಬ್ದಾರಿಗಳನ್ನು ಹೊತ್ತು ಒಡಹುಟ್ಟಿದವರಿಗಾಗಿ ಸ್ವಹಿತವನ್ನು ತ್ಯಾಗಮಾಡುವುದು ಅನಿವಾರ್ಯವಾಗುತ್ತದೆ. ಆರ್ಥಿಕ ಸ್ವಾವಲಂಬನೆ ಎಂದು ಭಾವಿಸುವ ಸ್ವಾತಂತ್ರ್ಯ ಕೆಲವೊಮ್ಮೆ 'ಸ್ವ ಸಂಪಾದನೆ' ಎಂಬುದಕ್ಕೆ ಮಾತ್ರ ಸೀಮಿತಗೊಳ್ಳುತ್ತದೆ. ಅದು ಕುಟುಂಬಕ್ಕೆ ಮೀಸಲಾಗುವ ಸಂದರ್ಭಗಳು ಬಡತನಕ್ಕೆ ಅಂಟಿಕೊಂಡದ್ದೆ ಆಗಿದೆ.

ಅಂತರ್‌ಜಾತಿಯ ವಿವಾಹ ಸಮಾಜದ ಅನೇಕ ಕುಟುಂಬಗಳಲ್ಲಿ ಬಂದೊದಗುವ ಜಟಿಲ ಸಮಸ್ಯೆ. ಭಾವನಳ ತಂಗಿ ರೂಪಾ (ಕಂಕಣ) ಕಂಡುಕೊಳ್ಳುವ ಪರಿಹಾರವೇ ಇದಕ್ಕೆ ಸೂಕ್ತವಾದುದು. ನಿರುದ್ಯೋಗಿ ಪುರುಷರ ಸಂಖ್ಯೆ ಹೆಚ್ಚುತ್ತಿರುವುದರಿಂದ ಅವಿವಾಹಿತ ಯುವತಿಯರ ಸಂಖ್ಯೆಯೂ ಬೆಳೆಯುತ್ತದೆ. ಬಡತನದ ಕಾರಣದಿಂದ ಮಧ್ಯಮ ವರ್ಗದ ಕುಟುಂಬದ ವಿದ್ಯಾವಂತ ಮಹಿಳೆ ಹೊರಗೆ ದುಡಿಯುವುದು ಅನಿವಾರ್ಯವಾಗುತ್ತದೆ. ಚಿದ್ವಿಲಾಸದ ಭಾವನಾ, ಮನೋರಮಾ ದುಡಿಮೆಯನ್ನೇ ನೆಚ್ಚಿಕೊಳ್ಳುವುದು ಅನಿವಾರ್ಯ ಕೊನೆಯಾಗಿದೆ. ಅಂತರ್‌ಜಾತಿಯ ವಿವಾಹದ ಅಡಚಣೆಯನ್ನು ಮನೋಮಂದಿರ ಕಾದಂಬರಿಯು ಆಂತರಿಕ ನೆಲೆಗಟ್ಟಿನಲ್ಲಿ ನೋಡುತ್ತದೆ. ತನ್ನ ಜಾತಿಯವನಲ್ಲದ ಯುವಕನನ್ನು ಮನದಲ್ಲಿ ಮೆಚ್ಚಿಕೊಂಡು ಅದನ್ನು ಸಮಾಜದಲ್ಲಿ ಬಹಿರಂಗ ಪಡಿಸದೇ ತನ್ನ ಮನೆತನದ ಸಂಸ್ಕೃತಿ, ಮಾನ ಮರ್ಯಾದೆ

ಇವುಗಳಿಗೆ ಬದ್ಧಳಾಗಿ, ಆತನನ್ನು ಕೊನೆಯವರೆಗೂ ಮನೋಮಂದಿರದಲ್ಲಿ ಆರಾಧಿಸಿ ಎರಡು ಮಕ್ಕಳಾದ ನಂತರ ಬದುಕಿನಲ್ಲಿ ನಿರಾಸಕ್ತಿ ಹೊಂದಿ ನಾಯಕಿ (ಚಿನ್ನ) ವಿಧವೆಯಂತೆ ಪಾಂಡಿಚೇರಿಯಲ್ಲಿ ಜೀವನ ನಡೆಸುತ್ತಾಳೆ. ತಾನು ಮೆಚ್ಚಿಕೊಂಡ ಮನೆ ಮಾಲೀಕ ಶಾಂತರಾಮನನ್ನು ಜಾತಿಯ ಕಾರಣದಿಂದ ಈ ಜನ್ಮದಲ್ಲಿ ಪಡೆಯುವುದು ಸಾಧ್ಯವಿಲ್ಲವೆಂದು ಅರಿತ ಚಿನ್ನ ಮದುವೆಯಾಗಲು, ಸಾಹುಕಾರರ ಮನೆಯ ಸೊಸೆಯಾಗಲು ಮೌನವಾಗಿ ಒಪ್ಪಿಕೊಳ್ಳುತ್ತಾಳೆ. ತನಗೆ ಒಪ್ಪಿತವಲ್ಲದ ಸಂಗಾತಿಯ ಆಯ್ಕೆ ಚಿನ್ನಳ ಬದುಕನ್ನೇ ಯಾಂತ್ರಿಕಗೊಳಿಸುತ್ತದೆ. ಇದೇ ಸಮಸ್ಯೆಯನ್ನು **ಕತೆಗಾರ** ಕಾದಂಬರಿ ಭಿನ್ನ ರೀತಿಯಿಂದ ಪರಿಶೀಲಿಸುತ್ತದೆ. ವಯಸ್ಸಿನ, ಮನಸ್ಸಿನ, ಅಧಿಕಾರಕ್ಕೆ ಮೋಹಕ್ಕೆ ಒಳಗಾಗಿ ತನ್ನ ಸ್ಥಾನಮಾನ ನಿಲುವು ಎಲ್ಲವನ್ನು ತೃಣೀಕರಿಸಿ ಸಲ್ಲದ ವ್ಯಕ್ತಿಯನ್ನು ಪ್ರೀತಿಸಿ, ದುರಂತ ಬದುಕನ್ನು ಸಾಗಿಸುವ ನೇತ್ರಾವತಿ, ಕೊನೆಗೂ ಮದುವೆಯನ್ನು ನಿರಾಕರಿಸಿ ಒಂಟಿಯಾಗಿ ನಿಲ್ಲಬೇಕಾಗುತ್ತದೆ. ಮದುವೆ ಭಾರತೀಯ ಹೆಣ್ಣಿಗೆ ಎಲ್ಲಾ ರೀತಿಯ ಭದ್ರತೆಯನ್ನು ಕಲ್ಪಿಸುವ ಅವಕಾಶವಾಗಿ ಮಾರ್ಪಡುತ್ತದೆ. ಇದಕ್ಕೆ ಮುಖ್ಯ ಕಾರಣ ಪುರುಷನಿಷ್ಠ ಸಾಂಸ್ಕೃತಿಕ ಸನ್ನಿವೇಶವೇ ಆಗಿದೆ. ಪುರುಷನಿಷ್ಠ ಸಾಂಸ್ಕೃತಿಕ ರಾಜಕಾರಣದ ಸೂಕ್ಷ್ಮಾತಿಸೂಕ್ಷ್ಮ ಬದಲಾವಣೆಗಳು ಹೆಣ್ಣಿನ ಬದುಕಿನಲ್ಲಿ ಮಹತ್ವದ 'ನಿರ್ಣಾಯಕ'ಗಳಾಗುತ್ತವೆ. **ಜಾತಿ ಕೆಟ್ಟವಳು** ಕಾದಂಬರಿಯಲ್ಲಿ ಇದನ್ನು ಬಿಡಿಸಿನೋಡುವ ಪ್ರಯತ್ನವಿದೆ. ಹರೆಯದಲ್ಲೇ ವಿಧವೆಯಾದ ಬುಳ್ಳಮ್ಮ ಬ್ರಾಹ್ಮಣ ಜಾತಿಯ ಜೋಯಿಸನಿಂದಲೇ ಬಸಿರಾಗಿದ್ದರೂ ಸಮಾಜದಿಂದ ಬಹಿಷ್ಕೃತಳಾಗಬೇಕಾಗುತ್ತದೆ. ಜೋಯಿಸ ಉಚ್ಚ ಕುಲದವನಾಗೇ ಉಳಿಯುತ್ತಾನೆ. ಜೋಯಿಸನಿಂದ ಹುಟ್ಟಿದ ನಾಗು ಹಾಗೂ ಅವಳ ಮುಂದಿನ ಸಂತತಿಯೆಲ್ಲ 'ಜಾತಿಕೆಟ್ಟವರು' ಎಂದು ಸಮಾಜದಲ್ಲಿ ಬಾಳಬೇಕಾಗುತ್ತದೆ. ಊರಿನ ಸಾಹುಕಾರ ಕರ್ಣೀಕರೊಂದಿಗೆ ಸಂಬಂಧವಿರಿಸಿಕೊಂಡಿದ್ದ ನಾಗು ಹಾಗೂ ಕರ್ಣೀಕರಿಂದ ಹುಟ್ಟಿದ ನೀರಜಳೂ ಸಹ ಜಾತಿಕೆಟ್ಟವಳಾಗಿ ಅಸ್ಪೃಶ್ಯರಂತೆ ಬಾಳಬೇಕಾಗುತ್ತದೆ. ಮುಗ್ಧ ಸ್ವಭಾವದ ನೀರಜ ವಾಸುದೇವನನ್ನು ಮೆಚ್ಚಿಕೊಂಡಿದ್ದಾಳೆ.

> "ವಾಸುದೇವ ಬ್ರಾಹ್ಮಣ. ತಾನು ಕುಲಗೆಟ್ಟವಳು ಅವನನ್ನು ಮದುವೆಯಾದರೆ ಸಮಾಜ ತನ್ನನ್ನು ಸುಮ್ಮನೇ ಬಿಟ್ಟೀತೇ?" (ಇಂದಿರಾ.ಎಂ.ಕೆ. : ೧೯೭೩; ೮೪.)

ಎನ್ನುವ ಆತಂಕವೂ ಅವಳಿಗಿದೆ. ಆದರೆ ವಾಸುದೇವನ ಧೈರ್ಯ, ವಿವೇಕ ಸಹಕಾರಗಳಿಂದಾಗಿ ಅವಳು ವಾಸುದೇವನನ್ನು ಮದುವೆಯಾಗುತ್ತಾಳೆ. ಹೆಣ್ಣು ವಿವಾಹ ಸಂದರ್ಭದಲ್ಲಿ ಎದುರಿಸುವ ಎಲ್ಲಾ ರೀತಿಯ ದ್ವಂದ್ವ ಪಲ್ಲಟಗಳು ಬುಳ್ಳಮ್ಮ, ನಾಗು, ನೀರಜರ ಜೀವನಾವಸ್ಥೆಯಲ್ಲಿದೆ. ವಿವಾಹದ ಸರಣಿರೂಪದಲ್ಲಿ ಹೆಣ್ಣು ತಲೆಮಾರಿನಿಂದ ಎದುರಿಸುತ್ತಿರುವ ಶೋಷಣೆಯ ರೂಪಗಳು ಕೂಡ ನಿಖರವಾಗಿ ಕಾಣಬರುತ್ತದೆ. ಹೆಣ್ಣುವಿವಾಹದ ನೆಲೆಯಲ್ಲಿ ಎದುರಿಸುವ ಶೋಷಣೆಯ ರೂಪ ಒಂದು ಬಗೆಯಾದರೆ, ವಿವಾಹದ ವರ್ತುಲದ ಹೊರಗಿನ ಪೀಡನೆಗಳು ದೌರ್ಜನ್ಯಗಳ ಸ್ವರೂಪ ಹಲವಾರು ಬಗೆಯವು.

ಅವುಗಳಲ್ಲಿ ವೇಶ್ಯಾ ಸಮಸ್ಯೆ ಒಂದು. ವೇಶ್ಯಾ ಪದ್ಧತಿ, ಭಾರತೀಯ ಸಮಾಜದಲ್ಲಿ ಶತಮಾನಗಳಿಂದ ಅಂಟಿಕೊಂಡು ಬಂದಿರುವ ಒಂದು ಶಾಪ. ಕಾಯಿದೆ, ಕಾನೂನಿನ ಮೂಲಕ ಈ ಪದ್ಧತಿ ರದ್ದಾಗಿದೆ. ಆದರೆ, ಬೇರೆ ಬೇರೆ ರೂಪಗಳಲ್ಲಿ ಅದು ಉಳಿದುಕೊಂಡು ಬಂದಿದೆ. ದೇವದಾಸಿ ಪದ್ಧತಿ, ಮುತ್ತುಕಟ್ಟುವುದು, ಬಸವಿ ಬಿಡುವುದು, ಎಂಬುದು ದೇವರು, ದೇವಸ್ಥಾನ, ಧಾರ್ಮಿಕತೆಯ ಹಿನ್ನೆಲೆಯನ್ನು

ಹೊಂದಿದ್ದು ಈ ರೀತಿಯ ವ್ಯವಸ್ಥೆಗೆ ಒಳಗಾದ ಹೆಣ್ಣು ಸಂಬಂಧಿತ ದೇವರ ಹೆಸರಿನಲ್ಲಿ ದೇವರಿಗೆ ಅರ್ಪಿಸಿಕೊಂಡವಳಾಗಿದ್ದು ಬಯಸಿದ ಭಕ್ತ ಪುರುಷರ ಕಾಮದಾಹಕ್ಕೆ ತುತ್ತಾಗಿ ಆ ಮೂಲಕದ ಲೈಂಗಿಕ ಸಮಾಗಮವನ್ನು ಕೂಡಾ ದೈವಿಕವೆಂದು ನಂಬಿ ಬದುಕಬೇಕಾಗುತ್ತದೆ. ಬಡತನ, ಅಜ್ಞಾನ, ಮೂಢನಂಬಿಕೆ ಮುಂತಾದವು ವೇಶ್ಯಾಪದ್ಧತಿ ಹುಟ್ಟಿಕೊಳ್ಳುವುದಕ್ಕೆ ಕಾರಣಗಳಾದರೆ, ಹಣದ ಆಮಿಷತೆ, ಧಾರ್ಮಿಕತೆ, ಹೆಣ್ಣಿನ ಅಸಹಾಯಕತೆ, ಪುರುಷನ ಸ್ವಾರ್ಥ ಇವೆಲ್ಲವೂ ವೇಶ್ಯಾಪದ್ಧತಿಯ ಕಾರಣಗಳನ್ನು ಪೋಷಿಸಿಕೊಂಡು ಬಂದಿವೆ.

**ಗೆಜ್ಜೆಪೂಜೆ** ಕಾದಂಬರಿಯ ಕೇಂದ್ರ ಪಾತ್ರ ಚಂದ್ರಿಯ ಮೂಲಕ ಸಮಸ್ಯೆಯನ್ನು ವಿಭಿನ್ನ ಮುಖಗಳಿಂದ ನೋಡಲಾಗಿದೆ. ಚಂದ್ರಿಯನ್ನು ಶಾಲೆಗೆ ಸೇರಿಸುವಾಗ ಅಲ್ಲಿ ಅವಳ ಜಾತಿ- ಮತ, ತಂದೆ - ತಾಯಿ, ಅವರ ಉದ್ಯೋಗ, ಇವುಗಳ ಪ್ರಶ್ನೆಬರುತ್ತದೆ. ಮುಗ್ಧ ಸ್ವಭಾವದ ಚಂದ್ರಿ ತಂದೆ ಇಲ್ಲವೆಂದು ಹೇಳಬೇಕಾಗುತ್ತದೆ. ಗೆಳತಿಯರೆಲ್ಲ ಅವಳು 'ಸೂಳೆಯ' ಮನೆಯ ಹುಡುಗಿ ಎಂದು ರೇಗಿಸುವುದರಿಂದ ಬೆಳೆಯುತ್ತಿದ್ದ ಚಂದ್ರಿಗೆ 'ಸೂಳೆ' ಎಂದರೇನು? ಎಂಬ ಪ್ರಶ್ನೆ ಮನದಲ್ಲಿ ಕಾಡುತ್ತದೆ. ಚಂದ್ರಿಯ ಮನಸ್ಸಿನಲ್ಲಿ ಮದುವೆಯ ಆಸೆ ಬೀಜರೂಪದಲ್ಲಿ ಮೂಡಲು ಗೆಳತಿಯ ಅಕ್ಕ ವಿಶಾಲಿಯ ಮದುವೆ ಕಾರಣವಾಗುತ್ತದೆ. ಮುಗ್ಧ ಚಂದ್ರಿ ಗೆಳತಿಯರ ಮುಂದೆ ತಾನೂ ಎಲ್ಲರಂತೆ ಮದುವೆಯಾಗುತ್ತೇನೆಂದು ಉತ್ಸಾಹದಿಂದ ಹೇಳುವಾಗ 'ಸೂಳೆ'ಯರಿಗೆ ಮದುವೆಯಿಲ್ಲವೆಂದು ಗೆಳತಿಯರು ಅವಳಿಗೆ ಮನವರಿಕೆ ಮಾಡಲು ಪ್ರಯತ್ನಪಡುತ್ತಾರೆ. 'ಗರತಿ' ಅಥವಾ 'ಸೂಳೆ' ಈ ಆಯ್ಕೆಗಳು ಮದುವೆಯ ಮೂಲಭೂತ ಪಲ್ಲಟದಿಂದಾದ ಸ್ಥಾನಮಾನಗಳು. ಅದರ ವ್ಯಂಗ್ಯ ನಿರೂಪಣೆ ಚಂದ್ರಿಗೆ ಗೆಳತಿಯರು 'ಸೂಳೆ' ಎಂದು ಸ್ಪಷ್ಟಪಡಿಸಲು ಹೆಣಗುವಲ್ಲಿ ಕಾಣಬರುತ್ತದೆ.

ಬಾಲ್ಯವನ್ನು ಮುಗ್ಧವಾಗಿ, ಭಾವುಕವಾಗಿ ಕಳೆದ ಚಂದ್ರಿಗೆ ದೊಡ್ಡವಳಾದಂತೆ ತನ್ನ ಮನೆಯ ಪರಿಸ್ಥಿತಿ ಅರ್ಥವಾಗತೊಡಗುತ್ತದೆ. (ಗರತಿಯಂತೆ ಜೀವನವನ್ನು ನಡೆಸುತ್ತಿದ್ದರೂ ಆಕೆಯ ತಾಯಿಯನ್ನು ಸಮಾಜ ಸೂಳೆ ಎಂದು ಗುರುತಿಸುತ್ತದೆ.) ಅದರಂತೆ ಅವಳಿಗೆ ತಾನು ಮದುವೆಯಾಗಬೇಕು ಎಂಬ ಹಂಬಲವೂ ದಿನದಿನಕ್ಕೆ ಬೆಳೆಯತೊಡಗುತ್ತದೆ. ಇತ್ತ ಅಜ್ಜಿ ಸಂಗವ್ವ ಚಂದ್ರಿಗೆ ಭಾರೀ ಕುಳವೊಂದನ್ನು ಗಂಟುಹಾಕಬೇಕೆಂಬ ಯೋಚನೆಯಲ್ಲಿರುತ್ತಾಳೆ. ಎಳೆತನದಲ್ಲಿ ಸೋಮುವಿನೊಂದಿಗಿದ್ದ ಸಲಿಗೆ ಪ್ರೇಮಕ್ಕೆ ತಿರುಗುತ್ತದೆ. 'ಸೂಳೆ' ಎಂಬ ಪದ ಅವಳನ್ನು ಸಮಸ್ಯೆಗೀಡುಮಾಡುತ್ತದೆ. ತಂದೆ ಎಂದು ಕರೆಸಿಕೊಳ್ಳುತ್ತಿದ್ದ ಪುಟ್ಟಣ್ಣ ಶೆಟ್ಟರ ಬಗೆಗೆ ತಿರಸ್ಕಾರ ಉಂಟಾಗುತ್ತದೆ. ತನ್ನ ತಾಯಿ ಪುಟ್ಟಣ್ಣ ಶೆಟ್ಟರೊಡನೆ ಹೆಂಡತಿಗಿಂತ ನಿಷ್ಠೆಯಿಂದ ನಡೆದುಕೊಂಡರೂ ಜನ 'ಸೂಳೆ' ಎಂದು ಯಾಕೆ ಭಾವಿಸುತ್ತಾರೆ? ಎಂಬ ಪ್ರಶ್ನೆ ದಿನದಿನಕ್ಕೆ ಪುಟ್ಟಣ್ಣ ಶೆಟ್ಟರ ಬಗೆಗೆ ತಿರಸ್ಕಾರ ಬೆಳೆದು ಅವನ ಮರಣ ಅವಳಿಗೆ ಸಂತಸವನ್ನುಂಟು ಮಾಡುತ್ತದೆ. ಚಂದ್ರಶೇಖರನೇ ತನ್ನ ತಂದೆ, ಅಲ್ಲದೆ ತಾನು ಪ್ರೀತಿಸುವ ತನ್ನ ತನು - ಮನಗಳನ್ನು ಅರ್ಪಿಸಿಕೊಂಡ ಸೋಮು ತನ್ನ ತಂಗಿಯನ್ನೇ ಮದುವೆಯಾಗಲು ಒಪ್ಪಿರುವುದೆಂದು ಗೊತ್ತಾದಾಗ ಅವಳಿಗೆ ಆಗುವ ಆಘಾತ, ಮದುವೆಯಾಗಲೇಬೇಕೆಂಬ ಅವಳ ಬದುಕಿನ ಬಯಕೆಯನ್ನು ಹೇಳ ಹೆಸರಿಲ್ಲದಂತೆ ಬಸಿದು ಬಿಡುತ್ತದೆ. ತಂದೆಗೂ ಹಾಗೂ ಪ್ರಿಯತಮನಿಗೂ ನೀಡಿರುವ ವಾಗ್ದಾನ ಉಳಿಸುವ ಸಲುವಾಗಿ ಅಜ್ಜಿಯೊಂದಿಗೆ 'ಗೆಜ್ಜೆಪೂಜೆ' ನಡೆಸುವಂತೆ ಒತ್ತಾಯಿಸುತ್ತಾಳೆ. ಸಾಹುಕಾರ ಗಂಗಯ್ಯ ಚಂದ್ರಳ ಸೌಂದರ್ಯಕ್ಕೆ ಮನಸೋತು ಅವಳು ಕೇಳಿದಷ್ಟು ಹಣ ಸುರಿಯಲು ನಿರ್ಧರಿಸುತ್ತಾನೆ. 'ಗೆಜ್ಜೆಪೂಜೆ'ಯೂ ನಡೆಯುತ್ತದೆ. ಇನ್ನೇನು ಚಂದ್ರಿಯೂ ವೇಶ್ಯೆಯಾಗುತ್ತಾಳೆಂದು

ಭಾವಿಸುವಷ್ಟರಲ್ಲಿ ತಂದೆಯಿಂದ ಪಡೆದ ವಜ್ರದುಂಗರವನ್ನು ಪುಡಿ ಮಾಡಿ ಅರೆದು ಕುಡಿದು ತನ್ನ ಬಾಳನ್ನು ದುರಂತವಾಗಿ ಕೊನೆಗಾಣಿಸಿಕೊಳ್ಳುತ್ತಾಳೆ.

'ವೇಶ್ಯೆ' ಎಂದು ಪರಿಭಾವಿಸುವ ನೆಲೆಯಲ್ಲಿ ಹೆಣ್ಣಿನ ಅಸ್ತಿತ್ವ ಇರುವುದೇ ದೇಹದಲ್ಲಿ. ಮಾಂಸಕ್ಕಾಗಿ ಮಾತ್ರ ಮಿಡಿಯುವ ಜೀವಗಳಾಗಿ ಪುಟ್ಟಣ್ಣ ಶೆಟ್ಟಿ, ಸೋಮು, ಚಂದ್ರಶೇಖರ, ಗಂಗಯ್ಯ ಈ ಪುರುಷ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ದೇಹ-ಮನಸ್ಸು ಎರಡನ್ನು ಒಟ್ಟಿಗೆ ಸ್ವೀಕರಿಸುವ ಪುರುಷರ ಚಿತ್ರ ಈ ಕಾದಂಬರಿಯಲ್ಲೇ ಇಲ್ಲ. ಇದಕ್ಕೆ ಪುರುಷನ ಅಸಹಾಯಕ ಸ್ಥಿತಿ'ಯನ್ನು ಒಂದು ನಿಮಿತ್ತ ಮಾತ್ರವಾಗಿ ನಿಲ್ಲಿಸಲಾಗಿದೆ. 'ಗೆಜ್ಜೆಪೂಜೆ' ಸಮಸ್ಯೆಯನ್ನು ತಲಸ್ಪರ್ಶಿಯಾಗಿ ಗಮನಿಸಿಲ್ಲ ಎಂದು ಅನ್ನಿಸುವುದು ಕೂಡ ಈ ನೆಲೆಯಿಂದಲೇ. ಪುರುಷರ ಸ್ವಾರ್ಥ ಸಾಧನೆಯ ವಸ್ತುಗಳಾಗಿ, ದಾಳಗಳಾಗಿ ಪರಿಣಮಿಸುವ ಇಲ್ಲಿನ ಸ್ತ್ರೀಯರ ಬದುಕು 'ವಿವಾಹ'ವನ್ನು ಮಾತ್ರ ಅಂತಿಮವೆಂದು ಭಾವಿಸುತ್ತದೆ. ಶಿಕ್ಷಣ ಹಾಗೂ ಅದರಿಂದ ದೊರೆಯಬಹುದಾದ ಜೀವನ ಅವಸ್ಥಾಂತರಗಳನ್ನು ಕಾದಂಬರಿ ಎಲ್ಲೂ ಗಂಭೀರವಾಗಿ ಎತ್ತಿಕೊಳ್ಳುವುದಿಲ್ಲ. ಈ ಅರ್ಥದಲ್ಲಿ ಶಿಕ್ಷಣ ಹಾಗೂ ಅದರಿಂದ ಪಡೆದುಕೊಳ್ಳುವ ಆರ್ಥಿಕ ಸಾಧ್ಯತೆಗಳ ಬಗ್ಗೆ ಇಲ್ಲಿ ಮೌನವಹಿಸಲಾಗಿದೆ. ಹೆಣ್ಣಿನ 'ಜೀವನದ ಪರಮೋದ್ದೇಶ ವಿವಾಹ' ಎಂದು ಚಿತ್ರಿಸುವ ಕಾದಂಬರಿ ಸ್ತ್ರೀಯರ ವ್ಯಕ್ತಿತ್ವದ ಸಾಮರ್ಥ್ಯದಲ್ಲಿ ನಂಬಿಕೆ ಮೂಡಿಸಲು ವಿಫಲವಾಗುತ್ತದೆ. ಆದರೆ ವೇಶ್ಯಾ ಸಮಸ್ಯೆಯ ಮೂಲವನ್ನು, ಸಮಸ್ಯೆಯ ಹೊಡೆತಕ್ಕೆ ಸಿಕ್ಕು ದಿಕ್ಕು ತಪ್ಪುವ ಸ್ತ್ರೀಯರ ಬದುಕನ್ನು ಈ ಕಾದಂಬರಿ ವಾಸ್ತವ ನೆಲೆಯಿಂದಲೇ ಚಿತ್ರಿಸಿದೆ.

ವೇಶ್ಯಾ ಸಮಸ್ಯೆಯ ಬೇರುಗಳು ಒಂದು ಬಗೆಯದ್ದಾದರೆ, ವಿಧವಾ ವಿವಾಹದ ಸಮಸ್ಯೆ ಮತ್ತೊಂದು ಬಗೆಯದ್ದು, **ಸದಾನಂದ, ಮಧುವನ, ಫಣಿಯಮ್ಮ, ಮುಸುಕು** ಈ ಕಾದಂಬರಿಗಳು ಬಾಲವಿಧವೆಯರ ಬವಣೆಯ ಜೀವನವನ್ನು, ವಿಧವಾ ವಿವಾಹ ಕುರಿತ ಜಿಜ್ಞಾಸೆಯನ್ನು ನಡೆಸುತ್ತವೆ. ಧರ್ಮಶಾಸ್ತ್ರ, ಕುರುಡು ಸಂಪ್ರದಾಯಗಳನ್ನೇ ಬಲವಾಗಿ ನಂಬಿರುವ ಶಿಷ್ಟ ಸಮಾಜದಲ್ಲಿ ವಿಧವೆಯರ ಸ್ಥಿತಿ ಶೋಚನೀಯ. ಮೇಲ್ವರ್ಗ ಮಧ್ಯಮವರ್ಗದ ಸಮಾಜ ಹಾಗೂ ಕುಟುಂಬಗಳಲ್ಲೇ ವಿಧವೆಯರನ್ನು ನೋಡುವ ದೃಷ್ಟಿ ಬದಲಾಗಬೇಕು. ಹಳೆಯ ತಲೆಮಾರಿನ ಹಿರಿಯರು ಸಂಪ್ರದಾಯದ ಕಟ್ಟಳೆಗಳನ್ನು ಮುರಿದು, ಬದಲಾದ ಹೊಸ ಪೀಳಿಗೆಯೊಡನೆ ಹೊಂದಿಕೊಂಡು, ತಮ್ಮ ವಿಚಾರಗಳನ್ನು ಬದಲಿಸಿಕೊಳ್ಳಬೇಕಾದ ಅಗತ್ಯವನ್ನು ಲೇಖಕಿ 'ಸದಾನಂದ'ದಲ್ಲಿ ಪ್ರತಿಪಾದಿಸಿದ್ದಾರೆ.

> "ಮಹಾದೇವ ಶಾಸ್ತ್ರಿಗಳು ಕಮಲಳ ಜಾತಕವನ್ನು ನೋಡಿ 'ಕಮಲಳ ಮಾಂಗಲ್ಯ ಕೊಟ ಅಷ್ಟು ಸಮರ್ಪಕವಾಗಿಲ್ಲ'" (ಇಂದಿರಾ.ಎಂ.ಕೆ. : ೧೯೬೫; ೬೦)

ಎಂದಿದ್ದರೂ ಸಹ ಅಚ್ಚಮ್ಮನವರ ಅಭಿಲಾಷೆಯಂತೆ ಕಮಲಳ ಮದುವೆ ಹದಿನೈದನೆಯ ವರ್ಷಕ್ಕೆ ಸೋದರಮಾವ ನಾಗಭೂಷಣನೊಂದಿಗೆ ನಡೆಯುತ್ತದೆ. ಮದುವೆಯಾಗಿ ಒಂದು ತಿಂಗಳಿನಲ್ಲಿ ರಾಮಣ್ಣನವರ ಸಂಬಂಧಿ ಮುದುಕಿಯೊಂದು ತೀರಿ ಹೋಗುತ್ತದೆ. ಅವಳ ಕರ್ಮಾಂತರ ಮುಗಿಸಿ ಇನ್ನೇನು ನಿಷೇಕಶಾಸ್ತ್ರ ಮುಗಿಸಬೇಕೆನ್ನುವಷ್ಟರಲ್ಲಿ ನಾಗಭೂಷಣ ಎಸ್ಟೇಟಿನಲ್ಲಿ ಹಾವು ಕಡಿದು ಮರಣ ಹೊಂದುತ್ತಾನೆ. ಕಮಲ ವಿಧವೆಯಾಗಿ ಉಳಿಯುತ್ತಾಳೆ. ಮನೆಯವರಿಗೆ ಕಮಲಳ ವೈಧವ್ಯ ಆಜನ್ಮ ಕೊರಗಾಗಿ ಪರಿಣಮಿಸುತ್ತದೆ. ಆದರೆ ಅದಕ್ಕೆ ಸರಿಯಾದ ಪರಿಹಾರವನ್ನು ಕೈಗೊಳ್ಳಲು ಸಾಧ್ಯವಾಗುವುದಿಲ್ಲ. ಮಗಳು ಕೊನೆಯವರೆಗೂ

ತಮ್ಮೊಂದಿಗೆ ಇರುವಳೆಂದು ತಮ್ಮ ಆಸ್ತಿಯ ಒಂದು ಭಾಗ ಕಮಲಳಿಗೆ ಇಟ್ಟರಾಯಿತು ಎಂದು ತಮ್ಮ ಸಂಪ್ರದಾಯದ ಕಕ್ಷೆಯೊಳಗಿನಿಂದಲೇ ಪ್ರಗತಿಪರರಂತೆ ಯೋಚಿಸುವ ತಂದೆ- ತಾಯಿಗಳು ಮಗ ರಾಜುವಿನ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತಾರೆ. ರಾಜು ಮಾನವ ಸಹಜ ನೈಸರ್ಗಿಕ ಬದುಕಿನ ಕಷ್ಟ- ಸುಖಗಳಿಂದ ವಂಚಿತಳಾಗಿ ನಾಲ್ಕು ಗೋಡೆಗಳ ಮಧ್ಯೆ ಬದುಕನ್ನು ಕಳೆಯುತ್ತಿರುವ ವಿಧವೆ ಕಮಲಳನ್ನೂ ಒಪ್ಪಿಸುತ್ತಾನೆ. 'ವಿಧವಾ ವಿವಾಹ' ಎನ್ನುವುದು ವಿಶಾಲ, ವೈಚಾರಿಕ ಮನಸ್ಸಿನ ಸದಾನಂದನಿಗೆ ಒಂದು ಸಮಸ್ಯೆಯೇ ಅಲ್ಲ. ಆದ್ದರಿಂದ ಕಮಲಳನ್ನು ಮದುವೆಯಾಗಲು ಆತ ಒಪ್ಪಿಕೊಳ್ಳುತ್ತಾನೆ.

> "ಶ್ರೀಮತಿ ಎಂ. ಕೆ. ಇಂದಿರಾ ಅವರ ಸದಾನಂದ ಕಾದಂಬರಿಯಲ್ಲಿ ಮೊದಮೊದಲು ವಸ್ತು ಸ್ಪಷ್ಟವಾಗುವುದಿಲ್ಲ. ಮದುವೆ ಸಂಬಂಧಗಳಲ್ಲಿ ದೈವದ ಪಾತ್ರ ಈ ಕಾದಂಬರಿಯ ವಸ್ತುವಿರಬಹುದೇನೋ ಎನಿಸುತ್ತದೆ ಎಂದು ಮುಂದುವರೆದು ಕಾದಂಬರಿಯಲ್ಲಿ ಆದರ್ಶವಾದಿ, ವಿಧುರ ಲೇಖಕ ಸದಾನಂದನ ಪ್ರವೇಶದೊಂದಿಗೆ ಸಮಸ್ಯೆಗೆ ಬೇರೆ ಸ್ವರೂಪವೇ ಬರುತ್ತದೆ." (ಶಿವರುದ್ರಪ್ಪ ಜಿ.ಎಸ್.(ಸಂ):೧೯೭೨;೩೧, ೩೨)

ಮಹಿಳಾ ಕಾದಂಬರಿಕಾರರು ತಮ್ಮ ಕಾದಂಬರಿ ಬರವಣಿಗೆಗಳಲ್ಲಿ ವಸ್ತು ನಿರ್ವಹಣೆಯನ್ನು ಮಾಡುವ ಕುರಿತು ಗಿರಡ್ಡಿ ಗೋವಿಂದರಾಜು ಅವರು ತಳೆಯುವ ನಿಲುವು ಈ ಗಮನೀಯವಾದುದು.

> "ಈ ಕಾದಂಬರಿಯಲ್ಲಿ ಸದಾನಂದನೇ ಬುದ್ಧಿಪೂರ್ವಕವಾಗಿ ಕ್ರಾಂತಿಯ ವಾತಾವರಣವನ್ನು ನಿರ್ಮಿಸುತ್ತಾನೆ. ಸ್ಮಾರ್ತತಂದೆ, ಹವ್ಯಕ ತಾಯಿ, ಪಿತ್ರಾರ್ಜಿತ ಸಂಪತ್ತು, ಮೆರಗಿನ ರೂಪ ಆರೋಗ್ಯಗಳಿದ್ದರೂ ಕಳೆದ ಹೆಂಡತಿಯ ಸ್ಮರಣೆ ನಿಷ್ಠನಾದ ವಿಧುರ, ಮೂವತ್ತೆರಡನೆಯ ವಯಸ್ಸಿಗೆ ಅನುಭವ ಜನ್ಯ ತತ್ವಜ್ಞಾನ ಮಾತಿಲ್ಲದ ಸಮಾಜಸೇವೆ ಜನಪ್ರಿಯ ಕಾದಂಬರಿಕಾರ. ಪ್ರಾಮಾಣಿಕತೆ ಮತ್ತು ಧೈರ್ಯ ಸ್ವರೂಪದ ಆದರ್ಶಪ್ರಾಯ ಬರಲಿಕ್ಕುಂಟೋ ಎಂಬ ಸಹಜಶೈಲಿಯಿಂದ ಜೀವಂತನಾಗಿದ್ದಾನೆ." (ಉದ್ಧೃತ: ಮಂದಾಕಿನಿ ಪುರೋಹಿತ : ೧೯೯೧ ; ೨೨೦)

ಒಟ್ಟಿನಲ್ಲಿ ವಿಧವಾ ವಿವಾಹದ ಸಮಸ್ಯೆಯ ಪರಿಹಾರಕ್ಕಾಗಿಯೇ ಸೃಷ್ಟಿಸಿದ ಪಾತ್ರ ಸದಾನಂದ ಎನ್ನುವಂತೆ ಕಾದಂಬರಿ ಯಲ್ಲಿ ಆತನ ಚಿತ್ರಣವಿದೆ. ಇಲ್ಲಿ ಬಾಲ ವಿಧವೆ ಕಮಲಳ ಪಾತ್ರಚಿತ್ರಣ ಪರಿಪೂರ್ಣವಾಗಿಲ್ಲದಿದ್ದರೂ ಚಿತ್ರಿತ ಸಂದರ್ಭದಲ್ಲಿ ಅವಳ ಅಸಾಹಯಕತೆ ಹಾಗೂ ಆಂತರಿಕ ದುಃಖದ ಸ್ಪಷ್ಟ ಅರಿವು ಓದುಗರಿಗೆ ಆಗುತ್ತದೆ.

> "ಜಾನಕಿ ರಾಜು ದುಂಡು ಮಲ್ಲಿಗೆಗೆ ಹೊರಟಾಗ, ಕಮಲ ಉತ್ಸುಕತೆಯಿಂದ ಕೇಳಿದಳು. ನಾನೂ ಹೋಗಲೇನಮ್ಮ ಯಾಕೋ ಅಚ್ಚಮ್ಮನವರಿಗೆ ಮನವಿಲ್ಲ. ಬೇಡವೆನ್ನಲು ಬಾಯಿಲ್ಲ. ಎಂಟು ವರ್ಷಗಳಿಂದ ಮನೆಯೊಳಗೆ ಕುಳಿತು ಅದಕ್ಕೂ ಬೇಜಾರಲ್ಲವೇ? ಲಕ್ಷಣವಾಗಿ ಗಂಡನೊಂದಿಗೆ ನಕ್ಕು ನಲಿಯುವ ವಯಸ್ಸು, ಬರಡು ಮರದಂತೆ ಬದುಕಿರುವುದೇ ಇದರ ಹಣೆಬರಹವಾಯಿತು." (ಇಂದಿರಾ ಎಂ.ಕೆ. : ೧೯೭೫; ೭೪)

ಅಚ್ಚಮ್ಮನವರ ಅನುಕಂಪದಲ್ಲಿ ಬಾಲವಿಧವೆ ಕಮಲಳ ವಾಸ್ತವ ಬದುಕಿದೆ. ಕಮಲ ತನ್ನ ಸಮವಯಸ್ಕರ ಜೊತೆಗೆ ತುಲನೆ ಮಾಡಿಕೊಳ್ಳುವಲ್ಲಿ ಅವಳ ಮನಸ್ಸಿನ ಗಾಯ ಮಾಗದೆ ಉಳಿದದ್ದು ಗೊತ್ತಾಗುತ್ತದೆ.

"ಆಟವಾಡುತ್ತಿದ್ದ ತನ್ನ ಸಮವಯಸ್ಕರನ್ನು ನೋಡುತ್ತಿದ್ದಳು ಕಮಲ. ಅಲ್ಲೊಂದು ನಂದ ಗೋಕುಲವೇ ನೆರೆದಿದೆ. ಬಾಲ್ಯವೇ ಬಾಲ್ಯ. ಅವಳ ಬದುಕಿನಲ್ಲಿ ಈ ರಸ ಮನ್ವಂತರ ನೀರಸವಾಗಿ ಕಳೆದುಹೋಗಿದೆ. ಗೌರಿ, ರಾಜು, ಶೀನಿ ಚಿಕ್ಕವರಲ್ಲ. ಎಲ್ಲ ಜವ್ವನಿಗರು ಆದರೂ ಈ ನಿಸರ್ಗದ ತೊಟ್ಟಿಲಲ್ಲಿ ಅವರೆಲ್ಲ ಕಂದಮ್ಮಗಳು. ತಾನು ಈ ಚಿರಯೌವ್ವನದಲ್ಲಿ ಮುದುಕಿ. ಗಂಟಲವರೆಗೂ ಬಂದ ನಿಟ್ಟುಸಿರನ್ನು ನುಂಗಿದಳು ಕಮಲ." (ಇಂದಿರಾ.ಎಂ.ಕೆ.: ೧೯೬೫ ;೬೯)

"ಅವಳ ಬದುಕಿನ ಇಪ್ಪತ್ತೆಂಟು ವರ್ಷಗಳನ್ನು ಮನಸ್ಸು ಇಲ್ಲಿಂದಲ್ಲಿಯವರೆಗೆ ಅಳೆದು ನೋಡಿತು. ಹನ್ನೆರಡನೆಯ ವರ್ಷಗಳವರೆಗೆ ಏನು ನಡೆಯಿತೆಂಬುದು ಅವಳಿಗೆ ನೆನಪಿಲ್ಲ. ಕಟ್ಟಿದ ಕೆಲವೇ ದಿನಗಳಲ್ಲಿ ಮಾಂಗಲ್ಯತೆಗೆದಾಯಿತು. ಒಂದು ನೋಂಪಿ ವ್ರತಗಳಿಲ್ಲ, ಪೂಜೆ - ಪುರಸ್ಕಾರಗಳಿಲ್ಲ, ಬ್ರಾಹ್ಮಣ ಮುತ್ತೈದೆಯರ ಸೇವೆಯಿಲ್ಲ. ಮನೆಯ ಒಳ ಕೋಣೆಯಲ್ಲೇ ಉಂಡುಟ್ಟು ಸುಖದಿಂದ ಸರಿಯಿತು ಹನ್ನೆರಡು ವರ್ಷ. ಮತ್ತೆ ನೂರು ವರ್ಷ ಬದುಕಿದ್ದರೂ ಉಂಡು ಉಡುವುದಕ್ಕೆ ನೆಮ್ಮದಿ. ಆದರೆ ಇದು ಸುಖವೇ? ಸಂತೋಷವೇ? ನೆಮ್ಮದಿಯೇ? ಇಷ್ಟರಿಂದ ಬದುಕಿನ ಸಾರ್ಥಕತೆಯಾಯಿತೇ?" (ಇಂದಿರಾ ಎಂ.ಕೆ :೧೯೬೫; ೧೧೨)

ಇವೆಲ್ಲ ಬಾಲ ವಿಧವೆ ಕಮಲಳ ಅಂತರಂಗವನ್ನು ಬಿಂಬಿಸುತ್ತವೆ. ಸಂಗಾತಿಯ ಅನಿವಾರ್ಯ ಬದುಕಿನಲ್ಲಿ ಯಾವ ರೂಪದ್ದು ಎಂಬ ನೆಲೆಯಲ್ಲಿ ಯೋಚಿಸುವಂತೆ ಮಾಡುತ್ತದೆ. ಜೊತೆ ಇಲ್ಲದ ಬದುಕು ಅಪರಿಪೂರ್ಣ ಎನ್ನುವ ಧ್ವನಿಯನ್ನು ಕೂಡ ಇಲ್ಲಿ ಗುರುತಿಸುವುದು ಸಾಧ್ಯವಿದೆ. ಹಾಗೇ ಸಮಾಜವು ವಿಧವೆಗೆ ಹಾಕಿದ ಸಾಮಾಜಿಕ ದಿಗ್ಬಂಧನದ ಅರಿವೂ ಮೂಡುತ್ತದೆ. ಕಮಲಳ ಮದುವೆಗೆ ರಾಜು, ತಂದೆಯಾದ ರಾಮಣ್ಣನವರನ್ನು ಒಪ್ಪಿಸುವ ಸಂದರ್ಭದಲ್ಲಿ ಈ ದ್ವಂದ್ವ ಸಮರ್ಥವಾಗಿ ಅಭಿವ್ಯಕ್ತಗೊಂಡಿದೆ.

"ಅಕ್ಕನಿಗೊಂದು ಮದುವೆ ಮಾಡ್ಬೇಕಪ್ಪ! ರಾಮಣ್ಣನವರ ವಿಚಾರಶಕ್ತಿ ತುಂಡಾಯಿತು. ಎದುರಿಗೆ ಲೋಟದಲ್ಲಿದ್ದ ನೀರು ಕುಡಿದು ಕುರ್ಚಿಗೆ ಒರಗಿ ಕುಳಿತರು. ರಾಜು ಸುಮ್ಮನೆಯೇ ಕುಳಿತಿದ್ದ. ಲೊ ಹತ್ತು ನಿಮಿಷ ಬಿಟ್ಟು ತೊದಲಿದರು ತಂದೆ.

'ಈಗ ನೀನು ಏನಂದೆ?

"ಅಕ್ಕನಿಗೊಂದು ಮದುವೆ ಮಾಡಬೇಕೂಂದೆ"

ರಾಮಣ್ಣನವರಿಗೆ ಮುಗುಳು ನಗೆ ಬಂದಿತು. ಇದಕ್ಕೇ ನೋಡು ಹುಡುಗತನ ಅನ್ನೊಂದು. ಬ್ಯಾಡಪ್ಪ ಅಷ್ಟು ದೊಡ್ಡ ಚೇಷ್ಟೆ ನಾವು ಮಾಡಬಾರದು. 'ಆದ್ರೆ ನಂದು ಅಕ್ಕಂದು ಇಬ್ರದ್ದೂ ಆಗಬೇಕು ಇಲ್ಲದಿದ್ರೆ ನಂಗೂ ಬೇಡಪ್ಪ ಮದ್ವೆ'

ರಾಮಣ್ಣನವರ ಬಾಯಿ ಕಟ್ಟಿತು, ಅವರು ವಿಚಲಿತರಾದರು.

ರಾಮಣ್ಣನವರು ನಿಧಾನವಾಗಿ ಅಂದರು - 'ಏನೇ ಆದರೂ ಇದು ನಮ್ಮ ಜನಕ್ಕೆ ಬಂದದ್ದಲ್ಲ ಕಣೋ ರಾಜು. ಏನೋ ಮೊದಲೇ ಮನಸ್ಮಾಡಿದ್ರೆ ಇನ್ನೂ ಸ್ವಲ್ಪ ಓದಿಸಬೋದಾಗಿತ್ತು. ಯಾತಕ್ಕೆ ಓದಬೇಕು ಹೇಳು. ಅವಳೇನು ಹೋಗಿ ಸಂಪಾದ್ನೆ ಮಾಡಬೇಕೆ. ಯಾವುದಕ್ಕೂ ಕೊರತೆ ಮಾಡಿಲ್ಲಪ್ಪ ಅವಳಿಗೆ'.

> ರಾಜು ಬಹು ಮೆಲ್ಲಗೆ ಮಾತಾಡಿದ 'ಇದಕ್ಕೇ ನಾ ಏನೆಲ್ಲಪ್ಪ ಬರೀ ಉಂಡು ತಿಂದು ನಿದ್ದೆ ಮಾಡೋದೇ ಒಂದು ಜೀವನಾಂತ ಅಂದ್ರೆ ಒಂದು ಕಾಡು ಮರಕ್ಕೂ ನಮಗೂ ಏನು ವ್ಯತ್ಯಾಸಾನೇಯಿಲ್ಲ. ನಾವೆಲ್ಲ ಮದ್ವೆ ಮಾಡ್ಕಂಡು ಲೋಲಾಪ್ತಿ ಪಡೋದು, ಅವಳೊಬ್ಳು ಸನ್ಯಾಸಿ ಹಾಗೀರೋದಂದ್ರೆ ನಂಗಂತೂ ತುಂಬಾ ಬೇಜಾರಪ್ಪ. ಗಂಡಸರಿಗಾದ್ರೆ ಇಷ್ಟು ಹೊತ್ತಿಗೆ ಮೂರು ಮದ್ವೆ ಆಗಿರ್ತಿತ್ತು'. ನೋವಿನಿಂದ ರಾಜುವಿನ ದನಿ ತಗ್ಗಿತು. ಅಂತಃಕರಣಕ್ಕೆ ಮುಟ್ಟುವ ಅವನ ಮಾತು ಆ ತಂದೆತನವನ್ನು ಬಡಿದೆಬ್ಬಿಸಿತು. ಇಡೀ ಅವರ ಬದುಕಿನಲ್ಲಿ ಇಂತಹ ಪ್ರಶ್ನೆಯೊಂದನ್ನು ಯಾರೂ ಕೇಳಿರಲಿಲ್ಲ. ಇದು ಅವರ ಸ್ವಂತದ ಪ್ರಶ್ನೆ. ಕೇಳುತ್ತಿರುವವನು ತಮ್ಮ ಮಗನೇ.
>
> ರಾಮಣ್ಣನವರು ಯೋಚಿಸಿದರು- ಕುರುಡು ಸಂಪ್ರದಾಯಗಳ ಅಮಲಿನಲ್ಲಿ ತಮ್ಮ ಮಗಳ ಬದುಕನ್ನೇ ಹಾಳು ಮಾಡಿದ ತಮ್ಮ ಮೂಢತ್ವವೆಲ್ಲಿ? ಎಲ್ಲ ನಿಂದೆ ನಿಷ್ಠುರಗಳಿಗೂ ಎದೆಕೊಟ್ಟು ಗೌರಿ- ಕಮಲೆಯರ ಬದುಕನ್ನು ಹಸನು ಮಾಡಲು ನಿಂತ ಆ ಎಳೆಯ ರಾಜುವಿನ ಅಗೋಚರ ಅಂತಃಕರಣವೆಲ್ಲಿ? ರಾಜು ಹೇಳಿದಂತೆ ತಿಂದು ಜೀವಿಸುವುದಲ್ಲದೆ ಮತ್ತೇನಿದೆ ಅವರಿಗೆ. ಮಕ್ಕಳು ಸಂಸಾರ ಇದ್ದವರದು ಒಂದು ಬಗೆ. ಗಂಡನ ಮೈಯನ್ನು ಮುಟ್ಟದ ತಮ್ಮ ಮಗಳು ಹದಿನಾಲ್ಕು ವರ್ಷಗಳನ್ನು ಹೇಗೆ ಕಳೆದಿರಬಹುದು." (ಇಂದಿರಾ.ಎಂ.ಕೆ. : ೧೯೬೫ ; ೩೪೪ - ೩೪೫)

ವಿಧವೆಯರ ಬಗೆಗಿನ ಕಳಕಳಿ, ಸ್ತ್ರೀಯರ ಬಗೆಗಿನ ಸಮಾಜದ ಪಕ್ಷಪಾತ ಧೋರಣೆ, ಹಾಗೆಯೇ ಜೀವನದ ಮೂಲಭೂತ ಪ್ರಶ್ನೆಗಳನ್ನು ಇಲ್ಲಿ ಗುರುತಿಸಬಹುದು. ವಿಧವೆಯರನ್ನು ನೋಡುವ ಸಮಾಜದ ಪ್ರಾಥಮಿಕ ಅರಿವು ಬದಲಾಗಬೇಕು ಎನ್ನುವ ತುಡಿತ ಮಧುವನದಲ್ಲೂ ವ್ಯಕ್ತವಾಗುತ್ತದೆ. ಇದು ಸದಾನಂದ ಕಾದಂಬರಿಯ ಮುಂದಿನ ಭಾಗ. ಸಮಾಜದ ಕಟ್ಟುಪಾಡುಗಳಲ್ಲಿ ಹುಟ್ಟಿಕೊಂಡ ವಿಧವಾ ಸಮಸ್ಯೆಗೆ ಸಮಾಜದಿಂದಲೇ ಪರಿಹಾರ ಸಾಧ್ಯ. ಸಂಪ್ರದಾಯದ ಧೂಳನ್ನು ಕೊಡವಿ ಕುಟುಂಬದ ವ್ಯಕ್ತಿಗಳೆಲ್ಲರೂ ಮಾನವೀಯತೆಯಿಂದ ಹೆಣ್ಣು ಮಕ್ಕಳ ಬಾಳನ್ನು ಪರಿಪೂರ್ಣಗೊಳಿಸಲು ಮುಂದಾದರೆ ಅವರ ಬದುಕು ಸುಖಮಯವಾಗಬಲ್ಲದು. ವಿಧವೆಯರನ್ನು ಮದುವೆಯಾಗಲು ಸಂಸ್ಕಾರಯುತ ಪುರುಷರು ಮುಂದಾಗಬೇಕು ಎಂಬುದು ಸದಾನಂದನ ಪಾತ್ರ ವಿಕಾಸದ ಮೂಲಕ ಸಾಧಿತವಾಗುತ್ತದೆ.

> "ಈ ಕಮಲಳನ್ನು ಅವರ ಅಪ್ಪನ ಮನೇಲಿ ಹದಿನೈದು ವರ್ಷದಿಂದ ಕತ್ತಲೇ ಕ್ವಾಣಿ ಉಪ್ಪಿನಕಾಯಿ ಮಾಡಿಟ್ಟಿದ್ದಾರೆ. ಅವಳಿಗೆ ಪ್ರಪಂಚ ಎಂದರೆ ಏನು ಎಂಬುದು ಗೊತ್ತಿಲ್ಲ. ನಾನು ಇವಳನ್ನು ಲಗ್ನವಾದದ್ದು ಯಾತಕ್ಕೆಂದು ಗೊತ್ತುಂಟೆ? ನನಗೆ ಹೆಂಡತಿ ಬೇಕುಂತ ಅಲ್ಲ. ಮತ್ತೆ ನಿನಗೆ ಮೊಮ್ಮಕ್ಕಳನ್ನು ಹೆರಲಿಕ್ಕೆ ಒಂದು ಸೊಸೆ ಬೇಕುಂತ ಅಲ್ಲ. ಒಂದು ಒಳ್ಳೆಯ ಜೀವ ಸುಮ್ಮನೆ ಕೊಳೆತು ಹೋಗ್ತದಲ್ಲ, ಅಂತ". (ಇಂದಿರಾ ಎಂ.ಕೆ.: ೧೯೭೬; ೩೨)

ವಿಧವೆಯ ಬದುಕನ್ನು ಪರಿಪೂರ್ಣಗೊಳಿಸಲು ಬೇಕಾದ ಮಾನವೀಯ ಅಂತಃಕರಣದ ಅನಿವಾರ್ಯತೆಯನ್ನು ಮಧುವನ ವಿವೇಚಿಸುತ್ತದೆ.

ಸಮಾಜದ ಗಂಭೀರ ಸಮಸ್ಯೆಯಾದ ವೈಧವ್ಯದ ಬೇರನ್ನು ಫಣಿಯಮ್ಮ ಚರ್ಚಿಸುತ್ತದೆ. ಈ ಕಾದಂಬರಿ ನೂರೈವತ್ತು ವರ್ಷಗಳ ಹಿಂದಿನ ಸಾಮಾಜಿಕ ಜೀವನವನ್ನು ಶಕ್ತವಾಗಿ ಚಿತ್ರಿಸುತ್ತದೆ. ಅಂಧಶ್ರದ್ಧೆ, ಅವೈಚಾರಿಕತೆ, ಮಡಿವಂತಿಕೆ ತುಂಬಿದ್ದ ಸಮಾಜದ ಭದ್ರ ಮುಷ್ಟಿಯಲ್ಲಿ ಸಿಲುಕಿದ ಫಣಿಯಮ್ಮನ ಸಂಘರ್ಷ ಜೀವನ ಕಾದಂಬರಿಯ ವಸ್ತು. ಅಜ್ಞಾನದ ಅಂಧಕಾರ ಕವಿದ ಕ್ರೂರ ಸಮಾಜದಲ್ಲಿ ಬಾಳಿದ ಫಣಿಯಮ್ಮ ಒಂಬತ್ತು ವರ್ಷಕ್ಕೆ ವಿಧವೆಯಾಗಿ ನೂರಹನ್ನೆರಡು ವರ್ಷಗಳವರೆಗೆ, ಜೀವನದ ಸುಖ- ದುಃಖಗಳಿಗೆ ನಿರ್ಲಿಪ್ತಳಾಗಿ ತಪಸ್ವಿನಿಯಂತೆ ಸುದೀರ್ಘ ಜೀವನವನ್ನು ಕಳೆಯುತ್ತಾಳೆ. ಫಣಿಯಮ್ಮನ ಸುದೀರ್ಘ ಆಯುಷ್ಯದಲ್ಲಿ ಅವಳನ್ನು ಲೌಕಿಕದಿಂದ ಬಿಡುಗಡೆಗೊಳಿಸುವ ಹಲವಾರು ಘಟನೆಗಳು ನಡೆಯುತ್ತವೆ. ಸಂಕಟದ, ಸಂತಸದ, ಕ್ರೂರ, ಬೀಭತ್ಸ, ಭಯಾನಕ, ಅಸಹ್ಯ, ಕರುಣಾಜನಕ ಘಟನೆಗಳಿಂದಾಗಿ ಸಂತೋಷ, ದುಃಖ, ದುಗುಡಗಳ ಸೀಮಾರೇಖೆಯನ್ನು ದಾಟಿ ನಿಲ್ಲುವುದು ಫಣಿಯಮ್ಮನಿಗೆ ಸಾಧ್ಯವಾಗುತ್ತದೆ. ಅವಳೇ ಹೇಳುವಂತೆ 'ಕೆಸುವಿನ ಎಲೆಯ ಮೇಲಿನ ನೀರಿನ ಹಾಗೆ' ಇದ್ದು ಸರ್ವರಿಗೂ ಬೇಕಾಗಿ ಬದುಕಿ ಬಾಳಿದವಳು. ಅವಳ ಅಂತ್ಯವೂ ಅಷ್ಟೇ ಸರಳ. ಫಣಿಯಮ್ಮನ ಸಾವಿನ ಸಂದರ್ಭದಲ್ಲಿ ಜಾತಿ- ಮತಗಳ ಭೇದವಿಲ್ಲದೆ ಊರವರೆಲ್ಲರೂ ಸೇರಿ ನಡೆಸುವ ಆಕೆಯ ರುದ್ರಭೂಮಿ ಆಚರಣೆಗಳಿಂದಾಗಿ ಕಾದಂಬರಿಯ ಉದ್ದಗಲಕ್ಕೂ ಒಂದು ಪ್ರಭಾವಿ ಶಕ್ತಿಯಾಗಿ ಪಠ್ಯದ ಒಳಗೆ ಕಾಣಿಸಿಕೊಳ್ಳುತ್ತಾಳೆ. ಫಣಿಯಮ್ಮ ಕಾದಂಬರಿಯ ಆರಂಭದಲ್ಲೇ ವೈಧವ್ಯದ ನೆಲೆಯಿಂದ ನಡೆಯುವ ಸ್ತ್ರೀ ಶೋಷಣೆಯ ಹಲವು ವಿನ್ಯಾಸಗಳು ಬಿಡಿಸಿಕೊಳ್ಳುತ್ತವೆ. ಫಣಿಯಮ್ಮನ ಗಂಡ ಸತ್ತ ಹನ್ನೊಂದನೆ ದಿನವೇ ಊರ ಹಿರಿಯರು, ಮುದುಕಿಯರು ಸಂಪ್ರದಾಯದ ಅಂಧಕಾರದಲ್ಲಿ ಮುಳುಗಿ ನಿಷ್ಕರುಣೆಯಿಂದ ಒಂಬತ್ತು ವರ್ಷದ ಅಬೋಧ ಬಾಲಿಕೆ ಫಣಿಯಮ್ಮನ ಬಳೆ ಒಡೆದರು. ಫಣಿಯಮ್ಮ ವಿಧವೆಯಾದಾಗ ಇನ್ನೂ ಮೈನೆರೆದಿರಲಿಲ್ಲ. ಇಂತಹ ಸಮಸ್ಯೆ ಆದುವರೆಗೂ ಆ ಪ್ರಾಂತ್ಯದಲ್ಲಿ ಉದ್ಭವಿಸಿರಲಿಲ್ಲ. ಸ್ವತಃ ತಮ್ಮಯ್ಯನವರೇ ಮಠಕ್ಕೆ ಹೋಗಿ ಪಾರುಪತ್ತೆದಾರರ ಮುಖಾಂತರ ಏನು ಮಾಡಬೇಕೆಂದು ಕೇಳಿಕೊಂಡರು. ಉತ್ತರ ಬರಲು ಎರಡು ದಿನ ಕಾಯಬೇಕಾಯಿತು. ಕಡೆಗೊಮ್ಮೆ ಕಡ್ಡಾಯ ಉತ್ತರ ಆಜ್ಞೆ ಬಂದಿತು.

> "ಹುಡುಗಿ ಇನ್ನೂ ಕನ್ಯೆಯಾಗಿರುವುದರಿಂದ ಹನ್ನೊಂದನೇ ದಿನ ಸೌಮಾಂಗಲ್ಯದ ಚಿಹ್ನೆಗಳನ್ನೆಲ್ಲ ತೆಗೆದು ತಲೆಕೂದಲನ್ನು ಮಾತ್ರ ಹಾಗೇ ಬಿಟ್ಟಿರಬೇಕು. ಮತ್ತು ಬಿಳೀ ಸೀರೆ ಉಡಿಸಿರಬೇಕು. ಮೈನೆರೆಯುವವರೆಗೆ ಯಾರಿಗೂ ಮುಖ ತೋರಿಸಕೂಡದು. ಯಾವ ಮಡಿ ಕೆಲಸವನ್ನೂ ಮಾಡಿಸಕೂಡದು. ಮೈನೆರೆದ ನಾಲ್ಕನೇ ದಿನವೇ ಶಿರೋ ಮುಂಡನ ಮಾಡಿಸಿ ಆ ಜನ್ಮ ಮಡಿ ಹಿಡಿಸಬೇಕು. ಇದರಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ಇಡೀ ಮನೆತನಕ್ಕೆ ಬಹಿಷ್ಕಾರ"
> (ಇಂದಿರಾ ಎಂ. ಕೆ. :೧೯೭೬ ; ೪೧-೪೨)

ಸ್ತ್ರೀ ಶೋಷಣೆಯಲ್ಲಿ ಬ್ರಾಹ್ಮಣ ಸಮಾಜದ ಮಠ - ಮಾನ್ಯಗಳ ಕೈವಾಡ ಹಾಗೂ ತೆಗೆದುಕೊಳ್ಳುವ ಅಮಾನುಷ ತೀರ್ಮಾನಗಳು ಫಣಿಯಮ್ಮ ಕಾದಂಬರಿಯ ಮುಖ್ಯ ವಿಡಂಬನೆಯಾಗಿದೆ.

> "ಆಗಿನ ಕಾಲದಲ್ಲಿ ಬಲವಾಗಿ ಬೇರೂರಿದ್ದೆಂದರೆ ವಿಪರೀತ ಮಡಿವಂತಿಕೆ ಅದರ ಜೊತೆಗೆ ಸಂಪ್ರದಾಯ ಶಾಸ್ತ್ರ ಮತ್ತು ಹೆಚ್ಚಿನದೆಂದರೆ ಕೂಪ ಮಂಡೂಕತ್ವ. ಆಗ ಶ್ರೀ ಶ್ರೀ ಶ್ರೀ

ನೃಸಿಂಹ ಭಾರತಿ ಸ್ವಾಮಿಗಳು ಪಟ್ಟಕ್ಕೆ ಬಂದ ಕಾಲ. ಮಾತು ಎತ್ತಿದರೆ ಬಹಿಷ್ಕಾರ. ಯಾವಳಾದರೂ ಬಾಲವಿಧವೆ ಬಸಿರಾದಳೆಂದರೆ ಮುಗಿಯಿತು. ಆಕೆಯನ್ನು ಬಸಿರು ಮಾಡಿದವರೇ ಶೃಂಗೇರಿಗೆ ಹೋಗಿ ಆಕೆಯ ಬಗ್ಗೆ ಸ್ವಾಮಿಗಳಲ್ಲಿ ದೂರು ಹೇಳಿ ಆಕೆಯನ್ನು ಜಾತಿಯಿಂದ ಹೊರಗೆ ಹಾಕಿಸಿ ಬರುತ್ತಿದ್ದರು. ಸ್ವಾಮಿಗಳಾದರೂ ಹೇಳಿ ಕೇಳಿ ಸನ್ಯಾಸಿ, ಸದಾ ಈ ವ್ಯಭಿಚಾರದ ಪುರಾಣ ಕೇಳುವುದು ತಮ್ಮ ಬ್ರಹ್ಮಚರ್ಯಕ್ಕೆ ಕುಂದು ಎಂದು ತಿಳಿಯರು. ಅವರು ಕೇಳಿ ಕೈ ಸನ್ನೆಯಿಂದಲೇ ಅದನ್ನು ಮಠದ ಧರ್ಮಾಧಿಕಾರಿಗಳಿಗೆ ವಹಿಸಿ ಬಿಡುತ್ತಿದ್ದರು. ಕೇಳಬೇಕೆ? ತೋಳನಿಗೆ ಕುರಿ ಕಾಯಲು ಬಿಟ್ಟಂತೆ". (ಇಂದಿರಾ ಎಂ.ಕೆ : ೧೯೭೬ ; ೧೦.)

ಮಾನವ ಧರ್ಮಕ್ಕೆ ವಿರೋಧವಾದ ಇಂತಹ ನಿರ್ದಯೆಯ ಅಮಾನುಷ ನಿರ್ಣಯಗಳು ಒಂದು ಸಮೂಹದ ಬಹುಭಾಗವನ್ನು ಕತ್ತಲಿನಲ್ಲಿ ಇಡುತ್ತದೆ. ಫಣಿಯಮ್ಮ ಅಂದಿನ ಕ್ರೂರ ಸಮಾಜದ ಕುರುಡು ಕಟ್ಟಳೆಗಳಿಗೆ ಬಲಿಯಾದ ಸನ್ನಿವೇಶ ಅತ್ಯಂತ ಧಾರುಣವಾಗಿ ಚಿತ್ರಿತಗೊಂಡಿದೆ.

"ನಾಲ್ಕು ವರ್ಷಗಳನ್ನು ಕತ್ತಲೆ ಕೋಣೆಯಲ್ಲಿ ಕಳೆದ ಫಣಿಯಮ್ಮ ಮೈನೆರೆದ ನಾಲ್ಕನೆಯ ದಿನವೇ ಮನೆಯ ಹೆಂಗಸರೆಲ್ಲ ಬೆಳಗಿನ ಜಾವಕ್ಕೇ ನಾಪಿತನನ್ನು ಹಲಸಿನ ಮರದ ಕೆಳಗೆ ಕೂರಿಸಿ ಸ್ವಲ್ಪ ಉದ್ದವಾಗಿ ಬೆಳೆದಿದ್ದ ಫಣಿಯಮ್ಮನ ಕೂದಲನ್ನು ದಯೆ, ದಾಕ್ಷಿಣ್ಯವಿಲ್ಲದೆ ಕರಕರನೆ ಕತ್ತರಿಸಿ ನುಣ್ಣಗೆ ಬೋಳಿಸಿದರು. ಫಣಿಯಮ್ಮ ಕುರಿಯಂತೆ ತಲೆ ಬಗ್ಗಿಸಿ ಕುಳಿತು ಅಳುತ್ತಿದ್ದಳು." (ಇಂದಿರಾ ಎಂ.ಕೆ.: ೧೯೭೮; ೨೨)

ಇದೇ ಪ್ರಸಂಗ ಮತ್ತೆ ಕಾದಂಬರಿ ಪಠ್ಯದಲ್ಲಿ ಮರುಕಳಿಸುವುದು ಗುಡ್ಡೇ ಪಾಲು ಸೀತಾರಾಮನ ಮಗಳು ದಾಕ್ಷಾಯಿಣಿಯ ಗಂಡ ಸತ್ತಾಗ. ಆಗ ಅವಳಿಗೆ ಕೇವಲ ಹದಿನಾರು ವರ್ಷ. ಫಣಿಯಮ್ಮನ ಕಾಲಕ್ಕೂ ದಾಕ್ಷಾಯಿಣಿಯ ಕಾಲಕ್ಕೂ ಸುಮಾರು ಎಪ್ಪತ್ತು - ಎಂಬತ್ತು ವರ್ಷಗಳ ಅಂತರವಿದೆ. ಆದರೆ ಸಮಾಜ ಇನ್ನೂ ಅದೇ ರೀತಿಯ ಜಿಡ್ಡುಗಟ್ಟಿದ ಸಂಪ್ರದಾಯವನ್ನು ನಡೆಸಿಕೊಂಡು ಬರುವುದರಲ್ಲಿ ಮಗ್ನವಾಗಿದೆ. ದಾಕ್ಷಾಯಣಿ ವಿಧವೆಯಾದ ಹತ್ತನೆಯದಿನ ಊರ ಹಿರಿಯರು, ಮನೆಯ ಮುದುಕ ಮುದುಕಿಯರೆಲ್ಲ ಮಡಿ ಹಿಡಿಸಬೇಕೆಂದು ಹಟಹಿಡಿದರು. ಸೀತಾರಾಮ ಫಣಿಯಮ್ಮನನ್ನು ಮುಂದಿಟ್ಟುಕೊಂಡು ಕುಳಿತ.

"ನಾನು ಈಗ್ಲೆ ಮಡಿಯಾಗುವುದಿಲ್ಲ. ರಾತ್ರಿ ಹೊತ್ತು ಉಪವಾಸ ಮಾಡೋಕೆ ನನ್ಕೈಲಿ ಕೂಡಂಗಿಲ್ಲ, ನಾ ಒಲ್ಲೆ." (ಇಂದಿರಾ ಎಂ.ಕೆ.: ೧೯೭೬; ೮೮)

ಎಂದು ಹಟ ಹಿಡಿದರೂ ರಾಯಭಾರಿಯಾಗಿ ಬಂದ ಭಟ್ಟಯ್ಯನವರು.

"ಸೀತಾರಾಮ , ಯಂತದಯ್ಯ ನಿನ್ನ ಮಗಳ ಹಟ. ಅದೇ ಮನೀಗೆ ಹಿರೀ ಸೊಸೆ. ಪ್ರಾಯದ ಹುಡುಗಿ. ಊರೋರ ಕಣ್ಣು ತಾಕೂ ಹಂಗದೆ. ಮಡಿ ಮಾಡ್ಸಿ ಒಂದ್ವರ್ಷನಾರ ಮನೆ ಒಳಗೆ ಮುಚ್ಚಿಟ್ರೆ ಮುಂದೆ ಹ್ಯಂಗಾರ ಸುಧಾರಿಸಬೋದು. ನಿಮ್ಮಜ್ಜಿ ಫಣಿಯಮ್ಮ ನೋಡಿ, ನಾನು ಹುಟ್ಟೋಕೆ ಮುಂಚ್ಚಿಂದ ಅವರು ಹೀಂಗೆ ಅದಾರೆ. ಕೈ ಎತ್ತಿ ಮುಗಿಬೇಕು. ಒಂಬತ್ತು ವರ್ಷಕ್ಕೆ ಗಂಡನ್ನ ಕಳಕೊಂಡು ಹದಿಮೂರು ವರ್ಷಕ್ಕೇ ಮಡಿ ಹಿಡಿದು ಅಷ್ಟು ವರ್ಷದಿಂದ ಶಬರಿ ಹಂಗಾದರೆ". (ಎಂ.ಕೆ ಇಂದಿರಾ: ೧೯೭೬; ೮೯.)

ಫಣಿಯಮ್ಮನನ್ನು ಸಮರ್ಥಿಸುವ ಮೂಲಕ ಇದ್ದ ವ್ಯವಸ್ಥೆಯನ್ನೇ ವೈಭವೀಕರಿಸಿ ಮುಂದುವರೆಸುವ ಪುರೋಹಿತಶಾಹಿಯ ತರ್ಕವನ್ನು ಪ್ರತಿನಿಧಿಸುವ ಭಟ್ಟಯ್ಯ, ವ್ಯವಸ್ಥೆಯೊಂದು ತನ್ನಲ್ಲಿ ಅಂತಸ್ಥವಾಗಿರುವ ನಿಯಮ ಅದು ಎಷ್ಟೇ ಅವೈಚಾರಿಕತೆಯಿಂದ ಕೂಡಿರಲಿ ಅದು ಹೇಗೆ ಕಾಲದುದ್ದಕ್ಕೂ ತನ್ನ ಬೇರುಗಳನ್ನು ಹರಡಿಕೊಳ್ಳುತ್ತದೆ ಎಂಬುದಕ್ಕೆ ಸಂಕೇತ. ಫಣಿಯಮ್ಮ ಕಾಲಕ್ಕೆ ತಕ್ಕಂತೆ ಬದಲಾಗುವ ಮಾನವೀಯ ಮೌಲ್ಯಗಳಿಗೆ ತುಡಿಯುವ ಚೈತನ್ಯ. ಹೀಗಿರುವುದರಿಂದಲೇ ಭಟ್ಟಯ್ಯನವರ ಅಮಾನುಷ ಪ್ರವೃತ್ತಿಗೆ ಜುಗುಪ್ಸೆಗೊಂಡು ಪ್ರತಿಕ್ರಿಯಿಸುವುದು ವ್ಯಕ್ತವಾಗುತ್ತದೆ.

> "ಅಯ್ಯೋ ಭಟ್ಟೈನೋರೆ, ನಮ್ಮ ಕಾಲದ ಮಾತ ಯಾತಕ್ಕೆ ಹೇಳೀರಿ? ನಂಗಂತೂ ಗಂಡನ ಮಕ ನೋಡಿದ್ದೂ ನೆನಪಿಲ್ಲ. ನಾ ಹುಟ್ಟಿದ್ದೇ ಹಿಂಗನೋ ಅನ್ನಿಸಿಬಿಟ್ಟಿದೆ. ಆಗ್ಯೂ, ಈಗ್ಯೂ ಕಾಲ ಯಾಪಾಟಿ ಬದಲಾಗ್ಯದೆ ಚೆಂದಾಗಿ ಉಂಡು- ತಿಂದು ಮಾಡೋ ಹುಡುಗಿ ಇದು."
> (ಇಂದಿರಾ ಎಂ.ಕೆ.: ೧೯೭೬; ೪೯)

ಫಣಿಯಮ್ಮ ಮಾರ್ಮಿಕವಾಗಿ ತನ್ನ ಬದುಕನ್ನು ಹೇಳಿದರೂ ಕೇಳದೆ ಭಟ್ಟಯ್ಯ ಹಾಗೂ ಊರ ಹಿರಿಯರಿಂದ ದಾಕ್ಷಾಯಿಣಿ ಕತ್ತಲೆ ಕೋಣೆಯಲ್ಲಿ ಕೂರುವಂತಾಗುತ್ತದೆ. ಸ್ತ್ರೀಯರನ್ನು ನಿರಂತರವಾಗಿ ಹಿಡಿತದಲ್ಲಿ ಇಟ್ಟುಕೊಳ್ಳಲು ಶ್ರಮಿಸುವ ಪುರುಷ ಪ್ರಧಾನ ವ್ಯವಸ್ಥೆಗೆ 'ಫಣಿಯಮ್ಮ' ಪ್ರತಿಬಿಂಬ. ಫಣಿಯಮ್ಮನ ನೈಜ ವ್ಯಕ್ತಿತ್ವ ಏನು ಎಂದು ಶೋಧಿಸ ಹೊರಟರೆ ಆಕೆ ತನ್ನ ಅಂತರಂಗವನ್ನು ಪ್ರಶ್ನಿಸುವ ಎದೆಗಾರಿಕೆಯನ್ನು ತೋರಿಸಲೇ ಇಲ್ಲ ಎನ್ನುವ ಸಂದರ್ಭಗಳು ಕೆಲವು. ಅವಳ ತುಂಬ ತಾರುಣ್ಯದ ಇಪ್ಪತ್ತಮೂರನೆಯ ವಯಸ್ಸಿನಲ್ಲಿ 'ತುಂಗೆ ದನ ಗಬ್ಬಾಗದೇ ಇರುವುದಕ್ಕೆ ನಂಜೇಗೌಜನ ಹೋರಿ ಕೂಡಿಸಬೇಕೆಂದು' ಮಾತಾಡಿಕೊಳ್ಳುತ್ತಿದ್ದುದನ್ನು ಕೇಳಿದರೂ ಅದರ ಬಗೆಗೆ ಹೆಚ್ಚು ಕುತೂಹಲ ತೋರದೆ ಸುಮ್ಮನಾಗುತ್ತಾಳೆ. ತನ್ನ ನಲವತ್ತನೆಯ ವಯಸ್ಸಿನಲ್ಲಿ ನೆಟ್ಟ ನಡುರಾತ್ರಿ ಗಂಡು - ಹೆಣ್ಣು ಜೋಡಿಯೊಂದು ಕೂಡಿದ್ದನ್ನು ಕಂಡಿದ್ದರೂ ಮನಸ್ಸನ್ನು ನಿಯಂತ್ರಿಸಿಕೊಂಡಿರುತ್ತಾಳೆ. ಒಟ್ಟಾರೆ ಅವಳು ತನ್ನ ಇಡೀ ಆಯುಷ್ಯದಲ್ಲಿ ಒಂದು ಕ್ಷಣವಾದರೂ ಲೈಂಗಿಕವಾಗಿ ಆಸಕ್ತಿ, ಕುತೂಹಲವನ್ನು ವ್ಯಕ್ತಪಡಿಸುವುದಿಲ್ಲ. ವಿವಾಹ ಮತ್ತು ಅದರಿಂದ ಮಾತ್ರ ಸಾಧ್ಯವಾಗುವ ಲೈಂಗಿಕ ಅನುಭವಕ್ಕೆ ಫಣಿಯಮ್ಮ ತಿರುಗಿ ನಿಲ್ಲುತ್ತಾಳೆ. ಅವಳ ಈ ನಿರ್ಲಿಪ್ತತೆಯು ಜೀವನದಲ್ಲಿ ನೂರಾರು ಘಟನೆಗಳು ಸಮಚಿತ್ತದಿಂದ ನೋಡುವಂತೆ ಮಾಡುತ್ತದೆ. ಇದರಿಂದಾಗಿ ಅಂದಿನ ಕಾಲದಲ್ಲಿ ಎಲ್ಲರಿಗಿಂತ ಭಿನ್ನವಾಗಿ ಕಾಣುತ್ತಾಳೆ. ಅಂದಿನ ವ್ಯವಸ್ಥೆಗೆ ಮುಗ್ಧಳಾಗಿ ತನ್ನನ್ನು ಒಪ್ಪಿಸಿಕೊಂಡರೂ, ಹೊಸ ಗಾಳಿಗೆ ತನ್ನನ್ನೊಡ್ಡಿ ಸರ್ವರಿಗೂ ಬೇಕಾದ ಪವಿತ್ರ ಆತ್ಮದ ಸಂಕೇತವಾಗಿ ಸಂಸ್ಕೃತಿಯ ಸ್ವರೂಪವಾಗಿ ನಿಲ್ಲುತ್ತಾಳೆ. 'ವಿಧವಾ ಸಮಸ್ಯೆ'ಯ ನೆಲೆಯಿಂದ ಸದಾನಂದ ಕಾದಂಬರಿಯಿಂದ **ಫಣಿಯಮ್ಮ**ದವರೆಗಿನ ಬೆಳವಣಿಗೆ ಗಮನಾರ್ಹ. ವಿಧವಾ ಸಮಸ್ಯೆಯನ್ನು ಸಮಸ್ತ ಆಯಾಮಗಳಿಂದ ನೋಡುವುದು ಇಲ್ಲಿ ಸಾಧ್ಯವಾಗುತ್ತದೆ. 'ವಿವಾಹ' ಎನ್ನುವುದು ಸಂಕೀರ್ಣವಾಗಿ ಹಲವು ಸಮಸ್ಯೆಗಳನ್ನು, ಪ್ರಶ್ನೆಗಳನ್ನು ಎದುರು ನಿಲ್ಲಿಸಿಕೊಳ್ಳುತ್ತದೆ. 'ಉತ್ತರ'ದ ಶೋಧಕ್ಕಾಗಿ ನಿರಂತರ ಶ್ರಮಿಸುತ್ತಿರುತ್ತದೆ. ಸಂಸ್ಕೃತಿಯ ಚಲನಶೀಲತೆಯೇ ಇದನ್ನು ನಿರ್ಣಯಿಸುವ, ನಿರೂಪಿಸುವ ರುವಾರಿಯಾಗುತ್ತದೆ.

ಉಳಿದೆಲ್ಲಾ ಸಮಸ್ಯೆಗಳಂತೆ 'ಅಂಗವಿಕಲತೆ' ಕೂಡ ವಿವಾಹದ ಸಂದರ್ಭದಲ್ಲಿ ನಿಲ್ಲುವ ದೊಡ್ಡ ಸಮಸ್ಯೆ. **ತುಂಗಭದ್ರೆ, ಸದಾನಂದ, ಬಿದಿಗೆ ಚಂದ್ರಮ ಡೊಂಕು** ಈ ಕಾದಂಬರಿಗಳು

ಅಂಗವಿಕಲತೆಯು ಎದುರು ಮಾಡುವ ಸಮಸ್ಯೆಗಳನ್ನು ಚರ್ಚಿಸುತ್ತವೆ. ತುಂಗಭದ್ರ ಕಾದಂಬರಿಯಲ್ಲಿ ಈ ಸಮಸ್ಯೆ ಸಮಾಜದ ಒಂದು ಗಂಭೀರ ಸಮಸ್ಯೆಯಾಗಿ ಪರಿಣಮಿಸದೆ ಕೌಟುಂಬಿಕ ನೆಲೆಯಿಂದಲೇ ಇದನ್ನು ನೋಡುತ್ತದೆ. ಆದ್ದರಿಂದ ಇದು ಕೌಟುಂಬಿಕ ಕಾದಂಬರಿ. ಈ ಕಾದಂಬರಿಯಲ್ಲಿನ ಪಾತ್ರಗಳು ಜೀವನದಲ್ಲಿ ಬಂದುಧನ್ನು ಸುಲಭವಾಗಿ ಸ್ವೀಕರಿಸುತ್ತಾರೆ. ಒಪ್ಪುತ್ತಾರೆ. ಇಲ್ಲಿನ ಜನತೆ ಮೂಢನಂಬಿಕೆ, ಸ್ವರ್ಗ- ನರಕ, ಪಾಪ- ಪುಣ್ಯಗಳನ್ನು ಬಲವಾಗಿ ನಂಬಿದವರು. ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದ, ಬಾಲ್ಯ ವಿವಾಹ ಪದ್ಧತಿ ಪ್ರಬಲವಾಗಿದ್ದ ಕಾಲ ಅದು. ಇಂತಹ ಒಂದು ಸಮಾಜದಲ್ಲಿ ಮಲೆನಾಡಿನ ಮೂಲೆಯಲ್ಲಿದ್ದ ಹೆಚ್ಚಿನ ನಾಗರಿಕತೆಯನ್ನು ಕಾಣದ ತೀರ್ಥಹಳ್ಳಿಯ ದುಗ್ಗಾಭಟ್ಟರ ಸಂಸಾರ ಒಂದು ವಿಚಿತ್ರ ಸಮಸ್ಯೆಯಲ್ಲಿ ಸಿಲುಕಿರುತ್ತದೆ. ಅದೆಂದರೆ, ಹುಟ್ಟು ಕುರುಡಿಯರಾದ ತುಂಗ - ಭದ್ರೆಯರ ಮದುವೆಯ ಸಮಸ್ಯೆ. ದುಗ್ಗಾಭಟ್ಟರಿಗೆ ಮೂವರು ಹೆಣ್ಣು ಒಬ್ಬ ಗಂಡು ಮಕ್ಕಳು. ತುಂಗಭದ್ರೆಯರಿಗೆ ಮದುವೆ ಮಾಡದಿದ್ದರೆ ಕುಟುಂಬಕ್ಕೆ ಬಹಿಷ್ಕಾರ ತಪ್ಪಿದ್ದಲ್ಲ. ಆದರೆ ಹುಟ್ಟು ಕುರುಡಿಯರಾದ ಅವರನ್ನು ಮದುವೆಯಾಗಲು ಯಾರೂ ಮುಂದೆ ಬರುವುದಿಲ್ಲ. ಅವರಿಬ್ಬರ ಮದುವೆಯಾಗದೆ ಬೆಳೆದು ನಿಂತ ಮಂದಾಕಿನಿಗೆ ಮದುವೆಯಾಗುವಂತಿಲ್ಲ. ಈ ಸಮಸ್ಯೆಯ ಪರಿಹಾರವೆಂದರೆ, ಮಂದಾಕಿನಿಯನ್ನು ಮದುವೆಯಾಗಬಯಸುವವರು ತುಂಗ - ಭದ್ರೆಯರಿಗೂ ಮಾಂಗಲ್ಯ ಕಟ್ಟಬೇಕಾಗುತ್ತದೆ. ಅವರ ಕನ್ಯಾಸೆರೆ ಬಿಡಿಸಿದ ನಂತರವೇ ಮಂದಾಕಿನಿಗೆ ಮದುವೆ ಸಾಧ್ಯವಾಗುತ್ತದೆ. ಮೇಗರವಳ್ಳಿಯ ಶ್ರೀಮಂತ ಕುಂಟ ಚೆನ್ನಯ್ಯ ಮೂವರನ್ನು ಮದುವೆಯಾಗಲು ಮುಂದೆ ಬರುತ್ತಾನೆ. ಆದರೆ ತುಂಗ ಭದ್ರೆಯರಿಗೆ ಮಂದಾಕಿನಿಗೆ ಆ ಸಂಸಾರವನ್ನು ಬಿಟ್ಟು ಹೋಗಲು ಮನಸ್ಸೇ ಇರುವುದಿಲ್ಲ. ಇದೇ ಚಿಂತೆಯಲ್ಲಿ ಕೊರಗಿದ ಮಂದಾಕಿನಿ ಹೊಳೆಗೆ ಹಾರಿ ತನ್ನ ಪ್ರಾಣ ಕಳೆದುಕೊಳ್ಳಲು ನಿರ್ಧರಿಸುತ್ತಾಳೆ.

> "ನಟ್ಟ ನಡುರಾತ್ರಿ ಬಾಗಿಲು ಕಿರ್ರಂದು ಸಪ್ಪಳವಾದಾಗ ಮುದ್ದುರಾಮನಿಗೆ ಎಚ್ಚರವಾಗುತ್ತದೆ. ಮಂದಾಕಿನಿ ಹಾಸಿಗೆಯಲ್ಲಿಲ್ಲದ್ದನ್ನು ಕಂಡು ಹೊಳೆಗೆ ಧಾವಿಸುತ್ತಾನೆ." (ಇಂದಿರಾ.ಎಂ.ಕೆ. : ೧೯೬೩; ೬೧)

ಮುದ್ದುರಾಮ ತುಂಗ- ಭದ್ರೆಯನ್ನು, ಮಂದಾಕಿನಿಯನ್ನೂ ಮದುವೆಯಾಗುತ್ತಾನೆ. ಮುದ್ದುರಾಮನೇ ಈ ಕಾದಂಬರಿಯ ಕೇಂದ್ರವ್ಯಕ್ತಿ. ಈ ಕಾದಂಬರಿಯಲ್ಲಿ ಬರುವ ಸಮಸ್ಯೆಗಳ ಪರಿಹಾರ ಅವನಿಂದ ಸಾಧ್ಯವಾಗಿದೆ. ಹೃದಯ ಶ್ರೀಮಂತಿಕೆ ಮುದ್ದುರಾಮನಿಗೆ ಜನ್ಮಜಾತವಾಗಿ ಬಂದದ್ದು. ಅವನು ಸರಳ ಉಳಿದ ಸ್ತ್ರೀಪಾತ್ರಗಳಂತೆ ವ್ಯಕ್ತಿತ್ವ ಹೊಂದಿರುವವನು. ಹಾಗಾಗಿ ಅವನು ಎಲ್ಲರ ಬದುಕಿಗೆ ಆಶ್ರಯದಾತನಾಗುತ್ತಾನೆ. ಶರಣಾಗತಿಯೇ ಅವನ ಬಾಳಿನ ಸಾರ್ಥಕತೆಯಾಗುತ್ತದೆ. ಬಂದುದನ್ನು ಅತ್ಯಂತ ಸರಳವಾಗಿ ಆತ ಒಪ್ಪಿಕೊಳ್ಳುತ್ತಾನೆ.

> "ಈ ಕತೆಯ ಕೇಂದ್ರ ವ್ಯಕ್ತಿಯಾದ ಮುದ್ದುರಾಮ ಉಳಿದವರ ದೃಷ್ಟಿಯಲ್ಲಿ ಸುಸಂಸ್ಕೃತನಾದವನು. ಅವನು ದುಗ್ಗಾಭಟ್ಟರ ವಂಶದ ಬಳ್ಳಿಗೆ ಬಿಟ್ಟ ಹೀಚುಗಾಯಿ, ಮನೆತನದ ಕಣಜದಲ್ಲಿಯ ಬೀಜಗಾಳು. ಅವನ ನಡೆನುಡಿಗಳೆಲ್ಲ ಅವನ ಈ ಅಂತಸ್ತಿಗೆ ತಕ್ಕವಾಗಿವೆ. ಉಳಿದ ವ್ಯಕ್ತಿಗಳ ಅಂತಃಸತ್ವಕ್ಕೆ, ಪರಿಪಾಕಕ್ಕೆ ಅವನೇ ಪ್ರಮಾಣ ವಾಗಿರುವುದರಿಂದ ಇಡೀ ಕಾದಂಬರಿ ಅವನ ಕತೆಯಾಗಿದೆ".

ಎನ್ನುವ ಕೀರ್ತಿನಾಥ ಕುರ್ತಕೋಟಿಯವರ (ಪಾರ್ವತಿ.ಎಚ್.ಎಸ್.(ಸಂ):೧೯೯೧; ೮೯) ಅಭಿಪ್ರಾಯವು ಮುದ್ದುರಾಮನಿಂದ ತುಂಗ-ಭದ್ರೆಯರ ಜೀವನಕ್ಕೆ ಅರ್ಥಪ್ರಾಪ್ತಿಯಾಗುತ್ತದೆ. ಎಂಬುದನ್ನು ತೆರೆದಿಡುತ್ತದೆ. ತುಂಗ- ಭದ್ರೆಯರ ಸಮಸ್ಯೆ ಇಲ್ಲಿ ವಿಷಮವಾದ ಸಾಮಾಜಿಕ ಸಮಸ್ಯೆಯಾಗಿ ಮಾರ್ಪಡುವ ಅವಕಾಶಗಳೇ ನಿರ್ಮಾಣವಾಗುವುದಿಲ್ಲ. ಸಮಸ್ಯೆಯ ಜಟಿಲತೆಯನ್ನು ವಿವಾಹದ ನೆಲೆಯಲ್ಲಿ ಏಕಾತ್ಮಕವಾಗಿ ರಚಿಸಿರುವ ಕಾರಣದಿಂದ ಸಮಸ್ಯೆ ಮತ್ತು ಪರಿಹಾರ ಸರಳವಾಗಿದೆ. ಆದರೆ ಅಂಗವಿಕಲರ ವಿವಾಹದ ತಲ್ಲಣಗಳನ್ನು ಕುಟುಂಬದ ಸದಸ್ಯರು ತೀವ್ರವಾದ ಅನುಭೂತಿಯಿಂದ ಅನುಭವಿಸುವುದು ಇಲ್ಲಿ ಕಂಡು ಬರುತ್ತದೆ.

"ತುಂಗ- ಭದ್ರೆಯರು ಮೈನೆರೆದ ದಿನ. ಮನೆಯಲ್ಲಿ ದೂರದ ದಾಯಾದಿಗಳು ಯಾರಾದರೂ ಸತ್ತಂತಹ ವಾತಾವರಣ. ಯಾರ ಮುಖದಲ್ಲಿಯೂ ನಗೆಯಿಲ್ಲ. ಆದಿನ ಕೃಷ್ಣವೇಣಿಯಿಂದ ಸಂದರ್ಭ ಅರಿತ ಮುದ್ದುರಾಮ ಅವರ ಬಗ್ಗೆ ನಿರಾಸೆಯನ್ನೇ ತೋರುತ್ತಾನೆ. ಅವರನ್ನೇ ಕೈಹಿಡಿದು ನಡೆಸಲು ಜನಬೇಕು. ಇಂಥವರನ್ನು ಯಾರು ಮದುವೆ ಮಾಡಿಕೊಳ್ಳುತ್ತಾರೆ? ಒಂದಷ್ಟು ಜಮೀನು, ಆಸ್ತಿ ಏನಾದರೂ ಕೊಟ್ಟರೆ ಯಾರಾದರೂ ಒಬ್ಬ ಪರದೇಶಿ ಮಾಡಿಕೊಂಡಾನು ಎಂದು ನುಡಿಯುತ್ತಾನೆ. ಆದರೆ ಕೃಷ್ಣವೇಣಿಯ ಮನಸ್ಸಿನಲ್ಲಿರುವುದೇ ಬೇರೆ. ಆಸ್ತಿ ಚೂರಿನ ಆಸೆಗೆ ಮದುವೆಯಾಗುವವರು ಅವರನ್ನು ಚೆನ್ನಾಗಿ ಇಟ್ಟುಕೊಳ್ಳುತ್ತಾರಾ? ಅಚಾನಕವಾಗಿ ಎಂಬಂತೆ ಕೃಷ್ಣವೇಣಿ ನೀವೇ ಅವೆರಡನ್ನೂ ಮದುವ್ಯಾದರಾತು ಕನ್ಯಾಸೆರೆ ಬಿಡಿಸಿದ್ದಾಂಗಾತು. ಅವರಪಾಡಿಗೆ ಅವು ಇದ್ಕತಾವೆ?" (ಇಂದಿರಾ ಎಂ.ಕೆ. : ೧೯೬೩ ; ೪ಲ)

ಇಲ್ಲಿ ಅಪ್ಪಟ ಮನುಷ್ಯ ಅಂತಃಕರಣದ ಪ್ರತಿನಿಧಿಯಾಗಿ ಕೃಷ್ಣವೇಣಿ ಕಾಣಿಸಿಕೊಳ್ಳುತ್ತಾಳೆ. ಸಾಮಾನ್ಯ ಹೆಣ್ಣು ಆಕೆಯ ಗಂಡನ ಬಳಿ ಇಂತಹ ಪ್ರಸ್ತಾಪವನ್ನು ಮಾಡುವುದು ಅಸಂಭವ. ಗಂಡಿನ ಅಹಂಕಾರವೂ ಇಲ್ಲದ ಹೆಣ್ಣಿನ ಸಂಕುಚಿತ ಮನಸ್ಸೂ ಇಲ್ಲದ ಮಾನವೀಯ ಹೃದಯ ಕೃಷ್ಣವೇಣಿಯಲ್ಲಿ ಇರುವುದು ವ್ಯಕ್ತವಾಗುತ್ತದೆ. ಕೃಷ್ಣವೇಣಿಯ ಮೂಲದಿಂದಲೇ ಅಂಗವಿಕಲರ ವಿವಾಹ ಸಮಸ್ಯೆಗೆ ಉತ್ತರ ಹುಡುಕುವ ಲೇಖಕಿ ಮುದ್ದುರಾಮನನ್ನು ಸಮಸ್ಯೆಯ ಉತ್ತರವಾಗಿ ಚಿತ್ರಿಸಿದರೆ ಕೃಷ್ಣವೇಣಿಯನ್ನು ಉತ್ತರವನ್ನು ತಲುಪುವ ದಾರಿಯಾಗಿ ಬಿಂಬಿಸಿದ್ದಾರೆ. ಇಲ್ಲಿ ವೈದೇಹಿಯವರ ಅಭಿಪ್ರಾಯ ಗಮನಾರ್ಹ.

"ಶ್ರೀಮತಿ ಎಂ.ಕೆ. ಇಂದಿರಾ ಮುದ್ದುರಾಮನನ್ನು ಈ ಕಾದಂಬರಿಯ ಕೇಂದ್ರ ವ್ಯಕ್ತಿಯನ್ನಾಗಿ ಏಕೆ ಮಾಡಿದರೆಂಬುದು ಆಶ್ಚರ್ಯವಾಗಿ ಕಾಣುತ್ತದೆ. ಈ ಹೆಣ್ಣು ಮಕ್ಕಳ ಲೋಕದ ವಿವರಗಳನ್ನು ಒಂದ ತುಣುಕೂ ಬಿಡದೆ ತಿಳಿದಿರುವ ಅಪರೂಪದ ಬರಹಗಾರ್ತಿ ಎಂ.ಕೆ ಇಂದಿರಾ ಊಹಿಸಿ ಬರೆಯಬಹುದಾದ ಮುದ್ದುರಾಮನ ಲೋಕ ಬಿಟ್ಟು ಸೀದ ಈ ಹುಡುಗಿಯರ ಅಂಗಳದಲ್ಲೇ ನಿಂತು ಕಥೆಯನ್ನು ನೋಡಿದರೆ ಇದಕ್ಕಿಂತ ಭವ್ಯವಾದ ಒಂದು ಕಾದಂಬರಿ ಕಟ್ಟಡವನ್ನು ನೀಡುವ ಸಾಧ್ಯತೆ ಇತ್ತು ಅಂತ ಅನಿಸುವುದಿಲ್ಲವೇ" (ಪಾರ್ವತಿ ಎಚ್. ಎಸ್. (ಸಂ): ೧೯೯೧ ; ೨೫೯)

ಒಟ್ಟಿನಲ್ಲಿ ತ್ರಿವೇಣಿ ಮತ್ತು ಇಂದಿರಾ.ಎಂ.ಕೆ ಇಬ್ಬರು ಲೇಖಕಿಯರೂ ಉದಾರವಾದಿ ಸಾಂಸ್ಕೃತಿಕ ಸಂದರ್ಭದಲ್ಲಿ ವಿವಾಹ ವ್ಯವಸ್ಥೆ ಎದುರಿಸಿದ ಪರಿಣಾಮಗಳನ್ನು ಸ್ತ್ರೀಯರ ಬದುಕಿನ ಒಡಲಿನಿಂದಲೇ ಬಿಂಬಿಸುವ ಪ್ರಯತ್ನ ನಡೆಸುವುದು ಸ್ಪಷ್ಟವಾಗುತ್ತದೆ. ಇಬ್ಬರು ಲೇಖಕಿಯರು ನಿರೂಪಿಸಿರುವ ವಿವಾಹದ ಒಟ್ಟು ಗ್ರಹೀತವನ್ನು ಕೂಡು ಕಟ್ಟಿನ ಕಾದಂಬರಿಗಳೆಂದು ಪರಿಗಣಿಸುವುದು ಸಾಧ್ಯವಾಗುವುದು ವಿವಾಹದ ನಿರೂಪಣೆಯಲ್ಲಿ. ಆ ಸಾಂಸ್ಕೃತಿಕ ಸಂದರ್ಭದ ಮೂಲಭೂತ ಸಾಮ್ಯತೆ ಇಬ್ಬರು ಲೇಖಕಿಯರಲ್ಲಿ ಕಂಡು ಬರುತ್ತದೆ. ಕೃತಿಗಳನ್ನು ಒಟ್ಟಾಗಿ ಅವಲೋಕಿಸಿದರೆ ಒಂದು ಲೇಖಕಿಯ ಕೃತಿ ಮತ್ತೊಂದು ಲೇಖಕಿಯ ಕೃತಿಯನ್ನು ಪುನರ್‌ರಚಿಸುವಂತೆ ತೋರುತ್ತದೆ. ಒಂದು ಕೃತಿಯ ಸಾಂಸ್ಕೃತಿಕ ಆವರಣ ಮತ್ತೊಂದು ಕೃತಿಯ ಸಾಂಸ್ಕೃತಿಕ ಚೌಕಟ್ಟಾಗಿ ಬಿಂಬಿತಗೊಳ್ಳುತ್ತದೆ. ಈ ಕಾರಣದಿಂದ ಕೂಡುಕಟ್ಟಿನ ಈ ಕಾದಂಬರಿಗಳ ಲಕ್ಷಣ ಸ್ವರೂಪವನ್ನು ಏಕತ್ರಗೊಳಿಸಿ ಗ್ರಹಿಸುವುದು ಸಾಧ್ಯವಾಗುತ್ತದೆ.

**ಕೂಡುಕಟ್ಟಿನ ಕಾದಂಬರಿಗಳು ಬಿಂಬಿಸುವ ವಿವಾಹ ಸ್ವರೂಪದ ಲಕ್ಷಣಗಳು :**

೧) ಸ್ತ್ರೀಯರ ಬದುಕಿನಲ್ಲಿ ವಿವಾಹವನ್ನು ನಿರ್ಣಾಯಕ ಗಡಿರೇಖೆಗಳಾಗಿ ಚಿತ್ರಿಸಲಾಗಿದೆ.

೨) ವಿವಾಹದ ಮೂಲಕ ಆಯಾಯ ಕಾಲದ ಸಾಮಾಜಿಕ ಪಲ್ಲಟವನ್ನು, ಜೀವನಾದರ್ಶವನ್ನು ಕೂಡುಕಟ್ಟಿನ ಕಾದಂಬರಿಗಳು ದರ್ಶಿಸುವ ಪ್ರಯತ್ನವನ್ನು ನಡೆಸುತ್ತವೆ.

೩) ವಿವಾಹ ಸಂಸ್ಥೆಯನ್ನು ಅದರ ಸಾಂಸ್ಥೀಕರಣದ ತಳಹದಿಯ ನೆಲೆಯಲ್ಲಿ ಹಲವು ಮೂಲಗಳಿಂದ ನೋಡಲಾಗಿದೆ. (ಬಾಲ್ಯವಿವಾಹ, ವರದಕ್ಷಿಣೆ, ಜಾತಿಪದ್ಧತಿ, ವಿಧವಾ ವಿವಾಹ, ಅಂಗವಿಕಲತೆ ಇತ್ಯಾದಿ)

೪) ವಿವಾಹದ ಎಲ್ಲಾ ಸಂಭವನೀಯ ಸಮಸ್ಯೆಗಳನ್ನು ಕೂಡುಕಟ್ಟಿನ ಕಾದಂಬರಿಗಳಲ್ಲಿ ಅನೇಕ ಆಯಾಮಗಳಿಂದ ಗ್ರಹಿಸಲಾಗಿದೆ. (ವೈಯಕ್ತಿಕ, ಕೌಟುಂಬಿಕ, ಕೆಲವು ಸಂದರ್ಭದಲ್ಲಿ ಸಾಮಾಜಿಕ)

೫) ಸ್ತ್ರೀಯರ ಬದುಕಿನ ಮೂಲದಿಂದಲೇ 'ವಿವಾಹ'ವು ಉಂಟುಮಾಡುವ ಪರಿಣಾಮವನ್ನು ಕೂಡುಕಟ್ಟಿನ ಕಾದಂಬರಿಗಳು ಚರ್ಚಿಸುತ್ತವೆ.

೬) ಸಾಮಾಜಿಕ ಸಂಬಂಧಗಳ ರಚನಾ ಪರಿಹಾರವಾಗಿ ಸಾಂದರ್ಭಿಕವಾಗಿ ಉತ್ತರಗಳನ್ನು ಈ ಕಾದಂಬರಿಗಳು ಕಂಡುಕೊಳ್ಳುತ್ತವೆ.

೭) ಈ ಪರಿಣಾಮವಾಗಿ ಒಂದು ಸಮಸ್ಯೆಗೆ ಒಂದು ಉತ್ತರ-ಪರಿಹಾರ ಎಂಬ ಸೂತ್ರಬದ್ಧತೆಗೆ, ಏಕರೂಪತೆಗೆ ಕೆಲವು ಪಠ್ಯಗಳು ಒಳಗಾದರೂ, ನಿರ್ದಿಷ್ಟ ಸಮಸ್ಯೆಯು ತೆರೆದಿಡುವ ಸಮಸ್ಯೆಗಳನ್ನು ಪಾರದರ್ಶಕವಾಗಿ ಗಮನಿಸಿ ಉತ್ತರವನ್ನು ಹುಡುಕುವ ಪ್ರಯತ್ನವನ್ನು ಕೂಡುಕಟ್ಟಿನ ಕಾದಂಬರಿಗಳಲ್ಲಿ ಕಾಣಬಹುದು.

೮) ಸ್ತ್ರೀಯರು ಸಾಮಾಜೀಕರಣಕ್ಕೆ ಒಳಗಾಗುವುದೇ ವಿವಾಹದ ಮೂಲಕ ಎಂಬ ಅಂತಿಮ ನಿರ್ಣಯ ಕೂಡುಕಟ್ಟಿನ ಕಾದಂಬರಿಗಳ ಅಂತರ್ಗತ ತಿಳುವಳಿಕೆಯಾಗಿದೆ.

೯) ಇದನ್ನು ಸ್ತ್ರೀಯರು ಎದುರಿಸುವ ಸಂಬಂಧಗಳ ಸಾಂದರ್ಭಿಕ ಸನ್ನಿವೇಶಗಳ ಮೂಲಕ ಮಾನಸಿಕ ಹಾಗೂ ದೈಹಿಕ ಒತ್ತಡಗಳನ್ನು, ತುರ್ತುಗಳನ್ನು ಆಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ.

೧೦) ಅಂತಿಮವಾಗಿ ವ್ಯಕ್ತಿಗಳ ಜೀವನ ಮೌಲ್ಯವು ಸಂಬಂಧ ಸ್ಥಾಪಕ 'ವಾಹಕ'ವಾದ ವಿವಾಹದ ಮೂಲಕ ಹೇಗೆ ಪ್ರಕಟಗೊಳ್ಳುತ್ತವೆ ಎಂಬುದನ್ನು ಈ ಕಾದಂಬರಿಗಳು ಚರ್ಚಿಸುತ್ತವೆ.

### ೩.೩.೨ ಕೂಡುಕಟ್ಟಿನ ಕಾದಂಬರಿಗಳು : ದಾಂಪತ್ಯದ ಸ್ವರೂಪ.

**ತ್ರಿವೇಣಿಯವರ ಕಾದಂಬರಿಗಳಲ್ಲಿ ಪ್ರಕಟವಾಗುವ ದಾಂಪತ್ಯದ ಸ್ವರೂಪ :**

ತ್ರಿವೇಣಿಯವರ ಕಾದಂಬರಿಗಳಲ್ಲಿ ವೈವಾಹಿಕ ಸ್ವರೂಪದ ಜಟಿಲತೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ಕೃತಿಗಳೆಂದರೆ, **ಅಪಸ್ವರ, ಅಪಜಯ, ಮುಕ್ತಿ, ಕೀಲುಗೊಂಬೆ, ಶರಪಂಜರ** ಇವುಗಳು. ಇವುಗಳಲ್ಲಿ ವೈವಾಹಿಕ ಬದುಕನ್ನು ಉಳಿದ ಕೃತಿಗಳಿಗಿಂತ ಪ್ರಧಾನವಾಗಿ ತೆರೆದಿಡುವ ಪ್ರಯತ್ನ ಕಂಡು ಬರುತ್ತದೆ. **ಅಪಸ್ವರ - ಅಪಜಯ** ಎರಡೂ ಕೃತಿಗಳು ಪ್ರಧಾನವಾಗಿ ವಿಫಲ ದಾಂಪತ್ಯವನ್ನು ಹಲವು ಆಯಾಮಗಳಿಂದ ಚಿತ್ರಿಸುವ ಕೃತಿಗಳಾಗಿವೆ. ಸಾಂದರ್ಭಿಕತೆಗಳನ್ನು ಸನ್ನಿವೇಶಗಳನ್ನು ಮುಖ್ಯವಾಗಿ ಪರಿಗಣಿಸಿ ನಿರ್ದಿಷ್ಟವಾಗಿ ಒಂದು ದಾಂಪತ್ಯದ ಬದುಕನ್ನು ಎರಡು ಕೃತಿಗಳ ಚೌಕಟ್ಟಿನಲ್ಲಿ ವಿಶ್ಲೇಷಿಸಲಾಗಿದೆ. 'ದಾಂಪತ್ಯದ ನೆಲೆ'ಯು ಸ್ತ್ರೀ - ಪುರುಷ ಇಬ್ಬರ ಸಮಾನ ಉಪಸ್ಥಿತಿಯನ್ನು ಮಾನಸಿಕವಾಗಿ ಹಾಗೂ ದೈಹಿಕವಾಗಿ ಬೇಡುತ್ತವೆ. 'ಲೈಂಗಿಕ ಅರಾಜಕತೆ'ಯನ್ನು ಅತ್ಯಂತ ಪರಿಣಾಮಕಾರಿಯಾಗಿ ನಿಯಂತ್ರಿಸುವ ಸಾಮಾಜಿಕ ರಚನೆ 'ವೈವಾಹಿಕ ಸ್ವರೂಪ'ವಾದ ಕಾರಣ, ಪುರುಷ ಮತ್ತು ಸ್ತ್ರೀಯರ ಸಮತೋಲನ ಮನೋಭಾವ ಇಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಅಪಸ್ವರ - ಮತ್ತು ಅಪಜಯ ಎರಡು ಕೃತಿಗಳು ಮೀರಾ ಮತ್ತು ಶಾಮುವಿನ ದಾಂಪತ್ಯದ ಸ್ವರೂಪವನ್ನು ಬಿಂಬಿಸುತ್ತವೆ. ಈ ವಿವಾಹದಲ್ಲಿ ಮೀರಾಳ ಸ್ವಂತ ಅಸಕ್ತಿಯಾಗಿದ್ದ ಡಾಕ್ಟರ್ ಆಗಬೇಕು ಎಂಬ ಕನಸನ್ನು ಪರಿಗಣಿಸದೆ ಇವರ ವಿವಾಹವನ್ನು ತಂದೆ ತಾಯಿಗಳು ಮಾಡುತ್ತಾರೆ. ಶಾಮು ಕೃಷಿಮಾಡುವ ಶ್ರೀಮಂತ ಮನೆತನದವ, ಗ್ರಾಮೀಣ ಬದುಕಿಗೆ ತನ್ನನ್ನು ಹೊಂದಿಸಿಕೊಂಡವ. ವಿವಾಹಾನಂತರ ತನ್ನ ಗಂಡನ ಹಳ್ಳಿಗೆ ಮೀರಾ ಬಂದಾಗ, ಅಲ್ಲಿಯ ಗ್ರಾಮೀಣ ಬದುಕಿಗೆ ಹೊಂದಿಕೊಳ್ಳಲು ಅಸಮರ್ಥಳಾಗುತ್ತಾಳೆ. ಬದುಕಿಗೆ ಏನಾದರೂ ಒಂದು ಅರ್ಥವನ್ನು ಕೊಡಲು ಅವಳು ಅಲ್ಲಿಯ ಹೆಂಗಸರಿಗೆ ಓದು ಬರಹ ಕಲಿಸಲು ಪ್ರಯತ್ನಿಸಿ, ಆ ಪ್ರಯತ್ನದಲ್ಲೂ ಸೋಲುತ್ತಾಳೆ. ತನಗೊಗ್ಗದ ಗ್ರಾಮೀಣ ಬದುಕಿಗೂ ತನಗೂ ಇರುವ ಒಂದೇ ಒಂದು ಬೆಸುಗೆಯಾದ ಅವಳ ಚಿಕ್ಕ ಮಗಳು ತಕ್ಕ ಸಮಯದಲ್ಲಿ ಚಿಕಿತ್ಸೆ ದೊರೆಯದೆ ಕಾಯಿಲೆ ಬಿದ್ದು ಸತ್ತಾಗ ಮೀರಾಳ ಸಹನಾಶಕ್ತಿ ಮೀರುತ್ತದೆ. ದಾಂಪತ್ಯವು ಅರ್ಥಹೀನವೆನಿಸುತ್ತದೆ. ಆವರೆಗೆ ತನ್ನ ಗಂಡನನ್ನು ಅರ್ಥ ಮಾಡಿಕೊಳ್ಳಲು ಹೆಣಗುವ ಎಲ್ಲಾ ಪ್ರಯತ್ನಗಳು ಸೋಲುತ್ತವೆ. ಅವಳು ತನ್ನ ದಾಂಪತ್ಯವನ್ನು ತೊರೆಯುವ, ಮತ್ತು ಮೈಸೂರಿಗೆ ಹೋಗಿ ವೈದ್ಯಕೀಯ ಶಿಕ್ಷಣವನ್ನು ಪಡೆಯುವ ನಿರ್ಧಾರ ಮಾಡುತ್ತಾಳೆ. ಇಲ್ಲಿ ಹೆಚ್ಚು ಧನಾತ್ಮಕವಾದ ಅಂಶವೆಂದರೆ, ಅವಳ ಗಂಡ ಶಾಮು ಅವಳ ನಿರ್ಧಾರವನ್ನು ಅರ್ಥಮಾಡಿಕೊಂಡು ಬೆಂಬಲಿಸುತ್ತಾನೆ ಎಂಬುದು, ಮತ್ತು ಅವಳಿಗೆ ವೈದ್ಯಕೀಯ ಶಿಕ್ಷಣವನ್ನು ಕೊಡಿಸುವ ಜವಾಬ್ದಾರಿಯನ್ನು ನಿರ್ವಹಿಸಲು ಸಿದ್ಧನಾಗುತ್ತಾನೆ.

ಶಾಮು ಹುಟ್ಟು ರೈತ. ಭೂಮಿಯ ಮಗ. ಅವನು ತನ್ನ ಹಳ್ಳಿಯ ಪ್ರತಿಯೊಂದು ಮರ- ಹೂವು- ಹಕ್ಕಿಯನ್ನೂ ಅಪಾರವಾಗಿ ಪ್ರೀತಿಸುತ್ತಾನೆ. ಮೀರಾ ಡಾಕ್ಟರ್ ಆಗುವುದಕ್ಕೇ

ಹುಟ್ಟಿರುವಂತೆಯೇ ಶಾಮು ಕೃಷಿಕನಾಗಲೇ ಹುಟ್ಟಿರುವವ. ಆದ್ದರಿಂದ ಅವರಿಬ್ಬರ ಹೊಂದಾಣಿಕೆ ಸಾಧ್ಯವಾಗದೆ ದಾಂಪತ್ಯ ಮೀರಾಳನ್ನು ಎಷ್ಟೋ ಶಾಮುವನ್ನೂ ಅಷ್ಟೇ ಘಾಸಿಗೊಳಿಸುತ್ತದೆ. ಕಾದಂಬರಿಯ ಕೊನೆ ಹೆಚ್ಚು ಮಾರ್ಮಿಕವಾಗಿ ಇದನ್ನು ಧ್ವನಿಸುವ ಪ್ರಯತ್ನ ಮಾಡುತ್ತದೆ.

"ತನ್ನಿಂದ ಗಂಡನ ಜೀವನ ಹಾಳಾಯಿತು ಎಂದವಳಿಗೆ ಭಾಸವಾಗುತ್ತಿತ್ತು. ಒಬ್ಬರ ಕೈ ಒಬ್ಬರು ಹಿಡಿದು ಇಬ್ಬರ ಬದುಕೂ ವ್ಯರ್ಥವಾಗಿತ್ತು. ಸಾಮರಸ್ಯವಿಲ್ಲದ ಸಂಸಾರ ಇಬ್ಬರನ್ನೂ ಬಲಿ ತೆಗೆದುಕೊಂಡಿತ್ತು." (ತ್ರಿವೇಣಿ : ೧೯೫೩ ; ೨೨೯)

ವ್ಯಾಪಕವಾಗಿ ಗ್ರಾಮೀಣ ಹಾಗೂ ನಗರ ಜೀವನ ಶೈಲಿಗಳ ವೈದೃಶ್ಯವನ್ನು ಚಿತ್ರಿಸುತ್ತಾ, ಈ ವೈದೃಶ್ಯದ ಪರಿಣಾಮವಾಗಿ ದಾಂಪತ್ಯವು ಅನುಭವಿಸುವ ಪರಕೀಯತೆಯ ಸ್ಥಿತಿಯನ್ನು ಪರಿಣಾಮಕಾರಿಯಾಗಿ ಈ ಕೃತಿ ದಾಖಲಿಸುತ್ತದೆ. ಬದುಕಿನ 'ಖಾಸಗೀತನ'ಕ್ಕೆ ಒಗ್ಗಿಕೊಂಡಿರುವ ಮೀರಾ, ಹಳ್ಳಿಗೆ ಕಾಲಿಟ್ಟ ಕೂಡಲೇ 'ಖಾಸಗೀತನ'ದ ಅರಿವೇ ಇಲ್ಲದ ಹಳ್ಳಿಯ ಹೆಂಗಸರು ಅವಳನ್ನು ಮುತ್ತಿಕೊಂಡು, ಅವಳಲ್ಲಿ ವೈಯಕ್ತಿಕ ಪ್ರಶ್ನೆಗಳಿಗೆ ಉತ್ತರ ನಿರೀಕ್ಷಿಸುತ್ತಾರೆ. ಹಳ್ಳಿಯ ವಿದ್ಯುಚ್ಛಕ್ತಿ ಕಾಣದ ದೀಪದ ಬದುಕು, ಎಲ್ಲೆಲ್ಲೂ ಕಂಡುಬರುವ ಮಣ್ಣಿನ ಮನೆಗಳು ಅಲ್ಲದೆ ಮಣ್ಣಿಗೆ ಮೆತ್ತಿಕೊಂಡ ಕೊಳಕು ಎಲ್ಲಕ್ಕಿಂತ ಮಿಗಿಲಾಗಿ ಶಾಮು ಆ ಕೊಳಕು - ಕೊಚ್ಚೆಯಲ್ಲಿ ಅರಾಮವಾಗಿರುವುದನ್ನು ಕಂಡು ಅವಳಿಗೆ ದಿಗ್ಭ್ರಮೆಯಾಗುತ್ತದೆ. ಈ ರೀತಿಯ ಅಸಾಂಗತ್ಯವು ಕಾದಂಬರಿಯುದ್ದಕ್ಕೂ ಪರಿಣಾಮಕಾರಿಯಾಗಿ ದಾಖಲಾಗಿವೆ. ಇದಕ್ಕೆ ಸೂಕ್ತ ನಿದರ್ಶನವಾಗಿ ಶಾಮು ಪ್ರೀತಿಯಿಂದ ಸಾಕುವ ಬಿಳಿಯ ಕರುವಿನ ಪ್ರಕರಣ ಚಿತ್ರಿತವಾಗಿದೆ.

"ಮೀರಾ ಆಕಸ್ಮಾತ್ ಅಲ್ಲಿಗೆ ಬಂದಾಗ ಕರುವನ್ನು ಎತ್ತಿಕೊಂಡು ಬಂದು ಮೀರಾಳ ಕೈಗೆ ಕೊಡಲು ಹೋದ. ಕರುವಿನ ಚೆಲುವಿಗೆ ಮನಸೋತು ಮೀರಾ ಕೈನೀಡಿದಳು. ಕೂಡಲೇ ಕಾಲಿನ ಮೇಲಿದ್ದ ಸೆಗಣಿಯುಂಡೆಯನ್ನೂ, ಬಾಲ, ಪಕ್ಕೆಗೆ ಅಂಟಿಕೊಂಡಿದ್ದ ಗಂಜಲವನ್ನೂ ಕರುವಿನ ಮೈಯಿಂದ ಹೊರಡುತ್ತಿದ್ದ ಸಿನುಗು ವಾಸನೆಯನ್ನೂ ಗಮನಿಸಿ ಅಸಹ್ಯಪಟ್ಟು ತಟ್ಟನೆ ಕೈಹಿಂದಕ್ಕೆ ತೆಗೆದುಕೊಂಡಳು, ಮೀರಾ ಕೈ ಹಿಂದೆಳೆದುಕೊಂಡಿದ್ದರಿಂದ ಕರುದೊಪ್ಪನೆ ನೆಲದ ಮೇಲೆ ಬಿದ್ದಿತು. ತನ್ನ ಮೆಚ್ಚಿನ ಕರು ನೆಲದ ಮೇಲೆ ಬಿದ್ದುದನ್ನು ನೋಡಿ ಶಾಮು ಅಪಚಾರವಾಯಿತೆಂದು ಭಾವಿಸಿದ." (ತ್ರಿವೇಣಿ: ೧೯೫೩: ೯೬)

ಇಲ್ಲಿ ದಂಪತಿಗಳಿಬ್ಬರ ಜೀವನಶೈಲಿಗಳು ಸಂಪೂರ್ಣವಾಗಿ ಭಿನ್ನವಾಗಿರುವುದು ಸ್ಪಷ್ಟವಾಗುತ್ತದೆ. ಅಲ್ಲದೆ, ಅವರಿಬ್ಬರ ನಡುವಿನಲ್ಲಿ ಭಾವನಾತ್ಮಕ, ಸಂವೇದನಾತ್ಮಕ, ವೈಚಾರಿಕ ಭಿನ್ನತೆ ಅಪಾರವಾಗಿದೆ. ಒಬ್ಬೊಬ್ಬರು ಒಂದೊಂದು ಧ್ರುವಗಳು, ವಿರುದ್ಧ ನೆಲೆಗಳು. ಹೊಲಗದ್ದೆಗಳ ಹಾಗೂ ದೈಹಿಕಶ್ರಮದ ಬಗ್ಗೆ ಶಾಮುವಿಗಿರುವ ಪ್ರೀತ್ಯುತ್ಸಾಹಗಳು ಮೀರಾಳಿಗೆ ಅರ್ಥವಾಗುವುದಿಲ್ಲ. ಮೀರಾಳ ಬದುಕಿನ ಮಹತ್ವಾಕಾಂಕ್ಷೆಯ ತುಡಿತವನ್ನು ಶಾಮು ಅರಿಯಲಾರ. ಆದರೆ, ಇಬ್ಬರಿಗೂ ಪರಸ್ಪರರ ಬದುಕಿನಲ್ಲಿ ಆದ ಅನ್ಯಾಯದ ಅರಿವಿದೆ. ಘಟಿಸಿದ ತಪ್ಪಿನ ಕುರಿತು ಅಪಾರವಾದ ಪಶ್ಚಾತ್ತಾಪವಿದೆ. ಪರಿಣಾಮವಾಗಿ ಬಹಳ ಯೋಚಿಸಿ ಇಬ್ಬರೂ 'ದೂರವಿರುವ' ನಿರ್ಧಾರವನ್ನು ಮಾಡುವುದು ಕಂಡು ಬರುತ್ತದೆ. ಇದು ಎರಡು ಮಾನವೀಯ ಹೃದಯವಿರುವ ಆರೋಗ್ಯಪೂರ್ಣ ವ್ಯಕ್ತಿಗಳ ನ್ಯಾಯೋಚಿತ ತೀರ್ಮಾನವಾಗಿ ವ್ಯಕ್ತವಾಗುತ್ತದೆ. ಬದುಕು ಅರ್ಥವನ್ನು

ಪಡೆಯುವುದು, ಗಂಡು - ಹೆಣ್ಣು ತಮ್ಮ ಜೀವನದಲ್ಲಿ ವೈರುಧ್ಯದ ಮುಖಗಳನ್ನು ಪರಸ್ಪರ ದರ್ಶಿಸುವಾಗ 'ಸಂಘರ್ಷದ ಸನ್ನಿವೇಶ'ದಲ್ಲಿ ಮಾತ್ರ ದೇಹವನ್ನು ಮೀರಿದ ತುಡಿತ ಮನಸ್ಸಿಗೆ ಇರುವುದರಿಂದ ದೈಹಿಕ ತೃಪ್ತಿ ಎನ್ನುವ ಅಂಶ ದಾಂಪತ್ಯವನ್ನು ಪಾರ್ಶ್ವಿಕವಾಗಿ ಮಾತ್ರ ಹತೋಟಿಯಲ್ಲಿ ಇಟ್ಟುಕೊಳ್ಳಬಲ್ಲದು. ಮನಸ್ಸು ಬೆರೆತು ದೇಹ ಒಂದಾದರೆ ಮಾತ್ರ ದಾಂಪತ್ಯಕ್ಕೆ ಅರ್ಥವಿರುತ್ತದೆ. ಇಲ್ಲಿ ಸುಖದ ಅನ್ವೇಷಣೆಯಲ್ಲಿ ಮೊದಲು ಪಣಕ್ಕೆ ಒಡ್ಡಬೇಕಾದ ಅಂಶವೆಂದರೆ 'ಹೊಂದಾಣಿಕೆ' (Cordination) ಪರಸ್ಪರ ಸಮಾನ ಸ್ಥಾನಮಾನದಿಂದ ಕಾಣುವ ಇಚ್ಛೆ, ಶಕ್ತಿ ಇದ್ದರೆ ದಾಂಪತ್ಯಕ್ಕೆ ಅರ್ಥ ಬರುತ್ತದೆ. ಅದು ವ್ಯಾಖ್ಯಾನಕ್ಕೆ ಸಿಗುತ್ತದೆ. ಸಮಾಜಶಾಸ್ತ್ರಜ್ಞರಾದ ಪ್ರೊ. ನಂಜಮ್ಮಣ್ಣಿ ಅವರು ಹೇಳುವಂತೆ :

> "ಭಾರತದಲ್ಲಿ ಶೇ ಎಂಬತ್ತರಷ್ಟು ದಂಪತಿಗಳು ಪರಸ್ಪರ ದ್ವೇಷ, ಅಸಮಾಧಾನ, ಹೊಂದಾಣಿಕೆಯ ದೋಷದಿಂದ ಜೀವನವನ್ನು ಮುಗಿಸುತ್ತಾರೆ." (೧೯೭೨ ಪುಟ; ೩೦೧)

'ವಿವಾಹ ವಿಚ್ಛೇದನ'ದಂತಹ ಕಾನೂನು ಸರಳ ಪ್ರಕ್ರಿಯೆಯಾಗಿದ್ದರೆ, ಭಾರತದಲ್ಲಿ ವಿವಾಹ ಜೀವನಕ್ಕೆ ಯಾವ ಬೆಲೆಯೂ ಇರುತ್ತಿರಲಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಂತೆ ಇಲ್ಲಿಯೂ 'ವಿವಾಹ' ತಾತ್ಕಾಲಿಕ ಒಪ್ಪಂದ ಮಾತ್ರವಾಗಿ ಬಿಡುತ್ತಿತ್ತು. ಜೀವಿತಾವಧಿ ಪೂರ್ತಿ ಒಬ್ಬರ ಬದುಕನ್ನು ಮತ್ತೊಬ್ಬರು ನಿಯಂತ್ರಿಸುವಂಥ ಸ್ಥಿತಿ ಭಾರತೀಯ ದಾಂಪತ್ಯ ಚಿತ್ರಣದಲ್ಲಿ ಮಾತ್ರ ವ್ಯಕ್ತವಾಗುತ್ತದೆ. ಈ ನಿಯಂತ್ರಣ ದೈಹಿಕ ಮತ್ತು ಮಾನಸಿಕ ಎರಡು ನೆಲೆಗೆ ಸಂಬಂಧಿಸಿದ್ದಾಗಿರಬಹುದು. ಇದು 'ಅಧಿಕಾರ' ಮತ್ತು 'ಅಧೀನತೆ'ಗೆ ಸಂಬಂಧಿಸಿದ ವಿಚಾರವೂ ಆಗಿರಬಹುದು. ಆದರೆ, ಹೆಂಡತಿಯನ್ನು ವಸ್ತುವಾಗಿ, ಆಸ್ತಿಯಾಗಿ, ಪರಿಭಾವಿಸುವ ಸಮಾಜ, ಅಧಿಕಾರವನ್ನು ಯಜಮಾನನ ನೆಲೆಯಿಂದ ಸ್ಥಾಪಿಸುತ್ತದೆ. ಭೂಮಿ, ಜಾನುವಾರುಗಳನ್ನು ಪಳಗಿಸಿ, ಹಿಡಿತದಲ್ಲಿ ಇಟ್ಟುಕೊಳ್ಳುವಂತೆ ಹೆಂಡತಿಯನ್ನು ನೋಡುವುದು ಧರ್ಮಸಮ್ಮತದ ನೆಲೆಯಲ್ಲಿ ಪ್ರತಿಷ್ಠಾಪಿತವಾಗಿದೆ. ಇದರಿಂದಾಗಿ ಕೊಟ್ಟ ಹೆಣ್ಣು ಹೊರಗಾಗಿ, ಹೆಣ್ಣಿಗೆ ಅಭದ್ರತೆ, ಅಧೀನತೆ, ಅನಿವಾರ್ಯವಾಗಿ ಬಿಡುತ್ತದೆ. ಹೆಂಡತಿ ಎಂದರೆ, 'ಹೆರಲೆಂದೇ' ಇರುವ ಜೀವ. ಅವಳು ತಾಯಿಯಾಗುವುದಕ್ಕೆ ಜನ್ಮತಾಳಿರುವವಳು ಮತ್ತು ಅವಳು ಬದುಕಿನುದ್ದಕ್ಕೂ ತಾಯ್ತನಕ್ಕಾಗಿ ಹಾಗೂ ಮಕ್ಕಳಿಗಾಗಿ ಹಂಬಲಿಸುತ್ತಾಳೆ. ಇಂತಹ ಆದಿಮ 'ಪ್ರತಿಮಾ' ವ್ಯಕ್ತಿತ್ವಕ್ಕಿಂತ ಭಿನ್ನವಾಗಿ ಮೀರಾ ಆಕೆಯ ಪತಿ ತಮಾಷೆಗಾಗಿ, ಆರು ಹೆಣ್ಣು ಮಕ್ಕಳು ಮತ್ತು ಮೂವರು ಗಂಡು ಮಕ್ಕಳನ್ನು ಅಪೇಕ್ಷಿಸುವಾಗ ಪ್ರತಿಕ್ರಿಯಿಸುತ್ತಾಳೆ.

> "ಮಕ್ಕಳೇನು ಆಕಾಶದಿಂದ ಉದುರುತ್ತವೆ ಅಂತ ಭಾವಿಸಿದಿರೇನು? ಗಂಡಸರಿಗೆ ಮಗುವಿನ ಬೆಲೆ ತಿಳಿದಿದೆಯೇನು? ಒಂಭತ್ತು ತಿಂಗಳು ಹೊತ್ತು ಹೆರುವುದು ಸಾಮಾನ್ಯವೇ? ಹೆಣ್ಣು ತನ್ನ ರಕ್ತಮಾಂಸವನ್ನು ಹಂಚಬೇಕು. ಕೆಲವು ಬಾರಿ ತನ್ನ ಪ್ರಾಣವನ್ನೇ ಪಣವಾಗಿಡುವ ಸಂದರ್ಭವೂ ಬರುತ್ತದೆ. ತನ್ನ ಅಲ್ಪ ಪಾತ್ರವನ್ನು ಮುಗಿಸಿ ಪ್ರತಿಯೊಂದು ಜವಾಬ್ದಾರಿಯೂ ಹೆಣ್ಣಿನ ಮೇಲಿದ್ದರೂ ಕರುಣೆಯಿಲ್ಲದೆ ರಕ್ಕಸನಂತೆ ವರ್ತಿಸುತ್ತಾನೆ ಗಂಡು. ಒಂಭತ್ತು ಮಕ್ಕಳನ್ನು ಹೆರುವುದರಲ್ಲಿ ನನ್ನ ಸಮಾಧಿ ಸಿದ್ಧವಾದಂತೆಯೇ ಸರಿ." (ತ್ರಿವೇಣಿ : ೧೯೫೩ ; ಪು ೧೭೪)

ಈ ಅನಿರೀಕ್ಷಿತ ಆವೇಶದಿಂದ ಶಾಮು ದಿಗ್ಭ್ರಮೆಗೊಳ್ಳುತ್ತಾನೆ. ಸ್ತ್ರೀಯರೆಲ್ಲರೂ ಮಕ್ಕಳನ್ನು ಪ್ರೀತಿಸುತ್ತಾರೆಂಬುದು ಅವನ ಎಣಿಕೆ (ಹೆಚ್ಚಿನ ಪುರುಷರು ಯೋಚಿಸುವಂತೆ). ಆದ್ದರಿಂದ ತನಗೆ ಮಕ್ಕಳಾಗುವುದನ್ನು ಮೀರಾ ಅಪೇಕ್ಷಿಸುವುದಿಲ್ಲ ಎಂದು ಅವನಿಗೆ ಆಶ್ಚರ್ಯವಾಗುತ್ತದೆ.

> "ಪ್ರಸವ ವೇದನೆಯ ಭಯಾನಕ ಅನುಭವ ಕೊಂಚವಾದರೂ ಪುರುಷರಿಗಿದ್ದರೆ! ಎಂದು ಮೀರಾ ನಿಟ್ಟುಸಿರು ಬಿಡುತ್ತಾಳೆ."(ತ್ರಿವೇಣಿ : ೧೯೫೩ ; ಪು ೧೬೪)

ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳುವುದರಲ್ಲಿ ಇಬ್ಬರೂ ಸಂಪೂರ್ಣವಾಗಿ ಸೋಲುತ್ತಾರೆ. 'ಅಪಜಯ' ಇವರಿಬ್ಬರ ದಾಂಪತ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ವಿಷಮ ದಾಂಪತ್ಯವನ್ನು ಅತ್ಯಂತ ವಸ್ತುನಿಷ್ಠವಾಗಿ ಗಂಡ-ಹೆಂಡತಿ ಇಬ್ಬರಿಗೂ ನ್ಯಾಯೋಚಿತವಾದ ವ್ಯಕ್ತಿತ್ವವನ್ನು ಒದಗಿಸುವ ಕಾದಂಬರಿಯಾಗಿ 'ಅಪಸ್ವರ' ಕೃತಿ ಕಂಡುಬರುತ್ತದೆ. ಈ ಕಾದಂಬರಿಯು ಗಂಡ ಮತ್ತು ಹೆಂಡತಿ ಇಬ್ಬರನ್ನೂ ಸಮಾನ ದುಃಖಿಗಳನ್ನಾಗಿ ಚಿತ್ರಿಸುತ್ತದೆ.

ದಾಂಪತ್ಯದಲ್ಲಿ ಮುಖ್ಯ ಪಾತ್ರವಹಿಸುವ ದೇಹ-ಮನಸ್ಸುಗಳ ಸಮಾಗಮ ಎರಡು ವ್ಯಕ್ತಿಗಳ ಬದುಕಿನಲ್ಲಿ ಅರ್ಥಪೂರ್ಣತೆಯನ್ನು ಉಂಟುಮಾಡುತ್ತದೆ. ಅಪರಿಚಿತ ವ್ಯಕ್ತಿಗಳು ಒಬ್ಬರ ಮನಸ್ಸನ್ನು ಒಬ್ಬರು ಅರ್ಥಮಾಡಿಕೊಳ್ಳಲು ಹಲವು ವರ್ಷಗಳು ಬೇಕಾಗಬಹುದು. ಆದರೆ, ಲೈಂಗಿಕತೆ ಎಂಬುದು ಹಸಿವು, ನೀರಡಿಕೆಯಂತಹ ಪ್ರಕ್ರಿಯೆ ಎಂದು ಮನಃಶಾಸ್ತ್ರ, ಮಾನವಶಾಸ್ತ್ರಗಳು ಸ್ಥಾಪಿಸುವ ನೆಲೆಯಲ್ಲಿ ಗಂಡ ಹೆಂಡತಿಯರನ್ನು ಕೆಲವು ದಿನಗಳಲ್ಲಿ ಅಥವಾ ಮದುವೆಯಾದ ದಿನದಿಂದ ಬೆಸೆಯುತ್ತದೆ. ಪರಸ್ಪರ ಒಬ್ಬರನ್ನು ಒಬ್ಬರು ಗೆಲ್ಲಲು, ಅದು ಉತ್ತಮ ಅವಕಾಶವೂ ಆಗಬಹುದು. ಇಲ್ಲವೆ ಮನಸ್ಸನ್ನು ಒಡೆಯಲು ಲೈಂಗಿಕ ಜೀವನ, ಅಭಿರುಚಿ, ಕಾರಣವೂ ಆಗಬಹುದು. ಭಾರತೀಯ ವಿವಾಹ ಸಂದರ್ಭದಲ್ಲಿ ದಾಂಪತ್ಯ ಜೀವನದಲ್ಲಿ ಲೈಂಗಿಕತೆ ಅತಿ ಮುಖ್ಯವಾದ ಪಾತ್ರವಹಿಸುವ ಅಂಶವೆಂದು ವಿಕಾಸಮನಃಶಾಸ್ತ್ರ ನಿರೂಪಿಸುತ್ತದೆ. ಇದರಲ್ಲಿ ಹೆಣ್ಣು ಸದಾ ಗಂಡಿಗೆ ಅಧೀನವಾಗಿರಬೇಕು ಎಂದು ಬಯಸುತ್ತದೆ ಸಮಾಜ. **ಕೀಲುಗೊಂಬೆ** ದಾಂಪತ್ಯದಲ್ಲಿನ ಲೈಂಗಿಕ ದೌರ್ಜನ್ಯವನ್ನು ಹಲವು ಆಯಾಮಗಳಿಂದ ತೆರೆದಿಡುತ್ತದೆ. ಮದುವೆಯಾದ ನಂತರ ಗಂಡನ ಬಳಿಗೆ ರಾತ್ರಿ ಹೋಗಲು ತುಂಬಾ ಹೆದರುತ್ತಿದ್ದ ಸೀತೆಗೆ ಅವಳ ತಾಯಿ ಮನವೊಲಿಸುವಂತೆ ಹೇಳುತ್ತಾಳೆ:

> "ಸೀತೂ, ಗಂಡಾಂದ್ರೆ ಪ್ರತ್ಯಕ್ಷ ದೇವರು - ತಿಳಿಯಿತೇ? ಹೂಂ ಮತ್ತೆ ನಿನ್ನ ಗಂಡ ಹೇಳಿದ ಹಾಗೆ ಕೇಳು. ಮೊಂಡುತನ, ಹಟ ಮಾಡಬೇಡ. ನಾನು ಯಾವಾಗಲಾದರೂ ಹಟ ಮಾಡಿರೋದನ್ನ ನೀನು ನೋಡಿದೀಯಾಮ್ಮ? ಸೀತೆಗೆ ತಾಯಿಯ ಮಾತುಗಳು ಅರ್ಥವಾಗಿರಲಿಲ್ಲ. ಆದರೂ ಗಂಡನ ಮಾತಿಗೆ ಎದುರಾಡಬೇಡ. ಗಂಡನ ಸೇವೆಯಿಂದ ದೇವರನ್ನು ಮೆಚ್ಚಿಸಬಹುದು. ಹೆಣ್ಣಿಗೆ ಪತಿಯೇ ಪ್ರತ್ಯಕ್ಷ ದೈವ ಅನ್ನೋದನ್ನ ಮರೆಯಬೇಡ.".
> (ತ್ರಿವೇಣಿ: ೧೯೫೭ ; ಪುಟ ೩೯-೪೦)

ಇಂತಹ ತರಬೇತಿ ಹಾಗೂ ಪ್ರೋತ್ಸಾಹ ಪಡೆದ ಸೀತಾ ಗಂಡನ ಕೋಣೆಯನ್ನು ಪ್ರವೇಶಿಸಿದ ಕೂಡಲೇ ಅವನ ಕ್ರೂರ ಆಕ್ರಮಣಕ್ಕೊಳಗಾಗುತ್ತಾಳೆ. ಭೀತಿಯಿಂದ ಗಡಗಡನೆ ನಡುಗುವ ಸೀತಾ ರಾತ್ರಿಯಲ್ಲಿ ಕೋಣೆಯಿಂದ ಹೊರಗೋಡಿ ಬಂದು ತಾಯಿಯ ಬಳಿ ಮಲಗುತ್ತಾಳೆ. ಈ ಸಂಗತಿಯನ್ನು ಕೇಳಿದ ನರಸಿಂಹಯ್ಯನ ತಾಯಿ ತನ್ನ ಅನುಭವವನ್ನು ಸ್ಮರಿಸುತ್ತಾಳೆ. :

"ಮೊದಲ ರಾತ್ರಿ ತಾನು ಹಟಮಾಡಿ ಯಜಮಾನರಿಂದ ಹೊಡೆತ ತಿಂದಿದ್ದೆ. ಆಗ ನನ್ನ ಬಳೆಗಳೆಲ್ಲಾ ಒಡೆದು ಹೋಗಿದ್ದವು." (ತ್ರಿವೇಣಿ : ೧೯೫೬; ಪುಟ ೪೮.)

ಪೀಳಿಗೆಯಿಂದ ಪೀಳಿಗೆಗೆ ಸ್ತ್ರೀಯರೊಡನೆ ಇದೇ ರೀತಿ ಅಮಾನುಷವಾಗಿ ವರ್ತಿಸಲಾಗುತ್ತಿದೆ, ಎನ್ನುವುದನ್ನು ಮೇಲಿನ ಮಾತು ಧ್ವನಿಸುತ್ತದೆ. ತ್ರಿವೇಣಿ ಅವರು ಇಂತಹ ಸ್ಥಿತಿಯೊಂದಕ್ಕೆ ಪರ್ಯಾಯ ಮಾದರಿಯೊಂದನ್ನು ಅದೇ ಪಠ್ಯದ ಅಂತರ್ಯದಲ್ಲೇ ರೂಪಿಸುವುದು ವ್ಯಕ್ತವಾಗುತ್ತದೆ. ಆಸ್ಪತ್ರೆಯ ಸನ್ನಿವೇಶದಲ್ಲಿ ಸೀತಾಳ ದಾಂಪತ್ಯ ಜೀವನಕ್ಕೆ ಸೂಕ್ತ ವೈದೃಶ್ಯವನ್ನು ಒದಗಿಸುವುದು ಮಧುರವಾಣಿಯ ದಾಂಪತ್ಯ ಜೀವನದ ಮೂಲಕ. ತನಗೆ ಯಾವಾಗ ಮತ್ತು ಎಷ್ಟು ಮಕ್ಕಳಾಗಬೇಕೆಂದು ನಿರ್ಧರಿಸುವ ಸ್ವಾತಂತ್ರ್ಯದ ಜೊತೆಗೆ ಅವಳ ಮತ್ತು ಅವಳ ಗಂಡನ ಸಂಬಂಧ ಯಜಮಾನ ಆಳು ಸಂಬಂಧವಾಗಿರದೆ, ಸ್ನೇಹಿತರಂತೆ ಪರಸ್ಪರ ವ್ಯವಹರಿಸುವುದನ್ನು ಸೀತಾ ಗಮನಿಸುತ್ತಾಳೆ. ಮಧುರವಾಣಿ ಮತ್ತು ಅವಳ ಗಂಡ ಇಬ್ಬರೂ ಒಬ್ಬರನ್ನೊಬ್ಬರು ಹಾಸ್ಯ ಮಾಡುತ್ತಾರೆ, ರೇಗಿಸುತ್ತಾರೆ, ಮತ್ತು ಗೌರವಿಸುತ್ತಾರೆ. ಸಂಬಂಧವೆನ್ನುವುದು ಇಂತಹ 'ಸಮಾನ ಗೌರವ'ಗಳಿಂದಲೇ ಸೃಷ್ಟಿಯಾಗಿರುತ್ತದೆ. ಕೊಡುವ ಮತ್ತು ತೆಗೆದುಕೊಳ್ಳುವ ಕಾರ್ಯಗಳಲ್ಲಿ ಗೌರವ, ನಂಬಿಕೆ, ಪ್ರೀತಿಯಂಥ, 'ಭಾವನಾತ್ಮಕ' ವಿಚಾರವು ದಾಂಪತ್ಯವನ್ನು ಭದ್ರಪಡಿಸುತ್ತದೆ ಮಾತ್ರವಲ್ಲ ಉಳಿಸುತ್ತದೆ. ಹಲವು ಅರ್ಥದಲ್ಲಿ ದಾಂಪತ್ಯವೆಂಬುದು ಕೂಡ ಕೂಡುಕಟ್ಟಿನ ಬದುಕಾಗಿದೆ. ಇದನ್ನು ಕೀಲುಗೊಂಬೆ ಕಾದಂಬರಿಯ ಅಂತರ್ಯದಲ್ಲಿ ಸೂಕ್ಷ್ಮವಾಗಿಯಷ್ಟೇ ಚಿತ್ರಿಸುವುದು ತ್ರಿವೇಣಿಯವರಿಗೆ ಸಾಧ್ಯವಾಗಿದೆ.

**ಇಂದಿರಾ.ಎಂ.ಕೆ. ಅವರ ಕಾದಂಬರಿಯಲ್ಲಿ ಪ್ರಕಟಗೊಳ್ಳುವ ದಾಂಪತ್ಯದ ಸ್ವರೂಪ :**

ಜೀವನದಲ್ಲಿ ವಿವಾಹ ಮತ್ತು ಅದು ವ್ಯಾಪಿಸುವ ದೀರ್ಘ ಬದುಕಿನ ಹಲವಾರು ವಿನ್ಯಾಸಗಳ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಇಂದಿರಾ ಅವರ ಕಾದಂಬರಿಗಳು ತೆರೆದಿಡುತ್ತವೆ. ಜೀವನದಲ್ಲಿ ವೈವಾಹಿಕ ಬದುಕು ತೆರೆದುಕೊಳ್ಳುವ ಬಗೆಯೇ ಭಾರತೀಯ ಸಂದರ್ಭದ ಚೌಕಟ್ಟಿನಲ್ಲಿ ಅನಿರೀಕ್ಷಿತ. ವಿವಾಹವನ್ನು ಮತ್ತು ಅದು ಹೆಣೆದುಕೊಳ್ಳುವ ಬದುಕನ್ನು ವಿಧಿವಾದಕ್ಕೆ ಕಲ್ಪಿಸಿ ಹೇಳುವುದೇ ಹೆಚ್ಚು. ಪರಸ್ಪರ ಅರ್ಥಮಾಡಿಕೊಳ್ಳುವ ಗಂಡ- ಹೆಂಡತಿಯರು ಇಲ್ಲಿ ಅತಿ ವಿರಳ. ಇಲ್ಲಿ ಹೊಸ್ತಿಲ ಹೊರಗಿನ ಜಗತ್ತನ್ನು ಕಾಣಲಾಗದ ಸ್ತ್ರೀಯರು ತಮ್ಮ ತಮ್ಮ ಗಂಡಂದಿರ ಪ್ರಪಂಚದ ವಿವರಗಳನ್ನೆಲ್ಲಾ ಅರಿಯಲಾರರು. ಹಾಗೆ ಸ್ತ್ರೀಯರ ಜೀವನ ನಾಲ್ಕು ಗೋಡೆಗಳ ನಡುವೆ ಹೇಗೆ ನಡೆಯುತ್ತಿವೆ ಎಂಬುದು ಕೂಡ ಪುರುಷರ ಗಮನಕ್ಕೆ ಬಾರದ, ಬಂದರೂ ಉಪೇಕ್ಷಿಸುವ ಸಂಗತಿಗಳಾಗಿರುತ್ತವೆ. ಇಂದಿರಾ.ಎಂ.ಕೆ. ಅವರು ದಾಂಪತ್ಯದ ಸ್ವರೂಪವನ್ನು ಹಲವು ಆಯಾಮಗಳಿಂದ ಚಿತ್ರಿಸಿದ್ದಾರೆ. **ತುಂಗಭದ್ರ, ಸದಾನಂದ, ಹೆಣ್ಣಿನ ಆಕಾಂಕ್ಷೆ, ಗಿರಿಬಾಲೆ, ಮನ ತುಂಬಿದ ಮಡದಿ, ಸುಖಾಂತ, ತಗ್ಗಿನ ಮನೆ ಸೀತೆ**ಯಲ್ಲಿ ಹೊಂದಿಬಾಳುವ ಗಂಡ- ಹೆಂಡತಿಯರ ಪರಿಪೂರ್ಣ ಬದುಕಿನ ಚಿತ್ರಗಳು ಇವೆ. ವೈವಾಹಿಕ ಬದುಕು ಹೇಗೆ ವ್ಯಕ್ತಿಗಳ ಸಾಫಲ್ಯತೆಗೆ ಕಾರಣವಾಗುತ್ತವೆ ಎಂಬುದನ್ನು ಈ ಕಾದಂಬರಿಗಳ ವಿವರಗಳು ಹಂತ ಹಂತವಾಗಿ ತೆರೆದಿಡುತ್ತವೆ. ತುಂಗಭದ್ರ ಇಲ್ಲಿ ಹೆಚ್ಚು ವಿಶಿಷ್ಟತೆಯನ್ನು ಸಾಧಿಸಿದ ಕೃತಿ.

"ಮುದ್ದುರಾಮನನ್ನು ಸಣ್ಣ ವಯಸ್ಸಿಗೆ ಮದುವೆಯಾದ ಕೃಷ್ಣವೇಣಿಗೆ ಅವನ ಪೂರ್ಣ ಜಗತ್ತಿನ ಅರಿವಿರುತ್ತದೆ. ಆತನನ್ನೇ ಆಶ್ರಯಿಸಿ ಬೆಳೆದು ದೊಡ್ಡವರಾದ ಮಂದಾಕಿನಿ ಹಾಗೂ ಕುರುಡಿಯರಾದ ತುಂಗ-ಭದ್ರಯರನ್ನು ಮುದ್ದುರಾಮನೇ ಮದುವೆಯಾಗಬೇಕೆಂಬ, ಅಪೇಕ್ಷೆಯನ್ನು ಕೃಷ್ಣವೇಣಿ ಮುಂದಿಡುತ್ತಾಳೆ. 'ತುಂಗಭದ್ರ'ದಲ್ಲಿ ಬದುಕು ಎಲ್ಲಕ್ಕಿಂತ ಮುಖ್ಯವೆಂದು ತಿಳಿಯುವ ನೋಟವಿದೆಯೆಂದರೂ ಇದು ಹೆಣ್ಣು ಮಕ್ಕಳಿಗೆ ಮಾತ್ರ ವೇದ್ಯವಾಗುವ ಜೀವನ ದರ್ಶನ". (ಕುರ್ತಕೋಟಿ ಕೀರ್ತಿನಾಥ: ೧೯೩೦;೨೧)

ಪರಂಪರಾಗತವಾದ ಪಿತೃಪ್ರಾಧಾನ್ಯದ ಮೌಲ್ಯಗಳನ್ನು ಅರಗಿಸಿಕೊಂಡ ವೈವಾಹಿಕ ಬದುಕಿನಲ್ಲಿ ಟೈಫಾಯ್ಡ್ ಸೋಂಕಿನಿಂದ ಮರಣಹೊಂದುವ ಕೃಷ್ಣವೇಣಿ, ಸಾಯುವ ಮೊದಲು ತುಂಗಭದ್ರೆ, ಮಂದಾಕಿನಿಯರ ಕೈಹಿಡಿಯುವಂತೆ ಮುದ್ದುರಾಮನಿಂದ 'ಭಾಷೆ'ತೆಗೆದುಕೊಳ್ಳುತ್ತಾಳೆ. ಬದುಕಿನ ಹೊಣೆಯನ್ನರಿತ ಮುದ್ದುರಾಮ ಆ ಮೂರು ಸೋದರಿಯರನ್ನು ಮದುವೆಯಾಗುವುದರ ಮೂಲಕ ಅವರಿಗೂ 'ವಿವೇಕಯುತ' ಬದುಕಿನ ದಾರಿ ತೋರಿಸುತ್ತಾನೆಂಬ ಉದಾರನೆಲೆಯಲ್ಲಿ ಅವನ ಕೃತ್ಯವು ಮಾನ್ಯತೆಯನ್ನು ಪಡೆಯುತ್ತದೆ. ಹಳೆಯ ಕಾಲದ ಬದುಕಿನ ಯಥಾವತ್ತಾದ ಚಿತ್ರಣವಷ್ಟನ್ನೆ ಮುಖ್ಯವಾಗಿಟ್ಟುಕೊಂಡದ್ದರಿಂದ - ಆ ಹಳೆಯ ಮೌಲ್ಯಗಳಲ್ಲಿ ಇರಬಹುದಾದ ಮಾನವೀಯ ಅನುಕಂಪವನ್ನು ಗುರುತಿಸಲು ಬಯಸುವುದು ಇಲ್ಲಿ ಸ್ಪಷ್ಟ. ಆದರೆ ತುಂಗಭದ್ರೆಯರ, ಮಂದಾಕಿನಿಯಂಥವರ ಸಮಸ್ಯೆಗಳಿಗೆ ಪಠ್ಯದಲ್ಲಿನ ಪರಿಹಾರ ವಾಸ್ತವದ ಪರಿಹಾರವೇ? ಎಂಬ ಪ್ರಶ್ನೆಯ ನೆಲೆಯಲ್ಲಿ ಯೋಚಿಸುವಾಗ ಇದರ ಮಿತಿ ಸ್ಪಷ್ಟವಾಗುತ್ತದೆ. ಸಾಂಸಾರಿಕ ಬದುಕಿನ ಸೀಮಿತ ವಿವರಗಳೇ ಮತ್ತೆ ಮತ್ತೆ ತಾಳ್ಮೆ, ಸಹಿಷ್ಣುತೆಗಳ ಪ್ರತಿರೂಪವೆನಿಸಿದ ಸ್ತ್ರೀತ್ವದ ಪ್ರತೀಕಗಳನ್ನು ನಿಖರಗೊಳಿಸುತ್ತವೆ. 'ಸದಾನಂದ'ದ ರಾಜು ಗೌರಿಯನ್ನು, ಸದಾನಂದ ಕಮಲೆಯನ್ನು ಮದುವೆಯಾಗುವುದು ಗೌರಿ ಕಮಲೆಯರ ಬದುಕುಗಳಿಗೆ ವಿವಾಹವೊಂದೇ ಪರಿಹಾರ ಎಂಬ ಕಾರಣದಿಂದ. ವೈವಾಹಿಕ ಬದುಕೇ ಹೆಣ್ಣಿನ ಅಸ್ತಿತ್ವದ ಸಾರ್ಥಕ ಸ್ಥಿತಿ ಎಂದು ನಂಬಿರುವ ಸಮಾಜದ ಪುರುಷಶಾಹಿ ಧೋರಣೆಯನ್ನೇ ಇದು ಎತ್ತಿಹಿಡಿಯುತ್ತದೆ. ವೈವಾಹಿಕ ಬದುಕಿನಲ್ಲಿ ಮೂರ್ತಿ, ರಾಜು, ಸದಾನಂದ, ರಘು, ಮುದ್ದುರಾಮ ಇಂತಹ ಪ್ರಗತಿಪರ ಮನಸ್ಸುಗಳು ಹೆಣ್ಣನ್ನು ಅರ್ಥಮಾಡಿಕೊಳ್ಳುವ ನೆಲೆ 'ಆಶ್ರಯದಾತ'ರಾಗಿ ಪಠ್ಯದ ಒಳಗೆ ಬದುಕಿನ ಯಾವುದೇ ನಿರ್ಣಯ, ಕಾರ್ಯಸಾಧನೆಗಳಿಗೆ ತೊಡಗಬಲ್ಲ ಕ್ರಿಯಾಶೀಲ ವ್ಯಕ್ತಿತ್ವ ಸ್ತ್ರೀಯರಲ್ಲಿ ಇಲ್ಲ. ಗೌರಿ - ಕಮಲೆ, ಕೃಷ್ಣವೇಣಿ, ತುಂಗೆ, ಭದ್ರೆ, ಮಂದಾಕಿನಿಯರು ಸ್ವತಂತ್ರರಲ್ಲ. ಇವರೆಲ್ಲ ಬದುಕು ತಂದೊಡ್ಡುವ ದುಃಖ, ದುಗುಡ, ವ್ಯಂಗ್ಯ, ವಿಕೃತಿ, ದುರ್ದೈವಗಳೆದುರು ತಮ್ಮ ಕರುಳ ತುಡಿತ, ಸ್ನೇಹ, ಪ್ರೇಮ, ಸೈರಣೆ, ಕರುಣೆಗಳನ್ನು ಪಣವೊಡ್ಡಿ ಗೆದ್ದಂತೆ ಚಿತ್ರಿತರಾಗುತ್ತಾರೆ. ಇವರ ನಿತ್ಯ ಸ್ಥಿರತೆಯ ಆಳದಲ್ಲಿ ಸಾಂಪ್ರದಾಯಿಕ ಸ್ತ್ರೀ ಮೌಲ್ಯಗಳು ಕೆಲಸಮಾಡುತ್ತವೆ.

"ಇಡೀ ಹಳ್ಳಿ, ಅಥವಾ ಸಮುದಾಯ ಅಥವಾ ಕುಟುಂಬ, ತಲೆಮಾರುಗಳಲ್ಲಿ ಸ್ಥಿತ್ಯಂತರದಿಂದಾಗಿ ತುಮುಲಗೊಂದಲಗಳಿಗೆ ಒಳಗಾಗಬಹುದು. ಆದರೆ ಈ ಹೆಂಗಸರು ಮಾತ್ರ ಆ ಎಲ್ಲ ಗೊಂದಲಗಳ ನಿವಾರಕವಾದ ಸ್ಥಿರತೆಯ ಪ್ರತೀಕವಾಗಿ ಉಳಿಸಲ್ಪಡುತ್ತಾರೆ." ಎಂಬ ಸುಮಿತ್ರಾ ಬಾಯಿಯರವರ ಅಭಿಪ್ರಾಯ (ಪಾರ್ವತಿ ಎಚ್.ಎಸ್. (ಸಂ.) : ೧೯೯೧ ;೨೪೦) ಈ ಹಿನ್ನೆಲೆಯಿಂದ ಗಮನಾರ್ಹ.

**ಚಿದ್ವಿಲಾಸ, ಫಣಿಯಮ್ಮ, ಗೆಜ್ಜೆಪೂಜೆ, ತಗ್ಗಿನ ಮನೆಯಸೀತೆ** ಈ ಕಾದಂಬರಿಗಳು ಚಿತ್ರಿಸುವ ವೈವಾಹಿಕ ಜೀವನದ ಸವಾಲುಗಳು - ಸಮಸ್ಯೆಗಳು ವಿವಿಧ ಮೂಲಗಳಿಂದ ಗಮನಾರ್ಹ. ವೇಶ್ಯೆ, ವಿಧವೆ, ನಿರಾಶ್ರಿತ ಒಂಟಿ ಹೆಣ್ಣಿನ ಜೀವನ ಇಂತಹ ಬದುಕನ್ನು ಬದುಕುವ ವ್ಯಕ್ತಿಗಳ ಅನುಭವ ಸಂಕೀರ್ಣತೆಗಳನ್ನು, ಜೀವನ ಮೌಲ್ಯಗಳನ್ನು ವೈವಾಹಿಕ ಸಂಬಂಧಗಳ ನೆಲೆಯಿಂದ ಇಲ್ಲಿ ದಾಖಲಿಸಲಾಗಿದೆ. 'ಗೆಜ್ಜೆಪೂಜೆ' ಒಂದು ಸಂಪ್ರದಾಯ. ಪುರುಷ ಪ್ರಧಾನ ಸಮಾಜ ಸ್ತ್ರೀಯರ ದೇಹವನ್ನು ಪರಿಕಲ್ಪಿಸುವುದಕ್ಕೆ ಇಂತಹ ಆಚರಣೆಗಳು ಸೂಕ್ತ 'ಭಾಷ್ಯ'ವಾಗಿದೆ. ವೇಶ್ಯಾ ಸಮಸ್ಯೆಯ ಬಗ್ಗೆ ಗಂಭೀರವಾದ ಚರ್ಚೆ-ತೀರ್ಮಾನಗಳು ಇದರಲ್ಲಿ ವ್ಯಕ್ತವಾಗುವುದಿಲ್ಲ. ಆದರೆ ಪರಂಪರಾಗತ ಮೌಲ್ಯಗಳನ್ನು ಮತ್ತೆ ಮತ್ತೆ ಗಂಡು-ಹೆಣ್ಣಿನ ಸಂಬಂಧಗಳಲ್ಲಿ ಸ್ಥಾಪಿಸಲು ವಿಪುಲವಾದ ಅವಕಾಶಗಳನ್ನು ಕಲ್ಪಿಸಲಾಗಿದೆ. ಬಾಲಕಿ ಚಂದ್ರಾ ಶಾಲೆಗೆ ಸೇರುವ ಸನ್ನಿವೇಶದಲ್ಲಿ ಅರ್ಜಿ ಫಾರಂ ತುಂಬುವಾಗ ತಂದೆಯ ಹೆಸರು ಹೇಳಬೇಕಾದಾಗ ಆಗುವ ತಳಮಳ,

> "ಪುಟ್ಟ ವಿದ್ಯಾರ್ಥಿನಿಯೊಬ್ಬಳು 'ಇವರು ಸೂಳೆಯರು' ಎಂದು ಬಿಡುತ್ತಾಳೆ. ಆ ಬಗ್ಗೆ ಮುಖ್ಯೋಪಾಧ್ಯಾಯರು - ಅಧ್ಯಾಪಕಿಯ ನಡುವೆ ಚರ್ಚೆ ನಡೆಯುತ್ತದೆ. ಅಧ್ಯಾಪಕಿಗೆ ಹುಡುಗಿಯನ್ನು ನೋಡಿದಾಗ ವೇಶ್ಯೆಯ ಲಕ್ಷಣಗಳೇ ಕಾಣುತ್ತವಂತೆ! ಓರೆಗಟ್ಟಿನಿಂದ ಚಂದ್ರಾಳ ಮುಖ ನೋಡಿದಾಗ ಆಕೆಗೆ ನೀಲ ಮಣಿಯಂತಹ ಮನಮೋಹಕ ಕಣ್ಣುಗಳು; ಚುಂಬನಕ್ಕೆ ಆಹ್ವಾನಕೊಡುವ ಮುದ್ದು ತುಟಿಗಳು; ಹುಡುಗಿಯ ಲೋಲಾಕಿನಂತೆಯೇ ಹಣೆಯ ಮೇಲೆ ನರ್ತಿಸುವ ಕುರುಳು; ಸ್ವಲ್ಪ ದೊಡ್ಡವೆನಿಸಿದರೂ ಜಗನ್ಮೋಹಕ ನಗೆಯನ್ನು ಚೆಲ್ಲುವ ಹಲ್ಲುಗಳು... ಕಂಡು.. ಅಂತೂ ವೇಶ್ಯಾ ಲಕ್ಷಣಗಳೆಲ್ಲವೂ ಇವೆ. ಯುವತಿಯಾದರೆ ಹೇಗಾಗಬಹುದೆಂಬ ಕಲ್ಪನೆ ಅವರ ಚಿತ್ತವನ್ನು ಕಲಕಿತು..." (ತ್ರಿವೇಣಿ : ೧೯೬೬ ; ಪುಟ ೨೯)

'ಸೂಳೆ'ಯ ಹುಟ್ಟು ಪುರುಷಶಾಹಿ ಸಮಾಜದ ಮನಸ್ಸಿಗೆ ಸಂಬಂಧಿಸಿದ್ದು ಎಂಬುದು ಇಲ್ಲಿ ಸ್ಪಷ್ಟ. ನೋಡುವ ಕಣ್ಣು, ಗ್ರಹಿಸುವ ಮನಸ್ಸಿನ ಸಂಸ್ಕಾರ, ವ್ಯಕ್ತಿಗಳ ಭಾವನೆಗಳಲ್ಲಿ, ಭಾಷೆಗಳಲ್ಲಿ ವ್ಯಕ್ತವಾಗುತ್ತವೆ. ಕಾದಂಬರಿಯ ಬಹುತೇಕ ಸನ್ನಿವೇಶಗಳಲ್ಲಿ 'ಸೂಳೆ' ಶಬ್ದದ ಬಳಕೆ ಅಷ್ಟೇನೂ ಹಿತವಲ್ಲದ ರೀತಿಯಲ್ಲಿ ಪ್ರಸ್ತಾಪವಾಗುತ್ತಲೇ ಹೋಗುತ್ತದೆ. ಆ ಬಗ್ಗೆ ಚರ್ಚಿಸುವ ಎಲ್ಲ ಪಾತ್ರಗಳೂ ಚಂದ್ರಾಳ ಪ್ರತೀ ಚಲನವಲನಗಳಲ್ಲೂ 'ಸೂಳೆ'ಯ ಲಕ್ಷಣಗಳನ್ನು ಹುಡುಕಿ ಬಾಯಿ ಚಪಲ ತೀರಿಸಿಕೊಳ್ಳುತ್ತಿರುತ್ತವೆ.

> "ಆ ಹುಡುಗೀನ್ನ ನೋಡಿದ ಕೂಡ್ಲೆ ಮೋಹಿನಿಯ ಜ್ಞಾಪಕ ಬರುತ್ತೆ ಎಂದ ಅಜ್ಜಿಗೆ ಉತ್ತರಿಸಿದ ಆಕೆಯ ಮಗಳು ತಂಗಮ್ಮ ಸೈ ಈಗ ಊರ್ತುಂಬಾ ಮೋಹಿನೀರೇ... ಅಂದ್ರೆ ನೀವಂದ್ಹಾಗೆ ಈ ರೂಪು ಮಾತ್ರ ಯಾರ್ಲೂ ಇಲ್ಲ ನೋಡಿ, ಆ ಜಾತಿಗೆ ತಕ್ಕಾಗಿ ಅದೆಲ್ಲಬರುತ್ತೊ ಈ ಹಾಳಾದ ರೂಪು. ಅಷ್ಟಲ್ದೆ ಗಂಡಸ್ರೆಲ್ಲ ಹೋಗಿ ಹಳ್ಳಕ್ಕಿದ್ದಾರಾ?". (ತ್ರಿವೇಣಿ : ೧೯೬೬ ; ಪುಟ ೮೦)

ಪಾತ್ರಗಳ ಇಂತಹ ಜಿಜ್ಞಾಸೆ. ಪರಂಪರೆಯ ಜೊತೆಗೆ ಯಾವುದೇ ಸಂಘರ್ಷಕ್ಕೆ ಎಡೆಯಾಗದಂತೆ ಕಾಯುವುದು ಸ್ಪಷ್ಟವಾಗುತ್ತದೆ. ವಿವಾಹವನ್ನು ಇಂತಹ ವರ್ಗದ ಜನತೆಗೆ ಮರೀಚಿಕೆಯಾಗಿಸುತ್ತವೆ. ವಿವಾಹದ ಅಪೇಕ್ಷೆ ಇರುವ ಚಂದ್ರಾ ವೇಶ್ಯಾವೃತ್ತಿ ಸ್ವೀಕರಿಸಲು ಒಪ್ಪದೆ ಇದರ ಕುರಿತು ಸೋಮುವಿನ ಬಳಿ ಪ್ರಸ್ತಾಪಿಸಿದಾಗ ಆತ

"…. ನಿಜವಾಗಿ ನೀನು ನನಗೆ ಸಿಕ್ಕುವ ವಸ್ತು ಅಲ್ಲಾಂತ ಒಂಥರಾ ಉದಾಸೀನ ಇತ್ತು ಒಂದ್ಸರ್ತಿ ಅಲ್ಲ ಎರಡ್ಸರ್ತಿ ರುಚಿ ಕಂಡಾಯ್ತು. ಇನ್ಮೇಲೆ ಎಷ್ಟು ಕಷ್ಟ ಗೊತ್ತಾ?" (ತ್ರಿವೇಣಿ : ೧೯೬೬; ೧೦೭)

ಹೀಗೆ ಹೇಳುವಲ್ಲಿ ಆತನ ಪ್ರೀತಿಯ 'ಶುಷ್ಕತೆ' ಮತ್ತು 'ಮಟ್ಟ' ಅರಿವಿಗೆ ಬರುತ್ತದೆ. ಚಂದ್ರಾಳ ಪಾತ್ರಕ್ಕೆ ಇಲ್ಲಿ ಒಂದು ಕ್ರಮಬದ್ಧ ಬೆಳವಣಿಗೆ ಇಲ್ಲ. ಚಂದ್ರಾಳೇ ಔಚಿತ್ಯ ಮೀರಿ ವರ್ತಿಸಿ ಸೋಮುವಿನ ಸಂಪರ್ಕ ಸಾಧಿಸುವುದು, ಯಾವ ಸಂಕೋಚವೂ ಇಲ್ಲದೆ ಮೊದಲ ಭೇಟಿಯಲ್ಲೇ ಚುಂಬನ, ದೇಹ ಸಂಬಂಧ ಬೆಳೆಸುವುದು ಇತ್ಯಾದಿಗಳಿಂದಾಗಿ ಚಂದ್ರಾಳ ಬಗ್ಗೆ ಸಹಾನುಭೂತಿ ಉಳಿಯುವುದಿಲ್ಲ. ಹೀಗಾಗಿ ಸೋಮು ಆಕೆಯನ್ನು ವಿವಾಹವಾಗದೇ ಹೋದರೆ ಆತನ ಬಗ್ಗೆ ಅಥವಾ ಅಂಥದೊಂದು ಸಮಾಜದ ಬಗ್ಗೆ ಓದುಗನಿಗೆ ಏನೂ ಅನ್ನಿಸದೇ ಹೋಗಬಹುದು. ಸೋಮುವಿನೊಂದಿಗೆ ಮದುವೆ ಸಾಧ್ಯವಾಗದಾಗ, ವಿದ್ಯಾವಂತೆ ಸ್ವಾವಲಂಬನೆ ಸಾಧ್ಯವಿರುವ ಛಲ ಇರುವ ಹುಡುಗಿ ಹೀಗೆ 'ಗೆಜ್ಜೆಪೂಜೆ'ಯಂಥ ವಿಧಿಯನ್ನು ಒಪ್ಪಿ, ಬೇರೆ ಗತ್ಯಂತರ ಇಲ್ಲವೆಂಬಂತೆ ಆತ್ಮಹತ್ಯೆ ಮಾಡಿಕೊಳ್ಳುವುದೇ ಪರಿಹಾರ ಎಂಬ ಕಾದಂಬರಿಯ ತೀರ್ಮಾನ ಪ್ರಗತಿಪರ ಅನಿಸುವುದಿಲ್ಲ.

ಫಣಿಯಮ್ಮ ಕಾದಂಬರಿಯ ಕೇಂದ್ರ ಪಾತ್ರವಾಗಿ 'ಬಾಲವಿಧವೆ'ಯಾಗಿ ತನಗೆ ಸಮಾಜ 'ದತ್ತಕ' ಮಾಡಿದ ವೈಧವ್ಯದ ಬದುಕಿಗೆ ಸಂಪೂರ್ಣ ಅರ್ಪಿಸಿಕೊಂಡು ಬದುಕುವ ಫಣಿಯಮ್ಮನ ಬಾಳಿನಲ್ಲಿ ವಿವಾಹದ ಒಳಗಿನ ಸುಖ ಸಂಪೂರ್ಣ ಅಗೋಚರವಾಗಿ ಉಳಿಯುತ್ತದೆ.

"ವಿಧವೆಯರು ಮಾಡಬೇಕಾದ ಮಾಡಬಹುದಾದ ವ್ರತ ನಿಯಮಗಳನ್ನೆಲ್ಲ ಮಾಡಿಮುಗಿಸಿದ್ದರು ಫಣಿಯಮ್ಮ. ಮುಟ್ಟು ನಿಂತ ಮೇಲೆ ಸೋಮವಾರ, ಅಮವಾಸ್ಯೆ ವ್ರತ, ಋಷಿ ಪಂಚಮಿ, ವೈಕುಂಠ ಚತುರ್ದಶಿ ಇತ್ಯಾದಿ. ತಣ್ಣೀರುಸ್ನಾನ ಕೇವಲ ಫಲಹಾರ ಆಕೆಯ ಜನ್ಮವ್ರತವಾಗಿತ್ತು ಆಕೆಯ ಒಂಬತ್ತನೆಯ ವರ್ಷಕ್ಕೆ ಹಾಸಿಗೆಯ ಶಯನ ರದ್ದಾಯ್ತಲ್ಲ. ಮಲಗಲು ಒಂದು ವಾಲೆಗರಿ ಚಾಪೆ, ತಲೆಯಡಿಗೆ ಹಳೆಯದೊಂದು ಸೀರೆ, ಹೊದೆಯಲು ಹಳೇ ಸೀರೆಯ ದಟ್ಟಿ. ಅಂದಿನಿಂದ ಆಜನ್ಮ ಪರ್ಯಂತ ಅದೇ ಆಕೆಯ ಶಯನೋತ್ಸವ. ರಾತ್ರಿ ಪೂರಾ ಕಣ್ಣು ಎಳೆಯುವವರೆಗೂ ತೂಕಡಿಸಿ ಬೀಳುವಂತಾದಾಗ ಹಾಗೇ ತಲೆ ಕೊಡುವುದು. ನಂತರ ಬೆಳಗಿನ ಜಾವ ನಾಲ್ಕು ಗಂಟೆಗೇ ಎಚ್ಚರ. ಮನೆಯವರಿಗೆ ಎಚ್ಚರವಾಗದಂತೆ ಸದ್ದಿಲ್ಲದೆ ಎದ್ದು ಒಂದೊಂದೇ ಕೆಲಸ ನಡೆಸುವುದು." (ತ್ರಿವೇಣಿ :೧೯೭೬ ; ೬೩)

ಇಲ್ಲಿ ಫಣಿಯಮ್ಮ ಧರ್ಮದ ಆಚಾರಗಳಿಗೆ ಅವಳನ್ನು ಒಗ್ಗಿಸಿಕೊಂಡು ಬದುಕಿದ ಪರಿಣಾಮವಾಗಿ ಯಾವುದೇ ಸಂಘರ್ಷ ಅವಳ ಬದುಕಿನಲ್ಲಿ ಸಂಭವಿಸುವುದಿಲ್ಲ. ನಿರಂತರವಾಗಿ ಸಂಬಂಧಿಕರ ಸೇವೆ, ಕಾಯಿಲೆ, ಬಸುರಿ ಬಾಣಂತನಗಳನ್ನು ಕಂಡು ರೋಸಿದ ಫಣಿಯಮ್ಮ ವೈವಾಹಿಕ ಬದುಕಿನ ಬಗ್ಗೆ ಹೇಸಿಕೊಂಡವಳು. ತನ್ನ ಬದುಕನ್ನು ಈ ಅರ್ಥದಿಂದಲೇ 'ಸಮಾಜಸೇವೆ'ಗಾಗಿ ರೂಪಿಸಿಕೊಂಡವಳು. ತನ್ನ ಇಡೀ ಬದುಕನ್ನು ಯಾವ ದಾಕ್ಷಿಣ್ಯವೂ ಇಲ್ಲದೆ ಹೊಸಕಿ ಹಾಕಿದ ಕ್ರೂರ ಸಂಪ್ರದಾಯದ ಬಗ್ಗೆ ಫಣಿಯಮ್ಮನಿಗೆ ಮಿತಿಮೀರಿದ ತಿರಸ್ಕಾರವಿದೆ. ಆದ್ದರಿಂದಲೇ ಅವಳು ಹೊಲಗೇರಿಗೆ ಹೋಗುವುದರ ಮೂಲಕ, ಸಿಂಕಿಯ ಹೆರಿಗೆ ಮಾಡಿಸುವುದರ ಮೂಲಕ

ಸಂಪ್ರದಾಯವನ್ನು ಮುರಿದು ಮಾನವತೆಯಲ್ಲಿ ನೆಮ್ಮದಿ ಕಾಣಲು ಪ್ರಯತ್ನಿಸುತ್ತಾಳೆ. ಫಣಿಯಮ್ಮನ ಕತೆಗೆ ಮುಖಾಮುಖಿಗೊಳ್ಳುವ ದಾಕ್ಷಾಯಣಿಯ ವೈಧವ್ಯದ ಬದುಕಿನಲ್ಲಿ ಪಲ್ಲಟಗೊಳ್ಳುವ ಮೌಲ್ಯಗಳ ಸಂಘರ್ಷವಿದೆ. ವಿಧವೆಯಾಗಿ ಕೇಶಮುಂಡನ ಮಾಡಿಕೊಂಡರೂ ಆಕೆ ತನ್ನ ಮೈದುನನಿಂದಲೇ ಬಸಿರಾಗುತ್ತಾಳೆ. ಬಹಿಷ್ಕಾರದ ಬೆದರಿಕೆಗೆ ಜಗ್ಗುವುದಿಲ್ಲ. ಅತ್ತೆಯೇ ಅವಳ ಬಾಣಂತನ ಮಾಡುತ್ತಾಳೆ.

"ಸೊಸೆಯ ಚಿಗುರಿದ ತಲೆಯನ್ನು ಬೋಳಿಸಲೆಂದು ಅತ್ತೆ ಓರ್ವ ಹಜಾಮನನ್ನು ಕರೆತಂದಾಗ, ಸೊಸೆ ತನ್ನತ್ತೆಯನ್ನೇ ದಬ್ಬಿಕೊಂಡು ಹೋಗಿ ಹಜಾಮನ ಮುಂದೆ ಕೂರಿಸಿ. ಇವರಿಗೆ ತಲೆ ಬೋಳ್ಸು" (ತ್ರಿವೇಣಿ: ೧೯೭೭ ; ೧೯)

ಇಲ್ಲಿ ಫಣಿಯಮ್ಮ ವೈಧವ್ಯವನ್ನು ಸ್ವೀಕರಿಸಿದ ರೀತಿ, ಅದೇ ದಾಕ್ಷಾಯಿಣಿ ಅದನ್ನು ತಿರಸ್ಕರಿಸಿದ ರೀತಿ ವಿಡಂಬನಾತ್ಮಕವಾದುದು. ಸಂಪ್ರದಾಯ, ಪದ್ಧತಿ, ಪರಂಪರೆಯನ್ನು ಒಪ್ಪಿಕೊಂಡ ಫಣಿಯಮ್ಮನ ಬದುಕು ಒಂದು ರೀತಿಯಲ್ಲಿ ವಿಚಾರ ಪ್ರವೃತ್ತರಾಗಲು ಪ್ರಚೋದನೆ ನೀಡಿದರೆ, ಅದೇ ಪದ್ಧತಿ ಪರಂಪರೆಯನ್ನು ಧಿಕ್ಕರಿಸಿ ಒಂದು ವಿಭಿನ್ನ ದಿಕ್ಕಿನಿಂದ ತನ್ನ ಬದುಕನ್ನು ಆರಿಸಿಕೊಂಡ ದಾಕ್ಷಾಯಿಣಿಯ ನಿರ್ಧಾರ ಎಲ್ಲೂ ತಪ್ಪು, ಅಪರಾಧ ಎಂದು ಅನ್ನಿಸುವುದಿಲ್ಲ. ದಾಕ್ಷಾಯಿಣಿಯ ನಿರ್ಭೀತ ನಡೆ-ನಿರ್ಣಯದ ಮುಂದೆ ಧರ್ಮ ಸಂಪ್ರದಾಯಗಳು ಧ್ವನಿಕಳೆದುಕೊಳ್ಳುವುದು ಎಲ್ಲಕ್ಕಿಂತ ಹೆಚ್ಚು ಗಮನ ಸೆಳೆಯುವ ಅಂಶವಾಗಿದೆ. ಗಂಡು - ಹೆಣ್ಣಿನ ಸಂಬಂಧದಲ್ಲಿ ಮೌಲ್ಯ ನಿರ್ಣಯದ ಸಾಂಸ್ಕೃತಿಕ ರಾಜಕಾರಣವೇನಿದೆ ಅದು ಸಂಪೂರ್ಣ ಪುರುಷ ನಿರ್ಧಾರಿತ ಸಮಾಜದ ಹುನ್ನಾರವಾಗಿದೆ. ಇಲ್ಲಿ ಎದುರಿಸಿ ನಿಲ್ಲುವ ಗಟ್ಟಿ ವ್ಯಕ್ತಿತ್ವಗಳನ್ನು ಅಲುಗಿಸುವುದು ಯಾವುದೇ ರೂಢಿ ನಿಯಮಗಳಿಗೂ ಹೆಚ್ಚು ಸುಲಭವಾದ ಸಂಗತಿಯಾಗಲಾರದು. ಸ್ತ್ರೀಯರನ್ನು ದಾಂಪತ್ಯ ಬದುಕಿಗೆ ಅವರ ಸಜ್ಜುಗೊಳಿಸುವ ಕ್ರಮವೇ ವ್ಯಕ್ತಿತ್ವವನ್ನು ನಿರಸನಗೊಳಿಸಿಸುವ ಮೂಲಕವಾಗಿರುತ್ತದೆ. ಇದರಿಂದ, ಸ್ವಂತದ ಚಹರೆ ಲಕ್ಷಣಗಳನ್ನು ಕಳೆದುಕೊಂಡು ಪುರುಷನಿಗೆ ಅನುಗುಣವಾಗಿ, ಅನುರೂಪಳಾಗಿ ಬದುಕುವ ಸ್ತ್ರೀಗೆ ಆಕೆ ಬಯಸಿದ ಬದುಕಲ್ಲದಿದ್ದರೂ 'ಒಂದು ಬದುಕು' 'ಒಂದು ಸಂಸಾರ'ವನ್ನು ಹೊಂದಲು ಸಾಧ್ಯವಾಗುತ್ತದೆ. ಇಂದಿರಾ.ಎಂ.ಕೆ. ಅವರು ಚಿತ್ರಿಸುವ ಹೆಚ್ಚಿನ ವೈವಾಹಿಕ ಚಿತ್ರಣಗಳ ಸ್ವರೂಪ 'ಅಧೀನತೆ'ಯನ್ನು ಮಾನ್ಯಮಾಡಿ ಬದುಕುವ ಸ್ತ್ರೀಯರ ಜೀವನವಾಗಿದೆ. ಇಲ್ಲಿ ಹೆಣ್ಣು ಕಮ್ಮಾರನ ಕುಲುಮೆಯ ತಿದಿಯಲ್ಲಿ ಹದ ಪಡೆಯುವ ಕಬ್ಬಿಣದಂತೆ. ಸ್ತ್ರೀಗೆ ಒಂದು 'ಆಕಾರ' ಸಾಧ್ಯವಾಗುವುದೇ ಪುರುಷನಿಂದ. ಇದನ್ನು ತರ್ಕಬದ್ಧವಾಗಿ ಇವರ ಹೆಚ್ಚಿನ ಕಾದಂಬರಿಗಳು ನಿರೂಪಿಸುತ್ತವೆ. ಇದರೊಳಗಿನ ಜಿಜ್ಞಾಸೆ, ಆತ್ಮವಿಮರ್ಶೆಗಳೇನಿದ್ದರೂ ಸೀಮಿತ ಚೌಕಟ್ಟಿನಲ್ಲಿ ನಿಲ್ಲುವಂಥದ್ದು. ದಾಂಪತ್ಯ ಬದುಕಿನಲ್ಲಿ ಅಂತಿಮವಾಗಿ ಏನಾದರೂ ಸಾಧಿಸಿಕೊಂಡರೆ ಅದು ಪುರುಷ ಮಾತ್ರ. ತನ್ನ ಇಚ್ಛೆ ಅಪೇಕ್ಷೆಯ ವೈವಾಹಿಕ ಜೀವನವನ್ನು, ಸ್ತ್ರೀಯನ್ನು ಸಂಪ್ರದಾಯದ ಚೌಕಟ್ಟಿನಲ್ಲಿ 'ಪಳಗಿಸುವುದರಿಂದ' ಬಯಸಿದುದನ್ನು ಪಡೆದುಕೊಳ್ಳುವುದು ಅವನಿಗೆ ಸುಲಭ ಸಾಧ್ಯವಾಗುತ್ತದೆ.

**ಕೊಡುಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ದಾಂಪತ್ಯದ ಸ್ವರೂಪ:**

ಕೊಡುಕಟ್ಟಿನ ಕಾದಂಬರಿಗಳ ವಿಶ್ಲೇಷಣೆಯು ದಾಂಪತ್ಯ ಸ್ವರೂಪಕ್ಕೆ ಸಂಬಂಧಿಸಿದಂತೆ ಹಲವು ಮಹತ್ವಪೂರ್ಣ ನಿಲುವುಗಳನ್ನು ತಾಳುವಲ್ಲಿ ಸಹಕಾರಿಯಾಗುತ್ತದೆ. ನಿರ್ದಿಷ್ಟವಾಗಿ ೧೯೫೦ರಿಂದ ಸುಮಾರು ೨೦, ೩೦ ವರ್ಷಗಳ ಹಿಂದು ಮುಂದಿನ ಅವಧಿಯ ಜೀವನ ನಿರೂಪಣೆಗಳು ಕೊಡುಕಟ್ಟಿನ

ಕಾದಂಬರಿಗಳಲ್ಲಿ ಪರಿಣಾಮಕಾರಿಯಾಗಿ ಪ್ರಕಟಗೊಳ್ಳುತ್ತವೆ. ವ್ಯಕ್ತಿಗಳ ಸಾಮಾಜಿಕ ಸನ್ನಿವೇಶಗಳಿಂದ ಸಂಪೂರ್ಣವಾಗಿ ನಿಯಂತ್ರಿತಗೊಳ್ಳುವ ವಿವಾಹ- ಕುಟುಂಬದಂತಹ ರಚನಾತ್ಮಕ ಸಂಸ್ಥೆಗಳಲ್ಲಿ ಆಯಾ ಕಾಲಘಟ್ಟದ ಎಲ್ಲಾ ಪರಿವರ್ತನೀಯ ಸನ್ನಿವೇಶಗಳು, ಘಟನೆಗಳು ಪ್ರಭಾವವನ್ನು ಬೀರುತ್ತವೆ. ಮತ್ತು ವಿವಾಹ - ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳನ್ನು ಪಲ್ಲಟಕ್ಕೆ ಒಳಪಡಿಸುತ್ತವೆ. ಮರುಕಲ್ಪನೆಗೆ, ಮರುರಚನೆಗೆ, ಮರುವ್ಯಾಖ್ಯಾನಗಳಿಗೆ ಗ್ರಾಸವಾಗಿಸುತ್ತವೆ. ಒಟ್ಟು ಮೂಲದಲ್ಲಿದ್ದ ವಿವಾಹ ಮತ್ತು ಆ ಸಂಬಂಧೀ ವ್ಯವಸ್ಥೆ ಪುನರ್‌ನಿರ್ಮಾಣಕ್ಕೆ ಸದಾ ಒಳಗಾಗುವ ವ್ಯವಸ್ಥೆಯಾಗಿದೆ. ಆಯಾಯ ಕಾಲಘಟ್ಟದ ವೈಚಾರಿಕ ನಿರ್ಣಯಗಳು, ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಹಿತಾಸಕ್ತಿಗಳು ವಿವಾಹ ಮತ್ತು ಕುಟಂಬದ ಮೌಲ್ಯಗಳನ್ನು ನಿರ್ಧರಿಸುತ್ತಿರುತ್ತವೆ. ತ್ರಿವೇಣಿ ಮತ್ತು ಎಂ.ಕೆ ಇಂದಿರಾ ಅವರ ಕಾದಂಬರಿಗಳನ್ನು ಕೂಡುಕಟ್ಟಿನ ಕಾದಂಬರಿಗಳೆಂದು ಸಮರ್ಥಿಸಿಕೊಳ್ಳುವ ಎಲ್ಲೆಯೂ ಇದೇ ಆಗಿದೆ. ಆಯಾಯ ಪರಿಸರದ ಭೌಗೋಳಿಕತೆಯು ಎಷ್ಟೇ ಭಿನ್ನವಾದ ಪರಿಣಾಮಗಳನ್ನು ಉಂಟುಮಾಡಿದರೂ ಭಾರತೀಯ ವಿವಾಹ ಮತ್ತು ಕುಟುಂಬ ವ್ಯವಸ್ಥೆಯ ಒಟ್ಟಂದವನ್ನು ಬದಲಾಯಿಸಿಲ್ಲ. ಈ ಹಿನ್ನೆಲೆಯಲ್ಲಿ ಕೂಡುಕಟ್ಟಿನ ಕಾದಂಬರಿಗಳ ಅಧ್ಯಯನದಿಂದ ಕಂಡುಬರುವ ದಾಂಪತ್ಯದ ಸ್ವರೂಪದ ಗುಣಲಕ್ಷಣಗಳನ್ನು ಹೀಗೆ ಗುರುತಿಸಬಹುದು.

೧) ವಿವಾಹದ ಆಯ್ಕೆ ಎಂಬುದು ಪುರುಷನಿಗೆ ಸೀಮಿತಗೊಂಡು, ವಿಧಿವಾದದಂತೆ ಪತಿಯನ್ನು ಏಕಮನಸ್ಸಿನಿಂದ ಒಪ್ಪಿಕೊಳ್ಳುವ ಸ್ತ್ರೀಯರು.

೨) ಆರ್ಥಿಕವಾಗಿ ಪರಾವಲಂಬಿಗಳಾಗಿ ಇದರ ಕಾರಣದಿಂದ ಸದಾ ಪತಿಗೆ ನಿಷ್ಠೆಯಿಂದಿರುವ ಸ್ತ್ರೀಯರು.

೩) ದಾಂಪತ್ಯದಲ್ಲಿ ಹಾಗೂ ದಾಂಪತ್ಯದ ಹೊರಗೆ ಲೈಂಗಿಕ ಶೋಷಣೆಗೆ ಒಳಗಾಗುವ ಸ್ತ್ರೀಯರು.

೪) ವಿಫಲ ದಾಂಪತ್ಯದಿಂದಾಗಿ ಮರುವಸತಿಯ ಅಭದ್ರತೆಯನ್ನು ಅನುಭವಿಸುವ ಸ್ತ್ರೀಯರು.

೫) ದಾಂಪತ್ಯದ ವಲಯಗಳಿಂದ ಹೊರಗಿದ್ದು ಸನ್ಯಾಸಿಗಳಂತೆ, ವಿರಹಿಗಳಂತೆ ಜೀವನ ನಡೆಸುವ ಸ್ತ್ರೀಯರು.

ಭಾರತೀಯ ಜೀವನ ಕ್ರಮದ ದಾಂಪತ್ಯದಲ್ಲಿ ಸ್ತ್ರೀಯರನ್ನು ಪ್ರವೇಶ ಬಿಂದುವಾಗಿ ಇಟ್ಟುಕೊಂಡು ವೈವಾಹಿಕ ಸ್ವರೂಪವನ್ನು ಅವಲೋಕಿಸುವುದಾದರೆ, ತ್ರಿವೇಣಿ ಮತ್ತು ಇಂದಿರಾ.ಎಂ.ಕೆ. ಅವರ ಕಾದಂಬರಿಗಳನ್ನು ಪ್ರತ್ಯ-ಪ್ರತ್ಯೇಕವಾಗಿ ಚರ್ಚೆಗೆ ಎತ್ತಿಕೊಂಡರೂ ದಾಂಪತ್ಯದ ನೂತನ ಆಯಾಮವನ್ನು ಗುರುತಿಸುವುದು ಇಲ್ಲಿ ಸಾಧ್ಯವಾಗಿಲ್ಲ.

### ೩.೩.೩ ಕೂಡುಕಟ್ಟಿನ ಕಾದಂಬರಿಗಳು : ಕೌಟುಂಬಿಕ ಸ್ವರೂಪ.

ತ್ರಿವೇಣಿಯವರ ಕಾದಂಬರಿಗಳು ನಿರೂಪಿಸುವ ಕೌಟುಂಬಿಕ ಸ್ವರೂಪ:

ಸ್ತ್ರೀ ಮತ್ತು ಪುರುಷ ಕೂಡಿ ಬದುಕುವ ಆರಂಭದ ಬಿಂದುವಾಗಿ ಸರಳಕುಟಂಬದ ಸಂರಚನೆಯನ್ನು ಬಿಂಬಿಸುವ ತ್ರಿವೇಣಿಯವರ ಹೆಚ್ಚಿನ ಕಾದಂಬರಿಗಳು (**ಕಂಕಣ, ಕಾಶೀಯಾತ್ರೆ, ಬಾನು ಬೆಳಗಿತು, ಅವಳ ಮನೆ, ವಸಂತಗಾನ, ಅಪಸ್ವರ- ಅಪಜಯ, ಕೀಲುಗೊಂಬೆ, ಶರಪಂಜರ**) ಕೌಟುಂಬಿಕ ಜವಾಬ್ದಾರಿಯನ್ನು ಸಂಪೂರ್ಣವಾಗಿ ಹೆಣ್ಣಿಗೆ ವಹಿಸಿವೆ. ಇಲ್ಲಿ ಕುಟುಂಬ ಸಂಸ್ಥೆಯನ್ನು ಒಡೆಯದಂತೆ

ಪೋಷಿಸುವ ಹೊಣೆಗಾರಿಕೆ ಗಂಡಿಗಿಂತ ಹೆಣ್ಣಿಗೇ ಹೆಚ್ಚು. ಸರಳ ಕುಟುಂಬದ ಒಳಗೆ ದಾಂಪತ್ಯದ ನಿಲುವುಗಳೇ ಕೌಟುಂಬಿಕ ನಿರ್ಣಾಯಕಗಳಾಗಿ ಬಿಡುತ್ತವೆ.

"ಹೆಂಗಸಿಗೆ ಇರುವ ಅವಕಾಶ, ಸ್ಥಾನಮಾನಗಳ ಬಗ್ಗೆ ತ್ರಿವೇಣಿಯವರು ಹೆಚ್ಚು ಕಾಡಿಸುವ ಪ್ರಶ್ನೆಗಳನ್ನು ಮಂಡಿಸುವುದಿಲ್ಲ. ಅದೊಂದು ಭಯಾನಕವಾದ ವಲಯವೆಂದು ಅವರು ತಿಳಿದಿದ್ದಾರೆಂಬುದಕ್ಕೆ ಪುರಾವೆಗಳಿವೆ. ಸಮಾಜ ಕಟ್ಟಿ ಬೆಳೆಸಿರುವ ಕುಟುಂಬ ಸಂಸ್ಥೆಯ ಕಟ್ಟುಪಾಡುಗಳಲ್ಲಿ ಕೂದಲೆಳೆಯಷ್ಟು ಆಚೀಚೆ ಕಾಲಿರಿಸಿದರೂ ಅದು ಹೆಂಗುಸಿಗೆ ತಂದೊಡ್ಡುವ ದುರ್ಭರ ಸನ್ನಿವೇಶಗಳನ್ನು ತ್ರಿವೇಣಿಯವರು ಚಿತ್ರಿಸಿದ್ದಾರೆ. ಅಷ್ಟಿಷ್ಟು ಪಲ್ಲಟಗಳೇ ದುರ್ಭರವೆನಿಸುವುದಾದರೆ, ಇನ್ನು ಸ್ಥಾನಮಾನದ ಪ್ರಶ್ನೆಗಳು ಎಲ್ಲಿಗೆ ಒಯ್ಯಬಹುದು? ಕುಟುಂಬದಲ್ಲಿ ಸುಖಿಗಳಾಗಿ ಕಾಣುವ ಅವರ ಹೆಂಗಸರು ಸಮಾಜವು ರೂಪಿಸಿದ ಪಾತ್ರನಿಯಮಗಳನ್ನು ಪಾಲಿಸುವುದರಲ್ಲಿ ತಲ್ಲೀನರಾಗಿರುತ್ತಾರೆ. ಅಂಥವರೂ ತಮ್ಮ 'ಸುಖದಲೋಕ'ದಲ್ಲಿ ಅಡಗಿರುವ ಅಭದ್ರತೆಯ ಅನುಭವವನ್ನು ಪಡೆಯುವವರೇ. 'ವಸಂತಗಾನ'ದ ಸರಳ ಇದಕ್ಕೊಂದು ಮಾದರಿ. ಅವಳು ಕುಟುಂಬದ ನಿಯಮಿತ ಗೆರೆಗಳೊಳಗೆ ತನ್ನನ್ನು ತಾನು ಇರಿಸಿಕೊಂಡು ಜೀವಿಸುತ್ತಾಳೆ. ಜೀವನಕ್ಕೊಂದು ಗುರಿ ಇರಬೇಕು, ತನ್ನತನವನ್ನು ಕಾಯ್ದುಕೊಳ್ಳಬೇಕು, ದೈನಿಕಗಳಿಗೆ ಅರ್ಥವಿರಬೇಕು ಎಂಬ ಪ್ರಶ್ನೆಗಳು ಅವಳನ್ನು ಕಾಡಿಸುವುದಿಲ್ಲ. ಅಂಥವಳೂ ಗರ್ಭಿಣಿಯಾದಾಗ ಅಭದ್ರತೆಯನ್ನು ಅನುಭವಿಸುತ್ತಾಳೆ. ಗರ್ಭಿಣಿಯರು ಮಾನಸಿಕವಾಗಿ ದುರ್ಬಲರಾಗಿರುತ್ತಾರೆಂದೂ, ಅಂತಹ ಸಂದರ್ಭದಲ್ಲಿ ಅನುಭವಿಸಿದ ಅಭದ್ರತೆಯು ಸರಿದು ಹೋಗುವ ಮೋಡವೆಂದು ಕಾದಂಬರಿಕಾರ್ತಿಯ ನಿಲುವು. ಆದರೆ ಕುಟುಂಬವೆಂಬ ಸಂಸ್ಥೆಯಲ್ಲಿ ಹೆಣ್ಣಿನ ಜೀವನ ಕೂರಲಗಿನ ಮೇಲೆ ಮಾಡುವ ಕಸರತ್ತಿನಂತೆ ಇರುತ್ತದೆ. ಈ ಕ್ಷಣ ಸುರಕ್ಷಿತವೆನಿಸಿದ್ದು ಮರುಕ್ಷಣದಲ್ಲಿ ಏಕಾಕಿತನಕ್ಕೆ ತಳ್ಳಬಹುದು. ಇಂಥ ಅನುಭವಗಳನ್ನು ತ್ರಿವೇಣಿಯವರ ಹಲವು ನಾಯಕಿಯರು ತಮ್ಮ ಕುಟುಂಬ ಜೀವನದಲ್ಲಿ ಪಡೆಯುತ್ತಾರೆ." (ಶ್ರೀಮತಿ ಎಚ್. ಎಸ್. :೨೦೦೦ ; ೫೧)

ಸ್ತ್ರೀಯರು ವಿವಾಹಕ್ಕಿಂತ ಮೊದಲು, ಅಂದರೆ ತಮ್ಮದೇ ಆದ ಕುಟುಂಬ ನಿರ್ಮಾಣದ ಪೂರ್ವದಲ್ಲಿ ಅವರೇ ಕಲ್ಪಿಸಿಕೊಳ್ಳುವ ಬಿಡುಗಡೆಯ ಭಾವನಲೋಕ ವಿವಾಹದ ಅನಂತರ ಸಂಪೂರ್ಣವಾಗಿ ಮಾಯವಾಗುತ್ತದೆ. ಅಥವಾ ಕುಟುಂಬದ ಕಟ್ಟುಪಾಡುಗಳು ಸ್ತ್ರೀಯರಿಗಿರುವ ಅವಕಾಶವನ್ನು ಕಡಿತಗೊಳಿಸುತ್ತವೆ. ಈ ವೈರುದ್ಧ್ಯಗಳು ಆಯಾ ಪಾತ್ರಗಳ ಅನುಭವದ ಭಾಗವಾಗಿ ಬರುತ್ತವೆ. ಆದರೆ ಇಂಥ ಅನುಭವಗಳು ಕೇವಲ ಅನುಭವದ ಮಟ್ಟಕ್ಕಷ್ಟೇ ಉಳಿದು ಬಿಡುತ್ತವೆಯೇ ವಿನಾ ಅವರ ಪ್ರಜ್ಞೆಯನ್ನು ಜಾಗ್ರತಗೊಳಿಸುವುದಿಲ್ಲ. ಈ ವೈರುದ್ಧ್ಯದಲ್ಲಿ ಗಮನಿಸಬೇಕಾದ ಮಹತ್ವದ ಅಂಶವೆಂದರೆ, ವಿವಾಹದ ಪೂರ್ವದಲ್ಲಿ ಸಂಪೂರ್ಣ ಭದ್ರತೆ, ಸುರಕ್ಷಣೆಗಾಗಿ ಸ್ತ್ರೀಯರು ಬಯಸುವ ಕುಟುಂಬ ಜೀವನವು ಅವರಿಗಿದ್ದ ಭೌತಿಕ ಹಾಗೂ ಮಾನಸಿಕ ಅವಕಾಶಗಳನ್ನು ಸಂಕುಚಿತಗೊಳಿಸುವುದರ ಜೊತೆಗೆ, ಕೆಲವೊಮ್ಮೆ ಅವರನ್ನು ನಿಷ್ಕ್ರಿಯರನ್ನಾಗಿ, ಹತಾಶರನ್ನಾಗಿ ಮಾಡುತ್ತದೆ.

ಇನ್ನೂ ಅತಿಗೆ ಹೋಗಿ ಅವರನ್ನು ನಿರಾಶ್ರಿತರನ್ನಾಗಿ ಮಾಡುತ್ತದೆ. **ಕೀಲುಗೊಂಬೆಯ** ಸೀತೆಯು ಬದುಕುವ ಪರಿಸ್ಥಿತಿ ಇಂತಹ ನಿಷ್ಕ್ರಿಯತೆಗೆ ಒಂದು ನಿದರ್ಶನ. ಕಾದಂಬರಿಯ ಹೆಸರೂ ಅದನ್ನೇ ಸೂಚಿಸುತ್ತದೆ. ಅವಳನ್ನು ಒಂದು ಕುಟುಂಬ ಪ್ರಕ್ರಿಯೆಗೆ ಒಪ್ಪಿಸುವ ಮೂಲಕ ಧ್ವನಿ ಇಲ್ಲದಂತಾಗಿ ಆಕೆ ನಾಶವಾಗುತ್ತಾಳೆ. ಕಾದಂಬರಿಯ ಹಲವು ಘಟನೆಗಳು ಈ ಪ್ರಕ್ರಿಯೆಯನ್ನು ಇಷ್ಟು ಸರಳವಾಗಿ ವಿವರಿಸುವುದನ್ನು ಒಪ್ಪುವುದಿಲ್ಲವಾದರೂ, ಸೀತೆಯ ಕೌಟುಂಬಿಕ ಬದುಕು ಅವಳ ನಿಷ್ಕ್ರಿಯತೆಯನ್ನು ಗಾಢವಾಗಿಸುತ್ತದೆ. ಅವಳ ವಿವಾಹಪೂರ್ವದ ಯೌವ್ವನ ಸಹಜ ಕುತೂಹಲಗಳು ಕುಟುಂಬದಲ್ಲಿ ಗರ್ಭಸ್ಥವಾಗಿ ವಾಸ್ತವತೆಯೊಡನೆ ಆಕಾರ ಪಡೆಯುತ್ತಾ ಹೋದಂತೆ ಈ ಎರಡೂ ಜಗತ್ತುಗಳು ಬೆಸೆಯಲಾರದಷ್ಟು ದೂರ ಹೋಗಿ ಬಿಡುತ್ತವೆ. ಗಂಡನ ಲೈಂಗಿಕ ಕಿರುಕುಳ, ಗರ್ಭ ನಿರೋಧಗಳನ್ನು ಬಳಸುವಲ್ಲಿ ಆತನ ವಿರೋಧ, ಒಂದರ ಮೇಲೆ ಒಂದರಂತೆ ಹುಟ್ಟುವ ಮಕ್ಕಳು, ಆರ್ಥಿಕ ಅಭದ್ರತೆ, ಗೃಹಕೃತ್ಯದ ಹೊರೆ ಇವೆಲ್ಲವೂ ಅವಳ ಕುಟುಂಬ ಬದುಕಿನಲ್ಲಿ ಪರಿಹಾರ ಕಾರಣ ಸಮಸ್ಯೆಗಳಾಗುತ್ತವೆ.

**ಶರಪಂಜರ** ಪಠ್ಯದ ಮುಖ್ಯಪಾತ್ರವಾಗಿ ಕಾಣಿಸಿಕೊಳ್ಳುವ ಕಾವೇರಿ ರೂಪವತಿ ಹಾಗೂ ಮೃದು ಸ್ವಾಭಾವದವಳು. ಅವಳನ್ನು ಕಂಡ ಕೂಡಲೇ ಮೆಚ್ಚುವ ಉಚ್ಚ ಅಧಿಕಾರಿ ಸತೀಶನನ್ನು ಅವಳು ಮದುವೆಯಾಗುತ್ತಾಳೆ. ಅವಳ ಎರಡನೆಯ ಮಗ ಹುಟ್ಟುವವರೆಗೆ, ಅವಳ ಕುಟುಂಬ ಜೀವನ ಇತರರು ಅಸೂಯೆಪಡುವಷ್ಟು ಸುಖ- ಸಂತೋಷಗಳಿಂದ ತುಂಬಿರುತ್ತದೆ. ಮಗನ ಹೆರಿಗೆಯ ನಂತರ ಅವಳಲ್ಲಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಹುದುಗಿದ್ದ ಅವಳ ವಿವಾಹಪೂರ್ವ ಘಟನೆಯೊಂದು (ಅವಳ ಸೋದರತ್ತೆಯ ಮಗನೊಡನೆ ಅವಳು ಒಂದು ಬಾರಿ ದೈಹಿಕ ಸಂಬಂಧವನ್ನು ಪಡೆದಿದ್ದು) ಮತ್ತೆ ಜಾಗೃತಗೊಂಡು ಕಾವೇರಿ ತೀವ್ರ ಪಾಪಪ್ರಜ್ಞೆಗೆ ಒಳಗಾಗಿ ಮನೋವಿಕಾರದಿಂದ ನರಳಲು ಪ್ರಾರಂಭಿಸುತ್ತಾಳೆ. ಆನಂತರ ಮಾನಸಿಕ ಚಿಕಿತ್ಸಾಲಯದಲ್ಲಿ ಎರಡು ವರ್ಷ ಚಿಕಿತ್ಸೆ ಪಡೆದು, ಸಂಪೂರ್ಣ ಗುಣವಾಗಿ ಮನೆಗೆ ಹಿಂತಿರುಗುತ್ತಾಳೆ. ಆದರೆ ಅವಳ ಗಂಡ, ಮಕ್ಕಳು, ಮತ್ತು ಇತರರು ಅವಳನ್ನು ಇನ್ನೂ ರೋಗಿಯೆಂದೇ ಸಂದೇಹ, ಭೀತಿ ಹಾಗೂ ತಿರಸ್ಕಾರಗಳಿಂದ ಕಾಣುತ್ತಾರೆ. ಅವಳೊಡನೆ ದೈಹಿಕ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದುಕೊಂಡು, ದೊಡ್ಡ ಮಗನನ್ನೂ ಒಂದು ಬೋರ್ಡಿಂಗ್ ಸ್ಕೂಲಿಗೆ ಅವಳ ಗಂಡ ಸತೀಶ್ ಸೇರಿಸುತ್ತಾನೆ. ತನ್ನ ಮನಃಸ್ವಾಸ್ಥ್ಯವನ್ನು ಪ್ರತಿಪಾದಿಸಲು ಕಾವೇರಿ ಮಾಡುವ ಎಲ್ಲಾ ಪ್ರಯತ್ನಗಳೂ ವಿಫಲವಾಗಿ, ಕೊನೆಗೆ ಹುಚ್ಚಿಯ ತಂಗಿಯೆಂಬ ಕಾರಣಕ್ಕಾಗಿ, ನಿಶ್ಚಯಗೊಂಡ ಅವಳ ತಂಗಿಯ ಮದುವೆಯೂ ನಿಲ್ಲುತ್ತದೆ. ತನ್ನ ಗಂಡ ಸತೀಶ್ ಅವನ ಆಫೀಸಿನಲ್ಲಿರುವ ಟೈಪಿಸ್ಟ್ ಒಬ್ಬಳೊಡನೆ ದೈಹಿಕ ಸಂಬಂಧ ಬೆಳೆಸಿರುವುದು ಕಾವೇರಿಗೆ ಗೊತ್ತಾದಾಗ, ಅವಳು ಮತ್ತೆ ತನ್ನ ಮಾನಸಿಕ ಸಮತೋಲನವನ್ನು ಕಳೆದುಕೊಂಡು, ಎರಡನೆಯ ಬಾರಿಗೆ ಹುಚ್ಚಾಸ್ಪತ್ರೆಗೆ ಸೇರುತ್ತಾಳೆ. ಇಲ್ಲಿ ಹೆಚ್ಚು ಮುಖ್ಯವಾಗುವ ಅಂಶ ಆಕೆಯದೇ ಆಯ್ಕೆಯಾಗಿ ವ್ಯಕ್ತಿ ಸಂಬಂಧಗಳು ಆಕೆ ಬಯಸುವ ಸಾಂತ್ವನವನ್ನೂ, ಒತ್ತಾಸೆಗಳನ್ನು ನೀಡುವುದಿಲ್ಲ ಎಂಬುದು. ಆಕೆಯ ವಿವಾಹ ಪೂರ್ವ ಲೈಂಗಿಕ ಅನುಭವವು ಒಂದು ನೈತಿಕ ಪ್ರಶ್ನೆಯಾಗಿ ಮುಂದೆ ಬರುತ್ತದೆ. ಆದರೆ ಅದರ ಹೊಣೆ ಮಾತ್ರ ಕಾವೇರಿಗೇ ಮೀಸಲಾಗುತ್ತದೆ. ಅಂಥದೇ ಬಾಹಿರ ಸಂಬಂಧದ ವಲಯದೊಳಗೆ ನುಗ್ಗಿ ಬಂದ ಆಕೆಯ ಗಂಡನನ್ನು ನೈತಿಕತೆಯ ಪ್ರಶ್ನೆ ಕಾಡಿಸುವುದಿಲ್ಲ. ಹೀಗಾಗಿ ಕುಟುಂಬದ ಒಳಗೆ ಕೂಡ ಸ್ತ್ರೀಯರು

ಪರಕೀಯತೆಯನ್ನು ಅನುಭವಿಸಬೇಕಾಗುತ್ತದೆ. ತಮ್ಮ ಅಸ್ತಿತ್ವಕ್ಕಾಗಿ ಸದಾ ಹೋರಾಟ ನಡೆಸಬೇಕಾಗುತ್ತದೆ. ತಮ್ಮ ಬದ್ಧತೆಯನ್ನು ಸಾಧಿಸಿ ತೋರಿಸಿಕೊಡಬೇಕಾಗುತ್ತದೆ.

ಸ್ತ್ರೀಯರ ಬದುಕಿನಲ್ಲಿ ವಿವಾಹದ ಮೂಲಕ ಕುಟುಂಬ ಸಂಸ್ಥೆಯಲ್ಲಿ ಪ್ರವೇಶ ಪಡೆಯುವುದು ಒಂದು ಹಂತವಾದರೆ, ಆ ಸಂಸ್ಥೆಯ ಸವಾಲುಗಳನ್ನು ಎದುರಿಸಿ ಜೀವಿಸುವುದು ಇನ್ನೊಂದು ಹಂತ. ತ್ರಿವೇಣಿಯವರು ಮೊದಲ ಹಂತವನ್ನು ಹಲವು ಸಂದರ್ಭಗಳಲ್ಲಿ ರಮ್ಯವಾಗಿ ಚಿತ್ರಿಸುವುದು ವ್ಯಕ್ತವಾಗುತ್ತದೆ. ಆದರೆ ವಿವಾಹ ಪೂರ್ವದ ಪ್ರೇಮ ಪ್ರಕರಣಗಳು, ಘಟನೆಗಳು ವಿವಾಹ ನಂತರದಲ್ಲಿ ಜಾಗೃತಗೊಳ್ಳುವ ಸನ್ನಿವೇಶಗಳು ಹೆಚ್ಚು. ಇಂಥ ಪ್ರಸಂಗಗಳಲ್ಲಿ ಮೊದಲಿನ ಅನುಭವಗಳು ಎರಡನೆಯ ಹಂತ(ವೈವಾಹಿಕ)ವನ್ನು ಭಗ್ನಗೊಳಿಸುವುದು ಪಠ್ಯಗಳಲ್ಲಿ ಕಂಡುಬರುತ್ತದೆ. **ಮೊದಲಹೆಜ್ಜೆಯ** ಸುಬ್ಬ, **ಕಂಕಣದ** ಸುಶೀಲ, **ಮುಕ್ತಿಯ** ಜಾನಕಿ **ಅವಳ ಮಗಳು**ವಿನ ಜಲಜ, **ಶರಪಂಜರದ** ಕಾವೇರಿ, **ದೂರದ ಬೆಟ್ಟದ** ಸುನಂದ, ಇವರೆಲ್ಲರ ಕುಟುಂಬ ಜೀವನದಲ್ಲಿ ಅವರವರ ವಿವಾಹ ಪೂರ್ವ ಹಂತದ ಪ್ರಣಯಗಳು, ಲೈಂಗಿಕ ಅನುಭವಗಳು ಪ್ರಶ್ನೆಯಾಗಿ ಎದುರಾಗುತ್ತವೆ. ಆ ಪ್ರಶ್ನೆಗಳೆದುರಿನಲ್ಲಿ ಅವರು ನೈತಿಕ ಸಂಘರ್ಷಕ್ಕೆ ಒಳಗಾಗುವುದು ಸಾಮಾನ್ಯ. ಈ ಸಂಘರ್ಷವು ಸ್ತ್ರೀಯರ ಕುಟುಂಬ ಜೀವನದಲ್ಲಿ ವರ್ತಮಾನ ಮತ್ತು ಭೂತಗಳೆರಡರಲ್ಲೂ ಒಂದು ಸಂಕೀರ್ಣ ಸನ್ನಿವೇಶವನ್ನು ರೂಪಿಸುತ್ತವೆ. ಕುಟುಂಬ ಜೀವನದಲ್ಲಿ 'ವಿವಾಹ ಬಾಹಿರ' ಸಂಬಂಧಗಳ ಕುರಿತ ಸಂಕೀರ್ಣ ಪ್ರಶ್ನೆಯನ್ನು ಕುಟುಂಬ ಹಲವು ನೆಲೆಗಳಲ್ಲಿ ಎದುರಿಸಬೇಕಾಗುತ್ತದೆ. 'ವಿವಾಹ ಬಾಹಿರ' ಸಂಬಂಧವನ್ನು ಪುರುಷ ಸಮರ್ಥಿಸಿಕೊಳ್ಳುವ ಬಗೆ ಹಲವು ನೆಲೆಯವು. ಮಕ್ಕಳಿಲ್ಲದ ಕಾರಣ, ಅತೃಪ್ತ ಲೈಂಗಿಕ ಬಯಕೆ, ಸ್ತ್ರೀಯರ ಬಗೆಗಿನ ಆಕರ್ಷಣೆ ಹೀಗೆ ಹಲವು ಕಾರಣಗಳನ್ನು ಮುಂದಿಡುವ ಪುರುಷನ ನಿಜವಾದ ಮನಸಿನ ಹುನ್ನಾರ ಸಮಾಜಕ್ಕೆ ಮುಖ್ಯವಾಗದೆ ಆತನ ಕಾರಣಗಳೆ ಮಹತ್ವವಾಗುತ್ತವೆ. ಹಾಗೂ ಸಮಾಜವೇ ಇದನ್ನು ಹಲವು ನೆಲೆಗಳಲ್ಲಿ ಸಮರ್ಥಿಸುತ್ತದೆ. ಆದರೆ, ಸ್ತ್ರೀಯರು 'ವಿವಾಹ ಬಾಹಿರ' ಸಂಬಂಧವನ್ನು ಜೀವನದ ಪ್ರಶ್ನೆಯಾಗಿ ಎದುರಿಸಬೇಕಾಗುತ್ತದೆ. **ಹೂವು- ಹಣ್ಣು, ತಾವರೆ ಕೊಳ, ಸೋತುಗೆದ್ದವಳು** ಕಾದಂಬರಿಗಳಲ್ಲಿ ಇದನ್ನು ಹಲವು ಮುಖಗಳಿಂದ ನೋಡಲಾಗಿದೆ. 'ಸೋತು ಗೆದ್ದವಳು' ಕೃತಿಯ ಭಾರತಿ ವಿವಾಹ ಬಾಹಿರ ಸಂಬಂಧವನ್ನು ಆಯ್ಕೆಯಿಂದ ಹೊಂದಿದವಳಲ್ಲ. ಆಕಸ್ಮಿಕವಾಗಿ ಅವಳು 'ಹದ್ದು ಮೀರಿದ' ವರ್ತನೆಗೆ ಒಳಗಾಗಬೇಕಾಗುತ್ತದೆ. ಆದರೆ ಅಪರಾಧಿ ಪ್ರಜ್ಞೆ ಮಾತ್ರ ಅವಳನ್ನು ನೆರಳಿನಂತೆ ಕಾಡುತ್ತದೆ. 'ತಾವರೆ ಕೊಳ'ದಲ್ಲಿ ಈ ನೆಲೆಯು ಹೆಚ್ಚು ಸಂಕೀರ್ಣವಾಗಿದೆ. ಈ ಕಾದಂಬರಿಯಲ್ಲಿ ರಮೇಶ ಮತ್ತು ಅವನ ಅತ್ತಿಗೆ ಶಾಂತ ಅವರ ಸಂಬಂಧವನ್ನು ಮಾನಸಿಕ ಹಾಗೂ ದೈಹಿಕ ನೆಲೆಯಲ್ಲಿ ಪ್ರಶ್ನೆಯಾಗಿ ಮುಂದಿಡುತ್ತದೆ. ರಮೇಶ ಶಾಂತಳನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಅವಲಂಭಿಸುವ ಪ್ರಮಾಣ ಮತ್ತು ರೀತಿ ಸಂಕೀರ್ಣವಾದದ್ದು. ಆದರೆ ಶಾಂತಳಲ್ಲಿ ಅದರ ಕನಿಷ್ಠದ ಸುಳಿವು ಕಾಣುವುದಿಲ್ಲ. ಶಾಂತಳ ಸಾವಿನಿಂದ ಖಿನ್ನನಾದ ರಮೇಶ ಬದಲಾವಣೆಗಾಗಿ ಮುಂಬೈಗೆ ಬಂದು ಅಲ್ಲಿ ಶೇಷಾದ್ರಿಯ ಹೆಂಡತಿ ರತ್ನಳಲ್ಲಿ ಒಂದು ಬಗೆಯ ಆಕರ್ಷಣೆಯನ್ನು ಬೆಳಸಿಕೊಳ್ಳುತ್ತಾನೆ. ಇಡೀ ಕಾದಂಬರಿ ರಮೇಶನ ನೆಲೆಯಿಂದ ಬೆಳೆದರೂ ಅದರ ಪರಿಣಾಮಗಳು ಮಾತ್ರ ರತ್ನಳಲ್ಲಿ ಕಾಣಿಸಿಕೊಳ್ಳುತ್ತವೆ. ರಮೇಶನನ್ನು ಸಾಂತ್ವನಗೊಳಿಸುವಲ್ಲಿ ರತ್ನ ಮಾಡುವ ಯತ್ನಗಳು ಸಹಜವಾಗಿ ಪ್ರಕಟಗೊಳ್ಳುತ್ತವೆ. ಆದರೆ ಕೊನೆಗೆ ಕುಟುಂಬ ಕದಡಿದ ಕೊಳವಾಗುತ್ತದೆ. ರಮೇಶನ ನಿರಾಳತೆಯ ಮುಂದೆ

ರತ್ನಳ ಖಿನ್ನತೆ ಒಡೆದು ತೋರುತ್ತದೆ. ಈ ಕಥನದಲ್ಲಿ ಕುಟುಂಬದೊಳಗೆ ಸ್ತ್ರೀ ತನ್ನದಲ್ಲದ ಕಾರಣಗಳಿಗಾಗಿ ಎದುರಿಸಬೇಕಾದ ಸಂಕಷ್ಟಗಳನ್ನು ಲೇಖಕಿ ಮುಂದಿಡುತ್ತಾರೆ.

**ಇಂದಿರಾ.ಎಂ. ಕೆ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ಕೌಟುಂಬಿಕ ಸ್ವರೂಪ:**

ಕುಟುಂಬವನ್ನು ಬಹುಮುಖ್ಯವಾದ ಸಾಮಾಜಿಕ ಮೌಲ್ಯ ವ್ಯವಸ್ಥೆಯನ್ನು ಪ್ರತಿಪಾದಿಸುವ ಅಂಗವಾಗಿ ಪ್ರತಿಬಿಂಬಿಸುವುದು ಎಂ.ಕೆ. ಇಂದಿರಾ ಅವರ ಕಾದಂಬರಿಗಳ ವೈಶಿಷ್ಟ್ಯ. ತ್ರಿವೇಣಿಯವರ ಕಾದಂಬರಿಯಲ್ಲಿ ಸರಳ ಕುಟುಂಬ ಅಥವಾ ದಾಂಪತ್ಯ ಕುಟುಂಬದ ಚಿತ್ರಣ ಕಂಡು ಬಂದರೆ, ಇಂದಿರಾ ಅವರ ಕಾದಂಬರಿಗಳಲ್ಲಿ ಮಲೆನಾಡಿನ ಕೂಡುಕಟುಂಬಗಳ ಚಿತ್ರಣವಿದೆ. ತುಂಗಭದ್ರ ಕಾದಂಬರಿಯಿಂದಲೇ ಇದು ಸ್ಪಷ್ಟವಾಗುತ್ತದೆ. ವಿದ್ಯಾಭ್ಯಾಸ ಮತ್ತು ನಾಗರಿಕತೆಯ ಸ್ಪರ್ಶ ಅನುಭವಿಸಿದ ಪಾತ್ರಗಳಾದ ಮುದ್ದುಕೃಷ್ಣ ಮತ್ತು ರಾಘವ ಕೂಡ ಕುಟುಂಬವನ್ನು ಮೀರುವ ಸಾಹಸ ಮಾಡುವುದಿಲ್ಲ. ತಮ್ಮ ಇಚ್ಛೆಗೆ ವಿರುದ್ಧವಾಗಿ ನಿಲ್ಲುವ ಕುಟುಂಬದ ಹಿರಿಯರನ್ನು ಧಿಕ್ಕರಿಸಿ ಯಾವುದೇ ನಿರ್ಧಾರ ತೆಗೆದುಕೊಳ್ಳುವುದಿಲ್ಲ. ಹೆಚ್ಚೆಂದರೆ ಪಲಾಯನವಾದ ಹೂಡಬಹುದಷ್ಟೇ. ಪುರುಷ ಪಾತ್ರಗಳ ಸೀಮಿತತೆಯೇ ಹೀಗಿರುವಾಗ ಇನ್ನು ವಿದ್ಯೆ, ಆಸ್ತಿ, ಯಾವುದೂ ಇರದ ಸ್ತ್ರೀ ಪಾತ್ರಗಳಾದ ಕೃಷ್ಣವೇಣಿ, ತುಂಗ, ಭದ್ರಾ, ಮಂದಾ ಎಲ್ಲರೂ ಕುಟುಂಬದ ನಿರ್ಧಾರಗಳಿಗೆ ಬದ್ಧರು.

ಮೈಸೂರಿನಂತಹ ಪಟ್ಟಣದ ನಾಗರಿಕತೆಯ ನಡುವೆ ಚಿತ್ರಿತವಾಗಿರುವ **ಗೆಜ್ಜೆಪೂಜೆ** ಕಾದಂಬರಿಯಲ್ಲಿ ಬರುವ ಅವಧಾನಿಗಳ ಕುಟುಂಬವೂ ಕೂಡ ಸಾಮಾಜಿಕ ಸಂಬಂಧಗಳನ್ನು ಶಕ್ತಿಶಾಲಿಯಾಗಿ ನಿಯಂತ್ರಿಸುವ ಸಾಮಾಜಿಕ ಅಂಗವಾಗಿಯೇ ಕೆಲಸ ಮಾಡುತ್ತದೆ. ಇಲ್ಲಿನ ಮುಖ್ಯ ಪಾತ್ರಗಳಾದ ಸೋಮು, ಚಂದ್ರಾ ಕುಟುಂಬದ ವರ್ತುಲದೊಳಗೆ ಬಂಧಿತರು. ಸೋಮು ಎಂ.ಎ. ಪದವೀಧರನಾದರೂ ಉತ್ತಮ ಉದ್ಯೋಗ ಹೊಂದಿದ್ದರೂ ಮನೆಯವರ ಆಶೆ, ಆಕಾಂಕ್ಷೆಗಳನ್ನು, ರೀತಿ - ನೀತಿಗಳನ್ನು ಮೀರಲು ಸಿದ್ಧನಿಲ್ಲ. ಆ ಪಾತ್ರಕ್ಕೆ ಅಂತಹ ಸತ್ವಗ್ರಹಿಕೆಯೇ ಇಲ್ಲ. ಹಾಗೆಯೇ ವೇಶ್ಯಾ ಕುಲಕ್ಕೆ ಸೇರಿದ ಚಂದ್ರಾ ಕೂಡ ಮದುವೆಯಾಗಬೇಕೆಂಬ ಹೆಬ್ಬಯಕೆಯನ್ನು ಮತ್ತೆ ಮತ್ತೆ ಪ್ರಸ್ತಾಪಿಸುತ್ತಾ ಬಂದರೂ ತನ್ನ ಕುಟುಂಬದ ರೀತಿ, ನೀತಿ ನಿಯಮಾವಳಿಗಳಾಚೆ ಪ್ರಯತ್ನವನ್ನು ಮಾಡುವಂತೆ ಕಂಡು ಬರುವುದೇ ಇಲ್ಲ. ಇಲ್ಲಿಯೂ ಅವಳು ಪಡೆದುಕೊಂಡ ವಿದ್ಯಾಭ್ಯಾಸ ಅವಳಿಗೆ ಅವಳ ಕುಟುಂಬವನ್ನು ಧಿಕ್ಕರಿಸಲು ಸಹಾಯ ಮಾಡುವುದೇ ಇಲ್ಲ.

**ಫಣಿಯಮ್ಮ**ದಲ್ಲಿ ನಿರೂಪಿತಗೊಂಡಿರುವ ಕುಟುಂಬ ವ್ಯವಸ್ಥೆ ಹೆಣ್ಣಿನ ಮೇಲಿನ ದಬ್ಬಾಳಿಕೆಯನ್ನು ತಲತಲಾಂತರದಿಂದ ಮಾನ್ಯ ಮಾಡಿಕೊಂಡು ಬಂದಂಥದು.

> "ಅಂಚಿಮನೆತನದವರು ಎಂದರೆ ಮಲೆನಾಡು ಪ್ರಾಂತ್ಯಕ್ಕೆಲ್ಲಾ ಚಿರಪರಿಚಿತ. ಹೀಗಾಗಿ ಅಂಚಿಮನೆತನದ ಆರ್ಥಿಕ ಸಂಪತ್ತು, ಅಂತಸ್ತು, ದೌಲತ್ತು ಎಲ್ಲವೂ ಬೆಳೆಯಿತಾದರೂ ರಕ್ತಗತವಾಗಿ ಹನ್ನೆರಡು ತಲೆಯ ಹಿಂದಿನಿಂದ ನಡೆದು ಬಂದ ಸಂಪ್ರದಾಯ, ಮಡಿವಂತಿಕೆ, ಮೂಢ ನಂಬಿಕೆಗಳ ಆಚರಣೆ ಮಾತ್ರ ಮತ್ತೂ ಸ್ವಲ್ಪ ಹೆಚ್ಚಿತೆಂದೇ ಹೇಳಬೇಕು." (ಇಂದಿರಾ ಎಂ.ಕೆ. : ೧೯೭೬; ೩೮)

ಹೀಗೆ ಒಂದೊಂದು ಕುಟುಂಬ, ಮನೆತನಗಳು ಪಾಳೇಗಾರಿ ಸಂಸ್ಥಾನದಂತೆ ವಿಜೃಂಭಿಸುತ್ತವೆ. ಕೌಟುಂಬಿಕ ನೆಲೆಯಲ್ಲಿ ಮೂಡುವ ಇಂದಿರಾ ಅವರ ಸಾಮಾಜಿಕ ಪ್ರಜ್ಞೆ ತೀರ ತೆಳುವಾದುದು. ಕುಟುಂಬದ ಒಳಗೆ ಉಂಟಾಗುವ ಅನ್ಯಾಯಗಳಿಗೆ ಲೇಖಕಿಯ ಸಹಾನುಭೂತಿ, ಅನುಕಂಪವಿದೆ. ಆದರೆ ಇವರ ಪ್ರಜ್ಞೆ ಈ ಸಹಾನುಭೂತಿಯಾಚೆ ಹರಿಯುವುದೇ ಇಲ್ಲ. ಅವರ ಬಹಳಷ್ಟು ಕೃತಿಗಳ ವಸ್ತು ಅವರ ಕಾಲದಲ್ಲಿಯೇ ಬದಲಾವಣೆ ಬಯಸಿದಂತಹವು ಹಾಗೂ ಪಡೆದಂತಹವು ಎಂದೆನಿಸಿದರೂ, ಇಂದಿರಾರವರ ಕೃತಿಗಳ ವಿಷಯಕ್ಕೆ ಬಂದಾಗ ಒಟ್ಟು ಕೃತಿಯ ಧ್ವನಿ ಯಥಾಸ್ಥಿತಿವಾದದ ಕಡೆಗೆ ವಾಲಿದಂತೆ ಗೋಚರಿಸುತ್ತದೆ. 'ಕೌಟುಂಬಿಕ ನೈತಿಕತೆ' ಸಾಮಾನ್ಯವಾಗಿ ಇಲ್ಲಿ ಗ್ರಾಮೀಣ ಸಂಸ್ಕೃತಿಯ ಪರವಾಗಿಯೇ ಇದೆ. ಅವರ ಕಾದಂಬರಿಗಳ ಬಹಳಷ್ಟು ಪಾತ್ರಗಳು ಕೌಟುಂಬಿಕ ಸಮಸ್ಯೆಯನ್ನು ಅದರ ಆಂತರಿಕ ನೆಲೆಯಿಂದಲೇ ಒಪ್ಪಿಕೊಳ್ಳುತ್ತವೆ. ಪಠ್ಯಗಳೊಳಗೇ ಕಾಣಿಸುವ ಪಾತ್ರಗಳು ವಿದ್ಯಾವಂತರಾದರೂ ಪರಿಸರವನ್ನು ಕುರಿತು ಚಿಂತಿಸುವ ರೀತಿಯಲ್ಲಿ ಅವರ ಮನೆಯ ಹಿರಿಯರಿಗಿಂತ ಹೆಚ್ಚೇನು ಭಿನ್ನವಾಗಿರುವುದಿಲ್ಲ. ಸಾಮಾಜಿಕ ಸಮಸ್ಯೆಗಳನ್ನು ನೋಡುವ ಇಂದಿರಾರವರ ದೃಷ್ಟಿಕೋನಕ್ಕೆ ಅವರ ಸಂಪ್ರದಾಯಪರತೆ, ಗ್ರಾಮೀಣ ಸಂಸ್ಕೃತಿಯ ಬಗೆಗಿರುವ ಮೋಹ ಒಂದು ತಾತ್ವಿಕತೆಯ ಸ್ವರೂಪ ಕೊಟ್ಟರೆ, ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನು ಒಪ್ಪಿಕೊಳ್ಳುವ ಅವರ ದೃಷ್ಟಿಕೋನವೂ ಆ ತಾತ್ವಿಕತೆಯ ಮತ್ತೊಂದು ಆಯಾಮವನ್ನು ಪ್ರತಿನಿಧಿಸುತ್ತದೆ. ಇದರಲ್ಲಿ ತೀವ್ರವಾದ ಪ್ರಶ್ನೆಗಳನ್ನು ಸಂಘರ್ಷಗಳನ್ನು ಎದುರಿಸುವ ಬಿಕ್ಕಟ್ಟು ಯಾವ ಪಾತ್ರಗಳಿಗೂ ಬರುವುದೇ ಇಲ್ಲ. ಕಥೆಯ ಚೌಕಟ್ಟು ಮತ್ತು ಪಾತ್ರಗಳ ಸ್ವಭಾವದ ಈ ಪೂರ್ವ ನಿರ್ಧಾರಿತ ವಲಯದಲ್ಲಿ ಘಟನೆಗಳು ಕುಟುಂಬದೊಳಗೆ ರೂಪುಗೊಳ್ಳುತ್ತವೆ. ಇಲ್ಲಿ ಕಥೆಯಷ್ಟೇ ಅನಿರೀಕ್ಷಿತವೇ ಹೊರತು ಪಾತ್ರಗಳು, ಸ್ವಭಾವ ಮತ್ತು ವರ್ತನೆಗಳಲ್ಲ. ಹಾಗೆಯೇ ಕುಟುಂಬಗಳ ತಾತ್ವಿಕ ಚೌಕಟ್ಟು ಬದಲಾವಣೆಗೆ ಒಳಪಡುವುದಿಲ್ಲ.

**ಕೂಡುಕಟ್ಟಿನ ಕಾದಂಬರಿಗಳು ನಿರೂಪಿಸುವ ಕುಟುಂಬದ ಸ್ವರೂಪ:**

ನಗರಕೇಂದ್ರೀಕೃತ ಸರಳ ಕುಟುಂಬಗಳ ಸಂರಚನೆಯು ಕೂಡುಕಟ್ಟಿನ ಕಾದಂಬರಿಗಳು ನಿರೂಪಿಸುವ ಕುಟುಂಬ ಸ್ವರೂಪದ ಪ್ರಧಾನ ಲಕ್ಷಣವಾಗಿದೆ. ಗ್ರಾಮೀಣ ಪರಿಸರಕ್ಕೆ ಸಂಬಂಧಿಸಿದಂತೆ ಹಲವು ಪಠ್ಯಗಳಲ್ಲಿ ಕೂಡು ಕುಟುಂಬಗಳ ಸಂರಚನೆಯು ಕಂಡುಬರುತ್ತದೆ. ತ್ರಿವೇಣಿ ಮತ್ತು ಇಂದಿರಾ.ಎಂ.ಕೆ ಅವರ ಹೆಚ್ಚಿನ ಕಾದಂಬರಿಗಳು ನಗರ ಜೀವನದ ಮಧ್ಯಮ ವರ್ಗದ ಬದುಕನ್ನು ನಿರೂಪಿಸುತ್ತವೆ. ವಿವಾಹವಾದ ತರುವಾಯದಲ್ಲಿ ದಂಪತಿಗಳು ಪ್ರತ್ಯೇಕ ಮನೆಯನ್ನು ಅಪೇಕ್ಷಿಸುವುದೇ ಹೆಚ್ಚು. ಸ್ವಂತ ಅಥವಾ ಬಾಡಿಗೆ ಮನೆಯಲ್ಲಿ ಗಂಡ - ಹೆಂಡತಿ- ಮಕ್ಕಳನ್ನು ಒಳಗೊಂಡ ಕೌಟುಂಬಿಕ ಸ್ವರೂಪ ಅತಿ ಸಹಜವಾಗಿ ಕೂಡುಕಟ್ಟಿನ ಕಾದಂಬರಿಗಳಲ್ಲಿ ವ್ಯಕ್ತವಾಗುತ್ತದೆ. ನಗರ ಕೇಂದ್ರೀಕೃತ ಜೀವನವು ಕಲ್ಪಿಸುವ ಸೌಲಭ್ಯಗಳಾದ ವಿದ್ಯಾಭ್ಯಾಸ, ಉದ್ಯೋಗ, ಬಾಳಸಂಗಾತಿಯ ಆಯ್ಕೆ ಇವುಗಳು ಸರಳಕುಟುಂಬದ ರಚನೆಗೆ ಮುಖ್ಯಕಾರಣಗಳೆಂದು ಕೃತಿಗಳು ಪ್ರತಿಪಾದಿಸುತ್ತವೆ. ಕೂಡುಕಟ್ಟಿನ ಈ ಕಾದಂಬರಿಗಳ ಕೌಟುಂಬಿಕ ಚಿತ್ರಣದಲ್ಲಿ ಸ್ತ್ರೀಯರು ಕುಟುಂಬದ ರಕ್ಷಕಿಯರಾಗಿ, ಪೋಷಕಿಯರಾಗಿ ಕುಟುಂಬವೆಂಬ ಸಾಮಾಜಿಕ ಸಂಸ್ಥೆಯನ್ನು ಕಾಯ್ದುಕೊಳ್ಳುವ 'ವಾಹಕ'ರಾಗಿ ಪ್ರಕಟಗೊಳ್ಳುತ್ತಾರೆ. ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶಗಳಲ್ಲಿ 'ಸ್ವತಂತ್ರ' ಮನೋಭಾವದ ಶಿಕ್ಷಣವನ್ನು ಪಡೆದ ಸ್ತ್ರೀಯರು ಕುಟುಂಬವೆಂಬ ಸಾಮಾಜಿಕ ಸಂಸ್ಥೆಯಲ್ಲಿ ತಮ್ಮ ಸ್ಥಾನವನ್ನು ಮರು ವ್ಯಾಖ್ಯಾನ

ಮಾಡಿಕೊಳ್ಳಬೇಕಾಗಿದ್ದ ಸಂಧಿ ಕಾಲವೂ ಕೂಡು ಕಟ್ಟಿನ ಕಾದಂಬರಿಗಳಲ್ಲಿ ಪ್ರಕಟವಾಗಿದೆ. ಆದರೆ ಇದು ಏಕರೂಪಕಗಳಾಗಿ, ಒಂದೇ ಮಾದರಿಗಳಾಗಿ ಕಂಡುಬರುವುದಿಲ್ಲ.

ಕೂಡುಕಟ್ಟಿನ ಕಾದಂಬರಿಗಳಲ್ಲಿ ಪಾರಂಪರಿಕ ನೆಲೆಯ ಕೌಟುಂಬಿಕ ಜವಾಬ್ದಾರಿಗಳ ಆಚೆಗೆ, ಮತ್ತು ಜೊತೆಗೆ, ಹೊಸ ಜೀವನಾವಕಾಶಗಳನ್ನು ಇಚ್ಛಿಸುವ ಸ್ತ್ರೀಯರು ಅವುಗಳನ್ನು ಸ್ವಂತ ಜವಾಬ್ದಾರಿಯಿಂದ ನಿಭಾಯಿಸಬೇಕಾಗುತ್ತದೆ. (**ಕಂಕಣ, ಮುಕ್ತಿ, ಅಪಸ್ವರ, ಅಪಜಯ**) ಕುಟುಂಬ ಸಂಸ್ಥೆಯೇ ಅದರ ಸ್ವರೂಪದಲ್ಲಿ ಬದಲಾವಣೆ ತಂದುಕೊಂಡು ಸ್ತ್ರೀಯರ ಹೊಸ ಬದುಕಿನ ವಿನ್ಯಾಸಗಳಿಗೆ ಜಾಗವನ್ನು ಒದಗಿಸುವುದಿಲ್ಲ. ಕುಟುಂಬ ಸ್ತ್ರೀಯರ ಮೇಲೆ ಆರ್ಥಿಕ ಜವಾಬ್ದಾರಿಗಳನ್ನು ಹೊರಿಸುವ ಅಥವಾ ಸ್ತ್ರೀಯರೇ ಸ್ವಂತ ಆಯ್ಕೆಯಿಂದ ಅಂಥ ಜವಾಬ್ದಾರಿಗಳನ್ನು ಹೊರುವ ಪ್ರಸಂಗಗಳು ಕೂಡುಕಟ್ಟಿನ ಕಾದಂಬರಿಗಳಲ್ಲಿ ಇಲ್ಲವೇ ಇಲ್ಲ. ಆರ್ಥಿಕ ಜವಾಬ್ದಾರಿಗಳನ್ನು ಅನಿರೀಕ್ಷಿತವಾಗಿ ಅಥವಾ ಒತ್ತಾಯದಿಂದ ಒಪ್ಪಿಕೊಳ್ಳಬೇಕಾದ ಪ್ರಸಂಗಗಳು ಮಾತ್ರ ಕೆಲವು ಕಡೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇದರಿಂದಾಗಿ ಕೂಡುಕಟ್ಟಿನ ಕಾದಂಬರಿಗಳು ಕುಟುಂಬ ಜೀವನದಲ್ಲಿ ಸ್ತ್ರೀಯರು ಪಡೆದುಕೊಳ್ಳುತ್ತಿದ್ದ ಹೊಸ ಅವಕಾಶಗಳನ್ನು ಪೂರ್ಣ ಪ್ರಮಾಣದಲ್ಲಿ ಗ್ರಹಿಸಲಿಲ್ಲವೆಂದೇ ಹೇಳಬೇಕಾಗುತ್ತದೆ. ಇದಕ್ಕೆ ಸಂವಾದಿಯಾಗಿ ಕೂಡುಕಟ್ಟಿನ ಕಾದಂಬರಿಗಳಲ್ಲಿ ಕುಟುಂಬ ಸಂಸ್ಥೆಗೆ ಪ್ರವೇಶ ಪಡೆಯುವ ಮೊದಲೇ ಆರ್ಥಿಕ ಜವಾಬ್ದಾರಿಯನ್ನು ನಿರ್ವಹಿಸುವ ಪ್ರಸಂಗಗಳು ಹೆಚ್ಚು ಗಂಭೀರವಾಗಿವೆ. ಅಂದರೆ, ಕುಟುಂಬ ಮತ್ತು ಆರ್ಥಿಕ ಸ್ವಾತಂತ್ರ್ಯ ಎಂಬ ನೆಲೆಗಿಂತ ಕುಟುಂಬ ಅಥವಾ ಆರ್ಥಿಕ ಸ್ವಾತಂತ್ರ್ಯ ಎಂಬುದೇ ಕೂಡುಕಟ್ಟಿನ ಕಾದಂಬರಿಗಳ ಆಯ್ಕೆಗಳಾಗಿ ಪ್ರಕಟಗೊಳ್ಳುತ್ತದೆ.

## ಅನುಬಂಧ

*೧ ಸಬಾಲ್ಟರ್ನ್ ಎಂದರೆ, ಕೆಳಸ್ತರದ ಎಂದರ್ಥ. ಆ್ಯಂಟನಿ ಗ್ರಾಂಸ್ಕಿಯು ಯಾಜಮಾನ್ಯದ (ಹೆಜಮನಿ) ವಿವಿಧ ಮಜಲುಗಳ ಬಗ್ಗೆ, ಆಳ್ವಿಕೆಯ ಅಧಿಕಾರದಿಂದ **ಶೋಷಣೆಗೆ** ಒಳಪಟ್ಟ ಕೆಳಸ್ತರದ ವರ್ಗಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ **ಸಬಾಲ್ಟರ್ನ್ ಅಧ್ಯಯನವನ್ನು** ಖ್ಯಾತಿಗೊಳಿಸಿದನು. ವಸಾಹತೋತ್ತರ ಕಾಲದಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಸಬಾಲ್ಟರ್ನ್ ಚರಿತ್ರಕಾರರು ತಮ್ಮ ತಾತ್ವಿಕ ಪ್ರಶ್ನೆಗಳನ್ನು ಮುಂದಿಟ್ಟರು. ೧೯೮೦ರ ದಶಕದ ಆರಂಭದಲ್ಲಿ ಪ್ರಥಮಬಾರಿಗೆ ಭಾರತದಲ್ಲಿ ಭಿನ್ನಮತೀಯ ಮಾರ್ಕ್ಸಿಸ್ಟರು ಸಬಾಲ್ಟರ್ನ್ ಸಿದ್ಧಾಂತಗಳಿಂದ ಪ್ರಭಾವಿತರಾದರು. ಸಾಂಪ್ರದಾಯಿಕ ಮಾರ್ಕ್ಸಿಸಂನ್ನು ಕಟುವಿಮರ್ಶೆಗೆ ಒಳಪಡಿಸಿದ ಇವರು ಸಮಾಜವಾದ ಹಾಗೂ ಮಾರ್ಕ್ಸಿಸ್ಟ್ ಸಿದ್ಧಾಂತಗಳನ್ನು ವಿಶಾಲವಾದ ಅರ್ಥದಲ್ಲಿ ಒಪ್ಪಿಕೊಂಡಿರುವುದನ್ನು ಗಮನಿಸಬಹುದು. ಸಬಾಲ್ಟರ್ನ್ ಸ್ಟಡೀಸ್‌ನ್ನು **ತಳದಿಂದ ಚರಿತ್ರೆಯ ಅಧ್ಯಯನ** (History from billow) ಎಂದು ವಿಶ್ಲೇಷಿಸಲಾಗಿದೆ.

ಸಬಾಲ್ಟರ್ನ್ ಸ್ಟಡೀಸ್‌ನ ಪ್ರಥಮ ಸಂಪುಟ ರಣಜಿತ್ ಗುಹಾ ಅವರ ನೇತೃತ್ವದಲ್ಲಿ ಹೊರಬಂದಿತು. ಈವರೆಗೆ ಸಬಾಲ್ಟರ್ನ್ ಸ್ಟಡೀಸ್‌ನ ಹತ್ತು ಸಂಪುಟಗಳನ್ನು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನವರು ಪ್ರಕಟಿಸಿದ್ದಾರೆ. **ಗ್ಯಾನ್‌ಪಾಂಡೆ, ಡೇವಿಡ್ ಹರ್ಡಿಮನ್, ಸುಮಿತ್ ಸರ್ಕಾರ್,** ವಿದ್ವಾಂಸರಾದ ಗಾಯತ್ರಿದೇವಿ **ಸ್ಪಿವಾಕ್, ದೀಪಕ್ ಚಕ್ರವರ್ತಿ, ವೀಣಾದಾಸ್** ಮೊದಲಾದವರು ಸಂಪುಟಗಳಲ್ಲಿ ತಮ್ಮವಾದಗಳನ್ನು ಮುಂದಿಟ್ಟಿದ್ದಾರೆ. (Subaltern Studies X Vol. Oxford University Press, Walton Street, Oxford 1982-1998).

*೨ ಶಿವರಾಮ ಪಡಿಕ್ಕಲ್ ಅವರ **ನಾಡು- ನುಡಿಯ ರೂಪಕ**. ಕೃತಿಯಲ್ಲಿ ಅಧ್ಯಾಯ ಒಂದು **ನಾವೆಲ್‌ನ ಸಿದ್ಧಾಂತ; ಸಮಾಜಶಾಸ್ತ್ರೀಯ ವಿವರಣೆ** ಇದರಲ್ಲಿ ಸಾಹಿತ್ಯ ವಿಮರ್ಶೆ ಮತ್ತು ಕನ್ನಡ ಕಾದಂಬರಿ ಕುರಿತ ದೀರ್ಘವಿವರಣೆ ಇದೆ. (ಪುಟ ೩ ರಿಂದ ೨೬ರ ವರೆಗೆ) ಪ್ರಸಾರಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ:೨೦೦೧.

*೩ ಕನ್ನಡ ಕಾದಂಬರಿಗೆ ಸಂಬಂಧಿಸಿದಂತೆ ನಾವು ಪರಿಶೀಲಿಸಬೇಕಾಗಿರುವ ೧೯ನೆಯ ಶತಮಾನದ ಕರ್ನಾಟಕದ ಸಾಂಸ್ಕೃತಿಕ ಸ್ಥಿತಿಯನ್ನು ನಾಲ್ಕು ಜನ ವಿದ್ವಾಂಸರು ಚರ್ಚಿಸಿರುವುದು ವ್ಯಕ್ತವಾಗುತ್ತದೆ. ೧೯ನೆಯ ಶತಮಾನದ ಕರ್ನಾಟಕದ ಸ್ಥಿತಿ, ಕನ್ನಡ ಭಾಷೆಯ ಪರಿಸ್ಥಿತಿ, ಸಾಹಿತ್ಯ, ಗ್ರಂಥೋದ್ಯಮ, ಪತ್ರಿಕೆಗಳ ಬೆಳವಣಿಗೆ, ವಿದ್ಯಾಭ್ಯಾಸದ ಮುನ್ನಡೆ, ಕ್ರಿಶ್ಚಿಯನ್ ಮಿಶನರಿಗಳ ಕನ್ನಡ ಸೇವೆ, ಕನ್ನಡದ ವಿವಿಧ ಸಂಘ ಸಂಸ್ಥೆಗಳು, ಸಾಹಿತಿಗಳ ಪ್ರಯತ್ನಗಳ ವಿವರಣಾತ್ಮಕ ಅಧ್ಯಯನವನ್ನು ಕೆಳಗೆ ಗುರುತಿಸಿದ ಚಿಂತಕರು ನಡೆಸಿದ್ದಾರೆ. ಡಾ. ಶ್ರೀನಿವಾಸ ಹಾವನೂರ, **ಹೊಸಗನ್ನಡದ ಅರುಣೋದಯ** (೧೯೭೪), ಡಾ. ರಾ.ಯ ಧಾರವಾಡಕರ **ಹೊಸಗನ್ನಡ ಸಾಹಿತ್ಯದ ಉದಯಕಾಲ** (೧೯೭೫), ಡಾ. ಕೃಷ್ಣಮೂರ್ತಿ ಕಿತ್ತೂರ **ಗಳಗನಾಥರು ಮತ್ತು ಅವರ ಕಾದಂಬರಿಗಳು** (೧೯೭೮), ಡಾ. ಎಚ್.ಎಸ್. ಸುಜಾತ, ಎಂ.ಎಸ್. **ಪುಟ್ಟಣ್ಣ ಒಂದು ಅಧ್ಯಯನ** (೧೯೮೧), ಡಾ. ಹರಿಕೃಷ್ಣ ಭರಣ್ಯ, **ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ** (೧೯೯೦), ಡಾ. ಶಿವರಾಮ ಪಡಿಕ್ಕಲ್, **ನಾಡು ನುಡಿಯ ರೂಪಕ** (೨೦೦೧). ಇವರೆಲ್ಲರ

ಕೃತಿಗಳಲ್ಲಿನ ಎಲ್ಲಾ ವಿವರಗಳನ್ನು ಮರು ಪ್ರಸ್ತಾವಿಸದೆ ಅವಶ್ಯವಾದ ಮಾಹಿತಿಗಳನ್ನು ಮಾತ್ರ ಉದಾರವಾದಿ ಸಾಂಸ್ಕೃತಿಕ ನೆಲೆ ವಿವೇಚನೆಗೆ ಬಳಸಲಾಗಿದೆ.

*೪ ಆನಾಲೊಂಬಾ ತಮ್ಮ **ವಸಾಹತು/ವಸಾಹತೋತ್ತರ** ಚಿಂತನೆಯಲ್ಲಿ ರಾಷ್ಟ್ರವನ್ನು ಕಟ್ಟುವ ಪ್ರಕ್ರಿಯೆಯಲ್ಲಿ ಮಹಿಳೆಯರ ಪಾತ್ರವನ್ನು ಚರ್ಚಿಸಿದ್ದಾರೆ. ಸ್ತ್ರೀಯರ ಪಾತ್ರದ ಬಗ್ಗೆ ಗುರುತಿಸಿದ್ದಾರೆ.

*೫ ಶಿವರಾಮ ಪಡಿಕ್ಕಲ್ **ನಾಡು-ನುಡಿಯ ರೂಪಕದಲ್ಲಿ ಆದರ್ಶದ ವೈಭವೀಕರಣ ಮತ್ತು ಪುನರುತ್ಥಾನವಾದಿ ಕಾದಂಬರಿಗಳು** ಈ ಕುರಿತು ಚರ್ಚಿಸುವ ಸಂದರ್ಭದಲ್ಲಿ. ಕಾದಂಬರಿಗಳ ತಾತ್ವಿಕ ಚೌಕಟ್ಟು ಯಾವ ಬಗೆಯದ್ದು ಎನ್ನುವುದನ್ನು ನಾಲ್ಕು ವಿಭಾಗಗಳಲ್ಲಿ ಪರಿಗಣಿಸಬಹುದು ಎಂದು ಹೇಳುತ್ತಾರೆ. ಅದರಲ್ಲಿ ೧. ಆರ್ಯ ಕುಲಾಂಗನೆಯರನ್ನು ವೈಭವೀಕರಿಸುವ ಕಾದಂಬರಿಗಳು. ೨. ಸ್ತ್ರೀ ಸಮಸ್ಯೆ ಕೇಂದ್ರವಾಗಿರುವ, ಗೃಹ ಚಿತ್ರವನ್ನು ಮಂಡಿಸುವ ಕಾದಂಬರಿಗಳು ೩. 'ಗತವೈಭವ'ವನ್ನು ವಸ್ತುವಾಗಿರಿಸಿ ಕೊಂಡ ಕಾದಂಬರಿಗಳು ೪. ಪತ್ತೇದಾರಿ ಕಾದಂಬರಿಗಳು. ಈ ನಾಲ್ಕು ವಿಭಾಗಗಳ ಕಾದಂಬರಿಗಳಲ್ಲಿ ಆದರ್ಶ ಮತ್ತು ವಾಸ್ತವದ ಸಂಬಂಧವು ಅಸಂಭಾವ್ಯ ಮತ್ತು ಅವ್ಯಕ್ತವಾಗಿರುವ ಬಗೆಯನ್ನು ವಿಶ್ಲೇಷಿಸಬಹುದು ಎಂದು ಹೇಳುತ್ತಾರೆ. (೨೦೦೧ :ಪುಟ ೯೧ - ೧೧೬)

*೬ ಅಣ್ಣಾಜಿ ರಾವ್ ಎಂ.ಆರ್. ಅವರ **ಗೌರಿ** (೧೯೦೮) **ಶರಣಾಗತ** (೧೯೦೫), ಅನಂತನಾರಾಯಣ ಶಾಸ್ತ್ರಿ ನಂಜನಗೂಡು ಅವರ **ಸತ್ಯವತೀ ಚರಿತ್ರೆ** (೧೮೯೪), ಆರ್.ಎನ್.ಎಂ. ಅವರ **ಸಾವಿತ್ರಿ** (೧೯೧೭), ಕರ್ಕಿ, ವೆಂಕಟರಮಣಶಾಸ್ತ್ರಿ ಇವರ **ಇಗಪ್ಪ ಹೆಗಡೇ ವಿವಾಹ ಪ್ರಹಸನ ಅಥವಾ ಕನ್ಯಾ ವಿಕ್ರಯದ ಪರಿಣಾಮವು** (೧೮೮೭), ಕೆರೂರವಾಸುದೇವಾಚಾರ್ಯ ಇವರ **ಇಂದಿರಾ** (೧೯೦೮), ಗಳಗನಾಥರ **ತಿಲೋತ್ತಮ** (೧೯೧೭), **ಪ್ರಬುದ್ಧ ಪದ್ಮನಯನೆ** (೧೯೫೭), ಗುಲವಾಡಿ ವೆಂಕಟರಾವ್ ಅವರ **ಇಂದಿರಾಬಾಯಿ** (೧೮೯೯), ಮತ್ತು **ಭಾಗೀರಥಿ** ಅಥವಾ **ಮೂರ್ಖತ್ವದ ಯಾತನೆಗಳು** (೧೯೦೦) ಈ ಕೃತಿಗಳು ಬಾಲ್ಯವಿವಾಹದ ಕುರಿತಂತೆ ದೀರ್ಘ ನಿರೂಪಕಗಳಾಗಿವೆ.

*೭ ಲೊಂಬ ಆರ್.ಎಂ ಮತ್ತು ಮದನ್ ಜಿ.ಆರ್. ಸಂಪಾದಿಸಿದ 'Society and Culture' ಎನ್ನುವ ಕೃತಿಯಲ್ಲಿ 'Marriage and status of women' ಎನ್ನುವ ಲೇಖನದಲ್ಲಿ ವೈದಿಕಶಾಹಿ ಕುಟುಂಬಗಳು ವೈಧವ್ಯವನ್ನು ಆಚರಿಸುವ ಕ್ರಮಗಳ ಕುರಿತು ದೀರ್ಘ ಚರ್ಚೆಇದೆ. (ಪುಟ ೨೦೫, ೨೨೨.)

(Loomba R.M. and Madan G.R. (Edi) : Society and Culture: Allied Publishers Private Limited New Delhi 1987.)

*೮ ಬಂಗಾಳದ ವಿಧವೆಯರಿಗೆ ಆಯ್ಕೆಯ ಅವಕಾಶ ಎಂಬುದೇ ಇರಲಿಲ್ಲ. ಸಮಾಜದ ದೃಷ್ಟಿಯಲ್ಲಿ ವಿಧವೆತನ ಎಂಬುದು ಅತಿ ಸುಲಭವಾಗಿ ಅಪರಾಧವೆಂಬಂತೆ ನಿರ್ಣಯಗೊಂಡು ಬಿಡುತ್ತಿತ್ತು. ವಾರಣಾಸಿ, ಗಯಾ, ಕಾಶಿಯಂಥ ಯಾತ್ರಾ ಸ್ಥಳಗಳಲ್ಲಿ ಆಶ್ರಮಗಳಲ್ಲಿ ಇದ್ದು ಬಿಕ್ಷೆ ಬೇಡಿ ಬದುಕುವ ವಿಧವೆಯರ ಸ್ಥಿತಿ ಮತ್ತು ಅಂತಹ ಸ್ಥಳಗಳಲ್ಲಿ ದೇಹವನ್ನು ಮಾರಾಟಕ್ಕಿಟ್ಟು ಬದುಕುವ ವಿಧವೆಯರ ಸ್ಥಿತಿ ಇಂದಿಗೂ ಕೂಡ ಅತಿ ಶೋಚನೀಯ. ಇದನ್ನು 'Economic and Political weekly' (April 1, 2000)ಯಲ್ಲಿ ಬಂದ 'Swath Ghosh' ಅವರ 'Bengali widows of Varanasi' ಎನ್ನುವ ಲೇಖನ ಗಂಭೀರವಾಗಿ ಚರ್ಚೆಗೆ

ಎತ್ತಿಕೊಂಡಿದೆ. ಪುರುಷ ಪ್ರಧಾನ ಸಮಾಜದ ರಾಜಕೀಯ, ಆರ್ಥಿಕ ಹುನ್ನಾರಗಳನ್ನು ಬಯಲುಗೊಳಿಸಲು ಪ್ರಯತ್ನಿಸಿದೆ.

*೯ ಸತಿಹೋಗುವ ಪದ್ಧತಿಯ ಕುರಿತಂತೆ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೇ ಆಗಲಿ, ಮನುಸ್ಮೃತಿಯಲ್ಲಿಯೇ ಆಗಲಿ ನಿರ್ದಿಷ್ಟ ವಿವರಗಳಿಲ್ಲ. ಇದು ರಜಪೂತರ ಕಾಲದಲ್ಲಿ ಒಂದು ಅಧಿಕೃತ ಆಚರಣೆಯಾಗಿ ಚಾಲ್ತಿಗೆ ಬಂದಿರುವುದು ವ್ಯಕ್ತವಾಗುತ್ತದೆ.

*೧೦ ತಿರುಮಲಾಂಬ ಅವರ ಆರು ಕಾದಂಬರಿಗಳು: ನಭಾ, ವಿರಾಗಿಣಿ, ಮಣಿಮಲಾ, ಗಿರಿಜಾಬಾಯಿ, ವಿದ್ಯುಲ್ಲತೆ, ಈ ಐದು ಕೃತಿಗಳು ವಿಜಯಾದಬ್ಬೆ ಸಂಪಾದಿಸಿರುವ ತಿರುಮಲಾಂಬ ಅವರ ಬದುಕು-ಬರಹ (೧೯೯೨) ಗ್ರಂಥದಲ್ಲಿ ಒಟ್ಟಾಗಿ ಸಿಗುತ್ತವೆ. ಮಾತ್ರ ನಂದಿನಿ ಕಾದಂಬರಿ ೧೯೧೭ರಲ್ಲಿ ಸತೀ ಹಿತೈಷಿಣಿ ಮಾತ್ರ ಮಂದಿರದಲ್ಲಿ ಪ್ರಕಟಗೊಂಡು ಮೂಲ ಪ್ರತಿಯನ್ನೇ ಅಧ್ಯಯನದಲ್ಲಿ ಗಮನಿಸಲಾಗಿದೆ. ಕಲ್ಯಾಣಮ್ಮನವರ ಎರಡು ಕಾದಂಬರಿಗಳು: ನಿರ್ಭಾಗ್ಯವಂತೆಯು ಸಮಿತ್ರಾಬಾಯಿ ಬಿ.ಎನ್ ಅವರ ಸಂಪಾದಿತ ಗ್ರಂಥ 'ಕಲ್ಯಾಣ ಸರಸ್ವತಿ' (೧೯೯೨)ಯಲ್ಲಿ ಇದೆ. ಪ್ರಿಯಂವದೆ: ೧೯೨೨ರಲ್ಲಿ ಶಾರದಾ ಗ್ರಂಥಾಲಯ ಚಾಮರಾಜಪೇಟೆ ಬೆಂಗಳೂರಿನಿಂದ ಪ್ರಕಟಗೊಂಡಿದ್ದು, ಅಧ್ಯಯನಕ್ಕೆ ಮೂಲ ಪ್ರತಿಯನ್ನೇ ಬಳಸಿಕೊಳ್ಳಲಾಗಿದೆ.

*೧೧ ವರದಕ್ಷಿಣೆ ಒಂದು ಸಾಮಾಜಿಕ ಪಿಡುಗು. ಇದರಿಂದ ಸಮಾಜವನ್ನು ಮುಕ್ತವಾಗಿಸಲು ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಅಧಿನಿಯಮ ಜಾರಿಗೆ ಬಂದಿತು. ಕಾನೂನಿನ ಉದ್ದೇಶ ಎಷ್ಟೇ ನಿಖರವಾಗಿದ್ದರೂ ಆಚರಣೆಯಲ್ಲಿ ಕೆಲವು ನ್ಯೂನ್ಯತೆಗಳಿಂದಾಗಿ ಹಾಗೂ ಸಾಕ್ಷ್ಯಗಳ ಕೊರತೆಯಿಂದಾಗಿ ಪರಿಣಾಮ ಶೂನ್ಯವಾಗಿ ಬಿಡುತ್ತದೆ. ಇದಕ್ಕೆ ಉದಾಹರಣೆಯಾಗಿ ಸರ್ವೋಚ್ಚನ್ಯಾಯಾಲಯ ನೀಡಿದ ಶ್ರೀಮತಿ ಲಕ್ಷ್ಮಿದೇವಿ v/s ರಾಜಸ್ಥಾನದ ರಾಜ್ಯ (ಎಐಆರ್ ೧೯೮೮ ಎಸ್‌ಸಿ ೧೭೮೫) ಪ್ರಕರಣದ ತೀರ್ಪನ್ನು ಗಮನಿಸಬಹುದು. ಪತಿ ಅಥವಾ ಅತ್ತೆ ಮಾವಂದಿರು ವರದಕ್ಷಿಣೆ ಬೇಡಿದಲ್ಲಿ ಅದು ಅಪರಾಧವೆನಿಸುತ್ತದೆ ಮತ್ತು ಕ್ರೌರ್ಯತೆಯ ಕಾರಣದ ಮೇಲೆ ಪತಿಯಿಂದ ವಿಚ್ಛೇದನೆ ಪಡೆಯಲು ಪತ್ನಿಗೆ ಹಕ್ಕಿರುತ್ತದೆ ಎಂದು ಹಾಗೂ ಶೋಭಾ ರಾಣಿv/sಮಧುಕರ ರೆಡ್ಡಿ ಪ್ರಕರಣದಲ್ಲಿ (ಎಐಆರ್ ೧೯೮೮ ಎಸ್‌ಸಿ ೧೨೧) ಇಂಥ ತೀರ್ಪುಗಳು ಸಮಾಜ ಸುಧಾರಣೆಯಲ್ಲಿ ಬಹುಮುಖ್ಯ ಪಾತ್ರವಹಿಸುತ್ತದೆ.

*೧೨ ತಿರುಮಲಾಂಬ ಮತ್ತು ಕಲ್ಯಾಣಮ್ಮನವರ ಬರವಣಿಗೆಗಳನ್ನು ಸುಮಿತ್ರಾಬಾಯಿ ಗುರುತಿಸಿದ ರೀತಿ ಮಹಿಳಾ ಸಾಹಿತ್ಯ ಚರಿತ್ರೆಯನ್ನು ರೂಪಿಸುವಲ್ಲಿ ಮುಖ್ಯ. ಆರಂಭದ ಲೇಖಕಿಯರಾದ ಇವರ ಬರಹಗಳ ಮಾದರಿ ಪೂರ್ವದ ಲೇಖಕರಾದ ಗುಲ್ವಾಡಿ ವೆಂಕಟರಾಯ, ಬೋಳಾರ ಬಾಬುರಾಯ, ಟಿ.ಎಸ್. ಪುಟ್ಟಣ್ಣ ಅವರ ಮಾದರಿ ಸ್ವರೂಪದ್ದು. ಅಲ್ಲದೆ, ತಮ್ಮದೇ ಆದ ಅನನ್ಯ ನೆಲೆಯಲ್ಲಿ ಕೃತಿರಚನೆ ನಡೆಸುತ್ತಿದ್ದ ಕುವೆಂಪು, ಕಾರಂತರಂತಹ ಕಾದಂಬರಿಕಾರರ ಮಧ್ಯದಲ್ಲಿ ಈ ಲೇಖಕಿಯರನ್ನು ಗುರುತಿಸುವ ಕನಿಷ್ಠ ಪ್ರಯತ್ನ ಆ ಕಾಲದ ಸಾಹಿತ್ಯ ಚರಿತ್ರೆಕಾರರಲ್ಲಿ ವಿಮರ್ಶಕರಲ್ಲಿ ಇರಲಿಲ್ಲ. ಸಾಹಿತ್ಯದ ಸಾಂಸ್ಕೃತಿಕ ರಾಜಕಾರಣದಲ್ಲಿ ಲೇಖಕಿಯರು ಹೇಗೆ ಎರಡನೇ ದರ್ಜೆಯ ನೆಲೆಯಲ್ಲಿ ನಿಲ್ಲುತ್ತಾರೆ ಎಂಬುದು ಇಲ್ಲಿ ಮುಖ್ಯವಾಗುವ ಅಂಶ. ಭಾರತೀಯ ಇತಿಹಾಸದಲ್ಲಿ ಯಾವುದೇ ಕ್ಷೇತ್ರಗಳಲ್ಲೂ ಸ್ತ್ರೀಯರು ಎಂದೂ ಪ್ರಧಾನವಾಹಿನಿಯ

ಅನುಸಂಧಾನದೊಂದಿಗೆ ಮುಖಾಮುಖಿಯಾಗಿರಲಿಲ್ಲ. ಈ ಅಸಮಾನತೆಯನ್ನು ಸಾಹಿತ್ಯದಲ್ಲಿಯೂ ನಿರ್ದಿಷ್ಟವಾಗಿ ಗುರುತಿಸಬಹುದು. ಇದಕ್ಕೆ ಮುಖ್ಯ ಕಾರಣ ಪುರುಷಶಾಹಿ ಯಾಜಮಾನ್ಯದ ಆಯಾಮಗಳೆ ಆಗಿವೆ. ವಸಾಹತು ಇಂಡಿಯಾದಲ್ಲಿ ಶಿಕ್ಷಣ, ಸಾಹಿತ್ಯಕ್ಕೆ ಸ್ತ್ರೀಯರು ಪ್ರವೇಶಿಸಿದ್ದು ಪುರುಷರ ಜೊತೆಜೊತೆಯಾಗಿ ಆಗಿರದೆ, ಅವರ ನಂತರವೇ ಆಗಿದೆ. ಸಾಂಸ್ಕೃತಿಕ ರಾಜಕಾರಣದ ದ್ವಂದ್ವತೆ ಸಹಜವಾಗಿ ಸಾಹಿತ್ಯದಲ್ಲಿಯೂ ಪ್ರಕಟಗೊಂಡಿದೆ. ಈ ಪಾರ್ಶ್ವಿಕ ನೋಟವನ್ನು ತೊರೆದು ಸಮಗ್ರವಾಗಿ ಅವಲೋಕಿಸಿದರೆ ಮೊದಲ ಕಟ್ಟಿನ ಕಾದಂಬರಿಕಾರರನ್ನು 'ಸಾಹಿತ್ಯ ಚರಿತ್ರೆ' ಆಮೂಲಾಗ್ರವಾಗಿ ಪರಿಶೀಲಿಸದೆ ಇರುವ ದೋಷ ಒಡೆದು ತೋರುತ್ತದೆ. ಅಲ್ಲದೆ, ಸಾಹಿತ್ಯ ಚರಿತ್ರೆಯ ಪುನರ್‌ನಿರ್ಮಾಣದ ಅನಿವಾರ್ಯತೆಯು ಸ್ಪಷ್ಟಗೊಳ್ಳುತ್ತದೆ.

*೧೩ತ್ರಿವೇಣಿಯವರು ಬರೆದ ೨೧ ಕಾದಂಬರಿಗಳಲ್ಲಿ ಈ ಅಧ್ಯಯನದಲ್ಲಿ ೯ ಕಾದಂಬರಿಗಳನ್ನಷ್ಟೇ ಗಮನಿಸಲಾಗಿದೆ. ಅವುಗಳೆಂದರೆ, ಹೂವು ಹಣ್ಣು (೧೯೫೦), ಅಪಸ್ವರ (೧೯೫೩), ಕೀಲು ಗೊಂಬೆ (೧೯೫೬), ಅಪಜಯ (೧೯೫೬), ಕಂಕಣ (೧೯೫೭), ಮುಕ್ತಿ (೧೯೫೯), ಕಾಶೀಯಾತ್ರೆ (೧೯೬೨), ಶರಪಂಜರ (೧೯೬೨), ಹಣ್ಣೆಲೆ ಚಿಗುರಿದಾಗ (೧೯೬೩). ಇಂದಿರಾ.ಎಂ.ಕೆ ಅವರು ಬರೆದ ೪೧ ಕಾದಂಬರಿಗಳಲ್ಲಿ ಈ ಅಧ್ಯಯನದಲ್ಲಿ ೯ ಕಾದಂಬರಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ತುಂಗ ಭದ್ರ (೧೯೬೩), ಹೆಣ್ಣಿನ ಆಕಾಂಕ್ಷೆ (೧೯೬೬), ಗೆಜ್ಜೆ ಪೂಜೆ (೧೯೬೬), ಮನತುಂಬಿದ ಮಡದಿ (೧೯೬೯), ಚಿದ್ವಿಲಾಸ (೧೯೭೧), ಸದಾನಂದ (೧೯೭೫), ಮಧುವನ(೧೯೭೬), ಫಣಿಯಮ್ಮ (೧೯೭೬), ಸೂತ್ರಧಾರ (೧೯೮೪).

## ಕೊನೆ ಟಿಪ್ಪಣಿ

೧. ಕುರ್ತಕೋಟಿ.ಕೆ.ಡಿ. : (೧೯೯೧) ಯುಗಧರ್ಮ ಹಾಗೂ ಸಾಹಿತ್ಯ ದರ್ಶನ ; ಮನೋಹರ ಗ್ರಂಥಮಾಲೆ, ಧಾರವಾಡ.

೨. ಗಾಯತ್ರಿ ಎನ್: (೧೯೯೬) ಮಹಿಳೆ ಬಿಡುಗಡೆಯ ಹಾದಿಯಲ್ಲಿ ; ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩. ನಾಗರಾಜ್ ಡಿ.ಆರ್.(ಸಂ) :(೧೯೯೫) ಆಶೀಶ್ ನಂದಿ ವಿಚಾರ ; ಅಕ್ಷರ ಪ್ರಕಾಶನ ಸಾಗರ, ಹೆಗ್ಗೋಡು.

೪. ಪಾರ್ವತಿ ಎಚ್.ಎಸ್. (ಸಂ) :(೧೯೯೧) ಸುರಗಿ ಶ್ರೀಮತಿ ಎಂ.ಕೆ. ಇಂದಿರಾ ಅಬಿನಂದನಾ ಗ್ರಂಥ ; ಕರ್ನಾಟಕ ಲೇಖಕಿಯರ ಸಂಘ ಬೆಂಗಳೂರು.

೫. ಮಂದಾಕಿನ ಪುರೋಹಿತ:(೧೯೯೧) ಎಂ.ಕೆ. ಇಂದಿರಾ - ಸಮಗ್ರ ಅಧ್ಯಯನ ; ಹೇಮಂತ ಸಾಹಿತ್ಯ, ಬೆಂಗಳೂರು.

೬. ರಾಮಚಂದ್ರನ್ ಸಿ.ಎನ್. :(೧೯೯೯) ತ್ರಿವೇಣಿ (ಅನಸೂಯ ಶಂಕರ್); ಸಾಹಿತ್ಯ ಅಕೆಡೆಮಿ, ನವದೆಹಲಿ.

೭. ವಿಜಯಾದಬ್ಬೆ (ಸಂ): (೧೯೯೭) ಹಿತೈಷಿಣಿಯ ಹೆಜ್ಜೆಗಳು ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೮. ವಿವೇಕ ರೈ. ಬಿ.ಎ.(ಸಂ): (೧೯೮೭) ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು; ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು

೯. ಸುಮಿತ್ರಾ ಬಾಯಿ ಬಿ.ಎನ್(ಸಂ): (೧೯೯೨) ಕಲ್ಯಾಣ ಸರಸ್ವತಿ ; ಇಳಾ ಪ್ರಕಾಶನ, ಬೆಂಗಳೂರು.

೧೦. ಶ್ರೀಮತಿ ಎಚ್.ಎಸ್.: (೨೦೦೧) ತ್ರಿವೇಣಿಯವರ ಕಾದಂಬರಿಗಳ ಮರು ಓದು; ತ್ರಿವೇಣಿ ಪಬ್ಲಿಕೇಷನ್ಸ್, ಮೈಸೂರು.

11. Bipanchandra :(1979) Nationalism and Colnialism in Modern India ;Orient Longman,Londan.

12. Hari Bilas Sarda : (1935) Speeches and writings ; Ajmeer vedic yantralaya.

13. Natarajan. K.: (1928) Miss Mayo's Mother India ; A Rejoinder (Madras: G.A.Natesan and Co.

14. Partha Ghatterjee: (1986) Nationalist Thought and the Colonial world; A Derivative Discourse, Delhi.

15. Surest Renjen Bold: (1989) Novelists and Political Conciousness; Chanakya Publications Delhi.

16. Sucheta, Kriplani: (1975) An unfinished Auto Biography; Calcutta Association Press.

17. Susie tharn K Lalitha : (1995) Women writing in India ;Oxford University Press Mubai.

18. Usha Chakraborty: (1963) Condition of Bengali woman Around the second Half of Nineteenth Century; Culcutta.

19. Vijya Agnew: (1979) Elite women in Indian Politics Vikas Publishing House; New Delhi.

## ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ : ವಿವಾಹ ಮತ್ತು ಕುಟುಂಬ ಪರಿಕಲ್ಪನೆ .

೪. ೧. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ .

೪.೧.೧ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ -ಗಾಂಧಿವಾದ .

೪.೧.೨ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಅಂಬೇಡ್ಕರ್‌ವಾದ .

೪.೧.೩ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಲೋಹಿಯಾವಾದ .

೪.೧.೪ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಮಾರ್ಕ್ಸ್‌ವಾದ .

೪.೧.೫ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ : ಸ್ತ್ರೀಯರ ಸ್ಥಿತಿಗತಿ.

೪.೨. ಮೊದಲ ಕಟ್ಟಿನ ಕಾದಂಬರಿಗಳು

೪.೨.೧ ಮೊದಲ ಕಟ್ಟಿನ ಕಾದಂಬರಿಗಳು : ವಿವಾಹದ ಸ್ವರೂಪ.

೪.೨.೨. ಮೊದಲ ಕಟ್ಟಿನ ಕಾದಂಬರಿಗಳು: ದಾಂಪತ್ಯದ ಸ್ವರೂಪ.

೪.೨.೩ ಮೊದಲ ಕಟ್ಟಿನ ಕಾದಂಬರಿಗಳು: ಕುಟುಂಬದ ಸ್ವರೂಪ.

೪.೩. ಕೂಡು ಕಟ್ಟಿನ ಕಾದಂಬರಿಗಳು .

೪.೩.೧. ಕೂಡುಕಟ್ಟಿನ ಕಾದಂಬರಿಗಳು: ವಿವಾಹದ ಸ್ವರೂಪ.

೪.೩.೨ ಕೂಡುಕಟ್ಟಿನ ಕಾದಂಬರಿಗಳು :ದಾಂಪತ್ಯದ ಸ್ವರೂಪ.

೪.೩.೩ ಕೂಡುಕಟ್ಟಿನ ಕಾದಂಬರಿಗಳು: ಕುಟುಂಬದ ಸ್ವರೂಪ.

**೪.೧. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ :**

ಇಂಡಿಯಾದ ವಸಾಹತೋತ್ತರ *೧ ಸಮಾಜವು ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳಶಾಹಿ ಸಮಾಜವಾಗಿ ಮಾರ್ಪಟ್ಟಿದೆ. ಊಳಿಗಮಾನ್ಯ ಸಮಾಜವು ಬಂಡವಾಳಶಾಹಿ ಸಮಾಜವಾಗಿ ಮಾರ್ಪಡುವ ಆರಂಭಿಕ ಹಂತದಲ್ಲಿ ಬಂಡವಾಳ ಸಂಚಯನ (ಕ್ರೋಢೀಕರಣ)ದಿಂದಾಗಿ ಸಣ್ಣ ಉತ್ಪಾದನೆಯು ನಿರ್ನಾಮಗೊಂಡಿದೆ. ಪರಿಣಾಮವಾಗಿ ಬಂಡವಾಳಶಾಹಿ ಖಾಸಗಿ ಆಸ್ತಿ ಅಸ್ತಿತ್ವಕ್ಕೆ ಬಂದು, ಉತ್ಪಾದನಾ ಸಾಧನಗಳನ್ನು ಕೇಂದ್ರೀಕರಿಸಲು ಮತ್ತು ದೊಡ್ಡ ಮಟ್ಟದಲ್ಲಿ ಉತ್ಪಾದನೆ ನಡೆಸಲು ಬಂಡವಾಳಶಾಹಿ ವ್ಯವಸ್ಥೆಗೆ ಸಾಧ್ಯವಾಗಿದೆ. ಇದರಿಂದಾಗಿ ಒಂದು ಹಂತದಲ್ಲಿ (ನೆಹರೂ ಆಡಳಿತಾವಧಿಯಲ್ಲಿ) ಉತ್ಪಾದನಾ ಶಕ್ತಿಗಳ ಬೆಳವಣಿಗೆಗೆ ಅನುಕೂಲಕರವಾದ ಪರಿಸ್ಥಿತಿ ಸೃಷ್ಟಿಯಾದದ್ದು 'ಸಾಂದರ್ಭಿಕ ವಾಸ್ತವ'ವಾಗಿದೆ. ಇದು ಉತ್ಪಾದಿಸುವ ಲಾಭ ಹಾಗೂ ಕೂಲಿ ಶ್ರಮದ ನಡುವೆ ದೊಡ್ಡ ಅಂತರವನ್ನು ನಿರ್ಮಿಸಿದೆ. ಹೀಗಾಗಿ ಬಂಡವಾಳವಾದವು ಕೂಲಿ ಶ್ರಮದ ಶೋಷಣೆಯನ್ನಾಧರಿಸಿದ ಒಂದು ಉತ್ಪಾದನಾ ವಿಧಾನ, ಒಂದು ಸಮಾಜ ವ್ಯವಸ್ಥೆಯಾಗಿದೆ. ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭ ಎನ್ನುವುದು ಇಂಡಿಯಾದ ಊಳಿಗಮಾನ್ಯ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಒಡಲೊಳಗೆ ಕಾಣಿಸಿಕೊಳ್ಳುತ್ತದೆ.

> "ತಮ್ಮ ದೇಶದ ಊಳಿಗಮಾನ್ಯತೆಯ ವಿರುದ್ಧ ಪ್ರಗತಿಪರ ಹೋರಾಟವನ್ನು ನಡೆಸಿದ್ದಂತಹ ಬ್ರಿಟಿಷ್ ವಸಾಹತುಶಾಹಿ ಬಂಡವಾಳಿಗರು ಭಾರತದಲ್ಲಿ ಮಾತ್ರ ಊಳಿಗಮಾನ್ಯ ಶಕ್ತಿಗಳನ್ನೇ ಆಧರಿಸಿ ನೆಲೆ ನಿಂತರು. ವಸಾಹತುಶಾಹಿ ಲೂಟಿಗೆ ಅಗ್ಗದ ದರದಲ್ಲಿ ಕಚ್ಚಾವಸ್ತುಗಳು ಮತ್ತು ಅಗ್ಗದ ಶ್ರಮವೂ ಅಗತ್ಯವಾಗಿದ್ದವು. ನಮ್ಮ ದೇಶದ ಊಳಿಗಮಾನ್ಯ ರಚನೆಯು ಇವೆರಡನ್ನೂ ವಸಾಹತುಶಾಹಿಗಳಿಗೆ ಒದಗಿಸಿತು". (ವಸಂತ ಬನ್ನಾಡಿ ;೧೯೯೫ ;೪೮)

ವಸಾಹತುಶಾಹಿ ವ್ಯವಸ್ಥೆ ಆದರ ಹಿತಾಸಕ್ತಿಗೆ ಅನುಗುಣವಾಗಿ ಒಂದು ಕಡೆ ಪುರುಷಾಧಿಪತ್ಯವನ್ನು ಒಳಗೊಂಡ ಊಳಿಗಮಾನ್ಯ ವ್ಯವಸ್ಥೆಯನ್ನು ಸದೃಢಗೊಳಿಸಿದೆ. ಮತ್ತೊಂದು ಕಡೆಯಿಂದ ಇಂಡಿಯಾದ ಗ್ರಾಮೀಣ ಪ್ರದೇಶಗಳಲ್ಲಿ ಊಳಿಗಮಾನ್ಯತೆ ಮತ್ತು ಬಂಡವಾಳಶಾಹಿ ಈ ಎರಡೂ ಬಗೆಯ ಸಮ್ಮಿಶ್ರ ವ್ಯವಸ್ಥೆಯನ್ನು ಹುಟ್ಟುಹಾಕಿದೆ. ಈ ಎರಡೂ ಬಗೆಯ ಶೋಷಣೆಯ ವ್ಯವಸ್ಥೆಯಲ್ಲಿ ಹೆಚ್ಚು ನಿರ್ಗತಿಕರಾದವರೆಂದರೆ ಸ್ತ್ರೀಯರು. ಅಗ್ಗದ ಶ್ರಮ ಶಕ್ತಿಯ ಮೂಲವಾಗಿ ಬಂಡವಾಳಶಾಹಿ ಕೈಗಾರಿಕೆಗಳಿಗೆ ಒಳಗಾಗಿ, ಊಳಿಗಮಾನ್ಯ ಜೀತದಾಳುಗಳಾಗಿ ಮಹಿಳೆಯರು ಆರ್ಥಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಗುಲಾಮರಾದರು. ಇಂಡಿಯಾದ ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭವು ಊಳಿಗಮಾನ್ಯತೆ ಮತ್ತು ಪುರುಷಾಧಿಪತ್ಯದ ಬಂಡವಾಳಶಾಹಿ ಹಿತಾಸಕ್ತಿಗೆ ಅನುಗುಣವಾಗಿ ರೂಪಿತಗೊಂಡಿದೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯನ್ನು ೧೯೫೦ರ ಕಾಲಘಟ್ಟದ ನಂತರದಿಂದ ನಿರ್ದಿಷ್ಟ ಗೊಳಿಸಿಕೊಳ್ಳಬಹುದು. ಸ್ವತಂತ್ರ ಭಾರತದ ಪ್ರಜಾಪ್ರಭುತ್ವ - ಜಾತ್ಯತೀತ- ಗಣರಾಜ್ಯ ರಾಜಕೀಯ ವ್ಯವಸ್ಥೆಯು ಕಾನೂನಿನ ಚೌಕಟ್ಟಿನಲ್ಲಿ ದೇಶದ ಎಲ್ಲಾ ಪ್ರಜೆಗಳಿಗೂ ಸ್ವಾತಂತ್ರ್ಯ- ಸಮಾನತೆಯ ಹಕ್ಕನ್ನು ಕಲ್ಪಿಸಿದೆ. ಪರಿಣಾಮವಾಗಿ ಜನರ ಜೀವನ ವಿಧಾನಗಳಲ್ಲಿ ಮಹತ್ವದ ಮಾರ್ಪಾಡುಗಳು ಪ್ರಕಟಗೊಂಡಿವೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯು ಈ ಅರ್ಥದಲ್ಲಿ ಉದಾರವಾದಿ ಸಾಂಸ್ಕೃತಿಕ ನೆಲೆಯ ಭ್ರಮನಿರಸನಗಳಿಂದ ರೂಪಿತಗೊಂಡಿದೆ. ಎಂದರೆ, ಸುಧಾರಣಾ ಚಳವಳಿಗಳು, ಪ್ರಾರಂಭದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ತುರ್ತುಗಳನ್ನು ಮಾತ್ರ ಗಂಭೀರವೆಂದು ಪರಿಗಣಿಸಿ ಸಂದರ್ಭ ಸ್ಪಂದಿಗಳಾಗಿ ಮಾತ್ರ ಕಾಣಿಸಿಕೊಂಡವು. ಅವುಗಳಿಗೆ ದೀರ್ಘಕಾಲ ತಮ್ಮ ಪ್ರಣಾಳಿಕೆಗಳ ತಾತ್ತ್ವಿಕತೆಯ ಭಿತ್ತಿಗಳನ್ನು ಜೀವಂತವಾಗಿಟ್ಟುಕೊಳ್ಳುವುದು ಸಾಧ್ಯವಾಗಿರಲಿಲ್ಲ. ಮತ್ತು ಅವು ಸಮಾಜದ ಮೇಲುವರ್ಗದ ಆಶೋತ್ತರಗಳಿಗೆ ಮಾತ್ರ ಬದ್ಧವಾಗಿದ್ದವು. ಉಳಿದ ಬಹುಸಂಖ್ಯಾತ ಜನರ ಜೀವನದಿಂದ ಬೇರ್ಪಟ್ಟಿದ್ದವು. ಹೆಚ್ಚಾಗಿ ಇಂತಹ ಸುಧಾರಣೆಗಳ ಕೇಂದ್ರ ಇಂಡಿಯಾದ ಬಹುಸಂಖ್ಯಾತ ಜನವರ್ಗವಾಗಿರಲೇ ಇಲ್ಲ. ಅಲ್ಲದೆ ಸ್ವತಂತ್ರ ಇಂಡಿಯಾದ ನೆಹರು ಸರ್ಕಾರದ ರಾಜಕೀಯ ಆಡಳಿತವು ಉದಾರವಾದಿ ಸಾಂಸ್ಕೃತಿಕ ನೆಲೆಯ ಆದರ್ಶಗಳನ್ನು ಹುಸಿಗೊಳಿಸಿದವು.*೨ ಪರಿಣಾಮವಾಗಿ ಕನ್ನಡದ ಸಂದರ್ಭದಲ್ಲಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯು ನೆಹರೂವಾದಕ್ಕಿಂತ ಪ್ರತ್ಯೇಕವಾಗಿ, ಪೂರ್ವದ ಮಾನವತಾವಾದಕ್ಕಿಂತ ಭಿನ್ನವಾಗಿ ಗಾಂಧಿವಾದ, ಅಂಬೇಡ್ಕರ್‌ವಾದ, ಲೋಹಿಯಾವಾದ, ಮತ್ತು ಮಾರ್ಕ್ಸ್‌ವಾದಗಳ ಪ್ರೇರಣೆ ಮತ್ತು ಪ್ರಭಾವಗಳಿಂದ ರೂಪಿತವಾಗಿದೆ. ಈ ಮನೋಭೂಮಿಕೆಯು ಮಹಿಳೆಯರ ಜೀವನ ವಿಧಾನಗಳನ್ನು ಗಮನಾರ್ಹ ರೀತಿಗಳಲ್ಲಿ ಮಾರ್ಪಾಡುಗೊಳಿಸಿದೆ.

ಸಮಾಜದ ಮೂಲಭೂತ ಸನ್ನಿವೇಶಗಳು, ಸದಾ ಪರಿವರ್ತನಶೀಲ, ಪರಿಸ್ಥಿತಿಗಳಲ್ಲಿನ ಬದಲಾವಣೆಗಳಿಂದ ಒಟ್ಟು ವ್ಯವಸ್ಥೆಯಲ್ಲಿಯೂ ಬದಲಾವಣೆಗಳು ಉಂಟಾಗುತ್ತವೆ. ಏಕೆಂದರೆ ಪರಿಸ್ಥಿತಿ ಮತ್ತು ವ್ಯವಸ್ಥೆಯ ನಿಲುವು ಅಥವಾ ಧೋರಣೆಗಳು ಒಂದನ್ನೊಂದು ಸದಾ ಅನುಸರಿಸುವಂತಹದ್ದಾಗಿರುತ್ತದೆ. ಸಿದ್ಧಾಂತಗಳು ಎಷ್ಟರಮಟ್ಟಿಗೆ ಸಾರ್ಥಕವಾಗಿವೆ ಎಂಬುದು ಅವುಗಳು ಕಾರ್ಯರೂಪದಲ್ಲಿ ಅನುಷ್ಠಾನಗೊಂಡಾಗ ಮಾತ್ರವೇ ಅರ್ಥೈಸಲು ಸಾಧ್ಯವಾಗುತ್ತದೆ. ಇಂಡಿಯಾದಲ್ಲಿ ಅಧಿಕಾರವನ್ನು ವಹಿಸಿಕೊಂಡ ಕಾಂಗ್ರೆಸ್ ಸರ್ಕಾರ ಗಾಂಧಿವಾದವನ್ನು ತಾತ್ವಿಕವಾಗಿ ಅಂಗೀಕರಿಸುವ ಪ್ರಯತ್ನ ನಡೆಸಿತೇ ವಿನಾ ಆಚರಣೆಯ ನೆಲೆಯಲ್ಲಿ

ವಿಫಲತೆಯನ್ನು ಕಂಡಿತು. ಸತ್ಯ ಮತ್ತು ಅಹಿಂಸೆ ಹಾಗೂ ನ್ಯಾಯದ ಬಗೆಗಿನ ಪರಂಪರಾಗತವಾದ ನಿಲುವು ಅಥವಾ ಧೋರಣೆಗಳನ್ನು ಮುಖ್ಯವಾದುವೆಂದು ಭಾವಿಸುವ ಮತ್ತು ಅವನ್ನು ಶಾಶ್ವತವಾಗಿ ಉಳಿಸಿಕೊಂಡು ಬರುವ ಕಾಂಗ್ರೆಸ್ಸಿನ ಸರಳ ಸಮೀಕರಣದ ಗಾಂಧಿವಾದದ ಪ್ರಕ್ರಿಯೆಯು ಆಂತರಿಕವಾಗಿ ಹೆಚ್ಚು ಶಿಥಿಲೀಕರಣಕ್ಕೆ ಒಳಗಾಯಿತು. ಸಿದ್ಧಾಂತಗಳು ಮತ್ತು ಭೌತಿಕ ಹೋರಾಟಗಳ ಪರಸ್ಪರ ಚಲನೆಗಳು ಸಮಾಜದಲ್ಲಿ ವಾಸ್ತವತೆಯನ್ನು ಒರೆಗಲ್ಲಿಗೆ ಹಚ್ಚಲು ವಿಫಲವಾದವು. ಹೀಗಿದ್ದರೂ ಆಂತರಿಕವಾಗಿ ಇಂಡಿಯಾದ ಮಹಿಳೆಯರ ಪ್ರಗತಿಯ ಮೇಲೆ ಗಾಂಧಿವಾದವನ್ನು ಒಳಗೊಂಡಂತೆ, ಮಹತ್ವಪೂರ್ಣ ದೇಸಿ ಚಿಂತನೆಗಳ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸುವುದು ಸಾಧ್ಯವಾಗುತ್ತದೆ.

**೪.೧.೧ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಗಾಂಧಿವಾದ :**

ಸತ್ಯ ಮತ್ತ ಅಹಿಂಸೆಯನ್ನು ಆಧ್ಯಾತ್ಮಿಕ ದೃಷ್ಟಿಕೋನದಿಂದ ರಾಜಕೀಯ ಸಾವಯವ ಶಕ್ತಿಯಾಗಿ ನಿರೂಪಿಸುವ ಗಾಂಧಿ 'ವ್ಯಕ್ತಿಯ' ಹಾಗೂ 'ಸಮಾಜದ' ಪ್ರಗತಿಗೆ ಸಾಮೂಹಿಕ ಪ್ರಯತ್ನ ಮತ್ತು ಪರಸ್ಪರ ಸಹಕಾರ ಅನಿವಾರ್ಯ ಎಂಬ ತತ್ತ್ವವನ್ನು ನಿರೂಪಿಸಿದವರು. ಪರಸ್ಪರ ಸಹಕಾರದಿಂದ ವ್ಯಕ್ತಿಗಳ ಮತ್ತು ಸಮಾಜದ ಅಗತ್ಯಗಳು ಪೂರೈಕೆಯಾಗುತ್ತವೆ. ವ್ಯಕ್ತಿಗಳ ನಡುವೆ ಸಹಕಾರ ಏರ್ಪಟ್ಟಾಗ, ಒಂದಲ್ಲ ಒಂದು ಬಗೆಯ ಸಂಬಂಧಗಳೂ ರೂಪುಗೊಳ್ಳುತ್ತವೆ. ವ್ಯಕ್ತಿಗಳ ನಡುವಣ ಪರಸ್ಪರ ಸಂಬಂಧಗಳು ಸಹಬಾಳ್ವೆಯ ಮಾರ್ಗಕ್ಕೆ ಅಥವಾ ಪರಸ್ಪರ ಅಗತ್ಯಗಳನ್ನು ಪೂರೈಸಿಕೊಳ್ಳುವ ಮಾರ್ಗೋಪಾಯಗಳಿಗೆ ಪ್ರತಿಬಂಧಕಗಳಾಗಿ ಪರಿಣಮಿಸತೊಡಗಿದಾಗ ಅಸತ್ಯ, ದ್ವೇಷ, ಜಗಳ ಮತ್ತು ಹಿಂಸೆಗಳು ಉದ್ಭವಿಸುತ್ತವೆ. ವ್ಯಕ್ತಿಗಳ ನಡುವೆ ಪಾರಸ್ಪರಿಕ ಸಂಬಂಧಗಳೇ ಇಲ್ಲದೆ ಹೋಗಿದ್ದರೆ ಅವರ ನಡುವೆ ದ್ವೇಷ ಮತ್ತು ಹಿಂಸೆಗಳಿಗೆ ಅವಕಾಶಗಳು ನಿರ್ಮಾಣವಾಗುತ್ತಿರಲಿಲ್ಲ. ಆದರೆ, ಭೌತಿಕ ಅಗತ್ಯಗಳೇ ಇಲ್ಲದಿರುವಂಥ ವ್ಯಕ್ತಿಗಳನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯ. ಭೌತಿಕ ಅಗತ್ಯಗಳ ಪೂರೈಕೆಯಾಗದೆ ವ್ಯಕ್ತಿಗಳು ಜೀವಂತವಾಗಿರಲಾರರು. ಈ ಅರ್ಥದಲ್ಲಿ ಗಾಂಧಿವಾದ ಭೌತಿಕ ಹೋರಾಟವೆನಿಸುತ್ತದೆ. ಗಾಂಧಿವಾದ ಭೌತಿಕ ಹೋರಾಟವಾಗಿ, ಅಥವಾ ಪ್ರಾಪಂಚಿಕ ವಸ್ತುಗಳನ್ನು ಪಡೆದುಕೊಳ್ಳುವ ಪ್ರಯತ್ನದಲ್ಲಿ ಅಸತ್ಯಕ್ಕೆ ಅಥವಾ ಹಿಂಸೆಗೆ ಅವಕಾಶವಿರಲೇಬಾರದು ಎಂಬುದಾಗಿ ಪ್ರಬಲವಾಗಿ ಪ್ರತಿಪಾದಿಸುತ್ತದೆ. ಸಮಾಜದಲ್ಲಿ ಭೌತಿಕ ಹೋರಾಟಕ್ಕೆ ದೊರೆಯುವ ಯಶಸ್ಸಿನೊಂದಿಗೇ ವ್ಯಕ್ತಿಗಳಲ್ಲಿ ಹಾಗೂ ಸಮಾಜದಲ್ಲಿ ನೈತಿಕತೆಯ ಮತ್ತು ನ್ಯಾಯದ ಬಗೆಗಿನ ಭಾವನೆಗಳು ವಿಕಾಸಗೊಳ್ಳುತ್ತ ಹೋಗುತ್ತವೆ. ಯಾವ ಸಮಾಜದ ಭೌತಿಕ ಸಾಧನಗಳು ವಿಕಸಿತಗೊಂಡಿರುವುದಿಲ್ಲವೋ ಅಂತಹ ಸಂದರ್ಭಗಳಲ್ಲಿ ಸಾಮೂಹಿಕ ಪ್ರಯತ್ನ, ಸಾಮೂಹಿಕ ಕರ್ತವ್ಯ, ನೈತಿಕತೆ ಮತ್ತು ನ್ಯಾಯದ ಬಗೆಗಿನ ಮನೋಭಾವನೆಗಳು ತೀರಾ ಸಂಕುಚಿತಗೊಂಡಿರುತ್ತವೆ. ಇಂಥ ಸಮಾಜಗಳಲ್ಲಿನ ವ್ಯಕ್ತಿಗಳ ಚಿಂತನೆಗಳು ಮತ್ತು ವರ್ತನೆಗಳು ವೈಯಕ್ತಿಕ ಮಟ್ಟದಲ್ಲಿ ಕುಟುಂಬದ ಸ್ವಾರ್ಥಸಾಧನೆಗೆ ಸೀಮಿತಗೊಳ್ಳುತ್ತವೆ. ಎಂದರೆ, ವ್ಯಕ್ತಿಗಳಲ್ಲಿ ವ್ಯಾಪಕವಾದ ಸಾಮಾಜಿಕ, ರಾಷ್ಟ್ರೀಯ, ಮತ್ತು ಅಂತರ ರಾಷ್ಟ್ರೀಯ ನ್ಯಾಯದ ಭಾವನೆಗಳು ಇರಲು ಸಾಧ್ಯವಿಲ್ಲ ಎಂಬುದನ್ನು ಗಾಂಧಿವಾದ ವಾಸ್ತವದಲ್ಲಿ ಒಪ್ಪಿಕೊಂಡರೂ, ಭೌತಿಕ ಹೋರಾಟದ ಪರಿಣಾಮವಾಗಿ ಹಿಂಸೆಯನ್ನು

ಪರಿಭಾವಿಸುತ್ತದೆ. ಈ ಪರಿಣಾಮವಾಗಿ ಗಾಂಧಿವಾದದಲ್ಲಿ ಹಿಂಸೆ ಮತ್ತು ಅಹಿಂಸೆಯ ಬಗೆಗಿನ ಭೌತಿಕ ದೃಷ್ಟಿಕೋನಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ದೃಷ್ಟಿಕೋನವೇ ವ್ಯಾಪಕವಾಗಿ ಪ್ರಕಟಗೊಳ್ಳುತ್ತದೆ.

"ಶೂದ್ರರು ಗುಲಾಮರು, ಸೇವಕರು ಮತ್ತು ಕಾರ್ಮಿಕರನ್ನು ಸ್ತುತಿಸಲು ಗಾಂಧೀವಾದ ಸಿದ್ಧವಾಗಿದೆ; ಅದಕ್ಕಿರುವ ಒಂದೇ ಒಂದು ಷರತ್ತೆಂದರೆ ಒಡೆಯರಾಗುವ ಅಪೇಕ್ಷೆಯನ್ನು ಅವರೆಂದೂ ವ್ಯಕ್ತಪಡಿಸಕೂಡದು. ಶೂದ್ರರು ಸ್ವತಃ ಒಪ್ಪಿಕೊಂಡಿರುವ ಈ ದಾಸ್ಯವೇ ಒಡೆಯರ ಹಕ್ಕುಗಳಿಗೆ ಲಭಿಸಿರುವ ಮಹತ್ತರವಾದ ರಕ್ಷಣೆಯಾಗಿದೆ. ಭದ್ರತೆಯಾಗಿದೆ."

(ಯಶಪಾಲ್ ; ೧೯೯೮ : ೮೩)

ತ್ಯಾಗದ ಮೂಲಕ ಅಹಿಂಸೆ ಸಾಧ್ಯವೆಂಬುದನ್ನು ಗಾಂಧಿವಾದ ಅಧ್ಯಾತ್ಮದ ಚೌಕಟ್ಟಿಗೆ ಸೀಮಿತಗೊಳಿಸಿ ಪ್ರತಿಪಾದಿಸುತ್ತದೆ. ಇಲ್ಲಿ ಸತ್ಯಾಗ್ರಹದ ಸೈದ್ಧಾಂತಿಕ ದೃಷ್ಟಿಕೋನವೂ ಕೂಡ ಆಧ್ಯಾತ್ಮಿಕ ತಳಹದಿಗೆ ಬದ್ಧವಾಗಿದೆ ಎಂಬುದು ಬಹಳ ಮುಖ್ಯ. ಈ ಕಾರಣದಿಂದಾಗಿ ಸತ್ಯಾಗ್ರಹದ ಕ್ರಿಯಾತ್ಮಕ ಮುಖ ರಾಜಕೀಯವಾಗಿ ಹೆಚ್ಚು ಅಂತರ್ವಿರೋಧಗಳಿಂದ ಪ್ರಕಟಗೊಳ್ಳುತ್ತದೆ. ಆದರೆ, ಸಾಂಸ್ಕೃತಿಕವಾದಿ ಗಾಂಧಿವಾದ ಪ್ರತಿಪಾದಿಸುವ ಸತ್ಯ, ಅಹಿಂಸೆ, ತ್ಯಾಗ, ಸತ್ಯಾಗ್ರಹ, ಅಸಹಕಾರಕ್ಕೆ ಅಪರಿಮಿತ ಶಕ್ತಿ ಸಂವೇದನೆಗಳು ಕೂಡ ಅದೇ ಸಂದರ್ಭದ ಒಳಗೆ ಪ್ರಕಟಗೊಂಡಿವೆ. ಗಾಂಧಿ ಇದನ್ನು ಸ್ತ್ರೀಯರಿಗೆ ಸಂಬಂಧಿಸಿದಂತೆ ಒಂದು ಯೋಗ, ಮಂತ್ರ, ತಪಸ್ಚರ್ಯೆಯಾಗಿ ಪರಿಭಾವಿಸುವುದು ವ್ಯಕ್ತವಾಗುತ್ತದೆ.

"ಹೆಂಗಸು ಅಹಿಂಸೆಯ ಅವತಾರ ಎಂಬುದನ್ನು ನಾನು ಪತ್ರಿಕೆಯ ಕಲಮುಗಳಲ್ಲಿ ಶ್ರುತಪಡಿಸಿದ್ದೇನೆ. ಅಹಿಂಸೆ ಎಂದರೆ ಅನಂತವಾದ ಪ್ರೇಮ. ಅನಂತ ಪ್ರೇಮವೆಂದರೆ ನಿಸ್ಸೀಮವಾದ ಸಹನಾ ಸಾಮರ್ಥ್ಯ. ಮಾನವ ಜನನಿಯಾದ ಸ್ತ್ರೀ ಹೊರತು ಮತ್ತಾರು ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಈ ಗುಣವನ್ನು ತೋರಬಲ್ಲರು? ಒಂಬತ್ತು ತಿಂಗಳು ಮಗುವನ್ನು ಉದರದಲ್ಲಿ ಹೊತ್ತು ಸಲಹಿ ಸಜ್ಜನಿತ ದುಃಖದಲ್ಲೇ ಸಂತೋಷವನ್ನು ಕಾಣುವುದರಲ್ಲಿ ಆಕೆ ಅದನ್ನು ದ್ಯೋತಿಸುತ್ತಾಳೆ. ಪ್ರಸವವೇದನೆಗಿಂತ ಹೆಚ್ಚು ಸಂಕಟಕರವಾದುದು ಮತ್ತಾವುದಿದೆ? ಆದರೆ ಈ ಸೃಷ್ಟಿಕರ್ಮ ಕೊಡುವ ಸಂತೋಷದಲ್ಲಿ ಆಕೆ ಅದನ್ನು ಮರೆಯುತ್ತಾಳೆ. ತನ್ನ ಮಗು ದಿನದಿನಕ್ಕೆ ಬೆಳೆದು ಮೈತುಂಬಿಕೊಳ್ಳಲೆಂದು ಆಕೆಯ ಹಾಗೆ ಮತ್ತಾರು ಪ್ರತಿದಿನವೂ ಕಷ್ಟಪಡುತ್ತಾರೆ?. ಆಕೆ ಆ ಪ್ರೇಮವನ್ನು ಜಗತ್ತಿಗೆ ಅನ್ವಯಿಸಲಿ. ತಾನು ಗಂಡಸಿನ ಕಾಮೋಪಭೋಗಕ್ಕೆ ಆದವಳೆಂಬುದನ್ನೂ, ಆಗಿರುವಳೆಂಬುದನ್ನೂ ಆಕೆ ಮರೆಯಲಿ, ಆಗ ಆಕೆ ಪುರುಷರ ಸಮಕ್ಕೆ ನಿಂತು ಅದರೆಡೆಯಲ್ಲಿ ಅವರ ತಾಯಂತೆ, ನಿರ್ಮಾತಳಂತೆ ಯಾವ ಮಾತನ್ನು ಆಡದೆಯೇ ದಾರಿ ತೋರುವವಳಂತೆ ಗೌರವ ಸ್ಥಾನವನ್ನು ಪಡೆಯುವವಳಾಗುತ್ತಾಳೆ. ಅಮೃತಪಾನಕ್ಕೆ ಆಸೆ ಪಡುತ್ತಿರುವ ಈ ಜಗಳಗಂಟಿ ಜಗತ್ತಿಗೆ ಶಾಂತಿಯಿಂದ ಬಾಳುವ ಕಲೆಯನ್ನು ಕಲಿಸುವ ಕೆಲಸ ಆಕೆಯ ಪಾಲಿಗೆ ಬಂದದ್ದು. ಆಕೆ ಸತ್ಯಾಗ್ರಹದಲ್ಲಿ ಮುಂದಾಳಾಗಬಹುದು; ಸತ್ಯಾಗ್ರಹಕ್ಕೆ ಪುಸ್ತಕಗಳ ಓದು ಬೇಕಾಗಿಲ್ಲ; ತಾಳ್ಮೆ

ಮತ್ತು ಶ್ರದ್ಧೆಗಳಿಂದ ಪ್ರಾಪ್ತವಾಗುವ ಕಲ್ಲಿದೆ ಬೇಕು." (ತಿಪ್ಪೇರುದ್ರಸ್ವಾಮಿ ಎಚ್ (ಅನು):೧೯೭೦ ; ೧೭೮)

ಸ್ತ್ರೀ ಮತ್ತು ಪುರುಷರನ್ನು ಸಮಾನರೆಂದು ಭಾವಿಸುವ ಗಾಂಧಿವಾದ ಸಾಮಾಜಿಕ ವ್ಯವಹಾರಗಳಲ್ಲಿ ಇಬ್ಬರ ಸಹಭಾಗಿತ್ವ ಅನಿವಾರ್ಯವೆಂಬುದನ್ನು ಹೇಳುತ್ತದೆ.

"ಸ್ತ್ರೀಯರ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ನಾನು ಯಾವ ದಾಕ್ಷಿಣ್ಯಕ್ಕೂ ಒಳಗಾಗುವುದಿಲ್ಲ. ಗಂಡಸರಿಗೆ ಅನ್ವಯಿಸದ ಯಾವ ವಿಧಿ ನಿಯಮವೂ ಆಕೆಯನ್ನು ಕಾಡಬಾರದು. ಇದು ನನ್ನ ಅಭಿಪ್ರಾಯ. ಗಂಡು ಮಕ್ಕಳನ್ನೂ, ಹೆಣ್ಣು ಮಕ್ಕಳನ್ನೂ ಯಾವ ಹೆಚ್ಚು ಕಡಿಮೆ ಇಲ್ಲದಂತೆ ಎಲ್ಲ ವಿಧದಲ್ಲೂ ಸರಿಸಮಾನವಾಗಿ ನಾವು ನೋಡಿಕೊಳ್ಳಬೇಕು. ಹೆಂಗಸನ್ನು ಅಬಲೆಯೆಂದು ಕರೆಯುವುದೊಂದು ಬೈಗುಳ; ಗಂಡಸು ಹೆಂಗಸಿಗೆ ಮಾಡಿದ ಅನ್ಯಾಯವಿದು. ಬಲ ಎಂದರೆ ಪಶುಬಲ ಎನ್ನುವುದಾದರೆ ಹೆಂಗಸು ಗಂಡಸಿಗಿಂತ ದುರ್ಬಲಳು ನಿಜ. ಆದರೆ ಬಲ ಎಂದರೆ ನೈತಿಕ ಬಲವೆಂದು ಅರ್ಥೈಸಿದರೆ, ಆಗ ಹೆಂಗಸು ಗಂಡಸಿಗಿಂತ ಅತ್ಯಧಿಕಳು. ಹುಟ್ಟಿನ ಅರಿವು ಅವನಿಗಿಂತ ಆಕೆಗೆ ಅಧಿಕವಾಗಿಲ್ಲವೆ? ಸಹನೆಯ ವಿಷಯದಲ್ಲಿ ಆಕೆ ಆತನಿಗಿಂತ ಹೆಚ್ಚು ಶಕ್ತಿ ಸಂಪನ್ನಳಲ್ಲವೆ? ಅವಳು ಹೆಚ್ಚು ಧೈರ್ಯಶಾಲಿನಿಯಲ್ಲವೆ? ಆಕೆಯಿಲ್ಲದೆ ಮನುಷ್ಯನಿಗೆ ಇರಲು ಅಸಾಧ್ಯ. ಅಹಿಂಸೆ ನಮ್ಮ ಜೀವಿತದ ನಿಯಮವಾಗಿದ್ದರೆ, ಭವಿಷ್ಯ ಹೆಂಗಸರ ಕಡೆಗಿದೆ." (ತಿಪ್ಪೇರುದ್ರ ಸ್ವಾಮಿ ಎಚ್(ಅನು) : ೧೯೭೦; ೧೭೫)

ಗಾಂಧಿವಾದ ಈ ನೆಲೆಯಿಂದ ಸ್ತ್ರೀಯರ ಸ್ಥಾನಮಾನವನ್ನು ಸಾಮಾಜಿಕವಾಗಿ ಪರಿಕಲ್ಪಿಸುತ್ತದೆ. ಅಲ್ಲದೆ, ಈ ಸಾಮಾಜಿಕ ಸ್ಥಾನಮಾನಕ್ಕೆ 'ರಾಷ್ಟ್ರೀಯ'ವಾಗಿ ಏಕರೂಪದ ಸಮಗ್ರತೆಯನ್ನು ಒಳಗೊಂಡ ಸ್ಥಳ ನಿರ್ಮಾಣವನ್ನು ಸ್ತ್ರೀಯರಿಗೆ ಒದಗಿಸಿದೆ.

"ತಾವು ಅಬಲಾ ವರ್ಗಕ್ಕೆ ಸೇರಿದವರೆಂಬುದನ್ನು ಹೆಂಗಸರು ಮರೆಯುವುದಾದರೆ, ಯುದ್ಧ ವಿರುದ್ಧವಾಗಿ ಅವರು ಗಂಡಸರಿಗಿಂತ ಎಷ್ಟೋ ಹೆಚ್ಚಾಗಿ ಕೆಲಸ ಮಾಡಬಲ್ಲರು." (ತಿಪ್ಪೇರುದ್ರ ಸ್ವಾಮಿ ಎಚ್(ಅನು) : ೧೯೭೦; ೧೭೬)

ಈ ಹಿನ್ನೆಲೆಯಲ್ಲಿ ಸ್ತ್ರೀಯರಿಗೆ ಗಾಂಧಿಯ ಸ್ಫೂರ್ತಿದಾಯಕ ನಾಯಕತ್ವ, ಆದರದ ರಕ್ಷಣೆ, ಗುರಿಯಷ್ಟೇ ಮುಖ್ಯವಾದ ಮಾರ್ಗದರ್ಶನ ಇವುಗಳಿಂದಾಗಿ, ಸ್ತ್ರೀಯರು ಸ್ವಾತಂತ್ರ್ಯದ ಹೋರಾಟದಲ್ಲಿ ಗಣನೀಯವಾದ ಪಾತ್ರವಹಿಸುವುದು ಸಾಧ್ಯವಾಗಿದೆ. ವಿದ್ಯಾವಂತರು, ಅವಿದ್ಯಾವಂತರು, ನಾಗರಿಕರಾದ ಸ್ತ್ರೀಯರು ಹಾಗೂ ಗ್ರಾಮೀಣ ಸ್ತ್ರೀಯರು, ಒಟ್ಟಾಗಿ ಸಮಾಜದ ಬಹುವರ್ಗದ ಸ್ತ್ರೀಯರು ಮನೆ, ಕುಟುಂಬದ ಆವರಣದಿಂದ ಹೊರಗೆ ಬರಲು ಸಾಧ್ಯವಾಗಿದೆ. ನಿಷ್ಠಾವಂತ ಮನೆತನಗಳ ಹೆಂಗಸರೂ ಸಹ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ಪರಿಣಾಮದಲ್ಲಿ ಇದು ವ್ಯಕ್ತವಾಗುತ್ತದೆ. ವ್ಯಕ್ತಿಗಳಲ್ಲಿನ ಅಪರಿಮಿತ ಶಕ್ತಿ, ಸಾಮರ್ಥ್ಯದ ಮೇಲೆ ವಿಶ್ವಾಸವಿರಿಸುವ ಗಾಂಧೀವಾದ ಪುರುಷರಾಗಲಿ, ಸ್ತ್ರೀಯರಾಗಲಿ ಅವರವರಲ್ಲಿ ಅವರದ್ದೇ ಆದ ಸಾಮಾಜಿಕ ಮತ್ತು ರಾಜಕೀಯವಾದ ಬೀಜರೂಪದ ತಿಳುವಳಿಕೆ ಇರುತ್ತದೆ ಎಂಬುದಾಗಿ ಭಾವಿಸುತ್ತದೆ. ಒಟ್ಟಂದವಾಗಿ ಇದನ್ನು ಪರಿಭಾವಿಸುವುದಾದರೆ, ಪ್ರೀತಿ ಶುಭಶ್ಚಂದ್ರ ಅವರ ಮಾತು ಮುಖ್ಯವಾಗುತ್ತದೆ.

"ಗಾಂಧಿವಾದವನ್ನು ಎರಡು ನೆಲೆಗಳಲ್ಲಿ ಕೆಲಸ ಮಾಡುವ ಒಂದು ಪ್ರಕ್ರಿಯೆಯಾಗಿ ನಾವು ಅರ್ಥಮಾಡಿಕೊಳ್ಳಬೇಕು. ಗಾಂಧಿಯವರ ಸಾಮಾಜಿಕ ಹಾಗೂ ರಾಜಕೀಯ ಚಿಂತನೆಗಳಿಗೆ ಸಂಬಂಧಿಸಿದಂತೆ ಎರಡು ಸ್ತರಗಳ ಸಂರಚನೆಯನ್ನು ಕಾಣಬಹುದು. ಮೊದಲನೆಯದು- ಅತೀತವಾಗುಳಿಯದ ಆತ್ಯಂತಿಕ ಆದರ್ಶಪರತೆ. ಎರಡನೆಯದು- ಈ ಅತೀತದ ಸಾಮೀಪ್ಯಕ್ಕೆ ಕ್ರಮೇಣ ಕೊಂಡೊಯ್ಯಬಲ್ಲ ಕ್ರಿಯಾಚರಣೆ. (Approximation to the altimate ideal) ಅಹಿಂಸೆ, ಸತ್ಯ, ಸ್ವಾತಂತ್ರ್ಯ, ಸಮಾನತೆ, ತ್ಯಾಗ ಮೊದಲಾದ ಪರಮ ಮೌಲ್ಯಗಳ ಪರಿಪೂರ್ಣ ಅನುಷ್ಠಾನವನ್ನು ಸ್ವಕೇಂದ್ರದ ನೆಲೆಯಲ್ಲಿ ಮೊದಲನೆಯ ಸ್ತರದ ಚಿಂತನೆ ನಿಲ್ಲಿಸುತ್ತದೆ. ಈ ಚಿಂತನೆ ಯಾವುದೇ ರಾಜಕೀಯ ಅಧಿಕಾರ ವ್ಯವಸ್ಥೆಯನ್ನು ಅವಲಂಬಿಸದ ಶುದ್ಧ ಅರಾಜಕೀಯ ಆಧ್ಯಾತ್ಮಿಕ ಸ್ವರೂಪವುಳ್ಳದ್ದು. ಎರಡನೆಯ ಸ್ತರವು ಸ್ವಲ್ಪಮಟ್ಟಿಗೆ ಸಮಾಜವಾದೀ ಪ್ರಜಾಪ್ರಭುತ್ವ (Democratic Socialism)ದ ಸ್ವರೂಪವನ್ನು ಹೊಂದಿದ್ದು ಆದರ್ಶಗಳ ಅನುಷ್ಠಾನದ ವಿಷಯದಲ್ಲಿ ಸಾಪೇಕ್ಷವಾದ ಆದರೆ ಮೂರ್ತವಾದ ಕಾರ್ಯಚಟುವಟಿಕೆಗಳನ್ನುಳ್ಳದ್ದು. ಇವೆರಡೂ ಸ್ತರಗಳ ನಡುವಣ ದ್ವಂದ್ವಾತ್ಮಕ ಪ್ರಕ್ರಿಯೆಯನ್ನು ನಾವು ಗಾಂಧಿವಾದದಲ್ಲಿ ಗುರುತಿಸಬಹುದು." (ಶ್ರೀಮತಿ ಎಚ್.ಎಸ್.(ಸಂ): ಮಹಿಳಾ ಅಧ್ಯಯನ; ೧೯೯೯, ೨.)

ಸ್ತ್ರೀಯರಿಗೆ ಸಾಮಾಜಿಕ ಬದ್ಧತೆಯನ್ನು ಸಾಧಿತಗೊಳಿಸಿಕೊಳ್ಳುವಲ್ಲಿ ಗಾಂಧಿವಾದ ಸಾಕಷ್ಟು ಶ್ರಮಿಸಿದೆ. ಆದರೆ, ಕುಟುಂಬದ ಆವರಣದಲ್ಲಿ ಸ್ತ್ರೀಯರ ಬಗೆಗಿನ ಗಾಂಧಿವಾದದ ದೃಷ್ಟಿಕೋನ ಸಾಕಷ್ಟು ಪ್ರಗತಿಪರ ಎಂದೆನಿಸುವುದಿಲ್ಲ. ಸ್ತ್ರೀ ಶಿಕ್ಷಣ, ವಿಧವಾ ಸಮಸ್ಯೆ, ವೇಶ್ಯಾ ಸಮಸ್ಯೆ, ಸ್ತ್ರೀಯರ ರಾಜಕೀಯ ಪ್ರವೇಶದ ಬಗ್ಗೆ ಗಾಂಧಿ ವಿಚಾರಧಾರೆಗಳು ಹೆಚ್ಚು ಸಂಪ್ರದಾಯ ನಿಷ್ಠವಾಗಿ ಪ್ರಕಟಗೊಳ್ಳುತ್ತವೆ.

ಗಾಂಧಿವಾದದ ಮುಕ್ತ ವಿಶ್ಲೇಷಣೆಯು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಕಾಣಿಸಿಕೊಂಡಿದೆ. ಗಾಂಧಿವಾದದ ಪರ- ವಿರೋಧ ಪ್ರತಿಕ್ರಿಯೆಗಳ ಛಾಯೆ, ಮತ್ತು ಭ್ರಮ ನಿರಸನದ ಧ್ವನಿಗಳು ಸ್ಥಿತ್ಯಂತರ ಸಾಂಸ್ಕೃತಿಕ ಚೌಕಟ್ಟನ್ನು ವಿಸ್ತರಿಸಿದೆ. ಈ ಅರ್ಥದಲ್ಲಿ, ಅತ್ಯಂತ ಪ್ರಖರವಾದ ದೇಶೀಯ ಚಿಂತನೆಯೊಂದು ಅತಿ ದೀರ್ಘಕಾಲ ತನ್ನ ಕಾವನ್ನು ಉಳಿಸಿಕೊಳ್ಳದೆ ಸೊರಗಿದ ಲಕ್ಷಣಗಳನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಗ್ರಹಿಸಬಹುದು. ಜನರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ನಿಲುವುಗಳಲ್ಲಿ ಈ ವೈರುದ್ಧ್ಯವನ್ನು ಸ್ಪಷ್ಟವಾಗಿ ಗುರುತಿಸಬಹುದು.

**೪.೧.೨ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಅಂಬೇಡ್ಕರ್‌ವಾದ :**

ಇಂಡಿಯಾದಲ್ಲಿ ಬ್ರಿಟಿಷ್ ಶಿಕ್ಷಣ ಕೊಡಮಾಡಿದ ಪ್ರಧಾನ ಕೊಡುಗೆಗಳಲ್ಲಿ ಸಾರ್ವತ್ರಿಕ ಶಿಕ್ಷಣ ಅತ್ಯಂತ ಮಹತ್ವದ್ದು. ಇದರ ಪರಿಣಾಮವಾಗಿ ಜ್ಯೋತಿ ಭಾ ಪುಲೆ, ಅಂಬೇಡ್ಕರ್ ಅವರಂತಹ ಚಿಂತಕರು ಹುಟ್ಟಿಕೊಳ್ಳುವುದು ಸಾಧ್ಯವಾಗಿದೆ. ಭಾರತ ಸಂವಿಧಾನದ ಕರಡು ರಚನಾ ಸಮಿತಿಯ ಅಧ್ಯಕ್ಷರಾಗಿ ಅಂಬೇಡ್ಕರ್ ನಿರೂಪಿಸಿದ ಅವಕಾಶಗಳು ಶೂದ್ರ, ದಲಿತ ಹಾಗೂ ಮಹಿಳೆಯರಿಗೆ ಸಾಮಾಜಿಕ ಹಾಗೂ

ರಾಜಕೀಯ ನೆಲೆಯಲ್ಲಿ ವ್ಯಾಪಕವಾದ ಚೌಕಟ್ಟು ನಿರ್ಮಿಸಿವೆ ಅಲ್ಲದೆ, ಪ್ರಜಾಪ್ರಭುತ್ವ ವ್ಯವಸ್ಥೆಗೆ ನೈಜ ಅರ್ಥವನ್ನು ಕಲ್ಪಿಸಿಕೊಟ್ಟಿದೆ. ಅಸ್ಪೃಶ್ಯತೆ ಮತ್ತು ಗುಲಾಮಗಿರಿಯನ್ನು ವಾಸ್ತವ ನೆಲೆಯಿಂದ ನಿರೂಪಿಸುವ ಅಂಬೇಡ್ಕರ್‌ವಾದದಲ್ಲಿ ಶೂದ್ರ, ದಲಿತ, ಬುಡಕಟ್ಟು ಜನಾಂಗ, ಹಿಂದುಳಿದ ವರ್ಗದವರಿಗೆ, ವಿಶೇಷವಾದ ಸ್ಥಾನ ಪ್ರಾಪ್ತವಾಗಿದೆ. ಒಟ್ಟು ಇಂಡಿಯಾದ ಸಂಸ್ಕೃತಿಯ ಸಂದರ್ಭದಲ್ಲಿ ನಿಂತು ಮಹಿಳೆಯರ ಬಗೆಗೆ ಅಂಬೇಡ್ಕರ್ ಅವರು ಚಿಂತಿಸುವ ಹೆಚ್ಚಿನ ಸಂದರ್ಭಗಳಲ್ಲಿ ಅವರ ವಿಚಾರಧಾರೆಯ ಹಿಂದೆ ಎರಡು ಕಾಲಘಟ್ಟಗಳ ಸತ್ಯ ಸಂಗತಿಗಳು ಕೆಲಸ ಮಾಡುತ್ತಿರುವಂತೆ ಗೋಚರವಾಗುತ್ತದೆ. ಅವುಗಳೆಂದರೆ ;

೧) ಮನುಮೂಲದ ಮನುವಾದಿ ಚಿಂತನೆಯಲ್ಲಿ ಸ್ತ್ರೀಯರ ಸ್ಥಾನಮಾನ.

೨) ಬ್ರಿಟಿಷ್ ಸರಕಾರ ಸ್ತ್ರೀಯರ ಬಗೆಗೆ ಅನುಸರಿಸಿದ ಹಾಗೂ ಆ ಕುರಿತು ಪಾಶ್ಚಾತ್ಯರು ಪ್ರಪಂಚಕ್ಕೆ ನೀಡಿದ ಮಹಿಳಾ ಸಮಾನತೆ ಮತ್ತು ಸಂಪೂರ್ಣ ಸ್ವಾತಂತ್ರ್ಯದ ಪರಿಕಲ್ಪನೆ.

ಇವೆರಡು ಆಲೋಚನಾ ಧೋರಣೆಗಳಿಗಿಂತ ವಿಭಿನ್ನವಾಗಿ ಅಂಬೇಡ್ಕರ್ ಪ್ರತಿಕ್ರಿಯಿಸುವುದು ವ್ಯಕ್ತವಾಗುತ್ತದೆ. ಮಹಿಳೆಯ ಹಕ್ಕು, ಸಮಾನತೆ ಮತ್ತು ಸ್ವಾತಂತ್ರಗಳನ್ನು ಕುರಿತು ಕೇವಲ ಸಂವಿಧಾನದ ಧಾಟಿಯಲ್ಲಿ ಅಥವಾ ಸಾಂವಿಧಾನಿಕ ಪರಿಭಾಷೆಯಲ್ಲಿ ಮಾತ್ರ ಮಾತನಾಡುವುದನ್ನು ಅಥವಾ ಬರೆಯುವುದನ್ನು ಅವರಲ್ಲಿ ಕಾಣಬಹುದಾಗಿದೆ. ಭಾರತೀಯ ಸ್ತ್ರೀಯರ ಕುರಿತು ಅವರ ಚಿಂತನೆಯ ಹಿಂದೆ ಮಹಾತ್ಮ ಜ್ಯೋತಿಭಾಪುಲೆ ಅವರ ಜೀವನ ದರ್ಶನಗಳು, ಹೋರಾಟದ ಮಜಲುಗಳು ಮತ್ತು ಬರವಣಿಗೆಗಳು ಪ್ರೇರಕವಾದದ್ದು ಸ್ಪಷ್ಟವಾಗಿಯೇ ಇದೆ. *೩

ಇಂಡಿಯಾದ ಸ್ತ್ರೀಯರ ಬಗೆಗೆ ಏನೆಲ್ಲ ಸಾಧನೆ, ಪರಿವರ್ತನೆಗಳು ಸಾಧ್ಯವಾಗಿದೆಯೋ ಅವೆಲ್ಲಕ್ಕೂ ಸಂವಿಧಾನದ ಹಲವಾರು ಅನುಚ್ಛೇದಗಳು ಮೂಲಕಾರಣವೂ ಪ್ರೇರಣವೂ ಆಗಿವೆ. ಉದಾಹರಣೆಗೆ ಸಂವಿಧಾನದ ಅನುಚ್ಛೇದ ೧೪ರಲ್ಲಿ ಭಾರತದ ಭೌಗೋಳಿಕ ಪ್ರದೇಶದಲ್ಲಿ ವಾಸವಿರುವ ಪ್ರತಿಯೊಬ್ಬ ಪ್ರಜೆಯೂ ಕಾನೂನಿನ ಮುಂದೆ ಸಮಾನರು ಸಮಾನ ಸಂರಕ್ಷಣೆಯನ್ನು ಘೋಷಿಸಲಾಗಿದೆ. ಅನುಚ್ಛೇದ ೧೫ರ ಪ್ರಕಾರ ಸರಕಾರವು ಯಾವುದೇ ಪ್ರಜೆಯನ್ನು ಮತ, ಜಾತಿ, ಕುಲ, ಲಿಂಗ ಮತ್ತು ಹುಟ್ಟಿನ ಆಧಾರದ ಮೇಲೆ ತಾರತಮ್ಯ ಮಾಡುವಂಥದ್ದಲ್ಲ ಎಂಬುದಾಗಿ ಆದೇಶಿಸುತ್ತದೆ. ಅನುಚ್ಛೇದ ೧೬ರ ಪ್ರಕಾರ ಸರಕಾರದ ಯಾವುದೇ ಕಛೇರಿಯ ಉದ್ಯೋಗಾವಕಾಶದ ವಿಷಯದಲ್ಲಿ ಸರ್ವರಿಗೂ ಸಮಾನ ಅವಕಾಶವಿರಬೇಕು ಎಂಬುದಾಗಿ ನಿರ್ದೇಶಿಸುತ್ತದೆ. ಅನುಚ್ಛೇದ ೩೯ರ ಪ್ರಕಾರ ಸ್ತ್ರೀ ಮತ್ತು ಪುರುಷರಿಗೆ ಸರಿಸಮಾನವಾದ ಜೀವನಾವಕಾಶಗಳನ್ನು ಒದಗಿಸತಕ್ಕದ್ದು ಎಂಬುದಾಗಿ ತಿಳಿಸಲಾಗಿದೆ. ಅಷ್ಟೇ ಅಲ್ಲದೇ ಸ್ತ್ರೀ ಮತ್ತು ಪುರುಷರ ಸೇವೆಗೆ ಸಮಾನ ವೇತನವಿರಬೇಕು ಎಂಬುದಾಗಿ ಅನುಚ್ಛೇದ ೩೯(ಡಿ) ನಿರ್ದೇಶಿಸುತ್ತದೆ. ಅನುಚ್ಛೇದ ೪೨ರ ಪ್ರಕಾರ ಸ್ತ್ರೀಯ ಸೇವೆಗೆ ಅತ್ಯಗತ್ಯವಾದ ನ್ಯಾಯೋಚಿತ ಹಾಗೂ ಮಾನವೀಯ ವಾತಾವರಣವನ್ನು ಕಲ್ಪಿಸಬೇಕಾದುದು ಮತ್ತು ಸ್ತ್ರೀಯರಿಗೆ ಪ್ರಸೂತಿ ಅಥವಾ ಹೆರಿಗೆ ಪರಿಹಾರಗಳನ್ನು ಒದಗಿಸಬೇಕಾದುದು ಸರ್ಕಾರದ ಕರ್ತವ್ಯವಾಗಿದೆ ಎಂಬುದಾಗಿ ಆದೇಶಿಸುತ್ತದೆ.

ಅಂಬೇಡ್ಕರ್ ಪಾರ್ಲಿಮೆಂಟಿನಲ್ಲಿ ಎರಡು ಸದನಗಳಿಂದ ಪಾಸು ಮಾಡಿಸಿದ ಮಹತ್ವದ ನಾಲ್ಕು ಮಸೂದೆಗಳೆಂದರೆ :

ಅ) ಹಿಂದೂ ವಿವಾಹ ಕಾನೂನು (೧೯೫೫)

ಆ) ಹಿಂದೂ ಉತ್ತರಾಧಿಕಾರ ಕಾನೂನು (೧೯೫೬)

ಇ) ಹಿಂದೂ ಅಪ್ರಾಪ್ತತೆ ಮತ್ತು ಪೋಷಕತ್ವ ಕಾನೂನು (೧೯೫೬)

ಈ) ಹಿಂದೂ ದತ್ತಕ ಮತ್ತು ಜೀವನಾಂಶ ಕಾನೂನು (೧೯೫೬)

ಈ ನಾಲ್ಕು ಕಾನೂನುಗಳು ಸಂವಿಧಾನಾತ್ಮಕವಾಗಿ ಹಾಗೂ ಸಾಮಾಜಿಕವಾಗಿ ಸ್ತ್ರೀಯರಿಗೆ ಗಮನಾರ್ಹವಾದ ವ್ಯಕ್ತಿತ್ವವೊಂದನ್ನು ನಿರ್ಮಾಣ ಮಾಡಲು ಅವಕಾಶ ಕಲ್ಪಿಸಿಕೊಟ್ಟವು. ಇಂಡಿಯಾದ ಸಂಸ್ಕೃತಿಯ ಸಂದರ್ಭದಲ್ಲಿ ಸ್ತ್ರೀಯರಿಗೆ ಪ್ರಪ್ರಥಮ ಬಾರಿಗೆ ಸಾಮಾಜಿಕ ವ್ಯಕ್ತಿತ್ವವನ್ನು ಪಡೆಯಲು ಅಂಬೇಡ್ಕರರ ಹೋರಾಟದಿಂದ ಸಾಧ್ಯವಾಗಿದೆ. ಅಂಬೇಡ್ಕರ್ ಕಲ್ಪಿಸಿದ ಈ ಸ್ಥಳಾವಕಾಶವನ್ನು ನಂತರದಲ್ಲಿ ಸಂವಿಧಾನ ತಿದ್ದುಪಡಿಯ ಮೂಲಕ ಹೆಚ್ಚು ನಿಖರಗೊಳಿಸಿರುವುದು ಕಾಲಾನುಕ್ರಮದ ಬೆಳವಣಿಗೆಯಾಗಿದೆ.

> "೧೯೭೬ರಲ್ಲಿ ತಿದ್ದುಪಡಿಗೆ ಒಳಗಾದ ೧೮೫೫ರ 'ಹಿಂದೂ ವಿವಾಹ ಕಾನೂನಿ'ನ ಪರಿಚ್ಛೇದ ೨೬ರ ಪ್ರಕಾರ ದ್ವಿಪತ್ನಿತ್ವವನ್ನು ಶಿಕ್ಷಾರ್ಹ ಅಪರಾಧವೆಂದು ಘೋಷಿಸಲಾಯಿತು. ಹಾಗೆಯೇ ೧೯೫೬ರ ಹಿಂದೂ ಉತ್ತರಾಧಿಕಾರದ ಕಾನೂನಿನ ಪ್ರಕಾರ ವಿಧವೆಯಾದ ಮಹಿಳೆಗೆ ಮಗನನ್ನಾಗಲಿ ಮಗಳನ್ನಾಗಲಿ ದತ್ತು ಸ್ವೀಕರಿಸುವ ಅಧಿಕಾರವಿದೆ ಎಂದು ನಮೂದಿಸಲಾಯಿತು. ಅಂದರೆ, ಈ ಸ್ವಾತಂತ್ರ್ಯ ಆ ಹಿಂದಿನ ಹಿಂದೂ ಕಾನೂನಿನಲ್ಲಿ ಇರಲಿಲ್ಲವೆಂಬುದನ್ನು ಪ್ರತ್ಯೇಕವಾಗಿ ವಿಚಾರ ಮಾಡಬೇಕಾಗಿದೆ. ಅಲ್ಲದೆ ಅದೇ ಕಾನೂನಿನ ಪರಿಚ್ಛೇದ ೧೪ರ ಪ್ರಕಾರ, ಮಹಿಳೆಗೆ ತನ್ನಿಚ್ಛೆಯಂತೆ ಸ್ವತಂತ್ರವಾಗಿರುವುದು ಮಾತ್ರವಲ್ಲದೆ, ಉಯಿಲು ಬರೆಯುವ ಮುಖಾಂತರ ತನ್ನ ಆಸ್ತಿಯನ್ನು ಪರಭಾರೆ ಮಾಡುವ ಅಧಿಕಾರವನ್ನು ಕೂಡ ನೀಡಲಾಯಿತು." (ಜವರಯ್ಯ ಮ.ನ. ; ೧೯೯೫; ೩೮೦)

ಸಮಾನತೆಯ ನೆಲೆಯಲ್ಲಿ ಸ್ತ್ರೀ ಪುರುಷರನ್ನು ಏಕರೂಪದಲ್ಲಿ ಗ್ರಹಿಸುವುದು ಅಂಬೇಡ್ಕರ್ ಚಿಂತನೆಯ ಪ್ರಧಾನ ನಿಲುವು. ಇದು ಅವರ ಮಾತುಗಳಿಂದಲೇ ಸ್ಪಷ್ಟವಾಗುತ್ತದೆ.

> "Unity is meaningless without the accompniment of woman. Education is fruitless without educated women ; and agitation is incomplete without the strength of women". (Ambedkar B.R.: 1973;39)

ಸ್ತ್ರೀಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಸುಧಾರಿಸದೆ ಯಾವುದೇ ದೇಶದ ಸರ್ವಾಂಗೀಣ ಪ್ರಗತಿ ಸಾಧ್ಯವಿಲ್ಲ ಎಂದು ಅಂಬೇಡ್ಕರ್ ನಂಬಿದ್ದರು. ಅವರಿಗೆ ಸ್ತ್ರೀ ಸಂಘಟನೆಯ ಬಗ್ಗೆ ಹೆಚ್ಚಿನ ಭರವಸೆ ಇತ್ತು. ಅವರು ಈ ಅಭಿಪ್ರಾಯವನ್ನು ಹೀಗೆ ವಿಶದ ಪಡಿಸುತ್ತಾರೆ. :

> "ಮಹಿಳಾ ಸಂಘಟನೆ ಬಗೆಗೆ ನನಗೆ ಅತೀವವಾದ ವಿಶ್ವಾಸವಿದೆ. ಮಹಿಳೆಯರಲ್ಲಿ ನಂಬಿಕೆ ಮೂಡಿಸುವುದಾದರೆ ಸಮಾಜದ ಸ್ಥಿತಿಗತಿ ಉತ್ತಮಪಡಿಸಲು ನೆರವಾಗುತ್ತಾರವರು ಎಂದು ನನಗೆ ಗೊತ್ತು. ಸಾಮಾಜಿಕ ಪಾಪಗಳನ್ನು ನಿರ್ಮೂಲನ ಮಾಡುವಲ್ಲಿ ಮಹಿಳೆಯರ ಕೊಡುಗೆ ಮಹತ್ವದಾಗಿರುತ್ತದೆ.... ಸಮುದಾಯವೊಂದರ ಪ್ರಗತಿಯನ್ನು ಅದರ ಮಹಿಳಾ ಪ್ರಗತಿ ಮೂಲಕ ನಾನು ಅಂದಾಜಿಸುತ್ತೇನೆ.... ನಾನು ಹೇಳುವ ಕೆಲವು ಅಂಶಗಳನ್ನು ನೀವು

ಮನಸ್ಸಿನಲ್ಲಿಟ್ಟು ಕೊಳ್ಳಬೇಕು. ಸ್ವಚ್ಛತೆಯನ್ನು ಕಲಿಯಿರಿ ಮತ್ತು ಎಲ್ಲಾ ಕೆಟ್ಟ ಗುಣಗಳಿಂದ ದೂರವಿರಿ. ನಿಮ್ಮ ಮಕ್ಕಳಿಗೆ ಶಿಕ್ಷಣ ನೀಡಿರಿ. ಅವರಲ್ಲಿ ಮಹತ್ವಾಕಾಂಕ್ಷೆಯನ್ನು ಮೂಡಿಸಿ. ಅವರು ಮಹತ್ವದವರಾಗುತ್ತಾರೆ ಎಂಬ ಭಾವನೆಯನ್ನು ಅವರ ಮನಸ್ಸಿನಲ್ಲಿ ಮೂಡಿಸಿರಿ. ಅವರ ಮನಸ್ಸಿನಿಂದ ಎಲ್ಲಾ ಬಗೆಯ ಕೀಳರಿಮೆಗಳನ್ನೂ ತೊಡೆದು ಹಾಕಿರಿ. ವಿವಾಹವಾಗಲು ಆತುರರಾಗಬೇಡಿ. ವಿವಾಹವು ಬಲು ಖರ್ಚಿನ ಬಾಬ್ತು. ನಿಮ್ಮ ಮಕ್ಕಳ ಮೇಲೆ ನೀವು ಅದನ್ನು ಹೇರಬಾರದು. ಏಕೆಂದರೆ, ಮದುವೆಯ ಬಾಬ್ತುಗಳನ್ನು ಹಣಕಾಸು ದೃಷ್ಟಿಯಿಂದ ಎದುರಿಸಲು ಅವರು ಸಮರ್ಥರಾಗಬೇಕು. ವಿವಾಹವಾಗುವವರು ಹೆಚ್ಚು ಹೆಚ್ಚು ಮಕ್ಕಳನ್ನು ಹಡೆಯುವುದು ಅಪರಾಧ ಎಂಬ ಅಂಶವನ್ನು ಮನಸ್ಸಿನಲ್ಲಿರಿಸಿಕೊಳ್ಳಬೇಕು. ತಮಗಿಂತ ಉತ್ತಮವಾಗಿ ಜೀವನವನ್ನು ಆರಂಭಿಸುವಂತೆ ಮಕ್ಕಳನ್ನು ಬೆಳೆಸುವುದು ಎಲ್ಲಾ ತಂದೆ ತಾಯಿಗಳ ಕರ್ತವ್ಯವಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ವಿವಾಹವಾಗುವ ಪ್ರತಿ ಹೆಂಗಳೆಯೂ ತನ್ನ ಗಂಡನ ಸ್ನೇಹಿತನಂತೆ ಸಮಾನ ಹಕ್ಕುಳ್ಳವಳಾಗಬೇಕು ಮತ್ತು ಆತನ ಗುಲಾಮಳಾಗಲು ಧಿಕ್ಕರಿಸಬೇಕು." (ಒಡೆಯರ್ ಡಿ. ಹೆಗ್ಗಡೆ : ೧೯೮೬ ; ೧೫೫)

ಮೇಲಿನ ಎಲ್ಲ ವಿವರಗಳಿಂದ ಸ್ತ್ರೀಯರ ಕುರಿತ ಅಂಬೇಡ್ಕರ್ ಚಿಂತನೆಯ ಸ್ವರೂಪವನ್ನು ಈ ಕೆಳಕಂಡಂತೆ ಗುರುತಿಸಬಹುದು.

೧)ಶಿಕ್ಷಣದ ಮೂಲಕವೇ ಸ್ತ್ರೀಯರ ಮತ್ತು ದಲಿತ ಜನಾಂಗದ ಏಳಿಗೆ ಸಾಧ್ಯ.

೨)ವಿವಾಹವಾಗಲು ಆರ್ಥಿಕ ಸಾಮರ್ಥ್ಯ ಮತ್ತು ಸ್ವಾತಂತ್ರ್ಯವಿರಬೇಕು. ಈ ಸಾಮರ್ಥ್ಯವಿಲ್ಲದವರು ವಿವಾಹವಾಗಬಾರದು.

೩)ಪ್ರತಿ ವಿವಾಹಿತರೂ ಅವರ ಕುಟುಂಬದ ಜನನ ಪ್ರಮಾಣವನ್ನು ನಿಯಂತ್ರಿಸಬೇಕು.

೪)ಸ್ತ್ರೀಯರು ಪುರುಷರ ದಾಸ್ಯವನ್ನು ತೊರೆಯುವ ಮೂಲಕವೇ ಅವರ ಏಳಿಗೆಗಾಗಿ ವಿಧಿವಿಧಾನಗಳನ್ನು ರೂಪಿಸಬಹುದು. ಅಂದರೆ, ಸ್ತ್ರೀಯರು ಕುಟುಂಬದ ವ್ಯವಸ್ಥೆಯನ್ನು ಧಿಕ್ಕರಿಸಿ ಸಮಾನತೆಗಾಗಿ ಹೋರಾಡುವುದು ಆರೋಗ್ಯಪೂರ್ಣವಲ್ಲ. ಬದಲಿಗೆ ಸ್ತ್ರೀಯರು ಕುಟುಂಬದ ಒಳಗಿದ್ದೇ ಸಮಾನತೆಯನ್ನು ಸಾಧಿಸುವ ಪ್ರಯತ್ನಮಾಡಬೇಕು. ಅಂಬೇಡ್ಕರ್ ಅವರ ಪ್ರಗತಿಪರ ದೃಷ್ಟಿಕೋನ ದಲಿತರಲ್ಲಿ, ಸ್ತ್ರೀಯರಲ್ಲಿ ಜಾಗೃತಿಯನ್ನು ಉಂಟುಮಾಡಿರುವ ಸನ್ನಿವೇಶಗಳು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಕಂಡುಬರುತ್ತವೆ.

**೪.೧.೩ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಲೋಹಿಯಾವಾದ :**

ಲೋಹಿಯಾವಾದವನ್ನು ಎರಡು ಆಯಾಮಗಳಲ್ಲಿ ಕಾರ್ಯಪ್ರವೃತ್ತಗೊಳ್ಳುವ ಒಂದು ಅಖಂಡ ಪ್ರಕ್ರಿಯೆಯಾಗಿ ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭದ ಒಳಗೆ ಅರ್ಥೈಸಿಕೊಳ್ಳಬೇಕಾಗುತ್ತದೆ. ಲೋಹಿಯಾ ಅವರ ಸಾಮಾಜಿಕ ಹಾಗೂ ರಾಜಕೀಯ ಚಿಂತನೆಗಳಿಗೆ ಸಂಬಂಧಿಸಿದಂತೆ ಎರಡು ಸ್ತರಗಳ ಸಂರಚನೆಯನ್ನು ಕಾಣಬಹುದು.

ಮೊದಲನೆಯದು- ಗಾಂಧಿ ಮತ್ತು ಅಂಬೇಡ್ಕರ್‌ಗಿಂತ ಭಿನ್ನವಾದ ದೇಶಿ ಸಮಾಜವಾದದ ಒಂದು ನಿರ್ದಿಷ್ಟ ಸಿದ್ಧಾಂತ.

ಎರಡನೆಯದು - ಈ ಸಿದ್ಧಾಂತದ ಸಾಮೀಪ್ಯಕ್ಕೆ ಕ್ರಮೇಣ ಕೊಂಡೊಯ್ಯಬಲ್ಲ ಕ್ರಿಯಾಚರಣೆ. (Approximation to the altimate ideal)

'ಅಧಿಕಾರ' ಅಥವಾ 'ಪ್ರಭುತ್ವ' ಇರುವಲ್ಲಿ 'ಅಧೀನತೆ' ಅಥವಾ 'ಭಯ' ಇದ್ದೇ ಇರುತ್ತದೆ. ಈ ಅಧೀನತೆ ಅಥವಾ ಭಯವೇ ವ್ಯಕ್ತಿಗಳ ಎಲ್ಲ ವಿಕೃತಿಗಳಿಗೂ ಮೂಲ ಕಾರಣ. ಆದುದರಿಂದ ಅಧೀನತೆಯ, ಭಯದ ಛಾಯೆ ಇರದ 'ಪ್ರಭುತ್ವ'ವನ್ನು ಸ್ಥಾಪಿಸುವುದೇ ಲೋಹಿಯಾ ಅವರ ಸಿದ್ಧಾಂತ ಮತ್ತು ಹೋರಾಟಗಳ ಮೂಲ ಪ್ರೇರಣೆಯಾಗಿದೆ.

ಇಂಡಿಯಾದ ಸಂದರ್ಭವನ್ನು ಗಾಂಧಿ ಮತ್ತು ಅಂಬೇಡ್ಕರ್‌ಗಿಂತ ರಚನಾತ್ಮಕವಾಗಿ, ಅಖಂಡವಾಗಿ ಪರಿಭಾವಿಸುವ ಲೋಹಿಯಾ, ಜಾತಿ, ಲಿಂಗಭೇದ ಸಮಸ್ಯೆಯನ್ನು ಏಕಾತ್ಮಕವಾಗಿ ಪರಸ್ಪರ ಪೂರಕವಾಗಿ ಪರಿಭಾವಿಸುತ್ತಾರೆ. ಜಾತಿ ಮತ್ತು ಲಿಂಗಕ್ಕೆ ಸಂಬಂಧಿಸಿದಂತೆ (ಎಂದರೆ, ಒಂದರ್ಥದಲ್ಲಿ ಗಾಂಧಿ ಮತ್ತು ಅಂಬೇಡ್ಕರ್ ಅವರ ಆಲೋಚನೆಗಳನ್ನು ಅಂತರ್ಗತವಾಗಿಸಿಕೊಂಡು ಆತ್ಯಂತಿಕವಾದ) ಇರುವ ಗೊಂದಲಗಳು, ಭೇದಭಾವಗಳು ಪರಸ್ಪರ ಸಂಬಂಧ ಹೊಂದಿದ್ದು ಒಂದು ಮತ್ತೊಂದನ್ನು ಬಲಪಡಿಸುತ್ತ ಹೋಗುತ್ತವೆ. ಜಾತಿ ಹಾಗೂ ಸ್ತ್ರೀಯರನ್ನು ಕುರಿತ ಪ್ರತ್ಯೇಕತಾವಾದೀ ಮನೋಭಾವವೇ ಇಂಡಿಯಾದ ಅಧೋಗತಿಗೆ ಮೂಲ ಕಾರಣ. ಆದ್ದರಿಂದ ಈ ಎರಡೂ ಬಗೆಯ ಪ್ರತ್ಯೇಕತೆಗಳ ವಿರುದ್ಧ ಏಕಕಾಲಕ್ಕೆ ಪ್ರಜ್ಞಾಪೂರ್ವಕವಾದ ಹಾಗೂ ನಿರಂತರವಾದ ಹೋರಾಟ ಅತ್ಯಗತ್ಯ ಎಂಬುದಾಗಿ ಲೋಹಿಯಾ ಭಾವಿಸುತ್ತಾರೆ. ರಾಜಕೀಯವನ್ನು ವ್ಯಕ್ತಿಗಳ ಚಟುವಟಿಕೆಗಳ ಬಹಿರಂಗ ಮುಖವಾಗಿ ಲೋಹಿಯಾ ಪರಿಭಾವಿಸುತ್ತಾರೆ. ಆದುದರಿಂದಲೆ ;

> "ಈ ದೇಶದಲ್ಲಿ ಕಮ್ಯೂನಿಸ್ಟ್, ಕಾಂಗ್ರೆಸ್ ಹಾಗೂ ಸಮಾಜವಾದಿ ರಾಜಕಾರಣದಿಂದ ಹಿಡಿದು ಎಲ್ಲ ಬಗೆಯ ರಾಜಕಾರಣದಲ್ಲೂ ಉದ್ದೇಶ ಪೂರ್ವಕವಾಗಿಯೇ ಅಥವಾ ರೂಢಿಗತವಾಗಿಯೇ ಒಂದು ವಿಷಯದ ಕುರಿತು ಮಾತ್ರ ರಾಷ್ಟ್ರೀಯ ಸಹಮತವಿದೆ. ಅದೇನೆಂದರೆ, ಇಡೀ ಜನಸಂಖ್ಯೆಯ ಮುಕ್ಕಾಲು ಭಾಗದಷ್ಟಿರುವ ಶೂದ್ರರನ್ನೂ, ಸ್ತ್ರೀಯರನ್ನೂ ತುಳಿಯುವುದು ಹಾಗೂ ಅವರನ್ನು ರಾಜಕೀಯದಿಂದ ದೂರ ಇಡುವುದು. ಭಾರತೀಯ ಹೆಣ್ಣಿನ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ. ಅವಳು ಅಡಿಗೆಮನೆಯ ಗುಲಾಮಗಿರಿಯ ಜೊತೆಗಿರುವವಳು, ಅವಳು ಬಳಸುವ ಒಲೆಯ ಉಸಿರು ಕಟ್ಟಿಸುವ ಹೊಗೆಯೂ ಸೇರಿಕೊಂಡು ಪರಿಸ್ಥಿತಿ ಇನ್ನಷ್ಟು ಕರುಣಾಜನಕವಾಗಿ ಬಿಟ್ಟಿದೆ. ಅವಳಿಗೂ ಅಡಿಗೆ, ಊಟಕ್ಕೆ ನಿಗದಿಯಾದ ವೇಳಾಪಟ್ಟಿಯೊಂದಿರಬೇಕು. ಅಡಿಗೆಮನೆಯಲ್ಲಿ ಹೊಗೆ ಸಲೀಸಾಗಿ ಹೋಗುವ ಚಿಮಣಿಯಿರಬೇಕು. ಅರೆಹೊಟ್ಟೆ, ನಿರುದ್ಯೋಗ ಹಾಗೂ ಅನ್ಯಾಯಗಳ ವಿರುದ್ಧದ ಹೋರಾಟದಲ್ಲಿ ಅವಳೂ ಪಾಲ್ಗೊಳ್ಳಬೇಕು. " (ನಟರಾಜ್ ಹುಳಿಯಾರ್ : ೨೦೦೦; ೭)

ಎಂದು ನಿರ್ದಿಷ್ಟವಾಗಿ ಪ್ರತಿಕ್ರಿಯಿಸಿರುವುದು ವ್ಯಕ್ತವಾಗುತ್ತದೆ. ಪ್ರತಿಯೊಂದು ಯುಗ ಹಾಗೂ ಪ್ರತಿಯೋರ್ವ ವ್ಯಕ್ತಿಯು ತಮ್ಮದೇ ಆದ ನಿರ್ದಿಷ್ಟ ನೈತಿಕತೆಯನ್ನು ಹುಡುಕಿಕೊಳ್ಳಬೇಕು ಎಂದು ಲೋಹಿಯಾ ವಿವೇಚಿಸುತ್ತಾರೆ. (ಇದು 'ನೈತಿಕತೆ ಸಾಪೇಕ್ಷವಾದದ್ದು' ಎಂಬ ಎಲ್ಲೆಯೊಳಗಿನಿಂದಲೇ ಆಗಿದೆ). ಬ್ರಹ್ಮಚರ್ಯ ಹಾಗೂ ಕನ್ಯತ್ವಗಳನ್ನು ಸೆರೆಮನೆ ಎಂದೂ, ಈ ಸೆರೆಮನೆಯೊಳಗೆ ಸಿಕ್ಕಿ ತಮ್ಮ ವಿಮೋಚಕರಿಗಾಗಿ ಕಾಯುವ ಲಕ್ಷಾಂತರ ಯುವಜನತೆಯ ಕುರಿತು;

> "ಲೈಂಗಿಕ ನೀತಿ ಸಂಹಿತಿಯಲ್ಲಿ ಎರಡೇ ಎರಡು ಅಕ್ಷಮ್ಯ ಅಪರಾಧಗಳಿವೆ ಎಂಬುದು ಮಾತ್ರ ಅವರಿಗೆ ನೆನಪಿರಲಿ : ಒಂದು ಅತ್ಯಾಚಾರ, ಎರಡು, ಸುಳ್ಳು ಹೇಳುವುದು ಅಥವಾ ಕೊಟ್ಟ ಮಾತಿಗೆ ತಪ್ಪುವುದು. ಮೂರನೆಯ ಅಪರಾಧವೂ ಒಂದಿದೆ. ಅದೆಂದರೆ ಇನ್ನೊಬ್ಬರಿಗೆ ನೋವುಂಟು ಮಾಡುವುದು ಈ ಕುರಿತು ಸಾಧ್ಯವಾದಷ್ಟು ಅವರು ಎಚ್ಚರವಹಿಸಬೇಕು."
> (ನಟರಾಜ್ ಹುಳಿಯಾರ್ : ೨೦೦೦ ; ೯)

ಎಂದು ಹೇಳುವುದರಲ್ಲಿ ಗಂಡು ಹೆಣ್ಣಿನ ಸಂಬಂಧಗಳ ಸ್ಪಷ್ಟ ಜಿಜ್ಞಾಸೆ ವ್ಯಕ್ತವಾಗುತ್ತದೆ. ಜಾತಿ ಪದ್ಧತಿಯನ್ನು ಸ್ತ್ರೀಯರ, ಆದಿವಾಸಿಗಳ, ಶೂದ್ರರ, ಹರಿಜನರ ಹಾಗೂ ಮುಸಲ್ಮಾನರೊಳಗಿನ ಹಿಂದುಳಿದ ವರ್ಗಗಳ ಶೋಷಣೆಗೆ ಮೂಲಕಾರಣವೆಂದು ಲೋಹಿಯಾ ಪರಿಭಾವಿಸುತ್ತಾರೆ. ಆದ್ದರಿಂದ ಜಾತಿ ಪದ್ಧತಿ ಸಂಪೂರ್ಣವಾಗಿ ನಿರ್ಮೂಲನವಾದರೆ, ಉಳಿದ ಸಮಸ್ಯೆಗಳು ಸಹಜವಾಗಿ ಪರಿಹಾರ ಕಾಣುತ್ತವೆ ಎಂಬುದನ್ನು ಬಲವಾಗಿ ಪ್ರತಿಪಾದಿಸುವುದು ಅವರ ಸಿದ್ಧಾಂತಕ್ಕೆ ಸಾಧ್ಯವಾಗಿದೆ. ಪರಿಣಾಮವಾಗಿ ಲೋಹಿಯಾವಾದದ ಜಾತಿ ವಿನಾಶ ಕಲ್ಪನೆ ಎಲ್ಲ ಬಗೆಯ ಅಸಮಾನತೆಯನ್ನು ಗುರಿಯಾಗಿರಿಸಿಕೊಂಡದ್ದು. ಮೈಬಣ್ಣ ಹಾಗೂ ಜಾತಿ ಮೂಲದ ಕೀಳರಿಮೆಗಳಿಗೂ ಜಾಗತಿಕ ಮಟ್ಟದಲ್ಲಿ ದಕ್ಷಿಣ ಆಫ್ರಿಕಾದ ಕಪ್ಪು ಜನರ ದಮನಕ್ಕೂ ಇರುವ ಸಂಬಂಧವನ್ನು ಲೋಹಿಯಾ ಈ ನೆಲೆಯಿಂದಲೇ ಗುರುತಿಸುವುದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಮೈಬಣ್ಣ ಕುರಿತ ಲೋಹಿಯಾರ ಹೊಸ ಸೌಂದರ್ಯ ಮೀಮಾಂಸೆ ಅಸಮಾನತೆಯ ಆಧಾರದ ಮೇಲೆ ನಿಂತ ಪರಂಪರಾಗತ ಸೌಂದರ್ಯ ಮೀಮಾಂಸೆಯನ್ನು ತಲೆಕೆಳಗು ಮಾಡಿದೆ. ಜಾತಿಪದ್ಧತಿಯ ಆಧಾರದಿಂದ ಹುಟ್ಟಿದ ಶ್ರೇಷ್ಠತೆಯ ಕಲ್ಪನೆ ಹಾಗೂ ಮೈ ಬಣ್ಣವನ್ನಾಧರಿಸಿದ ಸೌಂದರ್ಯದ ಕಲ್ಪನೆಗಳೆರಡೂ ಒಂದೇ ಮಾನಸಿಕ ಸ್ಥಿತಿಯಿಂದ ಮೂಡಿಬರುವಂಥವು ಎಂಬ ಅಂಶ ಲೋಹಿಯಾ ಅವರ ವಿಶ್ಲೇಷಣೆಯ ತಾತ್ವಿಕ ತಳಹದಿಯಾಗಿದೆ.

> "ಸತ್ಯ, ಸಮತೆ ಮತ್ತು ಸೌಂದರ್ಯ - ಈ ಮೂರು ಕಾಳಜಿಗಳೂ ಏಕೀಭವಿಸಿಕೊಂಡ ಹೊಸ ನಾಗರಿಕತೆಯ ನಿರ್ಮಾಣದ ನೇತೃತ್ವವನ್ನು ಭಾರತ ವಹಿಸಬಹುದಾಗಿದೆ ಎಂಬುದು ಲೋಹಿಯಾ ಅವರ ನಂಬಿಕೆಯಾಗಿತ್ತು. ಏಕೆಂದರೆ ಇಂತಹ ನಾಗರಿಕತೆಯೊಂದರ ಹೊಳಹು ನೀಡಿದ್ದ ಗಾಂಧೀಜಿ ಎಂಬ ಘನ ವ್ಯಕ್ತಿತ್ವವನ್ನು ಭಾರತ ಜಗತ್ತಿಗೆ ನೀಡಿತ್ತು. ಹೀಗಾಗಿ ತಮ್ಮ ತಾತ್ವಿಕ ದರ್ಶನದ ಅನುಷ್ಠಾನಕ್ಕಾಗಿ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಲೋಹಿಯಾ ಬಳಸುವುದು ಗಾಂಧೀಜಿಯ ಒಳತೋಟಗಳನ್ನೇ. ಗಾಂಧೀಜಿಯ ಗುರಿ ಎನ್ನುವುದು ತಲುಪುವುದಲ್ಲ, ಆಗುವುದು ಎಂಬ ನಂಬಿಕೆಯಲ್ಲಿನ ಸತ್ಯ ನಿಷ್ಠುರತೆಯನ್ನೂ, ಮೇಲ್ಜಾತಿಯವನಾಗಿ ಹುಟ್ಟಿದುದರ ಪಾಪ ತೊಳೆದುಕೊಳ್ಳಲು ಅಸ್ಪೃಶ್ಯನಾಗಿ ಪುನರ್ಜನ್ಮ

ಪಡೆಯುವ ಇಚ್ಛೆಯಲ್ಲಿನ ಸಮತೆಯ ಹಂಬಲವನ್ನೂ, ಯಂತ್ರ ಮನುಷ್ಯನನ್ನು ಹೃದಯ ಹೀನನನ್ನಾಗಿ ಮಾಡುವುದು ಎಂಬ ಕಾಣ್ಕೆಯಲ್ಲಿನ ಸೌಂದರ್ಯ ದೃಷ್ಟಿಯನ್ನೂ, ಲೋಹಿಯಾ ಗುರುತಿಸಿದ್ದರು. ಈ ಒಳನೋಟಗಳೇ ಮುಂದೆ ಲೋಹಿಯಾ ಪ್ರತಿಪಾದಿಸಿದ ಭಾರತೀಯ ಸಮಾಜವಾದದ ಮೂರು ಮುಖ್ಯ ಅಡಿಗಲ್ಲುಗಳಾದ ನಿರಂತರ ನಾಗರಿಕ ಅಸಹಕಾರ, ಸತ್ಯಾಗ್ರಹ ಆಂದೋಲನ, ಜಾತಿ ವಿನಾಶ ಆಂದೋಲನ ಹಾಗೂ ಸಣ್ಣ ಘಟಕ ತಂತ್ರಜ್ಞಾನ (Small unit technology) ಆಂದೋಲನಗಳಿಗೆ ಪ್ರೇರಣೆ ಒದಗಿಸಿದ್ದು." (ನಾಗಭೂಷಣ .ಡಿ.ಎಸ್ : ೧೯೯೦ ; ೧೨೯)

ಸಮಕಾಲೀನ ರಾಜಕೀಯ ಸಂದರ್ಭದಲ್ಲಿ 'ರಾಜಕೀಯ' ಎನ್ನಲಾಗುವ ದೈನಂದಿನ ವಿದ್ಯಮಾನಗಳನ್ನಷ್ಟೇ ಚರ್ಚಿಸದ ಲೋಹಿಯಾ ಇಂಡಿಯಾದ ಯಾವ 'ವೃತ್ತಿ ರಾಜಕಾರಣಿ'ಯೂ ಗ್ರಹಿಸದ ಖಾಸಗಿ ದುರಂತಗಳನ್ನು ಗ್ರಹಿಸಲೆತ್ನಿಸಿದ್ದರು. ವಿವಾಹವನ್ನು ಹೊರತುಪಡಿಸಿ ಒಂಟಿಯಾಗಿ ಅಥವಾ ತನಗೆ ಬೇಕಾದ ಸಂಗಾತಿಯ ಜೊತೆ ಇರ ಬಯಸುವ ಹೆಣ್ಣಿನ ಬಗ್ಗೆ ಭಾರತೀಯ ಸಮಾಜ ತೋರುವ ಅಸಹನೆ, ಹಾಗೂ ಹುಡುಗಿಯೊಬ್ಬಳು ಕೆಳಜಾತಿಯ ಹುಡುಗನೊಬ್ಬನನ್ನು ಪ್ರೀತಿಸಿದ ಪ್ರಕರಣವನ್ನು ವಿಚಾರಣೆಗೆತ್ತಿಕೊಂಡ ಮೇಲುಜಾತಿಯ ನ್ಯಾಯಾಧೀಶನೊಬ್ಬ ನೀಡಿದ ಠೇಂಕಾರದ ತೀರ್ಪು, ಇದರಿಂದ ಹಿಡಿದು ಬನಾರಸ್ ವಿಶ್ವವಿದ್ಯಾನಿಲಯದ ಲೈಂಗಿಕ ವರ್ತನೆ ಕುರಿತು ತನಿಖೆ ಮಾಡುವ ಅಧಿಕಾರಿಗಳು ಹಾಗೂ ಪೋಲೀಸ್ ಇಲಾಖೆ ಪೋಲೀಸ್ ಪೇದೆಗಳ ಮೇಲೆ ಹೇರುವ 'ವಿಧೇಯತೆ' ಎಂಬ ಕಲ್ಪನೆಯವರೆಗೂ ಹಬ್ಬಿರುವ ಭಾರತೀಯ 'ಫ್ಯೂಡಲ್ ಮನಸ್ಥಿತಿಯ' ಹಲವು ಮುಖಗಳನ್ನು ಕುರಿತು ಲೋಹಿಯಾ ತಾಳುವ ನಿಲುವುಗಳು ಸೂಕ್ಷ್ಮವಾದವು. ಎಳೆಯರಿಬ್ಬರ ಪ್ರೇಮದಲ್ಲಿ ಮೂಗು ತೂರಿಸಿದ ನ್ಯಾಯಾಧೀಶನಿಗೆ ಶಿಕ್ಷೆಯಾಗಬೇಕು ಎಂದು ವಾದಿಸುವಾಗ ತಳೆವ ನಿಲುವನ್ನೇ ಹರೆಯದ ಹುಡುಗರ ಲೈಂಗಿಕ ವರ್ತನೆಯ ಬಗ್ಗೆ ಬೊಬ್ಬೆ ಹಾಕುವ ಕಾಶಿಯ ಮರ್ಯಾದಸ್ಥರ ಬಗೆಗೂ ಲೋಹಿಯಾ ತಳೆಯಬಲ್ಲವರಾಗಿದ್ದರು. ಈ ಎಲ್ಲ ಪ್ರಕರಣಗಳಲ್ಲೂ ಸಾರ್ವಜನಿಕ ನೈತಿಕತೆ ಹಾಗೂ ವೈಯಕ್ತಿಕ ನೈತಿಕತೆ ಕುರಿತು ಸಾಮಾನ್ಯವಾಗಿ ಭಾರತೀಯರು ತಳೆಯುವ ಬೂಟಾಟಿಕೆಯ ನಿಲುವುಗಳನ್ನು ಲೋಹಿಯಾ ಸ್ಫೋಟಿಸುವುದು ವ್ಯಕ್ತವಾಗುತ್ತದೆ. ಚಳುವಳಿ ಹಾಗೂ ಸಂಘಟನೆಗಳ ಸ್ವರೂಪದ ವಿಶ್ಲೇಷಣೆ, ಚಳುವಳಿಗಾರರಿಗೆ ಕರೆ, ವಿಮರ್ಶೆ, ಸಲಹೆ, ಬುದ್ಧಿವಾದ ಈ ಎಲ್ಲ ಸಂದರ್ಭಗಳಲ್ಲಿಯೂ ಲೋಹಿಯಾ ಹೊರಗೆ ನಿಂತು ಪ್ರತಿಕ್ರಿಯಿಸುವುದನ್ನಾಗಲಿ, ವಸ್ತುನಿಷ್ಠ ವಿಶ್ಲೇಷಣೆಯ ಗುಪ್ತ ಅಹಂಕಾರದಲ್ಲಿ ಬರೆಯುವುದಾಗಲಿ ಮಾಡುವುದಿಲ್ಲ. ಚಳುವಳಿಗಾರರು, ಸುಧಾರಣಾವಾದಿಗಳು ಕಾಲಕಾಲಕ್ಕೆ ದೊಡ್ಡದೊಡ್ಡ ಪ್ರಶ್ನೆಗಳನ್ನೆತ್ತಿದರೂ ಭಾರತ ಯಾಕೆ ಜಡವಾಗಿಯೇ ಉಳಿದಿದೆ ಎಂಬುದಕ್ಕೆ ಲೋಹಿಯಾ ಕಂಡುಕೊಳ್ಳುವ ಉತ್ತರ ಇದು:

" ....... ಭಾರತ ಎಂಥ ದೊಡ್ಡ ಹೊಂಡವೆಂದರೆ ಇಲ್ಲಿ ಏನೇ ನಡೆದರೂ ಅದು ಒಂದೆರಡು ಸುಳಿಗಳನ್ನೋ ಪುಟ್ಟ ಅಲೆಗಳನ್ನೋ ಎಬ್ಬಿಸಿ ಏನೂ ನಡೆದಿಲ್ಲವೆಂಬಂತೆ ಮಾಯವಾಗಿ ಬಿಡುತ್ತದೆ. " (ನಟರಾಜ್ ಹುಳಿಯಾರ್ : ೨೦೦೦ ; ೩೪೫)

ಇಂಡಿಯಾದ ಚಳುವಳಿ ರಾಜಕಾರಣಗಳ ಮನೋಸಾಮಾಜಿಕ, ಮನೋಸಾಂಸ್ಕೃತಿಕ ಅಂಶಗಳನ್ನು ಲೋಹಿಯಾ ಅವರಷ್ಟು ಆಳವಾಗಿ ಗ್ರಹಿಸಿದ ಚಿಂತಕರು ಕಡಿಮೆ. ಅವರ ವಾದದ ಸೂಕ್ಷ್ಮತೆ, ಶ್ರಮ ನಿಷ್ಠುರತೆ ಹಾಗೂ

ಬದ್ಧತೆಗಳು ನಂತರದ ಬರಹಗಾರರು, ಚಿಂತಕರು ಹಾಗೂ ರಾಜಕೀಯ - ಸಾಮಾಜಿಕ ಕಾರ್ಯಕರ್ತರನ್ನು ಏಕಕಾಲಕ್ಕೆ ತಟ್ಟಿದೆ. ಇದು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟಿದೆ.

**೪.೧.೪ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಮಾರ್ಕ್ಸ್‌ವಾದ :**

"ಇಲ್ಲಿಯವರೆಗಿನ ಚರಿತ್ರೆಯೆಂದರೆ ವರ್ಗ ಹೋರಾಟದ ಚರಿತ್ರೆಯೇ ಆಗಿದೆ. ಮನುಷ್ಯ ತನ್ನ ಜೀವನದ ಸೌಖ್ಯಕ್ಕಾಗಿ ನಡೆಸಿದ ಎಲ್ಲ ಚಟುವಟಿಕೆಗಳ ದಾಖಲೆಯೇ ಇತಿಹಾಸವಾಗಿದೆ." (ಬಾಪು ಹೆದ್ದೂರ ಶೆಟ್ಟಿ : ೧೯೮೯; ೫೫) ಎಂಬುದು ಮಾರ್ಕ್ಸ್ ಮತ್ತು ಎಂಗೆಲ್ಸರ ಅಭಿಪ್ರಾಯ.

ಇತಿಹಾಸವನ್ನು ಉತ್ಪಾದನೆಯ ವಿಧಾನ ಮತ್ತು ಜನರೊಡನೆ ಅವುಗಳ ಸಂಬಂಧದ ಏಳು ಬೀಳುಗಳ ಕಾಲಕ್ರಮದ ಪ್ರಾತಿನಿಧಿಕ ದಾಖಲೆಯಾಗಿ ನೋಡುವ ಮಾರ್ಕ್ಸ್‌ವಾದದ ಭೌತವಾದಿ ದೃಷ್ಟಿಕೋನವು, 'ಸ್ವಾತಂತ್ರ್ಯ' ಮಾನವ ಜನಾಂಗದ ಅತಿ ಶ್ರೇಷ್ಠವಾದ ಬಯಕೆ ಎಂಬುದನ್ನು ನಿರೂಪಿಸುತ್ತದೆ. ವ್ಯಕ್ತಿಗಳ ತಿಳುವಳಿಕೆ, ಕಲ್ಪನೆ, ವಿಚಾರ ಮತ್ತು ನಂಬಿಕೆಗಳು ವಾಸ್ತವದ್ದಲ್ಲ ಇವು ವ್ಯಕ್ತಿಗಳ ಜೀವನದ ಭೌತ ಪರಿಸ್ಥಿತಿಗಳ ಪರಿಣಾಮಗಳಾಗಿವೆ. ಭೌತಿಕ ಪರಿಸ್ಥಿತಿಗಳು ರಾಜಕೀಯ ಮತ್ತು ಧಾರ್ಮಿಕ ಸಿದ್ಧಾಂತಗಳನ್ನು ರೂಪಿಸುತ್ತವೆ ಎಂದು ಮಾರ್ಕ್ಸ್‌ವಾದ ಪರಿಭಾವಿಸುತ್ತದೆ. 'ಸಮಾನತೆ' ಮತ್ತು 'ಸ್ವಾತಂತ್ರ್ಯ'ವನ್ನು ಬಂಡವಾಳಶಾಹಿ ವ್ಯವಸ್ಥೆಯ ಮೂಲದಿಂದಲೇ ಮಾರ್ಕ್ಸ್‌ವಾದ ಬಯಸುತ್ತದೆ. ಆಸ್ತಿಯ ಖಾಸಗಿ ಒಡೆತನದ ರದ್ಧತಿಯನ್ನೇ ಕಮ್ಯೂನಿಸಂ ಎಂದು ಮಾರ್ಕ್ಸ್‌ನ ಸಮರ್ಥನೆಯನ್ನು ಬಂಡವಾಳಶಾಹಿ ರಾಷ್ಟ್ರಗಳ, ಪ್ರಜಾಶಕ್ತಿ ಅಂತರ್ಗತವಾಗಿ ಒಪ್ಪಿಕೊಂಡಿದೆ. ಹಾಗೂ ವಿಶ್ವದ ಬಹು ದೇಶಗಳಲ್ಲಿ ಕಮ್ಯೂನಿಸ್ಟ್ 'ಕ್ರಾಂತಿ'ಯ ನೆಲೆಯಲ್ಲಿ ಕಾಣಿಸಿಕೊಂಡಿದೆ. ಇದು ಮಾರ್ಕ್ಸ್ ನಂತರದ ೧೦೦ ವರ್ಷಗಳ ಬೆಳವಣಿಗೆಯಾಗಿದೆ. ಇಲ್ಲಿ ಮುಖ್ಯವಾಗುವ ಅಂಶವೆಂದರೆ,

"ಮಾರ್ಕ್ಸ್‌ವಾದ ಒಂದು ಏಕರೂಪಿ ದರ್ಶನವಲ್ಲ. ಮಾರ್ಕ್ಸ್‌ನಿಂದ ಮಾರ್ಕ್ಸ್‌ವಾದದವರೆಗೆ ಹಲವು ಬೆಳವಣಿಗೆಯ ಸ್ತರಗಳಿವೆ. ಮಾರ್ಕ್ಸ್‌ವಾದ ಬಹಳಷ್ಟು ಸಲ ಪರಿಷ್ಕರಣಗೊಂಡಿದೆ. ಭಾರತೀಯ ಸಂದರ್ಭದಲ್ಲಿ ಸಮಾಜವಾದಿ ಸಂಘಟನೆಯಾಗಿ ಕಾಣಿಸಿಕೊಳ್ಳುವ ಮಾರ್ಕ್ಸ್‌ವಾದಕ್ಕೆ ಅದರದೇ ಆದ ಮಿತಿಗಳಿದ್ದರೂ ವರ್ಗ ಹೋರಾಟದ ಕೇಂದ್ರೀಯ ಸೈದ್ಧಾಂತಿಕ ಚೌಕಟ್ಟಾಗಿ ಮಾರ್ಕ್ಸ್‌ವಾದ ಕಾಣಿಸಿಕೊಂಡಿದೆ. ಮಾರ್ಕ್ಸ್‌ವಾದದ ಪಾರಿಭಾಷಿಕ ಶಬ್ದ 'ಉತ್ಪಾದನೆ' ಎಂಬುದು ಕೇವಲ ಅರ್ಥಶಾಸ್ತ್ರ ನಿರ್ವಚಿಸುವ 'ಉತ್ಪಾದನೆ' ಮಾತ್ರ ಅಲ್ಲ." (ಆನಂದ ಕೋಡಿಂಬಳ:೨೦೦೨; ೨೯೦)

ಇಂಡಿಯಾದ ಸಂದರ್ಭದಲ್ಲಿ ಉತ್ಪಾದನೆಯೆಂದರೆ ಒಂದು ಸಂಸ್ಕೃತಿ ಅದರ ಒಟ್ಟು ಇರುವಿಕೆ ಹಾಗೂ ಅದರ ಬಗೆಗಿನ ತಿಳುವಳಿಕೆಯನ್ನು ಹುಟ್ಟುಹಾಕಿಕೊಳ್ಳುವ ಒಟ್ಟು ಪ್ರಕ್ರಿಯೆ ಎಂದು ಹೇಳಬಹುದು. ಅಂದರೆ ಒಂದು ಸಂಸ್ಕೃತಿ ತನ್ನ ಅಸ್ಥಿತ್ವವನ್ನು ಮುಂದುವರಿಸಿಕೊಳ್ಳಲು ಕೈಗೊಳ್ಳುವ ಉತ್ಪಾದನೆ- ಪ್ರತ್ಯುತ್ಪಾದನೆ ಕ್ರಿಯೆಗಳಲ್ಲಿ ಅರ್ಥಶಾಸ್ತ್ರೀಯ ಉತ್ಪಾದನೆ (ಉದಾ: ವ್ಯವಸಾಯ, ಕೈಗಾರಿಕೋದ್ಯಮ) ಎಷ್ಟೇ ಮುಖ್ಯ ಹಾಗೂ

ಮೂಲಭೂತವಾದುದಾದರೂ ಅದೇ ಸರ್ವಸ್ವ ಎಂದು ಮಾರ್ಕ್ಸ್ ಎಂದೂ ಹೇಳಿಲ್ಲ. ಭೌತಿಕ ಉತ್ಪಾದನೆಗಳಾದ ವ್ಯವಸಾಯ ಹಾಗೂ ಕೈಗಾರಿಕೋದ್ಯಮ ಇತರ ಉತ್ಪಾದನೆಗಳನ್ನೂ (ಉದಾ : ಬೌದ್ಧಿಕ ಉತ್ಪಾದನೆಗಳಾದ ಜಿಜ್ಞಾಸೆ, ಸಾಹಿತ್ಯ, ನ್ಯಾಯ ಸಂಹಿತೆ ಇತ್ಯಾದಿ.) ನಿರ್ಧರಿಸುತ್ತವೆ ಎಂದು ಮಾರ್ಕ್ಸ್ ಮತ್ತು ಎಂಗೆಲ್ಸ್‌ರು ಹೇಳಿರುವುದು ಇದೆ. ಆದರೆ ಈ ನಿರ್ಧಾರ ಪ್ರಕ್ರಿಯೆ ಸರಳವಾದ ಕಾರ್ಯಕಾರಣ ಸಂಬಂಧ ಹೊಂದಿರುವಂಥದು ಎಂದು ಭಾವಿಸಲು ಸಾಧ್ಯವಾಗುವುದಿಲ್ಲ. ಭೌತಿಕ ಮತ್ತು ಬೌದ್ಧಿಕ ಉತ್ಪಾದನೆ, ಪ್ರತ್ಯುತ್ಪಾದನೆ ಪ್ರಕ್ರಿಯೆಗಳು ತಮ್ಮನ್ನು ಪರಸ್ಪರ ನಿರ್ಧರಿಸಿಕೊಳ್ಳುತ್ತವೆ ಎಂಬುದು ಮಾರ್ಕ್ಸ್‌ವಾದದ ಮೂಲ ನಿಲುವು. ಸ್ತ್ರೀಯರಿಗೆ ಸಂಬಂಧಿಸಿದಂತೆ ಮಾರ್ಕ್ಸ್‌ವಾದದ ನಿಲುವು ಕೂಡ ಭೌತವಾದಕ್ಕೆ ತಳಕು ಹಾಕಿಕೊಂಡದ್ದು. ಸ್ತ್ರೀಯರಿಗೆ ಅವರ ಸ್ತ್ರೀತ್ವದ ಕುರಿತಾದ ಪ್ರಜ್ಞೆಯು ಮಾನವ ಇತಿಹಾಸದ ಒಂದು ಘಟ್ಟದಲ್ಲಿ ನಿರ್ದಿಷ್ಟ ಸಮಾಜ ವಿಧಿಸಿದ ಆರ್ಥಿಕ ವ್ಯವಸ್ಥೆಯಿಂದ ರೂಪಿತಗೊಂಡದ್ದಾಗಿದೆ. ಇದನ್ನು ಎಂಗೆಲ್ಸ್ 'The origin of the family, Private Property, and the state' ಎಂಬ ಕೃತಿಯಲ್ಲಿ ದೀರ್ಘವಾಗಿ ಚರ್ಚಿಸುತ್ತಾನೆ. ರಾಷ್ಟ್ರ, ವೈಯಕ್ತಿಕ ಸಂಪತ್ತು ಮತ್ತು ಕುಟುಂಬ ಇವುಗಳಲ್ಲಿನ ಪರಸ್ಪರ ಅಂತರ್‌ಸಂಬಂಧವನ್ನು ಕೂಲಂಕುಷವಾಗಿ ಶಿಲಾಯುಗದಿಂದ ತೊಡಗಿ ಔದ್ಯೋಗಿಕರಣದ ಕಾಲದವರೆಗಿನ ಬೆಳವಣಿಗೆಯ ನೆಲೆಯಲ್ಲಿ ಈ ಕೃತಿಯಲ್ಲಿ ಗಮನಿಸಲಾಗಿದೆ.

> "ಎಂಗೆಲ್ಸ್ ಹೇಳುವುದೇನೆಂದರೆ, ಉತ್ಪಾದನೆಯ ಕ್ಷೇತ್ರದಲ್ಲಿ ಸ್ತ್ರೀಯೂ ಪುರುಷನಿಗೆ ಸಮಾನವಾಗಿ ತನ್ನನ್ನು ತೊಡಗಿಸಿಕೊಂಡಾಗಲೇ ಅವಳಿಗೆ ತನ್ನ ದಾಸ್ಯದಿಂದ ಬಿಡುಗಡೆ."
> (ರಾಮಚಂದ್ರನ್ ಸಿ.ಎನ್. : ೧೯೯೫ ; ೧೦೬)

ಇಲ್ಲಿ ಹೆಚ್ಚು ಪ್ರಧಾನವಾಗುವ ಅಂಶವೆಂದರೆ, ಬಂಡವಾಳಶಾಹಿ ವ್ಯವಸ್ಥೆಯ ರಾಜಕೀಯಕ್ಕೆ, ಆರ್ಥಿಕ ಕ್ರಿಯಾಚರಣೆಗೆ ಹಾಗೂ ಇವುಗಳನ್ನು ಪ್ರತ್ಯಕ್ಷ- ಪರೋಕ್ಷವಾಗಿ ಆಶ್ರಯಿಸುವ ಮತ್ತು ಪ್ರತಿಯಾಗಿ ಪೋಷಿಸುವ ಸಾಮಾಜಿಕ ಸಾಂಸ್ಕೃತಿಕ ಚಿಂತನೆಗಳಿಗೆ ಪ್ರತಿಭಟನೆಯಾಗಿ ಬೆಳೆದ ಸಿದ್ಧಾಂತ ಮಾರ್ಕ್ಸ್‌ವಾದ ಎಂಬುದು. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮುಂತಾದ ಅಂಶಗಳನ್ನು ಒಂದು ಪೂರ್ಣರೂಪದಲ್ಲಿ ಉದ್ದೇಶಿಸುವ ವೈಚಾರಿಕ ನಿಲುವು ಮಾರ್ಕ್ಸ್‌ವಾದದಲ್ಲಿದೆ. ಭಾರತೀಯ ಸಂದರ್ಭದಲ್ಲಿ ೧೯೫೦ರ ನಂತರದಿಂದ ಮಾರ್ಕ್ಸ್‌ವಾದ ಒಂದು ಗಂಭೀರ ಸಿದ್ಧಾಂತವಾಗಿ ಕಾಣಿಸಿಕೊಂಡಿದೆ. ಲೋಹಿಯಾ, ಜಯಪ್ರಕಾಶ್ ನಾರಾಯಣ, ಅಶೋಕ ಮೆಹತಾ, ಎನ್. ಜಿ.ಗೋರೆ, ಮಿನೂ ಮಸಾನಿ, ಎಂ. ಎಲ್. ದಾಂತವಾಲ, ಆಚಾರ್ಯ ನರೇಂದ್ರ ದೇವ, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಮೊದಲಾದ ಹಲವಾರು ಧುರೀಣರ ಮೇಲೆ ಮಾರ್ಕ್ಸ್‌ವಾದದ ಪ್ರಭಾವ ಪ್ರೇರಣೆಗಳು ನಿಚ್ಚಳವಾಗಿವೆ. ಕರ್ನಾಟಕದ ಸಂದರ್ಭದಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷದ ಗೋಪಾಲ ಗೌಡ, ನಿಜಲಿಂಗಪ್ಪ, ಜೆ.ಎಚ್. ಪಟೇಲ್ ಮುಂತಾದ ಮುಖಂಡರ ರಾಜಕೀಯ ನಿಲುವುಗಳಲ್ಲಿ ಲೋಹಿಯಾವಾದಿ ಸಮಾಜವಾದದ ಪ್ರಭಾವ ಕಂಡು ಬರುತ್ತದೆ.

೪.೧.೫ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ : ಸ್ತ್ರೀಯರ ಸ್ಥಿತಿಗತಿ.

ಸಾಂಸ್ಕೃತಿಕ ನೆಲೆಯ ಒಟ್ಟು ನಿರ್ಮಿತಿಯ ಒಳಗೆ ಸಮಾಜವಾದ, ದೇಶಿ ಚಿಂತನೆಗಳ ಆತ್ಯಂತಿಕ ಪ್ರಭಾವ ಮೇಲು ಸ್ತರದ್ದಾಗಿದೆ. ಸಾಹಿತ್ಯದ ಪ್ರಗತಿಶೀಲ, ನವ್ಯ- ನವ್ಯೋತ್ತರ ಸಂದರ್ಭಗಳಿಂದಲೂ ಕೂಡ ಮಹಿಳೆಯರ ಬರವಣಿಗೆಗಳ ಮಾದರಿಗಳು ವಿಶೇಷವಾದ ಪಲ್ಲಟಗಳಿಗೆ ಒಳಗಾಗಲೇ ಇಲ್ಲವೆಂದು ಹೇಳಬೇಕಾಗುತ್ತದೆ. ೪೪ ಹೀಗಾಗಿ ಸಾಮಾಜಿಕ ನೆಲೆಯಿಂದಲೇ ಮಹಿಳೆಯರ ಬದುಕನ್ನು ನಿರ್ವಚಿಸಬೇಕಾಗುತ್ತದೆ. ಇದರಲ್ಲಿ ಬಂಡವಾಳಶಾಹಿ ಆರ್ಥಿಕತೆಯಡಿಯಲ್ಲಿ ಮಹಿಳೆಯರು ಅತ್ಯಂತ ಅಗ್ಗದ ಕೂಲಿಗಳಾಗಿ ಮಾರ್ಪಟ್ಟ ಪಲ್ಲಟವನ್ನು ನಿಖರವಾಗಿ ಗುರುತಿಸಬಹುದು. ಮಹಿಳೆಯರು ಕೆಲಸಗಳಲ್ಲಿ ಪುನರಾವರ್ತನೆಯಾಗುವ, ಪರಿಣಿತರಲ್ಲದ ಎರಡನೆಯ ದರ್ಜೆಯ ಕಾರ್ಮಿಕರಾಗಿ ದುಡಿಯುವ ವಾತಾವರಣ ಏರ್ಪಟ್ಟು, ಸುಲಭವಾಗಿ ನಿಯಂತ್ರಿಸಬಹುದಾದ ಮತ್ತು ಬೇಕಾದಂತೆ ಬಳಸಿಕೊಳ್ಳಬಹುದಾದ ಶ್ರಮಶಕ್ತಿಗಳಾಗಿ ರೂಪಿತಗೊಂಡರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಬಂಡವಾಳಶಾಹಿ ಆರ್ಥಿಕತೆಯು ಮಾರಾಟಕ್ಕಾಗಿಯೇ ಉತ್ಪಾದನೆ ಮಾಡುವಂಥ ಆರ್ಥಿಕತೆಯಾಗಿದೆ. ಇದು ಮಾರುಕಟ್ಟೆಯ ಹಿತಾಸಕ್ತಿಗಳಿಗಾಗಿ ಎಲ್ಲಾ ಮೌಲ್ಯಗಳನ್ನು, ಎಲ್ಲ ಸಂಬಂಧಗಳನ್ನು, ಎಲ್ಲಾ ಜನರನ್ನು ವಕ್ರೀಕರಿಸಿ, ವ್ಯಾಪಾರೀಕರಿಸಿ, ಅವರ ಸಾಮಾರ್ಥ್ಯವನ್ನು ಹೊಸಕಿ ಹಾಕುತ್ತದೆ. ಪುರುಷಾಧಿಪತ್ಯದ ರಚನೆಯಲ್ಲಿ ಮಹಿಳೆಯರೇ ಅದರ ತಕ್ಷಣದ ಹಾಗೂ ಸುಲಭದ ಪರಿಣಾಮ ಅನುಭವಿಗಳಾಗುವುದು ಎದ್ದು ಕಾಣುವ ಸ್ಥಿತಿಯಾಗಿದೆ. ಆದ್ದರಿಂದಲೇ ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಯು ಪ್ರಾಥಮಿಕವಾಗಿ ಸ್ತ್ರೀಯರನ್ನು ಮಾರಾಟಕ್ಕಿರುವ ಸರಕಾಗಿಯೂ, ಮಾರುಕಟ್ಟೆಯಲ್ಲಿ ಗ್ರಾಹಕ ವಸ್ತುಗಳ ಮಾರಾಟವನ್ನು ಹೆಚ್ಚಿಸಲು ನಗ್ನ-ಅರೆನಗ್ನವಾಗಿ ಪ್ರದರ್ಶಿಸಬಹುದಾದ ದೇಹಗಳನ್ನಾಗಿಯೂ ನೋಡುತ್ತದೆ. ಈ ವಿಷಯವು ಬಂಡವಾಳಶಾಹಿ ಸಮೂಹ ಮಾಧ್ಯಮಗಳ ಜಾಹೀರಾತು, ಕಲೆ, ಸಾಹಿತ್ಯ ಮತ್ತು ಸಿನಿಮಾಗಳ ಮೂಲಕ ಪ್ರಚಾರವಾಗುತ್ತದೆ. ಸಾಮ್ರಾಜ್ಯವಾದದ ಹುಟ್ಟಿನೊಂದಿಗೆ ವೇಶ್ಯಾವಾಟಿಕೆ ಮತ್ತು ಅಶ್ಲೀಲ ಸಾಹಿತ್ಯಗಳು ಜಾಗತಿಕ ಮಟ್ಟದ ಉದ್ಯಮಗಳಾಗಿ ಸಂಘಟಿತಗೊಂಡಿವೆ. ಲೈಂಗಿಕತೆಯೂ ಸಹ ಒಂದು ವ್ಯಾಪಾರವಾಗಿದೆ. ಅದೊಂದು ಗಾಢವಾದ ಭಾವನಾತ್ಮಕ ಸಂತುಷ್ಟಿಯಿಲ್ಲದ, ಪರಸ್ಪರ ಆಸಕ್ತಿ- ಹಂಬಲ, ಗೌರವ- ಪ್ರೀತಿ, ಇವೆಲ್ಲವುಗಳಿಂದ ದೂರವಾದ ಕೇವಲ ದೈಹಿಕ ಭಾವೋದ್ರೇಕ ಎಂಬಂತೆ ನೋಡಲಾಗುತ್ತಿದೆ.

ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭದೊಳಗೆ ಸ್ತ್ರೀಯರ ಉದ್ಧಾರಕನೆಂಬಂತೆ ತೋರಿಸಿಕೊಳ್ಳುವ ಬಂಡವಾಳಶಾಹಿ ವ್ಯವಸ್ಥೆ ವಾಸ್ತವದ ನೆಲೆಗಟ್ಟಿನಲ್ಲಿ ಮನೆಗೆಲಸವನ್ನು (ಜಾಹೀರಾತು, ಪ್ರಚಾರಗಳ ನೆಲೆಯಲ್ಲಿ) ಸಾಮಾಜೀಕರಿಸಬಹುದಾಗಿದ್ದು, ಇದರ ಸಾಧ್ಯತೆಯು ಬಂಡವಾಳಶಾಹಿಗೆ ಪೂರಕವಾಗಿಯೇ ಮಾರ್ಪಡಬಹುದಾಗಿದೆ. ಆದರೆ ಅದರ ಬದಲಿಗೆ, ಅದು ಮಾರುಕಟ್ಟೆಯಲ್ಲಿ ಗೃಹಬಳಕೆ ವಸ್ತುಗಳ ಮಹಾಪೂರವನ್ನೇ ಹರಿಸುತ್ತಾ ಲಾಭವನ್ನಷ್ಟೇ ದೋಚುತ್ತಿರುವುದು ಕಂಡು ಬರುತ್ತದೆ. ಹೀಗಿದ್ದರೂ ಅದು ಸ್ತ್ರೀಯರ ಮನೆಗೆಲಸದ ಹೊರೆಗಳನ್ನು ಕಡಿಮೆ ಮಾಡುವುದೇ ಅದರ ಏಕೈಕ ಉದ್ದೇಶವೆಂಬಂತೆ ಸಮರ್ಥಿಸಿಕೊಳ್ಳುತ್ತದೆ. ವಾಸ್ತವದಲ್ಲಿ ಬಂಡವಾಳಶಾಹಿ ವ್ಯವಸ್ಥೆಯ ಒಳಗೆ ದುಡಿವ ವರ್ಗದ ಕುಟುಂಬಗಳ ಮೇಲಿನ ಆರ್ಥಿಕ ಹೊರೆ ಹೆಚ್ಚಾಗುತ್ತದೆ. ಅನೇಕ ಕಾರ್ಮಿಕ ವರ್ಗದ ಮಹಿಳೆಯರು ಇವುಗಳನ್ನು ಕೊಳ್ಳಲು ಅಥವಾ ಅದಕ್ಕಾಗಿ ಹಣ ಕಟ್ಟಲು ಹೆಚ್ಚು ಹೆಚ್ಚಾಗಿ ಕೊನೆಯರಿಯದ ಕೂಲಿ ದುಡಿಮೆಗಳಲ್ಲಿ ಅವರನ್ನು

ತೊಡಗಿಸಿಕೊಳ್ಳಬೇಕಾಗುತ್ತದೆ. ಕೊಳ್ಳುಬಾಕ ಸಂಸ್ಕೃತಿಯು ಬಂಡವಾಳಶಾಹಿ ವ್ಯವಸ್ಥೆಯೊಳಗೆ ಹುಟ್ಟನ್ನು ಪಡೆದು ಇಂಡಿಯಾದ ಮಧ್ಯಮ ವರ್ಗದ ಮಹಿಳೆಯರ ಸಂಘರ್ಷಾತ್ಮಕ ಬದುಕಿಗೆ ನಾಂದಿಯಾಗಿದೆ.

ಬಂಡವಾಳಶಾಹಿ ವ್ಯವಸ್ಥೆಯು (ಶೋಷಣೆಯ ಮೂಲರೂಪದಲ್ಲಿ) ಆರ್ಥಿಕತೆಯ ಉಳಿವಿಗಾಗಿ ಅಗಾಧ ಪ್ರಮಾಣದಲ್ಲಿ ಸ್ತ್ರೀಯರನ್ನು 'ಕಾರ್ಮಿಕತೆ'ಯ ಚಲನಾತ್ಮಕ ಘಟ್ಟಕ್ಕೆ ಎಳೆದು ತಂದಿದ್ದರೂ ಕೂಡ ಪ್ರಾಥಮಿಕ ಸ್ಥಿತಿಯಲ್ಲಿ 'ತಾಯ್ತನ'ದ 'ಕುಟುಂಬ'ದ ಊಳಿಗಮಾನ್ಯ ವ್ಯವಸ್ಥೆಯ 'ಜೀತಕಲ್ಪನೆ'ಯನ್ನು ಎಲ್ಲೂ ಒಡೆಯದಂತೆ ಕಾಪಾಡಿಕೊಂಡು ಬಂದಿದೆ. ಇದರಿಂದಾಗಿ ಸ್ತ್ರೀಯರು ಅಗ್ಗದ ಕೂಲಿಗಳಾಗಿ ಮನೆಯಿಂದ ಹೊರಗೆ ದುಡಿಯುವುದಲ್ಲದೆ, ಅದೇ ದಿನದ ಅವಧಿಯಲ್ಲಿ ಮನೆಯೊಳಗೂ ಕೂಡ ಹೆಂಡತಿಯಾಗಿ, ತಾಯಿಯಾಗಿ ಅವರ ಎಂದೂ ಮುಗಿಯದ ಹೊರೆಯನ್ನು ಪ್ರತಿರೋಧ ವ್ಯಕ್ತಪಡಿಸದೆ ನಿಭಾಯಿಸಬೇಕಾಗುತ್ತದೆ.

ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭವೆನ್ನುವ ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಯಲ್ಲಿ 'ವಿವಾಹ' ಪುರುಷರಿಗೆ ಲಾಭದಾಯಕವಾಗುವ ಒಂದು ವಾಣಿಜ್ಯ ವ್ಯವಹಾರ ಹಾಗೂ ಒಪ್ಪಂದವಾಗಿ ಮಾರ್ಪಟ್ಟಿರುವುದು ಸ್ಪಷ್ಟವಾಗುತ್ತದೆ. ಬಂಡವಾಳಶಾಹಿ 'ಮದುವೆ' ಮಾರುಕಟ್ಟೆ 'ವರದಕ್ಷಿಣೆ'ಯ ಪದ್ಧತಿಯನ್ನು ಸಾರ್ವತ್ರಿಕ ಆಯಾಮಕ್ಕೆ ಕೊಂಡೊಯ್ಯುವ ಮೂಲಕ ದುಬಾರಿಯಾಗಿ ರೂಪಾಂತರಗೊಂಡಿದೆ. ಉದಾರವಾದಿ ಸಾಂಸ್ಕೃತಿಕ ನೆಲೆಯಲ್ಲಿ ಮೇಲುಜಾತಿಗಳಲ್ಲಿ ವಿದ್ಯಾವಂತ ಸರಕಾರಿ ಉದ್ಯೋಗದ ಯುವಕರು ಮಾತ್ರ ಪಡೆದುಕೊಳ್ಳುತ್ತಿದ್ದ 'ವರದಕ್ಷಿಣೆ' ಸ್ಥಿತ್ಯಂತರ ಸಾಂಸ್ಕೃತಿಕ ಸನ್ನಿವೇಶದಲ್ಲಿ ಎಲ್ಲ ಜಾತಿಯೊಳಗೂ, ಎಲ್ಲ ಸಮಾಜಗಳಲ್ಲೂ ಹೆಚ್ಚು ಕಡಿಮೆ ಜಾರಿಗೊಂಡಿದೆ. ವರದಕ್ಷಿಣೆಯು ಬಂಡವಾಳಶಾಹಿ ಆರ್ಥಿಕತೆಯು ಅದರ ಅನುಕೂಲಕ್ಕಾಗಿ ಪೋಷಿಸುತ್ತಿರುವ ಊಳಿಗಮಾನ್ಯ ವ್ಯವಸ್ಥೆಯ ಒಳಗೆ ಅತಿಶಕ್ತವಾಗಿ ರೂಢಿಗತಗೊಂಡಿದೆ. ಇದರೊಳಗೆ ಸ್ತ್ರೀಯರನ್ನು ಅತ್ಯಂತ ಕೀಳಾಗಿ ನಡೆಸಿಕೊಳ್ಳುತ್ತಿದ್ದು, ವರದಕ್ಷಿಣೆ ಪದ್ಧತಿಗೆ ಅದು ನೇರವಾಗಿ ಪ್ರಚೋದನೆ ನೀಡುತ್ತದೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಮಹಿಳಾ ಕಾರ್ಮಿಕತೆ ಹಲವಾರು ಕಾರಣಗಳಿಂದಾಗಿ ಶಕ್ತವಾಗಿ ಬೆಳವಣಿಗೆ ಸಾಧಿಸುತ್ತಿದೆ. ಇದಕ್ಕೆ ಕಾರಣಗಳನ್ನು ಕೆಳಗಿನಂತೆ ಗುರುತಿಸಬಹುದು.

೧) ಬಂಡವಾಳಶಾಹಿ ವ್ಯವಸ್ಥೆ ಹುಟ್ಟು ಹಾಕಿದ ಮಧ್ಯಮ ವರ್ಗದ ಕುಟುಂಬಗಳ ಆರ್ಥಿಕ ಅಗತ್ಯಗಳಿಗಾಗಿ.

೨) ಸ್ತ್ರೀಯರು ಅವರ ಸ್ವಂತ ದುಡಿಮೆಯ ವರಮಾನದಿಂದ ಕುಟುಂಬದಲ್ಲಿ ಒಂದು ಸ್ಥಾನ ಪಡೆಯಬಹುದು ಎನ್ನುವುದಕ್ಕಾಗಿ.

೩) ಮದುವೆ ಮಾರುಕಟ್ಟೆಯಲ್ಲಿ ಹೆಚ್ಚಿನ ಮೌಲ್ಯಗಳಿಸಿಕೊಳ್ಳುವ ಸಲುವಾಗಿ.

೪) ಸ್ತ್ರೀಯರು 'ತಮ್ಮ ಕಾಲ ಮೇಲೆ ತಾವು ನಿಲ್ಲಬೇಕು' ಎನ್ನುವ ಆರ್ಥಿಕ ಸ್ವಾವಲಂಬನೆಗಾಗಿ.

ಸ್ತ್ರೀಯರ ನೆಲೆಯಿಂದ ಅನಿವಾರ್ಯವಾಗುವ ಈ ಎಲ್ಲ ಕಾರಣಗಳನ್ನು ಬಂಡವಾಳಶಾಹಿ ವ್ಯವಸ್ಥೆ ಅತಿ ಶಕ್ತವಾಗಿ ನಗದೀಕರಣಗೊಳಿಸಿದೆ. ಇದರಲ್ಲಿ,

> "ಮಹಿಳೆಯರು ಎರಡು ರೀತಿಯ ಉತ್ಪಾದಕರಾಗಿರುತ್ತಾರೆ. ಒಂದು ತಾವು ಬಳಸುವ ಆರ್ಥಿಕ ವಸ್ತುಗಳ ಬಳಕೆದಾರರಾಗಿರುವುದಷ್ಟೇ ಅಲ್ಲದೆ, ಭವಿಷ್ಯದ ಶ್ರಮ ಶಕ್ತಿಯ ಉತ್ಪಾದಕರೂ ಆಗಿರುತ್ತಾರೆ. ಆದ್ದರಿಂದ ಭವಿಷ್ಯದ ಶ್ರಮಶಕ್ತಿಯನ್ನು ಉತ್ಪಾದಿಸುವ ಮಹಿಳೆಯರ

ಕ್ರಿಯಾಶಕ್ತಿಗೆ ಗುಣಾತ್ಮಕವಾದ ಬೆಲೆ ಕೊಡಲೇ ಬೇಕಾಗುತ್ತದೆ. ಆದರೆ ವಾಸ್ತವದಲ್ಲಿ ಈ ಕ್ರಿಯಾಶಕ್ತಿಗೆ ಕಿಂಚಿತ್ತೂ ಬೆಲೆಯಿಲ್ಲವೆಂಬುದನ್ನು ಯಾರಾದರೂ ಕಾಣಬಹುದಾಗಿದೆ. 'ಮಾತೃತ್ವವು ಪವಿತ್ರವಾದದ್ದು ಮತ್ತು ಸ್ತ್ರೀಯ ಸಾರ್ಥಕತೆಯಿರುವುದು ಮಾತೃತ್ವದಲ್ಲೇ' ಎನ್ನುವುದು ನಮ್ಮ ಸಂಸ್ಕೃತಿಯ ಪರಮ ಮೌಲ್ಯವಾದರೂ ವಾಸ್ತವದಲ್ಲಿ ದುಡಿಯುವ ಮಾತೆಯರ ಬಗ್ಗೆ ಮತ್ತು ಅವರ ಅಗತ್ಯಗಳ ಬಗ್ಗೆ ಅಂಥ ಗೌರವವಿಲ್ಲ. ಸರಿಯಾದ ಕ್ರೆಷ್ ವ್ಯವಸ್ಥೆ ಇಲ್ಲದಿದ್ದರೆ ದುಡಿಯುವ ಮಹಿಳೆಯರು ನೆಮ್ಮದಿಯಿಂದ ಕೆಲಸ ಮಾಡುವುದು ಕಷ್ಟವಾಗುತ್ತದೆ. ಹೆರಿಗೆ ರಜೆ, ಹೆರಿಗೆ ಭತ್ಯೆಯನ್ನು ಸಂಘಟಿತ ಮಹಿಳೆಯರು ಪಡೆಯುವರಾದರೂ, ಅಸಂಘಟಿತ ಕಾರ್ಯಕ್ಷೇತ್ರಗಳಲ್ಲಿ ಈ ಸೌಲಭ್ಯಗಳನ್ನು ದುಡಿಯುವ ಹೆಂಗಸರು ಪಡೆಯುವುದೇ ಇಲ್ಲ. ಔಷಧಿ ತಯಾರಿಕೆಯ ಕಂಪೆನಿಗಳಲ್ಲಿ ದುಡಿಯುವ ಮಹಿಳೆಯರು ತಮ್ಮ ವಿವಾಹದ ಆಹ್ವಾನ ಪತ್ರದೊಂದಿಗೆ ರಾಜೀನಾಮೆ ಪತ್ರವನ್ನೂ ಕೊಡಬೇಕಾಗುತ್ತದೆ. ಗಗನ ಸಖಿಯರು ಹಾಗೂ ಸಿವಿಲ್ ಸರ್ವೀಸ್ ಹುದ್ದೆಯಲ್ಲಿರುವವರಿಗೆ ಮದುವೆ, ತಾಯ್ತನಗಳು ದುಬಾರಿ ಅಥವಾ ಕೆಲವೊಮ್ಮೆ ಆತಂಕಕಾರಿ ಸಂಗತಿಗಳಾಗುತ್ತವೆ. ಕೆಲವು ಖಾಸಗಿ ಕಂಪೆನಿಗಳಲ್ಲಂತೂ ಹೆರಿಗೆ ಸೌಕರ್ಯಗಳನ್ನು ನೀಡಬೇಕೆಂಬ ಕಾರಣಕ್ಕಾಗಿಯೇ ಮಹಿಳೆಯರನ್ನು ಕೆಲಸದಿಂದ ತೆಗೆದುಹಾಕುವ ಪದ್ಧತಿ ಇದೆ. ೧೯೬೦ರಲ್ಲಿ ಕಲ್ಲಿದ್ದಲು ಮತ್ತು ಗಣಿಗಳಲ್ಲಿ ದುಡಿಯುವ ಮಹಿಳೆಯರ ಸ್ಥಿತಿಗತಿಗಳ ಬಗೆಗೆ ನಡೆಸಿದ ಸಮೀಕ್ಷೆಯ ವರದಿಯು 'ದುಡಿಯುವ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡುವ ಮಾಲೀಕರ ಧೋರಣೆಗೆ ಮುಖ್ಯ ಕಾರಣ ಮಹಿಳೆಯರಿಗೆ ಹೆರಿಗೆ ಸೌಕರ್ಯಗಳನ್ನು ಮತ್ತು ಕ್ರೆಷ್ ವ್ಯವಸ್ಥೆಯನ್ನು ನೀಡಬೇಕೆಂಬುದೇ ಆಗಿದೆ' ಎಂದಿದೆ." (ಗಾಯತ್ರಿ ಎನ್: ೧೯೯೬; ೧೩೪,೧೩೫)

ಬಂಡವಾಳಶಾಹಿ ಆರ್ಥಿಕತೆ ಮತ್ತು ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಗಳೆರಡೂ ಸಹ ಸ್ತ್ರೀಯರ ಪುನರುತ್ಪತ್ತಿ ಮತ್ತು ದೈಹಿಕತೆಯ ಮೇಲೆ ಹಿಡಿತವನ್ನು ಇಟ್ಟುಕೊಳ್ಳಬಯಸುತ್ತವೆ. ಸ್ತ್ರೀಯರಿಗೆ, ಅವರ 'ಫಲಶಕ್ತಿ'ಯೂ ಸೇರಿದಂತೆ ಅವರ ದೇಹದ ಮೇಲಿನ ಯಾವುದೇ ರೀತಿಯ ಹಕ್ಕುಗಳನ್ನು ನಿರಾಕರಿಸಲಾಗಿದೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಶಿಶು ಜನನವನ್ನು ತಡೆಯಲು ಹಲವಾರು ಗರ್ಭ ನಿರೋಧಕಗಳನ್ನು ಬಿಡುಗಡೆ ಮಾಡಲಾಗಿದ್ದು, ಇದು ಉತ್ತಮ ಮತ್ತು ವಿನಾಶಕಾರಿ ಪರಿಣಾಮಗಳಿಗೆ ಕಾರಣವಾಗಿದೆ. ಗರ್ಭಪಾತದ ಸಂದರ್ಭಗಳಲ್ಲಿ ಸ್ತ್ರೀಯರ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಯಾವುದೇ ರೀತಿಯ ಲಕ್ಷ್ಯ, ಬೆಲೆ ಇರುವುದಿಲ್ಲ. ಇದಕ್ಕೆ ಬಂಡವಾಳಶಾಹಿ ಪುರುಷಾಧಿಪತ್ಯ ವ್ಯವಸ್ಥೆಯೇ ಕಾರಣವಾಗಿದೆ. ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಯು ಸ್ತ್ರೀಯರ ದೇಹ, ಮನಸ್ಸು, ಭಾವನೆ ಕೊನೆಗೆ ಕನಸುಗಳನ್ನೂ ಕೂಡ ಅದರ ಪ್ರಧಾನ ಅಗತ್ಯಗಳಿಗೆ ಪೂರಕವಾಗಿ ರೂಪಿಸುವುದನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಬರವಣಿಗೆಗಳು ಬಯಲುಗೊಳಿಸುತ್ತವೆ.

ಬಂಡವಾಳಶಾಹಿ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯು ಸ್ತ್ರೀಯರ ಬದುಕಿನ ಗುರಿಗಳೇನಿರಬೇಕೆಂಬುದನ್ನು ಪುರುಷರ ಹಿತಾಸಕ್ತಿಗೆ ತಕ್ಕಂತೆ ರೂಪಿಸುತ್ತದೆ. ಈ ಗುರಿಗಳು ಸಂಕುಚಿತವೂ,

ಸೀಮಿತವೂ ಆಗಿರುತ್ತವೆ. ಹಾಗೂ ಬೇರೆ ಬೇರೆ ಸ್ತ್ರೀಯರ ನಡುವೆ ಅವರವರ ಸಾಮಾಜಿಕ, ಆರ್ಥಿಕ ಹಿನ್ನೆಲೆಗೆ ಅನುಗುಣವಾಗಿ ಪ್ರಮಾಣಬದ್ಧವಾಗಿ ಬೇರೆಬೇರೆಯಾಗಿರುತ್ತವೆ. ಅದೇನೇ ಇದ್ದರೂ ಪಿತೃ ಪ್ರಧಾನ ವ್ಯವಸ್ಥೆಯೊಳಗೆ ಕುಟುಂಬದಲ್ಲಿ ಎಲ್ಲಾ ಸ್ತ್ರೀಯರಿಗೂ ವಿವಾಹವೇ ಕಡ್ಡಾಯವಾದ ಕೇಂದ್ರ ವಿಷಯವಾಗಿರುತ್ತದೆ. ಇದರಿಂದಾಗಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಬರೆವಣಿಗೆಯಲ್ಲಿ ತೊಡಗಿರುವ ಎಲ್ಲಾ ಮಹಿಳೆಯರ ಕಾದಂಬರಿ ಬರಹಗಳು ಕುಟುಂಬ, ವಿವಾಹದ ಚೌಕಟ್ಟನ್ನು ಸಿದ್ಧ ಮಾದರಿಗಳೆಂಬಂತೆ ಪರಿಭಾವಿಸುವುದು ವ್ಯಕ್ತವಾಗುತ್ತದೆ. ಅವು ವಿವಾಹ- ಕುಟುಂಬದ ಪಲ್ಲಟಗಳನ್ನು ಬಿಂಬಿಸುವ ಮೂಲಕವಾಗಿ ಒಟ್ಟು ಇಂಡಿಯಾದ ಸ್ತ್ರೀಯರ ಬದುಕನ್ನು ವಿಶ್ಲೇಷಿಸುವ ರಚನೆಗಳಾಗಿವೆ.

**೪.೧.೬ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ : ಸ್ತ್ರೀಯರ ವಿಮೋಚನೆಯ ಆಯಾಮ.**

ಪಾಶ್ಚಾತ್ಯ ಮತ್ತು ಇಂಡಿಯಾದ ಸ್ತ್ರೀಯರ ಜೀವನದಲ್ಲಿ ಬದಲಾವಣೆಗಳು, ಮಹತ್ವದ ಪಲ್ಲಟಗಳು ಘಟಿಸಿದ್ದರೆ, ಅದು ಹೋರಾಟದ ಮೂಲಕವಾಗಿ ಮಾತ್ರ ಎನ್ನುವ ಸತ್ಯವನ್ನು ಚರಿತ್ರೆ ನಿರೂಪಿಸಿದೆ. ಇಂಡಿಯಾದ ವಿದ್ಯಾವಂತ ಸ್ತ್ರೀಯರಿಗೆ ಜಾಗತಿಕ ಸಂದರ್ಭ ಮೂಲದಿಂದಲೇ ಅವರ ಬದುಕಿನ ವಸ್ತು ಸ್ಥಿತಿ ಅರಿವಿಗೆ ಬಂದಿದೆ. 'ಸ್ತ್ರೀವಾದ' ಎನ್ನುವ ಸ್ತ್ರೀಯರಿಂದ, ಸ್ತ್ರೀಯರಿಗಾಗಿಯೇ ರೂಪಿತಕೊಂಡ ರಾಜಕೀಯ ನಿಲುವು ಜಾಗತಿಕ ಮಟ್ಟದಲ್ಲಿ ಅವರ ಸಾಮಾಜಿಕ ಕೌಟುಂಬಿಕ ಜೀವನದ ಪರಿವರ್ತನೆಗೆ ಕಾರಣವಾಗಿದೆ. ಸ್ತ್ರೀಯರ ವಿಮೋಚನೆಯ ಕುರಿತು ಮಹಿಳಾ ಜಾಗೃತಿಯ 'ದೃಷ್ಟಿಕೋನ'ವನ್ನು ಹೊಂದಿರುವವರು ಸಂಘಟಿತರಾಗುವ ತುರ್ತನ್ನು ಅದರ ಚಾರಿತ್ರಿಕ ಪಾತಳಿಯಲ್ಲಿ ಎದುರು ನಿಲ್ಲಿಸಿದೆ. ಇಂಡಿಯಾದ ಸಂದರ್ಭದಲ್ಲಿ ಇಂತಹ ಸ್ತ್ರೀಪರ ನಿಲುವು ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭದಲ್ಲಿ ಮೂಲಭೂತ ಹೋರಾಟದ ನೆಲೆಯಿಂದಲೇ ಕಾಣಿಸಿಕೊಂಡಿದೆ. ಲಿಂಗಾಧಾರಿತ ದಮನ, ವರ್ಗಶೋಷಣೆ, ಜಾತಿ ದೌರ್ಜನ್ಯ, ಕೋಮುವಾದವನ್ನು 'ಮಹಿಳಾ ಜಾಗೃತಿ'ಯ ಸಂಘಟನೆಗಳು ಪ್ರಬಲವಾಗಿ ವಿರೋಧಿಸುತ್ತವೆ. * ಇವು ಬಂಡವಾಳಶಾಹಿ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಅಸ್ತಿತ್ವದಲ್ಲಿರುವ ಸಾಮಾಜಿಕ-ಆರ್ಥಿಕ ರಚನೆಯ ಮೂಲಭೂತ ಬದಲಾವಣೆಗಳಿಗಾಗಿ ಹೋರಾಡುವ ಹಾಗೂ ಸ್ತ್ರೀ ಮತ್ತು ಪುರುಷರ ನಡುವೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಾನತೆ ಇರುವಂಥ ಅರ್ಥಪೂರ್ಣ ಪ್ರಜಾತಾಂತ್ರಿಕ ಸಮಾಜವನ್ನು ನಿರ್ಮಿಸುವ ಉದ್ದೇಶವನ್ನು ಹೊಂದಿರುವ ಸಂಘಟನೆಗಳಾಗಿವೆ. ವಿವಾಹ ಮತ್ತು ಕುಟುಂಬ ವ್ಯವಸ್ಥೆಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಕ್ರಿಯಾಶೀಲವಾಗಿರುವ ಸ್ತ್ರೀಪರ ಸಂಘಟನೆಗಳ ಪ್ರಧಾನ ಉದ್ದೇಶಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧) ಬಾಲ್ಯವಿವಾಹ, ಹಿರಿಯರು ನಿರ್ಧರಿಸುವ ಸಾಂಪ್ರದಾಯಿಕ ಹಾಗೂ ಅದ್ದೂರಿ ವಿವಾಹಗಳ ವಿರುದ್ಧ ಹಾಗೂ ವರದಕ್ಷಿಣೆ ಪದ್ಧತಿಯನ್ನು ನಿರ್ಮೂಲನಗೊಳಿಸಲು ಹೋರಾಡುವುದು. ಸ್ವತಂತ್ರ ಆಯ್ಕೆಯ ಮದುವೆ, ಸರಳವಿವಾಹ, ಅಂತರ್ಜಾತಿ ಹಾಗೂ ಅಂತರ್‌ಧರ್ಮದ ಮದುವೆಗಳನ್ನೂ, ವಿಧವಾ ಪುನರ್‌ವಿವಾಹಗಳನ್ನೂ ಪ್ರೋತ್ಸಾಹಿಸುವುದು.

೨) ಸ್ತ್ರೀ ಭ್ರೂಣಹತ್ಯೆ, ಹೆಣ್ಣು ಶಿಶುಹತ್ಯೆ, ಮಹಿಳಾ ವಿರೋಧಿ ಗರ್ಭನಿರೋಧಕ ಕ್ರಮಗಳು ಹಾಗೂ ಸರ್ಕಾರದ ಮಹಿಳಾ ವಿರೋಧಿ ಜನಸಂಖ್ಯಾ ನಿಯಂತ್ರಣ ನೀತಿಯ ವಿರುದ್ಧ ಪ್ರಚಾರ ನಡೆಸುವುದು ಮತ್ತು

ಹೋರಾಡುವುದು. ಮಹಿಳೆಯರನ್ನು ಬಾಧಿಸುವ ಮೂಲಭೂತ ಆರೋಗ್ಯ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸುವುದು. ಹಾಗೂ ಅವರ ಆರೋಗ್ಯಕ್ಕೆ ಹಾನಿಕಾರಕವಲ್ಲದ ಪರ್ಯಾಯ ಆರೋಗ್ಯ ರಕ್ಷಣಾ ಕ್ರಮಗಳನ್ನು ಸೂಚಿಸುವುದು.

೩) ಮನೆಗೆಲಸವನ್ನು ಸಾಮಾಜೀಕರಣಗೊಳಿಸಲು ಹೋರಾಡುವುದು. ಸಾಮಾಜಿಕ ಉತ್ಪಾದನೆಯ ಎಲ್ಲಾ ಕ್ಷೇತ್ರಗಳಲ್ಲಿ ಸ್ತ್ರೀಯರ ಸಂಪೂರ್ಣ ಸಹಭಾಗಿತ್ವವನ್ನು ಸಾಧ್ಯಗೊಳಿಸುವುದು.

೪) ಪುರುಷಾಧಿಪತ್ಯದ ಎಲ್ಲಾ ಹಿಂಸೆ, ದಮನ ಹಾಗೂ ಶೋಷಣೆಯ ವಿರುದ್ಧ ಹೋರಾಡುವುದು. ವರದಕ್ಷಿಣೆ, ಕೊಲೆಗಳು, ಅತ್ಯಾಚಾರ ಮುಂತಾಗಿ ಸ್ತ್ರೀಯರ ಮೇಲಿನ ದೌರ್ಜನ್ಯಗಳ ವಿರುದ್ಧ ಸಕ್ರಿಯ ಪ್ರಚಾರದಲ್ಲಿ ತೊಡಗುವುದು. ವಿಸ್ತೃತ ಹೋರಾಟ ಹಮ್ಮಿಕೊಳ್ಳುವುದು ಹಾಗೂ ಅಪರಾಧಿಗಳ ವಿರುದ್ಧ ಕಟ್ಟುನಿಟ್ಟಿನ ಕ್ರಮ ಜರುಗಿಸುವಂತೆ ಸರಕಾರಕ್ಕೆ ಒತ್ತಡ ತರುವುದು.

೫) ಸ್ತ್ರೀಯರಿಗೆ ಸಂಬಂಧಿಸಿದಂತೆ ಸಮಾನ ಕೆಲಸಕ್ಕೆ ಸಮಾನ ವೇತನಕ್ಕಾಗಿ ಹಾಗೂ ಸ್ತ್ರೀ ಕಾರ್ಮಿಕರಿಗೆ ಬೋನಸ್, ವಸತಿ, ವೈದ್ಯಕೀಯ ಸೌಲಭ್ಯ, ಬಡ್ಡಿರಹಿತ ಸಾಲ, ಪಿಂಚಣಿ ಮುಂತಾದವುಗಳಿಗಾಗಿ ಹೋರಾಡುವುದು. ಕುಡಿಯುವ ನೀರು, ಶೌಚಾಲಯ, ಊಟದ ಕೊಠಡಿ ಮುಂತಾದ ಮೂಲಭೂತ ಸೌಲಭ್ಯಗಳಿಗಾಗಿ ಎಲ್ಲಾ ಮಹಿಳಾ ಕಾರ್ಮಿಕರ ಕೆಲಸದ ಪರಿಸ್ಥಿತಿಯ ಸುಧಾರಣೆಗಾಗಿ ಹಾಗೂ ಕೆಲಸದ ಭದ್ರತೆಗಾಗಿ ಒತ್ತಾಯಿಸುವುದು. ವೇತನ ಸಹಿತ ಹೆರಿಗೆ ರಜೆ ಮತ್ತು ಕ್ರೆಷ್‌ಗಾಗಿ ಒತ್ತಾಯಿಸುವುದು. ಮಹಿಳೆಯರಿಗೆ ಶೇ ೫೦ ಮೀಸಲಾತಿಗಾಗಿ ಸರಕಾರಕ್ಕೆ ಒತ್ತಾಯಿಸುವುದು.

೬) ಸಮಾಜದಲ್ಲಿ ಒಂದೆಡೆ ಸ್ತ್ರೀಯರನ್ನು ಒಂದು ಲೈಂಗಿಕ ವಸ್ತುವಿನಂತೆ ಕೀಳಾಗಿಯೂ, ಅಗೌರವವಾಗಿಯೂ ಚಿತ್ರಿಸುವುದರ ವಿರುದ್ಧ ಮತ್ತು ಸ್ತ್ರೀಯರನ್ನು ವ್ಯಾಪಾರೀಕರಿಸುವ ಸಾಮ್ರಾಜ್ಯಶಾಹಿ ಸಂಸ್ಕೃತಿಯ ವಿರುದ್ಧ ಮತ್ತೊಂದು ಕಡೆ ಸ್ತ್ರೀಯರ ಮೇಲಿನ ದಮನವನ್ನು ಸಮರ್ಥಿಸುವ ಊಳಿಗಮಾನ್ಯ ಸಂಸ್ಕೃತಿಯನ್ನು ವೈಭವೀಕರಿಸುವುದರ ವಿರುದ್ಧವೂ ಪ್ರಚಾರ ಮತ್ತು ಹೋರಾಟ ನಡೆಸುವುದು.

೭) ಕಾನೂನು ಮತ್ತು ಆಚರಣೆಯ ರೂಢಿಗಳಲ್ಲಿ ಪಿತ್ರಾರ್ಜಿತ ಅಥವಾ ಸ್ವಯಾರ್ಜಿತವಾದ ಎಲ್ಲಾ ಆಸ್ತಿಗಳಲ್ಲಿ ಸ್ತ್ರೀಯರಿಗೆ ಸಮಪಾಲು ಸಿಗಬೇಕೆಂದು ಹೋರಾಡುವುದು.

೮) ಸ್ತ್ರೀಯರಿಗೆ ಉಚಿತ ಹಾಗೂ ಕಡ್ಡಾಯ ಶಿಕ್ಷಣ ನೀಡಬೇಕೆಂದು ಒತ್ತಾಯಿಸುವುದು. ಶಿಕ್ಷಣದಲ್ಲಿ ಸ್ತ್ರೀಯರಿಗೆ ಶೇ೫೦ರಷ್ಟು ಮೀಸಲಾತಿಗಾಗಿ ಹೋರಾಡುವುದು. ಶಿಕ್ಷಣದಲ್ಲಿನ ಲೈಂಗಿಕ ಪೂರ್ವಾಗ್ರಹದ ವಿರುದ್ಧ ಹೋರಾಡುವುದು. ಮಹಿಳೆಯರ ದಮನ ಮತ್ತು ಶೋಷಣೆಗೆ ಸಂಬಂಧಿಸಿದಂತೆ ಹಾಗೂ ಸಂಘಟಿತ ಶಕ್ತಿಯಾಗಿ ಅವುಗಳನ್ನು ಎದುರಿಸಬೇಕಾಗಿರುವ ಅಗತ್ಯದ ಬಗ್ಗೆ ಪರ್ಯಾಯ ಶಿಕ್ಷಣದ ಆಂದೋಲನ ನಡೆಸುವುದು.

೯) ಸ್ತ್ರೀ ವಿರೋಧಿ ಕಾನೂನುಗಳ ನಿರ್ಮೂಲನೆಗಾಗಿ ಹೋರಾಡುವುದು ಹಾಗೂ ಸರಕಾರಕ್ಕೆ ಸ್ತ್ರೀಯರಿಗೆ ಉಪಯೋಗವಾಗುವಂತಹ ಕಾನೂನುಗಳ ಜಾರಿಗಾಗಿ ಒತ್ತಾಯಿಸುವುದು.

೧೦) ಸರಕಾರ ಘೋಷಿಸಿರುವ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಯೋಜನೆಗಳ ಜಾರಿಗಾಗಿ ಒತ್ತಾಯಿಸುವುದು.

ಹೀಗೆ ಕೆಲವು ನಿರ್ದಿಷ್ಟ ಸುಧಾರಣೆಗಳನ್ನು ತರುವುದರ ಮೂಲಕ ಸ್ತ್ರೀಯರ ಸ್ಥಿತಿಗತಿಗಳನ್ನು ಅಭಿವೃದ್ಧಿಪಡಿಸಲು ಹೋರಾಡುವ ಸಂಘಟನೆಗಳನ್ನು ಸುಧಾರಣಾವಾದಿ ಸಂಘಟನೆಗಳೆನ್ನಲಾಗುತ್ತದೆ. ಮಹಿಳಾ ಚಳುವಳಿಗಳು ಹುಟ್ಟಿಕೊಳ್ಳುತ್ತಿದ್ದ ಆರಂಭಿಕ ಹಂತದಲ್ಲಿ ಇವು ಮಹಿಳೆಯರಿಗೆ ಸಂಬಂಧಿಸಿದ ಮುಖ್ಯ ವಿಷಯಗಳನ್ನು ಬೆಳಕಿಗೆ ತರುವಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸಿದವು. ಇವು ತಾವೇ ಹಣವನ್ನು ರೂಢಿಸಿಕೊಳ್ಳುವ, ನಗರವಾಸಿಗಳಾದ ಸಣ್ಣ ಸಣ್ಣ ಗುಂಪುಗಳೆನ್ನಬಹುದು. ಇವುಗಳ ಸದಸ್ಯರು ಸಾಮಾನ್ಯವಾಗಿ ಮೇಲ್ಮಧ್ಯಮ ಮತ್ತು ಮಧ್ಯಮ ವರ್ಗದ ಮಹಿಳೆಯರಾಗಿದ್ದು, ಇವರು ವರದಕ್ಷಿಣೆ ಸಾವು, ಅತ್ಯಾಚಾರದಂತಹ ವಿಷಯಗಳನ್ನು ಸಭೆ-ಪ್ರತಿಭಟನಾ ಪ್ರದರ್ಶನಗಳ ಮೂಲಕ ಸಾರ್ವಜನಿಕರ ಗಮನಕ್ಕೆ ತರುತ್ತಾರೆ. ಇವರು ಪುರುಷ ನಿಷ್ಠ ದಮನ ದಬ್ಬಾಳಿಕೆಗೆ ಹೆಚ್ಚಿನ ಪ್ರಾಮುಖ್ಯ ನೀಡಿದರೂ ಸಹ ಇದನ್ನು ಉತ್ಪಾದನಾ ವಿಧಾನದಿಂದ ಅಥವಾ ವರ್ಗ ಸಮಾಜದಿಂದ ಹೊರತು ಪಡಿಸಿದ ಸ್ವತಂತ್ರ ವಿಚಾರ ಎಂದು ಪರಿಗಣಿಸುತ್ತಾರೆ. ಹೀಗಾಗಿ ಅವರು ಪುರುಷಾಧಿಪತ್ಯದ ಮುಂದುವರಿಕೆಗೆ ಕಾರಣವಾದ ಶೋಷಕ, ಸಾಮಾಜಿಕ- ಆರ್ಥಿಕ ರಚನೆಯನ್ನು ಬದಲಾಯಿಸುವ ಬಗ್ಗೆ ಯೋಚಿಸುವುದೇ ಇಲ್ಲ. ಇದೇ ಅವರ ಪ್ರಮುಖ ದೌರ್ಬಲ್ಯವಾಗಿದೆ. ಹಾಗಿದ್ದರೂ, ಪುರುಷಾಧಿಕಾರದ ವಿರುದ್ಧ ಹೋರಾಡುವ ಅವರ ಬಹುಮುಖ್ಯ ಗುರಿಯಿಂದಾಗಿ ಊಳಿಗಮಾನ್ಯ ಮತ್ತು ಸಾಮ್ರಾಜ್ಯಶಾಹಿ ಶೋಷಣಾ ವ್ಯವಸ್ಥೆಯನ್ನು ಪ್ರತಿರೋಧಿಸುವಲ್ಲಿ ಮಹಿಳಾ ಸಂಘಟನೆಗಳಿಗೆ ಎಷ್ಟೇ ಮಿತಿಗಳಿದ್ದರೂ ಕೂಡ, ಒಂದು ಪ್ರಗತಿಪರ ಪಾತ್ರವಿದ್ದೇ ಇದೆ ಎಂಬುದು ಹೆಚ್ಚು ಮಹತ್ವವನ್ನು ಬೀರುವ ಅಂಶವಾಗಿದೆ.

ಅಲ್ಲದೆ, ಮುಖ್ಯವಾಗುವ ಮತ್ತೊಂದು ಪ್ರಮುಖ ಅಂಶವೆಂದರೆ, ಮಹಿಳಾ ಸಂಘಟನೆಗಳು ಪುರುಷಾಧಿಕಾರ ಮತ್ತದರ ಬೆನ್ನೆಲುಬಾಗಿರುವ ಆಳುವ ವರ್ಗದ ಊಳಿಗಮಾನ್ಯ ವ್ಯವಸ್ಥೆ, ದಲ್ಲಾಳಿ ಬಂಡವಾಳಶಾಹಿಗಳು ಮತ್ತು ಸಾಮ್ರಾಜ್ಯಶಾಹಿಗಳ ವಿರುದ್ಧ ನಿರಂತರ ಪ್ರಚಾರ ಮತ್ತು ಹೋರಾಟ ನಡೆಸುತ್ತವೆ. ವರ್ಗಾಧಿಕಾರದ ಅಗತ್ಯಕ್ಕೆ ತಕ್ಕಂತೆ ರೂಪಿಸಲಾಗಿರುವ ಪುರುಷಾಧಿಕಾರದ ಕೌಟುಂಬಿಕ ಸಂಬಂಧಗಳನ್ನು ವಿರೋಧಿಸುತ್ತವೆ. ಅವು ಕುಟುಂಬದೊಳಗಿನ ಹಿಂಸೆಯ ರಾಜಕೀಯ ಸ್ವಭಾವವನ್ನು ವಿಶ್ಲೇಷಿಸಿ, ಅದರ ವಿರುದ್ಧ ಹೋರಾಡುತ್ತವೆ ಮತ್ತು ಅದನ್ನು ಒಂದು ಸಾಮಾಜಿಕ ವಿಷಯವನ್ನಾಗಿಸುತ್ತವೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ನಿರ್ಮಿತಿಗೊಂಡಿರುವ ಮಹಿಳೆಯರ ಕಾದಂಬರಿಗಳಲ್ಲಿ ಆಗಿನ ವರ್ತಮಾನದ ಕೌಟುಂಬಿಕ, ಸಾಮಾಜಿಕ ಸ್ಥಾನಮಾನಗಳನ್ನು ಸ್ತ್ರೀ-ಪುರುಷರಿಬ್ಬರನ್ನು ಒಳಗೊಂಡಂತೆ ವಿಶ್ಲೇಷಣೆ ನಡೆಸಿರುವುದು ಪ್ರಕಟವಾಗುತ್ತದೆ. ವಿವಾಹ ಮತ್ತು ಕುಟುಂಬದ ಸ್ವರೂಪಕ್ಕೆ ಸಂಬಂಧಿಸಿದಂತೆ ಮೊದಲ ಕಟ್ಟಿನ ಕಾದಂಬರಿಗಳೆಂದು ಸಾರಾ ಅಬೂಬಕ್ಕರ್ ಮತ್ತು ಗೀತಾನಾಗಭೂಷಣ ಅವರ ಕೃತಿಗಳನ್ನು ಗಮನಿಸಲಾಗಿದೆ. ಕೂಡು ಕಟ್ಟಿನ ಕಾದಂಬರಿಗಳು ಎಂದು ಅನುಪಮಾ ನಿರಂಜನ, ವೀಣಾಶಾಂತೇಶ್ವರ ಇವರ ಕೃತಿಗಳನ್ನು ಚರ್ಚಿಸಲಾಗಿದೆ. ಇದರಿಂದ ಒಟ್ಟಂದದಲ್ಲಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ. ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯನ್ನು ಅರ್ಥೈಸುವುದು ಸುಲಭವಾಗುತ್ತದೆ.

## ೪.೨. ಮೊದಲ ಕಟ್ಟಿನ ಕಾದಂಬರಿಗಳು

ಉದಾರವಾದಿ ಸಾಂಸ್ಕೃತಿಕ ನೆಲೆಯ ವ್ಯಾಪಕವಾದ ಶೈಕ್ಷಣಿಕ ಅವಕಾಶವನ್ನು ಆರಂಭದಲ್ಲಿ ಬಳಸಿಕೊಂಡವರೆಲ್ಲ ಸಮಾಜದ ಮೇಲುವರ್ಗದ ಜನ, ಸಾಹಿತ್ಯ ಕ್ಷೇತ್ರದಲ್ಲಿಯೂ ಮೇಲ್‌ವರ್ಗದ ಜನತೆಯ ಅಭಿವ್ಯಕ್ತಿಯೇ ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಂಡಿದೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಇದು ಪರಿವರ್ತನೀಯ ಪ್ರಗತಿಯನ್ನು ಪಡೆದಿದೆ. ಶೂದ್ರ ಮತ್ತು ದಲಿತ ವರ್ಗಕ್ಕೆ ಸೇರಿದ ಹಲವರು ಸಾಹಿತ್ಯ ರಚನೆಯ ಸಾಧನೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಸಾಧ್ಯವಾಗಿದೆ. ಬಿ.ಟಿ.ಲಲಿತಾ ನಾಯಕ್, ರೇಖಾ ಕಾಖಾಂಡಕಿ, ಗೀತಾ ನಾಗಭೂಷಣ ಪ್ರಮುಖ ದಲಿತ ಬರಹಗಾರರಾಗಿ ಕಾಣಿಸಿಕೊಂಡರೆ, ಸಾರಾ ಅಬೂಬಕ್ಕರ್, ಬಾನು ಮುಸ್ತಾಕ್, ಮುಮ್ತಾಜ್ ಅಲ್ಪ ಸಂಖ್ಯಾತ ಮುಸ್ಲಿಂ ಜನಾಂಗದ ಅಂಚಿಗೆ ಸರಿಸಲಾಗಿದ್ದ ಜಗತ್ತನ್ನು ಚಿತ್ರಿಸುವ ಪ್ರಯತ್ನ ನಡೆಸಿದರು. ಇವರಲ್ಲಿ ಮೊದಲ ಕಟ್ಟಿನ ಕಾದಂಬರಿಕಾರರಾಗಿ ಗೀತಾನಾಗಭೂಷಣ ಮತ್ತು ಸಾರಾ ಅಬೂಬಕ್ಕರ್ ಅವರ ಕೃತಿಗಳನ್ನು ಪ್ರತ್ಯ- ಪ್ರತ್ಯೇಕವಾಗಿ ಚರ್ಚಿಸುವ ಮೂಲಕ ಒಟ್ಟಂದದಲ್ಲಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ವಿವಾಹ ಮತ್ತು ಕುಟುಂಬದ ಸ್ವರೂಪವನ್ನು ಪರಿಕಲ್ಪಿಸಲಾಗಿದೆ.

ಮೊದಲ ಕಟ್ಟಿನ ಕಾದಂಬರಿಗಳೆಂದು ಗುರುತಿಸಿರುವ ಗೀತಾನಾಗಭೂಷಣ ಮತ್ತು ಸಾರಾ ಅಬೂಬಕ್ಕರ್ ಇವರ ಬರಹಗಳಲ್ಲಿ ಊಳಿಗಮಾನ್ಯ ವ್ಯವಸ್ಥೆ ಎದ್ದು ಕಾಣುತ್ತದೆ. ಪುರುಷ ಸಂರಚನೆಯ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಸ್ತ್ರೀಯರು ಸದಾ ದುಡಿಯುವ ಜೀತಗಾರರು ಅಲ್ಲದೆ ಹೆರುವ ಗುಲಾಮರು. ಸ್ತ್ರೀಯರ ಹಿನ್ನೆಲೆಯಿಂದ ವಿವಾಹ ಮತ್ತು ಕುಟುಂಬ ಜೀವನ ಸಾಮಾಜೀಕರಣಕ್ಕೆ ಒಳಗಾಗುವುದು ಊಳಿಗಮಾನ್ಯವು ಅವಿರತವಾದ ಪೋಷಿಸುವ ಜೀತಗಾರಿಕೆಯಲ್ಲಿ ಎನ್ನುವುದು ವಾಸ್ತವ. ಗೀತಾ ನಾಗಭೂಷಣ ಅವರ ಒಟ್ಟು ಕೃತಿಗಳಲ್ಲಿ **ನೀಲಗಂಗಾ** (೧೯೮೬), **ಆಸರೆ** (೧೯೮೮), **ಬದುಕು** (೨೦೦೧) ಈ ಕೃತಿಗಳನ್ನು ವಿವಾಹ ಮತ್ತು ಕುಟುಂಬದ ನಿರ್ವಚನಕ್ಕೆ ನೇರವಾಗಿ ಬಳಸಿಕೊಳ್ಳಲಾಗಿದೆ. **ಪ್ರೀತಿಸಿದ್ದು ನಿನ್ನನ್ನೇ** (೧೯೮೬), **ಬದಲಾಗುವ ಬಣ್ಣಗಳು** (೧೯೮೬), **ಹಸಿಮಾಂಸ ಮತ್ತು ಹದ್ದುಗಳು** (೧೯೯೦) ಇತ್ಯಾದಿ. ಕೃತಿಗಳನ್ನು ಓದಿ ಪುನರಾವರ್ತನೆಗೊಳ್ಳುವ ಅಂಶಗಳು ಪ್ರಧಾನವಾಗಿ ಇದ್ದುದರಿಂದ ಇವುಗಳನ್ನು ಕೈಬಿಡಲಾಗಿದೆ. ಸಾರಾ ಅಬುಬಕ್ಕರ್ ಅವರ **ಚಂದ್ರಗಿರಿಯ ತೀರದಲ್ಲಿ** (೧೯೮೪), **ಸಹನ** (೧೯೮೫), **ವಜ್ರಗಳು** (೧೯೮೮), **ಸುಳಿಯಲ್ಲಿ ಸಿಕ್ಕವರು**(೧೯೯೪), **ಪ್ರವಾಹ ಸುಳಿ**(೧೯೯೬) ಈ ಪಠ್ಯಗಳನ್ನು ಅಧ್ಯಯನದ ಪ್ರಧಾನ ಭೂಮಿಕೆಯಲ್ಲಿ ಚರ್ಚಿಸಲಾಗಿದೆ.

### ೪.೨.೧ ಮೊದಲ ಕಟ್ಟಿನ ಕಾದಂಬರಿಗಳು : ವಿವಾಹದ ಸ್ವರೂಪ.

**ಗೀತಾನಾಗಭೂಷಣ ಅವರ ಕಾದಂಬರಿಗಳಲ್ಲಿನ ವಿವಾಹದ ಸ್ವರೂಪ :**

ಬಡತನದ ಜೊತೆಗೆ ಬೆಸುಗೆ ಹಾಕಿದಂತಹ ಬದುಕನ್ನು ನಿರ್ವಹಿಸುತ್ತಿರುವ ಕೆಳವರ್ಗದ ಜನತೆಯ ಪ್ರತಿಬಿಂಬಗಳಾಗಿ ಗೀತಾನಾಗಭೂಷಣ ಅವರ **ನೀಲಗಂಗಾ** (೧೯೮೬) **ಆಸರೆ** (೧೯೮೮) **ಬದುಕು** (೨೦೦೧) ಕೃತಿಗಳು ಕಂಡುಬರುತ್ತವೆ. ಗೀತಾನಾಗಭೂಷಣ ಅವರು ಗ್ರಹಿಸುವ ಸಮಾಜದ ಸ್ಥಿತಿ ಶೋಚನೀಯವಾದದ್ದು. ಅಲ್ಲಿ ಸ್ತ್ರೀಯರ ಅಸ್ತಿತ್ವವು ಗೌರವವನ್ನು ಕಳೆದುಕೊಂಡಿದೆ. ಸ್ತ್ರೀಯರಿಗೆ

ಸಂಬಂಧಿಸಿದಂತೆ ಮಾನವೀಯತೆ ತಿರಸ್ಕೃತಗೊಂಡಿದೆ. ಇದಕ್ಕೆ ಗೀತಾ ನಾಗಭೂಷಣ ಕಂಡುಕೊಳ್ಳುವ ಕೌಟುಂಬಿಕ ನೆಲೆಯ ಕಾರಣಗಳೇನು ಮತ್ತು ಪರ್ಯಾಯ ಹಾದಿಗಳೇನು ಎಂಬುದು ಗಮನಾರ್ಹ. ಇದನ್ನು ಆಗುಮಾಡುವಲ್ಲಿ ಎದುರಿಸುವ ಸವಾಲುಗಳು ಕೃತಿಯೊಳಗೆ ಅನಿವಾರ್ಯ. ಆದ್ದರಿಂದ ಇವರು ಬಳಸುವ ಕೃತಿ ರಚನೆಯ ಭಾಷೆ ವ್ಯವಸ್ಥೆಯ 'ಪರಿಷ್ಕಾರ'ಕ್ಕೆ ಒಳಗಾಗದ ಶ್ರಮಿಕ ವರ್ಗದಿಂದ ಸೃಷ್ಟಿಯಾಗಿದೆ.

> "ನನ್ನ ಕಾದಂಬರಿಯ ವಸ್ತುಗಳೆಲ್ಲ ಇದೇ ಹಳ್ಳಿಯ ಕೆಳಗೇರಿಯ ಪಟ್ಟಣದ ಕೊಳಗೇರಿಯ ನಗರದ ಝೋಪಡಪಟ್ಟಿಯ ಮುಗ್ಧ-ಮುಖ್ರ ಹೆಂಗಸರ ನೂರಾರು ಸಮಸ್ಯೆಗಳೇ ಆದುವು. ನಾನು ಬರೆಯಬೇಕಾದದ್ದು ಇದು ಇಂಥದು ಅನ್ನುವ ನಿಚ್ಚಳ ಸತ್ಯ ನನ್ನ ಕಣ್ಣು ಮುಂದೆ ಬಂದು ನಿಂತಿತು. ಹಿಂದಿನ ಮನರಂಜನಾತ್ಮಕ ಕಾದಂಬರಿಗಳನ್ನು ಒಂದೆಡೆ ಸರಿಸಿ, ನಾನು ನನ್ನದೇ ಆದ ಹೊಸಹಾದಿಯನ್ನು ಹುಟ್ಟಿಸುವ ಹೆಜ್ಜೆಗಳನ್ನು ಎತ್ತಿಡಲಾರಂಭಿಸಿದೆ. ಗುಡಿಸಲಗೇರಿಯ ನನ್ನ ಹೆಂಗಸರ ಬದುಕನ್ನು ಅನಾವರಣಗೊಳಿಸತೊಡಗಿದೆ. ಅವರ ಹೋರಾಟ, ಸಂಘರ್ಷಗಳನ್ನು ಬಯಲಿಗೆ ಹರವತೊಡಗಿದೆ. ನನ್ನ ಜಿಲ್ಲೆಯ ಝೋಪಡಪಟ್ಟಿಯ ಹೆಂಗಸರ ಗೋಳನ್ನು ಕತೆಯಾಗಿಸುವಾಗ ನಾನು ಅವರದೇ ದಿನನಿತ್ಯದ ಆಡುನುಡಿಗಳ ಅಸಲೀ ಜವಾರಿ ಭಾಷೆಯನ್ನು ಬಳಸುವುದು ಅನಿವಾರ್ಯವಾಯಿತು. ಎಲ್ಲರಿಗೂ ತಿಳಿಯಲಿ ಅನ್ನುವ ಜಿದ್ದಿನಲ್ಲಿಗೆ ಕಟ್ಟುಬಿದ್ದು ನಾನೇನಾದ್ರೂ ಶಿಷ್ಟ ಭಾಷೆಯಲ್ಲಿ ಅವರ ಬದುಕನ್ನು ಸುತ್ತಿಟ್ಟಿದ್ದರೆ ಅದು ತನ್ನ ಅಸಲೀತನವನ್ನು ಕಳೆದುಕೊಂಡು ನಕಲಿಯಾಗಿ, ಅದರ ಮೂಲ ಆಶಯದ ಮುಖ್ಯ ಬೇರಿಗೇ ಕೊಡಲಿ ಪೆಟ್ಟಾಗುತ್ತಿತ್ತು. ಹೀಗಾಗಿ ನನ್ನೂರಿನ ಈ ಹಳ್ಳಿ ಭಾಷೆ ಆ ಕಡೆಯ, ಅಂದರೆ ಬೆಂಗಳೂರು, ಮೈಸೂರು, ಮಲೆನಾಡು ಮೊದಲಾದ ಕನ್ನಡಿಗರಿಗೆ ಅರ್ಥವಾಗುತ್ತದೆಯೋ ಇಲ್ಲವೋ ಅನ್ನುವ ಅಳುಕಿದ್ದರೂ ನಾವು ಹೀಗೆ ಅವರ ಗ್ರಾಮ್ಯ ಭಾಷೆಯ ಕಾದಂಬರಿಗಳನ್ನು ಶ್ರಮಪಟ್ಟು ಓದಿ ಅರ್ಥಮಾಡಿಕೊಳ್ಳುತ್ತೇವೆಯೋ ಅವರೂ ಹಾಗೆಯೇ ಸ್ವಲ್ಪ ಹೆಣಗಾಡಲಿ ಅನ್ನುವ ತಗಾದೆಯೂ ನನ್ನ ಅಂತರ್ಯದಲ್ಲಿತ್ತು. ನನ್ನ 'ನೀಲಗಂಗಾ' ಕಾದಂಬರಿ 'ಲಂಕೇಶ ಪತ್ರಿಕೆ'ಯಲ್ಲಿ ಧಾರಾವಾಹಿಯಾಗಿ ಪ್ರಕಟವಾದಾಗ ವಿಮರ್ಶಕರೂ, ಓದುಗರೂ ಅದನ್ನು ತುಂಬಾ ಮೆಚ್ಚಿಕೊಂಡರು. ಭಾಷೆಯ ಗಟ್ಟಿತನವನ್ನು, ಒರಟುತನವನ್ನು ಪ್ರೀತಿಸಿದರು. ನನ್ನ ಜಿಲ್ಲೆಯ ಗಂಡು ಕನ್ನಡ ಭಾಷೆಯ ಕಡೆಗೆ ಆಕರ್ಷಿತರಾದರು. ನನಗೆ ಧೈರ್ಯ ಬಂದಿತು. ಮುಂದಿನ ಎಲ್ಲಾ ಕಾದಂಬರಿಗಳಲ್ಲಿ ಇದೇ ಗ್ರಾಮ್ಯಭಾಷೆಯನ್ನು ಯಾವ ಮುಲಾಜೂ ಇಲ್ಲದೆ, ನಿರ್ಭಿಡೆಯಿಂದ ಬಳಸತೊಡಗಿದೆ. (ಉಷಾ ಪಿ. ರೈ (ಸಂ) : ೨೦೦೩; ೩೩)

'ಪ್ರತಿಭಟನೆ' ಎಂಬುದು ಒಂದು ಮನೋಧರ್ಮವಾಗಿ ಅದಕ್ಕೆ ಅನುಗುಣವಾಗಿ ಅಭಿವ್ಯಕ್ತಿ ವಿಧಾನವನ್ನು ನಿರ್ಮಿಸಿಕೊಂಡದ್ದು ಈ ಲೇಖಕಿಯ ವೈಶಿಷ್ಟ್ಯ. 'ಅಸ್ಪಶ್ಯತೆ'ಯ ಹೆಸರಿನಲ್ಲಿ ಮೂಲೆಗುಂಪಾಗಿದ್ದ ಹಲವಾರು ಬಾಯಿಗಳು ಇವರ ಕೃತಿಗಳಲ್ಲಿ ಮಾತನಾಡುವ ಸ್ವಾತಂತ್ರ್ಯವನ್ನು ಗಳಿಸಿಕೊಂಡಿವೆ. ಕಟ್ಟಕಡೆಯ ದಲಿತಳಾದ ಹೆಣ್ಣು ಕೂಡ ಸುತ್ತ ಮುತ್ತ ವೀಕ್ಷಿಸುವ, ಬೆಳಕು ಅವಳ ಕಣ್ಣುಗಳನ್ನು ಅರಸುವ ಸ್ಥಿತಿಯ ನಿರ್ಮಾಣ ಇಲ್ಲಿ ಕೌತುಕ ಪೂರ್ಣ ನಿರೂಪಣೆಯಾಗಿದೆ. ಒಟ್ಟು ರಚನೆಯಲ್ಲಿ ವಿವಾಹ ಮತ್ತು ಕೌಟುಂಬಿಕ ಸ್ಥಿತಿಯ ಒಳಗೆ ದಲಿತ ಹೆಣ್ಣಿನ

ದಮನಕಾರಿ ಬದುಕಿನ ನಿರ್ವಹಣೆ ಮತ್ತು ಮುಕ್ತಾಯವನ್ನು ಕಂಡಾಗ ಇವುಗಳು 'ಪಾರ್ಶ್ವಿಕ' ಎನಿಸಿಬಿಡುತ್ತವೆ. ದಲಿತ ಮಹಿಳೆಯರು ತಮ್ಮ ಬದುಕು ಮತ್ತು ಸಮಾಜಕ್ಕೆ ಮುಖಾಮುಖಿಗೊಳ್ಳುವುದನ್ನು ಗೀತಾನಾಗಭೂಷಣ ವಿವಾಹದ ಸ್ವರೂಪದ ನೆಲೆಯಲ್ಲಿ ನಿರ್ವಚಿಸುವುದು ಆಸಕ್ತಿದಾಯಕವಾದದ್ದು. ಶತಮಾನಗಳಿಂದ ಶೋಷಣೆಗೆ ಒಳಗಾದ ವರ್ಗಗಳ (ಹೊಲೆಯರು, ಮಾದಿಗರು, ಸಮಗಾರರು, ಕಬ್ಬಲಿಗರು, ಕುರುಬರು, ಬೇಡರು) ವಿಸ್ಮೃತಿಗೆ ಸಂದ ಬದುಕು ಗೀತಾ ನಾಗಭೂಷಣ ಅವರ ಬರಹಗಳಲ್ಲಿ ಅನಾವರಣಗೊಳ್ಳುವ ಬಗೆ ಮುಖ್ಯವಾಗುತ್ತವೆ. ವಸಾಹತು ಸಂಸ್ಕೃತಿಯ ಪ್ರಭಾವದ ಎದುರಲ್ಲಿ ದಲಿತರ ಜೀವನ ಮೌಲ್ಯಗಳು ಪಲ್ಲಟಗೊಳ್ಳುತ್ತಿರುವುದು ಬಹು ಸೂಕ್ಷ್ಮವಾಗಿ ಗ್ರಹಿಸಿರುವ ಗೀತಾನಾಗಭೂಷಣ ಅವರ ಕೃತಿಗಳಲ್ಲಿ ಬೇಜವಾಬ್ದಾರ, ಅಲೆಮಾರಿ, ಪಲಾಯನವಾದಿ ಪುರುಷರ ಅಸ್ಥಿರತೆಯ ಮಾದರಿಗಳಿಗೆ ಮುಖಾಮುಖಿಯಾಗಿ, ದೇಸಿ ಮೌಲ್ಯಗಳನ್ನು ಗಟ್ಟಿಯಾಗಿ ಬಿಂಬಿಸುವಂಥ, ಕುಟುಂಬದ ಎಲ್ಲ ಜವಾಬ್ದಾರಿ ಹೊತ್ತು, ನೂರಾರು ಸಂಕಟ ನೋವುಗಳನ್ನು ನುಂಗಿಯೂ ತನ್ನ ಕುಟುಂಬವನ್ನು ಎತ್ತಿ ನಿಲ್ಲಿಸಬಲ್ಲ ಆಧಾರ ಸ್ತಂಭಗಳಂತಿರುವ ಸ್ತ್ರೀತ್ವದ ಮಾದರಿಗಳನ್ನು ಕಾಣಬಹುದು. ವಿದ್ಯಾಭ್ಯಾಸಕ್ಕೆ ತೆರೆದುಕೊಳ್ಳದ, ಶಾಲೆಯನ್ನು ಕಂಡರೂ ಬಡತನ, ಅಜ್ಞಾನದ ಕಾರಣದಿಂದಾಗಿ ಪ್ರಾಥಮಿಕ ಶಿಕ್ಷಣವಷ್ಟೇ ಪಡೆದ ಜನಾಂಗದ ಜೀವನಕ್ರಮ **ನೀಲಗಂಗಾ, ಆಸರೆ, ಬದುಕು** ಕಾದಂಬರಿಗಳ ಅಂತರ್‌ಶೋಧವಾಗಿದೆ. ಇಲ್ಲಿ ವಿವಾಹವೆಂಬುದು ಬಡತನದ ಜೀವನಕ್ಕೆ ಮುದ ನೀಡುವ ಏಕಮಾತ್ರ ಪರಿಹಾರವಾಗಿದೆ. ಹೀಗಾಗಿ ಪ್ರಾಪ್ತವಯಸ್ಸಿಗೆ ಮುಂಚಿತವಾಗಿ ಮದುವೆ ಮಾಡುವುದು ಸಾಮಾನ್ಯ. **ನೀಲಗಂಗಾ**ದ ನೀಲಗಂಗಾ, ಆಸರೆಯಲ್ಲಿನ ತಾಯವ್ವ, ತಾಳವ್ವ, ಬದುಕು ಕೃತಿಯ ಶಾಣಮ್ಮ, ಕಾಶಮ್ಮ, ಬೆಳ್ಳಿ ಇವರೆಲ್ಲರದ್ದು ಪ್ರಾಪ್ತವಯಸ್ಸಿನ ಮುಂಚಿನ ಮದುವೆ. ಇಲ್ಲಿ ಬರುವ ಪ್ರೇಮವಿವಾಹದ ಒಂದೇ ನಿದರ್ಶನ ಪರಸ್ಪರ ಮೆಚ್ಚಿ ಅಥವಾ ವಯೋ ಸಹಜವಾದ ಆಕರ್ಷಣೆಗೆ ಒಳಗಾಗಿ ವಿವಾಹಿತರಾಗುವ ನೀಲಗಂಗಾ ಮಲ್ಲೇಶಿಯರದ್ದು. ಅವರ ಆಸಕ್ತಿ ಇಚ್ಛೆಗೆ ಮನ್ನಣೆಯಿತ್ತ ವಿವಾಹ ಇವರದ್ದು. ಕೇರಿಯ ತುಂಬಾ 'ಗಂಡುಬೀರಿ' ಎಂದು ಹೆಸರಾದ ನೀಲಗಂಗಾಳನ್ನು ಹಲವು ಯುವಕರು ನೋಡಿ ಒಪ್ಪಿ ಹೋದರೂ ಅವರನ್ನೆಲ್ಲ ನಿರ್ಭಿಡೆಯಿಂದ ಒಂದಲ್ಲ ಒಂದು ಕೊರತೆ ಹೇಳಿ ನಿರಾಕರಿಸುವ ಅವಳಲ್ಲಿ ಮದುವೆಯಾಗುವ ಗಂಡಿನ ಕುರಿತ ಸ್ಪಷ್ಟ ಕಲ್ಪನೆ ಇದೆ. ಈ ಕೃತಿಯಲ್ಲಿ ವಿವಾಹವಾಗುವ ಗಂಡಿನ ಬಗ್ಗೆ ಸ್ಪಷ್ಟ ಕಲ್ಪನೆ ಇರುವ ಒಂದೇ ಒಂದು ಸ್ತ್ರೀ ಪಾತ್ರವಾಗಿ ನೀಲಗಂಗಾಳ ಚಿತ್ರಣವಿದೆ. ಉಳಿದ ಯಾವ ಹೆಣ್ಣುಗಳಲ್ಲಿಯೂ ಇಂತಹ ಕಲ್ಪನೆಗೆ ಅವಕಾಶಗಳು ಕೂಡ ಇರುವುದಿಲ್ಲ. ಇದ್ದರೂ ಅದನ್ನು ಸಾಧಿಸುವ ಪ್ರವೃತ್ತಿ ಹೆಣ್ಣುಗಳಲ್ಲಿ ಕಾಣಬರುವುದಿಲ್ಲ.

ಪ್ರೇಮ ವಿವಾಹವೆನ್ನಬಹುದಾದ ಮತ್ತೊಂದು ಜೋಡಿಗಳಾದ **ಬದುಕು**ವಿನ ಕಲ್ಯಾಣಿ-ಬೆಳ್ಳಿಯರ ಮದುವೆ ಸೋದರ ಸಂಬಂಧದಲ್ಲಿ ಆಗುತ್ತದೆ. ಜಾತಿ - ಉಪಜಾತಿಗಳ ಸೃಷ್ಟಿಯಿಂದಾಗಿ ದ್ವೀಪಗಳಂತೆ ಬದುಕುವ ಸಮೂಹದಲ್ಲಿ 'ರಕ್ತಸಂಬಂಧ'ದ ಒಳಗೆ ವಿವಾಹವೇರ್ಪಡುವುದು ಸರ್ವೇಸಾಮಾನ್ಯ. ಇಲ್ಲಿ 'ರಕ್ತಸಂಬಂಧ'ದೊಳಗೆ ವಿವಾಹ ನಿಶಿದ್ಧ'ವೆಂಬ ಜೈವಿಕ ವೈಜ್ಞಾನಿಕ ಕಾರಣಗಳು ಸಮೂಹದ ಸಂಪ್ರದಾಯವನ್ನು ಮುರಿಯಲಾರವು. ಅಕ್ಕನ ಮಗಳನ್ನೇ ತಮ್ಮ ವಿವಾಹವಾಗುವ ಅಥವಾ ಸೋದರ ಮಾವನ ಮಗನನ್ನು ಮದುವೆಯಾಗುವ ವಿವಾಹದಿಂದ ಕುಟುಂಬದ 'ಅಂತರ್‌ಸತ್ತ್ವ' ಅನುವಂಶೀಯವಾಗಿ ಕುಟುಂಬದಲ್ಲೇ ಸ್ಥಿರವಾಗಿ ನೆಲೆಸುತ್ತದೆ ಎಂಬ ನಂಬಿಕೆ ಜನಸಾಮಾನ್ಯರದ್ದು. ಆಧುನಿಕ ಶಿಕ್ಷಣಕ್ಕೆ ತೆರೆದುಕೊಳ್ಳದ ಅಥವಾ ನಿಧಾನವಾಗಿ

ಶಿಕ್ಷಣ ಸೌಲಭ್ಯವನ್ನು ಪಡೆಯುತ್ತಿರುವ ಹಿಂದುಳಿದ ಜನಾಂಗಗಳಲ್ಲಿ 'ರಕ್ತಸಂಬಂಧ'ದ ವಿವಾಹ ಸರ್ವೇಸಾಧಾರಣ. ಕುಟುಂಬದ ಸ್ಥಿರ ಆಸ್ತಿ, ಕುಲಕಸುಬು ಬೇರೆ ಮನೆತನಗಳ ಪಾಲಾಗಬಾರದು, ಎಂಬ ಪ್ರಬಲ ಆರ್ಥಿಕ ಕಾರಣಗಳೂ ಇದಕ್ಕೆ ಕೇಂದ್ರ. ಕಲ್ಯಾಣಿ- ಬೆಳ್ಳಿಯರ ವಿವಾಹ ಈ ಎಲ್ಲ ಕಾರಣಗಳನ್ನು ಒಳಗೊಂಡದ್ದಾಗಿದೆ. ಮಲ್ಲಪ್ಪ ಜಮಾದಾರ ಕೌಟುಂಬಿಕ ಆರ್ಥಿಕತೆಯ ಕಾರಣದಿಂದ ಆತನ ಮಗಳ ಮಗಳನ್ನು ಒಬ್ಬನೇ ಮಗನಾದ ಕಲ್ಯಾಣಿಗೆ ಮದುವೆಮಾಡಿ ಮನೆ ತುಂಬಿಸಿಕೊಳ್ಳುತ್ತಾನೆ. ಮಗಳಿಗೆ ಕೊಟ್ಟ ಆಸ್ತಿ ಮರಳಿ ಅವಳ ಮಗಳು (ಬೆಳ್ಳಿ) ಸೊಸೆಯಾಗಿ ಬರುವಲ್ಲಿ ಮತ್ತೆ ಅದೇ ಮನೆ ಸೇರುತ್ತದೆ ಎನ್ನುವುದು ವಿವಾಹದ ಹಿಂದಿರುವ ಒಂದು ಅಂಶವಾದರೆ, 'ರಕ್ತಸಂಬಂಧ'ವೆಂಬ ಮಮಕಾರ ಭಾವನೆ ಮತ್ತೊಂದು ಅಂಶ. ಹೊಲೆಯರು, ಮಾದಿಗರು, ಸಮಗಾರರು, ಕಬ್ಬಲಿಗರು, ಕುರುಬರು, ಬೇಡರು ಈ ಜನಾಂಗದವರಲ್ಲಿ 'ರಕ್ತಸಂಬಂಧ'ದೊಳಗಿನ 'ಒಳವಿವಾಹ' ವರ್ಣಸಂಕರವನ್ನು ತೊಡೆದು ಮಿಶ್ರವಿವಾಹದ ಸಾಧ್ಯತೆಯನ್ನು ಅಳಿಸಿಹಾಕುವ ಗೋಡೆಗಳಾಗಿವೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಬದುಕುತ್ತಿರುವ ಹಿಂದುಳಿದ ವರ್ಗಗಳ ನೈಜಸ್ಥಿತಿ ಬದಲಾಗಿಲ್ಲ ಎಂಬುದನ್ನು **ಬದುಕು** ನಿರೂಪಿಸುತ್ತದೆ.

ಕೆಳಗೇರಿಯ ಹಿರಿಯರು ನಿಶ್ಚಯಿಸುವ ವಿವಾಹದಲ್ಲಿ ಹೆಣ್ಣಿನ ಮನಸ್ಸು ಮತ್ತು ಒಪ್ಪಿಗೆಯನ್ನು ಕೇಳುವ ಸಂಭವವೇ ಇರುವುದಿಲ್ಲ. ಇದು ಹೆಂಡ ಸೇಂದಿಯ ನಿಶೆಯಲ್ಲಿ, ಬಾಡು ಊಟದ ರುಚಿಯಲ್ಲಿ ನಿಶ್ಚಯಗೊಳ್ಳುವ ವಿವಾಹ. ಹೆಣ್ಣು ಮಕ್ಕಳನ್ನು ಹೆತ್ತ ತಂದೆಯಂದಿರು ಮಗಳ ಜೊತೆ ಗಂಡನಾಗಿ ಬದುಕುವ ವ್ಯಕ್ತಿಯ ಪೂರ್ವಪರ ತಿಳಿಯದೆ 'ಕಟ್ಟಿಬಿಡು'ವಂಥದ್ದು. **ಆಸರೆ**ಯಲ್ಲಿ ಮಾದಿಗ ಮಾನಿಂಗ ಮಗಳು ಬೆಳೆದು ಹರೆಯಕ್ಕೆ ಬರುವ ಮೊದಲೇ ಅವಳ ಮದುವೆ ನಿಶ್ಚಯಿಸಿ ಬರುವುದು ಅವರ ಸೋದರ ಮಾವನ ಮನೆಯ ಜಿಂಕೆ ಮಾಂಸದ ಅಡಿಗೆ, ಈಚಲು ಮರದ ತಾಜಾ ಸೇಂದಿಯ ಆತಿಥ್ಯಕ್ಕೆ ಮರಳಾಗಿಯೇ ಆಗಿರುತ್ತದೆ. ಹತ್ತುವರ್ಷದ ತಾಯವ್ವನನ್ನು ಈಸೂರನಿಗೆ ಕೊಟ್ಟು ಮದುವೆ ಮಾಡುವುದೆಂದು ಅದೇ ಆತ ದಿನ ನಿಶ್ಚಯಿಸಿಯೇ ಬರುತ್ತಾನೆ. ಅವನ ಪರಿಸ್ಥಿತಿಯ ಸಮರ್ಥನೆ ಕೂಡ ಆತನಿಗೆ ಪೂರಕವಾಗಿರುತ್ತದೆ.

> "ಮಾನಿಂಗ ಮಾತು ಕೊಟ್ಟು ಬಂದಿದ್ದ. ಅವನು ಮಾತು ಕೊಟ್ಟಿದ್ದರಲ್ಲಿ ತಪ್ಪೇನೂ ಇರಲಿಲ್ಲ. ಒಂಟಿ ಬಿಗತಾನ, ನಾದಿನಿ, ನೆಗೆಯಣ್ಣಿ, ಅಂತ ಯಾರ ಕಿರಿಕಿರಿಯೂ ಇರಲಿಲ್ಲ. ಅತ್ತೆಯಂತೂ ಮುದುಕಿ, ಮಾವ ಕೂಸಿನಂಥ ಮನುಷ್ಯ. ಊರ ಮುಂದೆ ತೋಟ ಅಂದರೆ ಆ ಕುಲದವರಿಗೊಂದು ಸಿರಿತನದ ಹೆಮ್ಮೆ. ಗಂಗವ್ವನೂ ಮಗಳಿಗೆ ಒಳ್ಳೆ ಸಂಬಂಧ ಅಂತ ಒಪ್ಪಿಕೊಂಡಳು. ಒಳಗಿನ ನಂಟಸ್ತನ ಬೇರೆ, ಕರಳುಬಳ್ಳಿ ಸಂಬಂಧ. ಕೇಳಲಾಗದ, ಕಾಣಲಾರದ ಊರಿನ ಹೊಸ ನಂಟಸ್ತನಕ್ಕಿಂತಾ ಇದೇ ಚಂದಾ ಅಂತ ಅನ್ನಿಸಿತ್ತು ಅವರಿಗೆ."
> (ಗೀತಾನಾಗಭೂಷಣ :೯೮೮; ೧೨)

ವಿವಾಹವಾಗಿ ಐದು ವರ್ಷದಲ್ಲಿ ಸೋಡ ಚೀಟಿ ಕೈಯಲ್ಲಿ ಹಿಡಿದು ಬಂದ ಮಗಳಿಗೆ ಮಾನಿಂಗ ಎರಡನೇ ವಿವಾಹ ಗೋಳಪ್ಪನ ಜೊತೆ ನಿಶ್ಚಯಿಸುವ ಬಗೆ ಕೂಡ ಇದೇ ರೀತಿಯದ್ದಾಗಿದೆ. ಮೂಗಿಗೆ ಬರೇತನಕ ಹೆಂಡ ಕುಡಿದು, ಕೋಳಿಪಲ್ಯ ಗೋಧಿರೊಟ್ಟಿಯ ಉಪಚಾರದ ಮುಂದೆ ನೊಂದ ಮಗಳನ್ನು ಕೈಹಿಡಿಯಲು ಬಂದ ಗೋಳಪ್ಪನ ಎಲ್ಲ ಕೆಟ್ಟಗುಣಗಳು ಸರಿದು ನಿಲ್ಲುತ್ತವೆ. ಹೆಂಡ ಮಾಂಸದ ಗಡಿಬಿಡಿಯಲ್ಲಿ ಮಗಳಿಗೆ ಮಾಡುವ ಎರಡು

ಮದುವೆಗಳಲ್ಲೂ ಅಳಿಯಂದಿರಾಗುವವರ ಗುಣ ಸ್ವಭಾವದ ಬಗ್ಗೆ ತಿಳಿದು ಕೊಳ್ಳುವುದಕ್ಕೆ ಆತನಿಗೆ ಸಾಧ್ಯವಾಗುವುದಿಲ್ಲ. ಗೋಳಪ್ಪ ಅವನ ಮಗಳು ತಾಳವ್ವನ ಮದುವೆ ಕಾಡ್ಯಾನ ಜೊತೆ ಮಾಡುವುದು ಕೂಡ ಹೆಂಡದ ಅಮಲಿನಲ್ಲಿ. ಅಲ್ಲದೆ, 'ತೆರವು' ರೂಪದಲ್ಲಿ ಬರುವ ಹಣದ ಆಶೆಗಾಗಿ.

"ತಾಳಿಯನ್ನು ನೋಡಿದ ಕಾಡ್ಯಾ ಕುಂತ ಜಾಗದಲ್ಲಿಯೇ ಒಂದೇ ಮಾತಿಗೆ ಏಕದಂ ತನಗೆ ಹೆಣ್ಣುಪಸಂದ್ ಎಂದು ಹೇಳಿಬಿಟ್ಟ. ಮತ್ತೆ ಯಾವ ಮಾತು ಅಲ್ಲಿ ಜನರೆದುರು ಆಡಲು ಇಚ್ಛಿಸದ ಗೋಳಪ್ಪ ಬೀಗರನ್ನು ಕರೆದುಕೊಂಡು ಬನಿದೆಡೆಗೆ ನಡೆದ. ಮಾರನೆಯ ದಿನವೇ ಕಾಡ್ಯಾ ಒಂದು ಸಾವಿರ ರೂಪಾಯಿ ತಂದು ಗೋಳಪ್ಪನ ಕೈಯಾಗಿಟ್ಟು ಕೈ ಜೋಡಿಸಿದ. ಈ ರುಪ್ಯೆ ತಮಗೇರಿ ಮಾಂವಾ.... ಮದುವೆ ಖರ್ಚೆಲ್ಲಾ ನಂದೇ. ನನ್ ಬಟ್ಟೀನೂ ತಾನೇ ತರ್ತಿನೆಂತ. ನೀವು ಮದಲೇ ಬಡೂರು. ನಿಮ್ಮ ಮ್ಯಾಲ ಹೆಂತಾ ಒಜ್ಜಿನೂ ನಾ ಹಾಕಂಗಿಲ್ಲ. ನಿಮ್ಮ ಮಗಳು ನನಗೆ ಬಾಳ ಪಸಂದ ಬಂದಾಳ ಬಿಡ್ರಿ."(ಗೀತಾನಾಗಭೂಷಣ :೧೯೮೮; ೬೭)

ಕಾಡ್ಯಾನ ಔದಾರ್ಯದ ಮುಂದೆ ಗೋಳಪ್ಪ ಕುಬ್ಜನಾಗುತ್ತಾನೆ. ಕಾಡ್ಯಾ ದೂರದ ಮುಂಬೈಯಲ್ಲಿ ಯಾವ ಕೆಲಸ ಮಾಡುತ್ತಿದ್ದಾನೆ ಎಂದು ವಿಚಾರಿಸುವ ಗೋಜಿಗೂ ಆತ ಹೋಗುವುದಿಲ್ಲ.

ವಿಧವಾ ವಿವಾಹ ಅಥವಾ ಮರು ವಿವಾಹದ ಸಂದರ್ಭದ ನಿರ್ವಹಣೆ ದಲಿತ ಜನಾಂಗದವರಲ್ಲಿ ಅತಿ ಸರಳ. ಇಲ್ಲಿ ಸ್ತ್ರೀ ಪುರುಷರಿಗೆ ಸಮಾನ ಅವಕಾಶ. ದುಡಿದು ತಿನ್ನುವ ಮಂದಿಯ ಬದುಕಿನಲ್ಲಿ ಬಾಳಸಂಗಾತಿ ಎಂಬುದು ಕೇವಲ ಭಾವನಾತ್ಮಕ ಅಂಶ ಮಾತ್ರವಲ್ಲ. ಅವರಲ್ಲಿ ಅಳಿಯ ಅಥವಾ ಸೊಸೆ ಎಂಬ ಭಾವನಾತ್ಮಕ ಎಲ್ಲೆ ದುಡಿತಕ್ಕೆ ತಳುಕು ಹಾಕಿಕೊಂಡಿರುತ್ತದೆ. ಇಲ್ಲಿ ಗಂಡ ಅಥವಾ ಹೆಂಡತಿ ಬಿಟ್ಟರೆ, ಸತ್ತರೆ, ತಿಂಗಳು ವರ್ಷಗಳ ಒಳಗಾಗಿ ಬೇರೆ ವಿವಾಹವೇರ್ಪಡಿಸುವುದು ಸಾಮಾನ್ಯ. ಇಂತಹ ಸಂದರ್ಭದ ಪ್ರಶ್ನೆಗಳು ಎದುರಿಸುವ ಬಗೆ ಒಂದರ್ಥದಲ್ಲಿ ಆರೋಗ್ಯಪೂರ್ಣ. 'ಆಸರೆ'ಯಲ್ಲಿ ತಾಯವ್ವನಿಗೆ ಈಸೂರ 'ಸೋಡಚೀಟಿ' ಕೊಟ್ಟು ಆಕೆ ಮರಳಿ ತವರು ಸೇರಿದಾಗ ಸುತ್ತಲಿನ ಜನತೆಯ ಪ್ರತಿಕ್ರಿಯೆಯಲ್ಲಿ ಇದು ಪ್ರಕಟವಾಗುತ್ತದೆ.

"ಗಂಗವ್ವ ಅತ್ತು ಅತ್ತು ಸರಕ್ಕನೆ ಸಿಂಬಳ ಕಳೆದು ಬಿಸಾಟಿ ಸೆರಗಿನಿಂದ ಮೂಗು, ಕಣ್ಣು ಒರೆಸಿಕೊಂಡು ದಮ್ಮು ಆರಿಸಿ ಕೊಂಡಳು. ನೆರೆಹೊರೆಯವರು ನೆರೆದರು, ಸಂತೈಸಿದರು. 'ನೀ ಯಾಕ್ ಈ ಪಾಟಿ ಅಳ್ತಿ ಬಿಡೇ ಗಂಗಾ.... ಪೋರಿ ಎದಿ ಒಡಕೊಂಡೆತ್ತು. ಅವನಿಗೊಂದು ಹೆಣ್ತಿ ಸಿಕ್ಕರೆ ಈಕೆಗೊಂದು ಗಂಡ ಸಿಕ್ತಾನ ಬಿಡು. ನಾವೇನು ಹಾರ್ರು, ಕ್ಯಾಮಟಗೇರು ಕೆಟ್ಟು ಹ್ವಾದೇವಾ.... ? ಮಗಳಿಗಿ ಮನ್ಯಾಗಿಟ್ಟುಕೊಂಡು ಕೊಳಸ್ತೇವಾ...? ಸರಿಸರಿ. ಬ್ಯಾರೆ ವರಾ ನೋಡಿ ಕೊಟ್ಟು ಉಡಕಿ ಮಾಡದ್ರಾಯ್ತು. ಬಿಡು ಸುಮ್ನಿರು.... "(ಗೀತಾ ನಾಗಭೂಷಣ: ೧೯೮೮; ೮೪)

ಉಡಕಿ ಪದ್ಧತಿಯಿಂದಾಗಿ ಸ್ತ್ರೀಯರು ಕೂಡ ಪುರುಷರಂತೆ ವಿವಾಹದ ಎಲ್ಲ ಸೌಲಭ್ಯಗಳನ್ನು ವ್ಯವಸ್ಥೆಯೊಳಗೆ ಕೆಳವರ್ಗದ ಸಮುದಾಯಗಳಲ್ಲಿ ಪಡೆಯಬಹುದಾಗಿದೆ. ಕತ್ತಲು ಕೋಣೆಯಲ್ಲಿ, ವಿಧವೆಯರ ಮುಂದೆ ಹೆಣ್ಣಿನ ಕೊರಳಿಗೆ ಕರಿಮಣಿಕಟ್ಟಿ ಹಣೆಗೆ ಕುಂಕುಮ ಇಟ್ಟು ಹೆಂಡತಿಯಾಗಿ ಮಾಡಿಕೊಳ್ಳುವ ಪದ್ಧತಿಯೇ 'ಉಡಕಿ'. ಈ

ನೆಲೆಯಲ್ಲಿ ಹೆಚ್ಚಿನ ದಲಿತ ಮಹಿಳೆಯರಿಗೆ ಮರು ಮದುವೆ, ವೈಧವ್ಯವೆನ್ನುವುದು ದೊಡ್ಡ ಪ್ರಶ್ನೆಯಾಗಿ ಕಾಡುವುದೇ ಇಲ್ಲವೆನ್ನುವುದು ವ್ಯಕ್ತವಾಗುತ್ತದೆ. ಕೆಳಜಾತಿ ವರ್ಗಗಳ ಸ್ತ್ರೀಯರು, ಬ್ರಾಹ್ಮಣ ವಿಧವೆಯರ ರೀತಿಯ ಕಷ್ಟಗಳನ್ನು ಎದುರಿಸಬೇಕಿಲ್ಲ. 'ಮರು ವಿವಾಹ'ದ ಪ್ರಶ್ನೆ ಸಮಾಜದ ಉಳಿದ ವರ್ಗದ ಸ್ತ್ರೀಯರನ್ನು ಕಾಡುವಂತೆ ಕೆಳಜಾತಿ ವರ್ಗಗಳ ಸ್ತ್ರೀಯರನ್ನು (ವಿಧವೆಯರನ್ನು) ಕಾಡುವುದಿಲ್ಲ. ಈ ನೆಲೆಯಲ್ಲಿ ದಲಿತ ಸ್ತ್ರೀಯರಿಗೆ ವ್ಯಾಪಕವಾದ ಜೀವನದ ಅವಕಾಶಗಳು ದಕ್ಕಿವೆ. ಆದರೆ ಅದೇ ಸಂಸ್ಕೃತಿಯಲ್ಲಿ ರೂಢಿಗತವಾದ ಕೂಡಿಕೆ (ಉಡಕಿ) ಒಂದು ಸವಲತ್ತಾಗುವ ಬದಲು ಅದೂ ಪುರುಷ ಪ್ರಧಾನ ಹಿತಾಸಕ್ತಿಯ ಮಸಲತ್ತಿನ ಅಂಗವಾಗುವುದನ್ನು ಗೀತಾನಾಗಭೂಷಣ ಅವರು **ಆಸರೆ** ಕಾದಂಬರಿಯಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾರೆ.

**ಸಾರಾ ಅಬೂಬಕ್ಕರ್ ಅವರ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹದ ಸ್ವರೂಪ :**

ಹಿಂದೂ ಸಮಾಜದಲ್ಲಿರುವಂತೆ ಮುಸ್ಲಿಂ ಸಮಾಜದ ಒಳಗಿನ ಪುರುಷ ಕೇಂದ್ರಿತ ಆಶಯಗಳು ಸ್ತ್ರೀ ಸಮಾಜ ಜೀವಿ ಎಂಬುದನ್ನು ನಿರ್ದಾಕ್ಷಿಣ್ಯವಾಗಿ ಹೊಸಕಿ ಹಾಕುತ್ತವೆ. ಧರ್ಮದ ಒಳಗೆ ಸ್ತ್ರೀಯರ ಬದುಕು ಪುರುಷನಿಗೆ ಪೂರಕವಾಗಿ ರೂಪಿತಗೊಂಡಿರುತ್ತವೆಯೇ ವಿನಾಃ ಸ್ವತಂತ್ರವಾಗಿ ಅಲ್ಲ. ಇದರಲ್ಲಿ 'ಮಾನವೀಯತೆ'ಯ ಜಿಜ್ಞಾಸೆ ಯಾವುದೇ ಕಾಲ ಸಂದರ್ಭಗಳಲ್ಲೂ ಏಳುವುದಿಲ್ಲ. ಮುಸ್ಲಿಂ ಸಮಾಜ ಈ ಅರ್ಥದಲ್ಲಿ ಸಂಪೂರ್ಣವಾಗಿ ಪುರುಷಮಯ. ಸ್ತ್ರೀಗೆ ಅವಳ ಬದುಕಿಗೆ ಸ್ಥಾನ ಕಲ್ಪಿಸುವ ಸನ್ನಿವೇಶವೇ ಇದರೊಳಗೆ ಎದುರಾಗುವುದಿಲ್ಲ. ಧಾರ್ಮಿಕ ಕಟ್ಟಳೆಯೊಂದೇ ಏಕಮಾತ್ರ ಅಡಿಗಲ್ಲಾಗಿರುವ ಮುಸ್ಲಿಂ ವಿವಾಹ ಪದ್ಧತಿ 'ನಿಕಾಹ'. ಇದು ಇಸ್ಲಾಂ ಧರ್ಮದ 'ಷರಿಯಾ ಕಾನೂನಿನ' ಅನ್ವಯಾಧೀನ ನಡೆಯುವಂಥದ್ದು. ಇದರೊಳಗೆ ಪ್ರೇಮ ವಿವಾಹಕ್ಕೆ ಯಾವುದೇ ತೆರನಾದ ಪ್ರಾಶಸ್ತ್ಯವಿಲ್ಲ. ಮುಸ್ಲಿಂ ವಿವಾಹ ಪದ್ಧತಿ ಈ ನೆಲೆಯಿಂದ ಪರಿಷ್ಕಾರಕ್ಕೆ ಒಳಗಾಗುವ ಯಾವ ಒತ್ತಡವನ್ನೂ ಎದುರಿಸಿಲ್ಲ. (ಅಥವಾ ಇದನ್ನು ತೆರೆದಿಡುವ ಪ್ರಯತ್ನ ಸಾರಾ ಅವರ ಕೃತಿಗಳಲ್ಲಿ ವ್ಯಕ್ತವಾಗುವುದಿಲ್ಲ.) ಕಾರಣ ವಿವಾಹವನ್ನು ಸಂಪೂರ್ಣವಾಗಿ ಧಾರ್ಮಿಕವಾಗಿಸಿಕೊಂಡು ರೂಪಿತಗೊಂಡಿರುವ ವ್ಯವಸ್ಥೆ ಮುಸ್ಲಿಂ ಸಮಾಜದ್ದಾಗಿದೆ. ಕುಟುಂಬದ ಹಿರಿಯರಿಂದ, ಧಾರ್ಮಿಕ ಮುಖಂಡರಿಂದ ನೆರವೇರುವ ಮದುವೆಗಳಲ್ಲಿ ಸ್ತ್ರೀಯರ ಪಾತ್ರ ಹಲವು ದೃಷ್ಟಿಯಿಂದ ನಿಮಿತ್ತಮಾತ್ರ. ಇದನ್ನು ಸಾರಾ ಅವರ ಕೃತಿಗಳು ಪರಿಶೀಲನೆಗೆ ಒಳಪಡಿಸುವ ಪ್ರಯತ್ನ ನಡೆಸುತ್ತವೆ. **ಚಂದ್ರಗಿರಿಯ ತೀರದಲ್ಲಿ, ಸಹನ, ವಜ್ರಗಳು, ಸುಳಿಯಲ್ಲಿ ಸಿಕ್ಕವರು, ಪ್ರವಾಹ ಸುಳಿ**. ಈ ಕೃತಿಗಳ ಆತ್ಯಂತಿಕ ಶೋಧವೇ ವಿವಾಹ. ವಿವಾಹವು ಸ್ತ್ರೀ ಮತ್ತು ಪುರುಷರಿಗೆ ಕೊಡಮಾಡುವ 'ಸಾಂಸ್ಕೃತಿಕ ಸ್ಥಳಾವಕಾಶ' (Cultural speace)ವಾಗಿದೆ. ಈ ಸಾಂಸ್ಕೃತಿಕ ಸ್ಥಳಾವಕಾಶವು ವೈಯಕ್ತಿಕ ಮತ್ತು ಸಾರ್ವಜನಿಕ ಬದುಕಿನಿಂದ ಆವೃತ್ತವಾಗಿರುವಂಥದ್ದು. ಧರ್ಮವನ್ನೇ ಎದುರು ಮಾಡಿಕೊಂಡು ಬದುಕಿಗೆ ಅರ್ಥಕಂಡುಕೊಳ್ಳಲು ಪ್ರಯತ್ನಿಸುವ ಕಾಸರಗೋಡು - ಉಳ್ಳಾಲ - ಮಂಗಳೂರು ಪ್ರದೇಶಗಳಲ್ಲಿ ದಟ್ಟವಾಗಿರುವ 'ಮಾಪಿಳ್ಳೆ' ಮುಸ್ಲಿಂ ಸಮಾಜ ಸಾರಾ ಅವರ ಕೃತಿಗಳಲ್ಲಿ ಅನಾವರಣಗೊಳ್ಳುತ್ತದೆ. ಇದನ್ನು ಭಾರತೀಯ ಮುಸ್ಲಿಂ ಸಮುದಾಯದ ಜೀವನಕ್ರಮಕ್ಕೆ ತೌಲನಿಕಗೊಳಿಸಿ ಗಮನಿಸಬೇಕಾಗುತ್ತದೆ. ಇದಕ್ಕೆ ಮುಖ್ಯ ಕಾರಣ 'ಕುರಾನ್'. ಧಾರ್ಮಿಕ ಗ್ರಂಥವನ್ನು ಸಂವಿಧಾನವಾಗಿ ಪರಿಭಾವಿಸಿ ಮಾನ್ಯ ಮಾಡುವ ಮುಸ್ಲಿಂ ಮಾಪಿಳ್ಳೆ ಜನಾಂಗದ ಜೀವನ ದೃಷ್ಟಿಕೋನ. ಅರೆಶಿಕ್ಷಿತ,

ಮದ್ರಸಾದ ಶಿಕ್ಷಣವನ್ನಷ್ಟೇ ಹೆಚ್ಚಿನ ಸಂಖ್ಯೆಯಲ್ಲಿ ಪಡೆದು 'ವ್ಯಾಪಾರ'ವನ್ನು ಮುಖ್ಯ ವೃತ್ತಿಯನ್ನಾಗಿ ಆಧರಿಸಿಕೊಂಡ ಜನವರ್ಗದಲ್ಲಿ ವಿವಾಹ ಒಂದು ಧಾರ್ಮಿಕ ಕಾರ್ಯವಿಧಿ. ಷರಿಯತ್ ಅನ್ವಯ ವಿವಾಹಿತ ಗಂಡು-ಹೆಣ್ಣಿಗೆ ನಿರ್ದಿಷ್ಟ ವಯೋಮಿತಿಯು ಅನಿವಾರ್ಯವಲ್ಲ. ಹುಡುಗಿ ಹದಿನಾರು ವರ್ಷಕ್ಕೆ ಚಿಕ್ಕವಳಾದರೆ, ಅವಳ ಒಪ್ಪಿಗೆ ಇಲ್ಲದೆ ಅವಳ ತಂದೆ 'ನಿಕಾಹ' ಮಾಡಿಕೊಡಬೇಕಾಗುತ್ತದೆ. **ಚಂದ್ರಗಿರಿ ತೀರದಲ್ಲಿ**ನ ನಾದಿರಾ, ಜಮೀಲಾ, **ವಜ್ರಗಳು** ಕೃತಿಯ ನಫೀಸ ಮತ್ತು ಉಸ್ಮಾನರ ಮೂರು ಜನ ಹೆಣ್ಣುಮಕ್ಕಳು, **ಸುಳಿಯಲ್ಲಿ ಸಿಕ್ಕವರು** ಕೃತಿಯ ಜೊಹರ, ರುಖಿಯಾ, ಹಾಜಿರಾ ಇವರೆಲ್ಲರ 'ನಿಕಾಹ' ಹದಿನಾರು ವರ್ಷದ ಒಳಗೆ ತಂದೆಯಂದಿರು ನಿರ್ಧರಿಸಿದ ವಿವಾಹಗಳಾಗಿವೆ.

ಹೆತ್ತವರಿಗೆ ಹೆಣ್ಣು ಮಕ್ಕಳವಿವಾಹ ಜವಾಬ್ದಾರಿಯು, ಕರ್ತವ್ಯದ ನಿರ್ಣಾಯಕ ಅಂಶವಾಗಿದ್ದರೆ, ಗಂಡಿನ ಕಡೆಯವರಿಗೆ ಅಥವಾ ಮದುವೆಯಾಗುವ ವರನಿಗೆ ಇದರಲ್ಲಿ ಮುಖ್ಯವಾಗುವುದು ವಧುವಿನ ಮೈಮೇಲೆ ಹಾಕುವ ಚಿನ್ನದ ಒಡವೆಗಳು ಮತ್ತು ಆಕರ್ಷಕ ವರದಕ್ಷಿಣೆಯಾಗಿರುತ್ತದೆ. 'ನಿಖಾಹ'ವೆಂಬುದು ಬಡವರ ಮನೆಗಳಲ್ಲಿ ಮಸೀದಿಯಲ್ಲಿ ಸರಳರೀತಿಯಲ್ಲಿ ಜರುಗುತ್ತದೆ. ಅಲ್ಲದೆ ಮನೆಯಲ್ಲಿ ಸಣ್ಣಕ್ಕಿ ಅನ್ನ ಮತ್ತು ಕೋಣದ ಮಾಂಸದ ಅಡುಗೆಯನ್ನು ಬಂದವರಿಗೆಲ್ಲ ಬಡಿಸಲಾಗುತ್ತದೆ. ಸಾರಾ ಅವರ ಕೃತಿಗಳಲ್ಲಿ ನಿರೂಪಿತಗೊಂಡಿರುವ ಹೆಚ್ಚಿನ ವಿವಾಹಗಳು ಈ ಬಗೆಯವೆ ಆಗಿವೆ. ಆದರೆ, ಶ್ರೀಮಂತ ಮನೆತನಗಳ ವಿವಾಹ ಇದಕ್ಕಿಂತ ಭಿನ್ನವಾಗಿರುತ್ತದೆ. **ಸುಳಿಯಲ್ಲಿ ಸಿಕ್ಕವರು** ಕೃತಿಯ ಜಮೀನ್ದಾರ ಮೂಸಾ ಹಾಜಿಯವರ ಮಗಳು ಜೊಹರಾಳ ವಿವಾಹ ಅದ್ದೂರಿಯದ್ದಾಗಿದೆ. ರಾತ್ರಿಯ ಹೊತ್ತಿನಲ್ಲಿ ಬಂದ ವರನ ದಿಬ್ಬಣದಲ್ಲಿ ದಪ್ಪು ಹೊಡೆದು ಹಾಡುತ್ತ ಕುಣಿಯುವವರಲ್ಲದೆ ಕತ್ತಿವರಸೆಯವರೂ ಇದ್ದು, ದಿಬ್ಬಣದ ಮುಂಭಾಗದಲ್ಲಿ ಆನೆಯನ್ನು ಅಲಂಕರಿಸಿ ತರಲಾಗಿತ್ತು. ಬಣ್ಣ ಬಣ್ಣದ ದೀಪಾಲಂಕಾರ, ಬಿರುಸು ಬಾಣಗಳು, ಪಟಾಕಿಗಳು ಇವುಗಳ ವಿಶೇಷತೆ, ಅಲ್ಲದೆ, ಇಡೀ ಊರಿನವರಿಗೆ ಮಾಂಸದೂಟ. ಶ್ರೀಮಂತ ಮದುಮಗ ತಂದ ಚಿನ್ನಾಭರಣ, ಬಟ್ಟೆ ಬರೆಗಳಿಗಂತೂ ಲೆಕ್ಕವೇ ಇರಲಿಲ್ಲ. ಶ್ರೀಮಂತರ ಮತ್ತು ಬಡವರ ವಿವಾಹದ ಆಚರಣೆಗಳು ಅವರವರ ಆರ್ಥಿಕತೆಗೆ ಅನುಗುಣವಾಗಿ ಜರುಗುವ ಸಮಾರಂಭವಾಗಿದೆ.

ಬಹುಪತ್ನಿತ್ವ ಇಸ್ಲಾಂನಲ್ಲಿ ಧರ್ಮ ಸಮ್ಮತವಾದದ್ದು. ಓರ್ವ ವ್ಯಕ್ತಿ ಇಲ್ಲಿ ನಾಲ್ಕು ಪತ್ನಿಯರನ್ನು ಬೇಕಿದ್ದರೂ ಹೊಂದಿರಬಹುದು. ಬಹುಪತ್ನಿತ್ವವನ್ನು ಕುರಿತು ಚರ್ಚಿಸುವ ಸಾರಾ ಅವರ ಕೃತಿ **ಸುಳಿಯಲ್ಲಿ ಸಿಕ್ಕವರು.** ಇದರಲ್ಲಿ ಮಮ್ಮೂಟಿ ಹಾಜಿ ಮೊದಲ ಹೆಂಡತಿ 'ರುಖಿಯಾ' ಜೊತೆಗೆ, ಎರಡನೆಯ ನಿಖಾವಾಗಿ ಫರೀದಾಳ ಜೊತೆ ಸಂಸಾರ ನಡೆಸುತ್ತಾನೆ. ಧರ್ಮದ ವಿರೋಧ ಇಲ್ಲದಿರುವುದರಿಂದ ಸಮಾಜದ ವಿರೋಧದ ಪ್ರಶ್ನೆ ಏಳುವುದಿಲ್ಲ. ರುಖಿಯಾಳ ನೋವಿಗೆ, ಅವಳ ಮನ ಪತಿಮಾಡಿದ ವಂಚನೆಯನ್ನು ಸ್ವೀಕರಿಸುವ ರೀತಿಗೆ ಮಮ್ಮದ್ ಹಾಜಿಯ ತಾಯಿಯ ಪ್ರತಿಕ್ರಿಯೆ ಉತ್ತರವಾಗುತ್ತದೆ.

> "ನೀನ್ಯಾಕೆ ಅಳುತ್ತಿ? ಅವನು ನಿನಗೇನಾದರೂ ಕಮ್ಮಿ ಮಾಡಿದ್ದಾನಾ? ಇಲ್ಲ ನಿನ್ನನ್ನು ಹೊರ ಹಾಕಿದ್ದಾನಾ? ಗಂಡಸು ಒಂದಲ್ಲ ನಾಲ್ಕು ಮದುವೆಮಾಡಿಕೊಳ್ಳಬಹುದೂಂತ ಶಾಸ್ತ್ರವೇ ಹೇಳುವುದಿಲ್ಲವಾ? ಈ ಮನೆಗೆ ಬಂದ ಅತಿಥಿಗಳೊಡನೆ ಮಾತನಾಡಲು ಅಂತಹ ಹೆಂಗಸೊಬ್ಬಳು ಬೇಕು. ನಮ್ಮಂತ ಹಳ್ಳಿ ಮುಕ್ಕಗಳಿಗೇನು ತಿಳಿಯುತ್ತದೆ? ಅದಾದರೆ

ಬೊಂಬಾಯಿಯ ಹೆಣ್ಣು ಯಾರನ್ನು ಹೇಗೆ ಸ್ವಾಗತಿಸಬೇಕು, ಯಾರೊಡನೆ ಏನು ಮಾತಾಡಬೇಕೂಂತ ಅವಳಿಗೆ ಚೆನ್ನಾಗಿ ಗೊತ್ತಿರುತ್ತದೆ. ದೊಡ್ಡ ಆಫೀಸರುಗಳ ಹೆಂಡತಿಯರು ಬಂದರೆ ಅವರೊಡನೆ ಮಾತನಾಡುವುದು ಯಾರು? ನೀನಾ ಅಥವಾ ನಾನಾ? ಸುಮ್ಮನಿರು ಈಗ ಏನೂ ಆಗಿಲ್ಲ." (ಸಾರಾ ಅಬೂಬಕ್ಕರ್ : ೧೯೯೪ ;೪೮)

ನಿರ್ದಿಷ್ಟವಾಗಿ ಇಸ್ಲಾಂ ಸಮುದಾಯದೊಳಗೆ ಪುರುಷ ಆತನ ಅನುಕೂಲದ ಸಾಧನವಾಗಿ ಹೆಣ್ಣನ್ನು ನೋಡುವ ದೃಷ್ಟಿಕೋನದಲ್ಲೇ ಆತನಿಂದ ರಚಿತಗೊಂಡ ಸಮಾಜವೂ ನೋಡುತ್ತದೆ. ಇಲ್ಲಿ ಸ್ತ್ರೀಯರು ಸ್ತ್ರೀಯರ ಶೋಷಣೆಗೆ ಕಾರಣರಾಗುತ್ತಾರೆ ಎನ್ನುವ 'ದ್ವಂದ್ವ'ಕ್ಕೆ ಎಡೆ ಇಲ್ಲ. ಪುರುಷ ಜನ್ಯ ಸಮಾಜದ ಪರಂಪರಾಗತ ಧೋರಣೆಯನ್ನು ಮೈಗೂಡಿಸಿಕೊಂಡು ಬೆಳೆದ ಸ್ತ್ರೀಯರಿಗೆ ಕೂಡ ಮುಖ್ಯವಾಗುವುದು ಹೊರಗೆ ದುಡಿಯುವ ಪುರುಷನ ಇಷ್ಟಾನಿಷ್ಟಗಳೇ ವಿನಾ ಮನೆಯೊಳಗೆ, ಪರದೆಯೊಳಗೆ ಬದುಕುವ ಸ್ತ್ರೀಯರ ಮನಸ್ಸಲ್ಲ. ಒಂದರ್ಥದಲ್ಲಿ ಇಂತಹ ಬದುಕನ್ನು ಅನುಭವಿಸುವ ಸ್ತ್ರೀಯರಿಗೆ ಮನಸ್ಸಿದೆ. ಅದೂ ಕೂಡ ಪುರುಷನಂತೆ ಆಲೋಚಿಸಬಲ್ಲದು, ತುಡಿಯಬಲ್ಲುದು ಎಂಬ ನೆಲೆಯಿಂದ ನೋಡುವ 'ಸಂವಹನ'ವನ್ನು ಯಾವ ಕಾಲಕ್ಕೂ ನಡೆಸದೇ ಇರುವಷ್ಟು ಆ ಸಮಾಜವು ಧಾರ್ಮಿಕವಾಗಿರುವಂಥದ್ದು. ಇಂತಹ ಸ್ಥಿತಿಯಲ್ಲಿ ಸ್ತ್ರೀಯರ ಅಸಹನೆ, ಪ್ರತಿರೋಧವೇನಿದ್ದರೂ ಒಂದೆರಡು ದಿನ ಅತ್ತು, ಉಪವಾಸಬಿದ್ದು 'ಸ್ವದಂಡನೆ'ಯಲ್ಲಿ ತಣಿಯುವಂಥದ್ದು. ಇದರ ವಾಸ್ತವ ಚಿತ್ರಣವನ್ನು ಸೆರೆಹಿಡಿಯುವ ಪ್ರಯತ್ನವಷ್ಟೇ ಸಾರಾ ಅವರ ಕೃತಿಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ.

'ನಿಕಾಹ'ದ ಜೊತೆಗೆ ತಳುಕು ಹಾಕಿಕೊಂಡ, ಅಥವಾ ಅದರೊಂದಿಗೆ ವಿಲೀನವಾಗಿರುವ ಕಾನೂನಿನ ಪರಿಧಿಯೊಳಗಿನ ಮತ್ತೊಂದು ಅಂಶ 'ತಲಾಖ್'. ಒಂದೇ ಬಾರಿ ಮೂರು 'ತಲಾಖ್' ನೀಡುವುದು ನಿಯಮ ಬಾಹಿರವೆಂದು ಖುರ್‌ಆನ್ ಉಲ್ಲೇಖವಿದ್ದರೂ, ಇಂದಿನ ತಲಾಖ್ ಪದ್ಧತಿಯಲ್ಲಿ ಒಂದೇ ಬಾರಿ ಮೂರು ತಲಾಖ್ ನೀಡಿ ಬಿಡುಗಡೆಗೊಳಿಸುವುದು ನಡೆಯುತ್ತಿದೆ. ಧರ್ಮ ಮಾನ್ಯ ಮಾಡಿರುವ 'ತಲಾಖಿ'ನ ಉದ್ದೇಶಗಳನ್ನು ಪುರುಷರು ತಮಗೆ ಬೇಕಾದಂತೆ ಬದಲಾಯಿಸುವ 'ಪರಮಾವಧಿ' ಸಾಧ್ಯತೆಗಳನ್ನು ಮತ್ತು ಇದರಿಂದ ನಿರ್ನಾಮಗೊಳ್ಳುವ ಸ್ತ್ರೀಯರ ಬದುಕನ್ನು ಪರಿಶೋಧಿಸುವ ಪ್ರಯತ್ನವನ್ನು **ಚಂದ್ರಗಿರಿಯ ತೀರದಲ್ಲಿ, ವಜ್ರಗಳು, ಪ್ರವಾಹ ಸುಳಿ** ಈ ಕೃತಿಗಳು ಮಾಡಿವೆ. ಇಲ್ಲಿ'ತಲಾಖಿ'ನ ಸಾಧ್ಯತೆ ಮತ್ತು ಆತ್ಯಂತಿಕ ಪರಿಣಾಮಗಳನ್ನು ಎರಡು ರೀತಿಯಲ್ಲಿ ಗುರುತಿಸಬಹುದು.

೧) ಪುರುಷರ 'ಸ್ವಾರ್ಥ ಮೂಲ ನೀತಿ ತತ್ತ್ವ' ಗಳ ಕಾರಣಗಳಿಂದಾಗಿ ಘಟಿಸುವ 'ತಲಾಖ್'.

೨) ಅಜ್ಞಾನ ಮತ್ತು ಪ್ರಜ್ಞೆಯ ಮಟ್ಟಕ್ಕಿಂತ ಕೆಳಗಣ (Subiminal) ತೀರ್ಮಾನಗಳಿಂದ ಕಾರ್ಯಗತಗೊಳ್ಳುವ ತಲಾಖ್.

**ಚಂದ್ರಗಿರಿಯ ತೀರದಲ್ಲಿ** ಕೃತಿಯಲ್ಲಿ ತಲಾಖಿಗೆ ರಶೀದ್ ಮತ್ತು ಮಹಮದ್‌ಖಾನ್ ಇವರ ಕಾರಣಗಳು ಬೇರೆ ಬೇರೆ. ತನ್ನ ಮಾವನ 'ಅನುಚಿತ' ವರ್ತನೆಯಿಂದ ತೀವ್ರವಾಗಿ ಅವಮಾನನಾದೆನೆಂಬ ಭ್ರಮೆಗೆಬಿದ್ದ ರಶೀದ್ ಮಾವನ ಮೇಲಿನ 'ಪ್ರತಿಕಾರ'ವೆಂಬಂತೆ ಪ್ರೀತಿಸುವ ಹೆಂಡತಿ ನಾದಿರಾಳಿಗೆ ತಲಾಕ್ ನೀಡಿದರೆ, ಮಹಮದ್‌ಖಾನ್ ಅಳಿಯ ಎರಡನೆಯ ಮಗಳ ವಿವಾಹಕ್ಕೆ ಸಹಾಯ ಮಾಡಲಿಲ್ಲ. ಅಲ್ಲದೆ, ಎರಡನೇ ಮಗಳು ವಿವಾಹವಾಗಿ ತೆರವಾಗುವ 'ಬೀಡಿಕಟ್ಟುವ' ಜಾಗ ಮೊದಲ ಮಗಳು ತುಂಬುವುದರಿಂದ, ಅಳಿಯನಿಗೆ

ಬುದ್ಧಿ ಕಲಿಸುವ ಮತ್ತು ತನ್ನ ಆರ್ಥಿಕ ಸ್ಥಿತಿಯನ್ನು ಸಮದೂಗಿಸಿಕೊಳ್ಳುವ ಈ ಎರಡು ನೆಲೆಗಳಿಂದ ಅಳಿಯನಲ್ಲಿ ತಲಾಖ್ ಕೊಡುವಂತೆ ಒತ್ತಾಯಿಸುತ್ತಾನೆ. ಈ ಇಬ್ಬರು ಪುರುಷರಿಗೂ ಮುಖ್ಯವಾಗುವುದು 'ಆತ್ಮಪ್ರತಿಷ್ಠೆ' (Egocintric)ಯ ಧೋರಣೆ.

**ವಜ್ರಗಳು, ಪ್ರವಾಹಸುಳಿ** ಈ ಕೃತಿಗಳಲ್ಲಿ ತಲಾಖ್‌ಗೆ ಕಾರಣ (ವಿದ್ಯಾವಂತ ಗಂಡು ಮತ್ತು ಶ್ರೀಮಂತ ಹೆಣ್ಣಿನ ನೆಲೆಯಿಂದ) ಭಿನ್ನ ಭಿನ್ನ. ವಜ್ರಗಳು ಕೃತಿಯ ಬದ್ರುದ್ದೀನ ವಿದ್ಯಾವಂತ ನಗರಜೀವಿ. ಅಷ್ಟೇನು ಸುಂದರಳಲ್ಲದ ಕಪ್ಪು ಹುಡುಗಿ ನಫೀಸ ಎಂಬ ಕಾರಣಕ್ಕೆ ಬದ್ರುದ್ದೀನ್ ಆಕೆಗೆ ತಲಾಖ್ ನೀಡುತ್ತಾನೆ. **ಸುಳಿಯಲ್ಲಿ ಸಿಕ್ಕವರು** ಕೃತಿಯಲ್ಲಿ ಶ್ರೀಮಂತ ಹೆಣ್ಣು ಹಾಜಿರಾ ಅಂತಸ್ತಿಗೆ ಯೋಗ್ಯ ಪತಿಯಲ್ಲವೆಂದು ಸರಕಾರಿ ಉದ್ಯೋಗಿ ಸುಸಂಸ್ಕೃತ ನಿಯಾಜ್‌ನೊಡನೆ ಬದುಕುವುದು ಅಸಾಧ್ಯವೆಂದು ತೀರ್ಮಾನಿಸಿ 'ತಲಾಕ್' ಅಪೇಕ್ಷಿಸುತ್ತಾಳೆ. ಮಮ್ಮದ್‌ಹಾಜಿ ಇಲ್ಲಿ ಮಗಳು, ತಾಯಿ, ಹೆಂಡತಿಯ ಮಾತಿಗೆ ಕಟ್ಟುಬಿದ್ದು ಅಳಿಯನಿಂದ 'ತಲಾಖ್' ಕೇಳುತ್ತಾನೆ. ಈ ಎರಡು 'ತಲಾಖ್' ಮಾದರಿಗಳು ಹೊರನೋಟಕ್ಕೆ ಭಿನ್ನ ಪಠ್ಯಗಳಂತೆ ಪ್ರಕಟವಾದರೂ, ಅಜ್ಞಾನ ಮತ್ತು ಪ್ರಜ್ಞೆಯ ಮಟ್ಟಕ್ಕಿಂತ ಕೆಳಗಿನ ತೀರ್ಮಾನಗಳು ವಿಚ್ಛೇದನಕ್ಕೆ ಕಾರಣವಾಗುವ ರೀತಿಗಳನ್ನು ನಿರೂಪಿಸುತ್ತವೆ. 'ತಲಾಖ್'ನಂಥಹ ಪ್ರಕ್ರಿಯೆಯಲ್ಲಿ ಎಲ್ಲ ಸಾಧ್ಯತೆಗಳಿಂದಲೂ ಮೊದಲು ಬಲಿಯಾಗುವ ಮತ್ತು ಏಕಮಾತ್ರ ಅನುಭವಿಯಾಗುವ ಜೀವಿ ಮಹಿಳೆ. ಇದರಲ್ಲಿ ಆರ್ಥಿಕ ಭದ್ರತೆಯಿಲ್ಲದ, ಅಕ್ಷರ ಜ್ಞಾನವಿಲ್ಲದ ನಾದಿರಾ, ನಫೀಸಾ, ಹಾಜಿರಾರಂತಹ ಸ್ತ್ರೀಯರಿಗೆ 'ಮರುಮದುವೆ' ಏಕಮಾತ್ರ ಪರಿಹಾರವಾಗಿ ಕಂಡು ಬರುತ್ತದೆ. ಮರುವಿವಾಹದ ಸಾಧ್ಯತೆಗಳ ಮೂರುಮಾದರಿಗಳು **ಚಂದ್ರಗಿರಿಯ ತೀರದಲ್ಲಿ, ವಜ್ರಗಳು, ಸುಳಿಯಲ್ಲಿ ಸಿಕ್ಕವರು** ಕೃತಿಗಳಲ್ಲಿ ನಿರೂಪಿತಗೊಂಡಿವೆ. **ಚಂದ್ರಗಿರಿಯ ತೀರದಲ್ಲಿ** ಪಠ್ಯದೊಳಗೆ ರಶೀದನಿಂದ 'ತಲಾಖ್' ಪಡೆದ ನಾದಿರಾ ಪ್ರೀತಿಸುವ ಅತ್ತೆ, ಗಂಡನನ್ನು ತೊರೆದು ತಂದೆಯ ದರ್ಪದ ಮುಂದೆ ಸಂಪೂರ್ಣವಾಗಿ ಮೌನಳಾಗುತ್ತಾಳೆ. ಮಹಮದ್‌ಖಾನ್ ಮಾಡುವ ಎರಡನೆಯ ಶ್ರೀಮಂತ ವಯಸ್ಕ ವರನೊಡನೆ ಮದುವೆಯ ಪ್ರಯತ್ನವನ್ನು ಖಡಾಖಂಡಿತವಾಗಿ ನಿರಾಕರಿಸುತ್ತಾಳೆ. ಕೊನೆಗೆ ಗಂಡನನ್ನೆ ಎರಡನೆ ವಿವಾಹವಾಗುವ ಪ್ರಸ್ತಾಪ ಬಂದಾಗ ಒಪ್ಪಿಕೊಳ್ಳುವ ಅವಳಲ್ಲಿ ಇರುವುದು ಗಂಡ ಮತ್ತು ಮಗನ ಮೇಲಿನ ಪ್ರಖರವಾದ ಪ್ರೇಮ ಮಾತ್ರ. ಇದನ್ನು ಸಾಧಿಸುವಲ್ಲಿ ಮತ್ತೋರ್ವ ಗಂಡಿನೊಡನೆ ವಿವಾಹವಾಗಿ ಒಂದು ರಾತ್ರಿ ಕಳೆಯುವ ನಿರ್ಣಾಯಕ ಸನ್ನಿವೇಶದಲ್ಲಿ ಮಾತ್ರ ನಾದಿರಾ 'ತನ್ನೊಳಗಿನ ಹೆಣ್ಣಿಗೆ' ಮುಖಾಮುಖಿಗೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಪುರುಷ ನಿರ್ಮಿತ ಧರ್ಮ, ಮತ್ತು ವಿಧಿವಿಧಾನಗಳೊಂದಿಗೆ 'ಅವಳೊಳಗಿನ ಹೆಣ್ಣಿಗೆ' ಅನುಸಂಧಾನ ಸಾಧ್ಯವಾಗದೆ ಹೋಗುತ್ತದೆ. ನಾದಿರಾ 'ಮಸೀದಿ'ಯಲ್ಲಿ 'ಆತ್ಮ'ಕಳೆದುಕೊಳ್ಳುತ್ತಾಳೆ. ಇಸ್ಲಾಂ ಸಂಸ್ಕೃತಿಯಲ್ಲಿ ಸ್ತ್ರೀಯರಿಗೆ ದೇಹದೊಳಗೆ ಆತ್ಮವಿದೆ, ಅದಕ್ಕೂ 'ಸ್ವಗತ' ಸಾಧ್ಯವಾಗುತ್ತದೆ ಎನ್ನುವ ಪ್ರತಿಮೆಯ ಅನಾವರಣ ಈ ಕೃತಿಯಲ್ಲಿ ಸಾಧ್ಯವಾಗಿದೆ. ಇದು, 'ನಿಕಾಹ' ಮತ್ತು 'ತಲಾಕ್' ಎನ್ನುವ ಪುರುಷನ ಬದುಕಿನ 'ಚಲನೆ'ಗಳನ್ನು ಸ್ತ್ರೀಯರ ನೆಲೆಯಿಂದ ಮರುಮೌಲ್ಯ ಮಾಡುವ ಒತ್ತಾಯವನ್ನು ವಿಧಿಸುತ್ತದೆ.

**ವಜ್ರಗಳು, ಸುಳಿಯಲ್ಲಿ ಸಿಕ್ಕವರು** ಕೃತಿಯಲ್ಲಿ ಇಂತಹ ಯಾವುದೇ ಸಂಘರ್ಷದ ಸಾಧ್ಯತೆಗಳಿಲ್ಲವಾದರೂ ಜೀವನ ನಿರ್ವಹಣೆಯ ನೆಲೆಯಲ್ಲಿ ವೃದ್ಧನಾದ ರೋಗಿಯಾದ ಗಂಡನನ್ನು ವರಿಸುವ ಸ್ಥಿತಿ ನಫೀಸಳದ್ದಾದರೆ, ಶ್ರೀಮಂತ ಗಂಡನನ್ನು ಬಯಸುವ ಹಾಜಿರಾ ಭೂಗತ ಚಟುವಟಿಕೆಯಲ್ಲಿ ತೊಡಗಿದ

ಗಂಡನ್ನು ವಿವಾಹವಾಗಬೇಕಾಗುತ್ತದೆ. 'ನಿರ್ಧಾರ'ಗಳಿಂದ ಪಲ್ಲಟಗೊಳ್ಳುವ, ನಲುಗುವ ಜೀವನಕ್ಕೆ 'ವಿವಾಹ' ಮತ್ತು 'ತಲಾಖ್' ಹೇಗೆ ಕಾರಣಗಳಾಗುತ್ತವೆ ಎಂಬುದನ್ನು ಸಾರಾ ಅವರ ಕೃತಿಗಳು ಬಯಲುಗೊಳಿಸುತ್ತವೆ. ಅಂತರ್ಗತವಾಗಿ ಧರ್ಮದ ತಾತ್ವಿಕತೆಯನ್ನು ಭಿನ್ನ ಆಯಾಮದಿಂದ (ಸ್ತ್ರೀಯರ ನೆಲೆಯಿಂದ) ಮರುನಿರ್ವಚಿಸುವ ಪ್ರಯತ್ನ ಸಾರಾ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿವೆ.

ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹದ ಸ್ವರೂಪವನ್ನು ಈ ಕೆಳಗಿನಂತೆ ಕ್ರೋಢೀಕರಿಸಬಹುದು.

೧) ಕೆಳಜಾತಿ, ಕೆಳವರ್ಗ, ಅಲ್ಪಸಂಖ್ಯಾತ ವರ್ಗದ ಜನತೆಗೆ 'ವಿವಾಹ' ಮಾತ್ರ ಅವರ ಬದುಕಿನಲ್ಲಿ ಏಕೈಕ 'ನೆಮ್ಮದಿ' ನೀಡುವ ಘಟನೆಯಾಗಿ ಮಹತ್ವ ಪಡೆದಿರುವುದು.

೨) 'ವಿವಾಹ' ಮೂಲದ ಯಾವುದೇ ಸಮಸ್ಯೆಗಳಿರಲಿ ಅದು ಆರ್ಥಿಕತೆಗೆ ತಳುಕುಹಾಕಿಕೊಂಡಿರುವುದು.

೩) 'ವಿವಾಹ'ದ ನಿರ್ಣಯದಲ್ಲಿ, ಮದುವೆಯಾಗುವ ಹೆಣ್ಣಿಗೆ ಯಾವುದೇ ವಿಧದ ನಿಲುವುಗಳನ್ನು-ನಿರ್ಧಾರಗಳನ್ನು ಅಭಿವ್ಯಕ್ತಿಸಲು ಸಾಧ್ಯವಾಗದಿರುವುದು.

೪) ಸಮಾಜ ಎಲ್ಲಾ ಜನವರ್ಗದ ಸ್ತ್ರೀಯರಿಗೂ ಅನ್ವಯಿಸಿದಂತೆ, ದಲಿತ ಹೆಣ್ಣು, ಅಲ್ಪಸಂಖ್ಯಾತ ಸ್ತ್ರೀ ವಿವಾಹದೊಳಗೆ ಯಾವುದೇ ಬಗೆಯ ಚಹರೆಗಳಿಲ್ಲದೆ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ.

೫) ಇಲ್ಲಿನ ವಿವಾಹ ನಿರ್ಣಯದಲ್ಲಿ ಹೆಣ್ಣು ಅವಳಲ್ಲಿ ಅಂತರ್ಗತವಾಗಿರುವ ಅಭಿಪ್ರೇರಣೆಗಳನ್ನು ಇಚ್ಛೆಗಳನ್ನು, ಶಕ್ತಿ ಸಾಮರ್ಥ್ಯಗಳನ್ನು ಹಾಗೂ ಅಭಿರುಚಿಗಳನ್ನು ಅಭಿವ್ಯಕ್ತಪಡಿಸುವ ಯಾವುದೇ ಬಗೆಯ ಅವಕಾಶಗಳು ಇರುವುದಿಲ್ಲ.

೬) ಈ ಅರ್ಥದಲ್ಲಿ ವಿವಾಹ ಸ್ತ್ರೀಯರ ಜೀವನದಲ್ಲಿ 'ಪ್ರತಿಬಂಧಕ'ಗಳಾಗಿ ಮಾರ್ಪಟ್ಟಿರುವುದು ಕಂಡು ಬರುತ್ತದೆ.

೭) ಮೇಲ್ವರ್ಗ, ಮೇಲು ಜಾತಿಗಳಲ್ಲಿ ಗಂಭೀರ ಸಮಸ್ಯೆಯ ಸ್ವರೂಪವನ್ನು ಪಡೆದ ವಿವಾಹ ವಿಚ್ಛೇದನಗಳು ಕೆಳಜಾತಿ, ಕೆಳವರ್ಗ, ಅಲ್ಪಸಂಖ್ಯಾತ ವರ್ಗಗಳಲ್ಲಿ ಸಾಮಾಜಿಕವಾಗಿ ಸಮಸ್ಯೆಯಾಗಿ ಪರಿಣಮಿಸದಿರುವುದು. ಆದರೆ ವೈಯಕ್ತಿಕ ನೆಲೆಯಲ್ಲಿ ಇಂಥ ವ್ಯವಸ್ಥೆಯ ಒಳಗೆ ಕೂಡ ಸ್ತ್ರೀಯ ಜೀವನ ಸಂಕಷ್ಟಕ್ಕೆ ಒಳಗಾಗುತ್ತದೆ.

### ೪.೨.೨. ಮೊದಲ ಕಟ್ಟಿನ ಕಾದಂಬರಿಗಳು: ದಾಂಪತ್ಯದ ಸ್ವರೂಪ.

**ಗೀತಾ ನಾಗಭೂಷಣ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಳ್ಳುವ ದಾಂಪತ್ಯದ ಸ್ವರೂಪ:**

ದಾಂಪತ್ಯದ ಸ್ವರೂಪವು ಗೀತಾ ನಾಗಭೂಷಣ ಅವರ ಪಠ್ಯದಲ್ಲಿ ಎರಡು ಬಗೆಯಲ್ಲಿ ಪ್ರಕಟವಾಗಿದೆ.

೧. ಅರ್ಥಪೂರ್ಣ ದಾಂಪತ್ಯದ ಸಂಬಂಧ

೨. ಶಿಥಿಲ ದಾಂಪತ್ಯದ ಸಂಬಂಧ.

**ಅರ್ಥಪೂರ್ಣ ದಾಂಪತ್ಯದ ಸಂಬಂಧ** : ಗೀತಾ ನಾಗಭೂಷಣ ಅವರ ಕೃತಿಗಳಲ್ಲಿ ವ್ಯಕ್ತಿಗಳ ಬದುಕಿನಲ್ಲಿ ಬಡತನ, ಅದು ನುಂಗಿ ಹಾಕುವ ಸ್ತ್ರೀಯರ ಬದುಕು, ಪ್ರಧಾನ ನೆಲೆಯಲ್ಲಿ

ಚಿತ್ರಣಗೊಂಡಿದೆ. ದಾಂಪತ್ಯದಲ್ಲಿ ನೈಜ ಪ್ರೇಮ ಒಂದು ತಪಸ್ಸಿನಂತೆ. ವೈವಾಹಿಕ ಸಂಬಂಧದ ಪರಿಪೂರ್ಣತೆಯಲ್ಲಿ ಮಾತ್ರ ವಿವಾಹಕ್ಕೆ ಅರ್ಥ ಲಭಿಸುತ್ತದೆ ಎಂಬ ಅಂಶ ಕಲ್ಯಾಣಿ - ಬೆಳ್ಳಿಯರ ಬದುಕಿನಲ್ಲಿ ಸಾಧ್ಯವಾಗುತ್ತದೆ. **ಬದುಕು** ಕೃತಿ ನಿರೂಪಿಸುವ ಈ ಅರ್ಥವಂತಿಕೆಯ ಸಂಬಂಧದಲ್ಲಿ ಪ್ರೀತಿಗೆ ಮಾತ್ರ ಸ್ಥಾನ. ಕಲ್ಯಾಣಿ ಅರಿವಿಲ್ಲದೆ ಮಾಡಿದ ತಪ್ಪಿಗಾಗಿ ಜೈಲುವಾಸ ಅನುಭವಿಸಿ ಮರಳಿ ಬರುವವರೆಗೂ ಬೆಳ್ಳಿ ಕಾಯುತ್ತಾಳೆ. ಕಲ್ಯಾಣಿಯೊಂದಿಗಿನ ಪರಿಪೂರ್ಣತೆಯ ಆರು ವರ್ಷಗಳ ದಾಂಪತ್ಯ ಅವಳನ್ನು ಕಾಯಿಸುತ್ತದೆ. ಗೀತಾ ನಾಗಭೂಷಣ ಅವರ ಮೂರು ಕೃತಿಗಳಲ್ಲಿ ವೈವಾಹಿಕ ಸಂಬಂಧಗಳಲ್ಲಿ ಅರ್ಥಕಳೆದುಕೊಂಡ ಜೀವನ ಕೇವಲ ಸ್ತ್ರೀಯರದು. ಹೊರಗೆ ದುಡಿಯುವ ಪುರುಷರಿಗೆ ಇದರ ಬಗ್ಗೆ ನಿಷ್ಠೆ ಕಾಳಜಿಗಳಿಲ್ಲ. ಇದಕ್ಕೆ ಅಪವಾದದ ನಿದರ್ಶನ ಬದುಕು ಕೃತಿಯ ಮಾರ್ತಾಂಡನ ಚಿತ್ರಣದಲ್ಲಿದೆ. ಪ್ರೀತಿಯಿಂದ ಮೂರು ವರ್ಷ ಸಂಸಾರಮಾಡಿ ಹೆಂಡತಿ ಕಾಶಮ್ಮ ಹಳೆಯ ಪ್ರೇಮಿಯೊಂದಿಗೆ ಬದುಕುವ ತೀರ್ಮಾನ ಕೈಗೊಂಡಾಗ ಆತ ಸನ್ಯಾಸಿಯಾಗುತ್ತಾನೆ. ಆದರೂ ಕೊನೆಗಾಲದಲ್ಲಿ ಹೆಂಡತಿಯ ಊರಿಗೆ ಆಕೆಯನ್ನು ಕಾಣುವ ಇಚ್ಛೆಯಿಂದ ಬರುತ್ತಾನೆ. ತೋಟದಲ್ಲಿ ಕೆಲಸ ಮಾಡುತ್ತಿದ್ದ ಫತರೂನನ್ನು ಕಾಶಮ್ಮನ ಹತ್ತಿರ ಕಳುಹಿಸುತ್ತಾನೆ.

> "ಅವನ ಹಾಲತ್ತು ನೋಡಿದರೆ ಹೊಟ್ಯಾಗಿನ ಕಳ್ಳು ಕಿವುಚಿದಂಗಾಗ್ತದ. ನೀ ಈಗ ಬಂದು ಅವನಿಗೆ ಭೆಟ್ಟಿ ಆಗಬೇಕವ್ವಾ..... ನಿನ್ ಮಾರಿ ನೋಡಿ ಅಂವಾ ಹೊಂಟು ಹೋಗ್ತಾನಂತ..." (ಗೀತಾ ನಾಗಭೂಷಣ :೨೦೦೧; ೪೩೮)

ಎಂದು ಕೆಲಸದ ಆಳು ಫತರು, ಗಂಡ- ಹೆಂಡತಿಯರನ್ನು ಬೇಟಿ ಮಾಡಿಸಲು ಶ್ರಮಿಸಿ ಸಫಲನಾಗುತ್ತಾನೆ.

> "ಇದೆಂತಾ ರಿಣಾನೋ ತಮ್ಮ... ನಾ ಅವಂಗ ಬ್ಯಾಡ ಅಂತ ಎಡಗಾಲಿನಿಂದ ಒದ್ದು ಬಂದು ಈ ಸಾವ್ಕಾರನ ಮನಿ ಸೇರಿದ್ರೂ ಆ ಹುಚ್ಚ ಗೊಟ್ಟಿ ಮಾರ್ತಂಡ ನನಮ್ಯಾಲೇ ಜೀವಾ ಇಟ್ಕೊಂಡಾನಂದರ ಇದಕ್ಕೇನನಬೇಕು. ಯಾ ಜನ್ಮದ ರುಣಾ ತೀರಸಲಕತ್ಯಾನೋ ಮಾರಾಯ.... ಬರ್ತೀನಿ ಇರು" (ಗೀತಾನಾಗಭೂಷಣ: ೨೦೦೧ ; ೪೨೪)

ಎಂದು ಕಾಶಮ್ಮ ಅವಳ ಗಂಡನನ್ನು ನೋಡಲು ಒಪ್ಪಿಕೊಳ್ಳುತ್ತಾಳೆ.

> "ಕಾಶಮ್ಮ ಬಂದು ಗಂಡನ ಮುಂದೆ ನಿಂತಳು. ಮಾರ್ತಂಡ ಅವಳ ಮಾರಿ ನೋಡಿದನು. ಬರಗಾಲದ ಬಾವಿಯಂತಿದ್ದ ಅವನ ಕಣ್ಣುಗಳಲ್ಲಿ ಫಕ್ಕನೆ ಬೆಳಕು ಧಾವಿಸಿ ಬಂದಿತು. ಧನ್ಯತೆಯ ಭಾವ ಅವನ ಮಾರಿಯ ಮೇಲಾಡಿತು. ಒಣಗಿ ಸುಟ್ಟು ಕರಕಾದಂತಿದ್ದ ಅವನ ತುಟಿಗಳ ನಡುವೆ ಹಿಗ್ಗಿನ ಮುಗುಳ್ನಗೆ ಹಾದಿ ಬಂದಿತು. ಅವನ ಅವಸ್ಥೆ ನೋಡಿ ಕಾಶಮ್ಮ ಮಾರಿಗೆ ಸೆರಗಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅವನು ಅವಳ ಕೈಹಿಡಿದು ತನ್ನ ಹತ್ತಿರ ಕೂಡಿಸಿಕೊಂಡನು." (ಗೀತಾ ನಾಗಭೂಷಣ :೨೦೦೧; ೪೩೮)

ದಾಂಪತ್ಯ ಸಂಬಂಧದ ಹೃದಯಂಗಮ ಚಿತ್ರಣ ಇದು. ಮಾರ್ತಾಂಡ ಕೊನೆಗೂ ಹೆಂಡತಿ ಕಾಶಮ್ಮನ 'ಧ್ಯಾನ'ದಲ್ಲಿ ಜೀವ ಕಳೆದುಕೊಳ್ಳುತ್ತಾನೆ. ಗಂಡ - ಹೆಂಡತಿಯ ಸಂಬಂಧ ಎಲ್ಲ ಬಗೆಯ ಸಿದ್ಧಾಂತಗಳನ್ನು, ನಿಯಮಗಳನ್ನು, ಗಣಿತದ ಲೆಕ್ಕಾಚಾರಗಳನ್ನು ಮೀರಿನಿಲ್ಲುವಂಥದ್ದು ಎಂಬುದನ್ನು ಗೀತಾನಾಗಭೂಷಣ ಅವರ ಕೃತಿಗಳು ನಿರೂಪಿಸುತ್ತವೆ. ಹಳ್ಳಿಯ ಕೆಳವರ್ಗದ ಬದುಕಿನ ಕ್ರಮ ಇದನ್ನು ಅತಿಶಕ್ತವಾಗಿ ತೆರೆದಿಡುತ್ತವೆ.

ಕೆಳವರ್ಗದ ಜನತೆಯ ಬದುಕಿನಲ್ಲಿ ಪ್ರೀತಿ, ಪ್ರೇಮ, ಮನುಷ್ಯ ಸಂಬಂಧಕ್ಕೆ ಭಾವನಾತ್ಮಕ ಘನತೆ ಇದೆ. ಇದು ಅವರ ಬದುಕಿನಲ್ಲಿ ಬಡತನವಿದ್ದರೂ ವ್ಯಕ್ತಿಗಳು ಪರಸ್ಪರ ಅವಲಂಬಿತರಾಗಿ ಬದುಕುವಂತೆ ಮಾಡುತ್ತವೆ. ಒಂದರ್ಥದಲ್ಲಿ ಗೀತಾ ನಾಗಭೂಷಣ ಅವರು ಚಿತ್ರಿಸುವ ಅರ್ಥಪೂರ್ಣ ದಾಂಪತ್ಯದ ಸಂಬಂಧಕ್ಕೆ ಅಧ್ಯಾತ್ಮದ ಅರ್ಥಗಳಿವೆ.

ಉಳಿದ ಕಾದಂಬರಿಗಳ ಒಳಜಗತ್ತಿನಲ್ಲಿ ಅನುರೂಪವಾದ ವೈವಾಹಿಕ ಬದುಕನ್ನು ನಿರ್ವಹಿಸುವ ಜೋಡಿಗಳು ಇಲ್ಲವೇ ಇಲ್ಲ ಎಂದಲ್ಲ. **ನೀಲಗಂಗಾ** ಕೃತಿಯ ಮಲ್ಲೇಶಿ - ನೀಲಗಂಗಾ, **ಬದುಕು**ವಿನ ಜಮಾದಾರ ಮಲ್ಲಪ್ಪ - ಮಲ್ಲಪ್ಪ, ಶಾಣಮ್ಮ - ಹಾಲಪ್ಪ, ಕಲ್ಯಾಣಿ - ಬೆಳ್ಳಿ, ಫತರೂ - ನಜೀಮಾ (ಮಲ್ಲಪ್ಪ ಜಮಾದಾರನ ಸಾಕುಮಗ- ಸೊಸೆ) ಇವರದ್ದು ಒಂದರ್ಥದಲ್ಲಿ ಪರಸ್ಪರರನ್ನು ಅರಿತ ಅನುರೂಪದ ದಾಂಪತ್ಯ. ಆದರೆ ಹಳ್ಳಿಯ ಮೇಲ್ವರ್ಗದ ಪುರುಷರ ದಬ್ಬಾಳಿಕೆ, ದೌರ್ಜನ್ಯಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಪಕ್ಕಾಗಿ ಬಣ್ಣ ಕಳೆದುಕೊಂಡ ವೈವಾಹಿಕ ಬದುಕು ಇವರದು. **ನೀಲಗಂಗಾ** ಕೃತಿಯ ಎಲ್ಲ ಹೆಣ್ಣುಗಳು ಮೇಲ್ವರ್ಗದ ಗೌಡ, ಶಾನುಭೋಗ, ಹಾರುವ್ವಯ್ಯಂದಿರ ಕಾಮಕ್ಕೆ ಬಲಿಯಾದವರು.

> "ಹಳ್ಳಿಯ ಎಲ್ಲ ಬಡವರ ಎರೆ ಹೊಲಗಳು ಅವರ ಕಾಲಕೆಳಗೆ ಗಿರವಿ, ಹಳ್ಳಿಯ ಎಲ್ಲ ಚೆಲುವಿನ ಹೆಣ್ಣುಗಳು ಅವರ ಸೊಂಟದ ಕೆಳಗೆ ಅಡವು" (ಗೀತಾನಾಗಭೂಷಣ:೧೯೮೬; ೧೯)

ಎಂಬ ಪರಿಸ್ಥಿತಿ ಗೊತ್ತಿದ್ದೂ ಇರಲಾರದಂತೆ, ನೋಡಿಯೂ ನೋಡದವರಂತೆ ಕಣ್ಣು ತಪ್ಪಿಸಿ ಕೈ ಜೋಡಿಸಿ ತಾವೇ ತಪ್ಪು ಮಾಡಿದಂತೆ ತಲೆ ತಗ್ಗಿಸುವ ಹಿಂದುಳಿದ ಜಾತಿಯವರ ಕಾಲ ಅದು. ಅಲ್ಲಿ ಯಾರಿಗೂ ಮೇಲ್ವರ್ಗದವರ ಮುಂದೆ ನಿಂತು ಪ್ರಶ್ನಿಸುವ, ಧ್ವನಿ ಎತ್ತುವ ಧೈರ್ಯವಿರುತ್ತಿರಲಿಲ್ಲ. ಹೊಲೆಯರು, ಮಾದರು, ಸಮಗಾರರು, ಕಬ್ಬಲಿಗರು, ಕುರುಬರು, ಬೇಡರು ಈ ಜಾತಿಯ ಪುರುಷರು ಗೌಡ, ಕುಲಕರ್ಣಿ, ಸಾಹುಕಾರರೆಂದರೆ, ಸಾಷ್ಟಾಂಗ ಅಡ್ಡ ಬಿದ್ದು ನೆಲಕ್ಕೆ ಹಣೆ ತಿಕ್ಕುವ ಪುಕ್ಕಲು ವ್ಯಕ್ತಿತ್ವದವರಾಗಿ ಪಠ್ಯದೊಳಗೆ ನಿರೂಪಿತಗೊಳ್ಳುತ್ತಾರೆ. **ನೀಲಗಂಗಾ**ದಲ್ಲಿ ನಿರೂಪಿಸುವಂತೆ ಕೆಳವರ್ಗದವರ ಪ್ರತಿಭಟನೆಯ ಸ್ವರೂಪವೆಂದರೆ,

> "ಹೆಚ್ಚು ಕಡಿಮೆ ಎಂದರೆ ಹೆಂಡತಿಗೇ ನಾಲ್ಕು ಥಳಿಸಿ ಅವಳ ಬಾಳಗಂಟಿನಲ್ಲಿಯ ಅದೇ ಹಾರುವ ಕೊಟ್ಟ ಹಣ ಕಸಿದುಕೊಂಡು ಹೆಂಡದಂಗಡಿಗೆ ಹೋಗಿ ಕಂಠಪೂರ್ತಿ ಕುಡಿದು ಹಾಡುತ್ತ, ನಗುತ್ತ, ತೊದಲುತ್ತ, ಬೀಳುತ್ತ ಏಳುತ್ತ ಬರುವ ಮುಠ್ಠಾಳರು. ಕುಡಿತದ ಅಮಲಿನಲ್ಲಿ ತಮ್ಮದೆಯ ವ್ಯಥೆಯನ್ನು ಮರೆಯಲೆತ್ನಿಸುತ್ತಿದ್ದಿರಬಹುದೇ ಅವರು? " (ಗೀತಾನಾಗಭೂಷಣ : ೧೯೮೬ ;೨೫)

ಶೋಷಣೆಯ ಈ ಸ್ವರೂಪದಲ್ಲಿ ದಲಿತರೆಲ್ಲ ಮೂಕರು, ಕಿವುಡರು, ಕುರುಡರು, ಉಸಿರಾಡುವ ಕಲ್ಲಿನ ಮನುಷ್ಯರು, ಬರೀ ಶಿಲಾಮಾನವರು ಎಂದೆನಿಸಿಕೊಳ್ಳುತ್ತಾರೆ. **ಬದುಕು** ಕೃತಿಯಲ್ಲೂ ಇದೇ ನಿರೂಪಣೆಯ ಮತ್ತೊಂದು ಧ್ವನಿ ಇದೆ.

> "ಹೊಯಿಂದೂ ಈ ಮ್ಯಾಲಿನ ಜಾತಿ ಗಂಡಸರಿಗೆ ಕೆಳಜಾತಿ ಹೆಂಗಸರ ಮೈಯಾಗ ಮಾರ್‍ಯಾಗ ಅದೇನು ಚೆಲುವಿಕೆ ಕಾಣಸ್ತದೋ ನನಗಂತೂ ಬಗಿಹರ್‍ಯಾ ಮಾತಲ್ಲ ಬಿಡು. ಗೋಡಾ, ಕುಕ್ಕಣ್ಣಿ, ಶೆಟ್ಟಿ, ಸಾವ್ಕಾರಗೋಳೆಲ್ಲಾ ನಮ್ಮ ಕೆಳಗೇರಿ ಹೆಣ್ಣಂದ್ರ ಸಾಕು, ಬಾಯಿ ಬಾಯಿ

ಬಿಡ್ತಾವೆ. ಹಸಿ ಖಂಡಾ ಕಂಡ ನಾಯಿ ಹಂಗ ನಾಲಿಗಿ ನೀರ ಕಡಸ್ಗೋತ ಗುಡಸಲ್ದಾಗ ಬಂದು ಹರಕ ಚಾಪಿ ಮ್ಯಾಲ ಕೌದಿರ ಗಟ್ಯಾನ ಬಿದ್ದು ತೇಕ್ಯಾಡ್ತಾವ " (ಗೀತಾನಾಗಭೂಷಣ : ೨೦೦೧ ; ೨೯೯.)

ಮೇಲ್ವರ್ಗದ ಸ್ತ್ರೀಯರಿಗೆ ತಮ್ಮ ತಮ್ಮ ಗಂಡಂದಿರ ದೌರ್ಬಲ್ಯಗಳ ಅರಿವಿದೆ. ಅಲ್ಲದೆ, ಅವರ ಪರಾವಂಬನೆಯ ಅರಿವು ಕೂಡ ಅವರಿಗೆ ಇದೆ. ಇವು ಅವರ ಪರಿಸ್ಥಿತಿಯ ಒಳಗಿನ ಮಾತುಗಳಲ್ಲಿ ವ್ಯಕ್ತವಾಗುತ್ತದೆ. :

"ಆಯಿತ್ರವ್ವ..... ಅಲ್ಲ ಕಮಲಾ, ನಮ್ ಗಂಡಸರಿಗಿನೂ ಆ ಶೂದ್ರ ಹೆಣ್ಣಗೋಳೇ ಬೇಕಾಗ್ತವಲ್ಲ ಯಾಕ್ಕ ಅಂತ, ರಾಮಪ್ಪ ಹಂಗೇ ಮಾಡ್ದ. ಲಚ್ಚಿ ಉರುಲು ಹಾಕ್ಕೊಂಡ್ಳು, ಸಾವಕಾರನ ಕಾಲಾಗ ಮಲ್ಲೇಶಿ ಭಾಂವಿ ಬಿದ್ದು ಸತ್ತ. ನೀಲಗಂಗಾ ಅರೆಹುಚ್ಚಿ ಆದಳು. ಕುಲಕರ್ಣಿ ಅರೆ ಹೇಳಿ ಕೇಳಿ ಕಚ್ಚಿ ಹರಕು ಮನಶ್ಯಾ. ಹಾಗೂ ಹಾಡೇ ಹೊಲಗೇರಿ ಹೊಕ್ಕು ದುರ್ಗಿಗುಡ್ಲಿ ಸೇರ್ತಾನ ಛೇ, ತರೀರವ್ವಾ ಯಾಕೋ ನಮ್ ಗಂಡಸರ್ರೂ ಖಬರ ಹಾರ್ದು. ಕಮಲಾ ಬಾಯಿ ಕಿಸಕ್ಕನೆ ನಕ್ಕಳು. ಸುಂದ್ರಾಬಾಯಿ ಹತ್ತಿರ ಸರಿದು ಪಿಸು ಗುಟ್ಟುವಂತೆ ಹೇಳ ತೊಡಗಿದಳು. ಈ ಕೆಳಜಾತಿ ಹೆಂಗಸರ ಮೈಯಾಗ ಸೊಕ್ಕ ಭಾಳ ಇರ್ತದಂತ್ರಿ ಮಾವಸಿ ಗಂಡಸರಿಗೆ ಅದೇ ಬೇಕು ನೋಡ್ರಿ. ನಾವು ಎಷ್ಟು ಬೆಳ್ಳಗ, ಛಂದ ಇದ್ರೇನು. ಅವರ ಹಂಗ ಮೈ ಕಟ್ಟಿರಂಗಿಲ್ಲ...... ಹಾಂಗ್ಯಸದ್ದೀ....... ಇದ್ದರನೂ ಇರ್ಬೇಕೀಳು" (ಗೀತಾನಾಗಭೂಷಣ : ೧೯೮೭ ; ೬೦)

ಮೇಲ್ವರ್ಗದ ಪುರುಷರಿಂದ ದೊರೆಯುವ ಹಣ, ಒಡವೆ, ಸೀರೆ ಇವು ಬಡತನದೊಳಗೆ ನಲುಗುವ ಕೆಳಗೇರಿಗಳ ಹೆಂಗಸರು ಒಳಗಾಗುವ ಆಮಿಷಗಳಾಗಿರುತ್ತವೆ. ಇಂತಹ ಆಮಿಷಗಳಿಗೆ ಬಲಿಯಾಗದೆ ನೀಲಗಂಗಾ, ಲಚ್ಚಿಯಂಥ ಗಟ್ಟಿ ಹೆಣ್ಣುಗಳನ್ನು ಅವರ ಗಂಡಂದಿರ ಪ್ರಾಣ ತೆಗೆಯುವ ಬೆದರಿಕೆ ಒಡ್ಡಿ ಮೇಲ್ವರ್ಗದ ಪುರುಷರು ವಶಪಡಿಸಿಕೊಳ್ಳುವುದು ಶೋಷಣೆಯ ಅಮಾನವೀಯ ರೂಪವಾಗಿ ಪ್ರಕಟಗೊಳ್ಳುತ್ತದೆ. ಈ ಎರಡೂ ಸಾಧ್ಯತೆಗಳಲ್ಲಿ ಉನ್ನತ ವ್ಯವಸ್ಥೆಯೊಂದರ ದಬ್ಬಾಳಿಕೆ ಮತ್ತು ಅಧೀನ ವ್ಯವಸ್ಥೆಯೊಂದರ ದೌರ್ಜನ್ಯ ಅಡಗಿದೆ. ಆರ್ಥಿಕ ಪರಾವಲಂಬತನವೇ ಒಂದು ಶೋಷಣೆಯ ಸಾಧನವೂ ಆಗಿರುವ ಸ್ಥಿತಿಯ ಜ್ವಲಂತ ನಿದರ್ಶನಗಳು ಈ ಕೆಳಗೇರಿಗಳ ಶೋಷಿತ ಸ್ತ್ರೀಯರಾಗಿದ್ದಾರೆ. ಇವರ ಆರ್ಥಿಕ ಅಸಹಾಯಕತೆಯಲ್ಲೇ ತಮ್ಮ ದೇಹವನ್ನು ಲೈಂಗಿಕ ಶೋಷಣೆಗೆ ಗುರಿಪಡಿಸುವ ಸ್ಥಿತಿಯೂ ಕೂಡ ಸಾಂದರ್ಭಿಕವಾಗಿ ಗೀತಾ ನಾಗಭೂಷಣ ಅವರ ಪಠ್ಯದೊಳಗೆ ವ್ಯಕ್ತವಾಗುತ್ತದೆ. ಇದು ವೈವಾಹಿಕ ಬದುಕಿನ ಅರ್ಥ ಸಾಧ್ಯತೆಗಳನ್ನು ಕುಂಠಿತಗೊಳಿಸುತ್ತದೆ. ಮಾತ್ರವಲ್ಲ 'ಮರುಕಲ್ಪಿಸು'ವಂತೆ ಒತ್ತಾಯಿಸುತ್ತದೆ. ಶೋಷಕ- ಶೋಷಿತ ಈ ಎರಡು ವ್ಯವಸ್ಥೆಯ ಒಳಗೆ ವ್ಯಕ್ತವಾಗುವುದು ಸ್ತ್ರೀಯನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಬೇಕೆನ್ನುವ ಮತ್ತು ತಮಗಾಗಿ ಆಕೆಯ ಅಸ್ತಿತ್ವ ಎನ್ನುವ ಸ್ವಕೇಂದ್ರಿತ ಪ್ರತೀಕಗಳು. ಇದನ್ನು ಗೀತಾ ನಾಗಭೂಷಣ ಅವರ ಕಥನಗಳು ಶಕ್ತವಾಗಿ ಬಯಲುಗೊಳಿಸುತ್ತವೆ.

**ಶಿಥಿಲ ದಾಂಪತ್ಯದ ಸಂಬಂಧ :** ಗೀತಾ ನಾಗಭೂಷಣ ಅವರ ಕಾದಂಬರಿ ಪಠ್ಯಗಳಲ್ಲಿ ಮೇಲ್ವರ್ಗ ಮತ್ತು ಮಧ್ಯಮ ವರ್ಗಗಳಲ್ಲಿ ಕಾಣಿಸಿಕೊಳ್ಳುವ ಲಿಂಗತಾರತಮ್ಯತೆಯ ತೀವ್ರತೆ ಕೆಳವರ್ಗಗಳಲ್ಲಿ

ಪ್ರಕಟವಾಗುವುದಿಲ್ಲ ಎಂಬುದು ಹೊರನೋಟಕ್ಕೆ ವ್ಯಕ್ತವಾಗುವ ಅಂಶ. ವಾಸ್ತವದಲ್ಲಿ ಇದು ಭಾಗಶಃ ಸತ್ಯವಾಗಿ ಮಾತ್ರ ಕಾಣಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಗುಲಾಮಗಿರಿ ಜೀತ ವ್ಯವಸ್ಥೆಯ ಒಳಗೆ ಕೂಡ ಪುರುಷ ಪ್ರಧಾನ ಆಶಯಗಳು ಪ್ರಬಲವಾಗಿ ಕೆಲಸಮಾಡುತ್ತಿರುವುದು. ಇದು ಹೆಣ್ಣು ಮಕ್ಕಳನ್ನು ಹೆಡೆಯುವ, ಅವರನ್ನು ಬೆಳೆಸುವ ಕ್ರಮದಲ್ಲಿ ಆ ಸಮಾಜದ ಒಳಗೂ ಕಂಡುಬರುತ್ತದೆ. ಇದನ್ನು ಗೀತಾ ನಾಗಭೂಷಣ ಅವರ ಕಾದಂಬರಿ ಕಥನಗಳು ಶಕ್ತವಾಗಿ ಬಿಂಬಿಸುತ್ತವೆ. ದಾಂಪತ್ಯದ ಸ್ವರೂಪದ ವಿಶ್ಲೇಷಣೆಯನ್ನು ಕೈಗೆತ್ತಿಕೊಂಡಾಗ, ಸ್ತ್ರೀ ಯಾವ ಪರಿಸರ, ಪರಿಸ್ಥಿತಿ, ಸಂದರ್ಭದ ಚೌಕಟ್ಟಿನಲ್ಲಿರಲಿ ಪುರುಷನಿಂದ ವಂಚನೆಗೆ ಒಳಗಾಗುವ ವಿನ್ಯಾಸ ಮೃಗೀಯವಾದದ್ದಾಗಿ ಕಂಡುಬರುತ್ತದೆ. ಅದು ಅಮಾನವೀಯವಾದದ್ದು ಎನ್ನುವುದು ಮನವರಿಕೆಯಾಗುತ್ತದೆ. **ಆಸರೆಯಲ್ಲಿ** ತಾಯವ್ವ ಇಬ್ಬರು ಗಂಡಂದಿರೊಂದಿಗೆ ಬಾಳ್ವೆ ನಡೆಸಿದವಳು. ಇಬ್ಬರ ದೌರ್ಬಲ್ಯವೂ ಹೆಂಡ ಮತ್ತು ಹೆಣ್ಣು. ಕುಡಿತ, ಜೋಗತಿಯರ ಸಹವಾಸದಿಂದ ಈಸೂರ ಮತ್ತು ಗೋಳಪ್ಪ ಇಬ್ಬರೂ ತಾಯವ್ವನನ್ನು ನೆಮ್ಮದಿಯಿಂದ ಬಾಳಿಸಲಾರದೆ ಹೋಗುತ್ತಾರೆ. ಅವಳ ಮನಸ್ಸಿನ ಬೇಗುದಿ ವ್ಯಕ್ತವಾಗುವ ಬಗೆ ಹೀಗಿದೆ:

> "ಅಂದು ರಾತ್ರಿಯಲ್ಲಿ ಗೋಳಪ್ಪನ ಮಗ್ಗುಲಲ್ಲಿ ಮಲಗಿದ್ದಾಗ ತಾಯವ್ವನ ಮನಸ್ಸು ಧಡಕ್ಕನೆ ತನ್ನ ಮದವಿಗಂಡನನ್ನು ನೆನೆಸಿ ಕಣ್ಣೀರು ಹರಿಸಿತು. ಖರೇವಂದ್ರ ಅವಳಿಗೆ ಈಸೂರನ ಮೇಲೆ ಬಹಳ ಪ್ರೀತಿಯಿತ್ತು, ಪ್ರೇಮವಿತ್ತು. ಆದರೆ ಈಸೂರ ಕಿವುಡಾಗಿ, ಕುರುಡಾಗಿ, ಕಲ್ಲಾಗಿ ನಿಂತು ಕೊರಳಲ್ಲಿಯ ತಾಳಿಯನ್ನೇ ಹರಿದುಕೊಂಡು ಬಿಟ್ಟು ಹೊರತಳ್ಳಿದ." (ಗೀತಾನಾಗಭೂಷಣ : ೧೯೮೮ ; ೬೬.)

ಎರಡನೆಯ ಗಂಡನೊಂದಿಗೆ ತಾಯವ್ವನ ಉಳಿದ ಜೀವನ ಅವನ ವ್ಯಕ್ತಿತ್ವವನ್ನು ಹೊಂದಿಕೊಂಡದ್ದು. ಗೋಳಪ್ಪ ಮೂರು ಸಲ ಹಣ ಕದ್ದು, ಹೊಲ ಮಾರಿ ಬೊಂಬಾಯಿಗೆ ಹೋಗಿ ಮಜಾ ಮಾಡಿ ವಾಪಸ್ ಬಂದವನು. ಚಾಕು ಚೂರಿಗಳ ತರಬೇತಿಯೂ ಅವನಿಗಿತ್ತು. ಆದರೆ ಅಲ್ಲಿ 'ದಂದೆ' ಮಾಡಲಾಗದೆ ಮೈ ತುಂಬಾ ಚಾಕುಗಳ ಗಾಯ ಮಾಡಿಕೊಂಡು ಹಿಂತಿರುಗಿ ಬಂದಿದ್ದ. ನಡುವೆ ಒಂದು ವರ್ಷ ಜೈಲಿನಲ್ಲಿ ಇದ್ದಾಗಲೇ ಆತನ ಮೊದಲ ಹೆಂಡತಿ ಸಾಬವ್ವ ಗೆಳೆಯ ಭೀಮಶ್ಯಾನೊಂದಿಗೆ ಓಡಿಹೋಗಿ ಬೊಂಬಾಯಿ ದಾಟಿ ನಾಸಿಕ್ ಸೇರಿದ್ದಳು. ಎರಡನೆಯ ಹೆಂಡತಿ ಮಾಳಿ ಗಂಡನ 'ಕಾಟ' 'ಹಿಂಸೆ' ತಾಳಲಾಗದೆ ಅವನ ಹೊಡೆತಗಳಿಗೆ ಹೆದರಿ ಚೊಚ್ಚಲು ಬಸಿರು ಹೊತ್ತೇ ಒಂದು ರಾತ್ರಿ ಬಾವಿಗೆ ಬಿದ್ದು ಸತ್ತಿದ್ದಳು. ಹೀಗಾಗಿ ಗೋಳಪ್ಪನ ಮೂರನೇ ಹೆಂಡತಿ ತಾಯವ್ವನ ಸ್ಥಿತಿ 'ಬಾವಿಯಿಂದ ಜಾರಿ ಮಡುವಿ'ಗೆ ಬಿದ್ದಹಾಗಿತ್ತು. ಪುರುಷನ ವ್ಯವಸ್ಥೆಗೊಳಪಟ್ಟ (ಕೆಳವರ್ಗದ) ಸಮಾಜದ ರೀತಿ ರಿವಾಜುಗಳನ್ನು ಸ್ತ್ರೀಯರು ಪ್ರಶ್ನಿಸುವುದಂತೂ ಕೆಳವರ್ಗದಲ್ಲಿ ಕೂಡ ಸಾಧ್ಯವಿರಲಿಲ್ಲ. ಅಲ್ಲಿ ಒಬ್ಬನ ಆಶ್ರಯ ತಪ್ಪಿದರೆ ಮತ್ತೊಬ್ಬನ ನೆರಳಿಗೆ ಸರಿಯುವುದು ಹೆಣ್ಣಿನ ಜೀವನಕ್ಕೆ ಅನಿವಾರ್ಯವಾಗಿತ್ತು. ಹಳ್ಳಿಯಲ್ಲಿ ಗೋಳಪ್ಪನ ಮಗಳಾಗಿ ತನ್ನ ಆಯುಷ್ಯದ ಕಾಲು ಭಾಗವನ್ನು ಕಳೆದಿದ್ದ ತಾಳವ್ವ ಕಾಡ್ಯಾನನ್ನು ವಿವಾಹವಾಗಿ ಬೊಂಬಾಯಿಯ ಬಾಂದ್ರಾ ಝೋಪಡ ಪಟ್ಟಿಯ ಒಂದು ಗುಡಿಸಲಲ್ಲಿ ನಡೆಸುವ ದಾಂಪತ್ಯದಲ್ಲಿ ಕೂಡ ಶೋಷಣೆಯ ಮತ್ತೊಂದು ಮುಖ ಪ್ರಕಟವಾಗುತ್ತದೆ. ಬಾಂದ್ರಾ ಝೋಪಡ ಪಟ್ಟಿಯ ಗುಡಿಸಲುಗಳ ಯಾವ ಹೆಣ್ಣುಗಳ ದಾಂಪತ್ಯವು ಕೂಡ ಸುಖಕರವಾಗಿಲ್ಲ, ನೈಜವಾಗಿಲ್ಲ. ಅಲ್ಲಿನ ಗಂಡಸರು ಕಳವು, ಕಿಸೆ ಕತ್ತರಿಸುವಿಕೆ, ಚಾಕು ಚೂರಿಗಳ ಆಟ, ಗೂಂಡಾಗಿರಿ, ತಲೆ ಹಿಡುಕುತನ, ಹೆಂಗಸರ ಮಾರಾಟ, ಅಕ್ರಮವಾಗಿ ಅಫೀಮು, ಗಾಂಜಾ ಸಾಗಾಣಿಕೆ,

ಕಾಳದಂದೆ ಈ ಮುಂತಾದ ಕೆಲಸಗಳಲ್ಲಿ ತೊಡಗಿದವರು. ಗೀತಾ ನಾಗಭೂಷಣ ಅವರ ಕಥನಗಳಲ್ಲಿ ಇಂತಹ ಗಂಡಸರೊಂದಿಗೆ ಬದುಕುವ ಅನಕ್ಷರಸ್ಥ, ತಿಳುವಳಿಕೆ ಹೀನ ಹೆಂಗಸರಲ್ಲೂ 'ದಾಂಪತ್ಯ'ದ ಬಗ್ಗೆ ಸ್ಪಷ್ಟ ಕಲ್ಪನೆಗಳೇ ಕಾಣಸಿಗುವುದಿಲ್ಲ. ಗಂಡಸರನ್ನು 'ತಿದ್ದು'ವ ಸರಿದಾರಿಗೆ ತರುವ ಪ್ರಯತ್ನಗಳ ಸಣ್ಣ ಇರುವಿಕೆಗಳು ಕೂಡ ಇವರಲ್ಲಿ ವ್ಯಕ್ತವಾಗುವುದಿಲ್ಲ. ಹೆಂಗಸರೂ ಸಹ ಗಂಡಸರ ಕಳ್ಳ ಕೆಲಸಗಳಲ್ಲಿ ಎಳ್ಳಷ್ಟೂ ಹೆದರದೆ, ಅತ್ಯಂತ ಸಹಜವಾಗಿ ಸೇರಿ ಹೋಗುವುದು ಕಂಡು ಬರುತ್ತದೆ. ಇದಕ್ಕೆ ಕಾರಣ, ಬಡತನ, ಅರಿವಿನ ಕೊರತೆ ಮತ್ತು ಗಂಡಂದಿರ ಹೊಡೆತಗಳ ಭೀತಿ. **ಆಸರೆ, ನೀಲಗಂಗಾ, ಬದುಕು** ಈ ಕೃತಿಗಳು ಒಟ್ಟು ರಚನೆಯಲ್ಲಿ ವಿಫಲತೆಯ, ಅಪರಿಪೂರ್ಣ ದಾಂಪತ್ಯದ ವಿಭಿನ್ನ ವ್ಯಾಖ್ಯಾನಗಳು. ದೇಹಕ್ಕಷ್ಟೇ ಸೀಮಿತಗೊಳಿಸಿ ಮಹಿಳೆಯ ಜೊತೆ ಬಾಳ್ವೆ ನಡೆಸುವ ಪುರುಷನಿಗೆ, ಮನೆ-ದಾಂಪತ್ಯ-ಕುಟುಂಬವೆಂಬುದು ಬೇಕಾಗುವುದು 'ಸಾಂಸ್ಕೃತಿಕ ರಾಜಕಾರಣ'ದ ನೆಲೆಯಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಲು ಇರುವ ಪ್ರಾಥಮಿಕ ಘಟಕವಾಗಿ. ಇದಕ್ಕೆ ಅಪವಾದವೆಂಬಂಥ ನಿದರ್ಶನಗಳು ಪಠ್ಯದೊಳಗೆ ಅತಿ ವಿರಳ. ಮೂರು ಕಾದಂಬರಿಗಳಲ್ಲಿನ ಒಟ್ಟು ಪರಿಶೀಲನೆಯಲ್ಲಿ ದಾಂಪತ್ಯವೆಂದರೆ, ಬೆಳಗಿನಿಂದಲೇ ನಿಶೆ ಏರಿಸಿಕೊಂಡು ರಾತ್ರಿ ಮೈಸುಖ ಪಡೆದು, ಮಕ್ಕಳನ್ನು ಹುಟ್ಟಿಸಿ ಹರೆಯ ಕಳೆದುಕೊಳ್ಳುವ ಒಂದು ಪ್ರಕ್ರಿಯೆ ಮಾತ್ರ ಎಂದೆನಿಸಿಬಿಡುತ್ತದೆ.

**ಸಾರಾ ಅಬೂಬಕ್ಕರ್ ಅವರ ಕೃತಿಗಳಲ್ಲಿ ನಿರೂಪಿತಗೊಂಡಿರುವ ದಾಂಪತ್ಯದ ಸ್ವರೂಪ:**

ಮುಸ್ಲಿಂ ಮಾಪಿಳ್ಳೆ ಸಮುದಾಯದ ವೈವಾಹಿಕ ಸ್ವರೂಪ ಸಂಕೀರ್ಣವಾದರೂ, ಅದು ಸರಳರೇಖಾತ್ಮಕ. ವಿವಾಹ ಕುಟುಂಬದ ರಚನಾ ತಳಹದಿಯೇ ಪುರುಷ ಕೇಂದ್ರಿತವಾಗಿರುವುದರಿಂದ ವೈವಾಹಿಕ ಸ್ವರೂಪ ವಿನ್ಯಾಸವು ಕೂಡ ಪುರುಷ ನಿಷ್ಠವಾಗಿದೆ. ಇದರಲ್ಲಿ ಸ್ತ್ರೀ ಪುರುಷನಿಗೆ ಅನುಗುಣವಾಗಿ, ಪೂರಕವಾಗಿ ರೂಪುತಾಳುವ ಆತನ 'ಸ್ಥಿರ ಆಸ್ತಿ'. ಹೀಗೆ ಪರಿಭಾವಿಸುವಾಗಲೂ ಅದು ಧಾರ್ಮಿಕತೆಗೆ ಅಧೀನವಾಗಿರುತ್ತದೆ ಎಂಬುದು ಗಮನಾರ್ಹ. ದಾಂಪತ್ಯದ ಸ್ವರೂಪ ಧಾತುಗಳು ಇಲ್ಲಿ ಷರಿಯತ್ ಕಾನೂನಿನ ಅಧೀನವಾಗಿವೆ. ಸಾರಾ ಅವರ ಕೃತಿಗಳಲ್ಲಿನ ವೈವಾಹಿಕ ಸ್ವರೂಪದ ಜೀವಸೆಲೆ ಎನ್ನುವುದು ಸ್ತ್ರೀಯ ಮೂಲದಲ್ಲಿ ನಿಂತು ವಿವಾಹ, ದಾಂಪತ್ಯ ಮತ್ತು ಕುಟುಂಬದ ಒಳಸುಳಿಗಳನ್ನು, ವಕ್ರತೆಗಳನ್ನು ಗಮನಿಸುವುದಾಗಿದೆ. ಪ್ರಾಪ್ತ ವಯಸ್ಸಿಗೆ ಪೂರ್ವದಲ್ಲಿ ವಿವಾಹವಾಗುವ ಪರಿಣಾಮವಾಗಿ ನಿರ್ದಿಷ್ಟವಾಗಿ ದಾಂಪತ್ಯದ ಬಗೆಗಿನ ಧೋರಣೆಗಳು ಇದರೊಳಗೆ ಸ್ತ್ರೀಯರಲ್ಲಿ ರೂಪುತಾಳಲಾರವು. 'ಯೌವ್ವನ'ವೆನ್ನುವುದು ಇಂದ್ರಿಯ ಗಮ್ಯ ಆಸೆ, ಅಪೇಕ್ಷೆಗಳನ್ನು ತಣಿಸುವ ಕಾಳಜಿಯನ್ನಷ್ಟೇ ಹೊಂದಿರುವುದರಿಂದ, ವಿವಾಹಿತ ವಧು ವರರು ದೇಹ ಮೂಲದ ಹಿತಾಸಕ್ತಿಗೆ ಒಮ್ಮುಖವಾಗಿ ತುಡಿಯುವುದು ನೈಸರ್ಗಿಕ, ಸಹಜ. ಈ ಅರ್ಥದಲ್ಲಿ ಸಾರಾ ಅವರು ತಮ್ಮ ಕೃತಿಗಳಲ್ಲಿ 'ಪ್ರಥಮ ಸಮಾಗಮ'ವೆಂಬುದು ಅಂತಃಸ್ಥವಾಗಿ (Intesine) ದಾಂಪತ್ಯವನ್ನು ನಿರೂಪಿಸುವ ಆರಂಭದ ಬಿಂದುವಾಗಿ ಚಿತ್ರಿಸುತ್ತಾರೆ. ಇದರಲ್ಲಿ 'ಮೊದಲ ಸಮಾಗಮ'ದ ಮೇಲೆ ಪರಸ್ಪರ ವ್ಯಕ್ತಿತ್ವಗಳ ಗಾಢ ಪರಿಚಯ ಸ್ತ್ರೀ ಮತ್ತು ಪುರುಷರಲ್ಲಿ ಸಾಧ್ಯ. ('ನಿಕಾಹ'ದ ಪೂರ್ವದಲ್ಲಿ ವಿವಾಹವಾಗುವ ಗಂಡು- ಹೆಣ್ಣು ಪರಸ್ಪರ ನೋಡಿಯೂ ಇರುವುದಿಲ್ಲ.) ದಾಂಪತ್ಯದಲ್ಲಿ ಸ್ತ್ರೀ ಪುರುಷರು ಬದುಕಿನ ಸಹಭಾಗಿಗಳೆಂದು ಭಾವಿಸುವುದೇ ಪ್ರಥಮರಾತ್ರಿಯ ಅನುಭವಗಳ ನಿರ್ಣಾಯಕಗಳ ಮೇಲೆ. ಸ್ತ್ರೀಯರಂತೂ ಗಂಡನ ಕುರಿತು ಯೋಚಿಸುವುದು ಅವರ

ಓರಗೆಯವರ, ಗೆಳತಿಯರ, ಸಂಬಂಧಿಕರ ಅನುಭವಗಳ ನೆಲೆಯಲ್ಲಿಯೇ ಆಗಿದೆ. **ಚಂದ್ರಗಿರಿಯ ತೀರದಲ್ಲಿನ** ನಾದಿರ ಎದುರು ಮನೆಯ ಗೆಳತಿ ಬಾನುವಿನ ಗಂಡನ ನೆಲೆಯಲ್ಲಿ ತನ್ನ ಗಂಡನನ್ನು ಕಲ್ಪಿಸಿಕೊಳ್ಳುತ್ತಾಳೆ. :

> "ಗಂಡನೆಂದರೆ ತಲೆಗೊಂದು ಮುಂಡಾಸು ಸುತ್ತಿಕೊಂಡು ದೊಡ್ಡ ಹೊಟ್ಟೆ, ಬೆಳ್ಳಗಿನ ಮೀಸೆ ಹೊತ್ತು ತಂದೆಯಂತೆ ಕಾಣುವ ಒಬ್ಬನಿರಬಹುದು" (ಸಾರಾ ಅಬೂಬಕ್ಕರ್:೧೯೮೪ ; ೩)

ಎಂಬುದು ಸುತ್ತಲಿನ ಅವಳಂಥ ಮುಗ್ಧ ಹುಡುಗಿಯರ ಅನುಭವ ಕೂಡ ಆಗಿರುತ್ತದೆ. ಪುರುಷರ ನೆಲೆಯಿಂದಲೂ ಇದು ಮುಖ್ಯವಾಗಿ ಕಾಣಿಸಿಕೊಳ್ಳುತ್ತದೆ. ವಿವಾಹವಾದ ರಾತ್ರಿ ರಶೀದ್‌ನ ತವಕ ಕೂಡ ಮದುವೆಯಾದ ಹುಡುಗಿ ಹೇಗಿರುವಳೆಂಬುದೇ ಆಗಿದೆ.

> "ಮೆಲು ದನಿಯಲ್ಲಿ ರಶೀದ್ ಮಾತಿಗೆ ತೊಡಗುವ ಪೂರ್ವದಲ್ಲಿ ನಾದಿರ ಹುಲಿಯೋ, ಕರಡಿಯೋ ಮೈ ಮೇಲೆ ಬೀಳಬಹುದೆಂದು ಭಯದಿಂದ ಕಂಗಾಲಾಗಿದ್ದವಳಿಗೆ ಬಹು ಮೆತ್ತಗಿನ ತಂಪನ್ನೆರೆಯುವ ಸ್ವರ ಕಿವಿಗೆ ಬಿದ್ದಾಗ ಅವಳಿಗದು ಅನಿರೀಕ್ಷಿತ. ಮುಸುಕಿನೊಳಗಿನ ಅವಳ ಪ್ರತಿಕ್ರಿಯೆ ಕೂಡ ಸ್ಪಂದನ ರಹಿತವಾಗಿರುತ್ತದೆ. ಎಲ್ಲಿ ಹಾಗಾದರೆ ನನಗೊಮ್ಮೆ ಸರಿಯಾಗಿ ಮುಖ ತೋರಿಸು. ನಿಧಾನವಾಗಿ ಹತ್ತಿರ ಬಂದು ಆಕೆಯ ಕಿವಿಯಲ್ಲಿ ಉಸುರಿದಾಗ ಯಾವುದೋ ಸುಖದ ಅನುಭವವಾಗಿತ್ತು. ಆಕೆಯ ತಲೆಯ ಸೆರಗು ಜಾರಿತು. ನಿಧಾನವಾಗಿ ಆತನ ಬಾಹುಗಳು ಅವಳನ್ನು ಬಳಸಿದಾಗ ಅವಳಿಗೇನೂ ಭಯವಾಗಲಿಲ್ಲ...." (ಸಾರಾ ಅಬೂಬಕ್ಕರ್ :೧೯೮೪; ೫)

ಪ್ರಥಮ ರಾತ್ರಿಯ ಅನುಭವ ಹೆಚ್ಚಿನ ಪುರುಷರಿಗೆ ದೇಹಮೂಲದಾಗಿದ್ದರೆ, ಸ್ತ್ರೀಯರಿಗೆ ಮನೋಮೂಲದ್ದು. ಹೊರ ಪ್ರಪಂಚಕ್ಕೆ ಸದಾ ತೆರೆದುಕೊಂಡ ಪುರುಷನಿಗೆ ದೇಹದ ಬಯಕೆಯನ್ನು ತೀರಿಸುವ ಸಾಧನವಾಗಿ ಸ್ತ್ರೀಯನ್ನು ನೋಡುವುದು 'ಲೈಂಗಿಕತೆ'ಯ ಆತನ ತುರ್ತು ಕೂಡ ಆಗಿರುತ್ತದೆ. ಆದರೆ, ಮನೆ, ಸಂಸಾರ, ಮಕ್ಕಳು ಇವನ್ನು ಏಕತ್ರಗೊಳಿಸಿ ಅಂತಿಮವಾಗಿ ಭಾವಿಸುವ ಸ್ತ್ರೀಗೆ ಪುರುಷನೊಂದಿಗಿನ ದೈಹಿಕ ಸಮಾಗಮ 'ಮನಸ್ಸಿ'ಗೆ ಸಂಬಂಧಿಸಿದ್ದಾಗಿರುತ್ತದೆ. ಇದಕ್ಕೆ ಕಾರಣ ಅವಳ 'ಗೃಹಾಭಿಮುಖ ಜೀವನ'ವೇ ಆಗಿದೆ. ಇಲ್ಲಿ ರಶೀದನಂತಹ ವ್ಯಕ್ತಿತ್ವಗಳು ಗೆಲ್ಲುತ್ತವೆ. ದಾಂಪತ್ಯವನ್ನು ಹೆಚ್ಚು ಮಾನವೀಯಗೊಳಿಸುತ್ತವೆ.

ವಿಲೋಮ(Inverse)ಗೊಂಡ ಪ್ರವೃತ್ತಿಯ ದಾಂಪತ್ಯ ಭೂಮಿಕೆಯ ತೀರ್ಮಾನವೂ 'ಪ್ರಥಮ ರಾತ್ರಿ'ಯಲ್ಲೇ ಘಟಿಸಬಹುದಾದುದ್ದು. **ವಜ್ರಗಳು, ಸುಳಿಯಲ್ಲಿ ಸಿಕ್ಕವರು** ಕೃತಿಗಳ ವೈವಾಹಿಕ ಸ್ವರೂಪ ವಿಲೋಮ ಪಾತಳಿಯದ್ದು. 'ವಜ್ರ'ಗಳಲ್ಲಿ ಪ್ರಥಮ ರಾತ್ರಿಯಲ್ಲೇ ಬದ್ರುದ್ದೀನನಿಗೆ ನಫೀಸಾ ಸೌಂದರ್ಯ ಹೀನಳಾಗಿ ಕಾಣುತ್ತಾಳೆ. ಆತನ ವಿದ್ಯಾವಂತ ಕಣ್ಣುಗಳಿಗೆ ಅವಳ ಕಪ್ಪು ಬಣ್ಣ ಕೊರತೆಯಾಗಿ ಕಾಡುತ್ತದೆ. ನಫೀಸ ಮಹತ್ವಾಕಾಂಕ್ಷೆಯಿರುವ ಹೆಣ್ಣಲ್ಲ. ತನ್ನನ್ನು ಪ್ರೀತಿಯಿಂದ ಕಾಣುವ ಗಂಡ ಸಿಕ್ಕರೆ ಸಾಕು ಎನ್ನುವುದು ಅವಳ ಜೀವನದ ಸಾರ್ಥಕತೆಯಾಗಿದೆ. ಒಂದಲ್ಲ ಒಂದು ಬಗೆಯ ಆಮಿಷ ಈ ಹಿನ್ನೆಲೆಯಲ್ಲಿ ಮೇಲುಗೈಯಾಗುತ್ತದೆ. ಆದರೆ ಪರಸ್ಪರ ಅರಿವಿನ ಕೊರತೆಯಲ್ಲಿಯೇ ಒಂದು ಗಂಡು ಮಗುವಾಗುತ್ತದೆ. ಸಂಬಂಧ ಅನಾವಶ್ಯಕ ಅನಿಸಿದಾಗ ಆತ ತಲಾಖ್ ಕೊಡುತ್ತಾನೆ. ನಫೀಸ ತವರು ಸೇರುತ್ತಾಳೆ.

'ಪ್ರಥಮ ರಾತ್ರಿ'ಯ ವಿಪರ್ಯಾಸಗೊಂಡ ಮನಸ್ಥಿತಿಯ ಲೈಂಗಿಕ ಸಮಾಗಮ ನಿರಂತರವಾಗಿ ಹೆಣ್ಣಿನ ಬದುಕನ್ನು ತಲೆಕೆಳಗು ಮಾಡುತ್ತದೆ. ಇಂತಹ ದಾಂಪತ್ಯದಲ್ಲಿ ಬದುಕಿನ ಬೆನ್ನೆಲುಬನ್ನು ಕಳೆದುಕೊಳ್ಳುವುದು ಸ್ತ್ರೀಯೇ ಆಗಿರುತ್ತಾಳೆ. ಬದುಕಿನ ಬಗೆಗೆ ಆಕೆಯಲ್ಲಿ ಸಂಕಲ್ಪ ಶಕ್ತಿಯೇ ಉಳಿಯಲಾರದು. ಸೂಕ್ತ ಶಿಕ್ಷಣವಿಲ್ಲದೆ ಅಂಗವಿಹೀನದ ಸ್ಥಿತಿ ಮತ್ತೆ ಮತ್ತೆ ಅವಳನ್ನು ಬದುಕಿನುದ್ದಕ್ಕೂ ಹಿಂದು ಮುಂದಾಗಿ ನಿಲ್ಲಿಸಿ ಬಿಡುತ್ತದೆ. ಪುರುಷನಿಗೆ ಇದು ಕೇವಲ ಚಲನಾತ್ಮಕವಾದ 'ಒಂದು ಅನುಭವ'. ಸ್ತ್ರೀಯನ್ನು ದಾಂಪತ್ಯದ ಪರಿಣಾಮಗಳು ಬಾಧಿಸುವಷ್ಟು ತೀವ್ರವಾಗಿ ಪುರುಷನನ್ನು ಅವುಗಳು ಬಾಧಿಸಲಾರವು. ಈ ವಿಚಾರದಲ್ಲಿ ಆತ ಉರುಳುವ ಕಲ್ಲು. ಅದಕ್ಕೆ ಯಾವುದೂ, ಎಂಥ ಸ್ಥಿತಿಯೂ ಅಂಟಲಾರದು. ಇಲ್ಲಿ ತೆಗೆದುಕೊಳ್ಳಬೇಕೆನ್ನುವುದನ್ನೇ ಪಟ್ಟು ಹಿಡಿದು ಸಾಧಿಸುವ ಪುರುಷ ಮೊದಲು ಕೊಡುವುದನ್ನು ತೀರ್ಮಾನಿಸುವುದಿಲ್ಲ. ಎನ್ನುವುದನ್ನು **ಸುಳಿಯಲ್ಲಿ ಸಿಕ್ಕವರು** ಕಥನವು ನಿರೂಪಿಸುತ್ತದೆ.

**ಸುಳಿಯಲ್ಲಿ ಸಿಕ್ಕವರು** ಕೃತಿಯಲ್ಲಿ ಪ್ರಥಮ ರಾತ್ರಿಯಲ್ಲಿ ಮಮ್ಮುಟಿಯ ನಿರೀಕ್ಷೆಗಳನ್ನೆಲ್ಲಾ ಭಯಭೀತಳಾದ ಹೆಣ್ಣು ರುಖ್ಯಾಬಿ ತಲೆಕೆಳಗು ಮಾಡುತ್ತಾಳೆ. ಮೂರು ದಿನಗಳ ಕಾಲ ಮುಖ ತೋರಿಸಿ ಕಣ್ಮರೆಯಾಗುವ ಅವಳ ವರ್ತನೆ ಮಮ್ಮುಟಿಯ ಕ್ರೋಧಕ್ಕೆ ಕಾರಣವಾಗುತ್ತದೆ. ಇದಕ್ಕೆ ಉಪಾಯವನ್ನು ಕಂಡುಹಿಡಿಯುವ ಆತ ಮನೆಗೆ ಹರಿತವಾದ ಪುಟ್ಟದೊಂದು ಚೂರಿಯನ್ನು ಕೊಂಡ್ಯೊಯ್ಯುತ್ತಾನೆ.

> "ಮಮ್ಮೂಟಿ ಅಡಿಗೆ ಮನೆಗೆ ನಡೆದನು. ಮುದುಡಿ ಮಲಗಿದ್ದ ಹುಡಿಗಿಯನ್ನು ಎರಡೂ ಕೈಗಳಿಂದ ಎತ್ತಿ ನಿಲ್ಲಿಸಿದನು. ಅನಿರೀಕ್ಷಿತವಾದ ಈ ಆಕ್ರಮಣದಿಂದ ಗಡಬಡಿದ ಆಕೆಯ ಮುಖದ ಸಮೀಪ ಚೂರಿ ತಂದು 'ನಡಿ ಕೋಣೆಗೆ, ಇದು ಏನೂಂತ ಗೊತ್ತಿದೆ ತಾನೇ? ನಾನು ಹೇಳಿದಂತೆ ಕೇಳದಿದ್ದರೇ....' ಎಂದು ಕೆಳದನಿಯಲ್ಲಿ ಕ್ರೂರವಾಗಿ ನುಡಿದನು. ರುಖ್ಯಾಬಿ ಮುಸುಕಿನೊಳಗಿನಿಂದಲೇ ಕಣ್ಣರಳಿಸಿ ಚೂರಿಯನ್ನು ನೋಡಿದಳು. ಆಕೆಯ ದೇಹ ಭಯದಿಂದ ಕಂಪಿಸತೊಡಗಿತು. ಆತನ ಮುಖ ನೋಡುವ ಸಾಹಸವಾಗದೆ ಕುರಿಯಂತೆ ತಲೆ ತಗ್ಗಿಸಿ ಕೋಣೆಗೆ ನಡೆದಳು. ಆತನು ಚೂರಿಯನ್ನು ಮಡಚಿ ಸೊಂಟಕ್ಕೆ ಸೇರಿಸುತ್ತಾ ಆಕೆಯನ್ನು ಹಿಂಬಾಲಿಸಿದನು. ಕೋಣೆಯ ಕದವನ್ನು ಮುಚ್ಚಿ ಅಗಳಿ ಹಾಕಿದ ಬಳಿಕ ಒರಟಾಗಿ ಆಕೆಯ ತಲೆಯ ಮೇಲಿನ ಮುಸುಕು ತೆಗೆದೆಸೆದನು." (ಸಾರಾ ಅಬೂಬಕ್ಕರ್ :೧೯೯೪; ೪೦)

ಇಲ್ಲಿ ಹೆಣ್ಣಿನ ಪ್ರತಿಭಟನಾ ಶಕ್ತಿ ಇಂಗಿ ಹೋಗುವುದು ಗಂಡಸಿನ ದುಡುಕು ಮತ್ತು ಕ್ರೌರ್ಯದ ಎದುರು. ನಂತರದಲ್ಲಿ ಎಷ್ಟೋ ದಿನಗಳವರೆಗೆ ರುಖ್ಯಾಬಿ ಗಂಡನೆಂದರೆ ಭಯದಿಂದ ನಡುಗುವುದು, ಮುಖವೆತ್ತಿ ಆತನ ದೃಷ್ಟಿಯನ್ನೆದುರಿಸುವ ಸಾಹಸ ಮಾಡದಿರುವುದು ಕಂಡು ಬರುತ್ತದೆ. ಇಂತಹ ಅವಳ ವರ್ತನೆಗಳಿಗೆ ಗಂಡನ ಮೇಲಿನ ಅವಳ ಭಯ ಮೂಲದ ತಿಳುವಳಿಕೆ ಮತ್ತು ಅನುಭವ ಕಾರಣವಾಗುತ್ತದೆ. ಆದರೆ ಕ್ರಮೇಣ ಆಕೆ ಆತನ 'ಒರಟು ಸ್ವಭಾವ'ಕ್ಕೆ ಹೊಂದಿಕೊಳ್ಳುವುದು, ಅತ್ತೆಯ ಮನೆಯಲ್ಲಿ ಇರುವುದು, ಮೂರು ಮಕ್ಕಳನ್ನು ಹೆರುವುದೆಲ್ಲ ಅನಿವಾರ್ಯತೆಗೆ ಜೋತುಬಿದ್ದು. ಇಂತಹ ದಾಂಪತ್ಯದಲ್ಲಿ ಸ್ತ್ರೀಯ ಬದುಕು ಬಲೆಯೊಳಗಿನ ಜೇಡದ ಹುಳುವಿನಂತೆ. ಇದರಲ್ಲಿನ ಪರಾವಲಂಬನೆ ಹೆಣ್ಣಿನಲ್ಲಿ ಶಾಶ್ವತ ನಿರಾಶೆಗೆ ಕಾರಣವಾಗುತ್ತದೆ.

ವಿಲೋಮ (inversion) ದಾಂಪತ್ಯದಲ್ಲಿ ಮಾತ್ರವಲ್ಲ ಗಂಡು- ಹೆಣ್ಣಿನ ಒಟ್ಟು ವೈವಾಹಿಕ ಸ್ವರೂಪ ಸಾಪೇಕ್ಷವಾಗಿರುತ್ತದೆ. ಇಲ್ಲಿ ಗಾಢ ಸಂಬಂಧಗಳಲ್ಲಿ ಮಾತ್ರ ಸ್ಥಾಯಿ ಭಾವವನ್ನು ಕಾಣಬಹುದು. **ಚಂದ್ರಗಿರಿಯ ತೀರದಲ್ಲಿ**ನ ರಶೀದ್, ನಾದಿರಾ ಇವರ ಸಂಬಂಧ ಈ ಸೂಕ್ಷ್ಮತೆಯನ್ನು ಬೆಸೆದುಕೊಂಡ ಪರಿಣಾಮವಾಗಿ ಪುರುಷರ ಸ್ವಾರ್ಥ ಮೂಲದ 'ತಲಾಕ್' ದೀರ್ಘಕಾಲ ಇವರಿಬ್ಬರನ್ನು ಬೇರ್ಪಡಿಸಿದರೂ, ಅವರೀರ್ವರ ನಡುವಿನ ಪ್ರೇಮದ ಗಾಢ ಸಂಬಂಧ ಸ್ಥಾಯಿಯಾಗುತ್ತದೆ. ಪರಿಣಾಮವಾಗಿ ಮತ್ತೆ ಪುನಃ ಒಂದಾಗುವ ಇಚ್ಛೆ ಪ್ರಬಲವಾಗುತ್ತದೆ. ಇದಕ್ಕೆ ಷರಿಯತ್ ಕಾನೂನಿನ ಅನ್ವಯ ಪರಪುರುಷ ನೊಂದಿಗೆ ವಿವಾಹವಾಗಿ ಒಂದು ದಿನ ಕಳೆಯಬೇಕು ಎಂಬ 'ಧರ್ಮದ ಕಟ್ಟಳೆ' ದುರಂತಕ್ಕೆ ಕಾರಣ ವಾಗುವುದಾದರೂ ವೈವಾಹಿಕ ಸಂಬಂಧದ ಬುನಾದಿಯಲ್ಲಿ ರಶೀದ್ ಮತ್ತು ನಾದಿರಾ ಅವರ ದಾಂಪತ್ಯಕ್ಕೆ 'ಪರಿಪೂರ್ಣತೆ'ಯ ಅರ್ಥವಿದೆ. ಇದು ಬಿರುಕು ಬಿಡುವುದು ಪುರುಷ ಸ್ವಾರ್ಥದ ತೀರ್ಮಾನಗಳಲ್ಲಿಯೆ ಆಗಿದೆ. ಸಾರಾ ಅವರು ಪರಿಕಲ್ಪಿಸುವ ವೈವಾಹಿಕ ಸ್ವರೂಪದಲ್ಲಿ ಸ್ತ್ರೀಯರ ದಾಂಪತ್ಯ ಜೀವನ ಒಂದು 'ಯಾತನಾ ಶಿಬಿರ' (Mersceless Camp). ಪುರುಷನ ಬಾಹ್ಯ ವ್ಯವಹಾರ, ಅದರ ಹಿನ್ನೆಲೆಯಲ್ಲಿ ಅಡಗಿರುವ ಆತನ ಕೌಟುಂಬಿಕ ಅಭೀಪ್ಸೆಯ ತತ್ತ್ವ, ಇದರಲ್ಲಿ ಸ್ತ್ರೀ 'ಹೆರುವ ಯಂತ್ರ' ಮಾತ್ರವೇ ಆಗಿರುತ್ತಾಳೆ. 'ಬುರುಕಾ'ದ ಹೊರಗಿನ ಜಗತ್ತೇ ಆಕೆಗೆ ನಿಶಿದ್ಧವೆಂಬ ಸ್ಥಿತಿಯಲ್ಲಿ ಆರ್ಥಿಕ ಸ್ವಾತಂತ್ರ್ಯದ ಸಂದರ್ಭಗಳೇ ಇಲ್ಲಿ ಏಳುವುದಿಲ್ಲ ಅತ್ಯಂತ ಬಡತನದ ಒಳಗೆ ಮಾಪಿಳ್ಳೆ ಹೆಣ್ಣು ಮನೆಯೊಳಗೆ ಕುಳಿತು ಬೀಡಿ ಕಟ್ಟಬಲ್ಲಳು. ಆದರೆ, ಅದರ ಮಾರುಕಟ್ಟೆಯ ವ್ಯವಹಾರ ಪೂರ್ಣವಾಗಿ ಪುರುಷನೇ ನೋಡಿಕೊಳ್ಳುತ್ತಾನೆ. ಇಲ್ಲಿ ಹೆಣ್ಣು ದುಡಿಯ ಬಲ್ಲಳು. ಆದರೆ, ಹಣ ಸಂಪಾದಿಸಲಾರಳು. ಇದನ್ನು ಸಾರಾ ಅವರ ಕಾದಂಬರಿ ಕಥನಗಳು ಅನಾವರಣಗೊಳಿಸುವ ಪ್ರಯತ್ನ ಮಾಡುತ್ತವೆ.

ಮುಸ್ಲಿಂ ಸಮಾಜ ಸಂತಾನಶಸ್ತ್ರಚಿಕಿತ್ಸೆಯನ್ನು, ಕುಟುಂಬ ಯೋಜನೆಯನ್ನು ನಿರಾಕರಿಸುವುದರಿಂದ ವರ್ಷಕ್ಕೆ ಒಂದರಂತೆ ಆಗುವ ಮಕ್ಕಳು. ಅವರ ಲಾಲನೆ ಪಾಲನೆಯಲ್ಲಿ ಸ್ತ್ರೀಯರ ಬದುಕು ಪೂರ್ಣ ವೃತ್ತ. ಇದರೊಳಗೆ ದಾಂಪತ್ಯವೆಂಬುದು 'ಯಾಂತ್ರಿಕ' ಪ್ರಕ್ರಿಯೆಯಾಗಿ ಬಿಡುವುದನ್ನು ಸಾರಾ ಅವರ ಕಾದಂಬರಿಗಳು ಅನ್ವೇಶಿಸುತ್ತವೆ. ವೈವಾಹಿಕ ಬದುಕಿನ ಪರಿಣಾಮದ ಅತಿ ಸಂತಾನ ಮತ್ತು ಅವುಗಳ ಪಾಲನೆಯಲ್ಲಿ, ಹೊಟ್ಟೆಪಾಡಿನ ಹೋರಾಟವೇ ಮುಖ್ಯವಾಗುತ್ತದೆ. ಗಂಡ- ಹೆಂಡತಿಯ ನಡುವಿನ ಈ ಸಂತಾನ ಮತ್ತು ಪಾಲನೆಯ ಸಂಬಂಧದ ಸಮಸ್ಯೆಗಳಲ್ಲಿ ಪಾಲನೆಯ ಜವಾಬ್ದಾರಿಯನ್ನು ಹೊತ್ತ ಗಂಡಿನ 'ಅಹಂ' ಪ್ರಧಾನ ಪಾತ್ರ ವಹಿಸುತ್ತದೆ. ಇಲ್ಲಿ ಬದುಕಬೇಕು, ನಾಶವಾಗಬಾರದು, ತಿಳಿದುಕೊಳ್ಳಬೇಕು ಎಂಬ ಹಂಬಲ ಹೊತ್ತವನು ಪುರುಷ ಮಾತ್ರ ಆಗಿರುತ್ತಾನೆ. ಇದರಲ್ಲಿ ಸ್ತ್ರೀಯು ತನ್ನ 'ಅಸ್ತಿತ್ವ'ದ ನೆಲೆಯಲ್ಲಿ ಎದುರಿಸುವ ಸಮಸ್ಯೆಗಳೆಂದರೆ, ಹೊಂದಾಣಿಕೆ ಅಥವಾ ದಾಂಪತ್ಯ ಸಮನ್ವಯದ ಸಮಸ್ಯೆಗಳು. ದಾಂಪತ್ಯದಲ್ಲಿ ಬಗೆಹರಿಸಲಾರದ್ದೆಂದು ತಿಳಿದುಕೊಂಡ ಒಡಕು ಅಥವಾ ಬಿರುಕಿನಿಂದ ಉದ್ಭವಿಸಿದ ಸಮಸ್ಯೆಗಳವು. **ಚಂದ್ರಗಿರಿಯ ತೀರದಲ್ಲಿ, ವಜ್ರಗಳು, ಸುಳಿಯಲ್ಲಿ ಸಿಕ್ಕವರು, ಪ್ರವಾಹಸುಳಿ**, ಈ ಪಠ್ಯಗಳಲ್ಲಿನ ದಾಂಪತ್ಯಗಳು ಇಂತಹ ಸಮಸ್ಯೆಗಳ ವಿಭಿನ್ನ ಪಾಠಾಂತರಗಳಾಗಿವೆ. ಗಂಡನಿಂದ ಹೊಡೆತ ತಿನ್ನುವ, ದಿಕ್ಕೆಟ್ಟು ಭಯದಿಂದ ಓಡಿ ತವರು ಸೇರುವ, ಬಡತನದ ಅಸಹಾಯಕತೆಯಿಂದ ರಾಜಿ ಮಾಡಿಕೊಳ್ಳುವ ದಾಂಪತ್ಯದಲ್ಲಿ ಸ್ತ್ರೀ - ಪುರುಷನ ದೃಷ್ಟಿಯಲ್ಲಿ

ಅಯೋಗ್ಯಳು, ಕೆಲಸಕ್ಕೆ ಬಾರದವಳು, ಅಪ್ರಯೋಜಕಳಾಗಿ ನಿಂತು ಬಿಡುತ್ತಾಳೆ. ಈ ವಾಸ್ತವವನ್ನು ನಿರೂಪಿಸುವಲ್ಲಿ ಸಾರಾ ಅವರ ಕಾದಂಬರಿಗಳು ನೈಜ, ಛಾಯಾ ಚಿತ್ರಗಳಾಗಿವೆ. ಶಿಕ್ಷಣ ಹಾಗೂ ಸಂಸ್ಕೃತಿಯ ಸೌಲಭ್ಯಗಳಿಂದ ವಂಚಿತರಾದ ಮಾಪಿಳ್ಳೆ ಸಮುದಾಯದ ಸ್ತ್ರೀಯರ ಮನೋವೃತ್ತಿ, ಸ್ವವ್ಯಕ್ತಿತ್ವ ಚಿತ್ರಗಳಲ್ಲಿ ಅವರನ್ನು ನಿರಂತರವಾಗಿ ಕಾಡುವುದು 'ಅಭದ್ರತೆಯ ನಿಷೇಧಾತ್ಮಕ ಸ್ಥಿತಿ'. 'ತಲಾಖ'ನಿಂದ ನಿರ್ಮಾಣವಾಗುವ ದಾಂಪತ್ಯದ ಒಳಗಿನ ಈ ತಲ್ಲಣಗಳಿಂದ ಸಾರಾ ಅವರು ಚಿತ್ರಿಸುವ ಹೆಚ್ಚಿನ ಸ್ತ್ರೀ ಪಾತ್ರಗಳು ನಲುಗುತ್ತವೆ. ಪತ್ಯದೊಳಗೆ ಸ್ತ್ರೀಯರೊಳಗಿನ 'ಸಂಭಾವ್ಯ ಸಾಧ್ಯತೆ'ಗಳು ನಿರ್ನಾಮಗೊಳ್ಳುತ್ತವೆ. ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮತ್ತು ಬೌದ್ಧಿಕವಾಗಿ ತಮ್ಮನ್ನು ತಾವು ಕೆಳಗಿನವರೆಂದು ತಿಳಿದುಕೊಂಡು ಬದುಕುವ ಫಾತಿಮ್ಮ, ನಾದಿರಾ, ಜಮೀಲ, ಖತೀಜ, ನಾಸಿರ, ರುಖಿಯಾ, ಹಾಜಿರಾ, ಜೊಹರ, ಮೊದಲಾದ ಸ್ತ್ರೀ ಪಾತ್ರಗಳು ದಾಂಪತ್ಯದೊಳಗೆ ಶೋಷಿತರು, ಅಸಹಾಯಕರು ಪುರುಷರ ವಿಶ್ವಾಸದ ಅಭಾವ, ಸಂಶಯ, ಕಾರ್ಯಶಕ್ತಿಯ ಹೀನತೆ, ಎಲ್ಲಾ ತೆರನಾದ ದೌರ್ಬಲ್ಯಗಳಿಗೂ 'ಉತ್ತರ' ರೂಪವಾಗಿ ಬದುಕ ಬೇಕಾದವರು ಸ್ತ್ರೀಯರು. ಇದರಲ್ಲಿ ಪುರುಷನ ಕೃಪೆಗಾಗಿ ಕಾಯದೇ ಅಥವಾ ಅವರನ್ನು ದ್ವೇಷಿಸದೇ ಹತಾಶ ಮನೋಭಾವನೆಯಿಂದ ನರಳುವ ಎಲ್ಲ ಸ್ತ್ರೀ ಪಾತ್ರಗಳಿಗಿಂತ ಭಿನ್ನರಾಗಿ **ಚಂದ್ರಗಿರಿಯ ತೀರ**ದಲ್ಲಿನ ನಾದಿರಾ **ವಜ್ರಗಳು** ಕೃತಿಯ ನಫೀಸ ಕಾಣಿಸಿಕೊಳ್ಳುತ್ತಾರೆ. ನಾದಿರಾ ಪುರುಷನ ದಾಂಪತ್ಯದ ಧಾರ್ಮಿಕ ಕಟ್ಟುಪಾಡಿಗೆ ಸೆಟೆದು ಮಸೀದಿಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದು, ಮತ್ತು ಎರಡು ವಿವಾಹ ಜೀವಿತ ದುರಂತಗಳಲ್ಲಿ ಬದುಕಿನ ಅರ್ಥವನ್ನೇ ಕಳೆದುಕೊಂಡ ನಫೀಸ ಆತ್ಮಹತ್ಯೆಯಂಥ ಸಿನಿಕ ಘಟಕಕ್ಕೆ ತೆತ್ತುಕೊಳ್ಳದೆ, ಕಳ್ಳಬಸುರೆಂದು ಸಮಾಜದಿಂದ ತಿರಸ್ಕೃತವಾಗಿದ್ದ ಹೆಣ್ಣು ಮಗುವನ್ನು ತನ್ನ ವೈಯಕ್ತಿಕ ದುಡಿತದ ಗಳಿಕೆಯಲ್ಲಿ (ಬೀಡಿ ಕಟ್ಟಿದಗಳಿಕೆ) ಭವಿಷ್ಯದ ಆಶಯವಾಗಿ ಗುರುತಿಸಿಕೊಳ್ಳುವುದು. ಇವೆರಡು ನಿದರ್ಶನಗಳು ಕ್ರೌರ್ಯವೇ ತುಂಬಿರುವ ಸಮಾಜಕ್ಕೆ ತೋರಿದ ಅರ್ಥಪೂರ್ಣ ಪ್ರತಿಭಟನೆಗಳಾಗಿವೆ. ಸಂತೋಷವನ್ನು, ನೆಮ್ಮದಿಯನ್ನು, ಪಡೆಯಲು ಸಾಮರಸ್ಯದಿಂದ ಬದುಕಲು ವ್ಯಕ್ತಿ ಸಂಬಂಧಗಳು ವಿಕಸಿತಗೊಳ್ಳುತ್ತವೆ. ಆದರೆ ದಾಂಪತ್ಯ ಸಂಬಂಧ ಇದನ್ನು ಪರ ವಿರುದ್ಧವಾಗಿ ಕಟ್ಟುವ ಕೆಲಸಮಾಡುತ್ತದೆ. ದಾಂಪತ್ಯದ ಒಳಮರ್ಮಗಳನ್ನು ವಾಸ್ತವದ ನೆಲೆಯಲ್ಲಿ ಶೋಧಿಸುವ ಸಾರಾ ಅವರ ಪ್ರಯತ್ನಶೀಲತೆ ಇಲ್ಲಿ ಗಮನಾರ್ಹ. ದಾಂಪತ್ಯದ ನೆಲೆಯಲ್ಲಿ, ಜೀತದ, ಗುಲಾಮಗಿರಿಯ ಕಾರ್ಯಾಗಾರದಲ್ಲಿ ಸಿಕ್ಕಿಹಾಕಿಕೊಂಡು ದೌರ್ಜನ್ಯಕ್ಕೊಳಗಾಗುವ ಸ್ತ್ರೀಯರ ಬದುಕಿನ 'ಮರುಕಲ್ಪನೆ'ಯ ಬಗ್ಗೆ ಅವರ ಕಾದಂಬರಿಗಳಲ್ಲಿ ಚಲನಾತ್ಮಕ ತುಡಿತವಿದೆ ಎಂಬುದು ಇಲ್ಲಿ ಹೆಚ್ಚು ಮುಖ್ಯವಾಗುವ ಅಂಶವಾಗಿದೆ.

### ೪.೨.೩ ಮೊದಲ ಕಟ್ಟಿನ ಕಾದಂಬರಿಗಳು: ಕುಟುಂಬದ ಸ್ವರೂಪ.

**ಗೀತಾ ನಾಗಭೂಷಣ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ಕೌಟುಂಬಿಕ ಸ್ವರೂಪ :**

ಯಾವ ಸಮುದಾಯವನ್ನು ಗಮನಿಸಿದರೂ ಕುಟುಂಬವೆನ್ನುವ ಮೂಲ ಘಟಕದಿಂದಲೇ ಅದು ರಚನೆಗೊಂಡಿರುತ್ತದೆ. ಹಳ್ಳಿಯ ಊರಹೊರಗಿನ, ಊರ ಅಂಚಿನ ಹೊಲಗೇರಿ, ಕೆಳಗೇರಿಗಳಲ್ಲಿನ ಕುಟುಂಬದ ಸ್ವರೂಪ 'ಆದಿಮ' ಸ್ವರೂಪದ್ದು. ಸಮಾಜ ಬೆಳವಣಿಗೆಯ ವಿಕಸಿತ (Evolute) ವಿನ್ಯಾಸದ ಮೂಲ ಮಾದರಿಗಳನ್ನು ಬುಡಕಟ್ಟು ಜನಾಂಗಗಳಲ್ಲಿ ಗುರುತಿಸಬಹುದು. ಅಕ್ಷರ ಜಗತ್ತಿಗೆ

ತೆರೆದುಕೊಳ್ಳುವ ಸ್ಥಿತ್ಯಂತರದ ಸಂದರ್ಭದಲ್ಲೂ ಇದು ಹೆಚ್ಚು ಬದಲಾವಣೆಗೆ ಗುರಿಯಾಗಿಲ್ಲ. ಒಳಜಾತಿ, ಒಳಪಂಗಡದೊಳಗಿನ ವಿವಾಹದ ಪರಿಣಾಮವಾಗಿ, ಇಲ್ಲಿ ಕುಟುಂಬವೆನ್ನುವುದು ಸರಳ ನಿಯಮಗಳ ತತ್ತ್ವರಚನೆಯಾಗಿ ಸಮಾನಾಕೃತಿಯ (Homomorphic) ರಚನೆಗಳಾಗಿ ಪ್ರಕಟಗೊಳ್ಳುತ್ತದೆ.

ಕುಟುಂಬ ಸ್ವರೂಪದ 'ಸಾಂದ್ರ ನಿರ್ವಚನ'ವು ಗೀತಾ ನಾಗಭೂಷಣ ಅವರ **ಬದುಕು** ಕೃತಿಯಲ್ಲಿ ಅಭಿವ್ಯಕ್ತಿಗೊಂಡಿದೆ. ಕಲಬುರ್ಗಿ ಜಿಲ್ಲೆಯಲ್ಲಿ ಬರುವ ಶಿವಳ್ಳಿ ಎಂಬ ಹಳ್ಳಿಯ ಮ್ಯಾಗೇರಿ, ಕೆಳಗೇರಿ ಮತ್ತು ಹೊಲಗೇರಿಗಳಲ್ಲಿ ಕಾಣುವ ಕುಟುಂಬ ವ್ಯವಸ್ಥೆ ಇಡೀ ಹಳ್ಳಿಯ ಅಂತರ್‌ಪ್ರವಾಹ ಶಕ್ತಿಯಾಗಿದೆ. ಇವುಗಳೆಲ್ಲ ನೆಲೆ ನಿಂತಿರುವುದು ಮೇಲಿನ ಕೇರಿಯ ಹಂಚಿನ ಮನೆ, ಕೆಳಗೇರಿ, ಹೊಲಗೇರಿಯ ಅರೆಜಪ್ಪರ ಮನೆ, ಹೆಂಡಿಮನೆ, ಝೋಪಡಿಗಳಲ್ಲಿ. ಆಯಾಯ ಮನೆಗಳ ವಿನ್ಯಾಸಗಳಲ್ಲಿ ಕುಟುಂಬದ ವರಮಾನ, ಆರ್ಥಿಕತೆಗಳು ಪ್ರಕಟಗೊಳ್ಳುತ್ತವೆ. **ಬದುಕು** ಕೃತಿಯ ಮಲ್ಲಪ್ಪ ಜಮಾದಾರ, ಹಳ್ಳಿಯ ಗೌಡ, ಕುಲಕರ್ಣಿಯರದ್ದು ಕೂಡು ಕುಟುಂಬ. ಮೂರು ತಲೆಮಾರಿನ ಜನ ಒಂದೇ ಮನೆಯಲ್ಲಿ ಕಲೆತು ಬಾಳುವುದು ಇಲ್ಲಿನ ಪ್ರಧಾನ ಅಂಶ. ದುಡಿಮೆಯ ಜವಾಬ್ದಾರಿಯನ್ನು ಎದುರಿಸುವ ಮಧ್ಯ ವಯಸ್ಕ ದಂಪತಿಗಳು, ಅವರಿಗೆ ಮಾರ್ಗದರ್ಶನವಾಗಿ ನಿಂತ ಹಿರಿಯರು, ಹಬ್ಬ-ಹರಿದಿನ, ಬಸಿರು-ಬಾಣಂತನ, ರೋಗ-ರುಜಿನ, ಸಾವು-ಶ್ರಾದ್ಧಗಳನ್ನು ಮನೆತನಕ್ಕೆ ಅನುಗುಣವಾಗಿ ಅನುಸರಿಸಿಕೊಂಡು, ಬರುವ ವಾಹಕಗಳಾಗಿ ಕುಟುಂಬದಲ್ಲಿ ಪ್ರಕಟಗೊಳ್ಳುತ್ತದೆ. ಈ ಕುಟುಂಬಗಳ ಸದಸ್ಯರ ಜೀವಂತಿಕೆ ಇರುವುದೇ ಹೊಲಗದ್ದೆ, ತೋಟಗಳ ದುಡಿಮೆಗಳಲ್ಲಿ.

ಹುಲ್ಲುಮನೆ, ಜೋಪಡಿ ಮನೆಗಳಲ್ಲಿ ಕೂಡುಕುಟುಂಬ ಮತ್ತು ಸರಳ ಕುಟುಂಬ ಈ ಎರಡರ ರಚನೆಗಳನ್ನೂ ಕಾಣಬಹುದು. (ತಂದೆ ತಾಯಿ, ಗಂಡ ಹೆಂಡತಿ, ಮಕ್ಕಳು ಇರುವ ಕೌಟುಂಬಿಕ ಸ್ವರೂಪ ಹಾಗೂ ಮದುವೆಯಾಗಿ ಗುಡಿಸಲು ಕಟ್ಟಿಕೊಂಡು ಗಂಡ ಹೆಂಡತಿ ಮಕ್ಕಳು ಬದುಕುವ ಸರಳ ಕೌಟುಂಬಿಕ ರಚನೆ ಕೂಡ ಹಳ್ಳಿಗಳಲ್ಲಿ ಸಾಮಾನ್ಯ.) ದೈಹಿಕ ಶ್ರಮದ ವಿಪರೀತ ಜೀತ, ಈಚಲು ಬನ್ನಿ ಹೆಂಡ, ಹುಟ್ಟುವ ಮಕ್ಕಳು. ಈ ಎಲ್ಲದರ ಪರಿಣಾಮವಾಗಿ ತೀವ್ರ ದಾರಿದ್ರ್ಯ, ರೋಗ ರುಜಿನಗಳು, ಅಜ್ಞಾನ ಇವು ಬಡ ಕುಟುಂಬವನ್ನು ಕಾಡುವ ಪರಿಹಾರ ರಹಿತ ಸಮಸ್ಯೆಗಳಾಗಿ ತೋರುತ್ತವೆ. ದೇಹದ ಶಕ್ತಿ ಕಳೆದುಕೊಂಡು ಸಾವನ್ನು ಎದುರುನೋಡುವ ಹಿರಿಯರು. ಮತ್ತು ದುಡಿತಕ್ಕೆ ಬೇಕಾದ ವಯಸ್ಸು- ಶಕ್ತಿ ಪಡೆಯದ ಮಕ್ಕಳು ಇಂತಹ ಕುಟುಂಬಗಳ ಹೊರೆಗಳು, ಇವನ್ನು **ನೀಲಗಂಗಾ**, **ಆಸರೆ** ಕೃತಿಗಳು ತೋರಿಸುವ ಪ್ರಯತ್ನ ನಡೆಸುತ್ತದೆ. ಮಕ್ಕಳನ್ನು ತಮ್ಮ ಬದುಕಿನ 'ಜೀವವಿಮಾ ಪಾಲಿಸಿ' ಗಳೆಂದು ಬಗೆಯುವ ಜೋಪಡಿಯ ಜನತೆ ಅವರಿಗೆ 'ಶಿಕ್ಷಣ' ನೀಡುವ ಗೋಜಿಗೆ ಹೋಗುವುದಿಲ್ಲ. ಪ್ರಾಪ್ತ ವಯಸ್ಸಿಗೆ ಮುಂಚೆ ಜೀತ, ಮದುವೆ, ಮಕ್ಕಳು, ಕುಡಿತದಂತಹ ಕಾರಣಗಳಿಂದಾಗಿ 'ಸ್ವಾಸ್ಥ' ರಹಿತ ಕುಟುಂಬಗಳು ಗೀತಾ ನಾಗಭೂಷಣ ಅವರ ಕೃತಿಗಳಲ್ಲಿ ನಿರೂಪಿತಗೊಂಡಿವೆ.

ಈ ಎಲ್ಲ ಮಿತಿಗಳನ್ನು ಮೀರುವ ಪ್ರಯತ್ನವಾಗಿ ಮಲ್ಲಪ್ಪ ಜಮಾದಾರನ ಮೂರನೇ ತಲೆಮಾರಿನ ಮಕ್ಕಳು ಕಲಬುರ್ಗಿಯಲ್ಲಿ ಉನ್ನತ ವಿದ್ಯಾಭ್ಯಾಸವನ್ನು ಪಡೆದು ಉತ್ತಮ ನೆಲೆ ಪಡೆಯುತ್ತಾರೆ. ಆದರೆ ಅವರಲ್ಲಿ 'ಆತ್ಮ ಶೋಧನೆ' ಅಥವಾ ಹೊಲಗೇರಿಯ ಬಹುಜನತೆಯ ಬಗೆಗಿನ ಕಾಳಜಿಗಳು ಕಣ್ಮರೆಯಾಗುತ್ತವೆ. ಇದು ಆ ಸಮುದಾಯದ ದುರಂತ ಮಾತ್ರವಲ್ಲದೆ, ಕೌಟುಂಬಿಕ ದುರಂತವೂ ಆಗಿದೆ.

ಗೀತಾ ನಾಗಭೂಷಣ ತಮ್ಮ ಕೃತಿಗಳ ಮೂಲಕ ಅಭಿವ್ಯಕ್ತಿಸುವ ಕೌಟುಂಬಿಕ ಸ್ವರೂಪದೊಳಗೆ ಕೆಳಜಾತಿಯ ಜನತೆಯ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು, ಜೀವನದ ರೀತಿನೀತಿಗಳೆಲ್ಲ ಪ್ರಕಟವಾಗುತ್ತವೆ. ಪಠ್ಯಗಳ ಒಳಗೆ ಕುಟುಂಬದೊಳಗಿನ ದೌರ್ಬಲ್ಯಗಳು, ಗಟ್ಟಿತನಗಳು, ಪ್ರೀತಿ, ಪ್ರೇಮ, ಹಾದರ, ಕಳುವು, ಸುಳ್ಳು, ವಾಸ್ತವಗಳೆಲ್ಲ ವಿವರಣೆ ಪಡೆಯುತ್ತವೆ.

ಇಂತಹ ಕುಟುಂಬದಲ್ಲಿ ಸ್ತ್ರೀಯರ ಜವಾಬ್ದಾರಿ ಹೆಚ್ಚು. ವಯಸ್ಸಿಗೆ ಬಂದ ಮಕ್ಕಳು ಹೆಚ್ಚು ಜವಾಬ್ದಾರಿಯುತವಾಗಿ ವರ್ತಿಸಬಲ್ಲರೆಂದು ತಿಳಿಯುವ ತಂದೆ ತಾಯಿಗಳು, ಅವರಿಗೆ ವೈಯಕ್ತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ಕೊಡುವುದರಿಂದ ಮನೆಯಲ್ಲಿ ಆಗುತ್ತಿದ್ದ ಘರ್ಷಣೆಗಳು ಬಹಳ ಮಟ್ಟಿಗೆ ಕಡಿಮೆಯಾಗುವುದನ್ನು **ಆಸರೆ, ಬದುಕು** ಕೃತಿಗಳು ಅನಾವರಣಗೊಳಿಸುತ್ತವೆ. ಆದರೆ **ನೀಲಾಗಂಗಾ**ದಲ್ಲಿ ತಂದೆತಾಯಿಗಳು ಮಕ್ಕಳ ಮೇಲಿನ ತಮ್ಮ ಪ್ರಭುತ್ವವನ್ನು ಬಿಟ್ಟುಕೊಡಲು ಅಸಮರ್ಥರಾಗುವುದರಿಂದ ಇದರಲ್ಲಿ ಕೌಟುಂಬಿಕ ಘರ್ಷಣೆಗಳ ತೀವ್ರತೆ ಹೆಚ್ಚಾಗಿ ಕಂಡು ಬರುತ್ತದೆ. **ನೀಲಗಂಗಾ, ಆಸರೆ, ಬದುಕು** ಈ ಕೃತಿಗಳ ಪ್ರತಿಪಾತ್ರದ ವ್ಯಕ್ತಿತ್ವದ ಮೇಲೆ ಕೌಟುಂಬಿಕ ಸಂಬಂಧದ ಹಿತಕರ, ಅಹಿತಕರ ಪ್ರಭಾವ ಗಾಢವಾಗಿ ಪ್ರಭಾವ ಬೀರುತ್ತವೆ. ಕುಟುಂಬದ ಗಾತ್ರ, ಜನನಾನುಕ್ರಮಗಳ ಆಧಾರದ ಮೇಲೆ ಕುಟುಂಬದೊಳಗೆ ಸ್ತ್ರೀಯರ ಭಾವಾನಾತ್ಮಕ ಹೊಂದಾಣಿಕೆಯ ವಿಫಲತೆ ರೂಪುತಾಳುತ್ತದೆ. **ನೀಲಗಂಗಾ**ದ ನೀಲ, **ಆಸರೆ**ಯ ತಾಳವ್ವ, ತಂಗಮ್ಮ, **ಬದುಕು** ಕೃತಿಯ ಶಾಣಮ್ಮ, ಕಾಳವ್ವ, ಬೆಳ್ಳಿ ಇವರೆಲ್ಲರೂ ಕೌಟುಂಬಿಕ ನೆಲೆಯಿಂದ ವಿಪರೀತ ಸಮಸ್ಯೆಗಳನ್ನು, ಚಿಂತೆಗಳನ್ನು ಎದುರಿಸಿದವರಾಗಿದ್ದಾರೆ. ದಿನಕೂಲಿ, ದುಡಿಮೆ, ಜೀತ ಈ ಮೂಲಕ ದಿನದ ಖರ್ಚನ್ನು ಸಂಪಾದಿಸುವ ಶಕ್ತಿ ಅವರಿಗಿದ್ದರೂ ಏನನ್ನೂ ನಾಳೆಗಾಗಿ ಕೂಡಿಡದ ಕುಟುಂಬ ಅವರದು. ಇದಕ್ಕೆ ಮುಖ್ಯ ಕಾರಣ ಆ ಕುಟುಂಬಗಳನ್ನು ಕಾಡುವ ಗಂಡಸರ ಕುಡಿತ. ಇದಕ್ಕೆ ಅವರ ಇಡೀ ಕುಟುಂಬ ಬಲಿಯಾಗುವುದು, ಬಡತನದಿಂದ ನಲುಗುವುದು ವ್ಯಕ್ತವಾಗುತ್ತದೆ. ಕೆಳಜಾತಿಯ ಕುಟುಂಬದಲ್ಲಿ ಮಕ್ಕಳ ಪಾಲನೆ ಪೋಷಣೆಯ ಜವಾಬ್ದಾರಿ, ವೃದ್ಧರನ್ನು ನೋಡಿಕೊಳ್ಳುವ ಹೊಣೆಗಾರಿಕೆ ಮತ್ತು ಹೃದಯವಂತಿಕೆ ಇರುವುದು ಕೇವಲ ಸ್ತ್ರೀಯರಿಗೆ ಮಾತ್ರ. ಇದರಿಂದಾಗಿ ಗಂಡಸರಿಗೆ ಶತಮಾನಗಳಿಂದಲೇ ಬೇಡವಾಗಿರುವ ಕುಟುಂಬ ವ್ಯವಸ್ಥೆ ಹೆಂಗಸರ ಆತ್ಮಸ್ಥೈರ್ಯ, ತ್ಯಾಗ ಜೀವನದ ಮೇಲೆ ಮಾತ್ರವೇ ನಿಂತಿರುವಂತೆ ಕಾಣಬರುತ್ತದೆ. ಇದನ್ನು ಅತಿಶಕ್ತವಾಗಿ ಗೀತಾನಾಗಭೂಷಣ ಅವರ ಎಲ್ಲಾ ಕಾದಂಬರಿಗಳು ಬಿಂಬಿಸುತ್ತವೆ.

**ಸಾರಾ ಅಬೂಬಕ್ಕರ್ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ಕೌಟುಂಬಿಕ ಸ್ವರೂಪ :**

ಗಂಡ - ಹೆಂಡತಿ ತಮ್ಮ ಮಕ್ಕಳೊಡನೆ ಜೀವಿಸುವ ಮೂಲ ಘಟಕವಾದ ಮುಸ್ಲಿಂ ಮಾಪಿಳ್ಳೆ ಸಮಾಜದಲ್ಲಿ ರಕ್ತ ಸಂಬಂಧಿಗಳ ಕುಟುಂಬಕ್ಕೆ ವಿಶೇಷ ಪ್ರಾಧಾನ್ಯವಿದೆ. ಸಾರಾ ಅವರ ಕೃತಿಗಳು ಇಂತಹ ರಕ್ತ ಸಂಬಂಧಿಗಳ ಸಗೋತ್ರ ಕುಟುಂಬಗಳನ್ನು ನಿರೂಪಿಸುತ್ತವೆ. ಇಲ್ಲಿ ತಂದೆ ಮಕ್ಕಳ ಸೋದರ ಸೋದರಿಯರ ಸಂಬಂಧ ನಿಕಟವಾದದು. ಪಿತೃ ಪ್ರಧಾನ ಕುಟುಂಬ ಪದ್ಧತಿಯಾದ ಇದರಲ್ಲಿ ಸ್ತ್ರೀ ತನ್ನ ತವರುಮನೆಯ ಸಂಪರ್ಕವನ್ನು ತೊರೆಯಬೇಕಾಗುತ್ತದೆ. ಮಾತ್ರವಲ್ಲದೆ ಕುಟುಂಬದಲ್ಲಿ ಪತ್ನಿಯನ್ನು ಪರಕೀಯಳೆಂದು ಭಾವಿಸಿ ತಂದೆ ಮಕ್ಕಳ ಸಂಬಂಧಕ್ಕೆ ಹೆಚ್ಚು ಆದ್ಯತೆ ನೀಡಲಾಗುತ್ತದೆ. ಓರ್ವ ವ್ಯಕ್ತಿ ನಾಲ್ಕು

ವಿವಾಹವನ್ನು ಬೇಕಿದ್ದರೂ ಮಾಡಿಕೊಳ್ಳಬಹುದೆನ್ನುವ ಮುಸ್ಲಿಂ ಷರಿಯತ್ ಕಾನೂನು ಬಹುಪತ್ನಿತ್ವವನ್ನು ಮಾನ್ಯಮಾಡಿದೆ. ಪರಿಣಾಮವಾಗಿ ಬಹುಪತ್ನಿತ್ವ ಕುಟುಂಬ ವ್ಯವಸ್ಥೆಯನ್ನು ಸಮಾಜ ಒಪ್ಪಿ ಸ್ವೀಕರಿಸಿದೆ. 'ತಲಾಖ್'ನಂತಹ ವಿಚ್ಛೇದನ ಪದ್ಧತಿಯ ಬಳಕೆ ಮತ್ತು ಬಹುಪತ್ನಿತ್ವದ ಆಚರಣೆ ಇವುಗಳು ಕುಟುಂಬದ ಸದಸ್ಯತ್ವದ ಹೆಚ್ಚಳಕ್ಕೆ ನೇರ ಕಾರಣಗಳಾಗಿದ್ದರೆ, ಕುಟುಂಬ ಯೋಜನೆಯನ್ನು ಪಾಲಿಸದಿರುವ ಪರಿಣಾಮವಾಗಿ 'ಅತಿ ಸಂತಾನ'ವೆಂಬುದು ಇಂತಹ ಕುಟುಂಬಗಳನ್ನು ಕಾಡುವ ಗಂಭೀರವಾದ ಸಮಸ್ಯೆಯಾಗಿದೆ. ಸಾರಾ ಅವರ ಕಾದಂಬರಿಗಳು ಆಮೂಲಾಗ್ರವಾಗಿ ಕೌಟುಂಬಿಕ ನೆಲೆಯಲ್ಲಿ ಸ್ತ್ರೀಯರು ಎದುರಿಸುವ ಸಮಸ್ಯೆಗಳನ್ನು ಮತ್ತು ಅವುಗಳ ವ್ಯಾಪಕತೆಯನ್ನು ಕುರಿತು ಚರ್ಚಿಸುತ್ತವೆ. ಚಿಂತನೆಗೆ ಹಚ್ಚುತ್ತವೆ. ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ವಿವಾಹ, ಬಹುಪತ್ನಿತ್ವ, ತಲಾಖ್, ಮಕ್ಕಳು, ಮರುವಿವಾಹ ಇವುಗಳೆಲ್ಲವೂ ಪುರುಷರ ಪ್ರತಿಷ್ಠೆಯ ವಿಷಯಗಳಾಗಿರುತ್ತವೆ. ಕೌಟುಂಬಿಕವಾಗಿ ಮನೆಯ ಹೆಂಗಸರು ಇದಕ್ಕೆ ಮುಖಾಮುಖಿಗೊಳ್ಳುವ ಬಗೆಗಳನ್ನು ಅವರ ಕಾದಂಬರಿಗಳು ಅನುಸಂಧಾನಕ್ಕೆ ಎತ್ತಿಕೊಳ್ಳುತ್ತವೆ. **ಚಂದ್ರಗಿರಿಯ ತೀರದಲ್ಲಿ, ವಜ್ರಗಳು, ಸಹನ** ಇವುಗಳಲ್ಲಿ ತಲಾಖ್ ಮತ್ತು ಮರುವಿವಾಹವನ್ನು ಸ್ತ್ರೀ-ಪುರುಷರ ನೆಲೆಯಲ್ಲಿ ಮಾತ್ರವಲ್ಲದೆ, ಕೌಟುಂಬಿಕವಾಗಿಯೂ ಅವು ಬೀರುವ ಪರಿಣಾಮಗಳ ಅವಲೋಕನದ ಪ್ರಯತ್ನವಿದೆ. 'ತಲಾಖ್' ಮತ್ತು 'ಮರುವಿವಾಹ'ವನ್ನು ಕುಟುಂಬವೊಂದು ಮಕ್ಕಳ ನೆಲೆಯಲ್ಲಿ ಗಂಭೀರವಾಗಿ ಎದುರಿಸುತ್ತದೆ. ಮಕ್ಕಳ ಹಕ್ಕು ತಂದೆಯದ್ದಾಗಿರುವುದರಿಂದ 'ತಲಾಕ್' ಕೊಟ್ಟ ತಕ್ಷಣ ಮಕ್ಕಳು ತಾಯಿಯಿಂದ ಬೇರ್ಪಡುವ ಸಂಭವ ಹೆಚ್ಚು. **ಚಂದ್ರಗಿರಿಯ ತೀರದಲ್ಲಿ**ನ ನಾದಿರ ತನ್ನ ಒಂಬತ್ತು ತಿಂಗಳ ಮಗುವನ್ನು 'ತಲಾಕ್'ನ ಪರಿಣಾಮದಿಂದ ಕಳೆದುಕೊಳ್ಳುವುದು, **ವಜ್ರ**ಗಳ ನಫೀಸಾ ಹನ್ನೊಂದು ವರ್ಷ ತವರಿನಲ್ಲಿ ಸಾಕಿದ ಮಗನನ್ನು ಅವಳ ಮೊದಲ ಪತಿ ವಿದ್ಯಾಭ್ಯಾಸದ ಕಾರಣ ನೀಡಿ ಕರೆದೊಯ್ಯುವುದು, ಮಕ್ಕಳ ಮೇಲೆ ತಂದೆಗೆ ಇರುವ ಹಕ್ಕಿನ ನೆಲೆಯಲ್ಲಿಯೇ ಆಗಿದೆ. ಇಲ್ಲಿ ವ್ಯಕ್ತಿಗತವಾದ ನೋವು ದುಃಖಗಳಿಗೆ ಕುಟುಂಬ ಸಾಂತ್ವನ ನೀಡಲಾರವು. ಕಾರಣ ಮಕ್ಕಳು ತಂದೆಗೆ ಸೇರಬೇಕಾದವರು ಎನ್ನುವ ವಿಚಾರವು ಧಾರ್ಮಿಕವಾಗಿ ಅಂಗೀಕೃತವಾದ ಹಕ್ಕು. ಈ ವ್ಯವಸ್ಥೆಯಲ್ಲಿ ಗಂಡು ಮಗುವಾದರೆ ಏಳು ವರ್ಷಗಳವರೆಗೆ, ಹೆಣ್ಣು ಮಗುವಾದರೆ ಹದಿನಾಲ್ಕು ವರ್ಷಗಳವರೆಗೆ ತಾಯಿಯ ಬಳಿ ಇರಬಹುದು. ಆದರೆ ಈ ವರ್ಷಗಳನ್ನೆಲ್ಲಾ ಯಾರೂ ಗಮನದಲ್ಲಿ ಇಟ್ಟುಕೊಳ್ಳುವುದಿಲ್ಲ. ತಮಗೆ ಯಾವಾಗ ಸೌಕರ್ಯವೊ ಆಗ ಕರೆದುಕೊಂಡು ಹೋಗುವುದು ವಾಡಿಕೆ. ಹೆಣ್ಣು ಮಕ್ಕಳನ್ನು ಕರೆದುಕೊಂಡು ಹೋಗುವುದು ಕಡಿಮೆ. ಇಲ್ಲವಾದರೆ ಆ ಮಕ್ಕಳಿಗೆ ಹಣಕೊಡಬೇಕೆಂದು ಇಸ್ಲಾಂ ಧರ್ಮ ಹೇಳುತ್ತದೆ. ಅದಕ್ಕಾಗಿ ಒಮ್ಮೆ ತಲಾಕ್ ಕೊಟ್ಟು ಬಿಟ್ಟರೆ, ಇಲ್ಲವೆ ಅದಕ್ಕೆ ಮೊದಲೇ ಆದಷ್ಟು ಶೀಘ್ರವಾಗಿ ತಾಯಿ ಮಕ್ಕಳನ್ನು ಅಗಲಿಸುತ್ತಾರೆ. ಇದರಲ್ಲಿ ಕುಟುಂಬದ ಯಾರಿಗೂ ಯಾವ ವಿಶೇಷವೂ ಕಾಣುವುದಿಲ್ಲ. ಆದರೆ ಚಿಕ್ಕ ಮಗುವಾದರೆ ಮಾತ್ರ ಮಗು ಚಿಕ್ಕದೆಂಬ ಕಾರಣಕ್ಕೆ ಕುಟುಂಬದವರು ಒಂದು ಕ್ಷಣ ನೊಂದುಕೊಳ್ಳುತ್ತಾರೆ. ಮುಂದಿನ ದಿನಗಳಲ್ಲಿ ಎಲ್ಲರೂ ಇದನ್ನೆಲ್ಲಾ ಮರೆಯುವುದು ಆ ಸಮುದಾಯದ ಜೀವನ ಕ್ರಮವೆಂಬಂತೆ ತೋರುತ್ತದೆ.

> "ಸ್ಥಿರವಾದ ಒಂದು ಗಾಯವಾಗಿ ಅಲ್ಲಿಂದ ಎಂದೆಂದೂ ರಕ್ತ ಹರಿಯುತ್ತಾ ಇರುವುದು ತಾಯಿಯ ಹೃದಯದಲ್ಲಿ ಮಾತ್ರ". (ಸಾರಾ ಅಬೂಬಕ್ಕರ್ : ೧೯೮೬; ೮೬)

ಕುಟುಂಬವು ನಾದಿರಾ, ನಫೀರಾರಂತಹ ನತದೃಷ್ಟರಿಗೆ ಸಮಾಧಾನ ನೀಡಲಾರದು. ಅಥವಾ ಅದರ ಸಾಂತ್ವನದ ನೆಲೆಗಳೇನಿದ್ದರೂ, ಹೆಣ್ಣನ್ನೂ ವ್ಯವಸ್ಥೆಗೆ ಮತ್ತೆ ಮತ್ತೆ ಒಪ್ಪಿಸುವ ಬಗೆಯಲ್ಲಿಯೇ ಇರುತ್ತದೆ. ಮರು ಮದುವೆ ಮತ್ತು ಬಹುಪತ್ನಿತ್ವವನ್ನು ಕುಟುಂಬ ಸ್ವೀಕರಿಸುವ ಬಗೆಯೂ ಋಣಾತ್ಮಕ ಅಥವಾ ಧನಾತ್ಮಕ ನೆಲೆಗಳಲ್ಲಿ ಇರುತ್ತವೆ. ಇದನ್ನು **ವಜ್ರಗಳು, ಸಹನಾ, ಸುಳಿಯಲ್ಲಿ ಸಿಕ್ಕವರು** ಕೃತಿಗಳು ವಿಭಿನ್ನ ಸಂದರ್ಭದಲ್ಲಿ ಇಟ್ಟು ಗಮನಿಸುತ್ತವೆ. ಈ ಕಾದಂಬರಿಗಳಲ್ಲಿ ಕೌಟುಂಬಿಕ ಸಂಸ್ಥೆ ಇಸ್ಲಾಂ ಧರ್ಮದ ಮುಖ್ಯ ನೀತಿ ಆದರ್ಶಗಳನ್ನು ಅವಲಂಬಿಸಿ ಬೆಳೆದು ಬಂದಿದೆ ಎಂಬುದನ್ನು ಪರಿಭಾವಿಸಲಾಗಿದೆ. ಕುಟುಂಬದಲ್ಲಿ ಲೈಂಗಿಕಾಧಾರವಾದ ಕಾಮ, ಪ್ರೇಮ, ಅದರ ಫಲವಾದ ಸಂತಾನಾಭಿವೃದ್ಧಿ, ಅದರಿಂದ ಬೆಳೆಯುವ ಮಕ್ಕಳ ಮೇಲಿನ ವಾತ್ಸಲ್ಯ, ಮಕ್ಕಳಿಗೆ ತಂದೆ ತಾಯಿಯರ ಬಗೆಗಿನ ಪ್ರೇಮ, ವಿಶ್ವಾಸ, ಮಕ್ಕಳ ಭವಿಷ್ಯದ ಬಗೆಗಿನ ಕಾಳಜಿ... ಇತ್ಯಾದಿ ಬಾಂಧವ್ಯ ಪರಂಪರೆಯನ್ನು ಬಗೆಯುವ ನೆಲೆ ಇದೆ. ಹಾಗಾಗಿ ಇಲ್ಲಿ ಮುಖ್ಯವಾಗುವುದು ಕುಟುಂಬದ ಸದಸ್ಯರಲ್ಲಿ ರೂಪಿತವಾಗುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಶಿಕ್ಷಣ- ಜೀವನಪಾಠ, ಅದರಿಂದ ಜೀವನದುದ್ದಕ್ಕೂ ಉಂಟಾಗುವ ಪರಿಣಾಮ ಮತ್ತು ಪ್ರಭಾವ. ಮದರಸಾದಲ್ಲಿನ ಧಾರ್ಮಿಕ ಶಿಕ್ಷಣ, ಗಂಡು ಮಕ್ಕಳಿಗೆ ಸಾರ್ವತ್ರಿಕ ಶಿಕ್ಷಣ ಸೌಲಭ್ಯ, ಸ್ತ್ರೀಯರಿಗೆ ಕಡ್ಡಾಯವಾಗುವ ಬುರುಕಾ, ಐದು ಹೊತ್ತಿನ ನಮಾಜು ಪದ್ಧತಿಗಳನ್ನು ಸಾರಾ ಅವರು ಕೌಟುಂಬಿಕ ಮೂಲದಿಂದಲೇ ಬೆಳಕಿಗೊಡ್ಡುತ್ತಾರೆ.

> "ಮಮ್ಮೂಟಿ ಒಳ ಬಂದವನೇ ಸೂಟ್‌ಕೇಸು ತೆರೆದು ರುಖಿಯಾಳ ಕೈಯಲ್ಲಿಟ್ಟು ಇನ್ನು ಮುಂದೆ ನೀನಲ್ಲಾದರೂ ಹೊರಗೆ ಹೋಗ ಬೇಕಾದರೆ ಇದನ್ನು ಹಾಕಬೇಕು. ತಿಳಿಯಿತೇ? ಆ ಗಂಡಸರು ಹೇಗೆ ನಿನ್ನನ್ನು ನೋಡ್ತಿದ್ದಾರೆ? ಎಂದು ಹೆಂಡತಿಯ ಮೇಲೆ ರೇಗಿದನು. 'ಅವರು ನೋಡಿದ್ದಕ್ಕೆ ನಾನು ಹೊಣೆಯೇ?' ಎಂದು ಗೊಣಗಿದಾಕೆಯ ಮಾತುಗಳಿಗೆ ಪ್ರತಿಕ್ರಿಯಿಸದೆ, 'ಇನ್ನೊಂದನ್ನು ಉಮ್ಮಾಗೆ ಕೊಡು.' ಎಂದನು.
>
> ಉಮ್ಮಾಲಿ ಮತ್ತು ರುಖಿಯಾ ಇಬ್ಬರೂ ಅದನ್ನು ಬಿಡಿಸಿ ಉದ್ದ ಅಗಲ ನೋಡಿದರು. ಬಾಗಿಲ ಬಳಿ ಬೆಳಕಿಗೆ ಹಿಡಿದು ಬಣ್ಣ ನೋಡಿದರು. ತಮ್ಮೂರಿನ ಜಮೀನ್ದಾರರು ಮತ್ತು ಒಂದೆರಡು ಅನುಕೂಲಸ್ಥ ಕುಟುಂಬಗಳಲ್ಲಿ ಈಗಾಗಲೇ ಚಾಲ್ತಿಗೆ ಬಂದಿದ್ದ ಈ ಬುರ್ಕಾ ತಮ್ಮ ಮನೆಗೂ ಬಂದದ್ದು ಅತ್ತೆ ಸೊಸೆಯರಿಗೆ ಹಿಡಿಸಲಾರದಷ್ಟು ಆನಂದವಾಗಿತ್ತು. ಎಲ್ಲವನ್ನೂ ಮರೆಮಾಡುವ ಶಕ್ತಿಯುಳ್ಳ ಒಂದು ವಸ್ತು! ಉಮ್ಮಾಲಿ ಮಗನೊಡನೆ, 'ಹರಿದ ಸೀರೆ ಉಡುವಾಗಲೆಲ್ಲ ಇಂತಹದೊಂದು ಕವಚಬೇಕೂಂತ ನನಗೂ ಅನ್ನಿಸುತ್ತಿತ್ತು. ನೀನು ಇದನ್ನು ತಂದದ್ದು ಒಳ್ಳೆಯದಾಯಿತು! ಎಂದು ನುಡಿದಳು. " (ಸಾರಾ ಅಬೂಬಕ್ಕರ್: ೧೯೯೪ ;೬೩)

ಕೌಟುಂಬಿಕವಾಗಿ ಬೆಳೆಯುವ ಧಾರ್ಮಿಕ ಹಾಗೂ ನೈತಿಕ ಭಾವನೆಗಳು; ಅವರು ಪಾಲಿಸಬೇಕಾಗಿರುವ ಮೌಲ್ಯಗಳ; ಹಾಗೂ ಕಾಲಕಾಲಕ್ಕೆ ಕುಟುಂಬದ ಸ್ವರೂಪದಲ್ಲಿ ತಲೆದೋರುವಂತಹ ಬದಲಾವಣೆಗಳಿಗೆ ತಕ್ಕಂತೆ ಹೊಂದಿಕೊಂಡು ಬದುಕುವ ಸ್ತ್ರೀಯರ ಪ್ರಜ್ಞೆ ಹೀಗೆ ಹತ್ತಾರು ಬಗೆಯ ಲಕ್ಷಣ ಮತ್ತು ಗುಣಗಳನ್ನು ಮುಸ್ಲಿಂ ಮಾಪಿಳ್ಳೆ ಕೌಟುಂಬಿಕ ವ್ಯವಸ್ಥೆ ಒಳಗೊಂಡಿದೆ. ಅವೆಲ್ಲವೂ ಅದರ ಅಸ್ತಿತ್ವಕ್ಕೆ ಅತ್ಯವಶ್ಯವೆಂಬಂತೆ ಸಾರಾ ಅವರ ಕೃತಿಗಳು ವಾಸ್ತವ ನೆಲೆಯಲ್ಲಿ ತೆರೆದಿಡುತ್ತವೆ. ಇಂತಹ ಸಾಂಪ್ರದಾಯಿಕ ಕುಟುಂಬದಲ್ಲಿ ತಮಗೆ ಬೇಕೆನಿಸಿದ್ದನ್ನು

ಬೇಕಾದಂತೆ ಮಾಡುವ ಅಥವಾ ಬಿಡುವ 'ವ್ಯಕ್ತಿ ಸ್ವಾತಂತ್ರ್ಯ' ಸ್ತ್ರೀಯರಿಗೆ ಇಲ್ಲವೇ ಇಲ್ಲ. ವಜ್ರಗಳಲ್ಲಿ ಇದರ ಕಠೋರತೆಯ ಚಿತ್ರಣವಿದೆ. ಬಹಿರ್ದೆಸೆಗೆ ಹೋಗಲು ಕೂಡ ರಾತ್ರಿಯನ್ನು ಕಾಯಬೇಕಾದ ಸ್ತ್ರೀಯರ ಬದುಕಿನ ಪರಿಸ್ಥಿತಿ ಇಲ್ಲಿ ಅಸಹನೀಯ. ಇಂತಹ ಪರಿಸ್ಥಿತಿಯೊಳಗೆ ಕುಟುಂಬದ ಸದಸ್ಯರ ನಡುವೆ ಆಪ್ತತೆಯ ಅಭಾವ ದೊಡ್ಡ ಕೊರತೆಯಾಗಿ ಪರಿಣಮಿಸುತ್ತದೆ. ತಾವೆಲ್ಲ ಮನೆಯ ಜೀತಗಾರರು, ಹೆರುವ ಯಂತ್ರಗಳು ಎಂಬುದು ಇಲ್ಲಿನ ಸ್ತ್ರೀಯರ ಅನಾಸಕ್ತಿಗೆ, ಪರಕೀಯ ಭಾವನೆಗೆ ಕಾರಣಗಳಾಗುತ್ತವೆ. ಮನೆಯೊಳಗಿನ ಒಡೆತನವೆಲ್ಲ ಸ್ತ್ರೀಯರದಾಗಿರುವ **ಸುಳಿಯಲ್ಲಿ ಸಿಕ್ಕವರು ಪ್ರವಾಹ ಸುಳಿ** ಈ ಕೃತಿಗಳಲ್ಲಿ ಆಳುಕಾಳುಗಳ ಮೇಲ್ವಿಚಾರಣೆ ಮತ್ತು ಮಕ್ಕಳ ಪಾಲನೆ ಪೋಷಣೆ ಮಾತ್ರ ಸ್ತ್ರೀಯರ ಜವಾಬ್ದಾರಿಯೆಂಬಂತೆ ತೋರುತ್ತದೆ. ಉಳಿದ ಎಲ್ಲಾ ಕೌಟುಂಬಿಕ, ಸಾಮಾಜಿಕ ವಿಚಾರಗಳು, ನಿರ್ಣಯಗಳು ಪುರುಷರಿಗೆ ಸಂಬಂಧಿಸಿದ್ದಾಗಿವೆ.

**ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಪ್ರಕಟಗೊಂಡಿರುವ ಕೌಟುಂಬಿಕ ಸ್ವರೂಪ :**

೧) ಕುಟುಂಬದಲ್ಲಿ ಪುರುಷ ಯಜಮಾನ. ಆದರೆ, ಕುಟುಂಬದ ಒಳಗೆ ದುಡಿಯುವ ವ್ಯಕ್ತಿಗಳು, ಕುಟುಂಬವನ್ನು ಸಾಕುವುದೆಲ್ಲ ಸ್ತ್ರೀಯರೇ ಆಗಿರುತ್ತಾರೆ. (**ಬದುಕು** ಕೃತಿಯ ಮಲ್ಲಪ್ಪ ಜಮಾದ್ದಾರನ ಕುಟುಂಬವನ್ನು ಹೊರತುಪಡಿಸಿ)

೨) ಕುಟುಂಬ ಜೀವನದಲ್ಲಿ ಬರಬಹುದಾದ ಎಡರುತೊಡರುಗಳನ್ನು ಎದುರಿಸುವ ಧೈರ್ಯ, ಸಾಮರ್ಥ್ಯ, ನಿರ್ಣಯಗಳು ದಲಿತ ಸ್ತ್ರೀಯರಲ್ಲಿ ಹೆಚ್ಚಾಗಿರುತ್ತದೆ. ದಲಿತ ಹೆಣ್ಣು ಕುಟುಂಬದ ಪರಿಸ್ಥಿತಿಗಳನ್ನು ಒಂಟಿಯಾಗಿ ನಿಭಾಯಿಸುವವಳಾಗಿ ಕಾಣಿಸಿಕೊಳ್ಳುತ್ತಾಳೆ.

೩) ಸ್ತ್ರೀಯರಿಗೆ ಗಂಡಸಿನ ಕುಡಿತ, ಬಡತನದಿಂದ ಕೌಟುಂಬಿಕ ಜೀವನದಲ್ಲಿ ನಿರಂತರವಾದ ಆತಂಕ ಮತ್ತು ಅನಿಶ್ಚಿತತೆ ಕಾಡುತ್ತದೆ.

೪) ಕೌಟುಂಬಿಕ ಸಾಮರಸ್ಯದ ಕೊರತೆಯಿಂದಾಗಿ ವೈಯಕ್ತಿಕ, ಸಾಮಾಜಿಕ ಜೀವನಗಳಲ್ಲಿ ಸುಖ ಸಂತೃಪ್ತಿ ಪಡೆಯಲು ಸಾಧ್ಯವಾಗದೆ ಹೋಗುವುದು.

ಧಾರ್ಮಿಕ ತಳಹದಿಯನ್ನು ಹೊಂದಿರುವ ಮುಸ್ಲಿಂ ಕುಟುಂಬ ವ್ಯವಸ್ಥೆಯನ್ನು ಸಾರಾ ಅಬೂಬಕ್ಕರ್ ಅವರ ಕೃತಿಗಳ ಆಧಾರದಿಂದ ಈ ಕೆಳಗಿನಂತೆ ಕ್ರೋಢೀಕರಿಸಬಹುದು.

೧) ಪಿತೃಆಡಳಿತ ಕುಟುಂಬ ವ್ಯವಸ್ಥೆ ( Patriarchal Family).

೨) ಕುಟುಂಬವೆನ್ನುವುದು ಧರ್ಮದ ಪಾವಿತ್ರ್ಯ ಮುಖ.

೩) ಸಮಾಜದಲ್ಲಿ ಧರ್ಮಕ್ಕಿರುವ ನೈತಿಕ ನೆಲೆ ಕುಟುಂಬ.

೪) ಕುಟುಂಬ ಪುರುಷರ ಪ್ರಬಲತರ ಮಂಜೂರಾತಿಯೊಂದಿಗೆ ರಚಿತಗೊಂಡಿರುವ ಸಾಮಾಜಿಕ ಸಂಸ್ಥೆ.

೫) ಕುಟುಂಬದಲ್ಲಿ ಸ್ತ್ರೀ ಯಜಮಾನಿಯಲ್ಲ ಬದಲಾಗಿ ಮೇಲ್ವಿಚಾರಕಗಳು.

೬) ಕುಟುಂಬದ ರಕ್ಷಣೆ ಪುರುಷನಿಗೆ ಸಂಬಂಧಿಸಿದ್ದರೆ, ಅದರ ಪಾಲನೆ ಪೋಷಣೆ ಸ್ತ್ರೀಗೆ ಸಂಬಂಧಿಸಿದ್ದು.

೭) ಕುಟುಂಬದಲ್ಲಿ ವಿವಾಹ ಮೂಲತಃ ಸಾರ್ವತ್ರಿಕ ಸ್ವರೂಪದ್ದು.

೮) ಶಿಕ್ಷಣ ಮತ್ತು ಸಂಸ್ಕೃತಿ ಸೌಲಭ್ಯಗಳಿಂದ ಕುಟುಂಬದಲ್ಲಿ ಹೆಚ್ಚು ವಂಚನೆಗೆ ಒಳಗಾದವರು ಸ್ತ್ರೀಯರು.

೬) ಪರಿಣಾಮವಾಗಿ ಕೌಟುಂಬಿಕ ಶೋಷಣೆಯಲ್ಲಿ ಹೆಚ್ಚು ಕಳೆದುಕೊಳ್ಳುವವರು ಸ್ತ್ರೀಯರೇ ಆಗಿರುತ್ತಾರೆ.

**೪.೩. ಕೂಡು ಕಟ್ಟಿನ ಕಾದಂಬರಿಗಳು**

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಎಂಬ ವ್ಯಾಪಕ ಒಡಲಲ್ಲಿ ಅನುಪಮಾ ನಿರಂಜನ ಮತ್ತು ವೀಣಾಶಾಂತೇಶ್ವರ ಅವರ ಕೃತಿಗಳನ್ನು ಕೂಡು ಕಟ್ಟಿನ ಕಾದಂಬರಿಗಳು ಎಂದು ಮಾನ್ಯ ಮಾಡಲಾಗಿದೆ. (ಇದರ ಮುಖ್ಯ ಕಾರಣ ವಿವಾಹ ಮತ್ತು ಕುಟುಂಬದ ಪ್ರಧಾನ ಆಶಯಗಳು ಕಾದಂಬರಿಗಳ ವಸ್ತುವಾಗಿ ಹಲವು ಆಯಾಮಗಳಿಂದ ಮುಖಾಮುಖಿಗೊಳ್ಳುವುದೇ ಆಗಿದೆ.) ಮೊದಲ ಕಟ್ಟಿನ ಕಾದಂಬರಿಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ರೂಪಿತಗೊಂಡಿರುವ ವಿವಾಹ ಮತ್ತು ಕುಟುಂಬದ ಎಲ್ಲಾ ರೀತಿಯ ಪಲ್ಲಟಗಳನ್ನು ನಿರೂಪಿಸುವ ಪಠ್ಯಗಳಾದರೆ, ಕೂಡು ಕಟ್ಟಿನ ಕಾದಂಬರಿಗಳಲ್ಲಿ ಬಂಡವಾಳಶಾಹಿ ವ್ಯವಸ್ಥೆ ಪ್ರತಿಬಿಂಬಿತಗೊಂಡಿದೆ. ಇವು ವ್ಯವಸ್ಥೆಯ ಒಳಗೆ ಇರುವ ವ್ಯಕ್ತಿ - ವ್ಯಕ್ತಿಗಳ ವಿವಾಹ ಮತ್ತು ಕುಟುಂಬದ ಸಂಬಂಧವನ್ನು ವಾಸ್ತವಿಕ ತಳರಚನೆಯಲ್ಲಿ ಬಿಂಬಿಸುವ ಪ್ರಯತ್ನವನ್ನು ನಡೆಸುತ್ತವೆ. ವಿವಾಹ ಮತ್ತು ಕುಟುಂಬದ ಕೇಂದ್ರ ಅಭಿಪ್ರೇರಣೆಯಾಗಿ ಬಂಡವಾಳಶಾಹಿ ವ್ಯವಸ್ಥೆ ಹೇಗೆ ಪ್ರಭುತ್ವ ಸಾಧಿಸುತ್ತವೆ ಎಂಬುದನ್ನು ಪಠ್ಯಗಳ ಅಂತರ್ ನೇಯ್ಗೆಯಲ್ಲಿ ಸೂಕ್ಷ್ಮವಾಗಿ ಬಿಡಿಸುವ ಪ್ರಯತ್ನ ಕೂಡುಕಟ್ಟಿನ ಕಾದಂಬರಿಗಳಲ್ಲಿ ಪರಿಪಕ್ವವಾಗಿ ನಡೆದಿದೆ. ಕಾದಂಬರಿಯ ವಸ್ತು ವೈವಿಧ್ಯದ ಮೂಲಕ ತೊಡಗುವ ವಿವಾಹ ಮತ್ತು ಕುಟುಂಬದ ಅನುಸಂಧಾನ ಈ ಇಬ್ಬರು ಲೇಖಕಿಯರಲ್ಲೂ ಪ್ರಯೋಗಾತ್ಮಕ ರಚನಾತ್ಮಕತೆಯದಾಗಿದೆ. ಎಂದರೆ, ವಿವಾಹದ ಮೂಲಕ ಕುಟುಂಬಕ್ಕೆ ಬದ್ಧಗೊಳಿಸಿ ನಿರ್ಮಾಣಗೊಳ್ಳುವ ಸ್ತ್ರೀಯರ ಬದುಕಿನಲ್ಲಿ 'ಸ್ವಾತಂತ್ರ್ಯ', 'ಸಮಾನತೆ' ಎಂಬ ಮಾನದಂಡ ಉಂಟುಮಾಡುವ ವಿಪ್ಲವವನ್ನು, ಸಂಘರ್ಷಗಳನ್ನು, ಬದಲಾವಣೆಗಳನ್ನು, ಬೆಳವಣಿಗೆಗಳನ್ನು ಅನುಪಮಾ ನಿರಂಜನ ಮತ್ತು ವೀಣಾಶಾಂತೇಶ್ವರ ಈ ಇಬ್ಬರ ಕೃತಿಗಳು ಕೂಡ (ಬಂಡವಾಳಶಾಹಿ ವ್ಯವಸ್ಥೆಯ ಭಿನ್ನ ಸಾಮಾಜಿಕ ಸಂದರ್ಭಗಳಿಂದ) ಬಗೆಯುವ ಪ್ರಯತ್ನವನ್ನು ನಡೆಸುತ್ತವೆ. ಇವುಗಳಲ್ಲಿ ವಿವಾಹ ಸಂಸ್ಥೆಯಲ್ಲೇ ಸ್ತ್ರೀಯರ ಜೀವನದ ಸಾಫಲ್ಯ ಇದೆ ಎನ್ನುವುದನ್ನು ಮುಂದಿಡುವ ಜೊತೆಗೆ ವಿವಾಹದ ಚೌಕಟ್ಟಿನ ಆಚೆಗೆ ಇರುವ ಬದುಕನ್ನು 'ಕಾಣುವ', ಅದರಾಚೆಗಿನ ಸಾಧನೆಯ ಬಗ್ಗೆ ಅನ್ವೇಷಣಮುಖಿಗಳಾಗುವ ಕಾದಂಬರಿಗಳು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಗರ್ಭದ ಆವಿಷ್ಕಾರಗಳಾಗಿವೆ.

**೪.೩.೧. ಕೂಡುಕಟ್ಟಿನ ಕಾದಂಬರಿಗಳು: ವಿವಾಹದ ಸ್ವರೂಪ.**

**ಅನುಪಮಾ ನಿರಂಜನ ಅವರ ಕಾದಂಬರಿಗಳಲ್ಲಿ ಚಿತ್ರಿತಗೊಂಡಿರುವ ವಿವಾಹದ ಸ್ವರೂಪ :**

ಅನುಪಮಾ ಅವರ ಎಲ್ಲ ಕಾದಂಬರಿಗಳಲ್ಲಿ ವಿವಾಹ ಪ್ರಖರವಾಗಿ ಸಂಘರ್ಷಕ್ಕೆ ಗುರಿಯಾಗುವ ಸಂಸ್ಥೆಯಾಗಿದೆ. ಇದರ ಎಲ್ಲಾ ಸಾಧ್ಯತೆಗಳನ್ನು ಉತ್ಖನನ ಮಾಡುವ ಪ್ರಯತ್ನ ಇವರ ಕಾದಂಬರಿಗಳ ಕೇಂದ್ರ ಧಾರೆಯಾಗಿದೆ. **ಅನಂತಗೀತ** (೧೯೫೪), **ಸಂಕೋಲೆಯೊಳಗಿಂದ** (೧೯೫೪), **ಶ್ವೇತಾಂಬರಿ** (೧೯೫೭), **ಸ್ನೇಹಪಲ್ಲವಿ** (೧೯೬೭), **ಚಿತ್ತಮೋಹನ** (೧೯೭೨), **ಎಳೆ** (೧೯೮೦), **ಹಿಮದ ಹೂ** (೧೯೬೬), **ನೂಲುನೆಯ್ದ ಚಿತ್ರ** (೧೯೬೧), **ಮೂಡಣ ಪಡುವಣ** (೧೯೭೧), **ಋಣ** (೧೯೩೪)

**ಕಣಿವೆಗೆ ಬಂತು ಬೇಸಿಗೆ** (೧೯೭೨), **ಆಳ** (೧೯೮೯), **ಮುಕ್ತಿ ಚಿತ್ರ** (೧೯೮೮) ಈ ಕಾದಂಬರಿಗಳು ವಿವಾಹದ ನೆಲೆಗಟ್ಟನ್ನು ಹಲವು ಮೂಲಗಳಿಂದ, ವಿನ್ಯಾಸಗಳಿಂದ ಬಿಡಿಸುವ ಪಯತ್ನವನ್ನು ನಡೆಸುತ್ತವೆ. ಇದರಲ್ಲಿ ವಿವಾಹವನ್ನು ಪ್ರೇಮ, ಕಾಮದ ರೇಖೆಗಳಿಂದ ಸಾಮಾಜಿಕ ಹಾಗೂ ಧಾರ್ಮಿಕ ಪಾತಳಿಗಳ ಮೂಲಕ ಶೋಧಿಸುವ ಸ್ತರ ಹೆಚ್ಚು ಮುಖ್ಯವಾಗುವ ಅಂಶವಾಗಿದೆ. ಇದನ್ನು ನಿರ್ದಿಷ್ಟ ಪಠ್ಯವೊಂದು ಅಂತರ್ಗತ ಮಾಡಿಕೊಂಡಿರುವುದು ವ್ಯಕ್ತವಾಗುತ್ತದೆ. ಪ್ರೇಮ ವಿವಾಹ, ಸಂಪ್ರದಾಯಬದ್ಧ ವಿವಾಹ, ವಿಧವಾ ವಿವಾಹ, ಒಪ್ಪಿತ ಅಥವಾ ಒತ್ತಾಯದ ವಿವಾಹದ ಸ್ವರೂಪದಲ್ಲಿ ಈ ಜಿಜ್ಞಾಸೆ ಸಂಬಂಧಗಳ 'ಕಟ್ಟು'ವಿಕೆ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ. ಪರಿಣಾಮವಾಗಿ 'ವಿವಾಹ' ಅಂತಿಮವಾಗಿ ಸ್ತ್ರೀಯರ ಬದುಕಿನ ಶೋಧದ ಅಂತರ್‌ಸತ್ವ ಅಥವಾ ಅಂತರ್‌ದಾಹವೇನು ಎಂಬ ಭ್ರಮೆಯನ್ನು ಮೂಡಿಸುವುದು ಕೂಡ ಇದೆ. ಆದರೆ, ಈ ಅಂತರ್‌ಸತ್ವ ಅಥವಾ ಅಂತರ್‌ದಾಹದ ಬಿಂಬ ಭಾರತೀಯ ಸಂಸ್ಕೃತಿಯ ಜಿಜ್ಞಾಸೆಯ ಮೂಲ ಕಾಳಜಿಯಾಗಿದೆ. ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಜೀವನದ ಬಹು ಭಾಗವನ್ನು ವಿವಾಹ ಮತ್ತು ಅದು ಕೊಡ ಮಾಡುವ ಬದುಕು ವ್ಯಾಪಿಸುತ್ತದೆ. ಭಿನ್ನ ಆಯಾಮದಿಂದ ವಿವಾಹವನ್ನು ಒಡೆದು ನೋಡುವ ಅಭೀಪ್ಸೆಯ ಉತ್ಖನನ ಕೂಡ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ 'ವಿವಾಹ'ದ ಕುರಿತ ಆಯ್ಕೆ, ತೀರ್ಮಾನಗಳಲ್ಲಿ ಹೊರ ಹೊಮ್ಮುತ್ತದೆ. ಅನುಪಮ ಅವರ ಕಾದಂಬರಿಗಳ 'ವಿವಾಹ'ದ ಕುರಿತ ಧೋರಣೆಗಳು 'ಊರ್ಧ್ವಮುಖಿ' ಎಂದು ಎನಿಸುವುದೇ ಈ ಹಿನ್ನೆಲೆಗಳಿಂದ. ಮದುವೆಯ ವಯೋಮಿತಿಯಲ್ಲಿ ಕಾಡುವ ಜೀವನ ಸಂಗಾತಿಯ 'ಆಯ್ಕೆ' ಅಥವಾ 'ಬೆಸೆಯುವಿಕೆ'ಯು ಅನುಪಮಾ ಅವರ ಕಾದಂಬರಿಗಳನ್ನು ತೀವ್ರವಾಗಿ ಕಾಡುವ ಪ್ರಶ್ನೆ. ಈ ಆಯ್ಕೆಯಲ್ಲಿ 'ಪ್ರೇಮ'ವು ಋಣಾತ್ಮಕವಾದುದಾಗಿರಬಹುದು ಅಥವಾ ಧನಾತ್ಮಕವಾದುದಾಗಿರಬಹುದು. ಆದರೆ, ಇದರ ಪರಿಣಾಮವನ್ನು ಮಾತ್ರ ಸ್ತ್ರೀ ತೀವ್ರವಾಗಿ ಅನುಭವಿಸುವವಳಾಗುತ್ತಾಳೆ. ಪ್ರೇಮ ವಿವಾಹಕ್ಕೆ ಸಂಬಂಧಿಸಿದಂತೆ ಆಯ್ಕೆಯ ಸ್ವಾತಂತ್ರ್ಯ, ಅಭಿರುಚಿಗೆ ಮನ್ನಣೆ, ಆಯ್ಕೆಯ ವೈಯಕ್ತಿಕ ಜವಾಬ್ದಾರಿಯನ್ನು ಸ್ವೀಕರಿಸಿ, ನಿರ್ವಹಿಸುವ ಕ್ರಮ ಇವುಗಳನ್ನು **ಶ್ವೇತಾಂಬರಿ, ಸೇವೆ, ಹೃದಯವಲ್ಲಭ, ಮೂಡಣ ಪಡುವಣ, ಆಳ,** ಈ ಕಾದಂಬರಿಗಳು ಚರ್ಚಿಸುತ್ತವೆ. ಈ ಪಠ್ಯಗಳಲ್ಲಿ 'ವಿವಾಹ'ವೆಂಬ ಆರಂಭದ ಬಿಂದುವೇ ಸ್ತ್ರೀಯರ ಬದುಕನ್ನು 'ಕಟ್ಟುವ' ಅಥವಾ 'ನಿರ್ನಾಮ'ಗೊಳಿಸುವ ಗಮನಾರ್ಹ ಸ್ಥಾನವನ್ನು ನಿರ್ವಹಿಸುತ್ತದೆ. ಪ್ರೇಮ ವಿವಾಹವನ್ನು ಈ ಅರ್ಥದಲ್ಲಿ ಎತ್ತಿ ಹಿಡಿಯಲಾಗುತ್ತದೆ. ಸಮಾನವಾದ ಅಭಿರುಚಿ, ಧೋರಣೆ, ವೃತ್ತಿಯ ಸಮಾನ ವೇದಿಕೆಗಳು ವಿವಾಹಿತರಾಗುವ ಗಂಡು- ಹೆಣ್ಣನ್ನು ಬೆಸೆಯುವ ಬಹುಮುಖ್ಯ ಕಾರಣಗಳಾಗುತ್ತವೆ. 'ಶ್ವೇತಾಂಬರಿ'ಯ ರಾಧೆ ಮತ್ತು ಶ್ರೀನಾಥ, 'ಸೇವೆ'ಯ ಮಹದೇವಗೌಡ ಮತ್ತು ಸುನಂದಾ ತಮ್ಮ ವೈದ್ಯಕೀಯ ವೃತ್ತಿ ಮತ್ತು ಸಮಾನ ಆಸಕ್ತಿ, ಗುರಿಗಳ ಮೂಲಕ ಹತ್ತಿರವಾಗುತ್ತಾರೆ. ಒಂದೇ ವೃತ್ತಿಯಲ್ಲಿದ್ದರೂ ತಮ್ಮ ತಮ್ಮ ವೈಯಕ್ತಿಕ ಜೀವನ ದೃಷ್ಟಿ, ಹಿನ್ನೆಲೆಯಿಂದ ಪ್ರತ್ಯೇಕಗೊಳ್ಳುವ ಕಥಾ ಪಾತ್ರಗಳು **ಶ್ವೇತಾಂಬರಿ** ಮತ್ತು **ಸೇವೆ** ಈ ಎರಡೂ ಕೃತಿಯಲ್ಲಿ ಇವೆ. ಆದರೆ, ಕಾದಂಬರಿಯ ಕೇಂದ್ರ ಓಘ ರಾಧೆ, ಶ್ರೀನಾಥ, ಮಹದೇವಗೌಡ ಮತ್ತು ಸುನಂದಾ ಇವರ ಸಂಬಂಧಗಳಲ್ಲಿನ 'ಪ್ರೇಮ'ಕ್ಕೆ ಹೆಚ್ಚಿನ ಒತ್ತು ನೀಡಿದೆ. 'ಪ್ರೇಮ ವಿವಾಹ'ದಲ್ಲಿ ಜಾತಿ, ದೇಶ, ಧರ್ಮ, ಚರ್ಮದ ಬಣ್ಣ ಮೊದಲಾದವುಗಳು ಅಮುಖ್ಯವಾಗತೊಡಗುತ್ತವೆ. ಇದನ್ನು ಮೂಡಣ ಪಡುವಣದ ಶ್ರೀನಿವಾಸ ಮತ್ತು ಇಡಾಳ ವಿವಾಹವು ತೆರೆದಿಡುತ್ತದೆ. ಇಲ್ಲಿ:

"ಜೊತೆಗೂಡಿ ನಡೆಸುವ ಬಾಳ್ವೆಗೆ ಹೊರಗಿನ ಬಣ್ಣ ಅಡ್ಡಿಯಾಗಲಾರದು. ಮನಸ್ಸು ಮನಸ್ಸುಗಳ ಮಿಲನ, ಪರಸ್ಪರ ಗೌರವ, ಅನುಕಂಪ- ಇವು ಒಬ್ಬರೊಬ್ಬರನ್ನು ಬೆಸೆಯುವ ಕೊಂಡಿ."
(ಅನುಪಮಾ ನಿರಂಜನ:೧೯೭೧; ೩೭)

ಎನ್ನುವುದು ಮುಖ್ಯವಾಗುತ್ತದೆ. ಗಂಡು-ಹೆಣ್ಣಿನ ಸಂಬಂಧದಲ್ಲಿ 'ಪ್ರೇಮ ವಿವಾಹ'ದ ಸಾಧ್ಯತೆಗಳನ್ನು ಬಗೆಯುವ **ಆಳ**ದಲ್ಲಿ ಮಾಲಿನಿಯು ರವೀಂದ್ರನನ್ನು ವಿವಾಹವಾಗುತ್ತಾಳೆ. ಒಂದೇ ವೃತ್ತಿಯಲ್ಲಿರುವ ಗಂಡ ಹೆಂಡತಿಯರ ಬದುಕು ಹೊಂದಾಣಿಕೆಯ ಆದರ್ಶಪ್ರಾಯ ಜೀವನವಾಗುತ್ತದೆ, ಎನ್ನುವ ಅವರಿಬ್ಬರ ಅಭಿಪ್ರಾಯವು ಇದಕ್ಕೆ ಕಾರಣವಾಗುತ್ತದೆ. 'ಪ್ರೇಮ'ವೆಂಬ ಮನೋಭಾವ ತಾರುಣ್ಯದಲ್ಲಿ ಗಂಡು- ಹೆಣ್ಣನ್ನು ಬೆಸೆಯುವ ಪ್ರಧಾನ ಭಾವ. ಪಕ್ಕದ ಒಳಗೆ ಇದು ಏಕಮುಖವಾದಾಗ 'ತ್ಯಾಗ'ಕ್ಕೆ ವಿಶೇಷವಾದ ಮಹತ್ವ ಬರುತ್ತದೆ. ಪ್ರೇಮದ ಮತ್ತೊಂದು ಮಗ್ಗುಲೇ ತ್ಯಾಗ ಎಂಬುದನ್ನು ನಿರೂಪಿಸುವ ಕೃತಿ **ಅನಂತಗೀತ**ದಲ್ಲಿ ಅನಂತ ತನ್ನ ಪ್ರೀತಿಯನ್ನು ಎಂದೂ ಶಶಿಯ ಮುಂದೆ ಹೇಳಿಕೊಂಡಿರುವುದಿಲ್ಲ. ಶಶಿಯ ಒಡನಾಟ- ವರ್ತನೆಗಳಿಗೆ ಅರ್ಥ ಕಲ್ಪಿಸಿ ಆಕೆ ಕೂಡ ಪ್ರೀತಿಸುತ್ತಿದ್ದಾಳೆ ಎಂದು ಭ್ರಮೆಗೆ ಒಳಗಾಗುತ್ತಾನೆ. ಶಶಿ ತನ್ನ ಆಯ್ಕೆಯಾದ ತನ್ನಂತೆಯೇ ವಿಜ್ಞಾನಿಯಾಗ ಹೊರಟ ಶ್ರೀಧರನನ್ನುವರಿಸಿದಾಗ ಹತಾಶನಾಗುತ್ತಾನೆ. ಪ್ರೀತಿಯು ತ್ಯಾಗವಾಗಿ ಮಾರ್ಪಟ್ಟಾಗಲೇ ಅದಕ್ಕೆ ಅರ್ಥವ್ಯಾಪ್ತಿ ಹೆಚ್ಚು ಎಂಬುದನ್ನು ಕಾದಂಬರಿ ಒಪ್ಪಿಸುವ ಪ್ರಯತ್ನವನ್ನು ನಡೆಸುತ್ತದೆ. ಅನಂತನನ್ನು ಕುರಿತು ಶಶಿಗಿದ್ದ ಪ್ರೀತಿ ಯಾವ ಬಗೆಯದೆಂಬುದು ಅನಂತನಂತೆ ಓದುಗರಿಗೂ ಸ್ಪಷ್ಟವಾಗುವುದಿಲ್ಲ. ಇದನ್ನು ಕೊ.ಸು ಸೀತಾರಾಮ್ (೧೯೫೪), ವಿಜಯಶ್ರೀ ಸಬರದ(೧೯೯೪), ವಿಜಯಾದಬ್ಬೆ (೧೯೯೮)ಯಂತಹ ವಿಮರ್ಶಕರು ಸರಿಯಾಗಿ ಗುರುತಿಸಿದ್ದಾರೆ.

"ವಿಜ್ಞಾನಿಯಾಗುವ ಹಂಬಲದಲ್ಲಿ ಶಶಿ ಅನಂತನನ್ನು ವಂಚಿಸಿದಂತೆನಿಸುತ್ತದೆ. ಅಲ್ಲದೆ ವಿಜ್ಞಾನಿಯಾಗಲು ವಿಜ್ಞಾನಿಯಾದ ಜೊತೆಗಾರನೇ ಬೇಕಿಂದಿಲ್ಲವಾದ್ದರಿಂದ ಅನಂತನಲ್ಲಿದ್ದ ಪ್ರೀತಿಯನ್ನು ಮರೆತು ಶ್ರೀಧರನಲ್ಲಿ ಅವಳು ಮನಸೋತಳೆಂಬುದೇ ಸ್ಪಷ್ಟವಾಗುವ ವಿಷಯ".
(ವಿಜಯಾದಬ್ಬೆ : ೧೯೯೮ ;೯೯)

ಶಶಿ ವಿಜ್ಞಾನಿಯಾಗುವ ಕನಸಿನಿಂದ ಶ್ರೀಧರನನ್ನು ಮದುವೆಯಾಗುವುದರೊಂದಿಗೆ ಕಾದಂಬರಿ ಮುಗಿಯುತ್ತದೆ. ಇದರಿಂದಾಗಿ ಈ ಕನಸು ನನಸಾಗುವುದಿಲ್ಲ. ಇರುವ ವಾಸ್ತವತೆಯ ತೊಡರುಗಳು ಇಲ್ಲಿ ಮುಖ್ಯವಾಗುವುದಿಲ್ಲ. ಸಾಂಪ್ರದಾಯಿಕ ವಿವಾಹ ಪದ್ಧತಿಯಲ್ಲಿರುವ ಹತಾಶೆ, ಸಾಮರಸ್ಯರಾಹಿತ್ಯ ಜೀವನವು **ಹೃದಯವಲ್ಲಭ, ಚಿತ್ತಮೋಹನ, ಮುಕ್ತಿಚಿತ್ರ** ಕಾದಂಬರಿಗಳಲ್ಲಿ ಚಿತ್ರಿತಗೊಂಡಿವೆ. **ಹೃದಯವಲ್ಲಭ**ದ ಕಥಾನಾಯಕ ಸದಾಶಿವ ಮೋಹಿನಿಯನ್ನು ವರಿಸಿದ್ದರೂ ಮನೋಭಾವ, ಅಭಿರುಚಿ, ಆಸಕ್ತಿ ಈ ಯಾವುದರಲ್ಲೂ ಅವರಲ್ಲಿ ಹೊಂದಾಣಿಕೆ ಸಾಧ್ಯವಾಗುವುದಿಲ್ಲ. ಸದಾಶಿವ ಮೋಹಿನಿಯನ್ನು ವಿವಾಹವಾಗುವುದೇ ವ್ಯವಸ್ಥೆಯು ಹೊಂದಿರುವ ಸಂಪ್ರದಾಯಿಕತೆಯ ನಿಷ್ಠುರತೆಗೆ ಒಳಗಾಗಿ. ಬಾಳಸಂಗಾತಿಯ ಆಯ್ಕೆಯಲ್ಲಿ ವಿವಾಹಿತರಾಗುವ ಗಂಡು-ಹೆಣ್ಣಿನ ತೀರ್ಮಾನಗಳು ಮುಖ್ಯವಾಗುತ್ತವೆ. ಇವು ಗೌಣವಾದ ಪಕ್ಷದಲ್ಲಿ ವಿವಾಹ ಮಾತ್ರದಿಂದಲೇ ಬದುಕಿನ ಸಾಧ್ಯತೆಗಳು ಪಲ್ಲಟಗೊಳ್ಳುತ್ತವೆ. **ಚಿತ್ತಮೋಹನ** ಕಾದಂಬರಿಯ ನಾಯಕಿ ಜಾನಕಿ ಸುಂದರನೂ, ಶ್ರೀಮಂತನೂ ಸರಸಿಯೂ ಆದ ಗಂಡನನ್ನು ಬಯಸುತ್ತಾಳೆ. ಆದರೆ, ಇದಕ್ಕೆ ವಿರುದ್ಧವಾಗಿ ಆ ಯಾವ

ಲಕ್ಷಣಗಳನ್ನೂ ಒಳಗೊಳ್ಳದ ಶ್ರೀನಿವಾಸನನ್ನು ಆಕೆ ವರಿಸಬೇಕಾಗುತ್ತದೆ. ನಂತರದ ಬೆಳವಣಿಗೆಯಲ್ಲಿ ಶ್ರೀನಿವಾಸ ಆಕಸ್ಮಿಕವಾಗಿ ತೀರಿಕೊಂಡು ಜಾನಕಿ ದುಡಿಯುವ ಅನಿವಾರ್ಯತೆ ಏರ್ಪಡುತ್ತದೆ. ಆ ಸಂದರ್ಭದಲ್ಲಿ ವಿಧುರನಾದ ಕಾಮತನಲ್ಲಿ ಅವಳು ವಿವಾಹದ 'ನಿರೀಕ್ಷಿತ' ಆಯ್ಕೆಯನ್ನು ಮರುಕಲ್ಪಿಸಿಕೊಳ್ಳುತ್ತಾಳೆ. ಎರಡು ಮಕ್ಕಳ ತಾಯಿಯಾದ ಅವಳ ಮನಸ್ಸಿನ ಆಳದಲ್ಲಿ ಇರುವ ಬಾಳಸಂಗಾತಿಯ ಪ್ರತೀಕ್ಷೆ ಕಾಮತನನ್ನು ಕಂಡಾಗ ಸಾಕಾರಗೊಳ್ಳುತ್ತದೆ. ಜಾನಕಿಗೆ ಅವಳ ನಿರೀಕ್ಷೆಗೆ ವ್ಯತಿರಿಕ್ತವಾದ ಶ್ರೀನಿವಾಸನೊಂದಿಗಿನ ವಿವಾಹ ಮತ್ತು ಅದು ಕೊಡಮಾಡಿದ ಬದುಕಿನ ಫಲಕ್ಕೆ ಸಂಪ್ರದಾಯಿಕ ವಿವಾಹವೇ ಕಾರಣವಾಗುತ್ತದೆ. ಸ್ನೇಹ ಪಲ್ಲವಿ ಕೃತಿಯಲ್ಲಿ ವರದಕ್ಷಿಣೆಯ ಕಾರಣದಿಂದ ಹೆಣವಾಗುವ ಶ್ಯಾಮಲೆ ಕೂಡ ಅನಿವಾರ್ಯವಾಗಿ ಹಿರಿಯರು ನಿಶ್ಚಯಿಸಿದ ವಿವಾಹಕ್ಕೆ ಸಮ್ಮತಿ ಸೂಚಿಸಬೇಕಾಗುತ್ತದೆ. ಬಿ.ಎ ಕೊನೆಯ ವರ್ಷದಲ್ಲಿದ್ದ ಶ್ಯಾಮಲಾ ಕಾಲೇಜು ಬಿಟ್ಟು ಮದುವೆಗೆ ಸಿದ್ಧವಾಗುವುದೇ ಹೆತ್ತವರಿಗೆ ತಾನು ಭಾರವಾಗಬಾರದು ಎಂಬ ಕಾರಣಕ್ಕಾಗಿ. ಹೆಣ್ಣಿನ ಬಗೆಗೆ ಹೆತ್ತವರಿಗಿರುವ ಸಾಂಪ್ರದಾಯಿಕ ಶ್ರದ್ಧೆಯಿಂದಾಗಿ ಈ ಬಗ್ಗೆ ವಿಚಾರಿಸುವ ಗೆಳತಿ ಅಲಕಾಗೆ ಶ್ಯಾಮಲಾ ಕೊಡುವ ಉತ್ತರ ಇದಕ್ಕೆ ಸಾಕ್ಷಿ.

> "ನನ್ನ ಒಪ್ಪಿಗೆ ಕೇಳ್ದೋರು ಯಾರು? ಹಿಂದೆ ಮೂರು ನಾಲ್ಕು ಜನ ಬಂದು 'ಈ ಹುಡುಗಿ ಬೇಡ' ಎಂದು ಹೇಳಿ ಹೋಗಿದ್ದರಲ್ಲಿ ಅಪ್ಪ, ಅಮ್ಮ ದಿನಾ ಇದೇ ಮಾತಾಡೋರು. ಇವಳಿಗೆ ಮದ್ವೆಯಾಗತ್ತೋ ಇಲ್ವೋ ಅಂತ ಹುಲುಬ್ತಾ ಇದ್ರು. ಆ ಹೊತ್ನಲ್ಲಿ ಇವನು 'ಹೂ' ಅಂದಿದ್ದೇ ತಡ, ಅವರು ಎಷ್ಟು ಸಂಭ್ರಮಪಟ್ಟರೂಂತಿ? ಅವನು ಒಪ್ಕೊಂಡಿದಾನೆ, ನಿನ್ನ ಪುಣ್ಯ ಅಂತ ನಂಗೆ ಬಂದು ಹೇಳಿದ್ರು. ಇಂಥ ಹೊತ್ತಿನಲ್ಲಿ ನಾನು ಹೂ ಅನ್ನೋದು ಒಟ್ಟು ಬೇರೆ ಯಾವ ದಾರಿಯಿತ್ತು ಹೇಳು? ಯಾವತ್ತಿದ್ರೂ ಮದ್ವೆ ಆಗ್ಬೇಕು. ಯಾರೋ ಒಬ್ಬ ಅನ್ಕೊಂಡು ಸಮಾಧಾನ ಮಾಡ್ಕೊಂಡೆ." (ಅನುಪಮಾ ನಿರಂಜನ :೧೯೮೮;೧೮)

ಶ್ಯಾಮಲಳ ಮಾತುಗಳಲ್ಲಿ ಒಟ್ಟು ಸಂಸ್ಕೃತಿಯ ಸಾಂಪ್ರದಾಯಿಕ ಮನಸ್ಥಿತಿಗಳು ಪರಿಸ್ಥಿತಿಯ ನೆಪವನ್ನು ಆಧರಿಸಿಕೊಂಡು ಹೆಣ್ಣನ್ನು ಹುಟ್ಟಿದ ಮನೆಯಿಂದ ಸಾಗು ಹಾಕುವ ಒತ್ತಾಯದ ಸನ್ನಿವೇಶಗಳ ನಿರೂಪಣೆಯಿದೆ.. ಇದಕ್ಕೆ ಮುಖ್ಯ ಕಾರಣವಾಗುವುದು ವಿವಾಹದಂತಹ ವೈಯಕ್ತಿಕ ನಿರ್ಣಯದ ಸಂದರ್ಭದಲ್ಲಿ ಸ್ತ್ರೀಯರು ಹೆತ್ತವರಿಗೆ ತಮ್ಮ ಜವಾಬ್ದಾರಿಯನ್ನು ಒಪ್ಪಿಸಿ ಬಿಡುವುದೇ ಆಗಿದೆ.

> "ನಂಗೆ ಯಾವುದು ಸರಿ ಅನ್ಸುತ್ತೋ ಅದನ್ನು ಮಾತ್ರ ನಾನು ಮಾಡುವವಳು" (ಅನುಪಮಾ ನಿರಂಜನ :೧೯೮೮; ೧೪೨)

ಎಂದು ಹೇಳುವ ಅಲಕಾಳಂತಹ ಸ್ತ್ರೀಯರು ವಿರಳ. ಸ್ವಂತಿಕೆ, ಸ್ವಂತ ನಿರ್ಧಾರಕ್ಕೆ ಮಾತ್ರ ;

> "ನಂಗಿಷ್ಟ ಬಂದೋನ್ನ ಮಾತ್ರ ನಾನು ಮದ್ವೆ ಆಗ್ತೀನಿ. ಅಪ್ಪ ಹೇಳಿದೋರ್ನಲ್ಲ" (ಅನುಪಮಾ ನಿರಂಜನ :೧೯೮೮; ೧೮)

ಎಂಬ ದೃಢತೆ ಇರುತ್ತದೆ. ಅಲ್ಲದೆ, ಸಂಪ್ರದಾಯ ವಿವಾಹದಂತಹ ವರ್ತುಲದೊಳಗಿನಿಂದ ಬಿಡಿಸಿಕೊಳ್ಳುವ ಎದೆಗಾರಿಕೆ ಇರುತ್ತದೆ. ಪ್ರೇಮ ವಿವಾಹದಲ್ಲಿನ ಬದುಕಿನ ವ್ಯಾಪಕ ಸಾಧ್ಯತೆಗಳು ಸಾಂಪ್ರದಾಯಿಕ ವಿವಾಹದಲ್ಲಿ ಕಣ್ಮರೆಯಾಗುತ್ತವೆ ಅಥವಾ ಪರಿತ್ಯಕ್ತಗೊಳ್ಳುತ್ತವೆ ಎಂಬುದನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಆವರಣದಲ್ಲಿ

ಅನುಪಮಾ ಅವರ ಕಾದಂಬರಿಗಳು ಬಿಂಬಿಸುತ್ತವೆ. ಸಂಪ್ರದಾಯಬದ್ಧ ವಿವಾಹವನ್ನು ಸಹಜ ಪ್ರಕ್ರಿಯೆ ಎಂದು ಒಪ್ಪಿಕೊಳ್ಳುವ ಸ್ತ್ರೀಯರ ಬದುಕಿನಲ್ಲಿ ಬಿರುಕಿನ ಪ್ರಶ್ನೆ ತೀವ್ರವಾದ ಅಘಾತವನ್ನು ಉಂಟುಮಾಡಲಾರದು. **ಶ್ವೇತಾಂಬರಿ**ಯಲ್ಲಿನ ವೈದ್ಯಕೀಯ ರಂಗದ ಹಲವು ಪಾತ್ರಗಳು, **ಆಳ** ಕಾದಂಬರಿಯ ಮಾಲಿನಿಯ ತಂಗಿಯರಂತಹ ಹಲವು ಪಾತ್ರಗಳು ಇಂತಹ 'ಸಂಘರ್ಷರಹಿತ ವಿವಾಹ'ಕ್ಕೆ ಒಪ್ಪಿಒಳಪಡುವುದು ಕಂಡುಬರುತ್ತದೆ.

ವಿಧವಾ ವಿವಾಹಕ್ಕೆ ಸಂಬಂಧಿಸಿದಂತೆ ಹೆಚ್ಚು ಅವಕಾಶಗಳು, ಸ್ಥಳ ನಿರ್ಮಾಣಗಳು ಅನುಪಮಾ ಅವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತವೆ. **ಚಿತ್ತಮೋಹನ, ಎಳೆ** ಈ ಕಾದಂಬರಿಗಳು ಭಿನ್ನ ಮುಖಗಳಿಂದ 'ವಿಧವಾ ವಿವಾಹ'ದ ಸವಾಲುಗಳನ್ನು ಬಿಡಿಸುವ ಪ್ರಯತ್ನ ನಡೆಸುತ್ತವೆ. ವಿಧವೆಯಾದ ಜಾನಕಿ ಮತ್ತು ವಿಧುರನಾದ ಕಾಮತ್ ಪರಸ್ಪರ ಅನುರಾಗಿತರಾಗಿ ವಿವಾಹದ ತೀರ್ಮಾನವನ್ನು ಕೈಗೊಳ್ಳುವಲ್ಲಿ ಜಾನಕಿಗೆ ಇರುವ ಎರಡು ಮಕ್ಕಳು ಮತ್ತು ಕಾಮತನ ಮಗಳು ಪ್ರಶ್ನೆಯಾಗುತ್ತಾರೆ. ಆದರೆ ಈ ಪ್ರಶ್ನೆಗಳನ್ನು ಇಬ್ಬರು ಸ್ವೀಕರಿಸುವ ನೆಲೆ ಮಾತ್ರ ವಿರೋಧಾತ್ಮಕವಾದದ್ದು. ಜಾನಕಿಯ ಎರಡು ಮಕ್ಕಳನ್ನು ಕಾಮತ್ ನಿಷ್ಠುರವಾಗಿ ನಿರಾಕರಿಸುತ್ತಾನೆ. ಅಲ್ಲದೆ, ಅವರನ್ನು ಬಿಟ್ಟು ಬರುವಂತೆ ಅನುನಯದ ಹುನ್ನಾರ ನಡೆಸುತ್ತಾನೆ. ಆದರೆ ಜಾನಕಿಯು ಕಾಮತ್‌ನ ಮಗಳು ರೀನಾಳನ್ನು ಅಂತಃಕರಣ ಪೂರ್ವಕವಾಗಿ ಒಪ್ಪಿಕೊಳ್ಳುತ್ತಾಳೆ ಮಾತ್ರವಲ್ಲದೆ, ಕಾಮತ್ ಮತ್ತು ರೀನಾ ಇವರ ಸಲುವಾಗಿ ತನ್ನ ಮಕ್ಕಳನ್ನು ತೊರೆದು ಬರುವ ನಿರ್ಧಾರವನ್ನು ಒಂದು ಹಂತದಲ್ಲಿ ಕೈಗೊಳ್ಳುತ್ತಾಳೆ. ಕಾಮತ್‌ನಿಂದ ದೊರೆಯುವ ಸುಖ ಮತ್ತು ಶ್ರೀಮಂತಿಕೆಯ ಮೋಹ ಇದಕ್ಕೆ ಕಾರಣವಾಗುತ್ತದೆ. ಮನೆಬಿಟ್ಟು ಕಾಮತ್‌ನನ್ನು ವರಿಸುವ ಅವಳ ನಿರ್ಧಾರದಲ್ಲಿ ತಾಯ್ತನದ ತುಡಿತಕ್ಕಿಂತಲೂ ದೇಹದ ಮತ್ತು ಸಿರಿವಂತಿಕೆಯ ಬಯಕೆ ಮುಖ್ಯವಾಗುತ್ತದೆ. ಈ ಅರಗಿಸಿಕೊಳ್ಳಲಾಗದ ಕಟುತ್ವಕ್ಕೆ ಹೆದರಿ ಪಠ್ಯದೊಳಗೆ ರಿಜಿಸ್ಟ್ರರ್ ಮದುವೆಯ ಹಿಂದಿನ ದಿನ ಕಾಮತ್‌ನು ಅಪಘಾತದಲ್ಲಿ ಸಾಯುವಂತೆ ಕಥನವನ್ನು ಸಾಂದರ್ಭಿಕವಾಗಿ ಕೊನೆಗೊಳಿಸಲಾಗಿದೆ. ವಿಧವೆಯೋರ್ವಳ ಮರುವಿವಾಹ ಎಂಬುದು ಮಕ್ಕಳು ಇದ್ದು ಎದುರಿಸುವ ಸಂಘರ್ಷ ಮತ್ತು ಪರಿಣಾಮಗಳು ಬೇರೆ. ಮಕ್ಕಳಿಲ್ಲದೆ ಎದುರಿಸುವ ಪರಿಸ್ಥಿತಿ ಮತ್ತು ನಿಲುಗಡೆ ಬೇರೆಯಾಗಿರುತ್ತದೆ. ಇದನ್ನು ಅನುಪಮಾ ನಿರಂಜನ ಅವರು ಸವಾಲಿನ ನೆಲೆಯಲ್ಲಿ ಚಿತ್ರಿಸುವ ಪ್ರಯತ್ನವನ್ನು ನಡೆಸುವುದು ವ್ಯಕ್ತವಾಗುತ್ತದೆ. ಮಕ್ಕಳಿಲ್ಲದ ವಿಧವೆಯ ಮರುವಿವಾಹದಲ್ಲಿ ಪ್ರಕಟಗೊಳ್ಳದ ಪ್ರಶ್ನೆಗಳ ತೀವ್ರತೆ ಮಕ್ಕಳಿರುವ ವಿಧವೆಯರ ಮರುವಿವಾಹದಲ್ಲಿ ಉದ್ಭವಿಸುತ್ತದೆ. ಆದರೆ ವಿಧುರನ ಸಂದರ್ಭದಲ್ಲಿ ಮಕ್ಕಳ ಪ್ರಶ್ನೆ ಸಮಾಜದ ದೃಷ್ಟಿಯಿಂದ ಮಾತ್ರವಲ್ಲ ವೈಯಕ್ತಿಕವಾಗಿಯೂ ಮುಖ್ಯವಾಗಿ ಕಾಡುವುದಿಲ್ಲ. ಈ ವೈರುಧ್ಯದ ತೀವ್ರತೆಯನ್ನು **ಚಿತ್ತಮೋಹನ**ದ ಜಾನಕಿಯ ಪಾತ್ರ ತೀವ್ರವಾಗಿ ಎದುರಿಸುತ್ತದೆ. ಇದರ ವಾಸ್ತವ ಪರಿಣಾಮಕ್ಕೆ ಹೆದರಿಯೇ ಕಾಮತ್‌ನ ಸಾವು ಅನಿರೀಕ್ಷಿತವಾದರೂ ನಿರಾಳತೆಯನ್ನು ಉಂಟುಮಾಡುತ್ತದೆ. ವಿವಾಹವೆಂಬುದು ಆಯ್ಕೆಗೆ ಅನುಗುಣವಾಗಿ ಆಗಿರಲಿ, ಹಿರಿಯರು ನಿಶ್ಚಯಿಸಿದ್ದಾಗಿರಲಿ ಅದರೊಳಗೆ ಸ್ತ್ರೀಯರು ಸವಾಲನ್ನು ಎದುರಿಸುವ ಮಾದರಿಗೂ ಪುರುಷರು ಅದನ್ನು ಎದುರಿಸುವ ರೀತಿಗೂ ಅಪಾರವಾದ ವ್ಯತ್ಯಾಸವಿದೆ. ಇದಕ್ಕೆ ಭಾರತೀಯ ಜೀವನ ಕ್ರಮ ಎಂಬುದು ಹೇಗೆ ನಿಮಿತ್ತವೋ ಹಾಗೆಯೇ ಸಮಾಜದಲ್ಲಿ ವ್ಯಕ್ತಿಗಳ ಬದಲಾಗದ ಜೀವನ ಧೋರಣೆಗಳು (ಲಿಂಗ ತಾರತಮ್ಯತೆ) ಕೂಡ ಕಾರಣವಾಗುತ್ತವೆ. ಈ ಸವಾಲನ್ನು ಶಕ್ತವಾಗಿ ಬಿಡಿಸುವ ಕೃತಿ **ಎಳೆ.**

**ಚಿತ್ತಮೋಹನ**ದ ಮಿತಿಗಳನ್ನು **ಎಳೆ**ಯ ಕಥನವು ಮೀರುವ ಪ್ರಯತ್ನ ನಡೆಸುತ್ತದೆ. ವಿಧವೆಯೂ ಮೊದಲಿನ ಗೆಳತಿಯೂ ಆದ ಗಿರಿಜಾಳನ್ನು ರಂಗದಾಸ ವಿವಾಹವಾಗುತ್ತಾನೆ. ಗಿರಿಜೆಗೆ ಪೂರ್ವದ ಮದುವೆಯಿಂದ ಆದ ಮಗಳನ್ನು ರಂಗದಾಸ ಸ್ವಂತ ಮಗಳಾಗಿ ಸ್ವೀಕರಿಸುವುದು ಆತನ ಆಧುನಿಕ ದೃಷ್ಟಿಕೋನದಿಂದಲೇ ಆಗಿದೆ. ಮುಕ್ತವಾದ ವೈಚಾರಿಕತೆಯಿಂದ ಕೂಡಿದ ರಂಗದಾಸನ ಜೀವನ ಧೋರಣೆಗಳು **ಚಿತ್ತಮೋಹನ**ದ ಕಾಮತ್‌ನ ಧೋರಣೆಗಳಿಗಿಂತ ತೀರಾ ಭಿನ್ನವಾಗಿವೆ. ಕಾಮದ ನೆಲೆಯ ಆಕರ್ಷಣೆಯನ್ನು ಮೀರಿದ ಸಂಬಂಧ ಇಲ್ಲಿನದು. ರಂಗದಾಸ ಗಿರಿಜೆಯನ್ನು ಅವಳ ಇಡೀ ಜೀವನದ ಬಗೆಗೆ ಆತ್ಮೀಯತೆಯನ್ನು ಬೆಳಸಿಕೊಂಡಂತೆ ಒಪ್ಪಿಕೊಳ್ಳುತ್ತಾನೆ. ಇದು ಕಾಮತ್ ಜಾನಕಿಯನ್ನು ಬಯಸುವಲ್ಲಿ ಕಾಣಿಸಿಕೊಳ್ಳುವುದಿಲ್ಲ. ಕಾಮತ್‌ನಿಗೆ ಮುಖ್ಯವಾಗುವುದು ಜಾನಕಿಯ ಸೌಂದರ್ಯದ ಆಕರ್ಷಣೆ. ಅವಳಿಗೆ ಇದು ಗೊತ್ತಾದರೂ ಆತನ ಅಧಿಕಾರ, ಸಂಪತ್ತು, ಸೌಂದರ್ಯಗಳು ಅವಳಿಗೆ ಪ್ರಧಾನವಾಗುತ್ತವೆ. ಈ ನೆಲೆಯಿಂದ **ಎಳೆ** ಪಠ್ಯದಲ್ಲಿ ವ್ಯಕ್ತಿ ಸಂಬಂಧಗಳಲ್ಲಿ 'ಭಾವನೆಗಳ ಪ್ರೌಢತೆ' ತೀವ್ರವಾದ ಅನುಭೂತಿಯ ಒಳಗೆ ಕಾಣಿಸಿಕೊಳ್ಳುತ್ತದೆ. 'ವಿಧವಾ ವಿವಾಹ'ದಂತಹ ಸಮಸ್ಯೆಯನ್ನು ಉದಾರವಾದಿ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ನಿರ್ವಹಿಸಿದ ಸೂಕ್ಷ್ಮತೆಗಿಂತ ಹೆಚ್ಚು ಸಂಕೀರ್ಣವಾಗಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ನಿರೂಪಿಸುವ ಜವಾಬ್ದಾರಿ ಹೊರುವುದು ಇದೇ ಅರ್ಥದಿಂದಲೇ ಆಗಿದೆ. 'ವಿಧವಾ ವಿವಾಹ'ದಂತಹ ಸವಾಲನ್ನು ಸಾಮಾಜಿಕವಾಗಿ ಎದುರಿಸಿದ ಉದಾರವಾದಿ ಸಾಂಸ್ಕೃತಿಕ ನೆಲೆಯ ಆಯಾಮಗಳು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಹೆಚ್ಚು 'ವೈಯಕ್ತಿಕ'ವಾಗಿ ಪಲ್ಲಟಕ್ಕೆ ಒಳಪಡುತ್ತವೆ. ಅಂದರೆ, ಈ 'ವೈಯಕ್ತಿಕ' ಮುಖಾಮುಖಿಯು 'ಸಾಮಾಜಿಕ' ಪ್ರಶ್ನೆಯನ್ನು ಎದುರಿಸುವಂಥದ್ದೇ ಆಗಿದೆ.

ಅನುಪಮಾ ಅವರ ಕಾದಂಬರಿಗಳಲ್ಲಿ 'ವಿವಾಹ'ವನ್ನು ನಿರಾಕರಿಸುವ ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಬದುಕನ್ನು ಎದುರಿಸುವ ಪಾತ್ರಗಳು ಎರಡು ಮಾದರಿಗಳಲ್ಲಿ ಪ್ರಕಟವಾಗುತ್ತವೆ.

೧) ಪುರುಷರ ದೌರ್ಜನ್ಯದ ವಿವಿಧ ಆಮಿಷಗಳಿಗೆ ಬಲಿಯಾಗಿ ವಿವಾಹದಿಂದ ವಂಚಿತರಾಗುವ ಪಾತ್ರಗಳು.

೨) ಸ್ವಚ್ಛಂದ ಪ್ರವೃತ್ತಿಯಿಂದ ವಿವಾಹವನ್ನು ಮೀರಿ ಬದುಕುವ ಪಾತ್ರಗಳು.

ಪುರುಷರ ದೌರ್ಜನ್ಯದ ವಿವಿಧ ಆಮಿಷಗಳಿಗೆ ಬಲಿಯಾದ ವಿವಾಹದಿಂದ ವಂಚಿತರಾಗುವ ಪಾತ್ರಗಳಾಗಿ **ಶ್ವೇತಾಂಬರಿ**ಯ ಕಾವೇರಿ, ಕಾಂತಂ, ಮೀನಾಕ್ಷಿಯರ ಬದುಕು ಕಾಣಿಸಿಕೊಳ್ಳುತ್ತದೆ. **ಕಣಿವೆಗೆ ಬಂತು ಬೇಸಿಗೆ** ಕೃತಿಯ ಬಡರೈತ ಸಿದ್ಧಪ್ಪನ ಮಗಳಾದ ಸರಸಳ ಬದುಕು ನಲುಗುತ್ತದೆ. ಊರಿನ ಮಿಲ್ ಮಾಲಿಕ ರಂಗ ಸ್ವಾಮಪೋರ ಸಾಕುಮಗ ಗಂಗಾಧರ ಮೋಸದಿಂದ ಸರಸಳನ್ನು ವಶಪಡಿಸಿಕೊಂಡು ಕೊನೆಗೆ ಆಕೆ ಗರ್ಭಿಣಿ ಎಂದು ಅರಿವಾದಾಗ ಗಂಗಾಧರ ಊರು ಬಿಟ್ಟು ಪರಾರಿಯಾಗುತ್ತಾನೆ. **ನಟಿ** ಕೃತಿಯ ನಾಯಕಿ ಮೃದುಲ ಚಂದ್ರನಾಥನಿಂದ ಮೋಸ ಹೋಗಿ ನಂತರದಲ್ಲಿ ಆತನನ್ನು ಪ್ರೀತಿಸಿದಷ್ಟೇ ತೀವ್ರವಾಗಿ ತಿರಸ್ಕರಿಸುವಲ್ಲಿ ಮಾನಸಿಕ ರೋಗಿಯಾಗಿ ಮಾರ್ಪಡುತ್ತಾಳೆ. **ಆಳ**ದ ನಾಯಕ ರವೀಂದ್ರನಿಂದ ವಂಚನೆಗೊಳಗಾದ ಲಚುಮಿಯ ಜೀವನ ಹಾಳಾಗುತ್ತದೆ. ಪುರುಷರಿಂದ ವಂಚನೆಗೆ ಒಳಗಾಗುವ ಈ ಸ್ತ್ರೀಯರ ಸ್ಥಿತಿಗಳು ನಿರ್ದಿಷ್ಟವಾಗಿ ಬಡತನ, ಅಮಾಯಕತೆ, ವಯೋಸಹಜವಾದ ಆಕರ್ಷಣೆ, ಬಲಾತ್ಕಾರದಂತಹ ಶೋಷಣೆಯ ಸ್ವರೂಪದಲ್ಲಿ ಇರುತ್ತವೆ. 'ವಿವಾಹ'ವನ್ನು ಬದುಕಿನ ಮಹತ್ವದ ಮಜಲಾಗಿ ಭಾವಿಸುವ ಈ ಪಾತ್ರಗಳು ಪುರುಷರ ದೌರ್ಬಲ್ಯಗಳಿಗೆ,

ದೌರ್ಜನ್ಯಕ್ಕೆ ಒಳಗಾಗಿ 'ವಿವಾಹ'ದಿಂದ ವಂಚಿತರಾಗಿ ಉಳಿಯುವುದು ಕಂಡುಬರುತ್ತದೆ. ಇದು ಪುರುಷ ಸಮಾಜ ದಬ್ಬಾಳಿಕೆಯಿಂದ ನಿರ್ಮಿಸಿದ ಸ್ತ್ರೀಯರ 'ಅನಿವಾರ್ಯತೆ'ಗಳಾಗಿ ಪಠ್ಯದೊಳಗೆ ಕಾಣಿಸಿಕೊಳ್ಳುತ್ತದೆ. ಸ್ವೇಚ್ಛೆಯ ಬದುಕಿಗೆ ಹಾತೊರೆದು ಅಥವಾ ಬದುಕಿನ ಬಗ್ಗೆ ತಪ್ಪು ಗ್ರಹಿಕೆಯಿಂದಲೇ (ವಿವಾಹದಿಂದ ಸ್ತ್ರೀಯರ ಸ್ವಾತಂತ್ರ ನಾಶವಾಗುತ್ತದೆ.) ವಿವಾಹದಿಂದ ಮುಕ್ತರಾಗುವ ಪಾತ್ರಗಳಾಗಿ **ಶ್ವೇತಾಂಬರಿ**ಯ ಸೋಫಿಯಾ, **ಹಿಮದಹೂವಿ**ನ ಮಾಧವಿ, **ಮುಕ್ತಿಚಿತ್ರ**ದ ರಾಜೇಶ್ವರಿ ಇಂತಹ ವ್ಯಕ್ತಿತ್ವಗಳು ಗಮನ ಸೆಳೆಯುತ್ತವೆ. ಹಣ, ಅಧಿಕಾರದ ಲಾಲಸೆ, ಸ್ವಚ್ಛಂದ ಪ್ರವೃತ್ತಿಯ ಬದುಕಿನ ತುಡಿತ ಇವರು ವಿವಾಹವನ್ನು ನಿರಾಕರಿಸುವುದಕ್ಕೆ ಕಾರಣಗಾಳಾಗಿವೆ. ಹೀಗಿದ್ದರೂ ದೈಹಿಕ ನೆಲೆಯಲ್ಲಿ ಪುರುಷನ ಅನಿವಾರ್ಯತೆಯನ್ನು ವಯೋಸಹಜವಾಗಿ ಒಪ್ಪಿಕೊಳ್ಳುವ ಇಂತಹ ಪಾತ್ರಗಳು ಚಿತ್ರಣ ಪಠ್ಯಗಳ ಒಳಗೆ ತೆಳು ರಚನೆಗಳಾಗಿ ಕಂಡುಬರುತ್ತವೆ. ಪುರುಷರನ್ನು ಒಪ್ಪಿಕೊಳ್ಳುವ ರೀತಿಗಳಾಗಿವೆ. ಇಲ್ಲಿ ನೈತಿಕ -ಅನೈತಿಕದ ಪ್ರಶ್ನೆ ಕಾಡುವುದಿದ್ದರೆ ಅದು ಸಮಾಜದ - ಕುಟುಂಬದ ದೃಷ್ಟಿಯಿಂದ ಮಾತ್ರವಾಗುತ್ತದೆ. ಆದರೆ, ವಿವಾಹವನ್ನು ನಿರಾಕರಿಸಿ ಒಂದರ್ಥದಲ್ಲಿ ಪುರುಷನ ಸಂಸರ್ಗವನ್ನು ಶಕ್ತವಾಗಿ ನಿರಾಕರಿಸಿ ಪರ್ಯಾಯ ನೆಲೆಯ ಅನ್ವೇಷಣೆ ಅನುಪಮಾ ಅವರಲ್ಲಿ ಮಾತ್ರವಲ್ಲ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಯಾವ ಕಾದಂಬರಿಗಳ ವೇದಿಕೆಗಳಿಗೂ ಎಟುಕುವುದಿಲ್ಲ. ಇದು 'ಮಿತಿ'ಯಾಗಿ 'ಕೊರತೆ'ಯಾಗಿ ಕಾಣುವ ಅಂಶವಲ್ಲ. ಆದರೆ ಆ ಸಾಧ್ಯತೆಗಳ ಅನ್ವೇಷಣೆ ಅನುಪಮಾ ಅವರಲ್ಲಿ ಸಾಧ್ಯವಾಗಿಲ್ಲ.

**ವೀಣಾಶಾಂತೇಶ್ವರ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡ ವಿವಾಹದ ಸ್ವರೂಪ :**

ಜೀವನಕ್ಕೆ ಕೇಂದ್ರ ಕುಟುಂಬವಾದರೂ, ಇದು ವಿವಾಹವನ್ನವಲಂಬಿಸಿ ರಚಿತವಾಗುತ್ತದೆ. ಆದರೆ, ಕುಟುಂಬವು ಪ್ರೇಮವನ್ನವಲಂಬಿಸಿ ರಚನೆಯಾಗಬೇಕು ಎಂಬ ಅನ್ವೇಷಣೆಯು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಎಲ್ಲ ಕೃತಿಗಳಲ್ಲಿ ಅದರಲ್ಲೂ ವೀಣಾ ಅವರ ಕೃತಿಗಳಲ್ಲಿ ಸ್ಪಷ್ಟವಾಗಿ ಪ್ರಕಟಗೊಳ್ಳುತ್ತದೆ. ಇಬ್ಬರು ವ್ಯಕ್ತಿಗಳಲ್ಲಿ ವಿವಾಹ ನಡೆದ ಮಾತ್ರಕ್ಕೆ ಅವರು ಪ್ರೇಮದ ಪ್ರಪಂಚವನ್ನು ಪ್ರವೇಶಿಸುವರೆಂಬುದನ್ನು ಸಮಾಜ ಮಾನ್ಯ ಮಾಡಿಕೊಂಡು ಬಂದಿದೆ. ಈ ಅದ್ಭುತವಾದ ಸುಳ್ಳನ್ನು ಒಡೆಯುವ ಪ್ರಯತ್ನವನ್ನು ಎಲ್ಲಾ ಲೇಖಕಿಯರಂತೆ ವೀಣಾ ಅವರ ಕೃತಿಗಳು ಶಕ್ತವಾಗಿ ನಿರ್ವಹಿಸುತ್ತವೆ. ಸಾಂಪ್ರದಾಯಿಕ ವಿವಾಹ ಅಥವಾ ವಯೋಸಹಜವಾದ ಆಕರ್ಷಣೆಗೆ ಒಳಗಾಗಿ ಮಾಡಿಕೊಂಡ ಮದುವೆ ಎಂಬುದು ನಿರ್ದಿಷ್ಟವಾಗಿ 'ಒಂದು ಬಂಧನ'-'ಸೆರೆ' ಎಂಬುದನ್ನು **ಶೋಷಣೆ ಬಂಡಾಯ ಇತ್ಯಾದಿ** (೧೯೮೫) ಕೃತಿಯು ನೇರವಾಗಿ ಎತ್ತಿ ಹಿಡಿದರೆ, ಪ್ರೇಮದ ವಿಫಲತೆಯನ್ನು **ಗಂಡಸರು** (೧೯೮೦) ಕಿರು ಕಾದಂಬರಿ ಚಿತ್ರಿಸುತ್ತದೆ. ವಿವಾಹ ಮತ್ತು ಅದರ ಮೂಲಕವಾಗಿ ಸ್ಥಾಪಿತಗೊಳ್ಳುವ ಕುಟುಂಬದ ವಿಫಲತೆ- ಪರಿಪೂರ್ಣತೆಗಳ ಶೋಧವಾದ **ಗಂಡಸರು** ಕೃತಿಯಲ್ಲಿ ವಿವಾಹ ಪೂರ್ವದ ಪ್ರೇಮ ಮತ್ತು ಲೈಂಗಿಕ ಶೋಷಣೆಯ ಪರಿಣಾಮಕಾರಿ ಅಭಿವ್ಯಕ್ತಿ ಇದೆ. ಹುಟ್ಟಿನ ಹಿನ್ನೆಲೆಯಲ್ಲಿ ಸ್ತ್ರೀ ಪುರುಷನಿಗೆ ಅಡಿಯಾಳಾಗಿ ಬಾಳಬೇಕಾಗಿರುವ ಪರಂಪರೆಯ ಸ್ಥಾಪಿತ ಸ್ಥಿತಿಯನ್ನು ತಿರಸ್ಕರಿಸಿ ಬದುಕನ್ನು ಸ್ವಂತದ ನೆಲೆಯಿಂದಲೂ ರೂಪಿಸಿ ಕೊಳ್ಳಬೇಕೆನ್ನುವ ಆಧುನಿಕ ಹೆಣ್ಣು ಶಾಂತಿ. ಪ್ರೇಮದ ಉದಯವಾಗುವುದು ಸ್ವಾತಂತ್ರ್ಯದಲ್ಲಿ. ಯಾವ ಬಂಧನವಿಲ್ಲದ, ಬಲಾತ್ಕಾರವಿಲ್ಲದ, ನೀತಿ-ನಿಯಮಗಳಿಲ್ಲದ ಸ್ವತಂತ್ರ ಭೂಮಿಕೆಯಲ್ಲಿ ಅದರ ಹುಟ್ಟು. ಪ್ರೇಮವೆಂಬುದು ಸ್ತ್ರೀಯ ತನ್ನದೇ ಆತ್ಮದಾನ.

(ಬಂಧನವಲ್ಲ, ಬಲಾತ್ಕಾರವಲ್ಲ ಇದರಲ್ಲಿ ಯಾರ ಒತ್ತಾಯವಿಲ್ಲ) ಎಂಬುದನ್ನು **ಗಂಡಸರು** ಕೃತಿಯಲ್ಲಿ ಶಾಂತಿ ಭಾವಿಸುವಂತೆ, **ಶೋಷಣೆ ಬಂಡಾಯ ಇತ್ಯಾದಿ** ಕೃತಿಯ ಪಾತ್ರವಾದ ವೈದ್ಯೆ ಶಶಿ ಕೂಡ ತೀವ್ರವಾಗಿ ಭಾವಿಸುತ್ತಾಳೆ. ಆದರೆ ಈ ಪ್ರಯೋಗಶೀಲತೆಯಲ್ಲಿ ಪುರುಷರಿಂದ ಲೈಂಗಿಕ ಶೋಷಣೆಯನ್ನು ಶಾಂತಿ ಅನುಭವಿಸಬೇಕಾಗುತ್ತದೆ. ಶಾಂತಿಯ ಸ್ವತಂತ್ರ ವ್ಯಕ್ತಿತ್ವವನ್ನು ಒಪ್ಪದ ಶಂಕರ ಸಾಂಪ್ರದಾಯಿಕ ಮನೋಭಾವದ ಹೆಣ್ಣನ್ನು ಬಯಸುತ್ತಲೆ ಆಕೆಯಿಂದ ದೂರ ಸರಿಯುತ್ತಾನೆ. ನಂತರದಲ್ಲಿ ಪರಿಚಯವಾಗುವ ಪ್ರೊ.ಮಠದನ ಎಡೆಬಿಡಂಗಿತನದ ವೈಚಾರಿಕತೆಗೆ ಮಾರುಹೋಗುವ ಶಾಂತಿಯು ಪರಿಚಯವಾದ ಅತಿ ಕಡಿಮೆ ಅವಧಿಯಲ್ಲಿ ಅವನೊಡನೆ ದೈಹಿಕ ಸಂಬಂಧವನ್ನು ಬೆಳೆಸುತ್ತಾಳೆ. ಇದರಲ್ಲಿ ಶಾಂತಿಯ ಅವಸರದ ಬೆಳವಣಿಗೆಯ ದೋಷವಿದೆ ಎಂದೆನಿಸುತ್ತದೆಯಾದರೂ, ಆಧುನಿಕ ಜಗತ್ತಿನ ಸಾಂಸ್ಕೃತಿಕ ರಾಜಕೀಯದಲ್ಲಿ ಸ್ತ್ರೀಯನ್ನು ಶೋಷಿಸುವ ಹುನ್ನಾರ ಪೂರ್ಣವಾಗಿ ಪುರುಷನದೇ ಆಗುತ್ತದೆ ಎನ್ನುವುದನ್ನು ಪಠ್ಯವು ಶಕ್ತವಾಗಿ ನಿರೂಪಿಸುತ್ತದೆ. ಪುರುಷ ಪ್ರಪಂಚದ ತೆವಲು, ಹುಚ್ಚುತನಗಳು ಹೆಣ್ಣಿನ ನಿರ್ಲಿಪ್ತ ಸ್ಥಿತಿಯ ದುರಂತಕ್ಕೆ ಗುರಿಯಾಗುವ ಸಂದರ್ಭದಲ್ಲೂ, ಆತನ ಆಶಯಗಳು ಪೂರ್ಣವಾಗಿ ಮಾನವ ವಿರೋಧಿ ನೆಲೆಗಳನ್ನು ತಲುಪುತ್ತವೆ. ಇಂಥ ಲೈಂಗಿಕ ಶೋಷಣೆಯಲ್ಲಿಯೇ ಸ್ತ್ರೀಯರ ಶಿಕ್ಷಿತ, ಜಾಗೃತ ಮನಸ್ಸು ಅನಾವರಣ ಮಾಡುವ 'ತಿಳುವಳಿಕೆಯ ಸ್ಫೋಟ'ವನ್ನು ಪುರುಷರು ತಿರಸ್ಕರಿಸುವುದು ವ್ಯಕ್ತವಾಗುತ್ತದೆ. ಕೊನೆಯಲ್ಲಿ ಎಲ್ಲಾ ರೀತಿಯಿಂದಲೂ ಯೋಗ್ಯನಾದ ವಿದೇಶಿ ಪುರುಷ ಸಿಕ್ಕಾಗ ಶಾಂತಿ ಹೆಣ್ಣುತನದ ಸಹಜ ಲಕ್ಷಣಗಳನ್ನು ಕಳೆದುಕೊಂಡು ಬಿಟ್ಟಿರುವುದು ಅವಳ ದುರಂತವಾಗುವಂತೆಯೇ ಸಂಬಂಧಿಸಿದ ಪುರುಷರ ದುರಂತವೂ ಆಗುತ್ತದೆ. ಇದನ್ನು ಅತಿ ಶಕ್ತವಾಗಿ ವಿಜಯಾದಬ್ಬೆ ಅವರ ವಿಮರ್ಶೆಯು ತೆರೆದಿಡುತ್ತದೆ. :

> "ವೀಣಾ ಶಾಂತೇಶ್ವರ ಅವರ ಗಂಡಸರು ಕಾದಂಬರಿಯ ನಾಯಕಿ ದೈಹಿಕ ಸಂಬಂಧವನ್ನು ಭಾವವೇಶಕ್ಕ ಒಳಗಾಗಿ ಒಪ್ಪಿಕೊಳ್ಳುತ್ತಾಳೆ. ವೈವಾಹಿಕ ಚೌಕಟ್ಟಿನೊಳಗೆ ಸೇರುವ ಬಯಕೆ ಯಾಚೆಗೆ ನಡೆದಿದ್ದಾಳೆ. ಶಂಕರನಿಂದ ತಿರಸ್ಕೃತೆಯೂ ಪ್ರಾಧ್ಯಾಪಕನಿಂದ ವಂಚಿತೆಯೂ ರಮಾಕಾಂತ ಸಿಂಧ್ಯೆಯಿಂದ ಪರಿತ್ಯಕ್ತೆಯೂ ಆದ ಈಕೆಯ ಸಂಬಂಧ ಜಾನ್‌ನೊಡನೆಯೂ ಮುರಿಯಿತು. ಇಷ್ಟಾದರೂ ಪ್ರೀತಿಗಲ್ಲದಿದ್ದರೂ ಕಾಮಕ್ಕೆ ಐರಿಶ್ ಪ್ರಯಾಣಿಕನಿಗೆ ಅಂಟಿಕೊಂಡ ಈ ನಾಯಕಿ ರೂಢಿಗತವಾದ ಹೆಣ್ಣಿನ ಮೇಲಿನ ಲೈಂಗಿಕ ಕಟ್ಟನ್ನು ಮುರಿಯುತ್ತಾಳಾದರೂ ಅವಳ ವ್ಯಕ್ತಿತ್ವದ ಇತರ ಮುಖಗಳ ಎಚ್ಚರವೇನು? ಪ್ರತಿಭಟನೆಯೇನು ಎಂಬ ಬಗ್ಗೆ ಕಾದಂಬರಿ ಉಳಿಸಿರುವ ಕತ್ತಲು ವಿಸ್ಮಯಕಾರಿಯಾದದ್ದು."(ಶಿವರುದ್ರಪ್ಪ.ಜಿ.ಎಸ್.(ಸಂ):೧೯೮೯; ೨೦೮)

**ಶೋಷಣೆ, ಬಂಡಾಯ ಇತ್ಯಾದಿ** ಕೃತಿಯಲ್ಲಿ 'ಕಲೆಯೇ ಜೀವನ' ಎಂದು ನಿವೇದಿಸಿ ಕೊಳ್ಳುವ ಕಮಲಾ ಶಿವಮೂರ್ತಿಯಿಂದ ಆಕರ್ಷಿತಳಾಗುವುದು ಅವಳ ಮೊದಲ ಪ್ರೇಮ ಪ್ರಕರಣದ ವಿಫಲತೆಯ ಎಚ್ಚರದ ಮೂಲಕ. ಆದರೆ ಶಿವಮೂರ್ತಿ ವಿವಾಹಿತ. ಮೂರು ಮಕ್ಕಳ ತಂದೆ ಎನ್ನುವ ಪ್ರಧಾನ ಅಂಶ ಅವಳ ಆಯ್ಕೆಮಾಡುವ ನೆಲೆಯಲ್ಲಿ ಗೌಣವಾಗುತ್ತದೆ. ವಿವಾಹಿತ ಪುರುಷರನ್ನು ಸ್ತ್ರೀಯರು ಒಪ್ಪಿಕೊಳ್ಳುವುದು ಅವರೊಳಗಿನದ್ದೇ ಆಕಾಂಕ್ಷೆಗಳಿಂದ. ಇದನ್ನು ಮನಃಶಾಸ್ತ್ರ 'ವ್ಯಕ್ತಿತ್ವದ ಬೆಳವಣಿಗೆಯ ಕ್ರಮದ ದೋಷ'ವೆಂದು ಗುರುತಿಸುತ್ತದೆ. ಕೃತಿಯ ಒಳಗೆ ಕೂಡ ಇದು ಸೂಕ್ಷ್ಮವಾಗಿ ವ್ಯಕ್ತವಾಗುತ್ತದೆ.

"ಎಂತಹ ಅದ್ಭುತ ಮನುಷ್ಯ, ಈ ಡೈರೆಕ್ಟರ್ ಸಾಹೇಬ, ನಾಟಕಗಳ ಬಗ್ಗೆ, ಅಭಿನಯದ ಬಗ್ಗೆ, ಒಟ್ಟು ರಂಗಭೂಮಿಯ ಬಗ್ಗೆ ಆತನಿಗೆ ಎಷ್ಟು ಜ್ಞಾನ , ಎಷ್ಟು ನಿಷ್ಠೆ, ಏನು ಆರಾಧಕ ಭಾವ !"
(ವೀಣಾಶಾಂತೇಶ್ವರ :೧೯೮೮; ೩೩)

ಕಲೆಗಾಗಿ ಬದುಕನ್ನು ಅರ್ಪಿಸಿಕೊಂಡ ಕಮಲಾಳಿಗೆ ಶಿವಮೂರ್ತಿಯಲ್ಲಿರುವ 'ಪ್ರತಿಭೆ' ಅದರೊಳಗಿನ 'ವಿದ್ವತ್ತು' ಮುಖ್ಯವಾಗುತ್ತದೆ. ತನ್ನೊಳಗಿನ ಆಕಾಂಕ್ಷೆಯು ಶಿವಮೂರ್ತಿಯ ಪ್ರತಿಭೆಯಲ್ಲಿ ಪ್ರತಿಬಿಂಬಿತಗೊಳ್ಳುವ ಅರಿವಿನಲ್ಲಿ ಶಿವಮೂರ್ತಿಯ ಪೂರ್ವಜೀವನ ಅವಳ ಮದುವೆಗೆ ತಡೆಯಾಗುವುದಿಲ್ಲ. ಕಮಲಾ ಧಾರವಾಡದಿಂದ ಮುಂಬೈಗೆ ಬರುವಲ್ಲಿ ಹುಟ್ಟಿದ ಪರಿಸರ, ಕುಟುಂಬ 'ವಿವಾಹಿತ ಪುರುಷನನ್ನು ಆರಿಸಿಕೊಂಡ' ಅವಳ ಆಯ್ಕೆಗೆ ಹೇಗೆ ಪ್ರತಿಕ್ರಿಯಿಸುತ್ತದೆ ಎನ್ನುವ ಸಂಘರ್ಷವನ್ನು ಪಠ್ಯವು ಕಣ್ಮರೆಗೊಳಿಸಿದೆ. ಧಾರವಾಡದಿಂದ ಮುಂಬೈಗೆ ಶಿವಮೂರ್ತಿಯನ್ನು ಹುಡುಕಿಕೊಂಡು ಹೋಗುತ್ತಾಳೆ. ಅಲ್ಲಿಗೆ ಬಂದು ವಿವಾಹಿತ ಶಿವಮೂರ್ತಿಯನ್ನು ಮದುವೆಯಾಗುವಲ್ಲಿ ವಿದ್ಯಾವಂತ ಸಮಾಜದ ವ್ಯಕ್ತಿಗಳ ತೀರ್ಮಾನಗಳ ಸಂಕೀರ್ಣತೆಯಷ್ಟೆ ಪ್ರಕಟಗೊಳ್ಳುತ್ತದೆ. ವಿವಾಹವನ್ನು ಕಮಲಾಳಿಗಿಂತ ಭಿನ್ನವಾಗಿ ಪರಿಭಾವಿಸುವ ಶಶಿಯು ವಿವಾಹ ಪೂರ್ವದ 'ಲೈಂಗಿಕತೆ'ಯಿಂದ ಆಕರ್ಷಿತಳಾದವಳು. ವಿವಾಹ ಪೂರ್ವದ ಆಕೆಯ ಲೈಂಗಿಕ ಸಂಬಂಧವನ್ನು ಯಾವ ಭಾರತೀಯ ಪುರುಷನೂ ಸಹಿಸುವುದಿಲ್ಲ. ಹೆಣ್ಣು ಗಂಡಿನ ದೈಹಿಕ ಸಂಬಂಧ ಸಾಮಾನ್ಯವಾಗಿ ಸಾಪೇಕ್ಷವಾದದ್ದು. ಆದರೆ, 'ಶೀಲ'ದ ಚಾರಿತ್ರಿಕತೆಯು ಇದನ್ನು ಹೆಣ್ಣಿಗೆ ಮಾತ್ರ ಅನ್ವಯಿಸಿ, ಅದನ್ನು ಪವಿತ್ರವಾಗಿ ಕಾಯ್ದುಕೊಳ್ಳಬೇಕೆಂಬ ಆಜ್ಞೆಯನ್ನು ವಿಧಿಸಿದೆ. ಪುರುಷ ಪ್ರಧಾನ ಸಮಾಜದ ಸಾಂಸ್ಕೃತಿಕ ಗ್ರಹಿಕೆಯಾಗಿ ಶೀಲವು ನೆಲೆಯೂರಿದಂದಿನಿಂದ ಹೆಣ್ಣನ್ನು ಶೀಲದ ಪ್ರಾತಿನಿಧಿಕ ಏಕಮಾತ್ರ ಸಂಕೇತವಾಗಿ ನೆಲೆಗೊಳಿಸಲಾಗಿದೆ. ಇದರಿಂದಾಗಿ ಹೆಣ್ಣು ಗಂಡಿನ ಲೈಂಗಿಕ ಸಂಬಂಧದಲ್ಲಿ ಗಂಡಿನ ಪಾತ್ರ ಹಿಂದೆ ಸರಿದಿದೆ. ಒಂದರ್ಥದಲ್ಲಿ ಇದು ಗಂಡಿನ ಸಾಂಸ್ಕೃತಿಕ ರಾಜಕಾರಣದ ಫಲಿತ. ಈ ನೆಲೆಯಲ್ಲಿ ಸ್ತ್ರೀ ಪರಪುರುಷನ ಸಂಪರ್ಕವಿಲ್ಲದಿರುವುದೇ ಶೀಲದ ಅತ್ಯುನ್ನತ ಲಕ್ಷಣವೆಂದು ಸ್ಥಾಪಿಸಲಾಗಿದೆ. ಇದಕ್ಕಿಂತ ಭಿನ್ನವಾಗಿ ಆಲೋಚಿಸಿದಾಗ ಲೈಂಗಿಕ ಸಂಬಂಧದಲ್ಲಿ ಇಬ್ಬರೂ ಕಳೆದುಕೊಳ್ಳುವ ಮತ್ತು ಪಡೆದುಕೊಳ್ಳುವ ಸಾಧ್ಯತೆಗಳು ಸಮಾನವಾಗಿಯೇ ಇರುತ್ತವೆ. ಆದರೆ ಭಾರತೀಯ ಪರಂಪರೆಯಲ್ಲಿ ಸ್ತ್ರೀ ಸಾಂಸ್ಕೃತಿಕ ಪ್ರತಿನಿಧಿಯಾದ್ದರಿಂದ ಗಂಡಿನ ಪಾವಿತ್ರ್ಯನಾಶದ ಪ್ರಶ್ನೆಯನ್ನು ಪ್ರಧಾನ ಭೂಮಿಕೆಯಿಂದ ಕಣ್ಮರೆಗೊಳಿಸಿದೆ. ಮಾತ್ರವಲ್ಲ 'ಪಾವಿತ್ರ್ಯ'ವನ್ನು ಸ್ತ್ರೀಯಲ್ಲಿ ಮಾತ್ರ ನೆಲೆಗೊಳಿಸಿದೆ. ಇದನ್ನು ವೀಣಾ ಅವರ ಕೃತಿಗಳ ಸ್ತ್ರೀ ಪಾತ್ರಗಳು ಮುಖಾಮುಖಿಗೊಳಿಸಲು ಪ್ರಯತ್ನ ನಡೆಸುತ್ತವೆ. ಇಂಥ ವಿಘಟನ ಸಂದರ್ಭದಲ್ಲಿ ಮಾನವೀಯ ನೆಲೆಯ ಬದುಕು ಸಾಧ್ಯವಾಗಬಹುದೆ ಎಂಬುದನ್ನು ಶೋಧಿಸುವುದು ಇಲ್ಲಿ ಅರ್ಥಪೂರ್ಣ. ಆದರೆ ಲೈಂಗಿಕತೆ, ಮತ್ತು ಅದನ್ನು ಎದುರಿಸುವ ಶಕ್ತ ಪರಿಹಾರದ ನೆಲೆಯಲ್ಲಿ ಸ್ತ್ರೀಯರಿಗೆ ವಿವಾಹ ಏಕಮಾತ್ರ ಸುರಕ್ಷಿತ ಹಾದಿ ಎಂಬುದು ಇವರ ಕಾದಂಬರಿಗಳ ಅಂತರ್ಗತ ಚಿಂತನೆಯ ಸ್ವರೂಪವಾಗಿವೆ.

**ಕೂಡುಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಳ್ಳುವ ವಿವಾಹದ ಸ್ವರೂಪ.**

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ರಚನೆಗೊಂಡ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ವಿವಾಹದ ಲಕ್ಷಣಗಳನ್ನು ನಿಖರವಾಗಿ ಈ ಕೆಳಗಿನಂತೆ ಗುರುತಿಸಬಹುದು.

೧) ವಿವಾಹದ ಚೌಕಟ್ಟಿನೊಳಗೇ ಇರುವ ಸ್ತ್ರೀಯರ ಗುಲಾಮತ್ವದ ಮಾದರಿಗಳಿಗಿಂತ ಭಿನ್ನವಾಗಿ ಹೊಸ ಮಾದರಿಗಳನ್ನು ಸೃಷ್ಟಿಸಲಾಗಿದೆ.

೨) ಸ್ತ್ರೀಯರ ಬದುಕಿಗೆ ಸಂಬಂಧಿಸಿದಂತೆ ವಿವಾಹದ ಚೌಕಟ್ಟಿನಿಂದ 'ಮುಕ್ತ 'ಗೊಂಡ ಬದುಕು ಹೋರಾಟದ ತೀವ್ರತೆ, ಸೂಕ್ಷ್ಮತೆ, ಸಂಕೀರ್ಣತೆ, ಸಂದಿಗ್ಧತೆಗಳನ್ನು ಚಿತ್ರಿಸಲಾಗಿದೆ.

೩) ವಿವಾಹ ಸಂಸ್ಥೆಯ ಬೇರುಗಳನ್ನು ಸಂಘರ್ಷದ ಮೂಲಕ ಒಡೆದು ಮರುಕಲ್ಪಿಸುವ ಪ್ರಯತ್ನದಲ್ಲಿ ಸ್ತ್ರೀಯರ ಬದುಕಿನಲ್ಲಿ ಮಹತ್ವಾಕಾಂಕ್ಷೆ - ಸಾಧನೆ ಅಥವಾ ಕುಟುಂಬ ಎಂಬ ಆಯ್ಕೆಯ ಪ್ರಶ್ನೆ ಎದುರು ಮಾಡಲಾಗಿದೆ.

೪) ಇವೆಲ್ಲಕ್ಕಿಂತ ಮುಖ್ಯವಾಗಿ ಪುರುಷ ಒಳಗು ಮಾಡಿಕೊಂಡ ಸಾಮಾಜಿಕ- ಸಾಂಸ್ಕೃತಿಕ, ರಾಜಕೀಯ ಒಂದರ್ಭದಲ್ಲಿ ಕೌಟುಂಬಿಕ ಬದುಕಿನ ಸ್ತರಗಳನ್ನು ಮರುಶೋಧನೆ ಮಾಡಲಾಗಿದೆ.

೫)ವಿವಾಹದ ಮೂಲದಿಂದ ಉದಾರವಾದಿ ಸಾಂಸ್ಕೃತಿಕ ನೆಲೆಯ ವ್ಯಾಪಕ ಮೌನಗಳನ್ನು ಬಗೆಯುವ, ಬಿಡಿಸುವ, ಧ್ವನಿ ನೀಡುವ ಪ್ರಯತ್ನವನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ದೇಹಗತ ಮಾಡಿಕೊಂಡಿವೆ.

**೪.೩.೨ ಕೂಡುಕಟ್ಟಿನ ಕಾದಂಬರಿಗಳು :ದಾಂಪತ್ಯದ ಸ್ವರೂಪ.**

**ಅನುಪಮಾ ನಿರಂಜನ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡ ದಾಂಪತ್ಯದ ಸ್ವರೂಪ:**

ಪ್ರೇಮಾಧಾರಿತ ಸಫಲ ದಾಂಪತ್ಯವನ್ನು ಅನುಪಮಾ ನಿರಂತರವಾಗಿ ಪ್ರತಿಪಾದಿಸುವುದು **ಸ್ನೇಹಪಲ್ಲವಿ, ಸೇವೆ, ಹಿಮದ ಹೂ, ಮೂಡಣ ಪಡುವಣ,** ಮೊದಲಾದ ಕೃತಿಗಳಲ್ಲಿ ಪ್ರಕಟವಾಗುತ್ತದೆ. ಅರ್ಥಪೂರ್ಣ ದಾಂಪತ್ಯದ ಅನ್ವೇಷಣೆಯನ್ನು ಅನುಪಮಾ ಅವರ ಸೃಜನಶೀಲತೆ ಬೇರೆ ಬೇರೆ ಮಗ್ಗುಲುಗಳಲ್ಲಿ, ವಿಭಿನ್ನ ಮಾದರಿಗಳಲ್ಲ ನಡೆಸುತ್ತದೆ. ಪ್ರೀತಿಯು ದಾಂಪತ್ಯದ ತಳಹದಿಯಾಗ ಬೇಕೆನ್ನುವುದು ಅವರ ಎಲ್ಲಾ ಕಾದಂಬರಿಗಳ ಒಳಹರಿತು. **ಶ್ವೇತಾಂಬರಿ** ಕೃತಿಯ ರಾಧೆ ಮತ್ತು ಶ್ರೀನಾಥರ ಪರಿಪೂರ್ಣ ಪ್ರೀತಿಯು ಎಲ್ಲಾ ಅರ್ಥಗಳಿಂದಲೂ ಫಲವತ್ತಾದ ದಾಂಪತ್ಯವನ್ನು ಹೊಂದುವ ಸಾಧ್ಯತೆಗಳಿಂದ ಪ್ರೇಮ ವಿವಾಹದಲ್ಲಿ ಕೊನೆಗೊಳ್ಳುತ್ತದೆ. ಇದೇ ಕಥಾವರಣ **ಸೇವೆ**ಯ ವೈದ್ಯ ದಂಪತಿಗಳಾದ ಮಹದೇವಗೌಡ ಮತ್ತು ಸುನಂದಾ ಇವರ ತೃಪ್ತ ದಾಂಪತ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಹಳ್ಳಿಯಲ್ಲಿ ಸೇವೆ ಮಾಡುವ ಆದರ್ಶವನ್ನು ಹೊಂದಿ ಜಾತಿಯ ಗಡಿಗಳನ್ನು ಮೀರಿ ವಿವಾಹಿತರಾಗುವ ಮಹದೇವಗೌಡ ಮತ್ತು ಸುನಂದಾ ಹಳೆಯ ದಾಂಪತ್ಯದ ಚೌಕಟ್ಟನ್ನು ಬಿಟ್ಟ ನವೀನ ಮಾದರಿಗಳಾಗಿ ವ್ಯಕ್ತವಾಗುತ್ತಾರೆ. ಕೃಷಿ ಆಧಾರಿತ ಜೀವನದಲ್ಲಿ ಗಂಡ-ಹೆಂಡತಿಯರಿಗಿದ್ದ ಒಡನಾಟ, ಹಂಚಿಕೊಳ್ಳುವಿಕೆಗಳು ವಸಾಹತು, ವಸಾಹತೋತ್ತರ ಸಂದರ್ಭಗಳಲ್ಲಿ ಕ್ಷಯಿಸಿವೆ. ಇದರಲ್ಲಿ ಆಧುನಿಕ ಹೊರ ಜಗತ್ತಿಗೆ ತೆರೆದುಕೊಂಡ ಪುರುಷರು ಜೀವನದ ನಿರೀಕ್ಷೆಗಳಲ್ಲಿ, ಅಭಿರುಚಿಗಳಲ್ಲಿ ಬೇರೆಯಾಗತೊಡಗಿದರು. ಸಮಾನವಾದ ಅವಕಾಶಗಳು ಸ್ತ್ರೀಯರಿಗೆ ದೊರೆಯದೆ ಅವರಿಬ್ಬರ ನಡುವಿನ 'ಮಾನಸಿಕ' ಅಂತರ ಹಾಗೇ ಉಳಿಯಲು ಕಾರಣವಾಗಿದೆ. ಸಂಕ್ರಮಣ ಕಾಲದ, ಸಂವಾದವು ಅಸಾಧ್ಯವಾದ ಈ ದಾಂಪತ್ಯದ ಹತಾಶೆಯ ಸ್ಥಿತಿಯನ್ನು ಉದಾರವಾದಿ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ತೆರೆದಿಡುವ ಪ್ರಯತ್ನವನ್ನು ಮಾಡಿದವು (ನಿರ್ದಿಷ್ಟವಾಗಿ ತ್ರಿವೇಣಿ, ಎಂ.ಕೆ.ಇಂದಿರಾ ಅವರ ಕೃತಿಗಳು.) ಐವತ್ತು, ಅರುವತ್ತರ

ದಶಕಗಳಲ್ಲಿ ವಿದ್ಯಾವಂತ ಸ್ತ್ರೀಯರ ಸಂಖ್ಯೆ ಹೆಚ್ಚಿದಂತೆ ಈ ಸಮಸ್ಯೆ ಕೆಲಮಟ್ಟಿಗೆ ಪರಿಹಾರಗೊಳ್ಳುವ ಸಂದರ್ಭಗಳು ಏರ್ಪಟ್ಟವು. ದಾಂಪತ್ಯದ ನೆಲೆಯಲ್ಲಿ ಸ್ತ್ರೀ ಪುರುಷರು ಎದುರಿಸುವ ಬಿಕ್ಕಟ್ಟಿನ ಸಾಂದರ್ಭಿಕತೆಗೆ ಉತ್ತರ ರೂಪದಲ್ಲಿ ಅನುಪಮಾ ಅವರು ಒಂದೇ ವೃತ್ತಿಯ ಅಥವಾ ಒಂದೇ ಹವ್ಯಾಸದ, ಮನೋಭಾವದ ಸ್ತ್ರೀ ಪುರುಷರ ದಾಂಪತ್ಯ ಜೀವನವನ್ನು ನಿರೂಪಿಸುವುದು ಕಂಡು ಬರುತ್ತದೆ. ಇದರ ಒಳಗೂ ಎದುರಾಗುವ ಆಂತರಿಕ ಸಂಘರ್ಷಗಳನ್ನು, ವೈರುಧ್ಯಗಳನ್ನು ಅನುಪಮಾ ಅವರ **ಮೂಡಣ ಪಡುವಣ** ಕೃತಿಯು ತೆರೆದಿಡುತ್ತದೆ. ಲಂಡನ್ನಿನಲ್ಲಿ ಪ್ರೇಮ ವಿವಾಹಿತರಾಗಿ ಭಾರತಕ್ಕೆ ಬರುವ ದಂಪತಿಗಳಾದ ಇಡಾ ಮತ್ತು ಶ್ರೀನಿವಾಸ್ ಇವರು ದಾಂಪತ್ಯವನ್ನು ಎದುರಿಸುವ ಸವಾಲುಗಳಲ್ಲಿ ಇದು ವ್ಯಕ್ತವಾಗುತ್ತದೆ. ಪರದೇಶದ ಹೆಣ್ಣು ಇಡಾಳನ್ನು ಶ್ರೀನಿವಾಸನ ತಂದೆ ಸೊಸೆಯಾಗಿ ಸ್ವೀಕರಿಸಲು ನಿರಾಕರಿಸುವುದು, ಇವುಗಳ ಜೊತೆಗೆ ಇಡಾಳನ್ನು ಕುರಿತು-ಅವರಿಬ್ಬರ ಸಂಬಂಧವನ್ನೂ ಕುರಿತು ಭಾರತೀಯ ಸಮಾಜದ ವಿಚಿತ್ರ ದೃಷ್ಟಿ, ತಾನು ಬೆಳೆದ ಸಮಾಜವನ್ನೂ, ಉದ್ಯೋಗವನ್ನೂ ಬಿಟ್ಟು ಬಂದ ಇಡಾಳ ಏಕಾಕಿತನ- ಈ ಎಲ್ಲವೂ ಅವರು ಲಂಡನ್ ತೊರೆದು ಭಾರತಕ್ಕೆ ಬಂದ ಕ್ಷಣದಿಂದ ಸಮಸ್ಯೆಗಳಾಗಿ ಕಾಣಿಸಿಕೊಳ್ಳುತ್ತವೆ. ದಂಪತಿಗಳ ಮಾನಸಿಕ ಹೋರಾಟ ಅದರಲ್ಲೂ ಇಡಾಳ ಹೋರಾಟಕ್ಕೆ ಹೆಚ್ಚು ಒತ್ತು ಕೊಟ್ಟು ಕಾದಂಬರಿಯನ್ನು ನಿರೂಪಿಸಲಾಗಿದೆ. ತಾಯಿಯ ಸಾವಿನ ಸಂದರ್ಭದಲ್ಲಿ ತನ್ನ ತಾಯಿನಾಡಿಗೆ ಹೋದ ಇಡಾ ಇನ್ನು ತಾನು ಹಿಂದಿರುಗುವುದೇ ಅಸಂಭವ ಎಂಬಷ್ಟು ಅಂಚಿಗೆ ಚಿಂತಿಸುತ್ತಾಳೆ. ಆದರೆ ಅವಳ ತವರಿನ ಅಸಹನೀಯ ವಾತಾವರಣ, ಶ್ರೀನಿವಾಸನ ಪ್ರೀತಿ ಮತ್ತು ಆತನ ಮಗು ಅವಳ ಒಡಲಿನಲ್ಲಿದ್ದುದು ಅವಳನ್ನು ಪುನರಾಲೋಚನೆಗೆ ಹಚ್ಚುತ್ತದೆ. ಶ್ರೀನಿವಾಸನಲ್ಲಿದ್ದ ಅವಳ ಗಾಢ ಪ್ರೀತಿಯು ಗೆಲುವು ಸಾಧಿಸಿ ಆಕೆ ಮತ್ತೆ ಭಾರತಕ್ಕೆ ಹಿಂದಿರುಗುತ್ತಾಳೆ. ದೇಶ, ಭಾಷೆ, ಬಣ್ಣಗಳ ಎಲ್ಲೆಯನ್ನು ಗಂಡು- ಹೆಣ್ಣಿನ ಉತ್ಕಟವಾದ ಪ್ರೇಮ ಸಂಬಂಧ ಮಾತ್ರ ಮರೆಗೊಳಿಸಬಹುದು, ಇಲ್ಲವಾಗಿಸಬಹುದು ಎಂಬುದನ್ನು ಶ್ರೀನಿವಾಸ ಮತ್ತು ಇಡಾಳ ದಾಂಪತ್ಯ ಸಾಬೀತು ಪಡಿಸುತ್ತದೆ. ಈ ಅರ್ಥದಲ್ಲಿ ಇಡೀ ಕಾದಂಬರಿಯು ನಿರೂಪಿಸುವ ದಾಂಪತ್ಯದ ವಸ್ತುವಿನ ರಚನಾತ್ಮಕತೆಯ ಹೊಂದಾಣಿಕೆಯು ಕ್ರಮಬದ್ಧ ನೇಯ್ಗೆಯನ್ನು ಪಠ್ಯದ ಒಳಗೆ ಸಾಧಿಸಿದೆ.

**ಸಂಕೋಲೆಯೊಳಗಿನಿಂದ, ಹಿಮದ ಹೂ, ಆಳ, ಮುಕ್ತಿಚಿತ್ರ** ದಾಂಪತ್ಯದ ವಿಫಲತೆಯನ್ನು ವಿಶ್ಲೇಷಿಸುವ ಕೃತಿಗಳು. ದಾಂಪತ್ಯದ ಸಮಸ್ಯೆ ಸವಾಲುಗಳನ್ನು ವಿಭಿನ್ನ ತಳಹದಿಯಲ್ಲಿ ನೋಡುವ ಪ್ರಯೋಗಶೀಲತೆ ಇವುಗಳಲ್ಲಿ ವ್ಯಕ್ತವಾಗುತ್ತದೆ. ವಿವಾಹದ ಬಂಧನದೊಳಗೆ ನರಳುವ ಹೆಣ್ಣೊಬ್ಬಳ ದುರಂತವನ್ನು **ಸಂಕೋಲೆಯೊಳಗಿಂದ** ಕೃತಿ ನಿರೂಪಿಸುತ್ತದೆ. ಸುಂದರಳಾದ ಬಡ ಹುಡುಗಿ ವಿಜಯಾಳನ್ನು ಶ್ರೀಮಂತ ಯುವಕನೊಬ್ಬ ಕಾಮಿಸಿ ವರಿಸುತ್ತಾನೆ. ತಂದೆ ತಾಯಿಗಳನ್ನು ಕಳೆದುಕೊಂಡು ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆದ ವಿಜಯಾಳಿಗೆ ಬಡತನದ ಪರಿಚಯವಿತ್ತೇ ವಿನಾ ವೈವಾಹಿಕ ಜೀವನ ಕೊಟ್ಟ ಯಾತನೆಯ ಅನುಭವವಿರಲಿಲ್ಲ. ಆದರೆ ಪತಿ ರಾಮನಾಥನ ಲಂಪಟತನ, ಆತನು ಮೋಸದಿಂದ ಸಂಪಾದಿಸುವ ಹಣ, ವೇಶ್ಯೆಯರ ಸಂಗ, ಸ್ವಾರ್ಥದಿಂದ ಕೂಡಿದ ಅಹಂಕಾರಗಳು ವಿಜಯಾಳ ಬದುಕನ್ನು ನರಕ ಸದೃಶಗೊಳಿಸುತ್ತವೆ. ಆರಂಭದ ವೈವಾಹಿಕ ಜೀವನದ ಸುಖ ಮರೀಚಿಕೆಯಾಗುತ್ತದೆ. ವಿಜಯಾಳ 'ಸಹನೆ'ಯ ವ್ಯಕ್ತಿತ್ವ ಎಲ್ಲವನ್ನು ಮೌನವಾಗಿ ಸಹಿಸುವಂತೆ ಮಾಡುತ್ತದೆ. ಗಂಡನ ಸ್ವಾರ್ಥ, ಮೋಸದ ಚಟುವಟಿಕೆಗಳೆಲ್ಲಾ ಬಯಲಾಗಿ,

ಕೊನೆಯಲ್ಲಿ ರಾಮನಾಥನ ಶ್ರೀಮಂತಿಕೆಯೆಲ್ಲಾ ಕರಗಿ ಬಡತನದ ಸ್ಥಿತಿ ಬಂದಾಗ ಆತನ ನಿಜ ಸ್ವರೂಪ ಅವಳ ಅರಿವಿಗೆ ಬರುತ್ತದೆ. ಆತನಿಂದ ಹರಡುವ ಗುಪ್ತರೋಗಕ್ಕೆ ವಿಜಯಾ ತನ್ನ ಬದುಕನ್ನು ದಂಡ ತೆರಬೇಕಾಗುತ್ತದೆ. ರಾಮನಾಥನ ಪಲಾಯನ ಹೆಣ್ಣು ಎದುರಿಸಬೇಕಾದ ಸಮಸ್ಯೆಗಳ ವಿಪ್ಲವತೆಯನ್ನು ಬಿಡಿಸಿ ತೋರಿಸುತ್ತದೆ. ದಾಂಪತ್ಯದಲ್ಲಿ ಪ್ರೀತಿ, ಪ್ರೇಮ ಮಮಕಾರದಂತಹ ಸಂವೇದನೆಗಳು ಅರ್ಥ ಕಳೆದುಕೊಂಡಾಗ ಬದುಕು ಬರಡಾಗುತ್ತದೆ. ಇಲ್ಲಿ ಕಾಮ ಮಾತ್ರವೇ ಏಕಮಾತ್ರ ಸಂವೇದಿಯಾಗಿದೆ. ಇದರಿಂದ ದಾಂಪತ್ಯವನ್ನು ನಡೆಸಲು ಸಾಧ್ಯವಿಲ್ಲ. ಇಂಥ ವಿವಾಹದಿಂದ ಇಬ್ಬರೂ ಸುಖ ಅನುಭವಿಸುವುದು ಸಾಧ್ಯವಿಲ್ಲ. ಮಾತ್ರವಲ್ಲ ಇಂತಹ ಜೀವನಗಳಲ್ಲಿ ಹೆಣ್ಣು ಹೆಚ್ಚು ದುಬಾರಿಯ ದಂಡ ತೆರಬೇಕಾಗುತ್ತದೆ. ಅಸಹನೀಯ ಪರಿಣಾಮಗಳನ್ನು ಅನುಭವಿಸಬೇಕಾಗುತ್ತದೆ. ಪರಿಣಾಮವಾಗಿ ಯಾವ ತಪ್ಪನ್ನು ಮಾಡದಿದ್ದರೂ ವಿಜಯ ಆಸ್ಪತ್ರೆಯ ವೈದ್ಯರಿಂದ, ನರ್ಸ್‌ಗಳಿಂದ ವೇಶ್ಯೆಯೆಂಬ ತಾತ್ಸಾರಕ್ಕೆ ಗುರಿಯಾಗಬೇಕಾಗುತ್ತದೆ. ಗುಪ್ತರೋಗ ಉಲ್ಬಣಾವಸ್ಥೆ ತಲುಪಿದಾಗ ಸಾವನ್ನಪ್ಪುತ್ತಾಳೆ. ಈ ದುರಂತ ಪಠ್ಯದೊಳಗೆ ಪುರುಷನ ವೈವಾಹಿಕ ದೌರ್ಜನ್ಯದ ಸಂಕೇತದಂತೆ ಅಭಿವ್ಯಕ್ತಗೊಳ್ಳುತ್ತದೆ.

> "ಈ ಸಾವು ಈ ದೇಶದ ಅಸಹಾಯಕ ಸ್ತ್ರೀಯರ ಸಾವನ್ನು ಪ್ರತಿನಿಧಿಸುತ್ತದೆ." (ವಿಜಯಶ್ರೀ ಸಬರದ : ೧೯೯೪; ೧೬೦)

ಅಸಹಾಯಕ ಹೆಣ್ಣೊಬ್ಬಳ ಈ ಸಾವು ಇಡೀ ವ್ಯವಸ್ಥೆಯ ಭೀಕರತೆಯನ್ನು ತೆರೆದಿಡುವ ಪ್ರಯತ್ನವಾಗಿದೆ. **ಹಿಮದ ಹೂವಿನಲ್ಲಿ** ಮೆಚ್ಚಿ ಮದುವೆಯಾದ ಲಲಿತೆ ಮತ್ತು ಶೇಖರ ಇವರ ಸಂಸಾರದ ಅಸಮನೆಲೆಯು ಬಿಂಬಿತಗೊಂಡಿದೆ. ಇಂಗ್ಲಿಷ್ ಉಪನ್ಯಾಸಕ ಶೇಖರ್, ಮಹಾರಾಣಿ ಕಾಲೇಜಿನ ಉಪನ್ಯಾಸಕಿಯಾದ ಲಲಿತಾರ ನಡುವೆ ಮದುವೆಯ ಆರಂಭದ ದಾಂಪತ್ಯದಲ್ಲಿ ಸುಖವಿರುತ್ತದೆ. ನಂತರದ ದಿನಗಳಲ್ಲಿ ಲಲಿತಾ ತನ್ನ ಕೆಲಸದ ಮೇಲೆ ನಿಷ್ಠೆ ತೋರಿದಂತೆ ಶೇಖರನ ಅಸಹನೆ ಹೆಚ್ಚಾಗಿ ಆತ ಅವಳನ್ನು ಕೆಲಸಕ್ಕೆ ರಾಜೀನಾಮೆ ಕೊಡುವಂತೆ ಒತ್ತಾಯಿಸುತ್ತಾನೆ. ಹೆಣ್ಣಿಗೆ ಗಂಡ, ಮನೆ, ಮಕ್ಕಳು ಇವು ಮಾತ್ರ ಮುಖ್ಯ ಎಂದು ಶೇಖರನ ಮನೆಯವರು ಕೂಡ ಭಾವಿಸುವುದರಿಂದ ಇಬ್ಬರ ಮಧ್ಯೆ ಅರಿವಿಗೆ ಬಾರದ ಅಂತರ ಅಂಕುರವಾಗುತ್ತದೆ. ಶೇಖರ ಮಾಧವಿಯೆಂಬ ಹೆಣ್ಣಿನೊಂದಿಗೆ ಸ್ನೇಹ ಬೆಳಸಿದ ಎಂಬುದಕ್ಕೆ ಇಡೀ ಕುಟುಂಬ ನೀಡುವ ಕಾರಣ ;

> "ಲಲಿತೆ ಶೇಖರನಿಗೆ ಸಂಸಾರದಲ್ಲಿ ನಿರೀಕ್ಷಿಸಿದ ಸುಖವನ್ನು ನೀಡಲಿಲ್ಲ". (ಅನುಪಮಾ ನಿರಂಜನ : ೧೯೬೬; ೩೭)

ಎನ್ನುವುದು. ಸಮಾಜದ ರೂಢಿಗತ ಧೋರಣೆಯು ಆಧುನಿಕೋತ್ತರ, ವಸಹತೋತ್ತರ ಯಾವ ಸಂದರ್ಭವೇ ಇರಲಿ ಹೆಣ್ಣನ್ನು ನೋಡುವ ದೃಷ್ಟಿಕೋನ ಮಾತ್ರ ಬದಲಾಗದೆ ಹಾಗೇ ಇದೆ. ಸಂಸಾರ ಮತ್ತು ದಾಂಪತ್ಯ ನಿರ್ವಹಣೆಯಲ್ಲಿ ಸ್ತ್ರೀಯರ ಜವಾಬ್ದಾರಿ, ಕರ್ತವ್ಯಗಳು ಹೆಚ್ಚು ಸೂಕ್ಷ್ಮ ಹಾಗೂ ಸಂಕೀರ್ಣವಾಗಿದೆ. ಹೆಣ್ಣು ನಿಲ್ಲಬೇಕಾದ ಆಯಕಟ್ಟಿನ ಸ್ಥಿತಿಯಲ್ಲಿ ಗಂಡು ನಿಲ್ಲುವ ಪ್ರಮೇಯಗಳು ಅತಿ ವಿರಳ. ತನ್ನ ಮಹತ್ವಾಕಾಂಕ್ಷೆಯನ್ನು ಯಾವ ಕಾರಣಗಳಿಗೂ ಒತ್ತೆ ಇಡಲು ಸಿದ್ಧಳಿಲ್ಲದ ಲಲಿತ ದುಡಿಯುವ ಹಕ್ಕು ಮಾತ್ರ ಸ್ತ್ರೀಯರಿಗೆ ಸಾಂಸ್ಕೃತಿಕ ಸ್ಥಾನಮಾನವನ್ನು ಕೊಡಬಲ್ಲದು ಎಂದು ಭಾವಿಸಿದವಳು. ಅವಳ ಮನೋಭಾವ ಹಲವು ಹೊಯ್ದಾಟಕ್ಕೆ ಸಿಲುಕಿದರೂ, ಸಂಸಾರವನ್ನು ಹಾಗೂ ಉದ್ಯೋಗವನ್ನು ಸಮಾನವಾಗಿ ಸ್ವೀಕರಿಸುತ್ತದೆ. ಶೇಖರನಿಗೆ ಲಲಿತೆಯ

ಆಕಾಂಕ್ಷೆಯ ಗಂಭೀರತೆ ಅರಿವಾಗುವುದಿಲ್ಲ. ಅದನ್ನು ಆತ ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದೂ ಇಲ್ಲ. ಅವನ ಹೊಣೆಗೇಡಿತನದ ವಿಶ್ಲೇಷಣೆಯು ಕೃತಿಯ ಒಳಗೆ ಇಲ್ಲವೇ ಇಲ್ಲ. ಆತ ಲಲಿತೆಗೆ ಮನೆಕೆಲಸದಲ್ಲಿ ಸಹಾಯಮಾಡುವ ಸ್ಥಿತಿ ನಿರ್ಮಾಣವಾಗುವುದಿಲ್ಲ. ಆದರೆ, ಕೊನೆಯಲ್ಲಿ ಆತನನ್ನು ಆಕರ್ಷಿಸುವ ಹೆಣ್ಣು ಮತ್ತೊಬ್ಬನನ್ನು ವಿವಾಹವಾಗಿ ಆತನಿಂದ ದೂರವಾದಾಗ ಹೆಂಡತಿಯ ಸ್ಥಿತಿ ಆತನ ಅರಿವಿಗೆ ಬರುತ್ತದೆ. ಲಲಿತ ಅವಳ ಕನಸು (ಶಿಖರವೇರ ಹೋಗಿ ಬಿದ್ದುದನ್ನು)ನ್ನು ಹೇಳಿದಾಗ 'ಇನ್ನು ಮೇಲೆ ಇಬ್ಬರೂ ಜೊತೆಯಾಗಿ ಶಿಖರ ಏರೋಣ ಸರಿಯೇ' (ಅನುಪಮಾ ನಿರಂಜನ :೧೯೬೬. ೮೯) ಎಂದು ಅವಳ ಗಂಡ ಹೇಳುವ ಮಾತಿನಲ್ಲಿ ವ್ಯಕ್ತವಾಗುವುದು ಆತನ ಬದಲಾವಣೆಯ ಸಕಾರಾತ್ಮಕತೆ. ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭದಲ್ಲಿ ಸ್ತ್ರೀಯರು ಎದುರಿಸಬೇಕಾಗಿದ್ದ ಮುಖ್ಯ ಸಮಸ್ಯೆ ಅತಿ ದುಡಿಮೆ ಅಥವಾ ಇಮ್ಮಡಿ ದುಡಿಮೆ. ಸಾಂಪ್ರದಾಯಿಕವಾಗಿ ಬಂದ ಮನೆಯೊಳಗಿನ ದುಡಿಮೆಯ ಜೊತೆಗೆ ಆಧುನಿಕ ಕಾಲದಲ್ಲಿ ಮನೆಯ ಹೊರಗಿನ ದುಡಿಮೆಯೂ ಇಲ್ಲಿ ಸೇರುತ್ತದೆ.

> "ಹೊರಗಿನ ದುಡಿಮೆಯನ್ನು ಹೆಂಗಸು ಹಂಚಿಕೊಂಡಷ್ಟು ಸುಲಭವಾಗಿ ಮನೆಯೊಳಗಿನ ದುಡಿಮೆಯನ್ನು ಗಂಡಸು ಹಂಚಿಕೊಳ್ಳಲಾಗಿಲ್ಲ. ಈ ಹೊರೆಯಿಂದಾಗಿ ಅವಳ ಆತಂಕ ಸಮಸ್ಯೆಗಳು ಹೆಚ್ಚುತ್ತವೆ. ಈ ಹೊರೆಗೆ ಅಂಜಿ ಹೊರ ದುಡಿಮೆಯಿಂದ ಹಿಂದುಳಿದ ಹೆಂಗಸರೂ ಇದ್ದರು. ಅದೇ ಕ್ಷೇಮವೆಂದು ತಿಳಿಯುವ ಹೆಂಗಸರೂ ಗಂಡಸರೂ ಇದ್ದರು. ಆಧುನಿಕ ಕಾಲದ ಆರ್ಥಿಕ ಒತ್ತಡಗಳಲ್ಲಿ ಮಹಿಳೆಯೂ ವಿದ್ಯಾವಂತಳಾಗಿದ್ದು ಅವಳ ಪ್ರತಿಭೆಯೂ ಅವಕಾಶವನ್ನು ಬೇಡುತ್ತಿರುವಾಗ, ಮನೆಯೊಳಗಿನ ದುಡಿಮೆಗೆ ಸಾಂಸ್ಕೃತಿಕವಾದ ಮೌಲ್ಯವಾಗಲಿ, ಆರ್ಥಿಕವಾದ ಮೌಲ್ಯವಾಗಲಿ ಇಲ್ಲದಿರುವಾಗ ಮಹಿಳೆಯರು ಹೊರಗೆ ದುಡಿಯಬೇಕಾದ ಅವಶ್ಯಕತೆ ಹೆಚ್ಚಿಯೇ ಹೆಚ್ಚಿದೆ. ಮಹಿಳೆಯರ ಅಸ್ವತಂತ್ರ ದುಃಸ್ಥಿತಿಯನ್ನು ಚಿಕ್ಕಂದಿನಲ್ಲೇ ಅರ್ಥಮಾಡಿಕೊಂಡ ಅನುಪಮಾ ಈ ಸ್ಥಿತಿಯ ನಿವಾರಣೆಗೆ ಅವಳ ಆರ್ಥಿಕ ಸ್ವಾತಂತ್ರ್ಯ ಮುಖ್ಯ ಎನ್ನುವುದನ್ನು ತಿಳಿದಿದ್ದರು. ಹಾಗೂ ಸ್ವತಃ ಮಹತ್ವಾಕಾಂಕ್ಷಿಯಾಗಿದ್ದ ಅವರಿಗೆ ಮಹಿಳೆಯರ ಪ್ರತಿಭೆ ಮತ್ತು ಹೊರಗಿನ ದುಡಿಮೆಯನ್ನು ಪ್ರೋತ್ಸಾಹಿಸಬೇಕೆಂಬ ಒಳ ಒತ್ತಡವಿತ್ತು." (ವಿಜಯಾದಬ್ಬೆ : ೧೯೯೮; ೭೧)

ಎಂದು ವಿಜಯಾದಬ್ಬೆ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಒತ್ತಡವನ್ನು ರಚನಾತ್ಮಕವಾಗಿ ಗುರುತಿಸುತ್ತಾರೆ. ವಂಶವನ್ನು ಮುಂದುವರಿಸಲು ಹೆತ್ತು ಹೊತ್ತು ಸಾಕುವ ಸ್ತ್ರೀಯರ ಸ್ಥಿತಿಯಿಂದ ಆಧುನಿಕ ಸ್ತ್ರೀಯರ ಸ್ಥಿತಿ ಬದಲಾಗಿದೆ. ಬದುಕಿನ ಬಗೆಗಿನ ಅವರ ನಿರೀಕ್ಷೆ, ಸಾಧ್ಯತೆಗಳು ಬೇರೆಯಾಗಿವೆ. ಅವರ ಬೇಕು ಬೇಡಗಳನ್ನು ಕಂಡುಕೊಳ್ಳುವ, ಹೇಳುವ, ಪಡೆದುಕೊಳ್ಳುವ ಅವಕಾಶಗಳಿವೆ. ಈ ಹಿನ್ನೆಲೆಯಲ್ಲಿ ಹಳೆಯ ದಾಂಪತ್ಯ ಚೌಕಟ್ಟು ಅವರಿಗೆ ಅಸಹನೀಯವಾಗುವುದು ಸಹಜವಾಗಿದೆ. ಹೊಸ ಹುಡುಕಾಟಕ್ಕೆ ಅವರು ತೊಡಗುವ ಬೆಳವಣಿಗೆಯಲ್ಲಿ ಯೌವನದ ಆಕರ್ಷಣೆ, ಐಶ್ವರ್ಯ, ಸಾಮಾಜಿಕ ಭದ್ರತೆಗಳಾಚೆಗೂ ಕೈಚಾಚಿ ಪರಸ್ಪರರನ್ನು ಅರ್ಥ ಮಾಡಿಕೊಳ್ಳುವ, ಪ್ರೀತಿಸುವ, ಆ ನೆಲೆಯ ಮೇಲೆ ಬಾಳ ಸಂಗಾತಿಗಳಾಗುವ ಪರಿವರ್ತಿತ ಕುಟುಂಬ ಆಧುನಿಕ ಸ್ತ್ರೀಯರ ಕನಸಾಗಿದೆ. ಈ ಆಕಾಂಕ್ಷೆ, ಅನ್ವೇಷಣೆಗಳು **ಆಳ** ಕೃತಿಯಲ್ಲಿ ಪ್ರತಿಮಾತ್ಮಕವಾಗಿ ಬಿಂಬಿತಗೊಂಡಿವೆ. ಒಂದೇ ವೃತ್ತಿಯಲ್ಲಿದ್ದ ಪತಿ- ಪತ್ನಿಯರ ಬದುಕು ಆದರ್ಶಪ್ರಾಯ, ಅದರಲ್ಲಿ ಅಪರಿಮಿತ ಹೊಂದಾಣಿಕೆ ಸಾಧ್ಯ

ಎಂದು ಆಶಿಸಿ, ಊಹಿಸಿ ಮಾಲಿನಿ ತನ್ನದೇ ಕ್ಷೇತ್ರ ಪುರಾತತ್ವ ಶಾಸ್ತ್ರದಲ್ಲಿದ್ದ ರವೀಂದ್ರನನ್ನು ಮದುವೆಯಾಗುತ್ತಾಳೆ. ಆದರೆ ಹೆಂಡತಿಯ ಯಶಸ್ಸು ರವೀಂದ್ರನ ಅಸೂಯೆ, ಸಂಶಯಗಳನ್ನು ದಿನದಿಂದ ದಿನಕ್ಕೆ ಹೆಚ್ಚಿಸುತ್ತದೆ. ರವೀಂದ್ರನ ವಿವಾಹ ಪೂರ್ವದ ದೈಹಿಕ ಸಂಬಂಧ ಹಾಗೂ ಪ್ರೇಮದ ಮೋಡಿಯಲ್ಲಿ ಮಾಲಿನಿ ಅವಳ ಸ್ನೇಹಿತನಿಗೆ ಬರೆದ ಪತ್ರ- ಇವು ಅವರಿಬ್ಬರ ಸಂಬಂಧವನ್ನು ಕಡಿಯುವ ಗಡಿಯಾಗುತ್ತವೆ. ವ್ಯಕ್ತಿಗಳು ಎಷ್ಟೇ ವಿದ್ಯಾವಂತರಾಗಿರಲಿ ಕುಟುಂಬ ನಿರ್ವಹಣೆಗೆ ಬೇಕಾಗಿರುವುದು ಪರಸ್ಪರ ಅರಿತು ಬಾಳುವ ಮನೋಭಾವ. ಪ್ರೀತಿ ಎಂಬುದು ಸಾರ್ವತ್ರಿಕ ಸತ್ಯ. ಇದು ನಂಬಿಕೆಯ ಮೇಲೆ ಬೆಳೆಯುವ ನಿರ್ವಿವಾದ ಅಂಶ. ಕೊನೆಗೊಮ್ಮೆ ಇಂಗ್ಲೆಂಡಿನಲ್ಲಿ ಸಂಶೋಧನೆಗೆ ತೊಡಗುವ ಮಾಲಿನಿಗೆ ಗಂಡ ರವೀಂದ್ರ ಅಲ್ಲದೆ, ಅಲ್ಲೇ ಅವಳ ಪ್ರೇಮವನ್ನು ಬಯಸುವ ಮೈಕಲ್‌ನ ಸಂಪರ್ಕಕ್ಕಿಂತ ಅವಳ ಸಂಶೋಧನೆ ಪ್ರಧಾನವೆನಿಸುತ್ತದೆ. ಸ್ತ್ರೀಯರ ಬದುಕಿನ ಭೂಮಿಕೆಯಲ್ಲಿ ದಾಂಪತ್ಯ ಅಥವಾ ಅದು ಕೊಡಮಾಡುವ ಸುಖ ಮತ್ತು ಮಹತ್ವಾಕಾಂಕ್ಷೆಯ ಸಾಧನೆ ಎಂಬ ಎರಡು ರೇಖಾತ್ಮಕ ಆಯ್ಕೆಗಳಿದ್ದಾಗ ಮಾತ್ರ ಹೆಣ್ಣು ಶಕ್ತವಾಗಿ ಒಂದನ್ನು ಆಯ್ಕೆ ಮಾಡಿಕೊಳ್ಳುವ ಸ್ಥಿತಿ ನಿರ್ಮಾಣವಾಗುತ್ತದೆ. ಇದು ಮಾಲಿನಿ ತೆಗೆದುಕೊಳ್ಳುವ ನಿರ್ಧಾರದಲ್ಲಿ ಸೂಕ್ತರೀತಿಯಲ್ಲಿ ಪ್ರಕಟಗೊಳ್ಳುತ್ತದೆ. ವೈವಾಹಿಕ ಚೌಕಟ್ಟನ್ನು ಮೀರಿ ಅದರಾಚೆಗೂ ಸಾಧನೆ ಮಾಡುವ ಅವಕಾಶಗಳು ನಿರ್ಮಾಣವಾದಾಗ ಇದು ಸಾಧ್ಯ. ಆದರೆ ಶಕ್ತವಾದ ಪರ್ಯಾಯವೇ ಸ್ತ್ರೀಯರ ಪಾಲಿಗೆ ಇಲ್ಲದಾಗ ಅಸಹನೀಯವಾದ ದಾಂಪತ್ಯವನ್ನು ಮೀರುವ ಬಗೆಗಳು ಹೆಚ್ಚು ಸಂಘರ್ಷಾತ್ಮಕವಾದದ್ದು. ಈ ದೃಷ್ಟಿಯಿಂದ ಆಳದ ಮಾದರಿಗಿಂತ ಹೆಚ್ಚು ಗಮನಾರ್ಹವಾಗುವುದು ಮುಕ್ತಿಚಿತ್ರದ ಜಾನಕಿ ಮತ್ತು ಚಿದಾನಂದನ ದಾಂಪತ್ಯ. ಗಂಡನ ದಬ್ಬಾಳಿಕೆ ಶೋಷಣೆಯನ್ನು ಮಾನಸಿಕವಾಗಿ, ದೈಹಿಕವಾಗಿ ಸಹಿಸಿಕೊಳ್ಳುವ ಜಾನಕಿಯು ತನ್ನ ಮಗಳು ಅಲಕಾಳು ನೀಡಿದ ಧೈರ್ಯದಿಂದ ಪರಿವರ್ತನೆಯಾಗುತ್ತಾಳೆ. ಚಿದಾನಂದನ ಸ್ವೇಚ್ಛ ಬದುಕನ್ನು ಪ್ರಶ್ನಿಸುತ್ತಾಳೆ. ಕೊನೆಗೆ ಚಿದಾನಂದನ ದಬ್ಬಾಳಿಕೆ ಹೆಚ್ಚುತ್ತಾ ಹೋದಂತೆ ಜಾನಕಿ ಸ್ತ್ರೀ ಮುಕ್ತಿ ಕೇಂದ್ರದ ಸಂಘಟನೆಯ ಮೂಲಕ ಗಂಡನಿಂದ ವಿಚ್ಛೇದನ ಪಡೆಯುತ್ತಾಳೆ. ದಾಂಪತ್ಯದಲ್ಲಿ ಪುರುಷರ ಶೋಷಣೆಗಳಿಂದ ಬಿಡುಗಡೆಯಾಗುವ ಅವಕಾಶಗಳು ಸ್ತ್ರೀಯರಿಗೆ ಸಮಾಜದಲ್ಲಿ ನಿರ್ಮಾಣಗೊಂಡರೆ ಮಾತ್ರ ಸ್ತ್ರೀಯರ ಬದುಕಿನ ಸ್ವರೂಪ ಸುಖಾಂತವಾಗಿರಬಹುದು. ಆದರೆ ಆಯ್ಕೆ ಅವಕಾಶಗಳೇ ಇಲ್ಲದೆ, ನಲುಗುವ ಸ್ತ್ರೀಯರೇ ಭಾರತೀಯ ವಿವಾಹ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ಶೇಕಡಾವಾರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. 'ಆಯ್ಕೆ'ಗಳನ್ನು 'ಮಾರ್ಗದರ್ಶಿಸುವ' ನೆಲೆಯಿಂದ ಕೂಡ ಅನುಪಮಾ ಅವರದ್ದು ಪ್ರಯೋಗಶೀಲ ಪಠ್ಯ ನಿರ್ವಚನಗಳಾಗಿವೆ. ಇವುಗಳು ವೈವಾಹಿಕ ಸ್ವರೂಪಕ್ಕೆ ಸಂಬಂಧಿಸಿದಂತೆ ಹಲವು ಸಾಧ್ಯತೆಗಳನ್ನು ಬಗೆಯುವ ಸಂಕಥನಗಳಾಗಿವೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಆವರಣ ಇದಕ್ಕೆ ಮೂಲ ಪ್ರೇರಣೆಗಳನ್ನು ಒದಗಿಸಿವೆ.

**ವೀಣಾ ಶಾಂತೇಶ್ವರ ಅವರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡ ದಾಂಪತ್ಯದ ಸ್ವರೂಪ :**

ವೈವಾಹಿಕ ಬದುಕಿನ ಹಲವು ಮಾದರಿಗಳು ಶೋಷಣೆ ಬಂಡಾಯ ಇತ್ಯಾದಿಯಲ್ಲಿ ಅನಾವರಣಗೊಂಡಿವೆ. ಈ ಕಥನದ ಒಳಗೆ ಕಮಲಾ, ರೋಶನ್ ಬಿ, ಲೀಲಾ, ಪೂರ್ಣಿಮಾ ಸಿಂಗ್, ಇವರ ವೈವಾಹಿಕ ಜೀವನ ಮಾದರಿಗಳು ಪರಸ್ಪರ ಅರ್ಥೈಸಿಕೊಳ್ಳಲಾಗದ, ಹಪಹಪಿಸುವ, ತೊಳಲಾಟದ ರೀತಿಯವು.

ಇವರೆಲ್ಲರ ಜೀವನ ಪರಿಸ್ಥಿತಿಗಳು ಬೇರೆ ಬೇರೆಯಾಗಿದ್ದರೂ ಗಂಡು- ಹೆಣ್ಣಿನ ಸಂಬಂಧದಲ್ಲಿ ಅನುಭವಿಸುವ ಶೋಷಣೆ ಏಕರೂಪದವು. ಶಿವಮೂರ್ತಿ ವಿವಾಹಿತ, ಮೂರು ಮಕ್ಕಳನ್ನು ಹೊಂದಿದವ ಎನ್ನುವುದು ಗೊತ್ತಿದ್ದರೂ ಕಮಲಾ ಅವನನ್ನು ಮದುವೆಯಾಗುತ್ತಾಳೆ. ಆರಾಧಿಸುತ್ತಾಳೆ.

> "ಶಿವಮೂರ್ತಿ ಇಲ್ಲದ ಜೀವನವನ್ನು ನಾನು ಕಲ್ಪಿಸಲೂ ಸಾಧ್ಯವಿಲ್ಲ. ಆತ ಬೇರೊಬ್ಬಳ ಗಂಡನೇ ಆಗಿರಲಿ, ಕೊಲೆಗಡುಕನೇ ಆಗಿದ್ದರೂ ಸಹ ಅವನು ನನಗೆ ಬೇಕು. ನಾನು ಬದುಕಿರಲು ಆತನ ಪ್ರೀತಿಬೇಕು. ನಾನು ನಿಜವಾಗಿ ಪ್ರೀತಿಸಿದ ಗಂಡಸು ಆತನೊಬ್ಬನೇ. ಏನಾದರೂ ಆಗಿ ಆತ ನನ್ನ ಕೈಬಿಟ್ಟರೆ ನಾನು ಸಾಯುವುದೇ ನಿಶ್ಚಿತ." (ವೀಣಾಶಾಂತೇಶ್ವರ : ೧೯೮೮ ;೭೪)

ಎನ್ನುವ ಕಮಲಾಳ ತೀವ್ರವಾದ ಅವಲಂಬನೆಯನ್ನು ಶಿವಮೂರ್ತಿಯಿಂದ ನಿರೀಕ್ಷಿಸುವುದು ಅಸಾಧ್ಯ. ಆತ ಈಗಾಗಲೇ ಒಂದು ಹೆಣ್ಣನ್ನು ಒಮ್ಮನಸಿನಿಂದ ಬಾಳಿಸಲಾರದವನು. 'ನನ್ನ ಜೀವನಕ್ಕೆ ಅರ್ಥ ಕೊಟ್ಟರೆ ನೀನು' (ವೀಣಾಶಾಂತೇಶ್ವರ : ೧೯೮೮ ; ೬೦) ಎಂದು ಮೊದಲು ನಂಬಿಸಿದ್ದ ಶಿವಮೂರ್ತಿಯಲ್ಲಿ ಆಶ್ಚರ್ಯಕರವಾದ ಬದಲಾವಣೆಗಳಾಗುತ್ತವೆ. ಕಮಲಾಳಲ್ಲಿಯ ಅವನ ಪ್ರೀತಿ ಹೋಗುವುದಿಲ್ಲವಾದರೂ ಅದರ ತೀವ್ರತೆ ಕಡಿಮೆ ಯಾಗುತ್ತದೆ. ಅವಳಿಗಾಗಿ ತಾನು ದೊಡ್ಡ ತ್ಯಾಗ ಮಾಡಿದ್ದೇನೆ ಎಂಬ ಭ್ರಮೆ ಆತನನ್ನು ಆವರಿಸುತ್ತದೆ. ಕಮಲಾಳನ್ನು ಪ್ರೀತಿಸುವ ಮೊದಲೇ ವಿವಾಹಿತನಾಗಿರುವ ಶಿವಮೂರ್ತಿ ಆತನ ದೌರ್ಬಲ್ಯಗಳನ್ನು ಮರೆತು ಕಮಲಾಳ ಜೊತೆಗೆ (ಅವಳ ಹಳೆಯ ಪ್ರೇಮ ಪ್ರಕರಣವನ್ನೆತ್ತಿ) ಜಗಳವಾಡುತ್ತಾನೆ. ಆತನ ಸಹೋದ್ಯೋಗಿ ಗಳೊಡನೆ ಅವಳು ಹೊಂದಿದ ಸಂಬಂಧಗಳ ಬಗ್ಗೆಯೂ ಅನುಮಾನ ತಾಳುತ್ತಾನೆ. ಪರಿಣಾಮವಾಗಿ ಒಂದೆರಡು ಸಲ ಅವಳ ಮೇಲೆ ಕೈ ಮಾಡುತ್ತಾನೆ. ಇದು ಕೇವಲ ಕಮಲಾಳ ಸ್ಥಿತಿಯನ್ನು ಮಾತ್ರ ನಿರೂಪಿಸದೆ ಪುರುಷನು ತನ್ನ ದೌರ್ಬಲ್ಯಗಳನ್ನು, ಸ್ತ್ರೀಯನ್ನು ಶೋಷಣೆಮಾಡುವ ಮೂಲಕ ಹೇಗೆ ಮೆಟ್ಟಿ ಹೊರಬರುತ್ತಾನೆ ಎಂಬುದನ್ನು ಕೂಡ ಪಠ್ಯದ ಒಳಗೆ ಧ್ವನಿಸುತ್ತದೆ. ಕಮಲೆಯೊಡನಿದ್ದ ಅವಳ ತಂಗಿಯ ಮಗಳು ನೀಲಾನ ಮೇಲೂ ಆತ ವ್ಯಾಮೋಹಿತನಾಗುವುದನ್ನು ಕೂಡ ಕಮಲ ಸಹಿಸಬೇಕಾಗುತ್ತದೆ. ಪರಿಸ್ಥಿತಿ ಅಸಹ್ಯವಾದಾಗ ಅವಳು ಆತ್ಮಹತ್ಯೆಯ ವಿಚಾರ ಮಾಡುವುದು, ಮುಂಬೈಯಿಂದ ದೂರದ ಮೈಸೂರಿಗೆ ಓಡಿ ಹೋಗುವುದು. ಶಿವಮೂರ್ತಿಯನ್ನು ಬಿಟ್ಟಿರಲಾರದೆ ಸೋಲನ್ನೊಪ್ಪಿಕೊಂಡು ಮತ್ತೆ ಮುಂಬೈಗೆ ಮರಳುವುದು ವ್ಯಕ್ತವಾಗುತ್ತದೆ . ಇಲ್ಲಿ ಸ್ತ್ರೀಯ ಅವಲಂಬನೆಯ ಮುಖ ಮಾತ್ರ ಮುಖ್ಯವಾಗದೆ ಸ್ತ್ರೀ ಪುರುಷನನ್ನು ಬದುಕಿನ ಅಂತಿಮ ಎಂದು ಪರಿಭಾವಿಸುವ 'ದೌರ್ಬಲ್ಯ'ಕೂಡ ಗಮನಾರ್ಹವಾಗಿದೆ. ಸ್ತ್ರೀಯರು ಗಾಢವಾಗಿ ಅನುಭವಿಸುವ ಸ್ತ್ರೀ- ಪುರುಷ ಸಂಬಂಧದ ತಾದ್ಯಾತ್ಮ್ಯತೆಯನ್ನು ಪುರುಷ ಮೀರುತ್ತಾನೆ. ಹೊರ ಪ್ರಪಂಚಕ್ಕೆ ಆತ ತೆರೆದುಕೊಳ್ಳುವ ಕ್ರಮದಿಂದ ಅದು ಆತನಿಗೆ ಸಾಧ್ಯವಾಗುತ್ತದೆ. ಆದರೆ ಸ್ತ್ರೀ ಎಷ್ಟೇ ಆಧುನಿಕ ಸಮಾಜದಲ್ಲಿ ಬದುಕು ನಡೆಸುತ್ತಿದ್ದರೂ ಪುರುಷ ಮೀರುವ ಮಾನಸಿಕ ಎಲ್ಲೆಗಳನ್ನು ಮೀರುವುದು ಅವಳಿಂದ ಸಾಧ್ಯವಾಗುವುದಿಲ್ಲ. ಇದನ್ನು ಇದೇ ಕಾದಂಬರಿಯಲ್ಲಿ ಕಮಲೆಯ ದಾಂಪತ್ಯಕ್ಕೆ ಸಮಾನಾಂತರವಾಗಿ ಬರುವ ರೋಶನ್‌ಬೀಯ ದಾಂಪತ್ಯಕೂಡ ಇದನ್ನು ಸ್ಪಷ್ಟಪಡಿಸುತ್ತದೆ. ಕಮಲಾಳ ಸೋಲಿಗೆ ದೈಹಿಕ ಹಾಗೂ ಮಾನಸಿಕ ಅಸ್ಥಿರತೆಯು ಕಾರಣಗಳಾಗಿದ್ದರೆ, ರೋಶನ್‌ಬೀಯ ಸೋಲಿಗೆ ಆರ್ಥಿಕ ಹಾಗೂ ಸಾಮಾಜಿಕ ಕಾರಣಗಳಿವೆ. ರೋಶನ್‌ಬೀಯ ಗಂಡ ಮೆಹಬೂಬ

ಇನ್ನೊಬ್ಬ ಹೆಂಗಸಿನೊಂದಿಗೆ ಸಂಬಂಧ ಬೆಳಸಿಕೊಂಡವನು. ಅಪರೂಪಕ್ಕೆ ಆತ ಮನೆಗೆ ಬರುವುದು ರೋಶನ್‌ಬೀಯ ಮಕ್ಕಳ ಸಂಖ್ಯೆ ಹೆಚ್ಚಿಸಲು ಹಾಗೂ ಅವಳ ಗಳಿಕೆಯನ್ನು ದೋಚಿ ಕೊಂಡೊಯ್ಯಲು. ಕಮಲಾಳಂತೆಯೇ ರೋಶನ್‌ಬೀ ಕೂಡ ಪರಿಸ್ಥಿತಿ ಅಸಹ್ಯವಾದಾಗ ಓಡಿಹೋಗುತ್ತಾಳೆ. ಆದರೆ ಗಂಡಿನಿಂದ ಒಂದು ಪೋಸ್ಟ್‌ಕಾರ್ಡ್ ಬಂದೊಡನೆಯೇ ಮತ್ತೆ ಮುಂಬಯಿಗೆ ಹಿಂದಿರುಗುತ್ತಾಳೆ. ಅವಳು ಮರಳುವುದರ ಕಾರಣ ಸಂಪೂರ್ಣವಾಗಿ ಆರ್ಥಿಕ ಹಾಗೂ ಸಾಮಾಜಿಕವಾದವುಗಳು. ಇದರ ಸ್ಪಷ್ಟ ಅರಿವು ರೋಶನ್‌ಬೀಯಲ್ಲಿದೆ. ತನ್ನ ಹಾಗೂ ತನ್ನ ಗಂಡನ ನಡುವೆ ಆದ ಒಪ್ಪಂದದಲ್ಲಿ ಆರ್ಥಿಕ ಶೋಷಣೆ ನಿಲ್ಲುವುದು ಆಕೆಯ ಸಮಾಧಾನಕ್ಕೆ ಮುಖ್ಯ ಕಾರಣವಾಗಿದೆ. ದಾಂಪತ್ಯದ ಒಳಗೆ ರೋಶನ್‌ಬೀ ಗಂಡನನ್ನು ಒಪ್ಪಿಕೊಳ್ಳುವುದಕ್ಕೆ ಅವಳ ದಾಂಪತ್ಯದ ಖಾಸಗೀ ಕಾರಣಗಳು ಮಾತ್ರವಲ್ಲದೆ ಸಾಮಾಜಿಕ ಕಾರಣಗಳು ಮುಖ್ಯವಾಗುತ್ತವೆ. ಇದನ್ನು ರೋಶನ್‌ಬೀಯ ಮಾತುಗಳೇ ಪಠ್ಯದೊಳಗೆ ಶಕ್ತವಾಗಿ ಧ್ವನಿಸುವ ಪ್ರಯತ್ನವನ್ನು ನಡೆಸುತ್ತವೆ.

> "ಇನ್ನು ಮ್ಯಾಲೆ ವಾರದಾಗ ಒಂದು ದಿನಾ ತಪ್ಪದ ಮನೀಗೆ ಬರ್ತೀನಿ ಅಂತ ಮತ್ತೆ ಹೆಂಡ್ತಿ ಗಳಿಸಿದ ರೊಕ್ಕಾ ಕೈಯಿಂದ ಮುಟ್ಟೂದಿಲ್ಲಾ ಅಂತ ತವರುಮನಿಯಿಂದ ನಾ ತಂದ ಯಾವ ಸಾಮಾನೂ ಒತ್ತಿ ಇಡ್ಲಿಕ್ಕೆ ಒಯ್ಯೂದಿಲ್ಲಾ ಅಂತ." (ವೀಣಾ ಶಾಂತೇಶ್ವರ :೧೯೮೮;೭೭)

ಇದಲ್ಲದೆ ಸಾಮಾಜಿಕ ಒತ್ತಡ :

> "ನಾವು ಗಂಡನ್ನ ಬಿಟ್ಟು ಹೋದ್ರ ಮಂದಿ ಛೀ ಅಂತಾರು. ನನ್ನ ಆರು ಮಂದಿ ಹೆಣ್ಣು ಮಕ್ಕಳ ಮದಿವೀ ಯಾರು ಮಾಡವ್ರು? ಗಂಡಸು ಏನ್ಮಾಡಿದರೂ ನಡೀತೈತಿ ಬಾಯಿ, ಹೆಂಗಸು ಎಚ್ಚರದಿಂದ ಹೆಜ್ಜೆ ಹಾಕ್ಬೇಕು ನೋಡ್ರಿ" (ವೀಣಾ ಶಾಂತೇಶ್ವರ : ೧೯೮೮; ೭೮)

ಸಮಾಜದ ಎರಡು ವಿರುದ್ಧ ಪಾತಳಿಗಳ ಮೇಲೆ ನಡೆಯುವ ಶೋಷಣೆಗೆ ಕಾರಣಗಳಲ್ಲಿ ಅಂತರವಿದ್ದರೂ ಸೋಲಿನ ಅನುಭವದ ಸಾರ್ವತ್ರಿಕತೆಗೆ ಅವು ನಿದರ್ಶನಗಳಾಗಿವೆ. ಈ ಸೋಲಿಗೆ ಸ್ತ್ರೀಯರ ದುರ್ಬಲತೆಯನ್ನು ಪುರುಷರ 'ಉಪಯುಕ್ತತೆಯ ತರ್ಕ' ಹೇಗೆ ಬಳಸಿಕೊಳ್ಳುತ್ತದೆ ಎಂಬುದು ಮುಖ್ಯವಾಗುತ್ತದೆ. ಪುರುಷ ನಿಶಕ್ತ ನೆಲೆಯನ್ನು ತಲುಪಿದಾಗ ಸ್ತ್ರೀಗೆ ಸ್ವಾತಂತ್ರ್ಯದ ಬದುಕು ಸಾಧ್ಯವೇ ಎಂದು ಪರಿಶೀಲಿಸಿದಾಗ ಇಲ್ಲಿ ಮಾಲಿನಿಬಾಯಿ ಪಟೇಲ್‌ಳ ದಾಂಪತ್ಯ ಕೂಡ ಅರ್ಥಕಳೆದುಕೊಳ್ಳುತ್ತದೆ.

> "ಎಲ್ಲಾ ನನ್ನ ದೈವವೆಂದು ಕ್ಷೀಣವಾಗಿ ಹೇಳಿ ಅರೆಗಣ್ಣು ಮುಚ್ಚಿ ಮಲಗಿದ್ದ ಪೂರ್ಣಿಮಾಸಿಂಗ್, ಗಂಡನ ಪೋಸ್ಟ್ ಕಾರ್ಡ್ ಬಂತೆಂದು ಎಲ್ಲ ಮರೆತು ತಿರುಗಿ ಬಂದ ರೋಶನ್ ಬೀ, ಪ್ರಮೋಷನ್ ಪಡೆದು ಲಗ್ನವಾಗಲಿರುವ ಖುಷಿಯಲ್ಲಿ ಬರಲಿರುವ ವಿಪತ್ತಿನ ಅರಿವಿಲ್ಲದ ಲೀಲಾ ಕುಲಕರ್ಣಿ, ಜೊತೆಗೆ ಶೋಷಣೆಯ ವಿರುದ್ಧ ಬಂಡಾಯ ಮಾಡಬೇಕೆಂದು ಲೆಕ್ಚರ್ ಕೊಡುತ್ತ ತಿರುಗುವ ಮಾಲಿನಿಬಾಯಿ ಪಟೇಲ್ ಹಾಗೂ ಹಾಸಿಗೆ ಹಿಡಿದ ಆಕೆಯ ಗಂಡ. ಹಾಗೂ ಇವರೆಲ್ಲರ ಆಚೆ ಧೈರ್ಯವಾಗಿ ಎಲ್ಲ ಧಿಕ್ಕರಿಸಿ ಹೋಗಿದ್ದ - ಬದುಕನ್ನೇ ಅಪ್ಪಿಕೊಳ್ಳಲು ಸ್ವಇಚ್ಛೆಯಿಂದ ವಾಪಾಸು ಬಂದಿದ್ದ ಕಮಲಾ..."(ವೀಣಾ ಶಾಂತೇಶ್ವರ:೧೯೮೬;೧೦೯- ೧೧೦)

ಈ ಎಲ್ಲ ಸ್ತ್ರೀಯರ ಒಟ್ಟು ಆಯ್ಕೆಗಳನ್ನು ಅವಲೋಕಿಸಿದಾಗ, ಇವುಗಳೆಲ್ಲವೂ ಒಂದಲ್ಲ ಒಂದು ವಿಧದಲ್ಲಿ 'ತಗಲು' ಹಾಕಿ ಕೊಂಡಿರುವುದು ಸಿದ್ಧ ಗುರುತಿಸುವಿಕೆಯಲ್ಲಿ; ಆಧುನಿಕ ಸ್ತ್ರೀಯರ ಬಗೆಗಿನ ಈ 'Idintity' ಈಗಾಗಲೇ ಪುರುಷ ರೂಪಿಸಿ ಸಂರಚಿಸಿರುವ ಮಾದರಿ. ಒಂದಲ್ಲ ಒಂದು ಮಿತಿಯನ್ನು ಅಸಹಾಯಕತೆಯನ್ನು ಸೂಚಿಸುವ ಎಲ್ಲರ ಆಯ್ಕೆಗೆ ಪರ್ಯಾಯವಾಗಿ 'ಹೊಸ ಸಂರಚನೆ'ಯನ್ನು 'ಕಟ್ಟುವ' ಪ್ರಯತ್ನವಾಗಿ ಅಪ್ಪೆ ದಂಪತಿಗಳ ದಾಂಪತ್ಯ ಚಿತ್ರಣವಿದೆ. ಅಪ್ಪೆ ವಕೀಲ ದಂಪತಿಗಳಲ್ಲಿ ಯಾವುದೇ ರೀತಿಯ ದೈಹಿಕ ಮಾನಸಿಕ ದೌರ್ಬಲ್ಯಗಳಿಲ್ಲ. ಸ್ತ್ರೀಯು ಬಯಸುವ ಸ್ವಾತಂತ್ರ್ಯ ಅವಕಾಶಗಳು ಪುರುಷನ ದೌರ್ಬಲ್ಯದಿಂದ ಅಸಹಾಯಕತೆಯಿಂದ ಬರುವುದಾದರೆ ಅದು ಅರ್ಥಹೀನ ಮತ್ತು ಪ್ರಾಸಂಗಿಕವೆಂದೆನಿಸಿಕೊಳ್ಳುತ್ತದೆ. ಅಪ್ಪೆ ದಂಪತಿಗಳು ಸ್ತ್ರೀ ಆಧುನಿಕ ವಿದ್ಯಾಭ್ಯಾಸದ ಹಿನ್ನೆಲೆಯಲ್ಲಿ ವಿಸ್ತರಿಸಿಕೊಳ್ಳುವ ಸಾಮಾಜಿಕ ಪಾತ್ರಗಳನ್ನು ಮಾನ್ಯಮಾಡುವವರು. ಅಪ್ಪೆಯ ಪಾತ್ರ ಈ ಅರ್ಥದಲ್ಲಿ ಸಾಂಪ್ರದಾಯಿಕ ಪತಿಯನ್ನು ನವೀಕರಣ (Renewal)ಗೊಳಿಸಿದಂಥದ್ದು, ದುಡಿಯುವ ಪತ್ನಿಯನ್ನು ಆಕೆಯ ಪರಿಸ್ಥಿತಿಯನ್ನು ಮಾನವೀಯವಾಗಿ ಅರಿತು ಅದಕ್ಕೆ ಸಕಾರಾತ್ಮಕವಾಗಿ ಪ್ರತಿಕ್ರಿಯಿಸುವ ಅಪ್ಪೆಯ ವ್ಯಕ್ತಿತ್ವ ರೂಢಿಗತ ಪುರುಷ ಪ್ರತಿಮೆಯನ್ನು ಸಡಿಲ (Relay)ಗೊಳಿಸುವಂಥದ್ದು 'ಉಪಶಮನ' (relief)ಗೊಳಿಸುವಂಥದ್ದು. ಆಧುನಿಕ ಸಮಾಜದಲ್ಲಿ ಪುರುಷನು ದಾಂಪತ್ಯದ ಮೂಲದಲ್ಲಿ ನಿರ್ದಿಷ್ಟವಾಗಿ 'ಬದಲಾವಣೆ'ಗೊಳ್ಳಬಹುದಾದ ಅವಕಾಶದ ಸಾಧ್ಯತೆಯಲ್ಲಿ ಅಪ್ಪೆಯ ವ್ಯಕ್ತಿತ್ವ ಗಮನಸೆಳೆಯುತ್ತದೆ.

ಕೂಡು ಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡ ದಾಂಪತ್ಯದ ಸ್ವರೂಪವನ್ನು ಕೆಳಗಿನಂತೆ ಸೂತ್ರೀಕರಿಸಬಹುದು.

೧) ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಬಂಡವಾಳಶಾಹಿ ಸಮಾಜದಲ್ಲಿ ದಂಪತಿಗಳು ಎದುರಿಸುವ ಸಮಸ್ಯೆಗಳನ್ನು ವೈಯಕ್ತಿಕ, ಕೌಟುಂಬಿಕ, ಆರ್ಥಿಕ ಮಟ್ಟಗಳಲ್ಲಿ ಬಿಂಬಿಸುವ ಪ್ರಯತ್ನ ವ್ಯಕ್ತವಾಗುತ್ತದೆ.

೨) ಇದರಲ್ಲಿ ಹೆಚ್ಚು ಸಂಘರ್ಷಕ್ಕೆ ಒಳಗಾಗುವವಳು ಸ್ತ್ರೀಯಾಗಿರುತ್ತಾಳೆ. ಅಲ್ಲದೆ, ದಾಂಪತ್ಯದೊಳಗಿನ ವಿರೋಧ ಪ್ರಕ್ರಿಯೆಯನ್ನು ಸ್ತ್ರೀ 'ಖಾಸಗಿ' ನೆಲೆಯಲ್ಲಿ ಅನುಭವಿಸುವವಳಾಗುತ್ತಾಳೆ.

೩) ದಾಂಪತ್ಯ ಜೀವನದ ಪರಸ್ಪರ ಒಪ್ಪಿತ ಜೀವನಕ್ರಮವನ್ನು ಇಲ್ಲಿನ ಕಾದಂಬರಿಗಳು 'ಆದರ್ಶ'ದ ನೆಲೆಯಲ್ಲಿ ನಿರೂಪಿಸುತ್ತವೆ. ಅದೇ ವೇಳೆಗೆ, ಗಂಡು-ಹೆಣ್ಣು ಪೂರಕವಾಗಿ ಬದುಕುವ ಸನ್ನಿವೇಶಗಳನ್ನು 'ಒತ್ತಾಯ ಪೂರ್ವಕ' ಮಾರ್ಪಾಡಾಗಿ ಚಿತ್ರಿಸುತ್ತವೆ.

೪) ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಮೂಲದಲ್ಲಿ ಗಂಡು- ಹೆಣ್ಣು ಪರಸ್ಪರ ಹೊಂದಿಕೊಂಡ ಆರ್ಥಿಕ, ರಾಜಕೀಯ, ಕೌಟುಂಬಿಕ ಸನ್ನಿವೇಶಕ್ಕೆ ಪರಸ್ಪರ ಗೌರವದಿಂದ ಕಾಣಲು ಸಾಧ್ಯವಾಗುವ ದಾಂಪತ್ಯವನ್ನು ಪ್ರಮುಖ 'ಮಾರ್ಗ'ವೆಂಬಂತೆ ಪರಿಭಾವಿಸುತ್ತದೆ.

೫) ಹೀಗಿದ್ದರೂ ರೂಢಿಗತ ಆಚರಣೆಯಲ್ಲಿ ಸಂಪ್ರದಾಯಬದ್ಧ ಕುಟುಂಬದೊಳಗೆ ಸ್ತ್ರೀ ಪುರುಷನಿಗೆ ಎಲ್ಲಾ ರೀತಿಯಿಂದಲೂ ಅಧೀನ ಎಂಬುದನ್ನು ಅನಾವರಣಗೊಳಿಸುತ್ತವೆ.

೬) ಪತಿಪತ್ನಿಯರಲ್ಲಿ ಒಂದೇ ಅಭಿರುಚಿ, ಹವ್ಯಾಸಗಳು, ಒಂದೇ ರೀತಿಯ ಜೀವನದೃಷ್ಟಿ ಮತ್ತು ಮೌಲ್ಯಗಳಿದ್ದರೆ ಹೊಂದಾಣಿಕೆ ಯಶಸ್ವಿಯಾಗುತ್ತವೆ ಎಂಬುದನ್ನು ಕೂಡುಕಟ್ಟಿನ ಕಾದಂಬರಿಗಳು ಯಶಸ್ವಿಯಾಗಿ ನಿರೂಪಿಸುತ್ತವೆ.

೭) ಪತಿಪತ್ನಿಯರಿಬ್ಬರೂ ಒಂದೇ ಆರ್ಥಿಕ ವರ್ಗದವರಾಗಿದ್ದರೆ ಸಮರ್ಪಕ ದಾಂಪತ್ಯ ಸಮಯೋಜನೆ ಸಾಧ್ಯ ಎಂಬುದನ್ನು ಕಾದಂಬರಿ ಪಠ್ಯಗಳು ವಸ್ತುವಿನ ಅಂತರ್‌ರಚನೆಯಲ್ಲಿ ದೃಢಪಡಿಸುತ್ತವೆ.

**೪.೩.೩ ಕೂಡುಕಟ್ಟಿನ ಕಾದಂಬರಿಗಳು: ಕುಟುಂಬದ ಸ್ವರೂಪ.**

**ಅನುಪಮಾ ಅವರ ಕಾದಂಬರಿಗಳಲ್ಲಿ ಚಿತ್ರಿತಗೊಂಡಿರುವ ಕೌಟುಂಬಿಕ ಸ್ವರೂಪ:**

ಕೂಡು ಕುಟುಂಬದ ರಚನಾ ಮಾದರಿಗಳು ಅನುಪಮಾ ಅವರ ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತವೆ. **ಹಿಮದ ಹೂ, ಋಣ, ಚಿತ್ತಮೋಹನ, ನಟಿ, ಎಳೆ** ಈ ಎಲ್ಲ ಕಾದಂಬರಿಗಳಲ್ಲಿ ಮೂರು ತಲೆಮಾರಿನ ವ್ಯಕ್ತಿಗಳು ಒಂದೆಡೆ ಬದುಕುವ, ಜೀವನದ ಆಯ್ಕೆಗಳಲ್ಲಿ, ಅಭಿರುಚಿಗಳಲ್ಲಿ, ಒಬ್ಬರನ್ನು ಒಬ್ಬರು ಪ್ರಭಾವಿಸುವ ಅಂಶ ಸಹಜವಾಗಿ ಅಭಿವ್ಯಕ್ತಿಗೊಂಡಿದೆ. ಇಲ್ಲಿ ಪ್ರತಿ ಕುಟುಂಬಗಳ ಸಮಸ್ಯೆ ಮತ್ತು ಅದರ ಪರಿಹಾರ ಮಾರ್ಗಗಳು ಭಿನ್ನ- ಭಿನ್ನವಾಗಿವೆ. ಬಡತನ, ಶಿಕ್ಷಣ, ಮಕ್ಕಳ ವಿವಾಹ, ವಿಧವಾ ವಿವಾಹ, ದಾಂಪತ್ಯದ ಸಮಸ್ಯೆಗಳು ಈ ಮೊದಲಾದ ಸಮಸ್ಯೆಗಳನ್ನು ಒಂದು ಕುಟುಂಬ ನಿರ್ವಹಿಸುವ ರೀತಿಗೂ ಮತ್ತೊಂದು ಕುಟುಂಬ ಅಂತಹ ಸಮಸ್ಯೆಗಳಿಗೆ ಮುಖಾ ಮುಖಿಗೊಳ್ಳುವ ರೀತಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಇವು ಸ್ವಾಭಾವಿಕ ಕೂಡ. ಪ್ರತಿ ಕಾದಂಬರಿ ಈ ಅರ್ಥದಲ್ಲಿ ಬದುಕಿನ ಭಾಷ್ಯಗಳಾಗಿಯೋ, ವ್ಯಾಖ್ಯಾನಗಳಾಗಿಯೋ ಪಡಿಮೂಡುವುದು ವೈವಿಧ್ಯದ ಅರ್ಥದಿಂದಲೇ ಆಗಿದೆ. ಇದರಿಂದ ಅನುಪಮಾ ಅವರ ಬರಹ ಹೆಚ್ಚು ಪ್ರಯೋಗಶೀಲವಾದದ್ದು ಎನಿಸಿಕೊಳ್ಳುತ್ತದೆ.

'ಬಡತನ' ಎನ್ನುವುದು ಎಲ್ಲ ಕಾಲಕ್ಕೂ ಹೆಚ್ಚಿನ ಕುಟುಂಬಗಳನ್ನು ಕಾಡುವ ಸಮಸ್ಯೆ. **ಋಣ, ಚಿತ್ತಮೋಹನ, ಕಣಿವೆಗೆ ಬಂತು ಬೇಸಿಗೆ, ಎಳೆ, ನಟಿ, ಕೊಳಚೆ ಕೊಂಪೆಯ ದಾನಿಗಳು** ಈ ಎಲ್ಲ ಕಾದಂಬರಿಗಳಲ್ಲಿ ಅದರ ಪರಿಹಾರದ ಹೋರಾಟಗಳು ಹಲವು. ಬಡತನದ ಕಾರಣಕ್ಕಾಗಿ ಒಲ್ಲದ ಮನಸ್ಸಿನಿಂದ ವಿವಾಹಕ್ಕೆ ಒಪ್ಪಿಕೊಳ್ಳುವ, ಬಡತನದ ಕಾರಣದಿಂದ ಹೆಣ್ಣು ಮಕ್ಕಳನ್ನು ಅನಿವಾರ್ಯವಾಗಿ ಯಾವುದೇ ರೀತಿಯಲ್ಲೂ ಹೊಂದಾಣಿಕೆ ಸಾಧ್ಯವಾಗದ ಯುವಕರಿಗೆ ಮದುವೆ ಮಾಡಿ ಕೊಡುವ ತಂದೆ ತಾಯಿಗಳು **ಚಿತ್ತಮೋಹನ, ಎಳೆ**ಯಂತಹ ಕಾದಂಬರಿಗಳಲ್ಲಿ ಕಾಣಿಸಿಕೊಂಡರೆ, ಮಗಳ, ಸೊಸೆಯಂದಿರ ದುಡಿಮೆಯನ್ನು ಆಶ್ರಯಿಸಿ ಬದುಕುವ ಹಿರಿಯರು, ಅವರ ದೈಹಿಕ ಅಸಹಾಯಕತನ, ಮಾನಸಿಕವಾಗಿ ಕಾಣಿಸಿಕೊಳ್ಳುವ ಪರಾವಲಂಬಿತನ, ಇವನ್ನು **ನಟಿ, ಕೊಳಚೆ ಕೊಂಪೆಯ ದಾನಿಗಳು, ಕಣಿವೆಗೆ ಬಂತು ಬೇಸಿಗೆ, ಘೋಷ** ಈ ಕೃತಿಗಳು ತೆರೆದಿಡುತ್ತವೆ. ದುಡಿಯುವ ಗಂಡಸರ ಕೌಟುಂಬಿಕ ಪ್ರಾಮಾಣಿಕತೆ, ಅಪ್ರಾಮಾಣಿಕತೆ, ಕುಡಿತದಂತಹ ಚಟಗಳನ್ನು ಕೂಡ **ಕೊಳಚೆ ಕೊಂಪೆಯ ದಾನಿಗಳು, ಸೇವೆ** ಕೃತಿಗಳಲ್ಲಿನ ಅಂಥೋಣಿ, ಸಿಂಗೇಗೌಡ, ಸಂಜೀವ, **ಘೋಷ**ದ ಜಯತಿಲಕರಂತಹ ಪಾತ್ರಗಳು ಬೆಳಕು ಚೆಲ್ಲುತ್ತವೆ.

ಕುಟುಂಬದಲ್ಲಿ ಉನ್ನತ ಶಿಕ್ಷಣದ ಸಾಧ್ಯತೆ ಸವಾಲುಗಳಿಗೆ ಸ್ತ್ರೀ- ಪುರುಷರು ತೊಡಗಿಕೊಳ್ಳುವ ಹಲವು ಮಾದರಿಗಳನ್ನು **ಘೋಷ, ಮುಕ್ತಿಚಿತ್ರ, ಆಳ**ದಂತಹ ಕೃತಿಗಳು ಪರಿಣಾಮಕಾರಿಯಾಗಿ ನಿರೂಪಿಸುತ್ತವೆ. ಸಮಾನತೆ, ಸ್ವಾತಂತ್ರ್ಯದಂತಹ ಮಾನವೀಯ ಅವಕಾಶಗಳನ್ನು ಸ್ತ್ರೀ- ಪುರುಷರ ನೆಲೆಯಲ್ಲಿ ಹೇಗೆ ಪ್ರತ್ಯ-ಪ್ರತ್ಯೇಕವಾಗಿ ಕುಟುಂಬವು ನಿರ್ಮಾಣಮಾಡುತ್ತದೆ ಎನ್ನುವುದನ್ನು **ಮುಕ್ತಿಚಿತ್ರ** ಕೃತಿಯಲ್ಲಿ ಅಲಕಾ- ಶ್ಯಾಮಲ ಇವರ ಶೈಕ್ಷಣಿಕ ಅವಕಾಶಗಳಲ್ಲಿ, **ಆಳ** ಕೃತಿಯ ಮಾಲಿನಿಯ ಶಿಕ್ಷಣ ಅವಕಾಶಗಳ ನಿರ್ಮಾಣಗಳಲ್ಲಿ ಸ್ಪಷ್ಟವಾಗಿ ಅಭಿವ್ಯಕ್ತವಾಗುತ್ತದೆ. ಸಮಾಜದಲ್ಲಿ 'ಸಾಧನೆ' ಎಂಬುದು ಪುರುಷರ ಏಕಮಾತ್ರ ಆಸ್ತಿಯಂತೆ ಹಲವು ಸಾಂಪ್ರದಾಯಿಕ ಕುಟುಂಬಗಳು ಪರಿಭಾವಿಸುತ್ತವೆ. ಮತ್ತು ಪುರುಷರ ಸಂದರ್ಭದಲ್ಲಿ ಸಕಾರಾತ್ಮಕವಾಗಿ ಇದನ್ನು ಪ್ರಚೋದಿಸುವ ಕುಟುಂಬಗಳು ಸ್ತ್ರೀಯ ಸಂದರ್ಭದಲ್ಲಿ ಅದಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುತ್ತವೆ. ಇಲ್ಲಿ ಸ್ತ್ರೀಯರು ಎದುರಿಸುವುದು 'ಕುಟುಂಬ' ಇಲ್ಲವೇ ಅವರ ವೈಯಕ್ತಿಕ ಹಿತಾಸಕ್ತಿಯಾದ ಸಾಧನೆ. ಈ ಎರಡರಲ್ಲಿ ಒಂದನ್ನು ಮಾತ್ರ ಸ್ತ್ರೀಯರು ಆಯ್ಕೆ ಮಾಡಿಕೊಳ್ಳುವ ಇಕ್ಕಟ್ಟಿನ ಸನ್ನಿವೇಶವನ್ನು **ಮುಕ್ತಿಚಿತ್ರ, ಆಳ**ದ ನಾಯಕಿಯರ ಪಾತ್ರಗಳು ಎದುರಿಸುತ್ತವೆ. ಇಲ್ಲಿ ಹೆಣ್ಣು ಕುಟುಂಬದಿಂದ ವಿಘಟಿತಳಾಗುವ ಪರಿಣಾಮಗಳು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ವೈರುದ್ಧ್ಯಗಳೆನಿಸುತ್ತವೆ. ಇದನ್ನು ಮೀರಬೇಕಾದ ಪ್ರಶ್ನೆ ಎದುರಾದಾಗ ಸ್ತ್ರೀಯರು ಹೆಚ್ಚು ಹೆಚ್ಚು 'ಗೃಹಾಭಿಮುಖಿ' ಗಳಾಗಬೇಕಾಗುತ್ತದೆ. ಗೃಹಿಣಿತ್ವದ ಜವಾಬ್ದಾರಿಗಳಿಗೆ, ಮಕ್ಕಳ ಬೆಳವಣಿಗೆಗೆ, ವೃದ್ಧರ ಜೀವನಾಶ್ರಯಕ್ಕೆ ಸ್ತ್ರೀಯರ ಬದುಕಿನ ಚಲನೆಯನ್ನು ಹಿಮ್ಮುಖವಾಗಿಸಿಕೊಳ್ಳಬೇಕಾಗುತ್ತದೆ. **ಹಿಮದ ಹೂ** ಕೃತಿಯಲ್ಲಿ ಲಲಿತೆ ಮತ್ತು ಶೇಖರ ಎದುರುಗೊಳ್ಳುವ ಕೌಟುಂಬಿಕ ಹೊಣೆಗಾರಿಕೆಗಳು ಒಂದೇ ಆಗಿದ್ದರೂ ಅದರಲ್ಲಿ ತೊಡಗಿಸಿಕೊಳ್ಳುವ ಸಾಧ್ಯತೆಗಳಲ್ಲಿ ಸ್ತ್ರೀಗೆ ಇರುವ ಗುರುತರವಾದ ಪಾಲು ಪುರುಷನಿಗೆ ಇಲ್ಲ. ಕುಟುಂಬವನ್ನು 'ಕಟ್ಟುವ' ಮತ್ತು ಅದನ್ನು 'ಒಡೆಯುವ' ಪ್ರಕ್ರಿಯೆಗಳಲ್ಲಿ ಇಬ್ಬರೂ ಸಮಾನರು. ಆದರೆ ಸಮಾಜ ಇದನ್ನು ಸಂಪೂರ್ಣವಾಗಿ ಸ್ತ್ರೀಯರಿಗೆ ಹೊರಿಸುತ್ತದೆ. ಅಲ್ಲದೆ, ಕುಟುಂಬದ ಸ್ವಾಸ್ಥ್ಯಕ್ಕೆ ಸ್ತ್ರೀ ಏಕಮಾತ್ರ ಕಾರಣ ಎಂಬುದನ್ನು ಅನುಪಮಾ ಅವರ ಕಾದಂಬರಿಗಳು ಒಂದರ್ಥದಲ್ಲಿ ಒತ್ತಾಯದಿಂದ ನಿರೂಪಿಸುವ ಪ್ರಯತ್ನವನ್ನು ಮಾಡುತ್ತವೆ. ಕುಟುಂಬ ನಿರ್ವಹಣೆಯಲ್ಲಿ ಸ್ತ್ರೀ- ಪುರುಷರು ಯಾವ ಗುರುತರ ಕಾರಣಕ್ಕಾಗಿ ಬೇರೆಯಾದರೂ ಅದರ ಅಪಯಶಸ್ಸಿನ ಫಲಾನುಭವಿ ಸ್ತ್ರೀ ಒಬ್ಬಳೇ ಆಗಿರುತ್ತಾಳೆ. **ಮುಕ್ತಿಚಿತ್ರ**ದ ಜಾನಕಿ, ಚಿದಾನಂದ ಇವರ ಕುಟುಂಬ ವಿಘಟಿತಗೊಳ್ಳಲು ಚಿದಾನಂದ ಮೂಲ ಕಾರಣವಾಗಿದ್ದರೂ, ಸಮಾಜದ ಅಪವಾದ ಜಾನಕಿಯ ಬೆನ್ನಿಗೆ ಅಂಟಿಕೊಳ್ಳುತ್ತದೆ. ಕುಟುಂಬದ ಗುರುತರವಾದ ಹೊಣೆಗಾರಿಕೆ ಎಂದರೆ ಮಕ್ಕಳ ಪರಿಪೂರ್ಣ ಪೋಷಣೆಯ ಜವಾಬ್ದಾರಿ. ಇದನ್ನು ಸ್ತ್ರೀಯರು ಮಾತ್ರ ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಕುಟುಂಬದ ಸದಸ್ಯರು ಕೂಡ ಇದನ್ನು ಸ್ತ್ರೀಯರಿಗೆ ತಗಲು ಹಾಕಿ ನೋಡುತ್ತಾರೆ. ಇಲ್ಲೆಲ್ಲಾ ಹೆಣ್ಣು ಹೆಚ್ಚು 'ಗೃಹಾಂತರ್ಗತ'ವಾದರೆ ಪುರುಷ ಹೊರ ಪ್ರಪಂಚಕ್ಕೆ ತೆರೆದುಕೊಂಡು ಬದುಕಿನಲ್ಲಿ 'ಪಕ್ವತೆ' ಸಾಧಿಸಿ ಕೊಳ್ಳುತ್ತಾನೆ. ಕುಟುಂಬದ ಜವಾಬ್ದಾರಿಗಳ ಕಾರಣದಿಂದ ಹೊರಗಿನ ಪ್ರಪಂಚದ ಯಾವ ವಿದ್ಯಮಾನಗಳು ಸ್ತ್ರೀಯರನ್ನು ಗಂಭೀರವಾಗಿ ತಟ್ಟುವುದಿಲ್ಲ. ಇದರಿಂದಾಗಿ ಸ್ತ್ರೀಯರ ಸಾಮಾಜಿಕ ಪ್ರತಿಕ್ರಿಯೆಯು ಗೌಣವಾಗಿ ಕಾಣಿಸಿಕೊಳ್ಳುತ್ತದೆ. ಅನುಪಮಾ ಅವರ ಹೆಚ್ಚಿನ ಕಾದಂಬರಿಗಳು ಈ ಸಂಕೀರ್ಣತೆಯನ್ನು ಧ್ವನಿಸುತ್ತವೆ.

ವಿಧವಾ ಸಮಸ್ಯೆಯನ್ನು ತಂದೆ ತಾಯಿ ಎದುರಿಸುವ ರೀತಿಗೂ, ಅತ್ತೆ ಮಾವ ನೋಡುವ ರೀತಿಗೂ ಭಿನ್ನತೆ ಇದೆ. ಉದಾರವಾದಿ ಸಾಂಸ್ಕೃತಿಕ ನೆಲೆಯ ಕೃತಿಗಳಲ್ಲಿ ಹೆತ್ತವರು ಮಗಳ ವೈಧವ್ಯದಿಂದ ಅನುಭವಿಸುವ ಹಲಬಗೆಯ ಕಷ್ಟಗಳನ್ನು ನಿರೂಪಿತವಾದರೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕೃತಿಗಳಲ್ಲಿ ವ್ಯಕ್ತಿಯೋರ್ವನ ಸಾವು ಆತನ ಹೆತ್ತವರಿಗೆ ಮತ್ತು ಸೊಸೆ ಅನುಭವಿಸುವ ವಾಸ್ತವತೆಯ ಅನುಭವವು ಪ್ರಕಟಗೊಳ್ಳುತ್ತದೆ. ಇವುಗಳ ವಿಭಿನ್ನ ಆಯಾಮಗಳ ನಿರ್ವಚನವಿದೆ. **ಚಿತ್ತ ಮೋಹನ** ಮತ್ತು **ಎಳೆ** ಈ ಎರಡು ಕೃತಿಗಳಲ್ಲಿ ಮಕ್ಕಳಿರುವ ವಿಧವೆಯರ ಬದುಕಿನ ಕೌಟುಂಬಿಕ ತಲ್ಲಣ, ಸ್ಥಿತಿಗತಿ, ಮತ್ತು ಮರುಮದುವೆಯ ಸಂಘರ್ಷದ ಶಕ್ತ ನಿರೂಪಣೆ ಇದೆ. ಹೆತ್ತವರು ವಿಧುರ ಮಗಂದಿರ ಮತ್ತು ಸೊಸೆಯರ ವಿವಾಹದ ಸಂದರ್ಭಗಳಲ್ಲಿ ಪ್ರತಿಕ್ರಿಯಿಸುವ ರೀತಿ ಇಡೀ ಸ್ಥಿತ್ಯಂತರ ಸಮಾಜದ ದ್ವಂದ್ವ ಮನಸ್ಥಿತಿಗಳ ತೊಳಲಾಟದಂತೆ ಪಠ್ಯಗಳಲ್ಲಿ ಅಭಿವ್ಯಕ್ತಗೊಂಡಿದೆ. ಸಂಪ್ರದಾಯದ ರೂಢಿಗತ ಆಚರಣೆಯ ಪ್ರಶ್ನೆ, ಇದಕ್ಕೆ ಜನಸಾಮಾನ್ಯರು ಪ್ರತಿಕ್ರಿಯಿಸುವ ರೀತಿ ಇವನ್ನು ಕುಟುಂಬ ಹೆಚ್ಚು ಸಾಂಸ್ಕೃತಿಕವಾಗಿ- ಧಾರ್ಮಿಕವಾಗಿ 'ಸ್ವಕೇಂದ್ರಿತ' ನೆಲೆಯಲ್ಲಿ ಪರಿಭಾವಿಸ ಬೇಕಾಗುತ್ತದೆ. ಸ್ತ್ರೀಯರು ಪೂರ್ವದ ವಿವಾಹದಿಂದ ಪಡೆದುಕೊಂಡ ಮಕ್ಕಳನ್ನು ಹೊಂದಿದ್ದರೆ ಇದು ಹೆಚ್ಚು ಪ್ರಖರವಾಗಿ ಹೋರಾಟದ ಆವರಣವನ್ನೇ ಪಡೆದುಕೊಳ್ಳುತ್ತದೆ. ಈ ಎಲ್ಲ ಕೌಟುಂಬಿಕ ವಿಪ್ಲವತೆಯ, ಸವಕಳಿತನದ ನಿರ್ವಚನವನ್ನು ಅನುಪಮಾ ಅವರ ಕೃತಿಗಳು ಶಕ್ತವಾಗಿ ಬಿಂಬಿಸುತ್ತವೆ. ಪರಿಹಾರದ ಆಯಾಮಗಳನ್ನು ದರ್ಶಿಸುತ್ತವೆ.

**ವೀಣಾ ಶಾಂತೇಶ್ವರ ಅವರ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ಕೌಟುಂಬಿಕ ಸ್ವರೂಪ:**

ಅನುಪಮ ನಿರಂಜನ ಅವರ ಹೆಚ್ಚಿನ ಕಾದಂಬರಿಗಳು ಕೂಡುಕುಟುಂಬದ ಸಂಕೀರ್ಣತೆಯನ್ನು ಬಿಂಬಿಸಿದರೆ, ವೀಣಾಶಾಂತೇಶ್ವರ ಅವರ ಕಾದಂಬರಿಗಳಲ್ಲಿ ಸರಳ ಕುಟುಂಬಗಳ ಸಂಘರ್ಷಗಳು, ವೈರುಧ್ಯಗಳು ಪ್ರಕಟಗೊಳ್ಳುತ್ತವೆ. ಕುಟುಂಬ ವ್ಯವಸ್ಥೆಯಲ್ಲಿ ವ್ಯಾವಹಾರಿಕತೆ ಮಾತ್ರವಲ್ಲ ಪೂರ್ಣ ಜೀವನದೃಷ್ಟಿ ಅಡಗಿದೆ ಎಂಬುದನ್ನು ವೀಣಾ ಅವರ ಕಾದಂಬರಿಗಳು ಶೋಧಿಸುವ ಪ್ರಯತ್ನವನ್ನು ನಡೆಸುತ್ತವೆ. ಸ್ತ್ರೀಯು ಪುರುಷನಿಗೆ ಗುಲಾಮಗಿರಿಯ ಛಾಯೆ. ಆ ಛಾಯೆಗೆ ಗಂಡನ ಸುತ್ತ ಮುತ್ತ ಸುತ್ತುವುದಲ್ಲದೆ ಬೇರಿನ್ನಾವ ಗತಿಯಿಲ್ಲ ಎನ್ನುವುದನ್ನು **ಗಂಡಸರು, ಶೋಷಣೆ ಬಂಡಾಯ ಇತ್ಯಾದಿ,** ಈ ಎರಡು ಪಠ್ಯಗಳ ಹೆಚ್ಚಿನ ಪಾತ್ರಗಳು ನಿರೂಪಿಸುತ್ತವೆ. ಪುರುಷನಂತೆ ಬದುಕಲು ಪ್ರಯತ್ನಿಸುವಲ್ಲಿ ಎರಡನೇ ದರ್ಜೆಯ ಪುರುಷನಾಗಿ ಕರಗಿ ಹೋಗುವ ಬಿಕ್ಕಟ್ಟನ್ನು ಅವಳು ತನ್ನದೆ ಆದ ವ್ಯಕ್ತಿತ್ವದೊಳಗೆ ಅನುಭವಿಸಬೇಕಾಗುತ್ತದೆ. **ಗಂಡಸರು** ಕೃತಿಯ ಶಾಂತಿಯು ಪುರುಷನಿಗೆ ಎಲ್ಲದರಲ್ಲೂ ಸರಿಸಾಟಿಯಾಗಿ ನಿಲ್ಲಬೇಕೆಂಬ ತನ್ನಿಚ್ಛೆಯ ಫಲಿತವಾಗಿ ಹೆಣ್ಣುತನದ ಸಹಜ ಲಕ್ಷಣಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಸಾಮಾಜಿಕ ಸ್ಥಿತ್ಯಂತರದಲ್ಲಿ ಪೂರ್ಣ ಮಗ್ನನಾಗಿರುವ ಜಾನ್ ಅಶೋಕ್ ಕುಮಾರ್ ಶಾಂತಿಯನ್ನು ಕೇವಲ ವಸ್ತುವಾಗಿ ಬಳಸುತ್ತಾನೆ ಎಂಬುದು ಅವರಿಬ್ಬರ ಕೌಟುಂಬಿಕ ದುರಂತವಾಗಿದೆ. ಸಂಪ್ರದಾಯ ಕುಟುಂಬ ವ್ಯವಸ್ಥೆಯೊಳಗೆ ಸ್ತ್ರೀಯು ಪತಿಯೆಂಬ ಭಾವನೆಯಲ್ಲಿ ಪುರುಷನ ಶ್ರೇಷ್ಠತ್ವವನ್ನು ಒಪ್ಪಿಕೊಂಡಿದ್ದವಳು, ಆಗಲೂ ಪುರುಷ ಸ್ತ್ರೀಯ ಮಾಲಿಕ. ಸ್ತ್ರೀ 'ದ್ವಿತೀಯ ದರ್ಜೆಯ ಪುರುಷ'ನಾಗಿ ಮಾರ್ಪಟ್ಟಾಗಲೂ ಪುರುಷ ಸುಪೀರಿಯರ್ (Superior) ಆಗಿರುತ್ತಾನೆ.

ಏಕೆಂದರೆ ಆಧುನಿಕ ಸ್ತ್ರೀ ಪುರುಷನಂತೆ ಇರಲು ಅನವರತವೂ ಪ್ರಯತ್ನದಲ್ಲಿರುತ್ತಾಳೆ. ಸ್ತ್ರೀಯು ಎಷ್ಟೇ ಪುರುಷನ ಅನುಕರಣೆ ಮಾಡಿದರೂ, ಅವಳು 'ಕಾರ್ಬನ್ ಕಾಪಿ'ಗಿಂತ ಮೇಲಾಗಲಾರಳು. ಆದ್ದರಿಂದ ಕುಟುಂಬದಂತಹ ಪ್ರಾಥಮಿಕ ಸಂಸ್ಥೆಯಿಂದಲೂ ಸ್ತ್ರೀ ಪುರುಷನ ಕಾರ್ಬನ್ ಕಾಪಿ, ಪುರುಷನ ನೆರಳಾಗಿ ಉಳಿಯುವಳು ಎಂಬುದನ್ನು 'ಗಂಡಸರು', 'ಶೋಷಣೆ ಬಂಡಾಯ ಇತ್ಯಾದಿ' ಕೃತಿಗಳು ನಿರೂಪಿಸುತ್ತವೆ. ಇಲ್ಲಿ ಮುಖ್ಯವಾಗುವುದು, ಸ್ತ್ರೀಯನ್ನು ಪುರುಷನು ಬಲವಂತವಾಗಿ ಒಂದು ಛಾಯೆಯನ್ನಾಗಿ ಮಾಡುವುದು ಕಂಡು ಬರುತ್ತದೆ. **ಶೋಷಣೆ ಬಂಡಾಯ ಇತ್ಯಾದಿ**ಯಲ್ಲಿನ ವೈದ್ಯಳಾದ ಶಶಿಗೆ ಆರ್ಥಿಕ ಸ್ವಾತಂತ್ರ್ಯವಿದೆ. ಲೈಂಗಿಕ ವಿಷಯಗಳನ್ನೊಳಗೊಂಡಂತೆ ಎಲ್ಲ ವಿಷಯಗಳ ಬಗೆಗೂ ವೈಜ್ಞಾನಿಕ ದೃಷ್ಟಿಯಿದೆ. ಹೀಗೆಂದು ಅವಳು ಕುಟುಂಬ, ಅದು ಕೊಡಮಾಡುವ ಜೀವನಕ್ಕೆ ವಿಮುಖಳೆಂದು ಹೇಳಲಾಗುವುದಿಲ್ಲ. ವ್ಯಕ್ತಿಗಳ ಸಹವಾಸ, ಲೈಂಗಿಕ ಸುಖ ಬೇಕೆಂದಾಗ ಅವಳು ಆಕೆಯ ಪ್ರವೃತ್ತಿಗಳನ್ನು ಹತ್ತಿಕ್ಕಿಲ್ಲ. ಕಮಲಾ, ರೋಶನ್‌ಬೀಯ ಕುಟುಂಬದ ಬಗ್ಗೆ ಅವಳಲ್ಲಿ ಅನುಕಂಪ ಸಹಾನುಭೂತಿಗಳಿವೆ. ತಾನು ಉಳಿದವರಿಗಿಂತ ಬೇರೆ ಎಂಬ ಭ್ರಮೆ ಅವಳಲ್ಲಿದೆ. ಶಶಿ ಅವಳಿಗೆ ಗೊತ್ತಿಲ್ಲದೆಯೆ ಡಾ. ಸತೀಶನನ್ನು ಪ್ರೀತಿಸಿರುತ್ತಾಳೆ. ಕಮಲೆಯು ಮೈಸೂರಿನಿಂದ ಮುಂಬಾಯಿಗೆ ಮರಳಿ ಬರುವುದು. ಕುಟುಂಬ ಮುಖಿಯಾಗುವ ಆಕೆಯ ಒತ್ತಡ ಶಶಿಯ ಕಣ್ಣು ತೆರೆಯಿಸುತ್ತದೆ. ಹಾಗೂ ಸತೀಶನನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ಸತೀಶನ ಜೊತೆ ಕುಟುಂಬ ವ್ಯವಸ್ಥೆಗೆ ಒಳಪಡುವ ಹಂಬಲ ಹುಟ್ಟಿಸುತ್ತದೆ. ಅವಳಲ್ಲಿ ಸ್ವಾತಂತ್ರ್ಯದ ಅರಿವು ಗಟ್ಟಿಯಾಗಿರುವುದರಿಂದ ಹಾಗೂ ಅವಳ ದೃಷ್ಟಿಯೆ ವೈಜ್ಞಾನಿಕವಾಗಿರುವುದರಿಂದ ಸತೀಶನಿಂದ ಅವಳು ಶೋಷಣೆಗೊಳಗಾಗಲಾರಳು ಎಂಬ ಭಾವನೆ ಬರುವುದು ಸಹಜವಾದರೂ ಕಾದಂಬರಿಯ ಕೊನೆ ಮತ್ತೆ ಮೊದಲಿನ ಬಿಂದುವನ್ನು ಬೆಸೆದುಕೊಂಡು ವೃತ್ತವಾಗುತ್ತದೆ.

> "'ಎಂದಿನಂತೆ ಆತ ಏನಂತೀ ಶಶಿ' ಅಂತ ತನ್ನ ಅಭಿಪ್ರಾಯ ಕೇಳಲಿಲ್ಲವೆಂಬುದೂ ಶಶಿಯ ಗಮನಕ್ಕೆ ಬರಲಿಲ್ಲ. ಆತನ ಧ್ವನಿಯಲ್ಲಿ ಎಂದಿನ ಅನುನಯ, ಆರ್ದ್ರತೆ ಒಮ್ಮೆಲೆ ಮಾಯವಾಗಿ ಆಗಲೇ ಅಧಿಕಾರದ ಸೆಳಕು ಮಿಂಚಿದಂತೆ ಒಂದು ಕ್ಷಣ ಅನಿಸಿದರೂ ಆ ಅನಿಸಿಕೆಯನ್ನು ಆಚೆಗೆ ಕೊಡಹುವಂತೆ ತಲೆ ಅಲ್ಲಾಡಿಸಿ ಶಶಿ ಆತನಿಗಂಟಿಕೊಂಡಂತೆಯೇ ಆತನನ್ನು ಹಿಂಬಾಲಿಸಿದಳು. ಯಾವಾಗಲೂ ನಡೆಯುವಾಗ ಬಿರುಸಿನಿಂದ ರಪ್‌ರಪ್ ಸದ್ದು ಮಾಡುತ್ತಿದ್ದ ಆಕೆಯ ಚಪ್ಪಲಿಗಳು ಇಂದು ಒಮ್ಮೆಲೆ ವಿಧೇಯವಾಗಿ ನಿಶ್ಯಬ್ದವಾಗಿ ಮಂದವಾಗಿರುವಂತೆ ಒಂದು ಕ್ಷಣ ಅನಿಸಿದರೂ ಪ್ರಯತ್ನ ಪೂರ್ವಕವಾಗಿ ಎಲ್ಲವನ್ನೂ ಅಲಕ್ಷಿಸಿ ಆತನಿಗಿಂತ ಎರಡು ಹೆಜ್ಜೆ ಹಿಂದೆ- ಹಿಂದೆ ಆಕೆ ನಡೆದಳು." (ವೀಣಾಶಾಂತೇಶ್ವರ : ೧೯೮೪; ೧೧೧)

ವ್ಯವಸ್ಥೆ ವ್ಯಕ್ತಿಗಳಿಗೆ ತಿಳಿಯದಂತೆಯೇ ಅವರನ್ನು ಹೇಗೆ ನುಂಗುತ್ತದೆ ಎನ್ನುವುದಕ್ಕೆ ಸತೀಶ - ಶಶಿಯರ ವರ್ತನೆ ನಿದರ್ಶನವಾಗಿದೆ.

> "ತನ್ನ ಸುತ್ತಲ ಬಂಡಾಯ ಹಾಗೂ ಶೋಷಣೆಗೆ ಕೂಡ ತೀವ್ರವಾಗಿ ಸ್ಪಂದಿಸಲಾರದ ಈ ಬಂಡಾಯಗಾರ್ತಿ ಎಂಥ ಬಂಡಾಯವನ್ನು ಪ್ರತಿನಿಧಿಸುತ್ತಿದ್ದಾಳೆ ಎಂಬುದೂ ಸಮಸ್ಯೆಯೇ ಆಗುತ್ತದೆ." (ವಿಜಯಾದಬ್ಬೆ : ೧೯೮೯; ೧೭)

ಎಂದು ಹೇಳುವ ವಿಜಯಾದಬ್ಬೆ ವ್ಯವಸ್ಥೆಯ ಭೀಕರತೆಯನ್ನಾಗಲಿ, ಮಾನವೀಯ ಪ್ರಯತ್ನಗಳ ಮಹತ್ವವನ್ನಾಗಲೀ ಅರ್ಥಮಾಡಿಕೊಂಡಿಲ್ಲವೆಂದೆನಿಸುತ್ತದೆ. ಕುಟುಂಬದ ನಿರ್ವಚನೆಯ ನೆಲೆಯಲ್ಲಿ ಸ್ತ್ರೀಯರ ಬಂಡಾಯವೆಂಬುದು 'ಕ್ರಾಂತಿ' ಎನಿಸಿಕೊಳ್ಳಲಾರದು. ವಿರುದ್ಧವಾಗಿ ನಿಲ್ಲುವುದು ಯಾವುದೇ ಚೌಕಟ್ಟಿನೊಳಗೆ ವಿದ್ರೋಹವೆನಿಸಿಕೊಂಡರೆ ಅದು ಕ್ರಾಂತಿಯಾಗಲಾರದು. ಕ್ರಾಂತಿಯ ಅರ್ಥ ಒಂದು ಹೊಸ ವ್ಯಕ್ತಿತ್ವದ ಉದ್ಘಾಟನೆ. ಬಂಡಾಯದಲ್ಲಿ ಹಳೆಯ ವ್ಯಕ್ತಿತ್ವವನ್ನು ಮುಂದಿಡುವುದಕ್ಕೆ ಮಾತ್ರ ಸಾಧ್ಯ, ಹೊಸ ವ್ಯಕ್ತಿತ್ವವೆಂದು ಪ್ರಕಟವಾದಿತೋ ಅಥವಾ ಇಲ್ಲವೋ ಎಂಬ ಪರಿವೆಯಿಲ್ಲದೆ ಹಳೆಯದನ್ನು ಮುಂದಿಡುವುದು. ಕಮಲಾ, ರೋಶನ್ ಬೀ, ಪೂರ್ಣಿಮಾಸಿಂಗ್, ಮಾಲಿನೀಬಾಯಿಪಟೇಲ ಕೊನೆಗೆ ಶಶಿ ಇವರ ಕುಟುಂಬದ ಒಳಗಿನ ಬಂಡಾಯವೆಂಬುದು ಕ್ರೋಧವಾಗಿಯಷ್ಟೆ ಕಾಣಿಸಿಕೊಳ್ಳುತ್ತದೆ. ವಿಚಾರವೆಂಬ ಕ್ರಾಂತಿಯಾಗಿಯಲ್ಲ. ಆದ್ದರಿಂದ ಬಂಡಾಯ ಮಾಡುವುದು ಬಲು ಸುಲಭವೆನಿಸುತ್ತದೆ. ಇಂತಹ ಕುಟುಂಬಗಳಿಗೆ ಸಂಬಂಧಿಸಿದಂತೆ ಸಿ.ಎಂ. ಜೋಡ್ ಎಂಬ ಸಮಾಜಶಾಸ್ತ್ರಜ್ಞ ಹೇಳುವ ವ್ಯಾಖ್ಯಾನ ಧ್ವನಿಪೂರ್ಣವೆನಿಸುತ್ತದೆ.

> "ನಾನು ಹುಟ್ಟುವಾಗ ಮನೆಗಳಿದ್ದವು. ನನ್ನ ದೇಶದಲ್ಲಿ ಮನೆಗಳೇ ತುಂಬಿದ್ದವು. ಈಗ ಬರಿಯ ಕಟ್ಟಡಗಳಿವೆ. ಸ್ವಾಭಾವಿಕವಾಗಿಯೇ ಹೆಂಗಸರು ಗಂಡಸರಂತಾದಾಗ ಮನೆ ಎನ್ನುವುದು ಮಾಯವಾಗುತ್ತದೆ. ಬರಿಯ ಕಟ್ಟಡಗಳು ಉಳಿಯವುದು. ಈ ಕಟ್ಟಡಗಳು ಸ್ತ್ರೀಯ 'ವ್ಯಕ್ತಿತ್ವ' ದಿಂದ ಮಾತ್ರ ಮನೆಗಳಾಗಬಹುದು, ಕುಟುಂಬಗಳಾಗಬಹುದು." (ಮಾತುಕತೆ (ಸಂಚಿಕೆ ೫೨): ೧೯೯೬; ೧೯)

ಇದನ್ನು ಅನ್ವೇಷಿಸುವ ನೆಲೆ ವೀಣಾ ಅವರ ಕೃತಿಗಳಲ್ಲಿ ವ್ಯಕ್ತವಾಗುತ್ತದೆ. ಕ್ರಾಂತಿಯನ್ನು ಮಾಡುವ ಆಳವಾದ ವೈಚಾರಿಕತೆ ಆಪ್ಟೆ ದಂಪತಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಅವರ ಕುಟುಂಬ ಇಂತಹ ಕ್ರಾಂತಿಯ ಫಲಿತಾಂಶವಾಗಿದೆ. ಉಳಿದೆಲ್ಲಾ ಕುಟುಂಬಗಳಿಗೆ ಪ್ರತಿರೂಪವೆಂಬಂತೆ ಬರುವ ಆಪ್ಟೆ ದಂಪತಿಗಳಲ್ಲಿ ಸ್ವಾತಂತ್ರ್ಯ ಮತ್ತು ಕ್ರಾಂತಿ ಎರಡೂ ನಿಜವಾಗಿವೆ. ಯಾರ ವಿರುದ್ಧ ಅಥವಾ ಯಾವುದೇ ವಿಧವಾದ ಬಂಡಾಯವಿಲ್ಲದೆ ಪರಸ್ಪರ ತಿಳುವಳಿಕೆ, ಅನುಭೂತಿ, ಸ್ತ್ರೀಯರ ಸಾಮಾಜಿಕ ಜವಾಬ್ದಾರಿಯ ವಿಸ್ತರಣೆ, ಒಂದು ರೀತಿಯ ಆದರ್ಶ ಹಂಬಲ ಇವೆಲ್ಲ ಸೇರಿ ಆಪ್ಟೆ ಕುಟುಂಬದಲ್ಲಿ ಸ್ವಾತಂತ್ರ್ಯವನ್ನು ನಿಜವಾಗಿರಿಸಿದೆ ಮತ್ತು ಮಾನವೀಯವಾಗಿಸಿದೆ. ಇದು ನಿಚ್ಚಳವಾಗಿ ಪ್ರಕಟವಾಗುವುದು ;

> "ಮುಂಜಾನೆ, ಆಪ್ಟೆ ಬಾಯಿಯ ಹಿರಿಯ ಮಗಳಿಗೆ ಆರಾಮಿಲ್ಲೆಂದು ಸ್ವಲ್ಪ ಬಂದು ನೋಡಿಹೋಗಬೇಕೆಂದೂ ಅವರ ಮನೆಯ ಅಡಿಗೆಯಾಕೆ ಬಂದು ಹೇಳಿದ್ದರಿಂದ ಶಶಿ ಸ್ನಾನ ವೆಗೈರೆ ಮುಗಿಸಿ ಅವರ ಬ್ಲಾಕಿಗೆ ಹೋದಳು. ಶಾಂತಾಬಾಯಿ ಮನೆಯಲ್ಲಿ ಇರಲಿಲ್ಲ. ಆಪ್ಟೆ ವಕೀಲ ಸಾಹೇಬರೇ ಹೊರ ಬಂದು 'ಯಾಯಾ, ಡಾಕ್ಟರ್ ಬಾಯಿ' ಅಂತ ಮರಾಠಿಯಲ್ಲಿ ಸ್ವಾಗತಿಸಿದರು. ಶಶಿಯನ್ನು ಕರೆದುಕೊಂಡು ಒಳಗೆ ಮಗಳು ಮಲಗಿದ್ದಲ್ಲಿಗೆ ಹೋದರು. ತುಂಬ ಪ್ರೀತಿಯಿಂದ ಕಾಳಜಿಯಿಂದ, ಜ್ವರ ಬಂದು ಮಲಗಿದ್ದ ಮಗಳ ಹೊದಿಕೆ ಸರಿಸಿ 'ಮೀನೂ, ಡಾಕ್ಟರ್ ಬಂದಾರ ನೋಡು ಮಗು' ಅಂದರು. ಎದ್ದು ಕೂಡಲು ಅವಳಿಗೆ ಸಹಾಯ ಮಾಡಿದರು. ತನ್ನ ಕಿಟ್‌ಬ್ಯಾಗಿನಿಂದ ಶಶಿ ಸಿರಿಂಜ್ ತೆಗೆದಾಗ ತಾನೇ ಮುಂದಾಗಿ ಅದನ್ನು

ತೆಗೆದುಕೊಂಡು ಸ್ಟೆರ್ ಲೈಜ್ ಮಾಡಿಕೊಟ್ಟರು. 'ಏನೂ ಆಗುವುದಿಲ್ಲ ಮಗು ಆರಾಮಾಗುತ್ತಿ' ಅಂತ ಸಾಂತ್ವನ ಹೇಳಿದರು. ಅಡಿಗೆಯಾಕೆ ತಂದಿತ್ತ, ಚಹಾವನ್ನು ಶಶಿಗೆ ತಾವೇ ಕೊಟ್ಟು ಇನ್ನೊಂದನ್ನು ಮಗಳಿಗೆ ಕುಡಿಸಿದರು. ಅದೆಲ್ಲ ನೋಡುತ್ತಿದ್ದಂತೆ ಶಶಿಗೆ ಈ ವ್ಯಕ್ತಿ ಈ ಹುಡುಗಿಯ ತಂದೆಯಲ್ಲ ತಾಯಿ ಅನ್ನಿಸಿತು. ನಂತರ ಆಪ್ಟೆ ಹೇಳಿದರು. ಶಾಂತಾನದು ಇವತ್ತೊಂದು ಕೇಸ್ ಇತ್ತು. ನಾ ಫ್ರೀ ಇದ್ದೆ. ಅದಕ್ಕೆ ಮುಂಜಾನೆಯೇ ಆಕೆ ಕೋರ್ಟಿಗೆ ಹೋದಳು. ಮಗಳನ್ನು ನೋಡಿಕೊಳ್ಳಲಿಕ್ಕೆ ಅಂತ ನಾನು ಮನೆಯಾಗಿ ಉಳಿದೆ. ನಮ್ಮ ಶಾಂತಾನದು ನಿಮಗೆ ಗೊತ್ತಿಲ್ಲ. ನೂರಾ ಎಂಟು ಪರೋಪಕಾರದ ಪ್ರೋಗ್ರಾಮ್ಸ್ ಇರತಾವ ಆಕೀವು, ಏನೇನೋ ಪ್ರಿನ್ಸಿಪಲ್ ಇಟ್ಟುಗೊಂಡಾಳ.... ಅವುಗಳ ಸಲುವಾಗಿ ಹಗಲಿಡೀ ದುಡಿತಾಳ, ಪಾಪ ಆಕೀಗೆ ರೆಷ್ಟೇ ಸಿಗೋದಿಲ್ಲ. ನಾ ಎಷ್ಟು ಹೆಲ್ಪ್ ಮಾಡಿದ್ರೂ ಮತ್ತೆ ಆಕೀ ಕೆಲಸ ಆಕೀಗೆ ಸಾಕಷ್ಟು ಇರತಾವ" (ವೀಣಾ ಶಾಂತೇಶ್ವರ :೧೯೮೪ ; ೭೯-೮೦)

ಸಮಾಜಶಾಸ್ತ್ರಜ್ಞರು ಹೇಳುವ Progressive Reversalನ ಸೂಚನೆಗಳು ಇವು. ಹೊಸ ಸಭ್ಯತೆ, ಹೊಸ ಸಂಸ್ಕೃತಿ, ಹೊಸ ಕುಟುಂಬದ ಜನನದಲ್ಲಿ ಮಾತ್ರ ಪುರುಷ ಸ್ತ್ರೀಯನ್ನು ಪೂರ್ಣವಾಗಿ ಮಾನ್ಯಮಾಡುವುದು ಸಾಧ್ಯ. ಈ ರೂಪಾಂತರ ಕಷ್ಟ ಸಾಧ್ಯ. ಪುರುಷ ಸಂಸ್ಕೃತಿಯೇ ಭದ್ರವಾಗಿ ನೆಲೆಯೂರಿರುವ ಭಾರತೀಯ ಸಂದರ್ಭದಲ್ಲಿ ಇಂತಹ 'ಪ್ರಗತಿಪೂರ್ಣ' ಚಲನೆ ನಿಧಾನಗತಿಯದ್ದು. ಇದರೊಳಗಿನ ಕುಟುಂಬದಲ್ಲಿ ನೆಲೆಗೊಳ್ಳಬೇಕಾದ ಪ್ರೇಮಕ್ಕೆ ಯಾವ ಎಲ್ಲೆ ಕಟ್ಟುಗಳು ಇರುವುದಿಲ್ಲ. ಪ್ರೇಮಕ್ಕೆ ತನ್ನದಾದ ಒಂದು 'ಪಾವಿತ್ರ್ಯತೆ' ಇದೆ. ಎಲ್ಲ ಬಗೆಯ ಎಲ್ಲೆ, ಕಟ್ಟುಗಳೂ ಆ ಪಾವಿತ್ರ್ಯವನ್ನು ನಾಶಪಡಿಸುತ್ತವೆ. ಕುಟುಂಬದಲ್ಲಿ ಪ್ರೇಮದ ಸೀಮೆಯನ್ನು ಬೆಳೆಸುವುದರಿಂದ, ವಿಸ್ತರಿಸುವುದರಿಂದ ಮಾತ್ರ ಪುರುಷ 'ಪ್ರವೃತ್ತಿ'ಯನ್ನು ನಿರ್ನಾಮ ಗೊಳಿಸಬಹುದು. ರೂಢಿಗತ ಪುರುಷರ ಪ್ರವೃತ್ತಿಯೆಲ್ಲವೂ ಬಾಚಿಕೊಳ್ಳುವ ಪ್ರವೃತ್ತಿಯದ್ದು. ಮಾಲಿಕನಾಗಬೇಕೆಂಬ ಹಂಬಲಮೂಲದ್ದು. ರೂಢಿಗತ ಸ್ತ್ರೀ ಪ್ರವೃತ್ತಿಯೆಲ್ಲವೂ ತೆತ್ತು ಬಿಡುವ ಪ್ರವೃತ್ತಿ, ಸಮರ್ಪಣೆಯ ಮನೋಭಾವದ ನೆಲೆಯದ್ದು. ಇಲ್ಲಿ ಸ್ತ್ರೀಯರ ಆನಂದವೆಲ್ಲವೂ ಕೊಡುವುದರಲ್ಲಿದ್ದರೆ, ಪುರುಷರ ಸಂತೋಷ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸಿಕೊಳ್ಳುವುದರಲ್ಲಿರುತ್ತದೆ. ಇದರಿಂದ ಪ್ರಕಟವಾಗುವ ಅಂಶವೆಂದರೆ, ಸ್ತ್ರೀ ಪುರುಷರ ನಡುವೆ ಇರುವ ಶೋಷಣೆಯ ಜಾಲ ಬಲು ನವಿರಾದುದು ಹಾಗೂ ಬಲು ಆಳವಾದುದು. ಕೌಟುಂಬಿಕ ಸ್ವರೂಪದ ತಳಹದಿಯ ಮೇಲೆ ಇದನ್ನು ಬಗೆಯುವ ಪ್ರಯತ್ನ ವೀಣಾ ಶಾಂತೇಶ್ವರ ಅವರ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ಕುಟುಂಬದ ಸ್ವರೂಪದಲ್ಲಿ ಪ್ರಕಟಗೊಂಡಿದೆ.

**ಕೂಡುಕಟ್ಟಿನ ಕಾದಂಬರಿಗಳಲ್ಲಿ ನಿರೂಪಿತವಾಗಿರುವ ಕುಟುಂಬದ ಸ್ವರೂಪ:**

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಮೊದಲ ಕಟ್ಟು ಹಾಗೂ ಕೂಡುಕಟ್ಟಿನ ಕಾದಂಬರಿಗಳು ನಿರೂಪಿಸುವ ವಿವಾಹ ಮತ್ತು ಕುಟುಂಬದ 'ಸಾಂಸ್ಕೃತಿಕ ಸಂರಚನೆ'ಯನ್ನು ಪರೀಕ್ಷಿಸುವಾಗ ವಿಮರ್ಶಿಸುವಾಗ ಅವುಗಳ ಹಿಂದೆ ನಿಂತು ಬಲೆ ಹೆಣೆಯುತ್ತಿರುವ 'ಆಧುನಿಕತೆ'ಯ ಸ್ವರೂಪವು ಬಯಲಾಗುತ್ತದೆ. ಉದಾಹರಣೆಗೆ ಗೀತಾನಾಗಭೂಷಣ, ಸಾರಾ ಅಬೂಬಕ್ಕರ್ ಅವರ ಕೃತಿಗಳಲ್ಲಿ ಹಿಂದುಳಿದ ಕುಟುಂಬದ ಒಳಗೆ ಕೂಡ

ಆಧುನಿಕತೆಯ ಪರಿಣಾಮಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಇವು ಆಧುನಿಕತೆಯನ್ನು ಮೈಗೂಡಿಸಿಕೊಂಡ ಗ್ರಾಮೀಣ ಸಮಾಜ ವ್ಯವಸ್ಥೆಯೊಳಗೆ ಸ್ತ್ರೀಯರ ಊಳಿಗವನ್ನು, ಜೀತವನ್ನು ಹೇಗೆ ಪೋಷಿಸಲಾಗುತ್ತದೆ ಎನ್ನುವುದನ್ನು ಅನಾವರಣಗೊಳಿಸುತ್ತವೆ. ಅನುಪಮಾ ನಿರಂಜನ, ವೀಣಾಶಾಂತೇಶ್ವರ ಇವರು ಕಾದಂಬರಿಯ ಪಠ್ಯದೊಳಗೆ ನೇರವಾಗಿ ಆಧುನಿಕತೆ ವಿವಾಹ ಮತ್ತು ಕುಟುಂಬದ ವ್ಯವಸ್ಥೆಯ ಮೇಲೆ ಬೀರುವ ಪರಿಣಾಮಗಳನ್ನು ಚರ್ಚಿಸುತ್ತಾರೆ. ಪಾರಂಪರಿಕ ಕುಟುಂಬ ವ್ಯವಸ್ಥೆ ಹಾಗೂ ಆಧುನಿಕ ಕುಟುಂಬ ವ್ಯವಸ್ಥೆಗಳ ನಡುವೆ ಮೂಲಭೂತವಾದ ವ್ಯತ್ಯಾಸವನ್ನು ಇಲ್ಲಿ ಗುರುತಿಸಬಹುದಾಗುತ್ತದೆ. ಅಲ್ಲದೆ, ಈ ನೆಲೆಯ ಕಾದಂಬರಿಗಳು ವಿವಾಹ ಮತ್ತು ಕುಟುಂಬದ ವ್ಯವಸ್ಥೆಯಲ್ಲಿ ಪ್ರಕಟಗೊಳ್ಳುವ 'ಬಹುರೂಪತೆ'ಯನ್ನು ಅತಿಸೂಕ್ಷ್ಮವಾಗಿ ತೆರೆದಿಡುತ್ತವೆ. ಪಾರಂಪರಿಕ ವಿವಾಹದ ಮತ್ತು ಕುಟುಂಬದ ಏಕರೂಪತೆ ಚಿತ್ರಣಗಳನ್ನು ಭಂಜಿಸಿ ಬಹುರೂಪತೆಯ ಚಿತ್ರಣವನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ನೀಡುತ್ತವೆ. ಇಲ್ಲಿ 'ಆದರ್ಶ'ವೆಂದು ಸ್ವೀಕರಿಸುವ ಯಾವುದೇ ಮಾದರಿಗಳಿಲ್ಲ ಎನ್ನುವುದು ಬಹಳ ಮುಖ್ಯ. ಕುಟುಂಬದ ಹೊರಗಿನ ಹಾಗೂ ಒಳಗಿನ ವಿಮರ್ಶೆಗಳೆರಡನ್ನು ಗುರುತಿಸುವುದು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳಲ್ಲಿ ಸಾಧ್ಯವಾಗುತ್ತದೆ.

## ಅನುಬಂಧ

*೧. ವಸಾಹತೋತ್ತರ ಚಿಂತನೆಯನ್ನು ಕೆಲವು ವಿಮರ್ಶಕರು ರಾಚನಿಕೋತ್ತರ ಚಿಂತನೆಯ ಒಂದು ಕವಲೆಂದೆ ಪರಿಗಣಿಸುತ್ತಾರೆ. ಆದರೆ, ವಸಾಹತೋತ್ತರ ಚಿಂತನೆಗೆ ತನ್ನದೇ ಆದ ಒಂದು ವಿಶಿಷ್ಟ ಚೌಕಟ್ಟು ಇದೆ. ಈ ಚಿಂತನೆ ಸಂಪೂರ್ಣವಾಗಿ ವಸಾಹತುಶಾಹಿ ಮತ್ತು ವಸಾಹತೋತ್ತರ ರೂಪಣೆ (Representations) ಗಳೊಡನೆ ಮಾತ್ರ ತನ್ನನ್ನು ತೊಡಗಿಸಿಕೊಳ್ಳುತ್ತದೆ. ಎರಡನೆಯದಾಗಿ, ಎಲ್ಲಾ ವಿಧದ ಮಾನವ ಕಾರ್ಯಗಳು/ಚಿಂತನೆಗಳೂ ರಾಜಕೀಯ ಸ್ವರೂಪದ್ದೇ ಆಗಿದ್ದರೂ ಆಧುನಿಕೋತ್ತರ ಮತ್ತು ರಾಚನಿಕೋತ್ತರ ವಾದಗಳಿಗಿಂತ ನೇರವಾಗಿ ಮತ್ತು ಹೆಚ್ಚು ಸ್ಪಷ್ಟವಾಗಿ ವಸಾಹತೋತ್ತರ ಚಿಂತನೆ ರಾಜಕೀಯ ಗುರಿಯನ್ನು ಹೊಂದಿದೆ. ಹೆಲನ್ ಗಿಲ್‌ಬರ್ಟ್ ಮತ್ತು ಟಾಮ್‌ಕಿನ್ಸ್ ಜೆ. ಹೇಳುವಂತೆ, ನಾನು ಮತ್ತು ಅವರು, ಪ್ರಥಮ ಜಗತ್ತು ಮತ್ತು ತೃತೀಯ ಜಗತ್ತು, ಶ್ವೇತ ಮತ್ತು ಅಶ್ವೇತ ,ವಸಾಹತುಶಾಹಿ ಮತ್ತು ವಸಾಹತೀಕರಣಕ್ಕೆ ಒಳಪಟ್ಟವರು ಇತ್ಯಾದಿ ಅಸಮಾನ ಅಧಿಕಾರವನ್ನಾಧರಿಸಿದ ದ್ವಂದ್ವಗಳನ್ನು ಸೃಷ್ಟಿಸುವ ಯಾಜಮಾನ್ಯದ ಎಲ್ಲೆಗಳನ್ನು ಮತ್ತು ಶಕ್ತಿಕೇಂದ್ರಗಳನ್ನು ಇಲ್ಲವಾಗಿಸುವುದು ವಸಾಹತೋತ್ತರ ಚಿಂತನೆಯ ಪ್ರಮುಖ ರಾಜಕೀಯ ಅಜೆಂಡಾ. (ರಾಮಚಂದ್ರನ್ ಸಿ.ಎನ್.: ವಸಾಹತೋತ್ತರ ಚಿಂತನೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦.)

*೨. 'ಸಂಪ್ರದಾಯ ಮತ್ತು ಆಧುನಿಕತೆ' ಎನ್ನುವ ಲೇಖನದಲ್ಲಿ ಆರ್. ಶಶಿಧರ್ ಅವರು ನೆಹರೂ ಸರಕಾರದ ಭ್ರಮನಿರಸನಗಳ ಕುರಿತು ದೀರ್ಘವಾಗಿ ಚರ್ಚಿಸುತ್ತಾರೆ. ನೆಹರೂ ಯುಗದ ಪಂಚವಾರ್ಷಿಕ ಯೋಜನೆಗಳನ್ನು ಎನ್‌ಲೈಟನ್‌ಮೆಂಟ್ ಮೌಲ್ಯಗಳೆಂದು ಹೇಳುತ್ತಾ ದೊಡ್ಡ ದೊಡ್ಡ ಡ್ಯಾಮ್‌ಗಳನ್ನು, ರೋಡ್‌ಗಳನ್ನು, ಇಂಡಸ್ಟ್ರೀಸ್‌ಗಳನ್ನು ತಂದು ಬಿಟ್ಟರೆ, ಸಮಾಜ ತನ್ನಿಂದ ತಾನೇ ಪರಿವರ್ತನೆಗೊಂಡು ಬಿಡುತ್ತೆ ಅಂತ, ನೆಹರೂ ಬಹಳ ಸಿಂಪಲ್ ಮೈಂಡೆಡ್ ಆಗಿ ಒಪ್ಪಿಕೊಂಡು ಬಿಟ್ಟಿದ್ರು. ಈ ಮೇಲ್ ಮೈಯ ಬದಲಾವಣೆಯಿಂದ ಎಲ್ಲಾ ಸರಿಯಾಗಿ ಬಿಡುತ್ತೆ ಎನ್ನುವುದು, ನೆಹರೂ ಯೋಚ್ನೆ ಮಾಡಿದ ಹಾಗೆ ಆಗಲಿಲ್ಲ. ಆಗೋದೂ ಇಲ್ಲ ಎಂದು ಶಶಿಧರ್ ಅಭಿಪ್ರಾಯ ಪಡುತ್ತಾರೆ. (ಅರಿವು ಬರಹ :ಸಂಚಿಕೆ ೧೩. ಅರಿವು ಬರಹ ಟ್ರಸ್ಟ್ (ರಿ) ಮಂಗಳಗಂಗೋತ್ರಿ; ೧೯೯೭, ಪುಟ ೬-೭)

*೩.'ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸಂಪುಟಗಳಲ್ಲಿ ಅಂಬೇಡ್ಕರ್ ಅವರ ಚಿಂತನೆಯ ಮೇಲೆ ಪ್ರಭಾವ ಬೀರಿದ ಅಂಶಗಳನ್ನು ಸ್ಪಷ್ಟವಾಗಿ ಚರ್ಚಿಸಲಾಗಿದೆ. (ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಬರಹಗಳು ಮತ್ತು ಭಾಷಣಗಳು: ಸಂಪುಟ -೧ ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು. ೧೯೯೦)

*೪. **ಪ್ರಗತಿಶೀಲ, ನವ್ಯ, ನವ್ಯೋತ್ತರ ತಾತ್ವಿಕ ಸಂರಚನೆ.**

ಪ್ರಗತಿಶೀಲ ಸಂರಚನೆ: ಒಂದು ಸಾಹಿತ್ಯ ಸಂಪ್ರದಾಯ ರೂಢಿಗೊಂಡು ಅದು ಜಡತೆಯನ್ನು ಕಂಡಾಗ, ಅದನ್ನು ಬದಲಿಸುವ ಅಥವಾ ಜೀವಂತಗೊಳಿಸುವ ಪ್ರಕ್ರಿಯೆಯು ಸಹಜ. ಇದು ಆ ಸಂಪ್ರದಾಯದೊಳಗೆ ಅಂತರ್ಗತಗೊಂಡಿರುತ್ತದೆ. ಸಂಪ್ರದಾಯವನ್ನು ವಿರೋಧಿಸಿ, ಪ್ರತಿಭಟಿಸಿ ಹೊಸ ಸಾಹಿತ್ಯ ಸಂಪ್ರದಾಯ

ಸಂರಚನೆಗೊಳ್ಳುತ್ತದೆ. ನವೋದಯ ಸಾಹಿತ್ಯ ಸತ್ವ ಅದರ ಶಕ್ತಿಯನ್ನು ನಿರಸನಗೊಳಿಸಿಕೊಂಡ ಎಲ್ಲೆಯಲ್ಲಿ ಪ್ರಗತಿಶೀಲ ಚಳುವಳಿ ಸಾಹಿತ್ಯದಲ್ಲಿ ಕಾಣಿಸಿಕೊಂಡಿದೆ. ಸಾಹಿತ್ಯದ ಚರಿತ್ರೆಯನ್ನು ಗಮನಿಸಿದರೆ ೧೯೪೫ ರಿಂದ ಪ್ರಗತಿಶೀಲ ಚಳುವಳಿ ಆರಂಭಗೊಂಡಿದೆ. ಈ ಚಳುವಳಿಯು ಅ.ನ.ಕೃ ಅವರ ನೇತೃತ್ವದಲ್ಲಿ ರೂಪುಗೊಂಡಿದೆ. ಇದರಲ್ಲಿ ತ.ರಾ.ಸು., ಕುಮಾರ ವೆಂಕಣ್ಣ, ಅರ್ಚಕ ವೆಂಕಟೇಶ, ಬಸವರಾಜ ಕಟ್ಟೀಮನಿ, ನಿರಂಜನ ಅನಂತ ನಾರಾಯಣ, ಅನುಪಮಾ ನಿರಂಜನ, ರಾಜಲಕ್ಷ್ಮಿ ಮೊದಲಾದ ಹಲವು ಲೇಖಕರು ಪ್ರಗತಿಶೀಲ ತತ್ವಗಳಿಗನುಗುಣವಾಗಿ ಬರೆದರು. ಪ್ರಗತಿಶೀಲತೆ ಎನ್ನುವ ಪರಿಕಲ್ಪನೆ ಮೂಲಭೂತವಾಗಿ ಸಾಮಾಜಿಕವಾದುದು. ಅಂತರ್ಯದಲ್ಲಿ ಜೀವಶಾಸ್ತ್ರೀಯ, ಹಾಗೂ ಮನಃಶಾಸ್ತ್ರೀಯ ಆಯಾಮಗಳ ಸೂಕ್ಷ್ಮತೆಯನ್ನು ಒಳಗೊಂಡಿರುವಂಥದು. ಆದುದರಿಂದ ಒಂದು ಸಾಹಿತ್ಯದ ಸಂದರ್ಭದಲ್ಲಿ ಪ್ರಗತಿಶೀಲತೆಯ ಕುರಿತು ಸಂವಾದವು ಮೇಲಿನ ವಿವರಗಳನ್ನು ಪ್ರಜ್ಞಾಪೂರ್ವಕವಾಗಿ ಗಮನದಲ್ಲಿ ಇರಿಸಿಕೊಳ್ಳಬೇಕಾಗುತ್ತದೆ. ಪ್ರಗತಿಶೀಲತೆ ಎಂಬುದಕ್ಕೆ ಮುಂದೆ ಹೋಗುವುದು, ಇರುವ ಸ್ಥಿತಿಯಿಂದ ಬದಲಾಗುವುದು ಎಂಬ ಅರ್ಥವಿದೆ. ಬದಲಾವಣೆ ಅಥವಾ ಮುಂದೆ ಚಲಿಸುವ ಪ್ರಕ್ರಿಯೆಯ ಅಂತಿಮ ಫಲಿತ ಗುಣಾತ್ಮಕವಾಗಿರಬಹುದು. ಅಥವಾ ವಿರೋಧಾತ್ಮಕವಾಗಿರಬಹುದು. ಹೀಗಾದಾಗ ಪ್ರಗತಿಶೀಲವೆಂಬ ಪರಿಭಾಷೆಯೇ ಸಾಪೇಕ್ಷವಾಗಿ ಪ್ರಕಟವಾಗುತ್ತದೆ. ಸಾಹಿತ್ಯವು ಅದರ ಎಲ್ಲಾ ಆಯಾಮಗಳಲ್ಲಿಯೂ ಸಾಮಾಜಿಕತೆಯ ಸ್ಪರ್ಶವನ್ನು ಪಡೆದ ಕಲಾಮಾಧ್ಯಮ. ಇದರಲ್ಲಿ ಸಾಹಿತಿಯ ಪಾತ್ರವು ಕೂಡ. ಸಾಮಾಜಿಕ ನಿಲುವುಗಳಿಗೆ ಪ್ರತಿಕ್ರಿಯಿಸುವ ಔಚಿತ್ಯವನ್ನು ಹೊಂದಿರುವಂಥದು. ಬದ್ಧತೆಯನ್ನು ಕಾಯ್ದುಕೊಳ್ಳುವುದು ಇದರಲ್ಲಿ ಮುಖ್ಯವಾಗುವ ಅಂಶ. ಸಾಹಿತ್ಯ ಬದ್ಧತೆಯು ಭ್ರಮೆಗಳನ್ನು ನೀಗಿಸಿ, ಹುಸಿ ಮೌಲ್ಯಗಳನ್ನು ನಿರಸನಗೊಳಿಸುತ್ತದೆ. ಪ್ರಗತಿಶೀಲ ಚಳುವಳಿಯು ಬದ್ಧತೆಯ ಪ್ರಶ್ನೆಯನ್ನು ಗಂಭೀರವಾಗಿ ಎದುರಿಸಿದೆ. ಮತ್ತು ವಾಸ್ತವತಾವಾದ, ಸಮಾಜವಾದೀ ವಾಸ್ತವತೆ ಮತ್ತು ನೈಜವಾದ (Naturalism)ದ ಚರ್ಚೆಗಳನ್ನು ಸುದೀರ್ಘವಾಗಿ ಬೆಳಸಿದೆ. ಪ್ರಗತಿಶೀಲ ಸಾಹಿತಿಗಳ ಮೇಲೆ ರಷ್ಯಾ ಬರಹಗಾರ ಪ್ರಭಾವವಿದೆ ಇದಕ್ಕೆ ಮುಖ್ಯ ಕಾರಣ, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅವರೆಗೆ ಕಾಣದಿದ್ದ ಕೇಂದ್ರ ಭಾವವೊಂದನ್ನು ಪ್ರಗತಿಶೀಲತೆಯು ಕೊಡ ಮಾಡಿದೆ. ಪರಿಣಾಮವಾಗಿ ಸಮಾಜದ ಶೋಷಣೆಯ ಹಲವು ಮುಖಗಳನ್ನು ಚಿತ್ರಿಸುವುದಕ್ಕೆ ಪ್ರಗತಿಶೀಲ ಬರಹಗಾರರಿಗೆ ಸಾಧ್ಯವಾಗಿದೆ. ಮನೆಗಳಲ್ಲಿ, ಮಠಗಳಲ್ಲಿ, ಕಾರ್ಖಾನೆಗಳಲ್ಲಿ ನಡೆಯುವ ದಬ್ಬಾಳಿಕೆ, ದೌರ್ಜನ್ಯಗಳು ಆ ಸಂದರ್ಭದ ಕಾದಂಬರಿಯ ವಸ್ತುಗಳಾಗಿವೆ. ಕಲ್ಪಿಸಿದ ಎರಡು ಅಂಶಗಳೆಂದರೆ, ಕಲಾಸೃಷ್ಟಿಯ ಅಂತರದ ನಷ್ಟ ಮತ್ತು ಅನುಭವದ ಸರಳೀಕರಣ. ಕಲಾ ಸೃಷ್ಟಿಯಲ್ಲಿ ವಸ್ತುವನ್ನು ಸಾಕಷ್ಟು ದೂರದಿಂದ ನೋಡುವುದು ಅಗತ್ಯ. ಭೌತಿಕ ಜಗತ್ತಿನಲ್ಲಿ ನಮ್ಮ ಅನುಭವವೂ ಇತಂಹದೇ ಅಲ್ಲವೆ? ವಸ್ತು ಕಣ್ಣಿಗೆ ತೀರ ಹತ್ತಿರವಿದ್ದರೆ ಅಥವಾ ತೀರಾ ದೂರವಿದ್ದರೆ ಅಸ್ಪಷ್ಟವಾಗುತ್ತದೆ. ತೀರ ಸಮೀಪವೂ ಅಲ್ಲದ, ತೀರ ದೂರವೂ ಅಲ್ಲದ ಮಧ್ಯಾಂತರ ಒಂದರಲ್ಲಿ ವಸ್ತು ಸ್ಪಷ್ಟವಾಗಿ ಕಾಣುತ್ತದೆ. ಸಾಹಿತ್ಯದಲ್ಲೂ ಈ ಮಧ್ಯಾಂತರವನ್ನು ಸಾಧಿಸುವುದು ಅತ್ಯಗತ್ಯ. ಕೃತಿಯ ವಸ್ತು ಮತ್ತು ಪಾತ್ರಗಳಿಂದ ಲೇಖಕ ಕಲ್ಪನೆಯಲ್ಲಿ ಸಾಕಷ್ಟು ದೂರದಲ್ಲಿ ನಿಲ್ಲಲು ಸಾಧ್ಯವಾಗಬೇಕು." (ಶೇಷಗಿರಿರಾವ್ ಎಲ್.ಎಸ್. : ೧೯೭೫; ೪) ಮಾನಸಿಕ ಸಮತೋಲನವೊಂದನ್ನು ಕಾಯ್ದುಕೊಳ್ಳಲು ಸಾಧ್ಯವಾಗದ ಕಾರಣ, ಸಾಹಿತ್ಯದ

ಜೀವಾಳವಾದ ಸೂಕ್ಷ್ಮತೆಯು ಕಣ್ಮರೆಯಾಗಿ ಸಾಮಾನ್ಯೀಕರಣಗಳು (Generalization) ಸಾಹಿತ್ಯ ವಿವರವನ್ನು ಸ್ಥೂಲಗೊಳಿಸುತ್ತವೆ. ಇಲ್ಲಿ ಭಾಷೆಯ ಪಾತ್ರ ಅತಿ ಮುಖ್ಯ. ಸಾಹಿತ್ಯ ಏನು ಸಾಧಿಸಬೇಕಿದ್ದರೂ, ಭಾಷೆಯ ಮೂಲಕವೇ ಆಗಬೇಕು. ಪ್ರಗತಿಶೀಲ ಸಾಹಿತ್ಯದಲ್ಲಿ ಭಾಷೆ ಅನುಭವದ ಅನಿವಾರ್ಯವಾಗಿ ರೂಪು ತಳೆಯದೆ, ಸಾಹಿತಿಯ ಆವೇಶ-ಆಕಾಂಕ್ಷೆಗಳ ಫಲಿತವಾಗಿತ್ತು. ಆವೇಶಪೂರಿತ ಭಾಷೆಯ ನಿರೂಪಣೆಯು ಬಿಗುವು ಕಳೆದುಕೊಂಡು ಖಚಿತತೆಯು ಪಲಾಯನಗೊಂಡಿತು. ಪ್ರಗತಿಶೀಲ ಸಂದರ್ಭದ ಸ್ತ್ರೀಯ ಬರಹಗಳಿಗೆ ಸಂಬಂಧಿಸಿ ಹೇಳುವಾಗಲೂ ಇದು ಸತ್ಯವೆನಿಸುತ್ತದೆ. ಪೂರ್ಣವಾಗಿ ಚಾರಿತ್ರಿಕ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯವನ್ನು ಸಮೀಕ್ಷಿಸಿದಾಗ ಅದಕ್ಕಿರುವ ಮಿತಿಗಳ ಜೊತೆಗೆ ಮೌಲ್ಯಗಳು ಸ್ಪಷ್ಟ. ಪ್ರಗತಿಶೀಲ ಸಂಚಲನೆಯು ಸಾಹಿತ್ಯ ಓದುಗರ ವಲಯವನ್ನು ಹಿಗ್ಗಿಸಿತು. ಮಧ್ಯಮ ವರ್ಗದ ಮಹಿಳೆಯರು ಇದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೊಡಗಿಕೊಂಡರು. ಪರಿಣಾಮವಾಗಿ ಸಾಮಾಜಿಕ ಪ್ರಜ್ಞೆ ಗಂಭೀರವಾಗಿ ಜಾಗೃತಗೊಂಡಿತು. ಸಮಾಜದ ಸಮಸ್ಯೆಗಳು ಮುಕ್ತವಾಗಿ, ನಿರ್ಭಯವಾಗಿ ಅನಾವರಣಗೊಂಡವು. ಪ್ರಗತಿಶೀಲ ಚಳುವಳಿ ಎಂಟು ಒಂಬತ್ತು ವರ್ಷಗಳಿಗೆ ಸೀಮಿತಗೊಂಡು ೧೯೫೦ರ ನಂತರದಲ್ಲಿ ಇದು ಬಹುಮಟ್ಟಿಗೆ ಪೂರ್ವದ ನವೋದಯದ ಮೌಲ್ಯಗಳಿಗೆ ಮಗ್ಗಲು ಬದಲಾಯಿಸಿತು. ಪ್ರಗತಿಶೀಲ ಚಳುವಳಿ ನವೋದಯ ಪಂಥಕ್ಕಿಂತ ಹೆಚ್ಚು ಸಾಮಾಜಿಕ ಪ್ರಜ್ಞೆಯನ್ನು ಪ್ರಕಟಿಸಿದರೂ ತಿರುಳಿನಲ್ಲಿ ನವೋದಯದ ಮಾನವತಾವಾದ, ಸುಧಾರಣಾಪರ ಒಲವನ್ನು ಪ್ರಕಟಿಸಿತು. ಇದು ವ್ಯವಸ್ಥೆಯೊಳಗೆ ಪ್ರಗತಿಯ ಲೇಪನ ಕೆಲಸವನ್ನಷ್ಟೇ ಮಾಡಿ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವ ಬಗೆಯದಾಯಿತು.

**ನವ್ಯ ಸಂರಚನೆ** :ಕನ್ನಡ ಸಾಹಿತ್ಯದಲ್ಲಿ ನವ್ಯತೆಯು ವಿ.ಕೃ. ಗೋಕಾಕರ ಮತ್ತು ಗೋಪಾಲಕೃಷ್ಣ ಅಡಿಗರ ಮಾರ್ಗದಲ್ಲಿ ಕಾಣಿಸಿಕೊಂಡಿತು. ಈ ಎರಡು ಧಾರೆಗಳು ಪಾಶ್ಚಿಮಾತ್ಯ ನವ್ಯದ ಸಂವಾದವನ್ನು ಒಳಗು ಮಾಡಿಕೊಂಡು ಬೆಳೆದವು. ೧೯೫೦ ರಿಂದ ೧೯೭೫ರ ವರೆಗೆ ನವ್ಯದ ಓಘ ಸಾಹಿತ್ಯವಾಹಿನಿಯಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿತು. ನವ್ಯತೆಯ ಅಗತ್ಯ ಕನ್ನಡಕ್ಕೆ ಮಾತ್ರ ಬೇಕಾಗಿರದೆ, ಭಾರತೀಯ ಸಂದರ್ಭದಲ್ಲಿ ಎಲ್ಲಾ ಭಾಷೆಗಳಲ್ಲಿಯೂ ಇದು ಕಾಣಿಸಿಕೊಂಡಿದೆ. ನವ್ಯದ ಅರ್ಥಪೂರ್ಣ ಸಾಧನೆಯೆಂದರೆ, ಅನುಭವದ ಅಥೆಂಟಿಸಿಟಿ ಭಾಷೆಯಲ್ಲಿ ಅದರ ಶೋಧನೆಗೆ, ಸಾಕ್ಷಾತ್ಕಾರಕ್ಕೆ ನವ್ಯ ನೀಡಿದ ಮಹತ್ವ ಗಮನಾರ್ಹ. ಭಾವುಕತೆಯ ಆವರಣದಲ್ಲಿ ಬೌದ್ಧಿಕತೆಯನ್ನು, ಪ್ರಜ್ಞೆಯ ಆಳದಲ್ಲಿ ನೆನಪುಗಳನ್ನು ಕೆದಕಲು ನವ್ಯ ಉದ್ದೇಶಿಸಿದೆ. ಸುತ್ತಲಿನ ಎಲ್ಲವನ್ನು ವಿಶ್ಲೇಷಣೆಗೆ, ವಿಮರ್ಶೆಗೆ ಒಳಪಡಿಸುವ, ಎಲ್ಲವನ್ನು ಮುಕ್ತವಾಗಿ ವಿವೇಚಿಸುವ ಆರೋಗ್ಯಪೂರ್ಣ ಜೀವನ ದೃಷ್ಟಿ ಇದರಲ್ಲಿ ವ್ಯಕ್ತವಾಗುತ್ತದೆ. ಇದರಿಂದಾಗಿ ನವ್ಯ ಸಾಹಿತ್ಯವು ಮೌಲ್ಯಗಳನ್ನು ಶೋಧಿಸುವ ಒರೆಗಲ್ಲಾಗಿ ಪರಿಣಮಿಸಿದೆ. ನವೋದಯ, ಪ್ರಗತಿಶೀಲ ಸಾಹಿತ್ಯಗಳಲ್ಲಿ ಭಾಷೆ ಒಂದು ಮಾಧ್ಯಮವಾಗಿ, ವಾಹಕವಾಗಿ, ಪಾರದರ್ಶಕವಾಗಿ ಬಳಕೆಗೊಂಡರೆ, ನವ್ಯ ಸಾಹಿತ್ಯದಲ್ಲಿ ಭಾಷೆ ಶೋಧಕವಾಗಿ ಸಂಕೀರ್ಣತೆಯನ್ನು ಹೊಂದಿತು. ಇದಕ್ಕೆ ಮುಖ್ಯ ಕಾರಣ ಅದು ತತ್ಪೂರ್ವದ ಸಾಹಿತ್ಯಕ್ಕಿಂತ ವ್ಯಕ್ತಿ ಕೇಂದ್ರಿತವಾದದ್ದು. ಸಾಮಾಜಿಕ ಚೌಕಟ್ಟಿನಿಂದಾಚೆ ಇರಬಹುದಾದ ವ್ಯಕ್ತಿ ಸಮಸ್ಯೆಗಳು ಇದರಲ್ಲಿ ಗಣನೀಯವಾಗಿ ಪ್ರಕಟಗೊಂಡವು. ಸ್ವಾತಂತ್ರ ಭಾರತದ ಭ್ರಮನಿರಸನ, ಈ ಭ್ರಮನಿರಸನದೊಂದಿಗಿನ

ಅನಾಥಪ್ರಜ್ಞೆ (ಬೇರಿಲ್ಲದಿರುವಿಕೆ), ಲೈಂಗಿಕಪ್ರಜ್ಞೆ, ಅಸ್ತಿತ್ವವಾದಿ ಒಲವುಗಳು ನವ್ಯದಲ್ಲಿ ಪ್ರಧಾನವಾಗಿ ಕಾಣಿಸಿಕೊಂಡವು. ಅರವತ್ತು ಮತ್ತು ಎಪ್ಪತ್ತರ ದಶಕಗಳು ನವ್ಯ ಸಾಹಿತ್ಯದ ಉತ್ಕರ್ಷದ ಕಾಲವಾಗಿದ್ದವು. ಯು.ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಪಿ.ಲಂಕೇಶ, ಕೆ.ಸದಾಶಿವ, ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ ಪಾಟೀಲ, ಟಿ.ಜಿ.ರಾಘವ, ರಾಘವೇಂದ್ರ ಖಾಸನೀಸ, ಗಿರಿ, ಜಿ.ಎಸ್.ಸದಾಶಿವ, ಶ್ರೀಕೃಷ್ಣ ಆಲನಹಳ್ಳಿ, ವೀಣಾ ಶಾಂತೇಶ್ವರ, ರಾಜಲಕ್ಷ್ಮಿ ಎನ್.ರಾವ್, ಎಸ್. ದಿವಾಕರ್, ರಾಮಚಂದ್ರದೇವ - ಮೊದಲಾದ ಲೇಖಕರನ್ನು ಇಲ್ಲಿ ಗುರುತಿಸಬಹುದು. ನವ್ಯ ಸಾಹಿತ್ಯವು ಸೋಲನ್ನು ಅನುಭವಿಸಿದ್ದು, ಅದು ಜನ ವಿಮುಖವಾದದ್ದು ಅದರ ಅಂತಸ್ಥ ದೋಷಗಳಲ್ಲಿ, ಅನಾಥ ಪ್ರಜ್ಞೆಯ, ಲೈಂಗಿಕ ಅತಿರೇಕದ ಮೂಲವನ್ನು ನವ್ಯದ ಅತಿ ಬೌದ್ಧಿಕತೆಯಲ್ಲಿ ಗುರುತಿಸಬೇಕಾಗುತ್ತದೆ. ಆಧುನಿಕತೆಯ ಪ್ರಕ್ರಿಯೆಯನ್ನು ನವೋದಯ ಮತ್ತು ನವ್ಯ ಸಾಹಿತಿ ಎದುರಿಸಿದ ಬಗೆಯನ್ನು ಗಮನಿಸಿದರೆ, ಬೇರು ಕಳಕೊಳ್ಳುವ ನವೋದಯದವರೇ ಹೆಚ್ಚು ವಿವೇಚನೆಯನ್ನು ಕಾದು ಕೊಂಡಂತೆನಿಸುತ್ತದೆ. ಧರ್ಮ ಕೇಂದ್ರಿತ ಯುಗದ ಕವಿಗಳ ಪಾಲಿಗೆ ಎಲ್ಲ ಮಾನವಿಕ ದುಗುಡಗಳಿಗೆ ಪರಿಹಾರ ನೀಡುವ Balancing Factor ಆಗಿ ಬರುವ ದೇವರು ಅವುಗಳ ಮಿಥ್ಯೆಯನ್ನು ಸಾರಿದರೆ, ವ್ಯಕ್ತೀಕರಣ (Individnation) ಎಂಬ ಮಾನಸಿಕ ಕ್ರಾಂತಿಯೊಡನೆ ಒಮ್ಮೆಲೇ (Balancing factor) ಹೊರಟು ಹೋದ ಭಾವನೆಗಳ ಮೂಲಕ ಉದ್ವೇಗವೂ ಹೆಚ್ಚಾಗುತ್ತದೆ. ಅವುಗಳಿಗೆ ಪರಿಹಾರ ನೀಡುವ ಶಕ್ತಿಯನ್ನು ತನ್ನ ಹೊರಗೆ ಎಲ್ಲಿಯೂ ಕಾಣಲಾರದೆ ತನ್ನೊಳಗೆಯೇ ಹುಡುಕಾಟ ತೊಡಗುತ್ತಾನೆ..." ಎಂದು ಈ ಬಿಕ್ಕಟ್ಟನ್ನು ಅರ್ಥಪೂರ್ಣವಾಗಿ ವಿಶ್ಲೇಷಿಸುವ ಮೊಕಾಶಿ (೧೯೮೧, ೩೦೪ - ೩೧೫) ನವೋದಯ - ನವ್ಯ ಇವೆರಡೂ ಒಂದೇ ಮಾನವ ಕೇಂದ್ರಿತ ವ್ಯಕ್ತೀಕರಣದ ಮೂಲಭೂತ ಕ್ರಾಂತಿಯ ಅಭಿವ್ಯಕ್ತಿಗಳು, ನವ್ಯ ಎಂಬುದು ನವೋದಯದ ಪಲ್ಲಟ ರೂಪ ಎಂಬುದನ್ನು ಸಮರ್ಥಿಸುವುದು ವ್ಯಕ್ತವಾಗುತ್ತದೆ. ನವ್ಯ ಸಾಹಿತ್ಯವೆನ್ನುವ ಕಲ್ಪನೆ ಪಶ್ಚಿಮ ದೇಶಗಳಿಂದ ಭಾರತ ಕಡ ತಂದ ಚಾರಿತ್ರಿಕವಾಗಿ ಆಕಾರಗೊಂಡ ಒಂದು ಸಾಂಸ್ಕೃತಿಕ ರೂಪ. ಇದು ಭಾರತೀಯ ಸಂಸ್ಕೃತಿ ಅಥವಾ ಭಾರತೀಯ ಸಂವೇದನೆ ಎನ್ನುವ ರಾಷ್ಟ್ರೀಯ ಆದರ್ಶವಾದಿ ಸತ್ವದ ಮೇಲೆ ನಂತರದಲ್ಲಿ ವಿಭಿನ್ನ ದೇಶೀ ಭಾಷೆಗಳಲ್ಲಿ ಅಭಿವ್ಯಕ್ತಗೊಂಡಿದೆ. ಹಾಗೇ ಕನ್ನಡ ಸಂದರ್ಭ ಕೂಡ ಇದನ್ನು ಒಳಗು ಮಾಡಿಕೊಂಡಿದೆ. ಎಂಬುದು ನವ್ಯ ಸಾಹಿತ್ಯವನ್ನು ಒಟ್ಟಂದದಲ್ಲಿ ಗಮನಿಸಿದಾಗ ಅಭಿವ್ಯಕ್ತಗೊಳ್ಳುವ ಅಂಶವಾಗಿದೆ. ನವ್ಯ ಸಾಹಿತ್ಯದ ಸೈದ್ಧಾಂತಿಕ ನಿಲುವುಗಳನ್ನು ಸ್ಥೂಲವಾಗಿ ಈ ರೀತಿ ಸಂಗ್ರಹಿಸಬಹುದು. ವ್ಯಕ್ತಿಯನ್ನು ಒಂದು ಬೌದ್ಧಿಕ, ಆಲೋಚನಾ ಜೀವಿ ಎಂದು ಗ್ರಹಿಸುವ ನವ್ಯವಾದಕ್ಕೆ ರ್‍ಯಾಶನಾಲಿಟಿ, ತರ್ಕ ಹಾಗೂ ತರ್ಕ ಪಾರಮ್ಯವಾದವೇ ಎಲ್ಲ ಜ್ಞಾನದ ತಳಹದಿಯಾಯಿತು. ರ್‍ಯಾಶನಲ್ ಅಲ್ಲದ್ದನ್ನೆಲ್ಲ, ಬುದ್ಧಿಯಿಂದ, ತರ್ಕದಿಂದ ಅರ್ಥೈಸಲು ಸಾಧ್ಯವಿಲ್ಲದ್ದನ್ನೆಲ್ಲ ನವ್ಯ ಮನೋಧರ್ಮ ತಿರಸ್ಕರಿಸಿತು. ವ್ಯವಸ್ಥೆ. ಹಾಗೂ ಕ್ರಮ ಬದ್ಧತೆಯಲ್ಲಿ ನಂಬಿಕೆಯಿರಿಸಿದ ನವ್ಯವಾದ, ಮನುಷ್ಯನ ಹೊರಗೂ ಒಳಗೂ ಇರುವ ಅವ್ಯವಸ್ಥೆ, ಅರಾಜಕತೆಯನ್ನು ಅಧ್ಯಯನದ ವಸ್ತುವನ್ನಾಗಿಸಿ, ಅದನ್ನು ಹತೋಟಿಗೆ ತರುವ ಪಳಗಿಸುವ ಪ್ರಯತ್ನಮಾಡಿತು. ಈ ವ್ಯವಸ್ಥೆ ಮಾನವ ಕೇಂದ್ರಿತವಾಗಿ ಬೆಳೆಯಿತು. ವ್ಯಕ್ತಿ ನಿಷ್ಠವಾದುದನ್ನು ಮಾತ್ರ ಪುರಸ್ಕರಿಸಿದ ಈ ಮಾರ್ಗ. ಆಧುನಿಕ ಪ್ರಪಂಚ ಮೂಲದಲ್ಲಿಯೆ ಕೊಳೆತು ಹೋಗಿದೆ ಎಂದು ನಂಬಿ,

ವ್ಯಕ್ತಿಯ ಏಕಾಕಿತನ, ರಸೆಲ್‌ನ ಲಾಜಿಕಲ್ ಪಾಸಿಟಿವಿಸಂ (Logical Positivism) ಹಾಗೂ ಸಾರ್ತ್ರೆಯ ಅಸ್ತಿತ್ವವಾದ ನವ್ಯ ಪ್ರಜ್ಞೆಯನ್ನು ಪ್ರತಿನಿಧಿಸುವ ತಾತ್ವಿಕ ನಿಲುವಾಯಿತು. ನವ್ಯದ ಪ್ರಧಾನ ಲಕ್ಷಣಗಳನ್ನು ಒಳಗೊಳ್ಳುವ ವೀಣಾಶಾಂತೇಶ್ವರ ರಾಜಲಕ್ಷ್ಮಿ.ಎನ್. ರಾವ್. ಅವರ ಶೋಧದ ತಾತ್ವಿಕ ತಳಹದಿ ಸ್ತ್ರೀ-ಕೇಂದ್ರಿತವಾದದ್ದು ದೇಹ ಮತ್ತು ಮನಸ್ಸುಗಳ ಪೂರ್ಣತ್ವವಾಗಿ ಸ್ತ್ರೀಯನ್ನು ಕಾಣುವ ಪ್ರಯತ್ನ ಇವರ ಬರಹಗಳಲ್ಲಿ ಹೆಚ್ಚು ಗಂಭೀರವಾಗಿ ಪ್ರಕಟವಾಗುತ್ತದೆ.

**ನವ್ಯೋತ್ತರ ಸಂರಚನೆ** : ನವ್ಯೋತ್ತರ ಎನ್ನುವ ಪರಿಕಲ್ಪನೆಯು ವಿದ್ವಾಂಸರಲ್ಲಿ ಅಪಾರವಾದ ಚರ್ಚೆಗೆ ಗ್ರಾಸವಾಗಿದೆ. ಈ ಅಧ್ಯಯನದಲ್ಲಿ ನವ್ಯೋತ್ತರವನ್ನು 'Post Modernisum' ಪದಕ್ಕೆ ಸಂವಾದಿಯಾಗಿ ಮತ್ತು ಬಂಡಾಯ ದಲಿತದ ಸಂದರ್ಭದ ಸಾಹಿತ್ಯಕ್ಕೆ ಸೀಮಿತಗೊಳಿಸಿ ಇಲ್ಲಿ ಗ್ರಹಿಸಲಾಗಿದೆ. ದಲಿತ ಬಂಡಾಯ ಸಾಹಿತ್ಯದ ಒಟ್ಟು ಧೋರಣೆಯನ್ನು ನವ್ಯೋತ್ತರವೆನ್ನುವ ತಾತ್ವಿಕ ಜಿಜ್ಞಾಸೆಗೆ ಒಳಪಡಿಸಲು ಅದರ ಧೋರಣೆಯ ಸ್ವರೂಪವೂ ಕಾರಣವಾಗಿದೆ. ಇದನ್ನು ಜಿ.ಎಸ್. ಶಿವರುದ್ರಪ್ಪನವರು ಹೆಚ್ಚು ನಿಖರವಾಗಿ ಗುರುತಿಸುತ್ತಾರೆ. ನನ್ನ ಮಟ್ಟಿಗೆ ಹೇಳುವುದಾದರೆ, ಬಂಡಾಯ ಅನ್ನುವುದೊಂದು ಮನೋಧರ್ಮ. ಈ ಮನೋಧರ್ಮದ ಮುಖ್ಯ ಲಕ್ಷಣ ಸಾಮಾಜಿಕ ಅಸಮಾನತೆ ಹಾಗೂ ಅನ್ಯಾಯಗಳ ವಸ್ತು ಸ್ಥಿತಿಯನ್ನು ಪ್ರಶ್ನಿಸುವ ಮತ್ತು ಪರಿಸ್ಥಿತಿಯನ್ನು ಬದಲಿಸುವ ಉದ್ದೇಶದಿಂದ ಪ್ರತಿಭಟಿಸುವ ಒಂದು ಪ್ರವೃತ್ತಿ. ಶತಮಾನಗಳ ಕಾಲ ಅಕ್ಷರ ಜ್ಞಾನದ ಸವಲತ್ತುಗಳಿಂದ ವಂಚಿತವಾಗಿದ್ದು ಮತ್ತು ಮೇಲಿನ ಎಲ್ಲ ವರ್ಗದವರುಗಳಿಂದ ತುಳಿತಕ್ಕೆ ಒಳಗಾಗಿದ್ದ ಸಮಾಜದ ಕೆಳಗಿನ ಸ್ತರವೊಂದು, ಮಾತನಾಡಲು ಕಲಿತು, ತನ್ನ ಪ್ರತಿಭಟನೆಯನ್ನು ಅಭಿವ್ಯಕ್ತಪಡಿಸ ತೊಡಗಿದಾಗ ಮೂಡಿ ಬಂದಿತು ಬಂಡಾಯ ಸಾಹಿತ್ಯ.... ಹಿಂದಿನ ಎಲ್ಲ ಸಾಹಿತ್ಯ ಚಳುವಳಿಗಳೂ ತಮ್ಮ ತೆಕ್ಕೆಗೆ ತೆಗೆದುಕೊಳ್ಳದೆ ಹೋದ ಸಮಾಜದ ಕೆಳವರ್ಗದವರ ಬದುಕನ್ನು, ನಿರ್ಲಕ್ಷಿತರ ಬದುಕನ್ನು ಬಂಡಾಯ ಸಾಹಿತ್ಯ ತನ್ನ ವಸ್ತುವನ್ನಾಗಿ ಮಾಡಿಕೊಂಡಿದೆ. (೧೯೮೬,೧೨-೧೩) ನವ್ಯೋತ್ತರದ ಅಂಶಗಳನ್ನು ಗಮನಿಸಿದರೆ ಶಿವರುದ್ರಪ್ಪ ಅವರ ಅಭಿಪ್ರಾಯವನ್ನು ಮತ್ತೊಂದು ನೆಲೆಯಿಂದ ಅರ್ಥೈಸುವುದು ಸಾಧ್ಯವಾಗುತ್ತದೆ. ಪಾಶ್ಚಿಮಾತ್ಯ ದೇಶಗಳು ನವ್ಯವಾದವನ್ನು ತಿರಸ್ಕರಿಸುವ ಮೊದಲೇ, ಕನ್ನಡ ಸಾಹಿತ್ಯದಲ್ಲಿ ನವ್ಯ ಸಾಹಿತ್ಯದ ವಿರುದ್ಧ ದನಿಗಳು ಪ್ರಾರಂಭವಾಗಿದ್ದವು. ಇದಕ್ಕೆ ಮುಖ್ಯ ಕಾರಣವೆಂದರೆ, ನವ್ಯವಾದದ ವ್ಯಕ್ತಿ ಕೇಂದ್ರಿತ ಮನೋಧರ್ಮ. ಈ ಸಾಹಿತ್ಯವು, ಸಮಾಜವನ್ನು ಪ್ರತಿಬಿಂಬಿಸುವಲ್ಲಿ, ಅಲ್ಲಿ ನಡೆಯುತ್ತಿರುವ ಆರ್ಥಿಕ, ಸಾಮಾಜಿಕ, ರಾಜಕೀಯ ಶಕ್ತಿಗಳ ತಾಕಲಾಟವನ್ನು ಅರ್ಥೈಸುವಲ್ಲಿ ಸೋತಿದ್ದವು. ಹೀಗಾಗಿ ನವ್ಯೋತ್ತರ ಸಾಹಿತ್ಯ, ನವ್ಯದ ಸಾಹಿತ್ಯಿಕ ಸಾಮಾಜಿಕ ಗ್ರಹಿಕೆಗಳನ್ನು ಧಿಕ್ಕರಿಸಿಯೇ ಬೆಳೆದವು. ನವ್ಯೋತ್ತರವು ಅದರ ದಿಕ್ಕನ್ನು ಪಲ್ಲಟಗೊಳಿಸಿದ ನೆಲೆಯಿಂದ ಅದು ಜಾಗತಿಕದ ವಿರುದ್ಧವಾಗಿ ಪ್ರಾದೇಶಿಕ, ಗಂಭೀರದ ವಿರುದ್ಧವಾಗಿ ಲಘುವಾದ, ಮಹೋನ್ನತದ ವಿರುದ್ಧ ಕ್ಷುಲಕವನ್ನು, ಪವಿತ್ರದ ವಿರುದ್ಧ ಅಪವಿತ್ರವಾದುದ್ದನ್ನು ಎತ್ತಿ ಹಿಡಿಯುತ್ತದೆ. ಒಂದು ಅರ್ಥ, ಧ್ವನಿಯ ಬದಲಾಗಿ, ಹಲವು ಅರ್ಥ, ಧ್ವನಿಗಳನ್ನು ಗುರುತಿಸುತ್ತದೆ. ಅತಾರ್ಕಿಕವಾದುದನ್ನು ತರ್ಕಕ್ಕೆ ಮೀರಿದ್ದನ್ನು ಸಹಿತ ವ್ಯಕ್ತಿಯ ಅನುಭವದ ಒಂದು ಭಾಗ ಎಂದು ಗ್ರಹಿಸುತ್ತದೆ. ಇಲ್ಲಿ ವ್ಯಕ್ತಿ ಕೇಂದ್ರಿತ ಅನುಭವ ಎನ್ನುವುದು ಒಂದು ಸಮಷ್ಟಿ ನಿರ್ದೇಶಿತ ಆಶಯಗಳಲ್ಲಿ ಅನುಭವ ಸತ್ವವನ್ನು ಗುರುತಿಸಲಾಗುತ್ತದೆ. ಜೊತೆಗೆ ಕಲಾತ್ಮಕತೆಯ

ಪ್ರಶ್ನೆಯನ್ನು ಗೌಣನೆಲೆಯಲ್ಲಿಯೇ ಪರಿಗಣಿಸಿ ಸಾಗುವುದು ವ್ಯಕ್ತವಾಗುತ್ತದೆ. ಇಲ್ಲಿನ ಪ್ರಮುಖ ಬೆಳವಣಿಗೆಯೆಂದರೆ, ಬೇರೆ ಬೇರೆ ಸ್ತರಗಳಿಂದ ಬಂದ ಲೇಖಕರು ಸಾಹಿತ್ಯದಲ್ಲಿ ಕೃಷಿ ಮಾಡತೊಡಗಿದ್ದು ಮೊದಲ ಬಾರಿಗೆ ದಲಿತ- ಮುಸ್ಲಿಂ- ಮಹಿಳಾ ಜಗತ್ತಿನ ಅನುಭವ ಲೋಕ ವಿಶಿಷ್ಟ ಬಗೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ದಾಖಲುಗೊಂಡಿದೆ. ಬಹುಮುಖೀ ಸಂಸ್ಕೃತಿಯ ಸಾಧ್ಯತೆಗಳು ಹಲವು ಬಗೆಗಳಲ್ಲಿ ಕಾಣಿಸಿಕೊಂಡಿವೆ.

*೫. ಸಮತಾ, ಮಾನಸ, ಶಾಶ್ವತಿ, ಮಹಿಳಾ ಜಾಗೃತಿ ಇಂತಹ ಸಂಘಟನೆಗಳು ಕರ್ನಾಟಕದಲ್ಲಿ ಅತಿಶಕ್ತವಾಗಿ ಕಾರ್ಯಪ್ರವೃತ್ತಗೊಂಡಿವೆ. ಇವುಗಳಲ್ಲದೆ, ಸಿಪಿಐ ಮತ್ತು ಸಿಪಿಎಂನ ಮಹಿಳಾ ಸಂಘಟನೆಗಳು ಮಹಿಳಾ ವಿಮೋಚನೆಗಾಗಿ ಸಮಾಜವಾದಿ ಸಮಾಜ ಕಟ್ಟಬೇಕೆನ್ನುವ ತಾತ್ವಿಕತೆಯಲ್ಲಿ ಆಯಾ ರಾಜಕೀಯ ಪ್ರನಾಳಿಕೆಯೊಳಗೆ ಆಮೂಲಾಗ್ರವಾಗಿ ರಾಜಿ ಮಾಡಿಕೊಳ್ಳುತ್ತವೆ. ಬಿಜೆಪಿಯು ಭಾರತೀಯ ಮಹಿಳಾಮೋರ್ಚಾದ ಮೂಲಕ ಅದರ ಕೋಮುವಾದಿ ಹಿಂದೂ ರಾಷ್ಟ್ರದ ಕರೆಗೆ ಮೇಲ್ಜಾತಿಯ ಮತ್ತು ಮಧ್ಯಮ ವರ್ಗದ ಸ್ತ್ರೀಯರನ್ನು ದೊಡ್ಡ ಸಂಖ್ಯೆಯಲ್ಲಿ ಸಂಘಟಿಸುತ್ತಿದೆ. ಆರ್. ಎಸ್.ಎಸ್.ನ ಮಹಿಳಾ ವಿಭಾಗವಾದ 'ರಾಷ್ಟ್ರ ಸೇವಿಕಾ ಸಮಿತಿ'ಯು ವರದಕ್ಷಿಣೆ ಪದ್ಧತಿ, ಹೆಂಡತಿಯನ್ನು ಹೊಡೆಯುವುದು ಇತ್ಯಾದಿಗಳನ್ನು ಸಮರ್ಥಿಸುತ್ತದೆ. ಹಿಂದೂ ಪುನರುತ್ಥಾನವಾದಿ ಪ್ರತಿಗಾಮಿ ಸಿದ್ಧಾಂತಕ್ಕೆ ತಕ್ಕಂತೆ, ಸ್ತ್ರೀಯರು ಗಂಡನಿಗೆ ಮತ್ತು ಕುಟುಂಬಕ್ಕೆ ವಿಧೇಯರಾಗಿ ಇರಬೇಕೆಂದು ಬೋಧಿಸುತ್ತದೆ. ಬಲಿಷ್ಠ ಪ್ರಗತಿಪರ ಮಹಿಳಾ ಚಳುವಳಿಯು ಶೋಷಣಾ ವ್ಯವಸ್ಥೆಗೆ ತಡೆಯೊಡ್ಡುತ್ತದೆ ಎಂಬುದನ್ನು ಸಾಮ್ರಾಜ್ಯಶಾಹಿಯು ಸರಿಯಾಗಿಯೇ ಕಂಡುಕೊಂಡಿದೆ. ಆದಕ್ಕಾಗಿಯೇ ಸಾಮಾಜ್ಯಶಾಹಿಗಳು ಅನೇಕ ಮಹಿಳಾ ಗುಂಪುಗಳಿಗೆ ವಿವಿಧ ಮಾರ್ಗಗಳ ಮೂಲಕ ಹಣ ನೀಡುತ್ತಿವೆ. ಈ ಸಾಮ್ರಾಜ್ಯಶಾಹಿ ಪೋಷಿತ/ಅನುದಾನಿತ ಸಂಘಟನೆಗಳನ್ನು ಸರ್ಕಾರೇತರ ಸಂಘಟನೆಗಳು (ಎನ್‌ಜಿಒ) ಎಂದು ಕರೆಯಲಾಗುತ್ತದೆ. ಸರ್ಕಾರದಿಂದ ಅನುದಾನಿತವಾದ ಸಂಘಟನೆಗಳನ್ನೂ ಎನ್‌ಜಿಒ ಎಂದೇ ಕರೆಯಲಾಗುತ್ತದೆ. ಈ ಎನ್‌ಜಿಒ ಮಹಿಳಾ ಸಂಘಟನೆಗಳನ್ನೇ ಆಳುವ ವರ್ಗದ ಮಾಧ್ಯಮಗಳು ಮಹಿಳಾ ಚಳುವಳಿಯ ಏಕೈಕ ಪ್ರತಿನಿಧಿಗಳೆಂದು ಬಿಂಬಿಸುತ್ತವೆ. ಇಲ್ಲಿ ಗಮನಿಸಲೇ ಬೇಕಾದ ಅಂಶವೆಂದರೆ ಎನ್‌ಜಿಒಗಳೆಲ್ಲವೂ ಅಂತಿಮವಾಗಿ ಸ್ತ್ರೀ ಸಮುದಾಯದ ಶೋಷಣೆ ಮತ್ತು ದಮನದ ನಿಜವಾದ ಕಾರಣಗಳ ವಿರುದ್ಧ ಬಹು ಸಂಖ್ಯಾತ ಮಹಿಳೆಯರು ಹೂಡಬಹುದಾದ ನೈಜ ಪ್ರತಿರೋಧದ ಹೋರಾಟಗಳನ್ನು ತಣ್ಣಗಾಗಿಸುವುದಕ್ಕಾಗಿಯೇ ಸೃಷ್ಟಿಯಾಗಿವೆ. ಇದೊಂದು ವ್ಯಾಪಕ ನೆಲೆಯ ಪುರುಷ ರಾಜಕಾರಣದ ಹುನ್ನಾರು. ಇವುಗಳನ್ನು ಇಲ್ಲಿನ ತೀರ್ಮಾನಗಳ ನೆಲೆಯಲ್ಲಿ ಪರಿಗಣಿಸಿಲ್ಲ. ಸ್ತ್ರೀಯರ ಪರವಾಗಿ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡು ಕ್ರಿಯಾಶೀಲವಾಗಿರುವುದು ಗಮನಾರ್ಹ.

*೬. ಮೊದಲ ಕಟ್ಟಿನ ಕಾದಂಬರಿಗಳೆಂದು ಗೀತಾನಾಗಭೂಷಣ ಅವರ ನೀಲಗಂಗಾ (೧೯೮೬) ಆಸರೆ (೧೯೮೮) ಬದುಕು (೨೦೦೧) ಕೃತಿಗಳನ್ನು ಗಮನಿಸಲಾಗಿದೆ.

ಸಾರಾ ಅಬೂಬಕ್ಕರ್ ಅವರ ಚಂದ್ರಗಿರಿಯ ತೀರದಲ್ಲಿ (೧೯೮೪), ಸಹನ(೧೯೮೫) ವಜ್ರಗಳು(೧೯೯೮) ಸುಳಿಯಲ್ಲಿ ಸಿಕ್ಕವರು' (೧೯೯೪) ಪ್ರವಾಹ ಸುಳಿ (೧೯೯೬) ಪಠ್ಯಗಳನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ.

*೭.ಕೂಡುಕಟ್ಟಿನ ಕಾದಂಬರಿಗಳೆಂದು ಅನುಪಮಾ ನಿರಂಜನ ಅವರ ಅನಂತಗೀತ (೧೯೫೪) ಸಂಕೋಲೆಯೊಳಗಿಂದ (೧೯೫೪) ಶ್ವೇತಾಂಬರಿ (೧೯೫೭) ಸ್ನೇಹ ಪಲ್ಲವಿ (೧೯೬೭) ಚಿತ್ತಮೋಹನ (೧೯೭೨), ಎಳೆ (೧೯೮೦) ಹಿಮದ ಹೂ (೧೯೬೬), ನೂಲುನೆಯ್ದ ಚಿತ್ರ(೧೯೬೧), ಮೂಡಣ ಪಡುವಣ(೧೯೭೧), ಋಣ(೧೯೩೪), ಕಣಿವೆಗೆ ಬಂತು ಬೇಸಿಗೆ(೧೯೭೨), ಆಳ(೧೯೮೯), ಮುಕ್ತಿಚಿತ್ರ (೧೯೮೮) ಒಟ್ಟು ಹದಿಮೂರು ಕಾದಂಬರಿಗಳನ್ನು ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಇದಕ್ಕೆ ಮುಖ್ಯ ಕಾರಣ ವಿವಾಹ ಮತ್ತು ಕುಟುಂಬದ ಹಿನ್ನೆಲೆಯಿಂದ ಮುಖ್ಯವಾಗುವ ಕಾದಂಬರಿಯ ವಸ್ತು ವೈವಿಧ್ಯವಾಗಿದೆ.

ವೀಣಾಶಾಂತೇಶ್ವರ ಅವರ ಗಂಡಸರು (೧೯೮೦) ಶೋಷಣೆ ಬಂಡಾಯ ಇತ್ಯಾದಿ (೧೯೮೫) ಎರಡು ಕೃತಿಗಳನ್ನು ಗಮನಿಸಲಾಗಿದೆ. ಇದಕ್ಕೆ ಮುಖ್ಯ ಕಾರಣ ಸಿದ್ಧಾಂತ ಮತ್ತು ವಾಸ್ತವತೆಯ ನಡುವಿನ ಅಗಾಧ ರೂಪದ ಅಂತರ ಮತ್ತು ಇಂಡಿಯಾದ ಸ್ತ್ರೀಯರು ಬಂಡವಾಳಶಾಹಿ ಆರ್ಥಿಕತೆ ಮತ್ತು ಊಳಿಗಮಾನ್ಯ ಪುರುಷಾಧಿಪತ್ಯದೊಳಗೆ ಏಕಕಾಲದಲ್ಲಿ ಬದುಕುವಂಥ ಪರಿಸ್ಥಿತಿಗಳು.

*೮. ದಕ್ಷಿಣ ಭಾರತದ ಮಲಬಾರ್ ಪ್ರಾಂತ್ಯದಲ್ಲಿರುವ ಮಾಪಿಳ್ಳೆಗಳು ಮುಸ್ಲಿಂ ಸುಮುದಾಯಕ್ಕೆ ಸೇರುತ್ತಾರೆ. ಮೋಪ್ಲಾಗಳ ಉಗಮ ಹಾಗೂ ಚರಿತ್ರೆಯನ್ನು ಡಬ್ಲ್ಯೂ. ಲೋಗನ್‌ರವರ ಮ್ಯಾನ್ಯೂವಲ್ ಆಫ್ ಮಲಬಾರ್ ಡಿಸ್ಟ್ರಿಕ್ಟ್, ಎನ್ನುವ ಕೃತಿಯಲ್ಲಿ ವಿವರಿಸುವ ಪ್ರಯತ್ನವನ್ನು ನಡೆಸಿದ್ದಾರೆ. (೧೯೦೬; ೧೯೨-೨೦೧)

## ಕೊನೆ ಟಿಪ್ಪಣಿ

೧. ಆನಂದ ಕೋಡಿಂಬಳ (೨೦೦೨): ಮಾರ್ಕ್ಸ್‌ವಾದ ಮತ್ತು ಕನ್ನಡ ವಿಮರ್ಶೆ; ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾ ಪ್ರಬಂಧ (ಅಪ್ರಕಟಿತ).

೨. ಆಮೂರ ಜಿ.ಎಸ್. (೧೯೯೪): ಕನ್ನಡ ಕಥನ ಸಾಹಿತ್ಯ ಕಾದಂಬರಿ ; ಶ್ರೀಹರಿ ಪ್ರಕಾಶನ, ಧಾರವಾಡ.

೩. ಒಡಿಯರ್ ಡಿ. ಹೆಗ್ಗಡೆ (೧೯೮೬): ಅಂಬೇಡ್ಕರ್ ಅವರ ಸಮಗ್ರ ಚಿಂತನೆ; ಮಂಗಳ ಗಂಗೋತ್ರಿ, ಮಂಗಳೂರು.

೪. ಗಾಯತ್ರಿ ಎನ್.(೧೯೯೬): ಮಹಿಳೆ:ಬಿಡುಗಡೆಯ ಹಾದಿಯಲ್ಲಿ; ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೫. ಜವರಯ್ಯ ಮ.ನ.(೧೯೯೫): ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ; ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

೬. ತಿಪ್ಪೇರುದ್ರ ಸ್ವಾಮಿ(ಸಂ) (೧೯೯೮) : ಗಾಂಧಿ ವಿಚಾರ ಮಾರ್ಗ; ಗಾಂಧಿ ಭವನ, ಮೈಸೂರು.

೭. ತಿಪ್ಪೇರುದ್ರಸ್ವಾಮಿ ಎಚ್ (ಅನು): (೧೯೭೦) ಮಹಾತ್ಮಾಗಾಂಧಿ ೧೦೦ ವರ್ಷಗಳು ;ಗಾಂಧೀಭವನ ಮಾನಸ ಗಂಗೋತ್ರಿ, ಮೈಸೂರು.

೮. ನಾಗಭೂಷಣ ಡಿ.ಎಸ್: (೧೯೯೦) ಗಮನ ; ಸಂವಾದ ಪ್ರಕಾಶನ, ಮಲ್ಲಾಡಿ ಹಳ್ಳಿ.

೯. ನಟರಾಜ ಹುಳಿಯಾರು (ಸಂ) :(೨೦೦೦) ಮಾನವ ಕುಲದ ಏಕತೆ (ರಾಮ ಮನೋಹರ ಲೋಹಿಯಾ ಬರಹಗಳು ಸಂಪುಟ : ನಾಲ್ಕು); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೦. ನಟರಾಜ ಹುಳಿಯಾರು (ಸಂ): (೨೦೦೦) ಕಣ್ಣೆದುರಿನ ಪ್ರಶ್ನೆಗಳು (ರಾಮ ಮನೋಹರ ಲೋಹಿಯಾ ಬರಹಗಳು ಸಂಪುಟ : ೫) ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೧. ಬಾಪು ಹೆದ್ದೂರ ಶೆಟ್ಟಿ(೧೯೮೯) : ಮಾರ್ಕ್ಸ್‌ವಾದ ; ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೧೨. ಯಶಪಾಲ್ (೧೯೯೮): ಗಾಂಧಿವಾದದ ಶವ ಪರೀಕ್ಷೆ; ಡಿ.ವಿ.ಕೆ. ಮೂರ್ತಿ, ಮೈಸೂರು.

೧೩. ರಾಮಾಚಂದ್ರನ್ ಸಿ.ಎನ್.(೧೯೯೫): ಆಶಯ- ಆಕೃತಿ ; ಅಭಿನವ ಪ್ರಕಾಶನ, ಬೆಂಗಳೂರು.

೧೪. ವಸಂತ ಬನ್ನಾಡಿ (೧೯೯೫): ಸಂಸ್ಕೃತಿ ಚಿಂತನೆ ; ಅರಿವು ಬರಹ ಪ್ರಕಾಶನ, ಮಂಗಳ ಗಂಗೋತ್ರಿ, ಮಂಗಳೂರು.

೧೫. ವಿಜಯಾ ದಬ್ಬೆ (೧೯೯೮): ಅನುಪಮಾ ನಿರಂಜನ; ಸಾಹಿತ್ಯ ಅಕಾಡೆಮಿ, ನವದೆಹಲಿ.

೧೬. ವಿಜಯಶ್ರೀ ಸಬರದ (೧೯೯೪): ಅನುಪಮಾ ನಿರಂಜನ: ಬದುಕು-ಬರಹ; ಮನೋಹರ ಪ್ರಕಾಶನ, ಧಾರವಾಡ.

೧೭. ಸತ್ಯನಾರಾಯಣ ಕೆ :(೧೯೯೧) ಆಸಕ್ತಿ ; ಹಂಸಧ್ವನಿ ಪ್ರಕಾಶನ, ಬೆಂಗಳೂರು.

೧೮. ಶ್ರೀಮತಿ ಎಚ್.ಎಸ್ :(೧೯೯೯) ಮಹಿಳಾ ಅಧ್ಯಯನ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. (ಮಾತುಕತೆ (ಸಂಚಿಕೆ ೫೨): (೧೯೯೯) ನೀನಾಸಮ್ ಹೆಗ್ಗೋಡು, ಸಾಗರ.

20. Ambedkar B.R.: (1973) Poona Pact Vol.1 Bhagawan Das (Ed) ; Bombay Press Group, Bombay.

# ಅಧ್ಯಾಯ ಐದು :

# ಅನನ್ಯ ಸಾಂಸ್ಕೃತಿಕ ನೆಲೆ :ವಿವಾಹ ಮತ್ತು ಕುಟುಂಬದ ಪರಿಕಲ್ಪನೆ.

## ಅನನ್ಯ ಸಾಂಸ್ಕೃತಿಕ ನೆಲೆ :ವಿವಾಹ ಮತ್ತು ಕುಟುಂಬದ ಪರಿಕಲ್ಪನೆ.

೫.೧. ಅನನ್ಯ ಸಾಂಸ್ಕೃತಿಕ ನೆಲೆ .

೫.೧.೧ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆಯು ನಿರ್ವಚಿಸುವ ಕುಟುಂಬದ ಪರಿಕಲ್ಪನೆ.

೫.೧.೨. 'ಗೃಹವಾದಿನಿ' ಏಕಪತ್ನಿತ್ವ ಸಾಕಾರಗೊಳಿಸಿದ ಪ್ರತಿಮೆ.

೫.೧.೩ 'ಸ್ವಯಂ ವಿಗ್ರಹ ಭಂಜಕಿ' : ಸ್ತ್ರೀವಾದಿ ನಿರ್ಮಿತಿಯ ಪ್ರತಿಮೆ.

೫.೧.೪ ಅನನ್ಯತೆಯ ಸಂರಚನೆ .

೫.೧.೫ ಅನನ್ಯ ಸಾಂಸ್ಕೃತಿಕ ನೆಲೆ : ವ್ಯಕ್ತಿನಿಷ್ಠ ಆದರ್ಶ.

೫.೨ ಮೊದಲ ಕಟ್ಟಿನ ಕಾದಂಬರಿಗಳು .

೫.೨.೧ ಮೊದಲ ಕಟ್ಟಿನ ಕಾದಂಬರಿಗಳು : ವಿವಾಹದ ಸ್ವರೂಪ.

೫.೨.೨ ಮೊದಲ ಕಟ್ಟಿನ ಕಾದಂಬರಿಗಳು : ದಾಂಪತ್ಯದ ಸ್ವರೂಪ.

೫.೨.೩ ಮೊದಲ ಕಟ್ಟಿನ ಕಾದಂಬರಿಗಳು : ಕುಟುಂಬದ ಸ್ವರೂಪ.

೫.೩. ಕೂಡುಕಟ್ಟಿನ ಕಾದಂಬರಿಗಳು .

೫.೩.೧ ಕೂಡುಕಟ್ಟಿನ ಕಾದಂಬರಿಗಳು: ವಿವಾಹದ ಸ್ವರೂಪ.

೫.೩.೨ ಕೂಡುಕಟ್ಟಿನ ಕಾದಂಬರಿಗಳು : ದಾಂಪತ್ಯದ ಸ್ವರೂಪ.

೫.೩.೩ ಕೂಡುಕಟ್ಟಿನ ಕಾದಂಬರಿಗಳು : ಕೌಟುಂಬಿಕ ಸ್ವರೂಪ.

### ೫.೧. ಅನನ್ಯ ಸಾಂಸ್ಕೃತಿಕ ನೆಲೆ :

ಹತ್ತೊಂಬತ್ತನೆ ಶತಮಾನದ ಮಧ್ಯಾವಧಿಯಲ್ಲಿ ರೂಪುಗೊಂಡ ಸಾಮಾಜಿಕ ಚಳುವಳಿಯ ಸ್ವರೂಪಗಳು ಮತ್ತು ಇಪ್ಪತ್ತನೆಯ ಶತಮಾನದ 'ಸ್ತ್ರೀಮುಕ್ತಿ ಚಳುವಳಿ'ಗಳು ಸ್ತ್ರೀವಾದಿ ಸಂಸ್ಕೃತಿಯನ್ನು ನಿರ್ದಿಷ್ಟವಾಗಿ ಹಾಗೂ ರಚನಾತ್ಮಕವಾಗಿ ರೂಪಿಸಿವೆ. ಒಟ್ಟು ಒಂದೂವರೆ ಶತಮಾನಗಳ ಸ್ತ್ರೀ ಮುಕ್ತಿ ಚಳುವಳಿಗಳ ಅವಿರತ ಹೋರಾಟವು ಪಾಶ್ಚಾತ್ಯ, ಪೌರಸ್ತ್ಯ ದೇಶಗಳ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆಯನ್ನು ಬಹುಮುಖ ಆಯಾಮಗಳಲ್ಲಿ ಸಂರಚಿಸಿವೆ. ಹೀಗಾಗಿ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆ ಎಂಬುದು ಏಕಾಕಾರಿಯಲ್ಲ. *೧ ಇಲ್ಲಿ ಬಹುಮುಖ ಆಯಾಮ ಎನ್ನುವುದು ಪ್ರಕರವಾಗಿ ತೋರುವುದು ಸ್ತ್ರೀವಾದಿ ಸಾಹಿತ್ಯ/ ಸ್ತ್ರೀವಾದಿ ವಿಮರ್ಶೆಯ ಸಂದರ್ಭಗಳಲ್ಲಿ. 'ಸ್ತ್ರೀವಾದಿ ಸಾಹಿತ್ಯ' ಅಥವಾ 'ಸ್ತ್ರೀವಾದಿ ವಿಮರ್ಶೆ'ಯನ್ನು ನಿಖರವಾಗಿ ವ್ಯಾಖ್ಯಾನಿಸುವುದು ಕಷ್ಟಕರ. 'ಸಂಪೂರ್ಣ ಸ್ತ್ರೀ ಸ್ವಾತಂತ್ರ್ಯ'ದ ಚಾರಿತ್ರಿಕ ಸಂದರ್ಭವೊಂದು ಯಾವ ರಾಷ್ಟ್ರಗಳಲ್ಲೂ ಸೃಷ್ಟಿಗೊಂಡಿಲ್ಲ. ಈ ಕಾರಣದಿಂದಾಗಿ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆ ನಿರೂಪಿಸುವ ಪರ್ಯಾಯ ಶೋಧವು ಸಮಕಾಲೀನ ಜಾಗತೀಕರಣದ ಸಂದರ್ಭಗಳಲ್ಲಿ ಒಂದು 'ಪ್ರತಿಮೆ' (Mith)ಯಾಗಿ, 'ಆದರ್ಶ ಕಲ್ಪನೆಯ ರಾಜ್ಯ'(utopia)ವಾಗಿ ಪರಿಣಮಿಸಿ ಬಿಡುವ ಅಪಾಯವೇ ಹೆಚ್ಚಾಗಿದೆ. ಪೂರ್ಣವಾಗಿ ಪುರುಷ ನಿರ್ಮಿತ ಸಮಾಜದಲ್ಲಿ ಸಂಪೂರ್ಣ ಸ್ತ್ರೀ ಸ್ವಾತಂತ್ರ್ಯದ ನಿರ್ಮಿತಿಯು ಅನನ್ಯ ಸಾಂಸ್ಕೃತಿಕ ನೆಲೆಯನ್ನು ಕಟ್ಟಿಕೊಡುವಂಥದ್ದು. ಪುರುಷನಷ್ಟೇ ಸ್ತ್ರೀ ಕೂಡ ರಾಜಕೀಯ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕವಾಗಿ ಒಟ್ಟು ಸಾಮಾಜಿಕ ಸಮಾನತೆಯನ್ನು ಸಾಧಿಸುವ ಚಾರಿತ್ರಿಕ ಸನ್ನಿವೇಶವನ್ನು ಅನನ್ಯ ಸಾಂಸ್ಕೃತಿಕ ನೆಲೆ ಎಂದು ವ್ಯಾಪಕಾರ್ಥದಲ್ಲಿ ಪರಿಭಾವಿಸಬಹುದು. ಆಗ ಸೂಕ್ಷಾತಿಸೂಕ್ಷ್ಮವಾಗಿ ಅನನ್ಯ ಸಾಂಸ್ಕೃತಿಕ ನೆಲೆ ಎನ್ನುವ ಸ್ತ್ರೀವಾದಿ ಮೀಮಾಂಸೆಯ ಪರ್ಯಾಯ ಶೋಧವು 'ಸ್ತ್ರೀಯ ಅರಿವಿನ ಪ್ರತೀಕ' ಎಂದರೆ, 'ನಾನು ಯಾರು?' ಎನ್ನುವ ಅಂತರಂಗದ ಜಿಜ್ಞಾಸೆಯಾಗುತ್ತದೆ. ಇದು ಪುರುಷ ನಿರ್ವಚಿತ ತತ್ವಶಾಸ್ತ್ರದ ಸಮೀಕರಣದಲ್ಲಿ ಅಧ್ಯಾತ್ಮದ ಮೂಸೆಯೊಳಗೆ ಅಭಿವ್ಯಕ್ತಗೊಳ್ಳುವ 'ಆತ್ಮ'ನ ಹುಡುಕುವಿಕೆ ಎಂದಾಗುವುದು. ಆದರೆ, ನಾನು ಯಾರು? ಎನ್ನುವ ಚರಿತ್ರಾತ್ಮಕ (Histirography)

ಪುರುಷ ನಿರ್ವಚಿತ ತತ್ತ್ವಶಾಸ್ತ್ರದ ಸಮೀಕರಣದಲ್ಲಿ ಅಧ್ಯಾತ್ಮದ ಮೂಸೆಯೊಳಗೆ ಅಭಿವ್ಯಕ್ತಗೊಳ್ಳುವ 'ಆತ್ಮ'ನ ಹುಡುಕುವಿಕೆ ಎಂದಾಗುವುದು. ಆದರೆ, ನಾನು ಯಾರು? ಎನ್ನುವ ಚರಿತ್ರಾತ್ಮಕ (Histirography) ಉತ್ಪನನವನ್ನು ಕೇಂದ್ರವಾಗಿ ಪರಿಕಲ್ಪಿಸಿಕೊಂಡು ಹೊರಡುವ ಅನ್ವೇಷಣೆ ಅತಿ ಶಕ್ತವಾಗಿ ಆದರ ವೇದಿಕೆಯನ್ನು ನಿರ್ಮಾಣ ಮಾಡಿಕೊಂಡಿರುವುದು ಸ್ತ್ರೀವಾದಿ ಸಾಹಿತ್ಯ, ಸ್ತ್ರೀವಾದಿ ವಿಮರ್ಶೆಯ ಪ್ರಸ್ಥಾನಗಳಲ್ಲಿ. (ಸ್ತ್ರೀವಾದಿ ಸಾಹಿತ್ಯ, ಸ್ತ್ರೀವಾದಿ ವಿಮರ್ಶೆಯ ಎಲ್ಲಾ ಪ್ರಸ್ಥಾನಗಳು 'ಸ್ವಂತಿಕೆ'ಯ ಅರಿವು, ಸ್ವಾಯತ್ತತೆ, ನಿರ್ಮಾಣ ಕಾರ್ಯದಲ್ಲಿನ ಸಹಭಾಗಿತ್ವ ಎನ್ನುವ ಗಮ್ಯ ವಿಚಾರಗಳಿಂದ ಆಯಾ ಪ್ರಸ್ಥಾನಗಳ ವಾದಸರಣಿಗಳನ್ನು ಪರಿಪಕ್ವಗೊಳಿಸಿಕೊಳ್ಳುತ್ತವೆ.) ಸ್ವಂತಿಕೆಯ ಅರಿವು, ಸ್ವಾಯತ್ತತೆ, ನಿರ್ಮಾಣ ಕಾರ್ಯದಲ್ಲಿನ ಸಹಭಾಗಿತ್ವ ಇವು ಎಲ್ಲಾ ಕ್ಷೇತ್ರಗಳಲ್ಲೂ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆಯೊಂದು ಬಯಸುವ 'ಅನನ್ಯ ಸಾಂಸ್ಕೃತಿಕ ನೆಲೆ'. ಇಂತಹ ಪರ್ಯಾಯ ಶೋಧ ಎಲ್ಲಾ ಸ್ತ್ರೀವಾದಿ ಪ್ರಸ್ಥಾನಗಳ ಅಂತರ್ಗತ ಉದ್ದೇಶವಾಗಿದೆ.

> "ಕಳೆದೆರಡು ದಶಕಗಳಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯನ್ನು ಕುರಿತು ರೂಢಿಗತವಾಗಿರುವ ಕೆಲವು ನಂಬಿಕೆಗಳಿವೆ. ಸ್ತ್ರೀವಾದಕ್ಕೆ ತನ್ನದೇ ಆದ ಏಕರೂಪದ ಸಿದ್ಧಾಂತ ಸೂತ್ರವೆಂಬುದಿಲ್ಲ. ಅದು ಪಶ್ಚಿಮದಲ್ಲಿ ವಿಭಿನ್ನ ಕಾಲಗಳಲ್ಲಿ ಬೇರೆ ಬೇರೆ ಪುರುಷರು ಪ್ರತಿಪಾದಿಸಿದ ಸಿದ್ಧಾಂತಗಳಿಂದಲೇ ಅಸ್ತಿತ್ವಕ್ಕೆ ಬಂದಿದೆ ಎಂಬುದು ಇಂಥ ಒಂದು ಸಾಂಪ್ರದಾಯಿಕ ನಂಬಿಕೆ. ಈ ದೃಷ್ಟಿಯಿಂದ ನೋಡುವವರು ಉದಾರವಾದಿ ಸ್ತ್ರೀವಾದ (Liberal Feminism), ಮಾರ್ಕ್ಸ್‌ವಾದಿ ಸ್ತ್ರೀವಾದ (Marxist Feminism), ಮನೋವಿಶ್ಲೇಷಣಾವಾದಿ ಸ್ತ್ರೀವಾದ (Psychoanalytic Feminism), ಅಸ್ತಿತ್ವವಾದಿ ಸ್ತ್ರೀವಾದ (Existentialist Feminism) ಮುಂತಾಗಿ ಸ್ತ್ರೀವಾದದ ವಿವಿಧ ಪಂಥಗಳನ್ನು ಹೆಸರಿಸುವುದುಂಟು. ಅಂದರೆ ಸ್ತ್ರೀವಾದಿಗಳು ಬೇರೊಂದು ಸಿದ್ಧಾಂತವನ್ನು ಆಶ್ರಯಿಸಿ, ಅದರಲ್ಲಿನ ಪುರುಷ ಪಕ್ಷಪಾತಿ ನೆಲೆಗಳನ್ನು ಬಿಟ್ಟು, ಸ್ತ್ರೀವಾದದ ಅಗತ್ಯಕ್ಕೆ ಆ ಸಿದ್ಧಾಂತವನ್ನು ಹೊಂದಿಸಿಕೊಳ್ಳಲು ನಡೆಸಿರುವ ಪ್ರಯತ್ನವನ್ನು ಈ ಬಗೆಯ ಹೆಸರುಗಳು ಸೂಚಿಸುತ್ತವೆ ಎನ್ನಬಹುದು." (ಸುಮಿತ್ರಾ ಬಾಯಿ ಬಿ.ಎನ್: ೧೯೯೯ ; ೩೭,೩೮)

ಮಾರ್ಕ್ಸ್‌ವಾದ, ಉದಾರವಾದ, ಅಸ್ತಿತ್ವವಾದದಂತಹ ವಿಮರ್ಶಾ ಪ್ರಸ್ಥಾನಗಳಿಂದ ಸ್ತ್ರೀವಾದ ಪುರುಷ ಪಕ್ಷಪಾತಿ ನೆಲೆಗಳನ್ನು ನಿರಾಕರಿಸಿ, ಉಳಿದಂತೆ ಸಾಕಷ್ಟು ಪಡೆದಿದೆ ಎಂದು ಸರಳವಾಗಿ ತೀರ್ಮಾನಿಸುವುದು ಅಧ್ಯಯನದ ಸಾಧ್ಯತೆಗಳನ್ನು ಮಿತಿಗೊಳಿಸುತ್ತದೆ. ಎಂದರೆ, ಆಯಾ ಸೈದ್ಧಾಂತಿಕತೆಯ ಚಾರಿತ್ರಿಕ ಸಂದರ್ಭದಲ್ಲಿ ಮೂಲದ ಸಿದ್ಧಾಂತಗಳ ಪಾತಳಿಯಿಂದಲೇ 'ಸ್ತ್ರೀವಾದ' ಅದರ ಅಸ್ತಿತ್ವವನ್ನು ಪುಷ್ಟೀಕರಿಸುವುದು, ಸಮರ್ಥಿಸುವುದು ವ್ಯಕ್ತವಾಗುತ್ತದೆ. ಒಂದು ವಿಮರ್ಶಾ ಪ್ರಸ್ಥಾನ ಇನ್ನೊಂದು ವಿಮರ್ಶಾ ಪ್ರಸ್ಥಾನವನ್ನು ಪುನರ್ರಚಿಸುತ್ತದೆ. 'ಸ್ತ್ರೀವಾದ'ವನ್ನು ಹೀಗೆ ನೋಡಿದಾಗ ಮಾತ್ರ ಅದರ ಪೂರ್ಣ ಸ್ವರೂಪದ ಜಿಜ್ಞಾಸೆಯನ್ನು ನಡೆಸುವುದು ಸುಲಭವಾಗುತ್ತದೆ. ಸ್ತ್ರೀವಾದವು ಸಾಂದರ್ಭಿಕವಾಗಿ ಆಯಾ ವಿಮರ್ಶಾ ಪ್ರಸ್ಥಾನಗಳಿಂದ ಪಡೆದುಕೊಳ್ಳುವಲ್ಲಿ ಮಾತ್ರ ನಿಲುಗಡೆಗೊಳ್ಳದೆ ಅವುಗಳಲ್ಲಿ ಸ್ತ್ರೀವಾದದ ಮೂಲಭೂತ ಆಶಯಗಳಿಗೆ ಅನುಗುಣವಾಗಿ ಮುಂದುವರೆಸಿದೆ, ಬೆಳೆಸಿದೆ. 'Feminism' ಎಂದರೆ, 'ಸ್ತ್ರೀ ಪ್ರಾಧಾನ್ಯ', 'ಸ್ತ್ರೀ ಪ್ರಾಧಾನ್ಯವಾದ' ಎನ್ನುವ ಅರ್ಥ

ಗ್ರಹಿಕೆ ಇದೆ. 'Feminist' ಎಂಬುದಕ್ಕೆ 'ಸ್ತ್ರೀವಾದಿ' ಎಂದು ಅರ್ಥಗಳನ್ನು ನೀಡಲಾಗಿದೆ. 'Are women novels Feminist Novels?' ಎಂಬ ನಿಬಂಧವನ್ನು ಬರೆದ ರೋಜಲಿಂಡ ಕ್ಯಾವ್ಹೆ ಎಂಬ ಫ್ರೆಂಚ್ ಸಂಶೋಧಕಿ ಸ್ತ್ರೀವಾದಿ ಬರಹಗಳು ಮತ್ತು ಸ್ತ್ರೀಯರ ಬರಹಗಳ ನಡುವಿನ ವ್ಯತ್ಯಾಸವನ್ನು ಸ್ಪಷ್ಟವಾಗಿ ಗುರುತಿಸಿದ್ದಾಳೆ. *, ಅವಳ ಪ್ರಕಾರ, ಸ್ತ್ರೀಯೋರ್ವಳು ಕೇವಲ 'ಸ್ತ್ರೀ' ಎಂಬುದರಿಂದಷ್ಟೆ 'ಸ್ತ್ರೀವಾದಿ' ಆಗಲು ಸಾಧ್ಯವಿಲ್ಲ. ಹೀಗಾಗಿ, ಸ್ತ್ರೀಯರು ಸ್ತ್ರೀಯರ ಬಗ್ಗೆ ಬರೆದ ಬರಹಗಳೆಲ್ಲವೂ ಪುರುಷ ಪ್ರಾಧಾನ್ಯವನ್ನು ವಿರೋಧಿಸುವವುಗಳೆಂದು ತೀರ್ಮಾನಿಸುವಂತಿಲ್ಲ. ಪುರುಷ ಪ್ರಧಾನ ಸಂಸ್ಕೃತಿಯು ನಿರ್ಮಿಸಿರುವ ಭಾಷಿಕ ಹಾಗೂ ಸಾಹಿತ್ಯಕ ವರ್ತುಲದೊಳಗೇ ಸ್ತ್ರೀಯರು ಸಾಹಿತ್ಯ ರಚಿಸುತ್ತಿರುವುದರಿಂದ ಆ ಸಾಹಿತ್ಯ ಪರಂಪರೆಯನ್ನು ಸ್ತ್ರೀವಾದಿ ಎಂದು ಹೇಳಲು ಸಾಧ್ಯವಿಲ್ಲ. ಎಂಬುದಾಗಿ ರೋಜಲಿಂಡ ಕ್ಯಾವ್ಹೆ ವಾದಿಸುತ್ತಾಳೆ. ಪಿತೃಪ್ರಧಾನ ಸಂಸ್ಕೃತಿಯು ಹಲವು ಶತಮಾನಗಳಿಂದ ಸ್ತ್ರೀಯರ ಅನುಭವಗಳನ್ನು ನಿಗ್ರಹಿಸಿದೆ. ಅದೇ ಪುರುಷ ಪ್ರಧಾನ ವ್ಯವಸ್ಥೆಯೊಳಗೆ ಸ್ತ್ರೀಯರು ತಮ್ಮ ಅನುಭವಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸುವುದು ಕೂಡ ಒಂದು ವೈರುದ್ಧ್ಯವಾಗಿದೆ. ಇಲ್ಲಿ ಸ್ತ್ರೀಯರದ್ದೇ ಆದ ಖಾಸಗೀ ಅನುಭವಗಳನ್ನು ವರ್ಣಿಸುವುದರಿಂದ ಅದನ್ನು ಸ್ತ್ರೀವಾದಿ ಸಾಹಿತ್ಯ ಎಂಬುದಾಗಿ ಪರಿಗಣಿಸಲು ಸಾಧ್ಯವೇ ಎನ್ನುವ ಪ್ರಶ್ನೆ ಬಲವಾಗಿ ಕಾಡುತ್ತದೆ. 'ಅರಿವಿನ ಜಾಗೃತಿ'ಯೇ ಸ್ತ್ರೀವಾದಿ ಚಳುವಳಿಯ ಮುಖ್ಯ ಅಂಶವಾಗಿರುವುದರಿಂದ ಇಂಥ ವಿಶಿಷ್ಟ ಅನುಭವಗಳನ್ನು ಆವಿಷ್ಕರಿಸುವ ಸಾಹಿತ್ಯವನ್ನಷ್ಟೇ ಸ್ತ್ರೀವಾದಿ ಎಂದು ಮಾನ್ಯ ಮಾಡಬೇಕಾಗುತ್ತದೆ. ಸಮಾಜದಲ್ಲಿ ಇರುವ ಎರಡು ಘಟಕಗಳೆಂದರೆ, ಸ್ತ್ರೀ ಮತ್ತು ಪುರುಷ. ಇದು ಸ್ತ್ರೀ-ಪುರುಷರ ಶಾರೀರಿಕ ಭೇದ ಮತ್ತು ಲಿಂಗ ಆಧರಿಸಿದ ನೈಸರ್ಗಿಕ ಗುರುತಿಸುವಿಕೆ. ಆದರೆ, ಸಮಾಜಗಳಲ್ಲಿ ಪರಂಪರೆ ಮತ್ತು ಸಂಸ್ಕೃತಿಯ ಅಚ್ಚಿನೊಳಗೆ ಸ್ತ್ರೀ ಮತ್ತು ಪುರುಷ ಅಥವಾ ಹೆಣ್ಣು/ಗಂಡು ಎಂಬ ಎರಡು ಸರ್ವನಾಮಗಳು ನೈಸರ್ಗಿಕ ಗುರುತಿಸುವಿಕೆಗಿಂತ ಭಿನ್ನವಾಗಿ ಸಾಂಸ್ಕೃತಿಕ ಪಾತಳಿಯಲ್ಲೇ ಅರ್ಥ ಕಲ್ಪಿತಗೊಳ್ಳುತ್ತವೆ. (ಸಾಂಸ್ಕೃತಿಕವಾಗಿ ನಿರ್ವಚನಗೊಳ್ಳುವ ಸ್ತ್ರೀ- ಪುರುಷ ಪ್ರತಿಮೆಗಳು ಆಯಾ ಭಾಷಿಕ ಮಹಾಕಾವ್ಯಗಳಲ್ಲಿ ಒಡಮೂಡುವ ಬಗೆಯಲ್ಲಿ ಇದು ನಿಖರವಾಗಿ ಕಾಣಿಸಿಕೊಳ್ಳುತ್ತದೆ.) ಹೆಣ್ಣಾಗಿ ಅಥವಾ ಗಂಡಾಗಿ ಶಾರೀರಿಕ ಅಂಗ ವಿನ್ಯಾಸವನ್ನು ಪಡೆದು ಹುಟ್ಟಿದರೂ ಸ್ತ್ರೀ/ ಪುರುಷನನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯನ್ನು ಆಯಾ ಸಂಸ್ಕೃತಿಯು ಮೂಲಭೂತವಾಗಿ ನಿರ್ವಹಿಸುತ್ತದೆ. ಇದು ಪುರುಷ ಪ್ರಧಾನ್ಯದಲ್ಲಿ ಹೇಗೆ ಬೇಕೋ ಹಾಗೆ ಎರಕಗೊಳ್ಳುತ್ತದೆ. ಏಕತ್ರವಾಗಿ ಸ್ತ್ರೀಯರನ್ನು ಗುಲಾಮಗಿರಿಯಲ್ಲಿ ಇಡುವ ಪರಮಾಧಿಕಾರ (Savomeast Power) ಪುರುಷನದ್ದಾಗಿರುತ್ತದೆ. ಈ ಕಾರಣದಿಂದ ಮರಾಠಿಯ ಸ್ತ್ರೀವಾದಿ ಚಿಂತಕಿ ಅಶ್ವಿನಿ ಧೋಂಗಡೆ ಹೇಳುವಂತೆ ;

> "ಸ್ತ್ರೀವಾದದ ಆಗ್ರಹ ಪೂರ್ವಕವಾದ ಪ್ರತಿಪಾದನೆಯೆಂದರೆ, ಎಲ್ಲಾ ಸ್ತ್ರೀಯರು ಹೆಣ್ಣುಗಳಾಗಿರುವುದು ಹೌದಾದರೂ ಅವರೆಲ್ಲ ಅಬಲೆಯರಾಗಿಲ್ಲ. ಸ್ತ್ರೀಯ ಸ್ತ್ರೀತ್ವದ ವ್ಯಾಖ್ಯೆಯನ್ನು ಪಾರಂಪರಿಕವಾದ ವ್ಯಾಖ್ಯೆಯಲ್ಲಿಯೇ ಅಡರಿಸುವುದಿದೆ. ಅವರು ಸ್ತ್ರೀತ್ವದ ಸಾರ ಸರ್ವಸ್ವ ವಗೈರೆ ಶಬ್ದಗಳೊಡನೆ ಆಟವಾಡುತ್ತಾರೆ. ಈ ಸಂದರ್ಭದಲ್ಲಿ ಸ್ತ್ರೀತ್ವವೆಂಬುದು ಲಿಂಗ ಸಂಬಂಧದೊಳಗೆ ಬರುವುದೆಂದು ಭಾವಿಸಲಾಗುವುದು. ಐತಿಹಾಸಿಕ ಹಾಗೂ ಸಾಮಾಜಿಕ ಪರಂಪರೆಯಿಂದಲೂ ಸ್ತ್ರೀತ್ವದ ಕಲ್ಪನೆಯನ್ನು ಎತ್ತಿ ಹಿಡಿಯಲಾಗುತ್ತದೆ. ಒಂದೊಮ್ಮೆ ಸ್ತ್ರೀತ್ವವನ್ನು ಜೈವಿಕ ಘಟಕವೆಂದು

ಭಾವಿಸಿದಲ್ಲಿ ಸ್ತ್ರೀತ್ವದ ವ್ಯಾಖ್ಯಾನವನ್ನು ಮಾಡುವುದು ಹೇಗೆಂಬ ವಿಚಾರ ಪ್ರಶ್ನೆಯಾಗಿಯೇ ಉಳಿಯುತ್ತದೆ. ಸಂಸ್ಕೃತಿಯು ನಿಶ್ಚಿತಗೊಳಿಸಿರುವ ಸ್ತ್ರೀತ್ವದ ವೈಶಿಷ್ಟ್ಯವು ಅಮಾನ್ಯವಾದುದಾಗಿರುವುದರಿಂದ ಸ್ತ್ರೀವಾದಿಗಳಿಗೆ ಸ್ತ್ರೀತ್ವದ ವ್ಯಾಖ್ಯಾನ ಮಾಡುವ ಜರೂರಿಯೂ ಕಾಣುವುದಿಲ್ಲ. ಪಿತೃಪ್ರಧಾನ ವ್ಯವಸ್ಥೆಯಲ್ಲಿ 'ಹೆಂಗಸು' ಎಂಬ ಶಬ್ದಕ್ಕೆ ಅನೇಕ ವೈಶಿಷ್ಟ್ಯವನ್ನು ವಿಕಸಿತಗೊಳಿಸುವುದು ಸ್ತ್ರೀವಾದಿಗಳಿಗೆ ಉಳಿದಿದೆಯೇ? ಹೀಗಿರುವುದರಿಂದ ಸ್ತ್ರೀವಾದಿಗಳು ಮಾಡುವ ಸ್ತ್ರೀತ್ವದ ವ್ಯಾಖ್ಯೆಯೂ ಕೂಡ ಅಂತಿಮವಾಗಿ 'ಹೆಣ್ತನ'ದ ವ್ಯಾಖ್ಯೆಯಲ್ಲದೆ ಬೇರೇನೂ ಅಲ್ಲ" (ವಿಠಲರಾವ್ ಗಾಯಕ್ವಾಡ್(ಅನು) : ೨೦೦೧ ; ೪೩)

ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆಯು ಸ್ತ್ರೀವಾದವನ್ನು ಸಮರ್ಥಿಸಿಕೊಳ್ಳುವ ನೆಲೆಯಲ್ಲಿ ಅಶ್ವಿನಿ ಧೋಂಗಡೆಯವರ ವ್ಯಾಖ್ಯಾನ ಅತಿ ಮಹತ್ವದಾಗಿದೆ. ಪುರುಷನಿಷ್ಠ ಹೆಣ್ತನದ ನಿರ್ವಚನಗಳನ್ನು, ಸ್ತ್ರೀ ನಿಷ್ಠವಾಗಿ ಮರುಕಲ್ಪಿಸುವ ಸ್ತ್ರೀವಾದದ ಪ್ರಯತ್ನವು ಅನನ್ಯ ಸಾಂಸ್ಕೃತಿಕ ನೆಲೆಯ ಪ್ರಾತಿನಿಧಿಕ ಬೇಡಿಕೆಯಾಗಿದೆ. ಇಂತಹ ಆರೋಗ್ಯ ಪೂರ್ಣ ಸಂದರ್ಭದಲ್ಲಿ ಮಾತ್ರ ಸ್ತ್ರೀ- ಪುರುಷರಿಗೆ ಪರಸ್ಪರರನ್ನು ಅರ್ಥೈಸಿಕೊಳ್ಳುವುದಕ್ಕೆ, ಸಮರ್ಥಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಆದ್ದರಿಂದ, ಸ್ತ್ರೀವಾದಿ ಸಂಸ್ಕೃತಿಮೀಮಾಂಸೆಯ ಸಮರ್ಥನೆಯನ್ನು ಪ್ರಧಾನವಾದ ಸ್ತ್ರೀವಾದಿ ಚಿಂತಕರ ಹಿನ್ನೆಲೆಯಲ್ಲಿ, ಪ್ರಮುಖ ಸ್ತ್ರೀವಾದಿ ಪ್ರಸ್ಥಾನಗಳ ಅಧ್ಯಯನವನ್ನು ಗಮನದಲ್ಲಿ ಇರಿಸಿಕೊಂಡಂತೆ ನಡೆಸಬೇಕಾಗುತ್ತದೆ.

### ೫.೧.೧ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆಯು ನಿರ್ವಚಿಸುವ ಕುಟುಂಬದ ಪರಿಕಲ್ಪನೆ. :

ಸ್ತ್ರೀಯರ ಬಗ್ಗೆ ರೂಪಿಸಿದ್ದ ಹಳೆಯ ಪ್ರತಿಮೆಗಳನ್ನು ಒರೆಸಿ ತೆಗೆದದ್ದು ಸ್ತ್ರೀವಾದದ ಸಾಮಾಜಿಕ- ಸಾಂಸ್ಕೃತಿಕ ನಿರ್ವಚನಗಳು ಮಾಡಿದ ಗಣನೀಯ ಸಾಧನೆಯಾಗಿದೆ. ಹಲವು ಶತಮಾನಗಳಿಂದ ಗುಲಾಮಗಿರಿಯ ಜೀವನಕ್ಕೆ ಒಗ್ಗಿಕೊಂಡಿದ್ದ ಸ್ತ್ರೀಯು ಪುರುಷ ಕಟ್ಟಿದ ಪ್ರತಿಮೆಯೊಳಗೆ ಪ್ರತಿಫಲಿಸುತ್ತಿದ್ದಳು. ಇದಕ್ಕೆ ಮುಖ್ಯ ಕಾರಣ ಸ್ತ್ರೀಯೊಳಗಿನ ದಾಸ್ಯ ಮನೋಭಾವನೆ, ಸ್ತ್ರೀಯರು ಪುರುಷರಿಗಿಂತ ಕೀಳೆಂಬ ಪರಿಸ್ಥಿತಿ, ಪರಾವಲಂಬಿತನ, ನಿಷ್ಕ್ರಿಯತೆಯಂತಹ ಮನೋಭಾವಗಳಾಗಿವೆ. ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆ ಎನ್ನುವುದು ಸ್ವ ವಿಚಾರ ಪ್ರಜ್ಞೆ ಮತ್ತು ಸ್ವಂತ ನಿರ್ಣಯ ಮಾಡುವ ಹೊಸ ಸ್ವಾತಂತ್ರದ ಎಚ್ಚರವಾಗಿದೆ. ಪಾಶ್ಚಾತ್ಯ, ಭಾರತೀಯ ಮತ್ತು ಸ್ಥಳೀಯ (ಕರ್ನಾಟಕ) ಹೀಗೆ ಮೂರು ಆಯಾಮಗಳ ಸಂದರ್ಭಗಳಿಂದ ಸ್ತ್ರೀವಾದಿ ಸಂಸ್ಕೃತಿಮೀಮಾಂಸೆ ಅರ್ಥಗ್ರಹಿಕೆಗೆ ಒಳಪಡುತ್ತದೆ. ಸ್ತ್ರೀಯ ಪ್ರತಿಮೆಯನ್ನು ರೇಖಿಸುವ ನಿರಂತರ ಪ್ರಯತ್ನವು ಪ್ರಧಾನ ಸ್ತ್ರೀವಾದಿಗಳ ಚಿಂತನೆ, ಮತ್ತು ಪ್ರಮುಖ ಸ್ತ್ರೀವಾದಿ ಪ್ರಸ್ಥಾನಗಳು ಮುಂದಿಡುವ ನಿರ್ವಚನ ಮಾದರಿಗಳಿಂದ ಸ್ಪಷ್ಟವಾಗುತ್ತದೆ. ಇಲ್ಲಿ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆಯು 'ಸ್ತ್ರೀ- ಪ್ರತಿಮೆ'ಯ ಸ್ಥಾಪಿತ ಮಾದರಿಗಳನ್ನು ಒಡೆಯುವಲ್ಲಿ ಎದುರಿಸಿದ ಪ್ರಮುಖ ಪ್ರಶ್ನೆಯು ಎರಡು ಬಗೆಗಳಲ್ಲಿ ಕಾಣಸಿಕೊಳ್ಳುತ್ತವೆ.

೧. ಗೃಹಿಣಿ ಜೀವನದ ಮಾದರಿಯನ್ನು ಒಡೆದು ಕಟ್ಟುವುದು.

೨. ಗೃಹಿಣಿ ಜೀವನದ ಮಾದರಿಗೆ ಪರ್ಯಾಯ ಮಾದರಿಯನ್ನು ರೂಪಿಸುವುದು.

**೫.೧.೨. 'ಗೃಹವಾದಿನಿ' ಏಕಪತ್ನಿತ್ವ ಸಾಕಾರಗೊಳಿಸಿದ ಪ್ರತಿಮೆ.**

'ಸ್ತ್ರೀತ್ವ'ವೆಂಬ ಮೌಲ್ಯವನ್ನು ಪ್ರತಿಫಲಿಸುವ ಮಾದರಿಗಳನ್ನು ಒಡೆಯುವುದು. ಇದನ್ನು ಡಿ.ಆರ್. ನಾಗರಾಜ್ "ಗೃಹವಾದಿನಿ ಮಾದರಿ' (House wife modals)" ಎಂದು ಗುರುತಿಸುತ್ತಾರೆ. (೧೯೯೬: ೧೫೦) ಇದು ಪುರುಷ ಪ್ರಧಾನ ಮೌಲ್ಯಗಳನ್ನು ವೈಭವೀಕರಿಸುವಂಥದ್ದು. ಸಾಹಿತ್ಯದ ಮಹಿಳಾ ಬರೆವಣಿಗೆಗಳಲ್ಲಿ ತೀರಾ ಸಂಕೀರ್ಣವಾಗಿ ಈ 'ಗೃಹವಾದಿನಿ ಮಾದರಿ'ಯ ಆತ್ಮವಿಮರ್ಶೆ, ಸರಿತಪ್ಪುಗಳ ಜಿಜ್ಞಾಸೆ ಕಾಣಿಸಿಕೊಂಡಿದೆ. ಗೃಹವಾದಿನಿಯ ಈ ಆಕೃತಿಯನ್ನು ಪುರುಷ ನಿರ್ಮಿತ ಕುಟುಂಬ ಹಾಗೂ ಮನೆಯ ಚೌಕಟ್ಟಿನಲ್ಲಿ ನಿರಸನಗೊಳಿಸುವ ಪ್ರಯತ್ನ ವ್ಯಕ್ತವಾಗುತ್ತದೆ.

'ಗೃಹವಾದಿನಿ' ಏಕಪತ್ನಿತ್ವ ಪದ್ಧತಿ ರೂಪಿಸಿದ ಸುದೃಢ ಪ್ರತಿಮೆ. 'ಗೃಹವಾದಿನಿ' ತಾಯಿ- ಹೆಂಡತಿಯ ವಿಸ್ತೃತ ವ್ಯಾಖ್ಯೆಕೂಡ ಆಗುವುದರಿಂದ ವ್ಯಾಪಕಾರ್ಥದಲ್ಲಿ ಇದು ಕುಟುಂಬ ರಚನೆಯ ಸಾಕ್ಷಿ ಪ್ರಜ್ಞೆ. ಆದ್ದರಿಂದ 'ಗೃಹವಾದಿನಿ' ಸಂಕೀರ್ಣವಾದ ಸಾಂಸ್ಕೃತಿಕ ರಚನೆಯಾಗಿದೆ. ಸಿಮೋನ್ ದಿ ಬೂವಾ (Simone de Beauvoir) 'The Second Sex' ಕೃತಿಯಲ್ಲಿ ಪರಿಭಾವಿಸುವಂತೆ :

> "ಗಂಡು ಎಂದೂ ತಲುಪಲು ಸಾಧ್ಯವಿಲ್ಲದ ಒಂದು ಶಿಖರಾನುಭವ ಹೆಣ್ಣಿಗೆ ಸಾಧ್ಯವಿದೆ. ಅದೇ ತಾಯ್ತನ. ತಾಯಿಗೆ ಮಾತ್ರ ಭ್ರಮೆಗಳು ಇಲ್ಲ. ಅವಳಿಗೆ ಯಾವ ಭೀತಿಯು ಇಲ್ಲ. ಇಡೀ ಜಗತ್ತನ್ನೇ ಮಡಿಲ ಮಗುವನ್ನಾಗಿ ಮಾಡಿಕೊಳ್ಳುವಂಥ ಪ್ರೀತಿ ಅವಳದ್ದು. ಈ ಪ್ರೀತಿ ಒಂದು ಅದ್ಭುತ ಶಕ್ತಿ. ಇದು ಪ್ರಕೃತಿ ಪುರುಷದಂಥ ಆದಿ ಪ್ರತೀಕವನ್ನು ಮೀರಿ ನಿಲ್ಲುವಂಥದ್ದು. ಗಂಡು ಪ್ರಕೃತಿ ಪುರುಷರ ಸಮ್ಮಿಲನದಲ್ಲಿ ಸಾರ್ಥಕತೆಯನ್ನು ಕಂಡುಕೊಳ್ಳುತ್ತಾನೆ. ಆದರೆ ಹೆಣ್ಣಿಗೆ ಈ ಸಮ್ಮಿಲನ ಒಂದು ಸಾಧನ ಮಾತ್ರ. ತಾಯ್ತನವೇ ಅವಳ ನಿಜವಾದ ಸಿದ್ಧಿ. ತಾಯ್ತನ ನಿರ್ಮಲ ಸೌಂದರ್ಯದ ಪ್ರತಿರೂಪ. ತಾಯ್ತನ ಜೀವಕಾರುಣ್ಯದ ತವರು. ಇಂಥ ತಾಯಿ ಭಾವಕ್ಕೆ ಅಹಂಕಾರವಾಗಲಿ, ಘರ್ಷಣೆಯಾಗಲಿ ಗೊತ್ತೇ ಇಲ್ಲ. ಆದ್ದರಿಂದಲೇ ಅದಕ್ಕೆ ಸೋಲಿಲ್ಲ. ತಾನೂ ಗೆಲ್ಲುತ್ತಾ, ಎಲ್ಲರನ್ನೂ ಗೆಲುವಿನ ಕಡೆಗೆ ಒಯ್ಯುತ್ತದೆ ಅದು. ವ್ಯಕ್ತಿ ಮುಕ್ತಿಯ ಪ್ರತ್ಯೇಕವಾದಿ ಕಲ್ಪನೆಯನ್ನು ನಿವಾಳಿಸಿ ಎಸೆದು ಸಮಷ್ಟಿ ಸ್ವರ್ಗವನ್ನು ನಿರ್ಮಾಣಮಾಡುವ ಶಕ್ತಿ ಈ ತಾಯೀಭಾವ." (೧೯೫೨ ; ೧೬೬) .,

ಇದು ಸಾಮಾನ್ಯವಾಗಿ ಮಾತೃಮೂಲೀಯ ಸ್ವರೂಪದಲ್ಲಿ ಗೃಹವಾದಿನಿ ಪ್ರತಿಮೆಯ ಐತಿಹ್ಯ ಅರ್ಥಗ್ರಹಿಕೆಯಾಗಿದೆ. ಇದರಿಂದ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದಾಗಿ, ಗೃಹವಾದಿನಿಯಲ್ಲಿ ತಾಯಿ ಸೃಷ್ಟಿಜನ್ಯ ಕೋಶ. ಎರಡನೆಯದಾಗಿ, ಮಾತೃಮೂಲೀಯ ಸಂರಚನೆಯಲ್ಲಿ ಗೃಹವಾದಿನಿಯು ಸ್ವಯಂಪೂರ್ಣವೃತ್ತ. ಗೃಹವಾದಿನಿ ಪ್ರತಿಮೆ ಎಲ್ಲಿಂದ ಆರಂಭವಾಗುತ್ತದೋ ಅಲ್ಲೇ ಕೊನೆಗೊಳ್ಳುತ್ತದೆ. ಎಂದರೆ, ಕುಟುಂಬದ ತಳರಚನೆಯಿಂದ ಇದನ್ನು ಬೇರ್ಪಡಿಸುವುದು ಅಸಾಧ್ಯ. ಬೋವಾ ಹೇಳುವಂತೆ, ಗೃಹವಾದಿನಿ/ತಾಯಿ ಬದುಕಿನ 'ಉದ್ಗಮ'ದ ಹಾದಿಯನ್ನು ಪ್ರತಿನಿಧಿಸುವವಳು.

**೫.೧.೨. ಗೃಹವಾದಿನಿ ಪ್ರತಿಮೆ ಹುಟ್ಟು ಹಾಕಿದ ಬಿಕ್ಕಟ್ಟುಗಳು :**

ಇಂಡಿಯಾದ ಜಾಗತೀಕರಣದ ಸಂದರ್ಭದಲ್ಲಿ ಗೃಹವಾದಿನಿ ಪ್ರತಿಮೆ ಹಲವು ಸಮಸ್ಯೆಗೆ ತಳಹದಿಯಾಗಿದೆ.

**ಅ)ವರದಕ್ಷಿಣೆ :** ಬಂಡವಾಳಶಾಹಿ ವ್ಯವಸ್ಥೆ ಶಕ್ತವಾಗಿ ಹುಟ್ಟುಹಾಕಿದ 'ವರದಕ್ಷಿಣೆ' ಎನ್ನುವ ಕೌಟುಂಬಿಕ ಆರ್ಥಿಕ ಪದ್ಧತಿಯು ಜಾಗತೀಕರಣದ ವರ್ತಮಾನದ ಸಂದರ್ಭದಲ್ಲಿ ಉಲ್ಬಣಾವಸ್ಥೆಯನ್ನು ತಲುಪಿದೆ. ಬಂಡವಾಳಶಾಹಿ ಜಗತ್ತಿನಲ್ಲಿ ವ್ಯಕ್ತಿಗಳನ್ನು ಅಳೆಯುವ ಮುಖ್ಯ ಮಾನದಂಡಗಳಲ್ಲಿ ಹಣ ಮೊದಲನೆಯದ್ದು. ವಿವಾಹದ ಮಾರುಕಟ್ಟೆಯಲ್ಲಿ ಹಣವಿಲ್ಲದ ಹೆಣ್ಣು ಯಾರಿಗೂ ಬೇಡದ ವಸ್ತುವಾಗುತ್ತಾಳೆ. ಇದರೊಳಗಿನ ವರದಕ್ಷಿಣೆಯ ಹಾಗೂ ಇನ್ನುಳಿದ ಯಾವುದೇ ದೌರ್ಜನ್ಯ ಸ್ತ್ರೀಯನ್ನು ಸರಕಾಗಿ ಮಾರ್ಪಡಿಸುತ್ತವೆ. ಪಿತೃಪ್ರಧಾನ ಸಮಾಜದ ಮೌಲ್ಯಗಳ ಹೊರೆಯಿಂದ ಎಲ್ಲ ಜಾತಿಯ, ವರ್ಗಗಳ ಸ್ತ್ರೀಯರು ಶೋಷಣೆಗೆ ಒಳಗಾಗುತ್ತಿರುವುದು 'ಹೆಣ್ಣು' ಎನ್ನುವ ಸರಕಿನ ಮೌಲ್ಯ ನಿರ್ಧರಿತವಾಗುವ ಕ್ರಮದಿಂದಲೇ ಆಗಿದೆ. ಸರಿಸಮವಾದ ಶಿಕ್ಷಣ, ಉದ್ಯೋಗವಿದ್ದರೂ ಬಹುಪಾಲು ಸ್ತ್ರೀಯರಿಗೆ ವರದಕ್ಷಿಣೆಯಿಂದ ವಿನಾಯಿತಿ ಸಾಧ್ಯವಾಗುವುದಿಲ್ಲ. (ದಕ್ಷಿಣ ಕನ್ನಡದ ಬಂಟ ಸಮುದಾಯದಂತೆ ವರದಕ್ಷಿಣೆಯನ್ನು ಪ್ರತಿಷ್ಠೆಯಾಗಿ ಸ್ವೀಕರಿಸುವ ಎಷ್ಟೋ ಸಮುದಾಯಗಳು ಇಂಡಿಯಾದಲ್ಲಿ ಇವೆ.) ಹಲವು ರೀತಿಗಳಲ್ಲಿ ಭೋಗ ವಸ್ತುಗಳನ್ನು ವರದಕ್ಷಿಣೆಯ ರೂಪದಲ್ಲಿ ಕೇಳುವ ಪ್ರವೃತ್ತಿ ಗಣನೀಯ ಪ್ರಮಾಣದಲ್ಲಿ ಏರುತ್ತಿದೆ. ಇದು ಸಾಮ್ರಾಜ್ಯಶಾಹಿಯಿಂದ ಪೋಷಿತಗೊಂಡಿರುವ ಉಪಭೋಗಿ ಸಂಸ್ಕೃತಿಯ ಬೆಳವಣಿಗೆಯ ಪ್ರತೀಕವಾಗಿದೆ. ವರದಕ್ಷಿಣೆಯೊಂದು ಅನಿವಾರ್ಯವಾದ ಅನಿಷ್ಟವೆಂದು ಪ್ರಚಾರ ಮಾಡುವ ಸಮುದಾಯಗಳು ಅದನ್ನು ನಾನಾ ರೀತಿಯ ವಾದಗಳ ಮೂಲಕ ಸಮರ್ಥಿಸುತ್ತಿವೆ. ಇದರಿಂದಾಗಿ ಇದು ಎಲ್ಲಾ ಜಾತಿ, ವರ್ಗ ಮತ್ತು ಸಂಸ್ಕೃತಿಗಳೊಳಗೂ ಬಹಳ ವೇಗವಾಗಿ ಹಬ್ಬಲು ಕಾರಣವಾಗಿದೆ. ಶ್ರೀಮಂತ ವರ್ಗ, ಮೇಲ್ ಮಧ್ಯಮವರ್ಗ, ಮಧ್ಯಮವರ್ಗಗಳು ವರದಕ್ಷಿಣೆಯನ್ನು ಪೋಷಿಸುವಲ್ಲಿ ತಮ್ಮ ಕೊಡುಗೆಯನ್ನು ಅವಿರತವಾಗಿ ನೀಡುತ್ತಿವೆ. ವರದಕ್ಷಿಣೆಯ ಸಮಸ್ಯೆ ವಿವಾಹವಾಗುವ ಗಂಡಿನ ಹಾಗೂ ಆತನ ತಂದೆ ತಾಯಿಗಳ ಧೋರಣೆಗಳಿಂದ ಮಾತ್ರ ನಿರ್ಮಿತವಾದಂಥದ್ದಲ್ಲ.

> "ಕೆಲವೊಮ್ಮೆ ಮದುವೆಯಾಗುವ ಹೆಣ್ಣುಗಳಿಗೆ/ಹೆಣ್ಣು ಹೆತ್ತ ತಂದೆ ತಾಯಿಗಳಿಗೆ ಸಾಮಾಜಿಕ ಸ್ಥಾನಮಾನಗಳ ಬಗೆಗೆ ಇರುವ ಭ್ರಮೆಗಳಿಂದಾಗಿ ಹೆಣ್ಣು ಮಕ್ಕಳ ಮದುವೆ ಕಷ್ಟ ಸಾಧ್ಯವಾಗುವುದುಂಟು. ಡಾಕ್ಟರ್, ಇಂಜಿನಿಯರ್, ಹಸಿರುಕಾರ್ಡ್ ವರನನ್ನು ಮದುವೆ ಯಾಗಬೇಕೆಂಬ ಇಲ್ಲವೆ, ಅಂತಹವನನ್ನು ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂಬ ಹುಚ್ಚು ಈ ಸಮಸ್ಯೆಯನ್ನು ಮತ್ತಷ್ಟು ಗಂಭೀರಗೊಳಿಸಿದೆ." (ಗಾಯತ್ರಿ ಎನ್: ೧೯೯೬ ; ೭೬)

ಹಲವು ಮೂಲೆಗಳಿಂದ ಪೋಷಿತಗೊಂಡು ವರ್ತಮಾನದ ಸಮಾಜಗಳಲ್ಲಿ ಕೂಡ ಜ್ವಲಂತವಾಗಿ ಕಾಡುವ ವರದಕ್ಷಿಣೆ ಪದ್ಧತಿಯ ಬೇರುಗಳನ್ನು ಸುಲಭವಾಗಿ ನಿರ್ನಾಮಗೊಳಿಸುವುದು ಸಾಧ್ಯವಿಲ್ಲ. ಇಂಡಿಯಾದ ಸಂಸ್ಕೃತಿಯಲ್ಲಿ ಅಭಿವ್ಯಕ್ತಗೊಳ್ಳುವ ವರದಕ್ಷಿಣೆಯ ಪದ್ಧತಿಯು ಅದರ ಅಂತರ್‌ರಚನೆಯ ಆವರಣದಲ್ಲಿ ಹಲವು ಮೂಲಭೂತ ಜಿಜ್ಞಾಸೆಗಳನ್ನು ಮುಂದಿಡುತ್ತದೆ.

ಅ) ಸಮಾಜಗಳಲ್ಲಿ ಅವಿರತವಾಗಿ ಕಂಡು ಬರುತ್ತಿರುವ ವರದಕ್ಷಿಣೆ ಸಾವುಗಳು ಹೆಣ್ಣಿನ ತಂದೆ ತಾಯಿಗಳಿಗೆ ವರದಕ್ಷಿಣೆಯ ಕರಾಳತೆಯನ್ನು ಪರಿಚಯಿಸುವಲ್ಲಿ ಸೋಲುತ್ತಿರುವುದು.

ಆ) ಮಕ್ಕಳನ್ನು ಓದಿಸಿ ಆರ್ಥಿಕವಾಗಿ ಸ್ವತಂತ್ರಗೊಳಿಸಬೇಕಾದದ್ದು ಹೆತ್ತವರ ಕರ್ತವ್ಯ ಎನ್ನುವುದನ್ನು ಹೆಣ್ಣು ಮಕ್ಕಳಿಗೂ ಅನ್ವಯಗೊಳಿಸುವಲ್ಲಿ ವಿದ್ಯಾವಂತ ತಂದೆಯರ ಅರಿವು ಪುನರ್ ವ್ಯಾಖ್ಯಾನ ಗೊಳ್ಳಬೇಕಾದದ್ದು.

ಇ) ಹೆತ್ತವರು ಕಷ್ಟ ಪಟ್ಟು ಹೊಂದಿಸುವ ವರದಕ್ಷಿಣೆ ಅವರ 'ಕನ್ಯಾಸೆರೆ'ಯನ್ನು ಬಿಡಿಸಬಹುದು. ಆದರೆ ಸ್ತ್ರೀಗೆ ಆಸರೆಯಾಗಿ, ಭವಿಷ್ಯದ ಭದ್ರತೆಯ ಆಕರ (Source)ವಾಗಿ ಪರಿಣಮಿಸದಿರುವುದು.

ಈ) 'ವಿವಾಹ ಸಂಸ್ಥೆ'ಯನ್ನು ಮಾರುಕಟ್ಟೆಯ ಅನಿವಾರ್ಯ ಅಂಶವಾಗಿ ನೋಡುವ ಸಮಾಜದ ದೃಷ್ಟಿಕೋನವು ವರ್ಷಗಳು ಉರುಳಿದಂತೆ ಸುಭದ್ರಗೊಳ್ಳುತ್ತಿರುವುದು.

ಈ ಎಲ್ಲ ಅಂಶಗಳಿಂದ 'ವಿವಾಹ' ಮಾತ್ರ ವರದಕ್ಷಿಣೆಯನ್ನು ಸಂಪ್ರದಾಯದ ನೆಲೆಯಲ್ಲಿ ಪೋಷಿಸುವ 'ಪ್ರತಿಗಾಮಿ' ವ್ಯವಸ್ಥೆಯಾಗಿದೆ ಎಂಬುದು ನಿರ್ಧರಿತವಾಗುತ್ತದೆ. ವರದಕ್ಷಿಣೆಯ ಸ್ವರೂಪವನ್ನು ವಿವಾಹವು ಸ್ಪಷ್ಟವಾಗಿ ಕಟ್ಟಿರುವುದು ಕೂಡ 'ಪ್ರತಿಗಾಮಿ' ಆಶಯದಲ್ಲಿ ಮತ್ತು ಪುರುಷನಿಷ್ಠ 'ಗೃಹವಾದಿನಿ' ಪ್ರತಿಮೆಗಳಲ್ಲಿ ಎನ್ನುವುದು ಸ್ಪಷ್ಟವಾಗುತ್ತದೆ. ವರದಕ್ಷಿಣೆಯ ಹಿನ್ನೆಲೆಯಲ್ಲಿ ಗಮನಿಸಬೇಕಾದ ಅನಿವಾರ್ಯ ಪರಿಸ್ಥಿತಿ ಆಯಾ ಕುಟುಂಬದ ಸ್ವರೂಪಗಳಲ್ಲಿದೆ. ಇದನ್ನು ಮಧುಕೀಶ್ವರ್ 'ಮಾನುಷಿ' ಪತ್ರಿಕೆಯಲ್ಲಿ ಹೇಳುವಂತೆ :

> "ಹಾಗೊಂದು ವೇಳೆ, ಒಬ್ಬಳು ಹೆಂಗಸು ತನ್ನ ಜೀವನವನ್ನು ತಾನೇ ನಿಯಂತ್ರಿಸುವ ಶಕ್ತಿ ಪಡೆದಿದ್ದಲ್ಲಿ ವರದಕ್ಷಿಣೆಯನ್ನು ಪಡೆಯುವುದರಿಂದ ಅವಳಿಗೆ ನಷ್ಟವೇನೂ ಆಗುವುದಿಲ್ಲ. ಅತ್ತೆ ಮನೆಯವರು ಕೀಳಾಗಿ ನಡೆಸಿಕೊಂಡರೆ ಹೇಗೆ ಪ್ರತಿಭಟಿಸಬೇಕು ಎಂದು ಅವಳಿಗೆ ಗೊತ್ತಿರುತ್ತದೆ. ತನ್ನ ಹಿತಾಸಕ್ತಿಗಳನ್ನು ಅವಳು ಕಾಯ್ದುಕೊಳ್ಳಬಲ್ಲಳು. ತೀರಾ ಅವಶ್ಯಕತೆ ಬಂದರೆ ತನ್ನ ವರದಕ್ಷಿಣೆಯ ಮೊತ್ತವನ್ನು ಹಿಂತೆಗೆದುಕೊಂಡು ಹೊರನಡೆಯಬಲ್ಲಳು. ಈ ಸಂದರ್ಭದಲ್ಲೇ ನಮ್ಮ ಸುಪ್ರೀಮ್‌ಕೋರ್ಟು ವರದಕ್ಷಿಣೆಯನ್ನು 'ಸ್ತ್ರೀಧನ' ಎಂದು ಹೇಳುವಾಗ ಆ 'ಧನ'ದ ಮೇಲೆ 'ಸ್ತ್ರೀ'ಗೆ ನಿಯಂತ್ರಣ ಇದೆ ಎಂದು ಔಪಚಾರಿಕವಾಗಿಯಾದರೂ ಒಪ್ಪಿದಂತಾಯಿತು." (ಮೀರಾ ಎಲ್. ಜಿ. (ಅನು): ೧೯೯೭; ೮೨ ೮೩)

ವಿವಾಹ ಮತ್ತು ಕುಟುಂಬದ ವ್ಯಾಪ್ತಿಯಲ್ಲಿ, ಗೃಹವಾದಿನಿ ಜೀವನ ಕ್ರಮದೊಳಗೆ 'ಆಚರಣೆ' ಮತ್ತು 'ಸಾಂಪ್ರದಾಯತೆ'ಯ ನಡುವೆ ಅಪಾರ ಅಂತರವಿದೆ. ಇದು ಗ್ರಾಮೀಣ ಮಹಿಳೆಯರು, ಮಧ್ಯಮವರ್ಗದ ಮಹಿಳೆಯರು, ಮೇಲ್ ಮಧ್ಯಮವರ್ಗ, ಶ್ರೀಮಂತ ವರ್ಗದ ಮಹಿಳೆಯರಿಗೆ ಸಂಬಂಧಿಸಿದಂತೆ ಹಲಹತ್ತು ಸ್ವರೂಪಗಳಲ್ಲಿ ಮರುವ್ಯಾಖ್ಯಾನವನ್ನು ಬಯಸುವ ಅಂಶವಾಗಿದೆ.

**ಅ) ಹೆಂಡತಿಯನ್ನು ಹೊಡೆಯುವುದು:** ಗೃಹವಾದಿನಿ ಬದುಕಿನ ರಚನೆಯಲ್ಲಿ ಪರಾವಲಂಬನೆ ಎನ್ನುವುದು ಒಳವಿನ್ಯಾಸವನ್ನು ಪಡೆದಿದೆ. ಶೋಷಣೆ ಎನ್ನುವ ತಾತ್ವಿಕ ಆಕೃತಿ ರೂಪುಗೊಳ್ಳುವುದೇ ಅಧಿಕಾರದ ತಾತ್ವಿಕ ಪ್ರನಾಳಿಕೆಯಲ್ಲಿ :

"ಅಧಿಕಾರ ಮತ್ತು ಅದರ ವಿರುದ್ಧದ ಸ್ವಾತಂತ್ರ್ಯ ಈ ಎರಡರ ಸ್ವರೂಪವನ್ನು ನಿರ್ಧರಿಸುವ ಕ್ರಮದಿಂದಲೇ ಸಂಸ್ಕೃತಿ ಮೀಮಾಂಸೆಯ ಪರಿಕಲ್ಪನೆಗಳೂ ನಿರ್ಧಾರವಾಗುತ್ತವೆ. ಕಳೆದ ೧೫೦ ವರ್ಷಗಳಿಂದ ಪಶ್ಚಿಮದ ತತ್ವಜ್ಞಾನದಲ್ಲಿ ಮಾರ್ಕ್ಸ್, ಗ್ರಾಮ್ಷಿ, ಫ್ಯೂಕೋ ಮುಂತಾದವರು ಅಧಿಕಾರವನ್ನು ವ್ಯಾಖ್ಯಾನಿಸಿದ ರೀತಿ ನಮ್ಮ ಮೇಲೂ ಆಳವಾಗಿ ಪ್ರಭಾವ ಬೀರಿದೆ. ಅಧಿಕಾರ ಎನ್ನುವುದು ಭೌತಿಕ ಜಗತ್ತಿನ ಶಕ್ತಿಕೇಂದ್ರಗಳ ಸ್ವಾಮ್ಯದಿಂದ ಹೊಮ್ಮುವಂಥದು. ಅಂದರೆ, ಮುಖ್ಯಾಧಿಕಾರ ಎನ್ನುವುದು ಪ್ರಭುತ್ವ ಮತ್ತು ಸಂಪನ್ಮೂಲಗಳಿಂದ ಹುಟ್ಟಿ ನಂತರ ಇಡೀ ಸಮಾಜಕ್ಕೆ ವ್ಯಾಪಿಸುತ್ತದೆ. ಇದನ್ನೇ ಗ್ರಾಮ್ಷಿ 'ಯಜಮಾನಿಕೆ' ಅಥವಾ 'ಹೆಜಿಮಾನಿ' ಎನ್ನುತ್ತಾನೆ. ಶೋಷಿತನ, ತುಳಿತಕ್ಕೆ ಒಳಗಾದವನ ಸ್ವಾತಂತ್ರ್ಯ, ಅಧಿಕಾರದ ಬಗ್ಗೆಯೂ ಚರ್ಚೆ ಇದ್ದರೂ, ಅದು ಆಳುವವನ ಅಧಿಕಾರದ ಜತೆಗೆಯೇ ಸಮೀಕರಣಗೊಂಡಿರುತ್ತದೆ. ದಂಗೆ ಎದ್ದವರ ಅಧಿಕಾರ ಹುಟ್ಟುವುದು ಆಳುವವರ ವಿರೋಧವಾಗಿ; ಹೆಚ್ಚು ಕಡಿಮೆ ಆದರೆ, ಶೋಷಿತ ಸಮೂಹದ ಅಧಿಕಾರ ತುಂಬ ಸೀಮಿತ ಎಂಬ ಕಲ್ಪನೆ ಒಂದು ಬಗೆಯ ಅಧೀನತೆಯನ್ನು ಹುಟ್ಟಿಸಬಲ್ಲದು." (ನಾಗರಾಜ್ .ಡಿ.ಆರ್. : ೧೯೯೭; ೧೪೨,೧೪೩)

ಗೃಹವಾದಿನಿಯ ಬದುಕಿನ ಸ್ವರೂಪದಲ್ಲಿ ಮಾನಸಿಕ (Mentally)ಹಾಗೂ ಭಾವನಾತ್ಮಕ(Emotionally)ವಾಗಿ ಪತಿಯನ್ನು ಅವಲಂಬಿಸುವುದರಿಂದ ಪತಿಯ ಅಧಿಕಾರ ವ್ಯಾಪ್ತಿ ವಿಶಾಲವಾಗಿರುತ್ತದೆ. ಇದರಲ್ಲಿ ಗೃಹಿಣಿಯ ಬದುಕು ಹೆಚ್ಚು ಸೀಮಿತತೆಗೆ ಒಳಪಡುತ್ತದೆ. (ಸ್ತ್ರೀಯರನ್ನು 'ಅಬಲೆ' ಎಂಬ ಗುಣ ವಿಶೇಷಗಳಿಂದ ಶತಮಾನಗಳಿಂದಲೂ ಪೋಷಿಸಿಕೊಂಡು ಬಂದಿರುವ ಕಾರಣದಿಂದಾಗಿ (ಎಂದರೆ, ಪುರುಷನ ಸ್ನಾಯುಬಲ ಅಧಿಕ, ಸ್ತ್ರೀಯ ಬಲ ದುರ್ಬಲ) ಇಂಥ ಸ್ನಾಯು ಬಲದ 'ವಿಧಾಯಕ' (Altement) ಉಪಯೋಗವನ್ನು ಪುರುಷರು ಪಡೆದುಕೊಳ್ಳುತ್ತಾರೆ. ಮತ್ತು ಕುಟುಂಬಗಳಲ್ಲಿ ಅದರ ಉಪಯೋಗವನ್ನು ಹೊಂದಿರುವವರಾಗಿದ್ದಾರೆ.) ಹೆಂಡತಿಯನ್ನು ಹೊಡೆಯುವುದು ಗಂಡನ ಹಕ್ಕು ಎಂಬಂಥ ನಿರ್ವಚನಗಳನ್ನು ಹುಟ್ಟು ಹಾಕಿ ಪೋಷಿಸುವ ಸಮಾಜದಲ್ಲಿ ಹೆಂಡತಿಯನ್ನು ಹೊಡೆದು, ದಂಡಿಸುವುದು 'ಗಂಡಸುತನ'ದ ಸಂಕೇತವಾಗುತ್ತದೆ. ಹೊಡೆಸಿಕೊಂಡು, ದಬ್ಬಾಳಿಕೆಯನ್ನು ದಯನೀಯವಾಗಿ ಸಹಿಸುವ ಹೆಂಡತಿ ಪತಿವ್ರತೆ ಎನಿಸುತ್ತಾಳೆ. ಪುರುಷಾಧಿಪತ್ಯದ ಮೌಲ್ಯಗಳನ್ನಾಧರಿಸಿದ ವಿವಾಹವು ಸ್ತ್ರೀ ಮತ್ತು ಪುರುಷರ ನಡುವಿನ ದಮನಕಾರಿ ಸಂಬಂಧವನ್ನು ಹೀಗೆ ದೃಢವಾಗಿ ಸ್ಥಾಪಿಸುತ್ತದೆ. ಹೆಂಡತಿಯನ್ನು ಹೊಡೆಯುವುದೆಂದರೆ, ಏನೂ ಮಹತ್ವವಿಲ್ಲದ ಅತಿ ಸಾಮಾನ್ಯ ವಿಚಾರವೆನಿಸುತ್ತದೆ. (ಎಂದರೆ, ಪೋಲಿಸರು ಇದನ್ನು ಒಂದು ಅಪರಾಧವೆಂದು ದಾಖಲಿಸಲೂ ನಿರಾಕರಿಸುತ್ತಾರೆ.) ಆದರೆ, ಸೂಕ್ಷ್ಮವಾಗಿ ಪರಿಶೀಲಿಸಿದರೆ, ಪುರುಷರಲ್ಲಿ ಸ್ನಾಯುಬಲ ಅಧಿಕವಿರದೆ ಆಕ್ರಮಣಶೀಲ ಗುಣ ಅಧಿಕವಿರುತ್ತದೆ. (ಚರಿತ್ರೆಯ ಸಂಕಥನಗಳು ಸಮಾಜದಲ್ಲಿಯ ಶ್ರೇಷ್ಠ ಸ್ಥಾನವನ್ನು ಭದ್ರಪಡಿಸಲು ಇಂಥ ಆಕ್ರಮಣ ಪ್ರವೃತ್ತಿಯನ್ನು ಬಳಸುತ್ತಿರುವುದನ್ನು ಸಾಬೀತು ಪಡಿಸುತ್ತವೆ.) ಕುಟುಂಬದ ಒಳಗೆ ಇದನ್ನು ಸ್ತ್ರೀಯರ ಮೇಲೆ ಪ್ರಯೋಗಿಸಲಾಗುತ್ತದೆ. ವಾಸ್ತವವಾಗಿ ಗೃಹಿಣಿ ಅಬಲೆಯಾಗಿರುವುದು ಶಾರೀರಿಕ ಕಾರಣದಿಂದಲ್ಲ. ಬದಲಾಗಿ, ಅವಳಲ್ಲಿ ಆಕ್ರಮಣ ಪ್ರವೃತ್ತಿಯ ಅಭಾವ ಇರುವುದರಿಂದ. ಕೃಷಿ ಪ್ರಧಾನ ಕುಟುಂಬಗಳಲ್ಲಿ ಗೃಹಿಣಿ ಅಧಿಕ ಶ್ರಮ, ಸಾಕಷ್ಟು ಉತ್ಪಾದನೆ ಮಾಡುವವಳಾಗಿರುತ್ತಾಳೆ. ಆದರೂ

ಅವಳು ಅಬಲೆ ಎಂದು ಪರಿಗಣನೆಗೆ ಒಳಗಾಗುತ್ತಾಳೆ. ಇದಕ್ಕೆ ಮುಖ್ಯ ಕಾರಣ, ಪತಿಯ ವಿರುದ್ಧ ಆಕೆ ಬಲ ಪ್ರದರ್ಶನವನ್ನು ಮಾಡಲೇ ಬಾರದು. ಅದು ಮಹಾ ಪಾಪಕಾರ್ಯ ಎನ್ನುವ ಪಿತೃ ಸಮಾಜ ನಿರ್ಣಯಕ್ಕೆ ಗೃಹಿಣಿ 'ಮೆದುಳುತೊಳಸಿ' (Brain Wash)ಕೊಂಡಿರುವುದು. ಅವಳ ವಿಚಾರ ಸರಣಿಯನ್ನು ಇದು ಸಂಪೂರ್ಣ ನಿಯಂತ್ರಿಸುತ್ತಿರುವುದರಿಂದ ಗಂಡ ಹೊಡೆಯುತ್ತಿದ್ದರೆ ಹೆಂಡತಿ ಪ್ರತಿಭಟಿಸುವುದಿಲ್ಲ. ಕುಟುಂಬ ಸಂಸ್ಥೆಯನ್ನು ಹೊರತು ಪಡಿಸಿ ಸ್ತ್ರೀಗೆ ಜೀವಿಸುವ ಪರ್ಯಾಯ ವ್ಯವಸ್ಥೆ ಇಲ್ಲ, ಪತ್ನಿಯನ್ನು ದಂಡಿಸುವ ಹಕ್ಕು ಪತಿಗೆ ಇದೆಯೆಂದು ಗೃಹಿಣಿ ಸಹಿಸುವುದು ವ್ಯಕ್ತವಾಗುತ್ತದೆ. ಸ್ತ್ರೀ- ಪುರುಷ ಎಂಬ ಕೃತಿಯಲ್ಲಿ ಛಾಯಾ ದಾತಾರ್ ವ್ಯಾಖ್ಯಾನಿಸುವಂತೆ :

> "ಪಕ್ಷಿ ಕುಲದ ಹೆಣ್ಣು-ಗಂಡು ಗೂಡುಕಟ್ಟುವಂತೆಯೇ ಮಾನವ ಜಾತಿಯ ಹೆಣ್ಣು -ಗಂಡುಗಳು ಗೃಹವೆಂಬ ಗೂಡನ್ನು ಕಟ್ಟುತ್ತವೆ. 'ಈ ಗೂಡು ಎಂದರೆ ಕುಟುಂಬ ಸಂಸ್ಥೆ' ಎಂದು ಅದರ ಗುಣಗಾನ ನಡೆಯುತ್ತದೆ. ಪಕ್ಷಿಗಳಲ್ಲಿ ಮಾತ್ರ ಮನುಷ್ಯರಂತೆ ಅಸಮಾನತೆ ಇರುವುದಿಲ್ಲ ಎಂಬ ಸಂಗತಿ ಮರೆಯಬಾರದು. ಕುಟುಂಬ ಸಂಸ್ಥೆಯ ನೆರಳನ್ನೇ ನಂಬಿ ವಾಸ್ತವವನ್ನು ಮರೆತು ಸ್ತ್ರೀಯು ಬಾಳುತ್ತಿರುತ್ತಾಳೆ. ಆದರೆ ಪುರುಷನು ಹಾಗೆ ಇರುವುದಿಲ್ಲ. ಆತನ ಒಂದು ಹೆಜ್ಜೆ ಮನೆಯೊಳಗೆ ಇದ್ದರೆ, ಇನ್ನೊಂದು ಮನೆಯ ಹೊರಗೆ ಇರುತ್ತದೆ." (ಸರಸ್ವತಿರಿಸ ಬೂಡ: (ಸಂ) ೧೯೯೨ ; ೬೨)

ಅತಿ ಸೀಮಿತ ವರ್ತುಲದೊಳಗೆ ಬದುಕುವ ಗೃಹವಾದಿನಿಯ ವ್ಯಕ್ತಿತ್ವ ಸಂಕುಚಿತವಾಗಿರುತ್ತದೆ. ಹೊರ ಜಗತ್ತಿನ ಸ್ಪಷ್ಟ ಕಲ್ಪನೆಯ ಕೊರತೆಯಿಂದಾಗಿ ಗೃಹವಾದಿನಿಯ ಮನಸ್ಥಿತಿ, ಆರ್ಥಿಕ, ಲೈಂಗಿಕ, ಮಾನಸಿಕ ಈ ಕಾರಣಗಳಿಂದಾಗಿ ಅವಳ ವ್ಯಕ್ತಿತ್ವದಲ್ಲೇ ದ್ವಂದ್ವಗಳಿರುತ್ತವೆ. ಪುರುಷನ ಮದ್ಯಪಾನ ಮತ್ತು ಹೆಂಡತಿಯನ್ನು ಹೊಡೆಯುವುದು ಏಕಮುಖ ಸಮಸ್ಯೆಗಳಾಗಿವೆ. ಮದ್ಯವ್ಯಸನಿ ಪತಿ ಹೆಂಡತಿಯಾದವಳನ್ನು ಹೊಡೆಯುವುದು ಮಾತ್ರವಲ್ಲ ದೈಹಿಕವಾಗಿ ಮತ್ತು ಮಾನಸಿಕವಾಗಿ ಶೋಷಿಸುತ್ತಿರುವುದು ಗಂಡಸಿನ ಅಧಿಕಾರದ ವಿಧ್ವಂಸಕತೆಯ ದ್ಯೋತಕವಾಗಿದೆ.

**ಇ) ಲೈಂಗಿಕತೆಯ ನಿಯಂತ್ರಣ** : ವಿವಾಹದ ಚೌಕಟ್ಟಿನಲ್ಲಿ ಲೈಂಗಿಕತೆಯು ಎರಡು ಪ್ರಮುಖ ಅಂಶಗಳಿಂದ ನಿರ್ಧಾರಗೊಳ್ಳುತ್ತದೆ.

೧) ಪರಸ್ಪರರ ಅನುಮತಿ. ಎಂದರೆ ಗಂಡು ಹೆಣ್ಣಿನ ಪರಸ್ಪರ ಒಪ್ಪಿಗೆ.

೨) ಆಯಾ ಸಮುದಾಯಗಳ ಸಮ್ಮತಿ. ಎಂದರೆ ವಿವಾಹಕ್ಕೆ ಒಳಪಡುವ ವ್ಯಕ್ತಿಗಳು ವಿಶ್ವಾಸಕ್ಕೆ ಪಾತ್ರರೋ ಅಲ್ಲವೋ ಎಂಬುದನ್ನು ಸರ್ವಾನುಮತದಿಂದ ನಿರ್ಣಯಿಸುವ ಪಂಗಡದವರ ಸಮ್ಮತಿ.

ವಿಸ್ತೃತ ಅರ್ಥಗ್ರಹಿಕೆಯಲ್ಲಿ ಕುಟುಂಬ ಸಂಸ್ಥೆಯ ಉದ್ದೇಶ ಪತಿ-ಪತ್ನಿಯರ ಲೈಂಗಿಕ ಸುಖದ ಅವಶ್ಯಕತೆಯು ಪೂರೈಕೆಯಾಗಬೇಕು ಎನ್ನುವುದು. ಆದರೆ ಪುರುಷನ ಲೈಂಗಿಕ ಬಯಕೆಯನ್ನು ಮಾತ್ರ ಗೃಹವಾದಿನಿ ಪ್ರತಿಮೆ ಪೋಷಿಸಿ ಸ್ತ್ರೀಯ ಲೈಂಗಿಕತೆಯನ್ನು ನಿರ್ಮೂಲನಗೊಳಿಸುವ ಮಿಥ್ಯ ಗ್ರಹಿಕೆಗಳನ್ನು ಮಾನ್ಯ ಮಾಡಲಾಗುತ್ತಿದೆ. ಗೃಹವಾದಿನಿ ಎಂದರೆ, ಪತಿಗೆ ಬೇಕಾದಾಗ ಬಳಸಲು ಉಪಲಬ್ಧವಿರುವ ಸ್ತ್ರೀ ಶರೀರ ಎಂಬುದಾಗಿ ಪುರುಷ ನಿಷ್ಠ ವ್ಯವಸ್ಥೆಯು ಪರಿಭಾವಿಸುತ್ತದೆ. ಇದರಿಂದ ಆಕೆಯ ಅಗತ್ಯ ಸಮ್ಮತಿಗಳನ್ನು ಅನುಲಕ್ಷಿಸಿ, ಇಚ್ಛೆಗೆ ವಿರುದ್ಧವಾಗಿ

ಸ್ತ್ರೀ ದೇಹವನ್ನು ಉಪಯೋಗಿಸುವ ಅಧಿಕಾರವನ್ನು ಗಂಡನೆಂಬ ಪುರುಷನಿಗೆ ಗೃಹವಾದಿನಿ ಪ್ರತಿಮೆ ಒದಗಿಸುತ್ತದೆ.

> "ಇದರಲ್ಲಿಯ ರಹಸ್ಯವನ್ನು ಅರ್ಥಮಾಡಿಕೊಳ್ಳುವುದು ಕಠಿಣ. ಏಕೆಂದರೆ, ಈವರೆಗೆ ನಾವು 'ಕುಟುಂಬ ಸಂಸ್ಥೆ' ಎಂದರೆ ಆದರ್ಶಪೂರ್ಣ ಮಾತಾಗಿ ಭಾವನಾತ್ಮಕ ದೃಷ್ಟಿಯಿಂದ ಕಾಣುತ್ತಾ ಬಂದಿದ್ದೇವೆ. ಎಲ್ಲಿಯವರೆಗೆ ಸ್ತ್ರೀಯು ತನ್ನ ಸ್ವಂತ ಲೈಂಗಿಕ ಇಚ್ಛೆಯನ್ನು ಪ್ರದರ್ಶಿಸುವುದಿಲ್ಲವೋ, ಸ್ವಂತದ ಬೇಕು ಬೇಡಗಳನ್ನು ನಿಖರವಾಗಿ ಹೇಳುವುದಿಲ್ಲವೋ, ಏಕನಿಷ್ಠೆ, ಪಾತಿವ್ರತ್ಯ ಎಂಬ ಕಲ್ಪನೆಗಳಲ್ಲಿ ಹುದುಗಿಕೊಂಡು ಪುರುಷನಿಗೆ ಬೇಕು ಬೇಕಾದಾಗ ಶರೀರ ಸುಖವನ್ನು ತಕರಾರು ಮಾಡದೇ ಪೂರೈಸುತ್ತಾಳೋ ಅಲ್ಲಿಯವರೆಗೆ ಸ್ತ್ರೀಯ ಶರೀರದ ಮೇಲೆ ಪುರುಷನ ಒಡೆತನವು ಅಬಾಧಿತವಾಗಿ ಉಳಿಯುತ್ತದೆ. ಇದು ಕುಟುಂಬ ಸಂಸ್ಥೆಯ ಚೌಕಟ್ಟಿನಲ್ಲಿಯೇ ಎಂಬುದು ಸ್ಪಷ್ಟ." (ಸರಸ್ವತೀ ರಿಸಬೂಡ (ಅನು) : ೧೯೯೨ ; ೮೧)

ಛಾಯಾದಾತಾರ್ ಅವರ ಮೇಲಿನ ಅಭಿಪ್ರಾಯವು ಗೃಹವಾದಿನಿಯ ಲೈಂಗಿಕತೆಯ ಮೇಲೆ ನಿರ್ಬಂಧಗಳನ್ನು ಹಾಕಿ ಅವಳನ್ನು ಸಾಮರ್ಥ್ಯಹೀನಳನ್ನಾಗಿ ಮಾಡುವ ಸೂಕ್ಷ್ಮತೆಗಳನ್ನು ಅನಾವರಣಗೊಳಿಸುತ್ತದೆ.

ಗೃಹವಾದಿನಿಯ ಲೈಂಗಿಕ ನಿರ್ಬಂಧನೆಯನ್ನು ಕುಟುಂಬವು ಹಲವು ಅಂಶಗಳಿಂದ ಪೋಷಿಸುತ್ತದೆ. ಅವುಗಳೆಂದರೆ ;

೧) ವಿವಾಹದ ಮೊದಲು ಶೀಲ (Vorginity)ವನ್ನು ಕಾಪಾಡಿಕೊಳ್ಳುವುದು.

೨) ಶೀಲದ ಪರಿಕಲ್ಪನೆಯನ್ನು ಧಾರ್ಮಿಕ ನೈತಿಕತೆಯ ನೆಲೆಯಲ್ಲಿ ಅನುಷ್ಠಾನಗೊಳಿಸುವುದು.

೩) ಪತಿಯಾದವನಿಗೆ ಪವಿತ್ರ ಶರೀರ ಒಪ್ಪಿಸುವುದು.

೪) ಏಕಪತಿ ನಿಷ್ಠಳಾಗಿರುವುದು.

೫) ವಿಧವೆಯಾದ ನಂತರವೂ ಪುನರ್ವಿವಾಹದ ಅಪೇಕ್ಷೆಯನ್ನು ನಿಗ್ರಹಿಸಿಕೊಳ್ಳುವುದು.

ಈ ಅಂಶಗಳೆಲ್ಲವೂ ಗೃಹವಾದಿನಿಗೆ ಸ್ವ ಸುಖದ ಇಚ್ಛೆ ಇರುತ್ತದೆ ಎನ್ನುವುದನ್ನು ನಿರಾಕರಿಸುತ್ತವೆ. ಅಲ್ಲದೆ, ಸ್ತ್ರೀ-ಪುರುಷರ ಶರೀರ ಸಂಬಂಧಗಳನ್ನು ವಿಶಾಲ ದೃಷ್ಟಿಯಿಂದ ನೋಡುವುದನ್ನು ಹತ್ತಿಕ್ಕುತ್ತವೆ.

**ಈ) ಜನನ ಕ್ಷಮತೆ:** 'ಗೃಹವಾದಿನಿ' ಬದುಕಿನಲ್ಲಿ ಗಂಡನಿಗೆ ದೇಹವನ್ನು ಅರ್ಪಿಸಿ ಕೇವಲ ಭೋಗವಸ್ತುವಾಗಿ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುವುದು ಒಂದು ಮುಖವಾಗಿದ್ದರೆ, ಮಕ್ಕಳಿಗೆ ಜನ್ಮ ಕೊಟ್ಟು ಸಂತಾನವನ್ನು ಹೆರುವ, ಹೊರುವ ಕ್ಷಮತೆಯು ಮತ್ತೊಂದು ಮುಖ. ಇದರಿಂದಾಗಿ ಮಾತೃತ್ವವು ಗೃಹವಾದಿನಿ ಜೀವನದ ಶಕ್ತಿ ಸ್ಥಾನ. ಪತಿಯು ಅವಳಿಗೆ ಮಾತೃತ್ವವನ್ನು ನೀಡುವ ಕಾರಣದಿಂದ ಆಕೆ ಅವನ ಅಧಿಕಾರವನ್ನು ಮಾನ್ಯ ಮಾಡಬೇಕಾಗುತ್ತದೆ. ಪತಿಯ ಅಧಿಕಾರವೇ ಗೃಹವಾದಿನಿಯ ಜನನ ಕ್ಷಮತೆಯನ್ನು ನಿರ್ಧರಿಸುತ್ತದೆ. ಎಂದರೆ, ಸಂತಾನದ ನಿರ್ಣಯದ ಸಾರ್ವಭೌಮತ್ವ ಪುರುಷ /ಪತಿಯ ಕೈಯಲ್ಲಿರುತ್ತದೆ. ಸಂತಾನದ ಸಂಖ್ಯೆಯನ್ನು ನಿರ್ಧರಿಸುವ, ಗರ್ಭಪಾತ ಮಾಡಿಸುವ, ಶಸ್ತ್ರ ಚಿಕಿತ್ಸೆ ಮಾಡಿಸುವ, ಕುಟುಂಬ ಯೋಜನೆಯನ್ನು ಅಳವಡಿಸಿಕೊಳ್ಳುವ, ಬಿಡುವ ನಿರ್ಣಯದ ಸಂಪೂರ್ಣ ಅಧಿಕಾರ ಪತಿಯ ಸ್ವಾಧೀನದಲ್ಲಿರುತ್ತದೆ. ಈ ನಿರ್ಣಯದ ಹಿಂದಿನ ಮುಖ್ಯ ಉದ್ದೇಶವೆಂದರೆ :

ಅ) ಜನನ ಕ್ಷಮತೆಯ ಬಳಕೆಯಿಂದ ವೈಯಕ್ತಿಕ ಹಕ್ಕು ಭಾಧ್ಯತೆಗಳ ಶ್ರೇಷ್ಠತೆ ಪರಂಪರಾಗತವಾಗಿ ಪುರುಷ ಸಮಾಜದಲ್ಲಿರಬೇಕು.

ಆ) ಪುರುಷನಿಷ್ಠ ಸಮಾಜವೊಂದರಲ್ಲಿ ಜನನ ಕ್ಷಮತೆಯ ನಿರ್ಣಾಯಕ ಅಧಿಕಾರದಿಂದ ವರ್ಗರಚನೆಯು ಅವಿರತವಾಗಿ ಸ್ಥಾಪಿತಗೊಳ್ಳಬೇಕು.

ಪ್ರಧಾನವಾದ ಈ ಎರಡು ಉದ್ದೇಶಗಳನ್ನು ಗೃಹವಾದಿನಿಯ ಜನನ ಕ್ಷಮತೆಯನ್ನು ನಿಯಂತ್ರಿಸುವ ಮೂಲಕ ಸಾಧಿಸಲಾಗಿದೆ. ಇಲ್ಲಿ ಲೈಂಗಿಕತೆ ಹಾಗೂ ಜನನ ಕ್ಷಮತೆಗಳ ಸಂಬಂಧ ಒಟ್ಟಾಗಿ ಕಾರ್ಯ ನಿರ್ವಹಿಸುತ್ತವೆ. ಪುರುಷನ ಕಾಮ ಪ್ರವೃತ್ತಿಗೆ ಸ್ತ್ರೀ ಪೂರೈಕೆಯಾಗಬೇಕು, ಇದು ಸಂತಾನವನ್ನು ವೃದ್ಧಿಸುವ ಕುಟುಂಬ ರಚನೆಯಲ್ಲಿ ವ್ಯಕ್ತವಾಗುವ ಅಂಶವಾಗಿದೆ. ಗೃಹವಾದಿನಿ ಬದುಕಿನಲ್ಲಿ ಕುಟುಂಬ ಸಂಸ್ಥೆಯ ಹೊರಗೆ ಸ್ತ್ರೀಯರಿಗೆ ಮಕ್ಕಳನ್ನು ಪಡೆಯುವ ಅವಕಾಶವೇ ನಿರಾಕೃತಗೊಂಡಿದೆ. (ಮಕ್ಕಳಾದರೆ ಅದು 'ಕಾನೂನು ಬಾಹಿರ ಸಂತತಿ' ಅದನ್ನು ಸಮುದಾಯ ಸ್ವೀಕರಿಸುವುದಿಲ್ಲ.) ಆದ್ದರಿಂದ ವಿವಾಹ ಪೂರ್ವ, ವಿವಾಹ ಬಾಹಿರ, ವೈಧವ್ಯದ ಸಂದರ್ಭಗಳಲ್ಲಿ ಸ್ತ್ರೀ ಲೈಂಗಿಕತೆಯನ್ನು ಅನುಭವಿಸುವಂತಿಲ್ಲ. ಮಾತ್ರವಲ್ಲ, ಲೈಂಗಿಕ ಕ್ಷಮತೆಯನ್ನು ಕೇವಲ ಜನನ ಕ್ಷಮತೆಗಾಗಿ ಮಾತ್ರ ಬಳಸಬೇಕು ಎಂಬುದನ್ನು ಸಮಕಾಲೀನ ಜಾಗತೀಕರಣದ ಸಂದರ್ಭದಲ್ಲೂ ಕುಟುಂಬ ಸಂಸ್ಥೆ ದೃಢವಾಗಿ ಸಮರ್ಥಿಸಿಕೊಳ್ಳುತ್ತದೆ.

ಗೃಹವಾದಿನಿಯ ಜನನ ಕ್ಷಮತೆಯ ನಿಯಂತ್ರಣ ಅತ್ಯಂತ ಗಂಭೀರವಾದ ವಿಚಾರವಾಗಿದೆ. ಇದರ ಕರಾಳತೆ ಪೂರ್ಣ ಬಯಲಾಗುವುದು, ಹೆಣ್ಣು ಶಿಶು ಹತ್ಯೆ (Female Infanticide) ಹೆಣ್ಣು ಶಿಶು ಭ್ರೂಣ ಹತ್ಯೆ (Female Foeticide) ಇಂತಹ ಅಮಾನವೀಯ ನೆಲೆಗಳಲ್ಲಿ. ಗಂಡು ಮಗುವಿಗೆ ಜನ್ಮ ನೀಡಬೇಕು ಎನ್ನುವ ಘೋಷಿತ- ಅಘೋಷಿತ; ಪ್ರತ್ಯಕ್ಷ-ಅಪ್ರತ್ಯಕ್ಷ ಒತ್ತಾಯಗಳು, ಸಾಂಪ್ರದಾಯಿಕ ಲಿಂಗಾಧಾರಿತ ಅಸಮಾನತೆ, ಬಡತನ, ಲೈಂಗಿಕ ದೌರ್ಜನ್ಯದ ಸ್ವರೂಪ ಇವುಗಳೆಲ್ಲವೂ ಸ್ತ್ರೀ ಭ್ರೂಣಹತ್ಯೆ, ಸ್ತ್ರೀ ಶಿಶುಹತ್ಯೆಗೆ ಕಾರಣಗಳಾಗಿವೆ. ಒಟ್ಟಿನಲ್ಲಿ ಪುರುಷ ಪ್ರಧಾನ ಸಂಸ್ಕೃತಿ 'ಗೃಹವಾದಿನಿ'ಯ ಬದುಕನ್ನು ಅಪರಿಮಿತವಾಗಿ ವೈಭವೀಕರಿಸುವುದರಿಂದ ಕುಟುಂಬ ಸಂಸ್ಥೆಯ ಏಕಮೇವ ಪ್ರತಿಮೆಯಾಗಿ ಇದು ರೂಪುಗೊಳ್ಳಲು ಸಾಧ್ಯವಾಗಿದೆ. ಸ್ತ್ರೀಯರು ಶತಮಾನಗಳಿಂದ ಗೃಹವಾದಿನಿಯ ಬದುಕನ್ನು ಒಪ್ಪಿ, ಅನುಸರಿಸುತ್ತಿರುವುದರಿಂದ ಪುರುಷ ಸಂಸ್ಕೃತಿಯ ಪ್ರಭಾವ, ಒತ್ತಡಗಳು ಇಲ್ಲಿ ಹೆಚ್ಚು ಪುಷ್ಠೀಕರಣಕ್ಕೆ ಒಳಗಾಗುತ್ತಿರುವುದು ವ್ಯಕ್ತವಾಗುತ್ತದೆ.

> "Family violence is a human development issue. It damages wives, mothors and daughters who are battered, raped, deprived of human degnity and the means to meet their basic needs. It also traumatizes the children living in these homes, where they witness or are subjected routinely to beatings, sexual and verbal abuse, and neglect. Deconstracting and Perpetuating the historically unequal power relations between genders, family violence severly impedes the full development and advancement of both men and women." (Kamlanath and Milly Chatterjee : 1996 ;4)

ಸ್ತ್ರೀತ್ವವನ್ನು ಗೃಹವಾದಿನಿ ಪ್ರತಿಮೆಯ ಮೂಲಕ ಪಿತೃಸತ್ತೆಯು ಅತ್ಯಂತ ಆಳವಾಗಿ ಮತ್ತು ಯಶಸ್ವಿಯಾಗಿ ಶತಮಾನಗಳಿಂದ ಪೋಷಿಸಿಕೊಂಡು ಬಂದಿದೆ. ಪುರುಷರನ್ನು ನಿರಾಕರಿಸಿ ಸ್ತ್ರೀಯರ ವ್ಯಕ್ತಿತ್ವವು ಪರಿಪೂರ್ಣತೆಯನ್ನು ಸಾಧಿಸುವುದು ಅಸಾಧ್ಯ ಎನ್ನುವುದನ್ನು ಸತ್ಯವೆಂಬಂತೆ ಸಾಬೀತುಗೊಳಿಸುವ ನೆಲೆಯಲ್ಲಿ 'ಗೃಹವಾದಿನಿ' ಪ್ರತಿಮೆಯನ್ನು ವೈಭವೀಕರಿಸಲಾಗಿದೆ. ಇದಕ್ಕಿಂತ ಭಿನ್ನವಾಗಿ ಜ್ಞಾನ, ಸಾಹಿತ್ಯ, ಶಾಸ್ತ್ರದ ಎಲ್ಲ ಮೂಲಗಳಿಂದಲೂ ಗೃಹವಾದಿನಿ ಪ್ರತಿಮೆಯ ಮಿಥ್ಯವನ್ನು ಒಡೆಯುವ ಪ್ರಯತ್ನ ಸ್ತ್ರೀವಾದ ಅಥವಾ ಸ್ತ್ರೀವಾದಿ ಚಳವಳಿಯ ಮೂಲಕ ಕಾಣಿಸಿಕೊಂಡದ್ದು ಚರಿತ್ರಾರ್ಹವಾಗಿದೆ. ಜಾಗತಿಕವಾಗಿ ಸಾಮಾಜಿಕ ಇತಿಹಾಸದಲ್ಲಿ ಸ್ತ್ರೀಯರ ಸ್ಥಾನ ಮತ್ತು ಅವಳ ಭೂಮಿಕೆಯ ಅರಿವು ೧೭ನೇ ಶತಮಾನದ ಉತ್ತರಾರ್ಧದಲ್ಲಿ ಅಭಿವ್ಯಕ್ತಗೊಂಡಿದೆ.

### ೫.೧.೩ 'ಸ್ವಯಂ ವಿಗ್ರಹ ಭಂಜಕಿ' : ಸ್ತ್ರೀವಾದಿ ನಿರ್ಮಿತಿಯ ಪ್ರತಿಮೆ.

'ಸ್ವಯಂ ವಿಗ್ರಹ ಭಂಜಕಿ'(Self iconoelcast) •~ 'ಸ್ವಾತಂತ್ರ್ಯ'ದ ಸಾಧ್ಯಾಸಾಧ್ಯತೆಗಳನ್ನು ತಲಸ್ಪರ್ಶಿಯಾಗಿ ಅನುಭವಿಸುವ ಮಾದರಿ. ಇದರ ಈ ಮಾದರಿಯಲ್ಲಿ 'ಗೃಹವಾದಿನಿ'ಯ ಮೌನದಲ್ಲಿ ಕಣ್ಮರೆಗೊಂಡ, 'ಗೈರು' ಹಾಜರಾದ ಬದುಕು ಸಾಕಾರ ರೂಪವನ್ನು ಪಡೆಯುತ್ತದೆ. ಸ್ತ್ರೀಯರಿಗೆ ಏನು ಬೇಕು? ಅದನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ 'ಸ್ವಯಂ ವಿಗ್ರಹ ಭಂಜಕಿ'ಗೆ ಸಾಧ್ಯವಾದರೂ ಪ್ರೇಮ- ಆ ಸಂಬಂಧಿ ಜೀವನ ಯಾವುದೂ ಇಲ್ಲದೆ ಏಕಾಂಗಿಯಾಗಿ ಬದುಕುವ ಸಂಘರ್ಷವನ್ನು 'ಸ್ವಯಂ ವಿಗ್ರಹ ಭಂಜಕಿ'ಯ ಮಾದರಿಯು ಎದುರಿಸಬೇಕಾಗುತ್ತದೆ.

> "೧೮೬೩ರ ಆದಿಯಿಂದ ಸ್ತ್ರೀ ತನ್ನನ್ನು ತಾನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಾರಂಭಿಸಿದಳು. ಆ ಕಾಲದಲ್ಲಿ ಉಚ್ಚ ಶಿಕ್ಷಣ ಪಡೆಯುವ ಹಕ್ಕು, ಸ್ವಂತ ಜೀವನವನ್ನು ರೂಪಿಸಿಕೊಳ್ಳುವ ಹಕ್ಕು, ಮತಾಧಿಕಾರದ ಹಕ್ಕುಗಳಿಗಾಗಿ ಬೇಡಿಕೆ ಇಟ್ಟಾಗ ಸ್ತ್ರೀವಾದವನ್ನು ತೀಕ್ಷ್ಣವಾಗಿ ದೂರಲಾಯಿತು. ಅಲ್ಲದೆ ಪುರುಷರ ಮತ್ಸರದಿಂದಾಗಿ ಹುಟ್ಟಿಕೊಂಡ ವಿಕೃತಿಗಳು ಬೇರೆ ಬೇರೆ ರೂಪಗಳಲ್ಲಿ ಸಂತತಿಯಾಗಿ ಸಂಭವಿಸಿದವು. ಸಮಾಜದಲ್ಲಿನ ಮಹತ್ವದ ಕಾರ್ಯಗಳಲ್ಲಿ ಸ್ತ್ರೀಯರಿಗೂ ಸಹಭಾಗಿತ್ವವಿದ್ದು, ನಿರ್ಣಯ ಪ್ರಕ್ರಿಯೆಗಳಲ್ಲಿ ಮಹತ್ವದ ಸ್ಥಾನವಿರಬೇಕು ಎಂಬ ಸ್ತ್ರೀವಾದಿ ವಿಚಾರ ಸರಣಿಯಲ್ಲಿ ವಿಸಂಗತಿಗಳಿವೆ. ಕಾರಣ ಸ್ತ್ರೀಯಾಗಿರುವುದರಿಂದ ಅವಳು ಲೈಂಗಿಕ ಸಮಾಗಮದಲ್ಲಿ ನಿಷ್ಕ್ರೀಯ ಸಹಭಾಗ ಪಡೆಯುವುದು, ಪುರುಷರ ಪ್ರಭಾವವನ್ನು ಮಾನ್ಯ ಮಾಡುವುದು, ಮಕ್ಕಳಿಗೆ ಜನ್ಮ ನೀಡುವ ಮೂಲಕ ತಾಯಿಯಾಗಿ ಅವರ ಪಾಲನೆ, ಪೋಷಣೆ ಮಾಡುವುದಷ್ಟೇ ಸ್ತ್ರೀಯರ ಪ್ರಮುಖ ಕಾರ್ಯಕ್ಷೇತ್ರವಾಗಿದೆ. ಹಾಗಾಗಿ ಸ್ತ್ರೀವಾದಿಗಳ ಈ ಬೇಡಿಕೆಗಳು ಸ್ತ್ರೀಯರು ನೈಸರ್ಗಿಕ ಸ್ವಭಾವಕ್ಕೆ ಹೊಂದಿಕೊಳ್ಳುವುದಿಲ್ಲ ಎಂಬುದಾಗಿ ಯುಕ್ತಿವಾದವನ್ನು ಮಾಡಲಾಯಿತು." (ವಿಠಲರಾವ್ ಗಾಯಕ್ವಾಡ್(ಅನು) : ೨೦೦೧ ; ೮೨)

ಸ್ತ್ರೀವಾದವು ಮುಂದಿಡುವ ಸಮಾನ ಹಕ್ಕು, ಸಮಾನ ದರ್ಜೆ ಮತ್ತು ಸ್ವಾತಂತ್ರ್ಯ ಈ ಮೂಲ ಪರಿಕಲ್ಪನೆಗಳನ್ನು ಪುರುಷ ಪ್ರಧಾನ ಮನೋಧೋರಣೆಗಳು 'ಗುಮಾನಿ'ಯಿಂದಲೇ ಪರಿಭಾವಿಸಿರುವುದು ಕಂಡು ಬರುತ್ತದೆ. ಈ ಕಾರಣಕ್ಕಾಗಿ ಸ್ತ್ರೀವಾದಿ ತರ್ಕಕ್ಕೆ ಪ್ರಜಾಪ್ರಭುತ್ವ ವ್ಯವಸ್ಥೆಯ ಒಳಗಿನಿಂದಲೇ ಅದೃಶ್ಯ ವಿರೋಧವು ರೂಪುಗೊಂಡಿದ್ದು, ಸ್ತ್ರೀಯರ 'ಅಸ್ತಿತ್ವ'ದ ಹುಡುಕಾಟವನ್ನು ಆಯಾ ಕಾಲಕ್ಕೆ ಅನುಗುಣವಾಗಿ ಗೌಣಗೊಳಿಸಲು ಆರಂಭಿಸಿದ್ದು ವ್ಯಕ್ತವಾಗುತ್ತದೆ. ಸ್ತ್ರೀ ಸಂಪೂರ್ಣ ವ್ಯಕ್ತಿತ್ವದ ಶೋಧನೆಯಲ್ಲಿ ಗೃಹವಾದಿನಿ ಪ್ರತಿಮೆಯನ್ನು ಒಡೆಯುವ ಪ್ರಯತ್ನ ನಡೆಸಿದ್ದು ಇದಕ್ಕೆ ಮುಖ್ಯ ಕಾರಣ. ಸ್ತ್ರೀ- ಪುರುಷ ಸಂಬಂಧವನ್ನು ಕಟ್ಟುವ ಗೃಹವಾದಿನಿ ಪ್ರತಿಮೆಯೊಳಗೆ ಯಾವ ಬಗೆಯ 'ಅಲಿಪ್ತತೆ'ಯನ್ನು ಪುರುಷರೊಂದಿಗೆ ಸ್ತ್ರೀಯರು ಮಾಡಿಕೊಳ್ಳಬಹುದೋ, ಆ ಬಗೆಯಲ್ಲಿ ಸ್ತ್ರೀಯರು ಅಲಿಪ್ತರಾಗಿರುವುದು ಸಾಧ್ಯವಿಲ್ಲ. ಮಾತ್ರವಲ್ಲ, ಸ್ತ್ರೀಯರು ಪುರುಷರೊಂದಿಗಿನ ವೈವಾಹಿಕ ಸ್ಥಿತಿಯಲ್ಲಿ (wedlock) ತಮ್ಮನ್ನು ಸಂಪೂರ್ಣವಾಗಿ ಸಿಲುಕಿಸಿಕೊಳ್ಳುವ ಹಾಗೂ ತಮ್ಮ ಸ್ತ್ರೀಯರ ಅಪರಿಮಿತ ಶಕ್ತಿಯನ್ನು ಪುರುಷರಿಗಾಗಿ ಪಣವಾಗಿಡುವ ದೌರ್ಬಲ್ಯವೇ ಸ್ತ್ರೀಯರ ಅಧಃಪತನಕ್ಕೆ ಕಾರಣವೆಂಬುದನ್ನು ಸ್ತ್ರೀವಾದ ಬಯಲುಗೊಳಿಸಿದೆ. ಪರಿಣಾಮವಾಗಿ, ಅವರ ಶರಣಾಗತಿಯ ಭೂಮಿಕೆಯನ್ನು ನಗದೀಕರಿಸುವುದರ (Encash) ಹಿಂದಿರುವ ಪುರುಷ ರಾಜಕಾರಣದ ಸ್ಪಷ್ಟ ಅರಿವು ಸ್ತ್ರೀಯರಿಗೆ ಉಂಟಾಗತೊಡಗಿದವು. 'ಸ್ವ'ದ ಅನ್ವೇಷಣೆಯಲ್ಲಿ ವೈವಾಹಿಕ ಸಂಬಂಧದೊಳಗಿನ ವಾಸ್ತವತೆಯನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದು, ಅಲ್ಲದೆ ವೈವಾಹಿಕ ಸಂಬಂಧದೊಳಗಿನ ಶರಣಾಗತಿಯ ಭೂಮಿಕೆಯನ್ನು ತೊರೆದು ಹೊರಬರುವುದು. ಈ ಎರಡು ಪ್ರಧಾನ ಆಶಯಗಳು ಜಾಗೃತ ಸ್ತ್ರೀಯರ(elitan women) ಮನೋಧೋರಣೆಗಳಾಗಿ ರೂಪುಗೊಳ್ಳತೊಡಗಿದವು.

ತಾಯ್ತನವೇ ಬದುಕಿನ ಪರಮ ಧ್ಯೇಯ ಎಂಬಂತೆ ಪರಿಭಾವಿಸುವ ಗೃಹವಾದಿನಿ ಪ್ರತಿಮೆಯು ಸ್ತ್ರೀಯರಿಗೆ ಸ್ವತಃ ತಮ್ಮಿಂದ ತಾವೇ ಬಿಡುಗಡೆ ಪಡೆಯುವ ಮಾರ್ಗವಾಗುವುದು ಸಾಧ್ಯವೇ ಇಲ್ಲ ಎನ್ನುವುದನ್ನು ದೃಢೀಕರಿಸುವುದರಿಂದ ಸ್ವಯಂ ವಿಗ್ರಹ ಭಂಜಕಿ ಪ್ರತಿಮೆ ಒಡಮೂಡುತ್ತದೆ. ಸ್ವತಃ ಬದುಕನ್ನು ಕಟ್ಟಿಕೊಳ್ಳುವ ಸ್ವಾತಂತ್ರ್ಯದ ಅಪೇಕ್ಷೆಯಲ್ಲಿ 'ಸ್ವಯಂ ವಿಗ್ರಹ ಭಂಜಕಿ'ಯರ ಮುಂದಿದ್ದ ಮುಕ್ತ ಜೀವನದ ಏಕೈಕ ಮಾದರಿ ಎಂದರೆ, ಪುರುಷ. ಪುರುಷರು ಇಂಥ ಸ್ವತಂತ್ರ ಬದುಕನ್ನು ಈಗಾಗಲೇ ತಮ್ಮದಾಗಿ ಅನುಭವಿಸುತ್ತಿದ್ದುದ್ದು ಈ ಮಾದರಿಯನ್ನು ಮಾನ್ಯ ಮಾಡಿರುವ ಮುಖ್ಯ ಕಾರಣವಾಗಿದೆ.

ಸ್ತ್ರೀವಾದವು ಇದನ್ನು ಹಲವು ನೆಲೆಗಳಲ್ಲಿ ಗುರುತಿಸುವ ಪ್ರಯತ್ನವನ್ನು ನಡೆಸಿದೆ.

ಅ) ಪುರುಷರಿಗೆ ಅವರ ಸ್ವ- ಸಾಮರ್ಥ್ಯವನ್ನು ಸಂಪೂರ್ಣವಾಗಿ ಅರಿಯುವಂಥ ಶಿಕ್ಷಣ ಶತಮಾನಗಳಿಂದ ದೊರಕಿರುವುದು.

ಆ) ರಾಜಕೀಯವಾಗಿ ಸಂಪೂರ್ಣ ಸಾರ್ವಭೌಮ ಅಧಿಕಾರ, ಸ್ವಾತಂತ್ರ್ಯ ಪುರುಷರಿಗಿರುವುದು.

ಇ) ಅಲ್ಲದೆ, ಗಂಡು- ಹೆಣ್ಣಿನ ಸಂಬಂಧದಲ್ಲಿ ಪ್ರೇಮಿಸುವುದು, ಉಪಭೋಗಿಸುವುದು, ಸ್ವಂತ ನಿರ್ಣಯದ ದೋಷಗಳನ್ನು ತಿದ್ದಿಕೊಳ್ಳುವ ಅವಕಾಶ, ಅದನ್ನು ಗೊತ್ತುಪಡಿಸುವಂತಹ ಸ್ವಾಯತ್ತತೆಯ ಅವಕಾಶಗಳು ಪುರುಷರಿಗೆ ಹೆಚ್ಚಾಗಿ ಇರುವುದು.

ಇಂತಹ ನಿರ್ದಿಷ್ಟವಾದ ಸತ್ಯದ ದರ್ಶನದಿಂದಾಗಿ, ಸ್ತ್ರೀವಾದದ ವೈಚಾರಿಕತೆಯ ಒಳಗೆ ಪುರುಷನ ಅಧಿಕಾರವನ್ನು ಪ್ರಶ್ನಿಸುವ ಮೂಲಕ ಗೃಹವಾದಿನಿ ಮಾದರಿಯ 'ಸೂಕ್ಷ್ಮತಾಜಾತನ'ವನ್ನು

ಭೇದಿಸಲಾಗಿದೆ. ಮಾತ್ರವಲ್ಲದೆ, ಗೃಹವಾದಿನಿ ಬದುಕಿನ ಶೂನ್ಯತೆಗಳು ನಿಚ್ಛಳವಾಗಿ ಬಯಲುಗೊಂಡಿವೆ. ಇದರಿಂದ 'ಸ್ವ'ದ ಅರಿವು ಮೂಡಲು ಸ್ತ್ರೀವಾದಿ ಸಂದರ್ಭಗಳು ಅನುವುಮಾಡಿಕೊಟ್ಟವು. 'ಸ್ವ'ದ ಅರಿವು ಎಂದರೇನು? ವ್ಯಕ್ತಿಗಳು ಮಾಡುವ ಯಾವುದಾದರೊಂದು ಕೆಲಸ ಅವರ ಅರಿವಿನ ಪ್ರತೀಕವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ವ್ಯಕ್ತಿಗಳು ಕೇವಲ ನಿರುಪಯೋಗಿ ಅವಸ್ಥೆಯಲ್ಲಿ ನಿಂತು ಕೇವಲ ಅನ್ನ, ಬಟ್ಟೆ, ಆಶ್ರಯಗಳ ಆವಶ್ಯಕತೆಗಳಿಗಾಗಿ ಮಾತ್ರ ಕೆಲಸ ಮಾಡುತ್ತಿಲ್ಲ. ತಮ್ಮ ಸೂಕ್ತ ಕ್ಷೇತ್ರ ಯಾವುದೆಂಬುದನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ ಅವರಿಗೆ ಅವಕಾಶವಿದೆ. ಶರೀರವನ್ನು ಜೀವಂತವಾಗಿಡುವುದಕ್ಕಾಗಿಯಷ್ಟೇ ಮಾಡಿದ ಕೆಲಸವು 'ಸ್ವ'ದ ಅರಿವಲ್ಲ. ಯಾವಾಗ ಉತ್ಕ್ರಾಂತಿಯಲ್ಲಿ ಒಂದು ನಿರ್ಮಾಣ ಘಟಕವೆಂದು ವ್ಯಕ್ತಿಗಳು ಸ್ವತಃ ತಮ್ಮನ್ನು ತಾವು ಎರಕ ಹೊಯ್ದುಕೊಂಡು, ತಮ್ಮ ಸ್ವಂತಿಕೆಯಲ್ಲೇ ಅದರಾಚೆಗೂ ಕೆಲಸ ಮಾಡುತ್ತಾರೋ ಅದು ಅವರ ವ್ಯಕ್ತಿತ್ವದ ಸಾಕ್ಷಿಯಾಗುತ್ತದೆ. ಅಲ್ಲದೆ, ಯಾರಿಗೆ 'ಸ್ವ'ದ ಅರಿವು ಸಾಧ್ಯವಾಗುತ್ತದೋ ಅವರು ಸ್ವತಃ ಅದನ್ನೂ ದಾಟಿ ಹೋಗಿ ಮಾನವೀಯತೆಯನ್ನು ಬೆಳಸಲು ಅಗತ್ಯವಾದಂತಹ ಕಾರ್ಯಗಳನ್ನು ಕೈಗೊಳ್ಳುತ್ತಾರೆ. ಧರ್ಮ, ತತ್ವಜ್ಞಾನ ಮುಂತಾದ ಕ್ಷೇತ್ರಗಳಲ್ಲಿ 'ಸ್ವತಃ' ವ್ಯಕ್ತಿಗಳು ತಮ್ಮನ್ನು ತಾವೇ ಮರೆತ ಮೇಲೆಯೇ ಅವರಿಗೆ ಅವರ ನಿಜವಾದ ವ್ಯಕ್ತಿತ್ವವು ದಕ್ಕುತ್ತದೆ. ಅಥವಾ

> "ನಿರ್ಮಿತಿಯ ಸಾಧನಗಳಲ್ಲಿರುವ ಮನುಷ್ಯ ಸಂಬಂಧದ ಮೇಲೆ ಮನುಷ್ಯ ತನ್ನನ್ನು ತಾನು ತಿಳಿಯುತ್ತಾನೆ." (ಕಟ್ಟಿ ಎ.ಆರ್. ೧೯೮೪ ; ೮೭)

ಎನ್ನುವ ಮೆಕ್ಸ್ ವೆಬ್ಬರ್‌ನ ಅಭಿಪ್ರಾಯ 'ಸ್ವ'ದ ಮನೋವೃತ್ತಿಯನ್ನು ಎರಡು ಕೋನಗಳಲ್ಲಿ ಮುಂದಿಡುತ್ತದೆ.

೧) 'ಸ್ವ' ಎನ್ನುವುದು ವ್ಯಕ್ತಿಗಳ (ಸ್ತ್ರೀ -ಪುರುಷರ) ಹೊಣೆಗಾರಿಕೆಯಿಂದ ಪ್ರೇರಿತವಾದ ನೈತಿಕ ಧೋರಣೆ. (Ethic of Responsibility) ಮತ್ತು ನೈತಿಕ - ನಿಷ್ಠೆಯ ನೀತಿ ಶಾಸ್ತ್ರ (Ethic of conviction) ಈ ಎರಡೂ ಅಭಿವೃತ್ತಿಗಳ ಸಂಘರ್ಷದ ನಿರ್ಮಾಣದಲ್ಲಿ 'ಸ್ವ'ವು ರೂಪುಗೊಳ್ಳುತ್ತದೆ. 'ಸ್ವ'ವನ್ನು ಒಂದು ಜೀವನ ಮೌಲ್ಯವಾಗಿ ಪರಿಭಾವಿಸುವ ಸ್ತ್ರೀವಾದ ಇದನ್ನು ಸ್ತ್ರೀತ್ವದ ಮೂಲದಲ್ಲಿ 'ಧೈರ್ಯದ ಉದಾತ್ತೀಕರಣ'ವಾಗಿ ಪರಿಕಲ್ಪಿಸುವುದು ವ್ಯಕ್ತವಾಗುತ್ತದೆ. ಮಾತ್ರವಲ್ಲದೆ, 'ಬದುಕು' ಮತ್ತು 'ಅಸ್ತಿತ್ವ' ವಿಚಾರಗಳಿಗೆ ಸಂಬಂಧಿಸಿದಂತೆ 'ಸ್ವ'ವನ್ನು ಜೀವನ 'ದೃಷ್ಟಿಕೋನ'ವಾಗಿ ನಿರ್ವಚಿಸುತ್ತದೆ. ಇದರಿಂದ, 'ಸ್ವ'ದ ಮೂಲಕಲ್ಪನೆಯಲ್ಲಿ 'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆಯು ರೂಪುಗೊಳ್ಳುತ್ತದೆ. 'ಸ್ತ್ರೀ' ಎಂದರೆ ಯಾರು? ಎನ್ನುವ 'ಸ್ವಯಂ ವಿಗ್ರಹ ಭಂಜಕಿ'ಯ ಪ್ರಶ್ನೆ ಗೃಹವಾದಿನಿ ಪ್ರತಿಮೆಯ ಮೆರಗನ್ನು ತೊಳೆದು ವಾಸ್ತವವಾದ ಅಂಶಗಳನ್ನು ಮುಂದಿಡುವ ಮೂಲಕ ('ಸ್ವಯಂ ವಿಗ್ರಹ ಭಂಜಕಿ') ತನ್ನನ್ನು ತಾನೇ ನಿರ್ವಚಿಸಿಕೊಳ್ಳುವುದು ವ್ಯಕ್ತವಾಗುತ್ತದೆ.

**'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆಯು ಒಡೆಯುವ 'ಗೃಹವಾದಿನಿ'ಯ ನೆಲೆಗಳು:**

೧. ತಾಯಿ, ಹೆಂಡತಿ, ಗೃಹಿಣಿ ಈ ಪ್ರತಿಮೆಗಳೆಲ್ಲವೂ ಸ್ತ್ರೀಯರ ಶಾರೀರಿಕ ವೈಶಿಷ್ಟ್ಯಕ್ಕೆ ಸಂಬಂಧಿಸಿರುವುದನ್ನು ಸ್ವಯಂ ವಿಗ್ರಹ ಭಂಜಕಿ ಪ್ರತಿಮೆಯು ಗುರುತಿಸುತ್ತದೆ.

೨. ಗೃಹವಾದಿನಿ ಪ್ರತಿಮೆಯೊಳಗಿನ ಸ್ತ್ರೀತ್ವವು ಸಾಂಸ್ಕೃತಿಕವಾಗಿ ಪುರುಷನ ಖಾಸಗಿ ಆಸ್ತಿಯಾಗಿ ರೂಪುಗೊಂಡಿರುವುದನ್ನು ಗ್ರಹಿಸುತ್ತದೆ.

೩. ಗೃಹವಾದಿನಿ ಪ್ರತಿಮೆಗಳಲ್ಲಿ ಸ್ತ್ರೀಯರು ಪುರುಷರ ಉಪಭೋಗಕ್ಕೆ ಇರುವವರು ಎನ್ನುವ ಸಾರ್ವತ್ರಿಕ ಧೋರಣೆಯನ್ನು ಒಡೆಯಲು ಪ್ರಯತ್ನಿಸುತ್ತದೆ.

೪. ಸ್ತ್ರೀ - ಪುರುಷ ಸಂಬಂಧದಲ್ಲಿ ಶರೀರ ಸಂಬಂಧವನ್ನು ಮಾತ್ರ ಮುಖ್ಯವಾಗಿ ಪರಿಭಾವಿಸಿ ಭಾವನಾತ್ಮಕ, ಬೌದ್ಧಿಕ ಸಂಬಂಧವನ್ನು ಗೃಹವಾದಿನಿ ಪ್ರತಿಮೆ ನಿರಾಕರಿಸುವುದನ್ನು ಸ್ಪಷ್ಟಪಡಿಸುತ್ತದೆ.

೫. ಅಪರಿಮಿತ ಸಾತ್ವಿಕತೆ, ಶೀಲ, ಪಾವಿತ್ರ್ಯದ ಲೈಂಗಿಕ ಪ್ರತಿಮೆಯನ್ನು ಗೃಹವಾದಿನಿಯು ನಿರಂತರವಾಗಿ ಪೋಷಿಸಿಕೊಂಡು ಬರುತ್ತಿರುವುದನ್ನು ವಿಮರ್ಶೆಗೆ ಗುರಿಪಡಿಸುತ್ತದೆ.

ಈ ಮೇಲಿನ ಪ್ರಬಲ ಕಾರಣಗಳಿಂದಾಗಿ ಗೃಹವಾದಿನಿ ಪ್ರತಿಮೆಯ ಒಡಲ ಒಳಗೆ ಹೊಸ ಮಾದರಿಯನ್ನು ಕಡೆಯುವ ತುರ್ತು ಸ್ತ್ರೀವಾದಿ ಚಾರಿತ್ರಿಕ ಸಂದರ್ಭದಲ್ಲಿ ಕಾಣಿಸಿಕೊಂಡಿದೆ. (ಪತ್ನಿ, ತಾಯಿ ಮತ್ತು ಗೃಹಿಣಿ ಇವನ್ನೇ ಸ್ತ್ರೀಯ 'ಖಾಸಗಿ' (Personal) ಸಂಗತಿಗಳೆಂದು ಗೃಹವಾದಿನಿ ಪ್ರತಿಮೆ ಸಾವಿರಾರು ವರ್ಷಗಳಿಂದಲೂ ನಿಗದಿಪಡಿಸಿಕೊಂಡು ಬಂದಿರುವುದರ ಇತಿಹಾಸದಲ್ಲಿ ಸ್ತ್ರೀಯರ 'ಗುಲಾಮಗಿರಿಯ ಜೀವನ' ಅನಾವರಣಗೊಂಡು ಸ್ತ್ರೀಯರಿಗೆ ಕುಟುಂಬ ಮತ್ತು ಸಮಾಜದಲ್ಲಿ ಪರ್ಯಾಯ ಭೂಮಿಕೆಯಾಗಿ 'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆಯನ್ನು ಸ್ತ್ರೀವಾದ ಕಟ್ಟುವ ಪ್ರಯತ್ನದಲ್ಲಿ ಇದು ಸ್ಪಷ್ಟವಾಗುತ್ತದೆ.) 'ಸ್ವಯಂ ವಿಗ್ರಹ ಭಂಜಕಿ'ಯು ಗೃಹವಾದಿನಿಯ ಭೂಮಿಕೆಯಲ್ಲಿನ ದಾಸ್ಯವನ್ನು ನಿರ್ಮೂಲನಗೊಳಿಸುವಂಥದ್ದು. ಮಾತ್ರವಲ್ಲ ಇದೊಂದು ಆದರ್ಶದ (Utopian)ಪರಿಕಲ್ಪನೆ. ಈ ಆದರ್ಶದಲ್ಲಿ ಪುರುಷನನ್ನು ಮಾತ್ರ ಆತ್ಯಂತಿಕವಾಗಿ ಪರಿಭಾವಿಸಲಾಗುತ್ತದೆ. ಪರಿಪೂರ್ಣ ಆದರ್ಶದ ಯಾವುದೇ ನೆಲೆಯನ್ನು ಸಮಾಜ ಒಂದರಲ್ಲಿ ಗುರುತಿಸುವುದು ಅಸಾಧ್ಯ. ಇದನ್ನು ಒಡೆಯುವ ಪ್ರಯತ್ನವನ್ನು ಮನಃಶಾಸ್ತ್ರಜ್ಞನಾದ ಜಾಕ್ವಿಸ್ ಲ್ಯಾಕನ್(Jacques Lacon)ನ ಆಲೋಚನೆಗಳು ನಡೆಸಿವೆ. ಯಾವುದೇ ಸಂಸ್ಕೃತಿಯು ತನ್ನದೇ ಆದ ವಿಶಿಷ್ಟ ವಿಧಾನಗಳಿಂದ ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧವನ್ನು, ಬಾಂಧವ್ಯಗಳನ್ನು ಬೆಸೆದಿರುತ್ತವೆ. ಇವುಗಳಿಗೆಲ್ಲ ಸಾಕಾರಗೊಳ್ಳುವುದು ವ್ಯಕ್ತಿಗಳ ಮಾನಸಿಕ ಆವಿಷ್ಕಾರಗಳ ನೆಲೆಯಿಂದಲೇ ಅಲ್ಲದೆ ದೇಹ ಮೂಲದಿಂದಲ್ಲ. ಇದನ್ನು ಸಂಸ್ಕೃತಿಯೊಂದು ಭಾಷೆಯನ್ನು ಒಳಗು ಮಾಡಿಕೊಳ್ಳುವ ಮೂಲದಿಂದಲೇ ವ್ಯಕ್ತಿಗಳಿಗೆ ಎರೆದು ಕೊಡುತ್ತದೆ. ಆದ್ದರಿಂದ :

> "We grasp the fact that the mother does not exist solely for ourselves alone. The initial fantasy of infant is that in their dyadic unity the infant and the mother are one. But the mother is a separate person. She has her own life." (Gates Henry Louis (Ed) :1987;160)

ಎಂದು ಲ್ಯಾಕನ್‌ನ ಆಲೋಚನೆಯನ್ನು ವಿಸ್ತರಿಸುವ ನೆಲೆಯಲ್ಲಿ ಡ್ರಿಸಿಲ್ಲಾ ಕಾರ್ನೆಲ್ (Drecilla cornell) ಗೃಹವಾದಿನಿ ಪ್ರತಿಮೆ ಮಿತಿಯನ್ನು ಅನಾವರಣಗೊಳಿಸುವುದು ಇಲ್ಲಿ ಮುಖ್ಯವಾಗುತ್ತದೆ. ತಾಯಿ, ಹೆಂಡತಿ, ಇಂತಹ ಸಾಂಕೇತಿಕ ರಚನೆ (Symbolic castration)ಗಳು ಔಪಚಾರಿಕ ಪಿತೃ ಸಂರಚನೆಗಳನ್ನು ಮತ್ತು ಪಿತೃ ಪ್ರಧಾನ ಸಂಸ್ಕೃತಿಯ ಕಾನೂನು ನಿಯಮಾವಳಿಗಳನ್ನು ಸದಾ ಕಾರ್ಯ ಪ್ರವೃತ್ತಗೊಳಿಸುತ್ತಿರುತ್ತವೆ.

> " In terms of feminist thought, particularly in the humanities, the loss of truth and a "we" who would speak it has led to the theorization of gender as performance. According to Butter, gender identity, like any identity, is founded and regulated through the repetition of signifying practice that appear

> to naturalize those identities. Consequently, "the feminst 'we' is always and only a Phantasmatic construction" (Butter, Judith 1993; 142)

ಇಲ್ಲಿ 'ಅನನ್ಯತೆ' (identity) ಎನ್ನುವುದು ಸ್ತ್ರೀವಾದಿ ರಾಜಕೀಯ ಹೋರಾಟದ ಪ್ರಶ್ನೆಯಾಗಿ, ಸಾಂಸ್ಕೃತಿಕ ಪುನರ್‌ರಚನೆಯ ಪಾತಳಿಯಲ್ಲಿ ಕಾಣಿಸಿಕೊಳ್ಳುವುದು ಬಹಳ ಮುಖ್ಯ. ಲಿಂಗಾಧಾರವೆನ್ನುವುದು ಸ್ವಯಂ ವಿಗ್ರಹ ಭಂಜಕಿಯಲ್ಲಿ ಒಡಮೂಡುವುದು. 'ಪ್ರತಿರೋಧಿ ಪ್ರಕ್ರಿಯೆ' (Agt act)ಯಾಗಿ ಪುರುಷನನ್ನೇ ಗುರಿಯಾಗಿ, ಪುರುಷ ಮಾದರಿಯನ್ನು ಮರುಕಲ್ಪಿಸುವ 'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆಯು ಪುರುಷ, ಸ್ತ್ರೀ, ಇತಿಹಾಸ ಮತ್ತು ವಾಸ್ತವಿಕತೆ (truth)ಯ ನೆಲೆಯಲ್ಲಿ ನಿರ್ವಚನಗೊಂಡಿರುವ ಮಾದರಿ. ಇಲ್ಲಿ 'ಪುರುಷ' ಎನ್ನುವ ನಿರ್ವಚನವನ್ನು ಸ್ಪಷ್ಟಪಡಿಸಿಕೊಳ್ಳಬೇಕು. 'ಪುರುಷ'ನೆಂದರೆ, ಜಾಗತಿಕವಾಗಿ ಎಲ್ಲಾ ಕ್ಷೇತ್ರಗಳನ್ನು ಪ್ರಥಮವಾಗಿ ಆಕ್ರಮಿಸಿಕೊಂಡ ಸಮಾಜ ಜೀವಿ. 'ಸ್ತ್ರೀ' ಪುರುಷನು ನಿರೂಪಿಸುವ ಅಚ್ಚಿನಲ್ಲಿ ಎರಕಗೊಂಡ ನಿರಸನ ಜೀವಿ. ಇದನ್ನು ಇತಿಹಾಸ ಪಲ್ಲಟಗೊಳಿಸಿ, ಪುರುಷನ ದಿಗ್ವಿಜಯವನ್ನು ಸ್ತ್ರೀಯ ಮೌನವನ್ನು ನಿರಂತರವಾಗಿ ಪೋಣಿಸಿ ಕಟ್ಟುತ್ತ ಬಂದಿದೆ. 'ವಾಸ್ತವಿಕತೆ' ಎಂದರೆ, ಸ್ತ್ರೀಯನ್ನು ಸಹ ಸಮಾಜಜೀವಿ ಎಂದು ಒಪ್ಪಿಕೊಳ್ಳುವಲ್ಲಿ ಪುರುಷಶಾಹಿ ವ್ಯವಸ್ಥೆ ಶಕ್ತವಾಗಿ 'ನಿರಾಕರಣ'ದ ರಾಜಕೀಯ ನಡೆಸಿದೆ. ಇವೆಲ್ಲವುಗಳ ಪರಿಣಾಮವಾಗಿ 'ಸ್ತ್ರೀ'ಯರಿಂದ ಶತಮಾನಗಳಿಂದ ವಂಚಿಸಿ ಅದೃಶ್ಯಗೊಳಿಸಿದ ಹಕ್ಕಿನ ಭಾಗಗಳನ್ನು ಬೇಡಿಕೆಯ ನೆಲೆಯಲ್ಲಿ 'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆ ಸಮಾಜದ ಎದುರು ನಿಲ್ಲಿಸುತ್ತದೆ.

> "We have to be inside the struggle with the men... we do not have one world with only us, and another world for the men. So we women have to raise questions together with them." (Susan Ounei 1992 : 167)

ಎನ್ನುವಲ್ಲಿ ಪುರುಷನ ನಡುವಣ ಅಸಂವಾದವನ್ನು (Uncommunicativeness) ನಿರ್ಭಯತೆಯಿಂದ ಮುರಿಯುವ ಧ್ವನಿ ವ್ಯಕ್ತವಾಗುತ್ತದೆ. ಅಲ್ಲದೆ, ಪುರಷನ 'ಸ್ವಾಮಿತ್ವ'ದ, 'ಯಾಜಮಾನ್ಯ'ದ ನಿರಾಕರಣೆ ಕಂಡು ಬರುತ್ತದೆ.

'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆಯ ವ್ಯಾಪ್ತಿ ಪುರುಷರ ಹಾಗೆಯೇ 'ಸ್ವಾಯತ್ತತೆ' ಮತ್ತು 'ಸ್ವಾತಂತ್ರ್ಯ'ವನ್ನು ಮುಂದಿಡುವುದು. ಈ 'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆ ಸ್ವಾತಂತ್ರ್ಯದ ವ್ಯಕ್ತಿಗತ ಆತ್ಯಂತಿಕ ಉದಾಹರಣೆಯಾಗಿ 'ಪುರುಷ'ನನ್ನೇ ಒಂದು ಆದರ್ಶವಾಗಿ ಅನುಕರಿಸುತ್ತದೆ. 'ಪುರುಷ' ಮಾಡಬಹುದಾದ ಎಲ್ಲಾ ಕಾರ್ಯಗಳನ್ನು 'ಸ್ತ್ರೀ' ಮಾಡಬಹುದೆಂಬಲ್ಲಿ ಸಾಂಪ್ರದಾಯಿಕ ಸೀಮೆಗಳನ್ನು ಉಲ್ಲಂಘಿಸುತ್ತದೆ. ಎಂದರೆ, ಸನಾತನ ಪರಂಪರೆಯ ಒತ್ತಡಗಳಿಂದ ಒಡಮೂಡುವ ವಿನಯಶೀಲತೆ ಮಾರ್ದವತೆ, ಆಜ್ಞಾಧಾರಕತೆ, ಅಸ್ಮಿತೆಯನ್ನೇ ನಿರಾಕರಿಸುತ್ತದೆ. ಇಲ್ಲಿ ಮುಖ್ಯವಾಗುವ ಅಂಶಗಳೆಂದರೆ,

೧) 'ಸ್ತ್ರೀ' ಎಂದರೆ 'ಹೆರುವ ಯಂತ್ರ' ಎನ್ನುವ ಎಲ್ಲಾ ನಿರ್ವಚನಗಳನ್ನು ಒರೆಸಿಹಾಕುವುದು.

೨) ಸ್ತ್ರೀಯು ಶೈಕ್ಷಣಿಕವಾಗಿ ಸ್ವಾವಲಂಬನೆಯನ್ನು ಸಾಧಿಸುವ ಮೂಲಕ ಆರ್ಥಿಕ ಹಾಗೂ ಮಾನಸಿಕ ಪರಾವಲಂಬನೆಯಿಂದ ಮುಕ್ತಗೊಳ್ಳುವುದು.

೩) 'ಶೀಲವಂತಿಕೆ' 'ಪಾವಿತ್ರ್ಯ'ದ ಪರಿಧಿಯೊಳಗಿನ ಲೈಂಗಿಕ ನಿರ್ಬಂಧನೆಯಿಂದ ಹೊರ ಬರುವುದು. ಅಲ್ಲದೆ, ಮುಕ್ತ ಲೈಂಗಿಕ ಸಂಬಂಧವನ್ನು ಪುರುಷರಂತೆಯೇ ಅನುಭವಿಸುವುದು.

೪) ಲೈಂಗಿಕ ಅನುಭವಗಳಲ್ಲಿ ಪುರುಷರ ಸಾಂಪ್ರದಾಯಿಕ ವರ್ಚಸ್ಸನ್ನು ನಿರಾಕರಿಸುವುದು.

೫) ಸ್ವಂತದ ಅನುಭವಗಳ ಮೂಲಕ ಮಾತ್ರ ಆತ್ಮಶೋಧನೆ ನಡೆಸುವುದು.

೬) ಜೀವನದ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಹಕ್ಕನ್ನು ಪಡೆಯುವ ಮೂಲಕ 'ಸ್ತ್ರೀ' ಸಮಾಜದಲ್ಲಿ ಕ್ರಿಯಾಶೀಲವಾಗಿ ವ್ಯಾಪಿಸಿಕೊಳ್ಳುವುದು. (ರಾಜಕೀಯ, ಸಾಮಾಜಿಕ, ಔದ್ಯೋಗಿಕ, ಧಾರ್ಮಿಕ, ಸಾಹಿತ್ಯಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಳ್ಳುವುದು.)

೭) ಸ್ತ್ರೀಯರನ್ನು ದ್ವಿತೀಯ ಸ್ಥಾನಕ್ಕೆ ಆದುಮಿರುವ, ತ್ಯಾಗಮಯಿ, ವಾತ್ಸಲ್ಯಮಯಿಯಂಥ ಭಾವನಾತ್ಮಕ (Emotional)ವೈಭವೀಕರಣವನ್ನು ವಾಸ್ತವದ ನೆಲೆಯಿಂದ ಗುರುತಿಸುವುದು ಅಲ್ಲದೆ ಅಂತಹ ಪ್ರತಿಮೆಗಳನ್ನು ಬೇಧಿಸುವುದು.

೮) ಸ್ತ್ರೀ ಮುಕ್ತಿಯ ಸೈದ್ಧಾಂತಿಕ ವಿಚಾರಗಳನ್ನು ಮಾನ್ಯ ಮಾಡುವುದು. ಎಂದರೆ, ಸ್ತ್ರೀಯರ ಪರವಾದ ಸಂಘಟನೆ, ಹೋರಾಟಗಳಿಗೆ ಸಾಂಸ್ಕೃತಿಕ ಚಾಲನೆ ನೀಡುವುದು.

೯) ಇತಿಹಾಸದಲ್ಲಿ ಸ್ತ್ರೀಯರ ಅದೃಶ್ಯವನ್ನು ಪ್ರಶ್ನಿಸುವ ಮೂಲಕ ಚಾರಿತ್ರಿಕವಾಗಿ ಮರುಕಲ್ಪಿಸಲು ತೊಡಗುವುದು. ಮತ್ತು ಸಮಾನತೆಯ ಹೊಸ ಇತಿಹಾಸವನ್ನು ನಿರ್ಮಿಸುವುದು.

೧೦) ವೈಯಕ್ತಿಕ ಹಾಗೂ ಸಾಮಾಜಿಕ ಮಟ್ಟದಲ್ಲಿನ 'ಲಿಂಗ ಸಾಪೇಕ್ಷ' (Sex Based)ವನ್ನು ನಿರಾಕರಿಸುವುದು.

'ಸ್ವಯಂ ವಿಗ್ರಹ ಭಂಜಕಿ' ಪ್ರತಿಮೆಯ ಪರಿಮಿತಿ :

೧) 'ಪುರುಷ'ನನ್ನೇ ಮೂಲ ಮಾದರಿಯಾಗಿ ಪರಿಕಲ್ಪಿಸಿಕೊಂಡು ಆತನ ಜೀವನ ವಿಧಾನವನ್ನು ನೇರವಾಗಿ ಅನುಕರಿಸುವುದು.

೨) ಪುರುಷನಂತೆ ಬದುಕಿದರೆ, ಅನುಬವಗಳನ್ನು ದಕ್ಕಿಸಿಕೊಂಡರೆ ತಾನೂ 'ಪುರುಷ'ನ ಮಾನ್ಯತೆಯನ್ನು ಪಡೆಯಬಹುದೆಂಬ ಭ್ರಮಾತ್ಮಕ ಧೋರಣೆಯಲ್ಲಿ 'ಸ್ವಯಂ ವಿಗ್ರಹ ಭಂಜಕಿ' ರೂಪಿತಗೊಂಡಿರುವುದು.

೩) ಇವೆಲ್ಲವುಗಳಿಗಿಂತ ಬಹಳ ಮುಖ್ಯವಾದ ಅಂಶವೆಂದರೆ, ಸಾಮಾಜಿಕವಾಗಿ 'ಸ್ವ' ಅನ್ವೇಷಣೆಯಲ್ಲಿ 'ಸ್ವಯಂ ವಿಗ್ರಹ ಭಂಜಕಿ' ತನ್ನ ಅಸ್ಮಿತೆಯನ್ನು ಗುರುತಿಸುವಲ್ಲಿ ಸೋಲುವುದು.

೪) ಸಮಾಜ ಜೀವಿಯ ಪರಿಕಲ್ಪನೆಯನ್ನು ನಿರಾಕರಿಸಿ 'ಏಕಾಂಗಿ' ಬದುಕನ್ನು ಸಾಪೇಕ್ಷಗೊಳಿಸುವುದು.

೫) ಇವೆಲ್ಲವುಗಳ ಪರಿಣಾಮವಾಗಿ 'ಸ್ವಯಂ ವಿಗ್ರಹ ಭಂಜಕಿ' ಪುರುಷ ನಿರ್ವಚನದ ಗೃಹವಾದಿನಿ ಪ್ರತಿಮೆಯನ್ನು ಒಡೆಯುವುದನ್ನು ಸವಾಲಾಗಿ ಸ್ವೀಕರಿಸುವ, ಪ್ರಯತ್ನ ಮಾಡಿದೆಯೇ ವಿನಃ ಸ್ತ್ರೀಯರದೇ ಆದ ಅನನ್ಯ ಜೀವನ ವಿಧಾನವನ್ನು ರೂಪುಗೊಳಿಸುವಲ್ಲಿ ಸೋಲುತ್ತದೆ.

### ೫.೧.೪ ಅನನ್ಯತೆಯ ಸಂರಚನೆ :

ಪುರುಷ ಪ್ರಧಾನ ಆಶಯಗಳಿಂದ ರೂಪಿತಗೊಂಡಿರುವ ಸಮಾಜವೊಂದರಲ್ಲಿ 'ಸ್ತ್ರೀ'ಯರ 'ಅನನ್ಯತೆ' (Identity)ಯು ಇಂಡಿಯಾದಂತಹ ರಾಷ್ಟ್ರಗಳಲ್ಲಿ ಆಯಾ ಸಂಸ್ಕೃತಿಗೆ ಅನುಗುಣವಾಗಿ ಭಿನ್ನ - ಭಿನ್ನ ರೂಪಗಳಲ್ಲಿ ಅಧ್ಯಯನಕ್ಕೆ ಒಳಪಡಬೇಕಾಗುತ್ತದೆ. :

"ಆಧುನಿಕ ಸಮಾಜಗಳಲ್ಲಿ 'ಅನನ್ಯತೆ' ಎಂಬುದು ಬಹಳ ಮಂದಿಗೆ ಒಂದು ಪೊಳ್ಳು ಪರಿಕಲ್ಪನೆ; ಅವರು ನಿಜವಾದ ಅರ್ಥದಲ್ಲಿ ಅದನ್ನು ಗಂಭೀರವಾಗಿ ತೆಗೆದುಕೊಂಡಿರುವುದಿಲ್ಲ. ಅವರು ಅನನ್ಯತೆಗಳೊಂದಿಗೆ ಕೇವಲ ಆಟ ಆಡುತ್ತಿರುತ್ತಾರೆ. ತೋರಿಕೆಗಾಗಿ ಮಾತ್ರ ಅವರು ಅನನ್ಯತೆಗಳನ್ನು ಬಳಸುತ್ತಾರೆ. ಇದು ಮೂರು ಹಂತದ ಚಾರಿತ್ರಿಕ ಬೆಳವಣಿಗೆಯ ಕೊನೆಯ ಹಂತ. ಸಂಸ್ಕೃತಿಯಲ್ಲಿ 'ಧರ್ಮ'ದ ಪಾತ್ರವು ಈ ರೀತಿ ಬದಲಾಗುತ್ತಾ ಬಂದಿತು. ಮೊದಲನೆಯ ಹಂತದಲ್ಲಿ ಧರ್ಮವು ಒಂದು ಸ್ಥಳೀಯ ಚೌಕಟ್ಟಿನಲ್ಲಿ ಒಂದು ಆಚರಣೆಯ ಪ್ರಕ್ರಿಯೆಯಾಗಿತ್ತು. ಪದ್ಧತಿಗಳ ಮೂಲಕ ಜನರು ಒಟ್ಟಾಗುತ್ತಿದ್ದರು. ಅವು ಜನರ ಅನನ್ಯತೆಯನ್ನು ತೋರಿಸುತ್ತಿದ್ದವು. ಎರಡನೆಯ ಹಂತದಲ್ಲಿ ಸಮಾಜವು ಹೆಚ್ಚು ಛಿದ್ರ ರೂಪದಲ್ಲಿತ್ತು. ಆದರೆ, 'ಧರ್ಮ'ವು ತಾತ್ವಿಕತೆಯ ರೂಪದಲ್ಲಿ ಸಮಾಜವನ್ನು ಒಟ್ಟುಗೂಡಿಸುತ್ತಿತ್ತು. ಮೂರನೆಯ ಹಾಗೂ ಇತ್ತೀಚಿನ ಹಂತದಲ್ಲಿ, ಧರ್ಮವನ್ನು ವಿಭಿನ್ನ ಪ್ರವೃತ್ತಿಯ ಸಾರ್ವಜನಿಕ ಪ್ರೇಕ್ಷಕರಿಗಾಗಿ ಪ್ರದರ್ಶಿಸಲಾಗುತ್ತಿದೆ. ಆದರೆ ಇದು ತಾತ್ಕಾಲಿಕವಾದ ಮತ್ತು ತೋರಿಕೆಯ ಅನನ್ಯತೆಯಾಗಿದೆ." (ವಿವೇಕ ರೈ ಬಿ.ಎ. : ೧೯೯೫ ; ೪೨)

ಆಧುನಿಕ ಸಮಾಜಗಳ ಜನರ 'ಅನನ್ಯತೆ'ಗಳ ರಚನಾತ್ಮಕತೆ ಮತ್ತು ಪ್ರಾಚೀನ ಸಮಾಜಗಳ ಜನರ ಅನನ್ಯತೆಗಳ ರಚನಾತ್ಮಕತೆಯ ನಡುವಿನ ವೈವಿಧ್ಯಮಯ ಭಿನ್ನತೆಯು ಅನನ್ಯತೆಯ ಪರಿಕಲ್ಪನೆಯನ್ನು ಅದರ ಋಣಾತ್ಮಕ ಆಯಾಮದ ಮೂಲಕ ಗುರುತಿಸುವುದಕ್ಕೆ ಮುಖ್ಯ ಕಾರಣವಾಗಿದೆ. ಅನನ್ಯತೆಯ ಪ್ರಶ್ನೆ ಎದುರಾದಾಗ ವ್ಯಕ್ತಿಗಳು ತಮ್ಮನ್ನು ಒಂದು ಜಾತಿ, ಸ್ಥಳ, ಮತ, ಪಕ್ಷ, ರಾಷ್ಟ್ರಗಳ ಚೌಕಟ್ಟಿನೊಳಗೆ ಗುರುತಿಸಿಕೊಳ್ಳುವುದು ಕೇವಲ ಅವರವರ ಕಾರಣಗಳಿಗಾಗಿ ಮಾತ್ರವಾಗಿರುವುದಿಲ್ಲ. ಇದಕ್ಕಿಂತ ಭಿನ್ನವಾಗಿ ಅದು ಮತ್ತೊಬ್ಬರ ಜೊತೆಗೆ ತಮ್ಮನ್ನು ಹೋಲಿಸಿಕೊಂಡು ಅವರಿಗಿಂತ ತಾವು ಪ್ರತ್ಯೇಕ ಮತ್ತು ವಿಶಿಷ್ಟ ಎಂದು ತೋರಿಸಿಕೊಳ್ಳುವ ಒಂದು ಪ್ರಯತ್ನ ಕ್ರಿಯೆ. ಈ ಮುಖ್ಯ ಕಾರಣದಿಂದಾಗಿಯೇ 'ಅನನ್ಯತೆಯ ಸಂಕೇತ' (Identity Imeges) ಎನ್ನುವುದು 'ಸಂವಹನದ ಸಂಕೇತ' (Communication Image)ಗಳಾಗುತ್ತದೆ. ·. ಅನನ್ಯತೆ ಎಂಬುದು ಗುರುತರವಾದ ಎರಡು ಜವಾಬ್ದಾರಿಗಳನ್ನು ನಿರ್ವಹಿಸುತ್ತದೆ. ಒಂದು, ಸಮುದಾಯವನ್ನು ಒಟ್ಟು ಮಾಡುವುದು. ಎರಡು, ನಿರ್ದಿಷ್ಟವಾಗಿ ಒಂದು ಸಮುದಾಯದಿಂದ ಮತ್ತೊಂದು ಸಮುದಾಯವನ್ನು ಪ್ರತ್ಯೇಕಿಸುವುದು.

"ಪ್ರಾಚೀನ ಸಮಾಜಗಳ ಜನರು ಸಾಮಾನ್ಯವಾಗಿ ಪರಿಮಿತ ಪರಿಸರದಲ್ಲಿ ವ್ಯವಹರಿಸುತ್ತಾ ಇದ್ದರು. ಹಾಗಾಗಿ ಅವರು ಒಂದು ಅನನ್ಯತೆಯನ್ನೇ ಬಲವಾಗಿ ನೆಚ್ಚಿಕೊಂಡು ತಮ್ಮ ಬದುಕನ್ನು ರೂಪಿಸಿಕೊಂಡಿದ್ದರು. ಆಧುನಿಕ ಸಮಾಜಗಳ ಜನರು ಬೇರೆ ಬೇರೆ ಪರಿಸರಗಳಲ್ಲಿ ವ್ಯವಹರಿಸುತ್ತಾರೆ, ಸಂವಹನ ನಡೆಸುತ್ತಾರೆ. ಇವರ ಆಕಾಂಕ್ಷೆಗಳು ಅಧಿಕ, ಮಹತ್ವಾಕಾಂಕ್ಷೆಗಳು ಹೆಚ್ಚು. ಹೀಗಾಗಿ ಇವರಿಗೆ ಇವರ ಉದ್ದೇಶಗಳ ಈಡೇರಿಕೆಗೆ ಒಂದೇ ಅನನ್ಯತೆ ಸಾಕಾಗುವುದಿಲ್ಲ. ಇದಕ್ಕಾಗಿ ಇವರು ಅನೇಕ ಅನನ್ಯತೆಗಳನ್ನು ಬಹಳ ವ್ಯಾವಹಾರಿಕ ಜಾಣ್ಮೆಯಿಂದ ಬಳಸುತ್ತಿರುತ್ತಾರೆ. ಜಾತಿ, ಪ್ರದೇಶ, ಭಾಷೆ, ಮತ, ರಾಜಕೀಯ ಪಕ್ಷ ಇವುಗಳನ್ನು ನೆಲೆಯಾಗಿ ಉಳ್ಳ ಅನನ್ಯತೆಗಳನ್ನು ಎಲ್ಲವನ್ನೂ ಹೊಂದಿದ್ದು, ಆ ಅನನ್ಯತೆಗಳಿಂದ ದೊರೆಯುವ ಎಲ್ಲ

ಪ್ರಯೋಜನಗಳನ್ನು ಪಡೆಯಲು ಕಾರ್ಯತಂತ್ರಗಳನ್ನು ರೂಪಿಸಿರುತ್ತಾರೆ." (ವಿವೇಕ ರೈ ಬಿ.ಎ. :೧೯೯೫; ೪೨)

ಸ್ತ್ರೀವಾದಿ ಮೀಮಾಂಸೆಯ ಮೂಲದಿಂದ ಇದನ್ನು ಹೆಚ್ಚು ನಿಖರವಾಗಿ ಗುರುತಿಸಬಹುದು. ಎಂದರೆ, ಸ್ತ್ರೀವಾದದ ಒಳಗಿನ 'ಉದಾರವಾದಿ ಸ್ತ್ರೀವಾದ' ಮತ್ತು 'ಲೆಸ್ಬಿಯನ್ ಸ್ತ್ರೀವಾದ' ಇವೆರಡು ಸ್ತ್ರೀವಾದಿ ಪಂಥಗಳ ಅನನ್ಯತೆಗಳು ಪರಸ್ಪರ ವಿರುದ್ಧವಾಗಿ ಕೆಲಸ ಮಾಡುತ್ತಿರುತ್ತವೆ. ಆದರೆ 'ರಾಜಕೀಯ ಅನನ್ಯತೆ'ಯ ಪ್ರಶ್ನೆಯ ಸಂದರ್ಭ ಎದುರಾದಾಗ ಅವೆರಡು ಅವುಗಳ ವೈರುಧ್ಯಗಳನ್ನು, ದ್ವಂದ್ವಗಳನ್ನು ಬಿಟ್ಟುಕೊಟ್ಟು ಒಂದುಗೂಡುತ್ತವೆ. ಇಲ್ಲಿ 'ಅನನ್ಯತೆ'(Identity)ಯನ್ನು ಅಸ್ತಿತ್ವದ ಮೂಲದಿಂದಲೇ ಅರ್ಥೈಸಿಕೊಳ್ಳಬೇಕಾಗುತ್ತದೆ. ಎಂದರೆ, ಅನನ್ಯತೆ ಎಂಬುದು ಅಂತಿಮವಾಗಿ ವ್ಯಕ್ತಿಗಳ ಅಸ್ತಿತ್ವದ ಶೋಧವಾಗುತ್ತದೆ. ಇದರ ಚಲನೆಯ ತಳಹದಿಯನ್ನು ಗಮನಿಸಿದರೆ, ಪುರುಷ ಸ್ತ್ರೀ ಯಾವುದೇ ವ್ಯಕ್ತಿಗಳಾಗಿರಲಿ ಅವರವರ ಜೀವನದಲ್ಲಿ 'ನಾನು' (Ego)ಎಂಬ ಕೇಂದ್ರ ನೆಲೆಯನ್ನು ಕಟ್ಟಿಕೊಳ್ಳುವ ಮೂಲಕವಾಗಿಯೇ ಅವರವರ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿರುತ್ತಾರೆ. ಆದ್ದರಿಂದ ಖಾಸಗಿ ನೆಲೆಯಲ್ಲಿ 'ಅನನ್ಯತೆ' ಎಂಬುದು 'ನಾನು' ಎನ್ನುವ ಕೇಂದ್ರೀಯ ಅಸ್ತಿತ್ವದ ನೆಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತದೆ. ('ಕೇಂದ್ರೀಕೃತ' ಎಂದು ಪರಿಭಾವಿಸುವಲ್ಲಿ 'ಇರುವಿಕೆಯ ಅರಿವು' (Sense of Presente) ಅಂತರ್ಗತ ಗೊಂಡಿರುತ್ತದೆ.) ಅನನ್ಯತೆ ಎಂಬುದು ಇರುವಿಕೆಯ ಅರಿವು (Sense of Presente) ಮತ್ತು ಕೇಂದ್ರೀಕೃತ (Centrism) ಆಲೋಚನಾ ಕ್ರಮದ ಮೂಲಕ ರೂಪುಗೊಳ್ಳುತ್ತದೆ. ವ್ಯಕ್ತಿಗಳಿಂದ ರಚನೆಗೊಳ್ಳುವ ಯಾವುದೇ ಸಾಂಸ್ಥಿಕ ರೂಪಕ್ಕೂ 'ಇರುವಿಕೆ'ಯ ಅರಿವು ಮತ್ತು 'ಕೇಂದ್ರೀಕೃತ' ಸ್ತರವಿದ್ದೇ ಇರುತ್ತದೆ. ಸ್ತ್ರೀಯರ ಅನನ್ಯತೆಯ ಶೋಧಕ್ಕೆ ಸುಮಾರು ೨೦೦ ವರ್ಷಗಳ ಚರಿತ್ರೆ ಇದೆ. (ಅಮೇರಿಕಾದ ಮಹಿಳಾ ಸಮಾನತೆ- ಸ್ವಾತಂತ್ರ್ಯ ಹೋರಾಟಗಳ ಚರಿತ್ರೆಯಿಂದ ತೊಡಗಿ) 'ಅನನ್ಯತೆ'ಯ ಪರಿಪೂರ್ಣ ಅನುಭವವೇ ಅನನ್ಯ ಸಾಂಸ್ಕೃತಿಕ ನೆಲೆಯಾಗಿ ಸಾಕಾರಗೊಳ್ಳಲು ಸಾಧ್ಯವಾಗಿದೆ ಎನ್ನುವುದನ್ನು ಸಾಧಿಸಹೊರಟರೆ, ಇದು;

> "As women, we are denied a symbolizeabel relationship with the Mother and to the Feminine." (Drucilla Cornell : 1998; 184)

ಎನ್ನುವ ಪ್ರಾಥಮಿಕ ಅರಿವಿನಿಂದ ತೊಡಗುವಂಥದ್ದು. ಸ್ತ್ರೀವಾದದ ಕ್ರಾಂತಿಕಾರಿ ಸಿದ್ಧಾಂತದ ಬೆಳಕಿನಲ್ಲಿ ಮಾತ್ರ ಬದುಕನ್ನು ಗ್ರಹಿಸಿಕೊಂಡರೆ, ಅನೇಕ ಬಾರಿ ವಾಸ್ತವ ಬದುಕಿನ ಸೂಕ್ಷ್ಮಗಳನ್ನು ಮತ್ತು ತತ್ತ್ವಕ್ಕೊಗ್ಗದ ವೈರುಧ್ಯಗಳನ್ನು ಎದುರಿಸಬೇಕಾಗುತ್ತದೆ. ಸ್ತ್ರೀವಾದದ ವಾಸ್ತವದ ಸಂಕೀರ್ಣತೆ ಎಂದರೆ, ಜಗತ್ತಿನ ಎಲ್ಲ ಸ್ತ್ರೀಯರ ಅನುದಿನದ ಜೀವನವು ಪ್ರತಿಬಿಂಬಿಸುವ ವೈರುಧ್ಯಗಳನ್ನು ನಿರಂತರವಾಗಿ ಶೋಧಿಸುತ್ತಲೇ ಹೋಗುವುದು. ಮತ್ತು ಆದರೊಳಗೆ ಅಭಿವ್ಯಕ್ತಗೊಳ್ಳುವ ದಮನ ಮತ್ತು ಪ್ರತಿರೋಧಗಳನ್ನು ಪರೀಕ್ಷಿಸುವುದಾಗಿದೆ. ಇದನ್ನು ಅನನ್ಯತೆಯ ನೆಲೆಯಲ್ಲಿ ಅತಿ ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ.

ಭಾರತೀಯ ಸ್ತ್ರೀವಾದಿ ಸಂದರ್ಭವು ಹಲವಾರು ಪ್ರಾದೇಶಿಕ ಸಂಸ್ಕೃತಿಯ ಎರಕ ರೂಪ. ಇದರಿಂದಾಗಿ ಅನನ್ಯತೆಯ ಸಂದರ್ಭದಲ್ಲಿ ಭಾರತೀಯ ಸ್ತ್ರೀವಾದವನ್ನು ಏಕತ್ರಗೊಳಿಸಿ ಒಂದು ವೈಚಾರಿಕ ಆಕೃತಿಯಾಗಿ ಗ್ರಹಿಸುವುದು ಮೇಲು ನೋಟಕ್ಕೆ ಸರಳವಾಗಿ ಕಾಣುತ್ತದೆ. ಆದರೆ 'ವಸಾಹತೋತ್ತರ ಭಾರತೀಯ ಸ್ತ್ರೀಯರ ನಿರ್ದಿಷ್ಟ ಧ್ವನಿಗಳು' ಎಂದು ಗುರುತಿಸುವಾಗ, ಅದರ ಪ್ರತಿನಿಧೀಕರಣದ ಪ್ರಶ್ನೆ

ಬಂದಾಗ, ಇದು ಊಹೆಗೂ ಮೀರಿ ಸಂಕೀರ್ಣತೆಗೆ ಒಳಗಾಗುತ್ತದೆ. 'ಅನನ್ಯತೆ'ಯು ತೀರಾ ಸೀಮಿತ ಆಯಾಮವನ್ನು ಪಡೆದು ಬಿಡುತ್ತದೆ.₁₂ ಹಲ್ಬ್ ರಾನೆಟ್ (Holub Renote)ಎನ್ನುವ ಇಟೆಲಿಯ ಸ್ತ್ರೀವಾದಿ ಚಿಂತಕಿ ಇದನ್ನು ಕೆಳಗಿನಂತೆ ಗುರುತಿಸುತ್ತಾರೆ.

> "Is difference good or bad, biological, Social or historical? Is it a weakness or a strength? should we forfeit a nation of sexual difference on the grounds that all people, men and women, are not essentially different from each other, but merely culturally constructed as different? can these constructions of masculinity and femininity be undone ? (Holub 1991; 124)

ಪಾಶ್ಚಾತ್ಯ ಸ್ತ್ರೀವಾದದ ಸಿದ್ಧಾಂತಗಳ ಕುರಿತಂತೆ ಹಲ್ಬ್‌ರಾನೆಟ್‌ವ್ಯಕ್ತಪಡಿಸುವ ಅಭಿಪ್ರಾಯವು, ಭಾರತೀಯ ಸ್ತ್ರೀವಾದದ ಸಿದ್ಧಾಂತಗಳ ಸಂದರ್ಭದಲ್ಲೂ ಪುರುಷಾಧಿಕಾರ, ಅವುಗಳೊಳಗೆ ಸ್ತ್ರೀ ರಕ್ಷಣೆ ಮತ್ತು ಪ್ರತಿರೋಧಗಳನ್ನು 'ಊಹಾತ್ಮಕ ತಾತ್ವಿಕ ನಿಲುವಿನಲ್ಲಿ ಅಭಿವ್ಯಕ್ತ' ಪಡಿಸುವ ಅತಿರೇಕತೆಯನ್ನು ಧ್ವನಿಸುತ್ತದೆ. ಎಂದರೆ, ಭಾರತೀಯ ಸ್ತ್ರೀವಾದ ಇಂಡಿಯಾದ ಸಮಸ್ತ ಸ್ತ್ರೀಯರ ಸಮಾನತೆ ಮತ್ತು ಗೌರವಗಳಿಗೆ ಬದ್ಧವಾಗಿರುವಂಥದ್ದು. ಆದರೆ, ಹಲವು ಸ್ತ್ರೀಯರ ಬದುಕು ಸ್ತ್ರೀವಾದವು ಗುರುತಿಸುವ 'ಅಬಲೆ' 'ಶೋಷಿತ' ಪಡಿಯಚ್ಚಿಗೆ ಹೊಂದಿಕೆಯಾಗುವುದಿಲ್ಲ. ಈ ಸಂದರ್ಭದಲ್ಲಿ ಸ್ತ್ರೀವಾದವು ಅದರ ಅಂತರ್‌ರಚನೆಯಲ್ಲಿ ಸಡಿಲತೆಯನ್ನು ಅನುಭವಿಸುವುದು ಸಹಜವಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಸ್ತ್ರೀಯರ ನೈಜವಾದ ಹಿತಾಸಕ್ತಿಗಳನ್ನು ಅವರಿಗೆ ಮನವರಿಕೆ ಮಾಡಿಕೊಡುವ ಮತ್ತು ಆ ನಿಟ್ಟಿನಲ್ಲಿ ಸ್ತ್ರೀಯರಿಗೆ ಮಾರ್ಗದರ್ಶನ ಮಾಡಬೇಕಾಗುವ ಗುರುತರ ಜವಾಬ್ದಾರಿಯನ್ನು ಸ್ತ್ರೀವಾದ ನಿಭಾಯಿಸಬೇಕಾಗುತ್ತದೆ. ಸಮಾಜದ ಜನತೆಯ ಮನಸ್ಸುಗಳನ್ನು ಬದಲಾಯಿಸಲು ಪ್ರಯತ್ನಿಸಬೇಕಾಗುತ್ತದೆ. ಇದು ಅನನ್ಯತೆಯ ಶೋಧನ ಮಾರ್ಗವಾಗಿ ಪರಿಣಮಿಸುತ್ತದೆ. ಸಾಮಾಜಿಕ ಪರಿವರ್ತನೆ ಎನ್ನುವುದು ಒಂದೊಂದು ಬಿಡಿ ಬಿಡಿ ಸಾಂಸ್ಕೃತಿಕ ಸಂದರ್ಭಗಳ ದುರಸ್ತಿಯಿಂದ ಆಗುವಂಥದ್ದಲ್ಲ. ಶೋಷಿತರು, ಶೋಷಕರು ಇರುವ ಸಮಾಜದಲ್ಲಿ ಶೋಷಿತರನ್ನು ಶಿಕ್ಷಿಸುವುದರಿಂದ ನಿರ್ದಿಷ್ಟ ಸಂದರ್ಭವೊಂದು ಪಲ್ಲಟಗೊಳ್ಳುವುದು ಅಸಂಭವ. ಯಾವುದೇ ಶೋಷಣೆಗೆ ಅವಕಾಶ ಕೊಡುವ ಸಾಮಾಜಿಕ ನಂಬುಗೆಗಳನ್ನು ಮತ್ತು ಸಂಸ್ಥೆಗಳನ್ನು ಬದಲಾಯಿಸುವ ಕಡೆ ಸ್ತ್ರೀವಾದ ದೃಢಪಯತ್ನಗಳನ್ನು ಮಾಡಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ 'ಮಾನವ ಹಕ್ಕುಗಳೇ ಬೇರೆ' 'ವ್ಯಕ್ತಿಗತ ಸ್ವಭಾವಗಳೇ ಬೇರೆ' ಎನ್ನುವ ಮುಖ್ಯ ಎಚ್ಚರ ಅದಕ್ಕಿರಬೇಕಾಗುತ್ತದೆ. 'ಸ್ತ್ರೀವಾದ'ದ ಸುಧಾರಣೆಯ ನೆಲೆಗಳು ಈ ನಿಟ್ಟಿನಲ್ಲಿ ಹೆಚ್ಚು ಪಾರದರ್ಶಕವಾಗಿ ಇರಬೇಕಾಗುತ್ತದೆ. ಇಂಡಿಯಾದ ಸ್ತ್ರೀವಾದದ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳ ಸುಧಾರಣಾ ಯೋಜನೆಗಳು ಹೆಚ್ಚು ಹೆಚ್ಚು ಜನರನ್ನು ಒಳಗೊಳ್ಳಬೇಕೆನ್ನುವುದರಲ್ಲಿ ಅದರ ಅನನ್ಯತೆಯು ಸಾಕಾರಗೊಳ್ಳುತ್ತದೆ. ಇಲ್ಲಿ ಹೆಚ್ಚು ಮುಖ್ಯವಾಗಿ ಕಾಣಿಸಿಕೊಳ್ಳುವುದು ಮಧುಕೀಶ್ವರ್ ಅವರಂತಹ ಕ್ರಿಯಾಶೀಲ ಸ್ತ್ರೀವಾದಿಗಳ ವೈಚಾರಿಕ ನಿಲುವು.

> "ಜನರನ್ನು ಒಡೆದು ಬೇರೆ ಮಾಡುವಂಥ ರಾಜಕಾರಣ ಅದರ ಹುಟ್ಟಿನಲ್ಲೇ ತೀರಾ ಸಂಕುಚಿತವಾದದ್ದು. ನಾವು ಎಂದಿಗೂ ಒಂದು ಗುಂಪನ್ನು ಇನ್ನೊಂದು ಗುಂಪಿನ ವಿರುದ್ಧ ಎತ್ತಿಕಟ್ಟಬಾರದು. ಒಂದು ಗುಂಪು ಇನ್ನೊಂದನ್ನು ಸಹಿಸುವುದನ್ನು ಕಲಿತಾಗ ಮಾತ್ರ ನಿಜವಾದ ಬದುಕು ಸಾಧ್ಯ. ಇದು ಸಾಧ್ಯವಾಗುವುದು ಯಾವಾಗ ಅಂದರೆ ಜನರು ತಮ್ಮ ಪರಸ್ಪರ

ಸಂಬಂಧಗಳಲ್ಲಿ (ಪ್ರಜ್ಞಾಪೂರ್ವಕವಾಗಿಯಾದರೂ) ಮಾನವೀಯರಾಗಿ ವರ್ತಿಸಿದಾಗ. ನಾವು ಈ ದಿಸೆಯಲ್ಲಿ ಕೆಲಸ ಮಾಡಬೇಕು." (ಮೀರಾ ಎಲ್.ಜಿ.(ಅನು) : ೧೯೯೭ ; ೧೧೪)

ಸ್ತ್ರೀಯರ ಅನನ್ಯತೆಯನ್ನು ಸಮುದಾಯದಲ್ಲಿ ಅತ್ಯಂತ ಪಾರದರ್ಶಕವಾಗಿ ಗುರುತಿಸಬೇಕಾಗುತ್ತದೆ. ವಾಸ್ತವದೊಡನೆ ಮುಖಾಮುಖಿಗೊಂಡಾಗ ಮಾತ್ರ ಇದು ಸಾಧ್ಯವಾಗುತ್ತದೆ. ಸ್ತ್ರೀಯರಿಂದ ಮಾತ್ರ ಸ್ತ್ರೀಯರ ಉದ್ಧಾರ ಸಾಧ್ಯ. ಪುರುಷರೆಲ್ಲರೂ ಸ್ತ್ರೀ ದ್ವೇಷಿಗಳು; ಸ್ತ್ರೀಯರನ್ನು ಗುರಿಯಾಗಿ ಪರಿಭಾವಿಸುವ ಸಮಾಜ ಮಾತ್ರ ಸ್ತ್ರೀಯರ ಅನನ್ಯತೆಯನ್ನು ಮಾನ್ಯ ಮಾಡುವುದು ಸಾಧ್ಯ ಎಂದು ಗ್ರಹಿಸುವುದು ತಪ್ಪಾಗುತ್ತದೆ. ವ್ಯಕ್ತಿಗಳ ಸಮಾಜದಲ್ಲಿ ಕೇವಲ ಪುರುಷರಿಗೆ ಮತ್ತು ಕೇವಲ ಸ್ತ್ರೀಯರಿಗೆ ಎನ್ನುವ ಒಡೆಯುವಿಕೆಯು ಆರೋಗ್ಯಪೂರ್ಣವಾದ ಸಂದರ್ಭವೊಂದನ್ನು ಸಮಾಜದಲ್ಲಿ ಹುಟ್ಟುಹಾಕಲು ವಿಫಲವಾಗುತ್ತದೆ. ಈ ನಿಟ್ಟಿನಲ್ಲಿ ಸ್ತ್ರೀಯರ ಧ್ವನಿ ಮತ್ತು ಪುರುಷರ ಧ್ವನಿಗಳಿಗೆ ಸಮಾಜದಲ್ಲಿ ಸಮಾನ ಮಾನ್ಯತೆ ಪ್ರಾಪ್ತವಾದಾಗ ಮಾತ್ರ ಅನನ್ಯವಾದ ಸಾಂಸ್ಕೃತಿಕ ನೆಲೆಯೊಂದನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಸ್ತ್ರೀಯರ ವಿಷಯಗಳಲ್ಲಿ ಯಾವುದೇ ಬದಲಾವಣೆ ಮಾಡಬೇಕಿದ್ದರೂ ಅದು ಕುಟುಂಬ ರಚನೆಯ ಮೂಲದಿಂದಲೇ ಕ್ರಿಯಾಶೀಲಗೊಳ್ಳಬೇಕು. ಸ್ತ್ರೀಯರ ಪರಿಸ್ಥಿತಿಯ ಸುಧಾರಣೆಯಲ್ಲಿ ಕುಟುಂಬ ಸಹಕರಿಸಿದರೆ ಮಾತ್ರ ಸ್ತ್ರೀಯರ ಸಬಲೀಕರಣದ ಸಮೀಕರಣ ಸುಲಭ ಸಾಧ್ಯವಾಗುತ್ತದೆ. ಸ್ತ್ರೀ - ಪುರುಷ ಲಿಂಗಧಾರಿತ ಅಸಮಾನತೆಯನ್ನು ಕುಟುಂಬದ ಮೂಲದಿಂದಲೇ ತೊಡೆದು ಹಾಕಿದಲ್ಲಿ ಮಾತ್ರ ಅನನ್ಯ ಸಾಂಸ್ಕೃತಿಕ ನೆಲೆ ಸಾಕಾರಗೊಳ್ಳುತ್ತದೆ.

### ೫.೧.೫ ಅನನ್ಯ ಸಾಂಸ್ಕೃತಿಕ ನೆಲೆ : ವ್ಯಕ್ತಿನಿಷ್ಠ ಆದರ್ಶ.

ಪುರುಷ ಮತ್ತು ಪುರುಷ ಕೇಂದ್ರಿತ ದೃಷ್ಟಿಕೋನವೇ ವ್ಯಾಪಕವಾಗಿ ಆವರಿಸಿರುವ ಸಮಾಜ- ಸಂಸ್ಕೃತಿಯೊಂದರಲ್ಲಿ ಸ್ತ್ರೀಯರ ಅನನ್ಯ ಸಾಂಸ್ಕೃತಿಕ ನೆಲೆ ಎನ್ನುವುದೇ ಒಂದು ಆದರ್ಶವಾದ 'Utopain' ಪರಿಕಲ್ಪನೆ. ಎಂದರೆ, ಸ್ತ್ರೀವಾದಿ ಆದರ್ಶ ಸಮಾಜ ಎನ್ನುವುದು ಒಂದು ದರ್ಪಣ ಸ್ಥಿತಿ (Mierar Stage). ಸ್ತ್ರೀಯರು ಅದರೊಳಗೆ ತಮ್ಮನ್ನು ನೇರವಾಗಿ ನೋಡಿಕೊಂಡಾಗ ಸಂಪೂರ್ಣ ಇರುವ ಸ್ಥಿತಿ, ಅವರ ಬದುಕಿನ ದೌರ್ಬಲ್ಯಗಳು, ಮಿತಿಗಳು ತಕ್ಷಣ ಗಮನಕ್ಕೆ ಬರುತ್ತವೆ. ಆದರೆ ಒಟ್ಟು ಸಮಾಜದ ಹಿನ್ನೆಲೆ, ಸಂದರ್ಭಗಳ ಮೂಲಕ ಗ್ರಹಿಸಿದಾಗ ಸ್ತ್ರೀವಾದಿ ಆದರ್ಶ ಸಮಾಜವು ಸಂಪೂರ್ಣ ಅವಾಸ್ತವವಾಗಿ ಕಾಣಿಸಿಬಿಡುತ್ತದೆ. ಸಮಾಜದಲ್ಲಿ ಪ್ರತಿ ವ್ಯಕ್ತಿಗಳು ಒಂದಲ್ಲ ಒಂದು ಆದರ್ಶದ ಸಮಾಜ (Utopion)ದ ಕಲ್ಪನೆಯನ್ನು ಹೊಂದಿರುವವರಾಗಿರುತ್ತಾರೆ. ಒಂದು ಆದರ್ಶ ತಾತ್ವಿಕತೆಗೆ ತಳುಕುಹಾಕಿದಂತೆ ಪ್ರತಿಯೊಬ್ಬ ಪ್ರಜ್ಞಾವಂತ ವ್ಯಕ್ತಿಗಳಲ್ಲಿಯೂ ಅವರದೇ ಆದ ನಡಾವಳಿಕೆಗಳಿರುತ್ತವೆ. ಈ ಅರ್ಥದಲ್ಲಿ 'Utopin' ಒಂದು ನೈತಿಕ ಅನನ್ಯತೆಯ ಸಂಭವನೀಯತೆಯ ಪ್ರತಿಫಲನವಾಗಿದೆ. ಇದನ್ನು ಕೇವಲ ಕಲ್ಪಿಸಿಕೊಳ್ಳುವುದಕ್ಕೆ ಮಾತ್ರ ಸಾಧ್ಯ. ಇದನ್ನು ಮೈಕಲ್‌ಫೊಕೋ ಅತಿ ಹೆಚ್ಚು ಸ್ಪಷ್ಟವಾಗಿ ನಿರೂಪಿಸುವ ಪ್ರಯತ್ನ ಮಾಡುವುದು ವ್ಯಕ್ತವಾಗುತ್ತದೆ.

"Foucanlt's use of the mirror metaphor may be helpful in clarifying the relationship between the utopia and the heterotopia; 'The mirror is after all, a utopia, since it is a palceless place, In the mirror, I see myself there where I

am not, in an unreal, virtual space that opens up behind the surface... But it is also a heterotopia in so for as the mirror does exist in reality, where it exerts a sort of connteraction on the position that I occupy..... (I) t makes this place that I occupy at the moment when I look at myself in the glass at once absolutely real, connected with all the space that surrounds it, and obsolutely unreal. Since in order to be perceived it has to pass through this virtual point which in over there" (Foucault : 1986; 24)

ಇದಕ್ಕೆ ಮುಖ್ಯ ಕಾರಣ, ಮೊದಲನೆಯದಾಗಿ, ಯಾವುದೇ ಸಮಾಜವಿರಲಿ ಅದರೊಳಗೆ ಸ್ತ್ರೀಯರೆಲ್ಲರೂ ಒಗ್ಗಟ್ಟಾಗಿ, ಒಂದು ಸ್ವತಂತ್ರ ಸಮುದಾಯವಾಗಿ ಕಾಣಿಸಿಕೊಳ್ಳದೇ ಇರುವುದು. ಎರಡನೆಯದಾಗಿ ಸಮಾಜವೊಂದರಲ್ಲಿ ವರ್ಗ, ಜನಾಂಗ, ವೃತ್ತಿ, ಜಾತಿ, ಧರ್ಮ ಮೊದಲಾದವುಗಳಲ್ಲಿ ಸ್ತ್ರೀಯರೆಲ್ಲರೂ ಹಂಚಿ ಹೋಗಿರುವುದು. ಇದರಿಂದಾಗಿ ಇಂಡಿಯಾದ ಸ್ತ್ರೀಯರು ಎದುರಿಸುತ್ತಿರುವ ಕೌಟುಂಬಿಕ ಆವರಣದ ಸಮಾನ ಎಳೆಗಳು ನಿಖರವಾಗಿ ಸಿಗುವಂತೆ, ಅವರವರ ಸಮುದಾಯದ ವಿಭಿನ್ನ ಕೌಟುಂಬಿಕ ರಚನೆಗಳು ಸಿಗುತ್ತವೆ. ಇದರಿಂದಾಗಿ ಈ ಕೆಳಗಿನ ಭಿನ್ನತೆಯನ್ನು ಗಮನದಲ್ಲಿ ಇರಿಸಬೇಕಾಗುವುದು ಅನಿವಾರ್ಯವಾಗುತ್ತದೆ.

೧) ಪ್ರಾದೇಶಿಕವಾಗಿ ಸ್ತ್ರೀಯರ ಸಂದರ್ಭ (ಗುಜರಾತ್, ರಾಜಸ್ತಾನ್, ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು, ಕೇರಳ, ಕರ್ನಾಟಕ ಎಂಬಂತೆ); ೨) ಜಾತಿಯ ನೆಲೆಯ ಸ್ತ್ರೀಯರ ಸಂದರ್ಭ (ವೈದಿಕ, ಅವೈದಿಕ, ಮುಸ್ಲಿಂ, ದಲಿತ ಇಂತಹ ಪ್ರಧಾನ ಜಾತಿ, ಉಪಜಾತಿಗಳ ಸ್ತ್ರೀಯರು); ೩)ನಗರೀಕರಣ ಪ್ರದೇಶದ ಸ್ತ್ರೀಯರ ಸಂದರ್ಭ (ಶಿಕ್ಷಣ, ವಿವಾಹ, ಸರಕಾರಿ ಉದ್ಯೋಗ, ಖಾಸಗೀ ಉದ್ಯೋಗ, ಕೈಗಾರಿಕಾ ಕ್ಷೇತ್ರದ ಉದ್ಯೋಗ ಇತ್ಯಾದಿಗಳಿಂದ); ೪)ಗ್ರಾಮೀಣ ಪ್ರದೇಶದ ಸ್ತ್ರೀಯರ ಸಂದರ್ಭ (ಸಾಕ್ಷರತೆ, ವಿವಾಹ, ಕೃಷಿ, ಕೂಲಿ, ಗೃಹ ಕಾರ್ಮಿಕತೆ ಮುಂತಾದವುಗಳಿಂದ) ಇವುಗಳ ಆಧಾರದ ಮೇಲೆ ಕೌಟುಂಬಿಕ ಸ್ವರೂಪದ ಅಧ್ಯಯನವನ್ನು ಪ್ರತ್ಯೇಕವಾಗಿ ನಡೆಸಬೇಕಾಗುತ್ತದೆ. ಇಂಡಿಯಾದ ಸ್ತ್ರೀ ಸನ್ನಿವೇಶಗಳಲ್ಲಿ ಅತ್ಯಂತ ಮಹತ್ವದ ಕಂದರವನ್ನು ವರ್ಗಗಳು, ಜಾತಿಗಳು ಸೃಷ್ಟಿಸುತ್ತವೆ. ಉಳಿದಂತೆ, ಇಂಡಿಯಾದ ಸ್ತ್ರೀಯರ ಒಟ್ಟು ಸಂದರ್ಭವನ್ನು ಕೆಳಗಿನಂತೆ ಗುರುತಿಸಬಹುದು.

"ಭಾರತೀಯ ಮಹಿಳೆಯರ, ಅದರಲ್ಲೂ ನಗರ ಪ್ರದೇಶದ ಮಹಿಳೆಯರ ಬದುಕಿನಲ್ಲಿ ಹೆಚ್ಚು ಬದಲಾವಣೆಗಳಾಗಿವೆ. ಮುನ್ನಡೆಯಂತೆ ಹಿನ್ನಡೆಯೂ ಇದೆ. ಗ್ರಾಹಕಗೀಳು, ಲಾಭಗಳಿಕೆಗಾಗಿ ಏನನ್ನಾದರೂ ಬಲಿಕೊಡಲು ಸಿದ್ಧವಿರುವ ಮೌಲ್ಯರಹಿತ ವಾಣಿಜ್ಯೋದ್ಯಮಗಳು, ಮಾಧ್ಯಮ ಪ್ರಪಂಚದ ವಿನಾಶಕಾರೀ ಪರಿಣಾಮಗಳು ಮಹಿಳೆಯ ಮೇಲೆ ಪರಿಣಾಮ ಬೀರುವುದು ಕಾಣಿಸುತ್ತಿವೆ. ಇಷ್ಟೆಲ್ಲ ಆದರೂ ಮುಖ್ಯವಾದ ಪ್ರಶ್ನೆ ಉಳಿದಿದೆ. ಈ ಬದಲಾವಣೆಗಳು ಗ್ರಾಮೀಣ ಮಹಿಳೆಯರನ್ನು ಅತ್ಯಂತ ಬಡ ಮಹಿಳೆಯರನ್ನು ಅಸಂಘಟಿತ ಕ್ಷೇತ್ರಗಳಲ್ಲಿನ ಮಹಿಳೆಯರನ್ನು ಎಷ್ಟು ತಾಗಿದೆ, ಅವರ ಬದುಕಿನಲ್ಲಿ ಎಷ್ಟು ಇತ್ಯಾತ್ಮಕ ಬದಲಾವಣೆಗಳನ್ನು ತಂದಿವೆ ಎಂಬ ಪ್ರಶ್ನೆಗೆ ಉತ್ತರ ಸಮಾಧಾನ ತರುವಂಥದಲ್ಲ. ಅನುಕೂಲತೆಗಳ ಕೊರತೆ, ಯಾಂತ್ರೀಕರಣ, ಕೃಷಿ ವಿಧಾನದ ನವೀಕರಣವೇ ಮೊದಲಾದ ಅಂಶಗಳು ಮಹಿಳೆಯರ ಬದುಕನ್ನು ಕಲಕಿವೆ. ತಂತ್ರಜ್ಞಾನ, ಕೌಶಲ್ಯಗಳು ಕೃಷಿಯಲ್ಲಾಗಲೀ ಗೃಹಕೈಗಾರಿಕೆಗಳಲ್ಲಾಗಲಿ

> ನುಗ್ಗಿದಾಗ ಯಾರಿಗೆ ತಂತ್ರಜ್ಞಾನದಲ್ಲಿ ಪ್ರವೇಶ ಉಂಟೋ ಕುಶಲತೆ ಅಷ್ಟಿಷ್ಟಾದರೂ ಉಂಟೋ ಅವರ ಪ್ರಾಧಾನ್ಯ ಹೆಚ್ಚುತ್ತದೆ. ಇಲ್ಲಿ ಸಹಜವಾಗಿ ಪುರುಷರಿಗೆ ಅದರ ಲಾಭ ಹೆಚ್ಚಾಗಿ ಸಿಕ್ಕಿತು. ಈ ಹೊಸ ಸನ್ನಿವೇಶದಲ್ಲಿ ಮಹಿಳೆಯರು ಹೊಸ ಹೊಸ ಸವಾಲುಗಳನ್ನು ತಡೆಗಳನ್ನು ಎದುರಿಸಬೇಕಾಗಿ ಬಂದಿದೆ." (ವಿಜಯಾ ದಬ್ಬೆ: ೧೯೯೭; ೪೦)

'ಸಾರ್ವಜನಿಕ ಜೀವನ' ಎನ್ನುವುದೇ ಪುರುಷರಿಗಾಗಿ ಎನ್ನುವ ಸನ್ನಿವೇಶಗಳು ಇರುವಲ್ಲಿ ಸ್ತ್ರೀಯರಿಗಾಗಿ ಯೋಜನೆಗಳನ್ನು ರೂಪಿಸುವ, ಸ್ತ್ರೀಯರ ಅಗತ್ಯಗಳೇನು ಎಂಬುದನ್ನು ನಿರ್ಣಯಿಸುವ ಎಲ್ಲಾ ಕಾರ್ಯಗಳನ್ನು ಪುರುಷರೇ ನಿರ್ವಹಿಸುತ್ತಿರುವುದು 'ಚರಿತ್ರೆ' ಮಾತ್ರವಲ್ಲ 'ವರ್ತಮಾನ' ಕೂಡ ಆಗಿದೆ. ಇಂಡಿಯಾದ ವಸಾಹತೋತ್ತರ ಸಂದರ್ಭವು ವ್ಯಕ್ತಿಗಳನ್ನು ಪ್ರಜಾಪ್ರಭುತ್ವಕ್ಕೆ ಸರಿಯಾಗಿ ಹೊಂದಿಕೆಯಾಗುವಂತೆ ಮಾಡುವಲ್ಲಿ ವಿಫಲವಾಗಿದೆ. 'ರಾಜಕೀಯ ಸಾಕ್ಷರತೆ' (Political Literacy) ಇಲ್ಲದ ಸಮಾಜಗಳಲ್ಲಿ ಹೆಚ್ಚಿನ ಪುರುಷರಂತೆ ಸ್ತ್ರೀಯರೂ ಕೂಡ ಪ್ರಜಾಪ್ರಭುತ್ವ ವ್ಯವಸ್ಥೆಯ ಬಗೆಗಾಗಲೀ, ಅದರಲ್ಲಿನ ವ್ಯಕ್ತಿಗಳ ಪಾತ್ರಗಳ ಬಗೆಗಾಗಲಿ, ಪ್ರಜ್ಞಾವಂತರಾಗಿಲ್ಲ. ಹಕ್ಕುಗಳನ್ನು ಸ್ವತಂತ್ರ್ಯವಾಗಿ ಪಡೆಯುವುದು, ಅದನ್ನು ವಿಚಾರಶೀಲತೆಯಿಂದ ಬಳಸಿಕೊಳ್ಳುವ ಬಗ್ಗೆ ಇರುವ ವ್ಯಕ್ತಿಗಳ ಮೌಢ್ಯತೆಯನ್ನು ಆಧುನಿಕ ರಾಜಕಾರಣ ದುರುಪಯೋಗ ಪಡಿಸಿಕೊಳ್ಳುತ್ತಿದೆ (ಚುನಾವಣೆ, ಮತದಾನ, ಆಡಳಿತದ ನೆಲೆಗಳಲ್ಲಿ). ರಾಜಕೀಯ ಸಬಲೀಕರಣ (Political Empowerment)ವೆಂಬುದು ಸ್ತ್ರೀಯರ ಸಬಲೀಕರಣದ ಒಂದು ಅನಿವಾರ್ಯ ಅಂಗ. •

> "Empowerment has become a fashionable and buzzy word. It essentially means decentarlisation of authority and power. It aims at getting participation of deprived sections of people if decision making process. In other words giving voice to voiceless. Activists want government to empower poor people including woman by legislative measures and welfare programmes. Unless capacity is build in these sections in reality, the power is used by others rather than the section for which they are munant." (Promilla Kapur : 2001;1)

ಆದರೆ ಸಬಲೀಕರಣವೆಂದರೆ, ಸ್ತ್ರೀಯರು ಇರುವ 'ಸಮಾನ ಸ್ಥಾನಮಾನ', 'ಅವಕಾಶ' ಮತ್ತು ಸ್ವಾತಂತ್ರ್ಯಗಳಿಂದ ಬೆಳವಣಿಗೆ ಹೊಂದುವ ಸ್ಥಿತಿ. ಗಾಂಧೀಜಿ ಹೇಳುವಂತೆ :

> 'The mind is restless bird, the more it gets the more it wants and still reminds unsatisfied . The more we indulge in our possition. The more unbridle they become." (1992; 4)

ಈ ಅರ್ಥದಲ್ಲಿ ಸಬಲೀಕರಣದ ಮುಖ್ಯ ಗುರಿ ಎಂದರೆ, ಮೂರು ಆಯಾಮಗಳಲ್ಲಿ ನಡೆಯಬೇಕಾದ ಕ್ರಾಂತಿ. ಮೊದಲನೆಯದಾಗಿ, ವ್ಯಕ್ತಿಗಳ ಹೃದಯದಲ್ಲಿ ಸಂಚಲನಾತ್ಮಕವಾಗಿ ನಡೆಯಬೇಕಾಗುವ ಸಮಗ್ರ ಪರಿವರ್ತನೆ. ಎರಡನೆಯದಾಗಿ, ರಚನಾತ್ಮಕವಾಗಿ ಪರಿವರ್ತಿಸಿಕೊಳ್ಳಬೇಕಾದ ನಡಾವಳಿಕೆಗಳು, ಆ ಮೂಲಕವಾಗಿ ಬದುಕು. ಮೂರನೆಯದಾಗಿ, ಮಾನವೀಕರಣಕ್ಕೆ ಒಳಪಡಬೇಕಾದ ಸಮಗ್ರ ಪರಿಸರ. ಈ ಮೂರು ಆಯಾಮಗಳಲ್ಲಿನ ಬದಲಾವಣೆಯಿಂದ ಸ್ತ್ರೀ- ಪುರುಷರು 'ಸಹಜ ಪ್ರವೃತ್ತಿಗಳಿಗೂ' ಅವುಗಳ ನಿಯಂತ್ರಕ ಶಕ್ತಿಗೂ ಇರಬೇಕಾದ ಸಮತೆ ತಪ್ಪಿಹೋಗುವ ಮಾನಸಿಕ ಜಾಲ' (Psychological trap)ದಿಂದ ಹೊರಬರಲು ಸಾಧ್ಯ ಎಂಬುದಾಗಿ ಗಾಂಧೀಜಿ ಪರಿಭಾವಿಸುತ್ತಾರೆ. ಮಾತ್ರವಲ್ಲದೆ, ನಿಜವಾದ ಸಬಲೀಕರಣದ ಅರ್ಥವೇ ಇದೆಂದು

ಪ್ರತಿಪಾದಿಸುತ್ತಾರೆ. ಲಿಂಗ ವ್ಯವಸ್ಥೆಯ ಮೌಲ್ಯಗಳು ನಿರಸನಕೊಳ್ಳುವ ಮೂಲಕ ಇಂತಹ ಪರಿವರ್ತನೆ ಸಾಧ್ಯವಾಗುತ್ತದೆ. (ಸ್ತ್ರೀಯರ ಬಗ್ಗೆ ಸ್ತ್ರೀಯರಿಗೆ ಇರುವ ಮೂಲಭೂತವಾದ ಕೆಲವು ಕಲ್ಪನೆಗಳು; ಸ್ತ್ರೀಯರ ಬಗ್ಗೆ ಪುರುಷರಿಗಿರುವ ಪೂರ್ವಗ್ರಹ ಕಲ್ಪನೆಗಳು ಬದಲಾದಾಗ ಒಟ್ಟು ಸಮಾಜದ ಪರಿವರ್ತನೆ ಸಾಧ್ಯವಾಗುತ್ತದೆ.) ಸ್ತ್ರೀ- ಪುರುಷ ಸಂಬಂಧಕ್ಕೆ ಆರೋಗ್ಯ ಪೂರ್ಣ ಪ್ರೌಢಿಮೆ ಪ್ರಾಪ್ತವಾಗುತ್ತದೆ.

ವ್ಯಾಪಕಾರ್ಥದಲ್ಲಿ ಸ್ತ್ರೀಯರ ಸಬಲೀಕರಣವೆನ್ನುವ ಪರಿಕಲ್ಪನೆ ಸಮಾಜದಲ್ಲಿ ಶಿಕ್ಷಣ, ಉದ್ಯೋಗದ ಅವಕಾಶಗಳು, ಬಡತನ, ಆರೋಗ್ಯ ರಕ್ಷಣೆ, ಪರಿಸರ, ರಾಜಕೀಯ ಪ್ರತಿನಿಧೀಕರಣ, ಮಾನವೀಯ ಹಕ್ಕುಗಳು, ಕಾನೂನಿನ ಸಮನ್ವಯತೆ, ಸ್ತ್ರೀ ಮತ್ತು ಮಾಧ್ಯಮ, ಕುಟುಂಬ ಸಂರಚನೆ, ಇಂತಹ ಹಲವು ನೆಲೆಗಳಿಂದ 'ಕಟ್ಟುವ ಪ್ರಕ್ರಿಯೆ' (Constract Process)ಯಾಗಿದೆ. ೬ ಇದು ನಿರಂತರವಾಗಿ ಜರುಗಬೇಕಾಗಿರುವುದು ಅನಿವಾರ್ಯವಾಗಿದೆ. ಇದಕ್ಕೆ ಹಲವು ನೆಲೆಗಳಲ್ಲಿ ನಿರಂತರ ಪ್ರಯತ್ನ ಕಾರ್ಯಗತಗೊಳ್ಳಬೇಕು. ಸ್ತ್ರೀ-ಪುರುಷರು ಸಮವಾಗಿ ಹಂಚಿಕೊಳ್ಳುವ ಸಮಾಜದಲ್ಲಿ ಮಾತ್ರ ಸಮತೋಲನವನ್ನು ಸ್ಥಾಪಿಸುವುದು ಸುಲಭವಾಗುತ್ತದೆ. ಈ ನೆಲೆಯಲ್ಲಿ ಆಗಬೇಕಾದುದೆಂದರೆ :

> "ನಮ್ಮ 'ಸಂಸ್ಕೃತೀಕರಣ'ದಲ್ಲಿರುವ 'ಖಾಸಗಿ'ಯಾದದ್ದು ಮಾತ್ರ ಮಹಿಳೆಗೆ ಸಂಬಂಧಿಸಿದೆ ಎಂಬ ಭಾವನೆ ಹೋಗಬೇಕು. ಮಹಿಳೆಯರೂ ಈ ಸಮಾಜಕ್ಕೆ ಸಂಬಂಧಿಸಿದ್ದಾರೆ ಈ ಸಮಾಜವೂ ಮಹಿಳೆಯರಿಗೆ ಪುರುಷರಷ್ಟೇ ಸಂಬಂಧಿಸಿದೆ. ಇದರ ಹೊಣೆಗಾರಿಕೆ ಇಬ್ಬರದೂ ಆಗಿದೆ. ಈ ಹೊಣೆಯನ್ನು ರೂಢಿಸುವುದು ಹಾಗೂ ಮಹಿಳೆಯರಲ್ಲಿ ಮುಂದಾಳುತನವನ್ನು ಬೆಳಸುವುದು ಪೂರಕವಾಗಿ ಆಗಬೇಕಾದ ಕೆಲಸವಾಗಿದೆ. ಮಹಿಳೆಯರಲ್ಲಿ ನೈಸರ್ಗಿಕವಾಗಿ ರಾಜಕೀಯ ಆಸಕ್ತಿ ಇಲ್ಲ ಎಂದು ವಾದಿಸುವ ಭೂಪರು ನೈಸರ್ಗಿಕವಾಗಿ ಮಹಿಳೆಯರು ಏನು ಎಂಬುದನ್ನು ಅರ್ಥಮಾಡಿ ಕೊಂಡಿದ್ದಾರೆಯೇ? ಅಥವಾ ಅವರ ಸಹಜ ಆಸಕ್ತಿ, ಸಾಮರ್ಥ್ಯಗಳನ್ನು ಬೆಳಸಿಕೊಳ್ಳಲು ಅವಕಾಶ ಕೊಟ್ಟಿದ್ದಾರೆಯೇ? ರಾಜಕಾರಣದ ಬಾಗಿಲನ್ನು ಹೆಂಗಸರಿಗೆ ಮುಚ್ಚಿ ಅವರಿಗೆ ಒಳಗೆ ಬರಲು ಆಸಕ್ತಿಯಿಲ್ಲ ಎಂದರೆ ಏನರ್ಥ? ಮೊದಲು ಬಾಗಿಲು ತೆರೆಯಲಿ ಆ ಮೇಲೆ ಅವರು ಒಳಗೆ ಬರುತ್ತಾರೋ ಅದಕ್ಕೆ ಬೆನ್ನು ಹಾಕಿ ಓಡಿ ಹೋಗುತ್ತಾರೋ ನೋಡೋಣ. ಮಹಿಳೆಯರಿಗೆ 'ಮದುವೆ'ಯ 'ಕುಟುಂಬ'ದ ಆದರ್ಶ ಗಳಷ್ಟನ್ನೇ ತುಂಬಿ ಅವರ ಮೇಲೆ ಆ ಸಂಬಂಧಿ ಹೊರೆಗಳನ್ನು ಹೇರಿ ಅವರ ಉಳಿದ ಆಸಕ್ತಿಗಳನ್ನು ಹೂಳಿದ ಇತಿಹಾಸವನ್ನು ಇಲ್ಲಿಗೆ ನಿಲ್ಲಿಸೋಣ. ಬದುಕಿನ 'ಖಾಸಗಿ', 'ಕೌಟುಂಬಿಕ' ಜವಾಬ್ದಾರಿಗಳನ್ನು ಪುರುಷರೂ; 'ಸಾರ್ವಜನಿಕ' ಜವಾಬ್ದಾರಿಗಳನ್ನು ಮಹಿಳೆಯರೂ ಹಂಚಿಕೊಂಡರೆ, ಅವರವರ ಸಾಮರ್ಥ್ಯವನ್ನು ಅವರು ಕುಟುಂಬ, ಸಮಾಜಕ್ಕೆ ಕೊಡಲು ಬಿಟ್ಟರೆ ನಮ್ಮ ಸಮಾಜ ಸಮೃದ್ಧಿಯನ್ನು ಕಂಡೀತು."(ವಿಜಯಾದಬ್ಬೆ :೧೯೯೭; ೭೩,೭೪)

ಜಗತ್ತಿನ ಎಲ್ಲಾ ರಾಷ್ಟ್ರಗಳ ಕುಟುಂಬಗಳಂತೆ, ಇಂಡಿಯಾದ ಕುಟುಂಬ ವ್ಯವಸ್ಥೆಯೂ ಸಹ ಜಾಗತೀಕರಣದ ಪ್ರಕ್ರಿಯೆಯಲ್ಲಿ ತೀವ್ರಗತಿಯ ಪಲ್ಲಟವನ್ನು ಅನುಭವಿಸಿದೆ. 'ಸಂಕೀರ್ಣವಾದ ಕುಟುಂಬ'

ಸಂರಚನೆ ನಗರ ಗ್ರಾಮಾಂತರವೆನ್ನದೆ ಎಲ್ಲಾ ಕಡೆಗಳಲ್ಲೂ ಕಂಡು ಬರುತ್ತಿವೆ. ಇದರೊಳಗೆ ವೃದ್ಧರ ಜೀವನವೆನ್ನುವುದು ದಿನದಿಂದ ದಿನಕ್ಕೆ ಅಮಾನುಷಗೊಳ್ಳುತ್ತಿದೆ. ಮಕ್ಕಳ ಮತ್ತು ವೃದ್ಧರ ಹೊಣೆಗಾರಿಕೆಯ ಬಗ್ಗೆ ಗಂಭೀರವಾಗಿ ಆಲೋಚಿಸಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಇದಕ್ಕೆ ಮುಖ್ಯ ಕಾರಣ, 'ಸಂಕೀರ್ಣವಾದ ಒಂಟಿ ಕುಟುಂಬ ಘಟಕ' ಮತ್ತು ಅಷ್ಟೇ ಗಂಭೀರವಾದದ್ದು ಅದರೊಳಗಿನ ಮೌಲ್ಯಗಳ ಕುಸಿತ. ಇದರ ಹೊಣೆಗಾರಿಕೆಯನ್ನು ಸ್ತ್ರೀಯರೂ, ಪುರುಷರೂ ಸಮಾನವಾಗಿಯೇ ಹೊರಬೇಕಾಗುತ್ತದೆ. ಪುರುಷರು ಕುಟುಂಬ ಜವಾಬ್ದಾರಿಗಳಿಂದ ಪಲಾಯನ ಮಾಡಿ ಶತಮಾನಗಳೇ ಕಳೆದಿದೆ. ಮಕ್ಕಳ ಮತ್ತು ವೃದ್ಧರ ಪಾಲನೆ ಪೋಷಣೆಯಲ್ಲಿ ಪುರುಷರ ಪಾಲು ಕಾಲು ಭಾಗಕ್ಕಿಂತಲೂ ಕಡಿಮೆ. ಕುಟುಂಬದ ಜವಾಬ್ದಾರಿಯನ್ನು ಪುರುಷರಿಗೆ ಸಮನಾಗಿ ಹಂಚಿಕೆಮಾಡಬೇಕಾದದ್ದು ಮತ್ತು ಮಕ್ಕಳ ವೃದ್ಧರ ಜವಾಬ್ದಾರಿಯನ್ನು ಪುರುಷರು ಸಹ ಮಹತ್ವದೆಂದು ಪರಿಗಣಿಸುವಂತೆ ಮಾಡಬೇಕಾದದ್ದು ಸ್ತ್ರೀಯರ ಮೇಲಿರುವ ಗುರುತರ ಹೊಣೆಗಾರಿಕೆಯಾಗಿದೆ.

> "The family in India is in a transitional condition. The old people are expected to find for them selves, many are neglected, some made to leave their own homes, unloved and disrespected. A major reason for such unharmonious conditions is the lack of training in correct values. (Pramilla Kapur:1923; 379)

ಎನ್ನುವುದು ಗಣನೀಯ ಅಂಶ. ಇದರಿಂದಾಗಿ ಸುದೃಢವಾದ ಆಧುನಿಕ ಕುಟುಂಬ ಸಂರಚನೆಯು ಅಭಿವೃದ್ಧಿಶೀಲ ನಿಯಮಾವಳಿಗಳನ್ನು ಮತ್ತು ಪ್ರಗತಿಪರ ಆಚರಣಾತ್ಮಕ ಸಾಧನಗಳನ್ನು ಹೊಂದಬೇಕಾಗುತ್ತದೆ. ಇದು ಕುಟುಂಬದಲ್ಲಿನ ಪತಿ-ಪತ್ನಿಯರ ಆರೋಗ್ಯಪೂರ್ಣವಾದ ಸಂಬಂಧದ ತಳಹದಿಯನ್ನು ಆಧರಿಸಿ ಕೊಂಡಿರುವಂಥದ್ದು. ಶಾರೀರಿಕವಾಗಿ ಮತ್ತು ಆತ್ಮಸಂಬಂಧವಾಗಿ (Spiritually) ಕೌಟುಂಬಿಕ ದಾಂಪತ್ಯವು ಸುದೃಢಗೊಳ್ಳಬೇಕಾಗುತ್ತದೆ. 'ನಾನು' ನನಗಾಗಿ ಎನ್ನುವ ಸೀಮಿತ ಎಲ್ಲೆಯನ್ನು ನಿರಾಕರಿಸುವುದು ಸೌಹಾರ್ದಯುತವಾದ ಮಾನವತೆಗೆ ಮಾತ್ರ ಸಾಧ್ಯ. 'ನಾನು - ಇತರರಿಗಾಗಿ; ಇತರರು - ನನಗಾಗಿ' ಎನ್ನುವ ಮಾನವತೆಯ ಪಾಠ ಕುಟುಂಬದಿಂದಲೇ ಉಗಮಗೊಳ್ಳಬೇಕಾಗುತ್ತದೆ. ಈ ಅರ್ಥದಲ್ಲಿ ತಂದೆ- ತಾಯಿಗಳು ವ್ಯಕ್ತಿಯ ಮೊದಲ ಗುರುಗಳಾಗುತ್ತಾರೆ. 'ಮನೆ' ಎನ್ನುವುದು ಮೊದಲ ಪಾಠ ಶಾಲೆಯಾಗುತ್ತದೆ. ಸೌಹಾರ್ದಯುತ, ಗೌರವಯುತ ತಂದೆ - ತಾಯಿ - ಮಕ್ಕಳ ಸಂಬಂಧಗಳು ಮಾತ್ರ ಅನನ್ಯವಾದ ಪರಿಪೂರ್ಣ ಕುಟುಂಬವನ್ನು ನಿರ್ವಚಿಸಲು ಸಾಧ್ಯ. 'ಪಿತೃಪ್ರಧಾನ ಕುಟುಂಬ ವ್ಯವಸ್ಥೆ' ಅಥವಾ 'ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ' ಲಿಂಗ ಪ್ರಧಾನವಾದ ಈ ಎರಡೂ ವ್ಯವಸ್ಥೆಯ ಒಳಗೆ ಕೂಡ ಪ್ರಧಾನ (dominat) ಮತ್ತು ಅಧೀನ (Sabodiant) ಎನ್ನುವ ಅಹಂ (ego) ಧೋರಣೆಗಳು ಕಾರ್ಯಪ್ರವೃತ್ತಗೊಳ್ಳುತ್ತಿರುತ್ತವೆ. ಮಾನವೀಯ ಮೌಲ್ಯ ಪ್ರಧಾನವಾದ ಕುಟುಂಬ ವ್ಯವಸ್ಥೆಯಲ್ಲಿ ಮಾತ್ರ ಕರ್ತವ್ಯಗಳು ಮತ್ತು ಜವಾಬ್ದಾರಿಗಳು ಇಬ್ಬರಿಗೂ ಅನ್ವಯವಾಗುತ್ತವೆ. ಹಾಗೂ ಪರಸ್ಪರರಿಗಾಗಿ ಆ ಮೂಲಕ ಪೂರ್ಣ ಕುಟುಂಬಕ್ಕಾಗಿ ಎನ್ನುವ ಧೋರಣೆ ಅರಿವಿನ ಮಟ್ಟದಲ್ಲಿ ವಿಸ್ತಾರಗೊಳ್ಳುತ್ತದೆ. (ಮಕ್ಕಳು, ವೃದ್ಧರು ಬದುಕಿನ ಕರ್ತವ್ಯಗಳ ಭಾಗ. ಅವರ ಸಂರಕ್ಷಣೆ ಜೀವನ ವಿಸ್ತರಣೆಯ ಪ್ರಮುಖ ಪಾಶ್ವಿಕ ಅಂಗ. ಪರಸ್ಪರ ಮನ್ನಣೆ, ಗೌರವ, ಪ್ರೀತಿಯನ್ನು ಹಂಚುವುದರಿಂದ ಮಾತ್ರ ಕುಟುಂಬದ ಐಕ್ಯತೆ (Intigrity)ಯನ್ನು ಕಾಪಾಡುವುದು ಸಾಧ್ಯ. ಇದು ವ್ಯಕ್ತಿಗಳ ಸಾಮಾಜಿಕ ಜವಾಬ್ದಾರಿಯು ಹೌದು.)

'ಹಿಂಸಾರಹಿತ ಕುಟುಂಬ'ಗಳನ್ನು (Violence- free family) ನಿರ್ಮಾಣ ಮಾಡುವುದೇ ಅನನ್ಯ ಸಾಂಸ್ಕೃತಿಕ ನೆಲೆಯ ವಸ್ತುನಿಷ್ಠ ಆದರ್ಶವಾಗಿದೆ. ·₀₀ ಸ್ತ್ರೀ- ಪುರುಷರ ಸಹಭಾಗಿತ್ವವೇ ಇದರ ಮಾಧ್ಯಮ. ಅನನ್ಯ ಸಾಂಸ್ಕೃತಿಕ ಕುಟುಂಬ ಸಂರಚನೆಯು ಸಮಾನತೆಯ ಆಧಾರದ ಮೇಲೆ ಚಲನಶೀಲಗೊಳ್ಳುತ್ತದೆ. ಜಾಗತೀಕರಣಗೊಂಡ ಕಂಪ್ಯೂಟರ್ ಸಮಾಜ ವ್ಯವಸ್ಥೆಯಲ್ಲಿ ಬದುಕಿನ ದೃಷ್ಟಿಕೋನವೇ ಯಾಂತ್ರೀಕರಣಗೊಳ್ಳುತ್ತಿವೆ. ವಸ್ತುಸ್ಥಿತಿಯ ಯಾಂತ್ರಿಕತೆ ವ್ಯಕ್ತಿಗಳ ಮನಸ್ಸು- ಮಿದುಳನ್ನು ಹೆಪ್ಪೆಬ್ಬು ಅಮಾನವೀಯಗೊಳಿಸುವಂಥದ್ದಾಗಿದೆ. ಇಂತಹ ಸಂದರ್ಭಗಳಲ್ಲಿ ಮುಂಬರುವ ಜನಾಂಗವನ್ನು ಸಂಸ್ಕಾರ ಪೂರ್ಣವಾಗಿ ರೂಪಿಸುವ ಹೊಣೆಗಾರಿಕೆ ಅನನ್ಯ ಸಾಂಸ್ಕೃತಿಕ ಕುಟುಂಬ ಸಂರಚನೆಗಳ ಮೇಲಿವೆ. ಸ್ವಂತ ಬದುಕಿನ ನಿರ್ಮಾಣಕಾರ್ಯದಲ್ಲಿ ಶಿಷ್ಟ ಮತ್ತು ದುಷ್ಟ, ಒಳ್ಳೆಯ ಮತ್ತು ಕೆಟ್ಟ, ಔಚಿತ್ಯ ಮತ್ತು ಅನೌಚಿತ್ಯ, ಇವುಗಳ ಸ್ಪಷ್ಟ ಕಲ್ಪನೆಯನ್ನು ಅಹಿಂಸಾತ್ಮಕ ಮೂಲದಿಂದ ಮಾತ್ರವೇ ಮಕ್ಕಳಿಗೆ ಹೇಳಿಕೊಡಬೇಕಾಗುತ್ತದೆ. ಉದಯೋನ್ಮುಖ ಜನಾಂಗದಲ್ಲಿ ಸ್ವಾವಲಂಬನೆ, ಸ್ವ-ನಿರ್ಣಯ, ಸ್ವ-ವ್ಯಕ್ತಿತ್ವಗಳು ರೂಪುಗೊಳ್ಳಬೇಕಾಗಿದೆ. ಮತೀಯ, ಜಾತೀಯ, ಧರ್ಮದ ಸೀಮಿತ ಗಡಿಗಳಿಂದ ಪಾರಾದರೆ ಮಾತ್ರ ಮಾನವೀಯ ಮೌಲ್ಯಗಳು ವ್ಯಕ್ತಿಗಳಲ್ಲಿ ಸಂಸ್ಕರಣಕ್ಕೆ ಒಳಗಾಗುತ್ತವೆ. ಇಂಡಿಯಾದಂಥ ರಾಷ್ಟ್ರಗಳಲ್ಲಿ ಇದಕ್ಕೆ ಕುಟುಂಬದ ನೆಲೆಗಟ್ಟೇ ಏಕಮೇವ ಆಧಾರವಾಗಿದೆ. ಗಂಡ- ಹೆಂಡತಿ ಇಬ್ಬರು ವಿಭಿನ್ನ ಪರಿಸರಗಳಲ್ಲಿ ರೂಪಿತಗೊಳ್ಳುವ ಬೇರೆ ಬೇರೆ ವ್ಯಕ್ತಿಗಳು. ಕುಟುಂಬ ರಚನೆಯಲ್ಲಿ ವಿವಾಹವಾಗಿ ಒಟ್ಟಿಗೆ ಬದುಕಿದ ಮಾತ್ರದಿಂದ ಸಂಸ್ಕಾರಗಳು ಪಲ್ಲಟಗೊಳ್ಳುವುದು ಅಸಾಧ್ಯ. ಅದಕ್ಕೆ ದೀರ್ಘ ಅವಧಿಯ ಸಾಹಚರ್ಯ, ತಾಳ್ಮೆ, ನಂಬಿಕೆಗಳು ಅತ್ಯಗತ್ಯ. ಇದರ ಕೊರತೆಯಿಂದ ಗಂಡ ಹೆಂಡತಿ ಪರಸ್ಪರರು ದೋಷಗಳನ್ನು ಮತ್ತು ದೌರ್ಬಲ್ಯಗಳನ್ನು ತಿದ್ದುವುದೇ ಜೀವನ ಧ್ಯೇಯವಾಗಿ ಮಾರ್ಪಡಿಸಿಕೊಂಡು ವಿಫಲ ದಾಂಪತ್ಯಕ್ಕೆ ಕಾರಣರಾಗುವುದು ಸಮಾಜದಲ್ಲಿ ವ್ಯಕ್ತವಾಗುವ ಅಂಶವಾಗಿದೆ. ·₀₀ ಒಬ್ಬರು ಮತ್ತೊಬ್ಬರನ್ನು ಆಕ್ಷೇಪಣೆ ಮಾಡುವುದು ಅಥವಾ ತಿದ್ದಲು ಪ್ರಯತ್ನಿಸುವುದು, ಅಥವಾ ಗಂಡ ಹೆಂಡತಿಯರಿಬ್ಬರೂ ದೋಷಾರೋಪಣೆಯಲ್ಲಿ ತೊಡಗುವುದನ್ನು ವರ್ತನಾಮನಃಶಾಸ್ತ್ರ 'ಪ್ರೊಜೆಕ್ಷನ್' (Projection)ಎಂಬ ಪರಿಕಲ್ಪನೆಯ ನೆಲೆಯಲ್ಲಿ ವ್ಯಾಖ್ಯಾನಿಸುತ್ತದೆ. ಎಂದರೆ, ವ್ಯಕ್ತಿ (ಸ್ತ್ರೀ - ಪುರುಷ) ದಬ್ಬಾಳಿಕೆ ಮಾಡುವವರೋ, ಚಂಚಲರೋ, ಅಥವಾ ಆಸೆಬುರುಕರೋ ಆದರೆ ಆ ದೋಷಗಳು ಸಹಚರರಲ್ಲೇ ಇವೆ ಎನ್ನುವ ತೀರ್ಮಾನಕ್ಕೆ ಬರುವುದು. ಅಲ್ಲದೆ, ವ್ಯಕ್ತಿಗಳು (ಸ್ತ್ರೀ- ಪುರುಷ) ಅವರ ಸ್ವಭಾವಕ್ಕೆ ಅನುಗುಣವಾಗಿ ಸಹಚರರನ್ನು ಸುಧಾರಿಸಲೋ ಅಥವಾ ಶಿಕ್ಷಿಸಲು ಇಷ್ಟ ಪಡುವುದು. ಹೀಗಾದಾಗ, ಇಬ್ಬರೂ ತಮ್ಮ ತಮ್ಮ ಸಮಸ್ಯೆಗಳನ್ನು ನಿರ್ಲಕ್ಷಿಸುತ್ತಾರೆ ಮತ್ತು ತಮ್ಮ ವಿಕಾಸಕ್ಕೆ ಅಗತ್ಯವಾದ ಯಾವುದೇ ಕ್ರಮವನ್ನು ಕೈಗೊಳ್ಳಲು ಅಸಮರ್ಥರಾಗುತ್ತಾರೆ.

ಆಧುನಿಕ ವರ್ತನಾಮನಃಶಾಸ್ತ್ರ ಪರಿಕಲ್ಪಿಸುವ ಈ ರೀತಿಯ 'ಪ್ರೊಜೆಕ್ಷನ್'ನ ಮತ್ತೊಂದು ರೂಪವೆಂದರೆ, ವ್ಯಕ್ತಿಗಳು ಅವರವರ ವೈಯಕ್ತಿಕ ಸಮಸ್ಯೆಗಳನ್ನು ಅವರವರ ಮಕ್ಕಳಲ್ಲಿಯೂ ಆರೋಪಿಸುವುದು. ನಿಖರವಾಗಿ ಪತಿ- ಪತ್ನಿಯರು ಮಕ್ಕಳಿಗಾಗಿ ಆಸೆ ಪಡುವುದೇ ಎಷ್ಟೋ ಸಲ ಈ ರೀತಿಯ ಪ್ರೊಜೆಕ್ಷನ್‌ಗೆ ನಿದರ್ಶನವಾಗುತ್ತದೆ ಎಂಬುದನ್ನು 'ಕೇಸ್‌ಸ್ಟಡಿ'ಗಳ ಮೂಲಕ ಮನಃಶಾಸ್ತ್ರ ನಿರೂಪಿಸುತ್ತದೆ. ಇಂಥ ಸಂದರ್ಭಗಳಲ್ಲಿ, ಮಕ್ಕಳಿಗಾಗಿ ಪಡುವ ಆಸೆಯು, ವ್ಯಕ್ತಿಗಳ 'ಅಸ್ತಿತ್ವ'ದ ಸಮಸ್ಯೆಯನ್ನು ಮಕ್ಕಳೂ

ಅನುಭವಿಸುವಂತೆ ಮಾಡುವ ಉದ್ದೇಶದಿಂದ ಪ್ರೇರಿತವಾಗಿರುತ್ತದೆ. ಯಾರು ಅವರವರ ಬದುಕನ್ನು ಅರ್ಥಪೂರ್ಣವಾಗಿ ಮಾಡುವುದರಲ್ಲಿ ಅಯಶಸ್ವಿಯಾಗಿರುವೆವೆಂದು ಭಾವಿಸುತ್ತಾರೋ ಅವರು, ಕನಿಷ್ಠಪಕ್ಷ ಅವರ ಮಕ್ಕಳ ಬದುಕಿನಲ್ಲಾದರೂ ಅರ್ಥಪೂರ್ಣತೆಯನ್ನು ಕಂಡುಕೊಳ್ಳಬಯಸುತ್ತಾರೆ. ಹೀಗಾದಾಗ ಅವರು ಅವರ ಬದುಕನ್ನು ಹಾಳು ಮಾಡಿಕೊಳ್ಳುವುದಲ್ಲದೆ ಅವರ ಮಕ್ಕಳ ಬದುಕನ್ನೂ ಹಾಳು ಮಾಡುತ್ತಾರೆ. ಏಕೆಂದರೆ ಪ್ರತಿಯೊಬ್ಬರೂ ಅವರ ಅಸ್ತಿತ್ವದ ಸಮಸ್ಯೆಗಳನ್ನು ಅವರೇ ಪರಿಹರಿಸಿಕೊಳ್ಳಬೇಕಾಗುತ್ತದೆ. ಹೊರತು ಇತರರ ಮೂಲಕವಾಗಿ ಅಲ್ಲ. ಅಲ್ಲದೆ ಅವರವರ ಬದುಕಿನ ಅರ್ಥಗಳನ್ನೇ ಕಂಡುಕೊಳ್ಳಲು ಅಸಮರ್ಥರಾಗುವವರು ಮಕ್ಕಳಿಗೆ ಮಾರ್ಗದರ್ಶನ ನೀಡಲು ಅಗತ್ಯವಾಗುವ ಗುಣಗಳನ್ನು ಹೊಂದಿರಲು ಸಾಧ್ಯವಾಗುವುದಿಲ್ಲ.

ಇಂಡಿಯಾದ ಬಹುತೇಕ ಆಧುನಿಕ ಕುಟುಂಬಗಳ ಅಸಂತುಷ್ಟ ದಾಂಪತ್ಯ ಜೀವನವನ್ನು ವಿವಾಹ ವಿಚ್ಛೇದನದ ಮೂಲಕ ಮುಗಿಸುವ ಸುಲಭದ ಸನ್ನಿವೇಶಗಳನ್ನು ಮುಂದೂಡಲೂ ಕೂಡಾ ಮಕ್ಕಳನ್ನು 'ಕಾರಣಗಳಾಗಿ' ಉಪಯೋಗಿಸುವುದು ಕಂಡು ಬರುತ್ತದೆ. ಇಂಥ ತಾಯಿ ತಂದೆಗಳ ತರ್ಕವೆಂದರೆ, 'ತಾವು ವಿವಾಹ ವಿಚ್ಛೇದಿತರಾದರೆ, ತಮ್ಮ ಮಕ್ಕಳಿಗೆ ಕುಟುಂಬ ಜೀವನದ ಭದ್ರತೆ ಹಾಗೂ ಸೌಲಭ್ಯಗಳು ದೊರೆಯುವುದಿಲ್ಲ' ಎನ್ನುವುದು. ಆದರೆ ಸಮಾಜಶಾಸ್ತ್ರದ ವಿವರವಾದ ಅಧ್ಯಯನಗಳು ಇದನ್ನು 'ನಿರಾಧಾರ' ತೀರ್ಮಾನಗಳೆಂದು ಸಾಬೀತುಪಡಿಸಿವೆ. ಅಲ್ಲದೆ, ಅತೃಪ್ತಿ, ಆತಂಕಗಳು ತುಂಬಿದ 'ಒಡೆಯದ' ದಾಂಪತ್ಯ ಜೀವನಕ್ಕಿಂತ ವಿಚ್ಛೇದನವು ಮಕ್ಕಳ ದೃಷ್ಟಿಯಿಂದಲೂ ಉತ್ತಮ. ವಿಚ್ಛೇದನವು ಮಕ್ಕಳಿಗೆ ಏನಿಲ್ಲವೆಂದರೂ, 'ತೀರಾ ಅಸಹನೀಯವಾದ ಪರಿಸ್ಥಿತಿಯೊಂದಕ್ಕೆ, ಧೈರ್ಯಶಾಲಿ ನಿರ್ಧಾರವೊಂದರಿಂದ ಮುಕ್ತಾಯ ಹಾಕಬಹುದು ಎನ್ನುವ ಮನೋಧೋರಣೆಯನ್ನು ಬೆಳೆಸಿಕೊಳ್ಳುವುದಕ್ಕೆ ಸಹಕಾರಿಯಾಗುತ್ತವೆ. ಉದಯೋನ್ಮುಖ ಜನಾಂಗದ ಸ್ವ-ನಿರ್ಧಾರ ಧೋರಣೆ, ಸಮಾಜದ ನಿರ್ಮಾಣ, ಸರಕಾರದ ರಚನಾತ್ಮಕತೆಯಲ್ಲಿ ಅನನ್ಯ ಸಾಂಸ್ಕೃತಿಕ ಕುಟುಂಬ ಘಟಕದ ಒಳತುಡಿತಗಳು, ಧೋರಣೆಗಳು ಆತ್ಯಂತಿಕ ಪರಿಣಾಮಗಳನ್ನು ಬೀರುತ್ತವೆ. ಅಲ್ಲದೆ, ಸಂಸ್ಕೃತಿಯೊಂದರಲ್ಲಿ ಬಂಧುತ್ವದ ನಾಮರೂಪವಳಿ, ಕ್ರಿಯಾ ರೂಪವಳಿ (Cultural kinship)ಗಳು ಕುಟುಂಬದ ಒಳರಚನೆಯಲ್ಲಿ ಹೆಣಿಗೆಗೊಳ್ಳುತ್ತವೆ. ಎಂದರೆ, ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ಸೋದರ ಸೊಸೆ, ಮಾವ- ಅತ್ತೆ ಮುಂತಾದ ಬಂಧುತ್ವದ ನಾಮರೂಪಾವಳಿಗಳು. ಆದೇ ಸಂಸ್ಕೃತಿ ಬಂಧುತ್ವ ನಿರ್ದೇಶನದ ಕ್ರಿಯಾರೂಪಾವಳಿಗಳಾಗಿರುತ್ತವೆ. ಇದರ ಅಂತರ್-ರಚನೆಯಲ್ಲಿ ಕುಟುಂಬದ ವ್ಯಾಪ್ತಿ- ಪರಿಮಿತಿಗಳು ನಿರ್ಣಯಗೊಳ್ಳುತ್ತವೆ. ಕುಟುಂಬದಲ್ಲಿ ಗಂಡ-ಹೆಂಡತಿಯರು ಸ್ನೇಹದ ಧೋರಣೆಗಳನ್ನು ಬೆಳಸಿಕೊಳ್ಳಬೇಕಾಗುತ್ತದೆ. ಪಾರಂಪರಿಕ ಕುಟುಂಬದ ದಾಸ್ಯತೆ, ಗುಲಾಮಗಿರಿಯ ಮನಸ್ಥಿತಿಗಳು ನಿರ್ನಾಮಗೊಳ್ಳಬೇಕಾಗುತ್ತದೆ. ಇದರಲ್ಲಿ ನಿರ್ದಿಷ್ಟ ಸಂಸ್ಕೃತಿಯ ಆವರಣದಲ್ಲಿ ರೂಪುಗೊಳ್ಳುವ ಕುಟುಂಬದ ಸ್ವರೂಪದಲ್ಲಿ 'ಆಳ್ವಿಕೆ' ಮತ್ತು 'ಅಧೀನತೆ'ಗಳು ಮರುರಚನೆಗೆ ಒಳಪಟ್ಟು 'ನಿರಸನ'ಗೊಳ್ಳಬೇಕಾಗುವುದು ಅತ್ಯಗತ್ಯವಾಗಿ ನಡೆಯಬೇಕಾದ ಕಾರ್ಯವಾಗಿದೆ. ಪರಿಣಾಮವಾಗಿ ರಾಜಕೀಯ ಸ್ವಾತಂತ್ರ್ಯದ ಪರಿಕಲ್ಪನೆ ಮತ್ತು ಮಾರುಕಟ್ಟೆಯ ಸ್ಥಿತಿಗತಿಗಳು ಎಂದರೆ, ಆರ್ಥಿಕತೆಯ ಮೂಲದಿಂದ ಸಾಮಾಜಿಕ ಸಂಬಂಧಗಳು ನಿಯಂತ್ರಣಕ್ಕೆ ಒಳಪಡುತ್ತವೆ ಎನ್ನುವ ಮುಖ್ಯವಾದ ಎರಡು ತತ್ತ್ವಗಳಿಂದ ಕುಟುಂಬದ ಒಳಗಿರುವ 'ಅಧಿಕಾರ' ಮತ್ತು 'ಅಧೀನತೆ'ಗಳನ್ನು ಒಡೆಯುವ ಪ್ರಕ್ರಿಯೆ ಆಧುನಿಕ ಸಮಾಜಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ದಾಂಪತ್ಯ ಜೀವನದ ಆದರ್ಶವೆಂದರೆ, ಪರಸ್ಪರ

ಗೌರವಿಸುವುದು. ಯಾವ ಘರ್ಷಣೆಯೂ ಇಲ್ಲದೆ ಕುಟುಂಬ ಜೀವನ ಸುಗಮವಾಗಿ ಸಾಗಬೇಕಾದರೆ, ಪರಸ್ಪರರ ದೌರ್ಬಲ್ಯಗಳನ್ನು ಅರ್ಥಮಾಡಿಕೊಂಡು ಬದುಕಬೇಕಾಗುತ್ತದೆ. ಇಲ್ಲಿ ಸ್ವಾತಂತ್ರ್ಯ, ಸಹಕಾರ, ಸಹನಶೀಲತೆಯನ್ನು ಸ್ತ್ರೀ- ಪುರುಷರಿಬ್ಬರಿಂದಲೂ ಕುಟುಂಬ ಜೀವನ ನಿರೀಕ್ಷಿಸುತ್ತದೆ. ದಾಂಪತ್ಯದಲ್ಲಿ ಸ್ವಾತಂತ್ರ್ಯ, ಸಮಾನತೆ, ಸಹಕಾರ, ಸಹನಶೀಲತೆ ಇರುವ ಸ್ತ್ರೀ- ಪುರುಷರ ಸಹಬಾಳ್ವೆಯಲ್ಲಿ ಮಾತ್ರ ಅರ್ಥಪೂರ್ಣ ಹೃದಯ ಸಂವಾದ ಸಾಧ್ಯವಾಗುತ್ತದೆ.

## ೫.೨ ಮೊದಲ ಕಟ್ಟಿನ ಕಾದಂಬರಿಗಳು :

ಸವಿತಾ ನಾಗಭೂಷಣ ಅವರ **ಸ್ತ್ರೀಲೋಕ** (೧೯೯೬) ಮತ್ತು ಕೆ. ತಾರಭಾಟ್ ಅವರ **ಅವ್ಯಕ್ತ**(೧೯೯೪) ಕಾದಂಬರಿ ಪಠ್ಯಗಳನ್ನು ಅನನ್ಯ ಸಾಂಸ್ಕೃತಿಕ ನೆಲೆಯ ಮೊದಲಕಟ್ಟಿನ ಕಾದಂಬರಿಗಳೆಂದು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಜಾಗತೀಕರಣಕ್ಕೆ ಒಳಪಟ್ಟ ಇಂಡಿಯಾದ ಸಂಕೀರ್ಣ ಸನ್ನಿವೇಶ ಮತ್ತು ಆಧುನಿಕ ಮನಸ್ಸಿನ ಸಂವೃದ್ಧಿ ಕಲ್ಪನೆಯೆಂದರೆ ನಿರ್ಗತೀಕರಣವೆಂದೇ ಅರ್ಥ (Modern mind's notion of prosperity in pauperisation)ಎಂದು ಇಂದು ನಮ್ಮ ನಡುವಿರುವ ಹಿರಿಯ ಸಮಾಜವಾದಿ ಚಿಂತಕ ಕಿಶನ್ ಪಟ್ನಾಯಕ್ ಜಾಗತೀಕರಣದ ಬಗ್ಗೆ ಉಡುಪಿಯಲ್ಲಿ ಪ್ರತಿಕ್ರಿಯಿಸಿದ್ದರು. •೧೨ ಯಾಕೆಂದರೆ ಇದು ಎಲ್ಲರನ್ನೂ ಒಳಗೊಳ್ಳುವ ಸಿದ್ಧಾಂತವಲ್ಲ, ಕೆಲವರಿಗಾಗಿ ಅನೇಕರನ್ನು ಹೊರಗಿಡುವ ಸಿದ್ಧಾಂತ (Theory of Exclusion). ತೋರಿಕೆಯ ಮಟ್ಟಿಗೆ ಈ ಮಾದರಿ, 'ಸಮಸುಖಿ ರಾಜ್ಯ'ದ ಆದರ್ಶವಿಟ್ಟುಕೊಂಡಿದೆಯೇ ಹೊರತು ಇಲ್ಲಿ ಸಮಷ್ಟಿಹಿತದ ಸಾಮಾಜಿಕ ದರ್ಶನವನ್ನು ಗುರುತಿಸುವುದು ಅಸಾಧ್ಯ. ಮುರಾರಿ ಬಲ್ಲಾಳ್ ಇದನ್ನು ಗುರುತಿಸುವಂತೆ :

> "ಯಾವಾಗ ಅರ್ಥಶಾಸ್ತ್ರಕ್ಕೆ ಇರಲೇ ಬೇಕಾದ ಮನುಷ್ಯನ ಸಮಗ್ರಹಿತಕ್ಕೆ ಪೂರಕವಾದ ನೈತಿಕ ಅನುಶಾಸನ (Normative aspects)ದ ಅಗತ್ಯವಿಲ್ಲವೆಂದು ತೀರ್ಮಾನವಾಯಿತೋ ಅಂದೇ ಅರ್ಥಶಾಸ್ತ್ರದ ದಾರಿ ನಿರ್ಣಾಯಕವಾಗಿ ಬದುಕಿನ ಅವಶ್ಯಕತೆಯಿಂದ ತಣಿಯದ ಬಯಕೆ-ಭೋಗಗಳತ್ತ ಸರಿಯಿತು. ಅನೈತಿಕ ವ್ಯಾಪಾರ, ಲಾಭ, ಜಾಹೀರಾತುಪ್ರಣೀತ ಮಾರುಕಟ್ಟೆ ಯುದ್ಧ, ನಿಸರ್ಗದ ಅಸಹ್ಯ ಲೂಟಿ, ಸುಖಭೋಗದ ರಾವುಗಳೆಲ್ಲವೂ ನ್ಯಾಯಸಮ್ಮತವಾಗಿ ಬಿಟ್ಟಿತು. ಇವೆಲ್ಲದರ ವಿಕೃತ ಅಭಿವ್ಯಕ್ತಿಯೇ ಜಾಗತೀಕರಣ. ನೈತಿಕ ಅನುಶಾಸನವಿಲ್ಲದ, ಆತ್ಮ ನಿಷೇಧದ ಪರಿಕಲ್ಪನೆಯೇ ಇಲ್ಲದ ಇಂಥ ಅರ್ಥ ನೀತಿಯ ತಾತ್ವೀಕರಣ, ತನ್ನ ಮೂಲ ನೆಲೆಯಲ್ಲೇ ಪೈಪೋಟಿ, ದಕ್ಷತೆ, ಅಸಮಾನತೆಗಳನ್ನು ಪೋಷಿಸಿಕೊಂಡು ಬರುತ್ತಿರುವಾಗ, ಅದು ಮಾನವ ನಾಗರಿಕತೆಯನ್ನು ದೀರ್ಘಾವಧಿಯಲ್ಲಿ ಉಳಿಸಲು ಸಾಧ್ಯವೇ? ಹಾಗಾಗಿ, ಜಾಗತೀಕರಣದ ಶಕ್ತಿಗಳು 'ಜಗತ್ತೇ' 'ಗ್ಲೋಬಲ್ ವಿಲೇಜ್ ಆಗಿ ಪಲ್ಲಟಗೊಳ್ಳುತ್ತಿದೆ'. ಎಂದು ಹೇಳುತ್ತಿರುವಾಗ ಕೂಡ ಅವುಗಳ ಕಲ್ಪನೆಯ 'ಗ್ಲೋಬಲ್ ವಿಲೇಜ್'ನಲ್ಲಿ ನಿಜವಾದ ಹಳ್ಳಿಗಳು ಹಾಜರಿರುವುದಿಲ್ಲ ಎಂಬುದನ್ನೂ ಮರೆಯಬಾರದು." (ಕರ್ನಾಟಕ ಸಾಹಿತ್ಯ ಅಕಾಡೆಮಿ, ಕುವೆಂಪು ವಿಶ್ವವಿದ್ಯಾನಿಲಯ ಮತ್ತು ಶಿವಮೊಗ್ಗ ಕರ್ನಾಟಕ ಸಂಘಗಳು ಜಂಟಿಯಾಗಿ

ಶಿವಮೊಗ್ಗದಲ್ಲಿ ೨೦೦೨ರ ಜೂನ್ ೮-೯ರಂದು ಹಮ್ಮಿಕೊಂಡ ಎರಡು ದಿನಗಳ 'ಜಾಗತೀಕರಣ : ಸಮಗ್ರ ಮಂಥನ' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.)

ಈ ಎಚ್ಚರ ಅನನ್ಯ ಸಾಂಸ್ಕೃತಿಕ ನೆಲೆಯ ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಒಡೆದು ತೋರುತ್ತದೆ. ಜಾಗತಿಕ ಮಾರುಕಟ್ಟೆ ನೀತಿಯು ಬೆಳವಣಿಗೆಯ ಆತ್ಯಂತಿಕ ಗುರಿಯನ್ನು ನಿರ್ದೇಶಿಸುತ್ತಿರುವಾಗ, ಅದರ ಜೊತೆಗೇ ಅನಿವಾರ್ಯವಾಗಿ ಸಾಮಾಜಿಕ ವಿಭಜನೆ, ಕೌಟುಂಬಿಕ ಸಂಘರ್ಷಗಳನ್ನು ಭದ್ರಗೊಳಿಸುತ್ತದೆ, ಎನ್ನುವ ಅಂಶವನ್ನು ಗಂಭೀರವಾಗಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಮೊದಲಕಟ್ಟಿನ ಕಾದಂಬರಿಯ ಸಮಗ್ರ ತಳಹದಿಯು ವರ್ತಮಾನದಲ್ಲಿ ಜರುಗುತ್ತಿರುವಂಥದ್ದು. ಸತ್ಯ- ಅಸತ್ಯ, ಒಳ್ಳೆಯದು- ಕೆಟ್ಟದ್ದು, ಸೌಂದರ್ಯ- ಕುರೂಪತೆ- ಎಲ್ಲವೂ ದೈನಂದಿನ ಕಾಯಕದ ಬದುಕಿನ ವಿವಿಧ ಮೈಗಳಾಗಿದ್ದು, ಶ್ರೀಮಂತಿಕೆಯಿಂದ ತುಂಬಿಕೊಂಡಿದ್ದು, ಅಖಂಡವಾಗಿದೆ. ವಾಸ್ತವದಲ್ಲಿ ಸತ್ಯ- ತತ್ವದ ಮೂಲ ನೆಲೆಯಾಗಿದೆ. ಜಾಗತಿಕ ವಸಾಹತೀಕರಣ ಶಕ್ತಿಗಳು, ದೈನಂದಿನ ಸಾಮಾನ್ಯ ಬದುಕಿನ ಅಸಂಖ್ಯ ಆಕೃತಿಗಳ ಸಂಕೀರ್ಣತೆಯನ್ನು ಅಸಹನೆಯಿಂದ ಮುಗ್ಧವೆಂದು ಸರಳೀಕರಿಸಿ ನಿರಾಕರಿಸುತ್ತವೆ. ಆದರೆ ಅಸಂಖ್ಯ ಆಕೃತಿಗಳಲ್ಲಿ ಅಡಕವಾಗಿರುವ ಅಂತರ್ ಪ್ರಕ್ರಿಯೆಯೇ ನಿಜಕ್ಕೂ ಅತ್ಯಂತ ಮೂಲಭೂತವಾದ ಬದುಕಿನ ಕ್ರಮ; ಮಾತ್ರವಲ್ಲ ಅದಿಲ್ಲದೆ ಬದುಕೇ ಇಲ್ಲ. ಯಾವುದೇ ನಂಬಿಕೆ, ಭಾವನೆ, ಕಲ್ಪನೆ, ಸಿದ್ಧಾಂತ, ನಿರ್ಮಿತಿಗಳು ಈ ಬಹುರೂಪತೆಯ ಜೀವನ ಕ್ರಮವನ್ನು ಸ್ವಾಧೀನ ಪಡಿಸಿಕೊಳ್ಳಲು ಸಾಧ್ಯವಿಲ್ಲ. ಆದರೂ ಬದುಕಿನ ಈ ಅಪಾರ ಶ್ರೀಮಂತಿಕೆಯನ್ನು ಪ್ರಸ್ತುತಕ್ಕೂ ಪುನರ್ರಚಿಸಿಕೊಳ್ಳುವುದು ಅಷ್ಟೇನೂ ಕಷ್ಟವಲ್ಲ. ಅದೇ ಸಾಮಾನ್ಯ ಜೀವನದ ಸೌಂದರ್ಯ ಕೂಡ ಎನ್ನುವುದನ್ನು ಅನನ್ಯ ಸಾಂಸ್ಕೃತಿಕ ನೆಲೆಯ ಆದರೆ ಅಸಂಖ್ಯ ಆಕೃತಿಗಳಲ್ಲಿ ಮೊದಲಕಟ್ಟಿನ ಕಾದಂಬರಿಗಳು ನಿರೂಪಿಸುತ್ತವೆ.

### ೫.೨.೧ ಮೊದಲ ಕಟ್ಟಿನ ಕಾದಂಬರಿಗಳು : ವಿವಾಹದ ಸ್ವರೂಪ.

**ಸವಿತಾ ನಾಗಭೂಷಣ ಅವರ ಕಾದಂಬರಿಯಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹದ ಸ್ವರೂಪ :**

ಜಾಗತೀಕರಣಕ್ಕೆ ಒಳಗಾದ ಇಂಡಿಯಾದ ಸಂದರ್ಭದೊಳಗಿನ ಮಧ್ಯಮ ವರ್ಗದ ಜನತೆ ವಿವಾಹವನ್ನು ಬದುಕಿನ ಸುಖದ ಏಕೈಕ ಸಾಧನವೆಂದು ಪರಿಗಣಿಸುವುದನ್ನು **ಸ್ತ್ರೀಲೋಕ** ವಿಭಿನ್ನ ನೆಲೆಗಳಿಂದ ತೆರೆದಿಡುವ ಪ್ರಯತ್ನ ನಡೆಸುತ್ತದೆ. ಪುರುಷರ ಪಾತ್ರಗಳಿಲ್ಲದೆ, ಸ್ತ್ರೀಯರ ಮೂಲಕ ಸಮಗ್ರ ಬದುಕಿನ ದೃಷ್ಟಿಕೋನಗಳನ್ನು ಬಿಂಬಿಸುವ **ಸ್ತ್ರೀಲೋಕದಲ್ಲಿ** ವಿವಾಹದ ಸಂಪೂರ್ಣ ಸಾಧ್ಯತೆಗಳನ್ನು ಸ್ತ್ರೀಯರ 'ಇರುವಿಕೆ'ಯಲ್ಲಿ ಅವಲೋಕಿಸುವ ಪ್ರಯತ್ನವನ್ನು ನಡೆಸುವುದು ಮಹತ್ವದ ಅಂಶವಾಗಿದೆ. ಮದುವೆಯಲ್ಲಿ ಅತಿ ಮುಖ್ಯ ಎನಿಸುವ ಹಲವಾರು ವಿಚಾರಗಳನ್ನು ಸಂದರ್ಭೋಚಿತವಾಗಿ ಚರ್ಚೆಗೆ ಎತ್ತಿಕೊಳ್ಳುವಲ್ಲಿ ಅಂತಹ ಕಾರಣಗಳ ಕ್ರಿಯಾತ್ಮಕ ಅನ್ವಯಿಕತೆ ಮುಖ್ಯವಾಗುತ್ತದೆ. ಎಂದರೆ, ಮದುವೆಯ ನಿರ್ಣಯದಲ್ಲಿ ಮುಖ್ಯವಾಗುವ ಯುವಕನ ಉದ್ಯೋಗ, ಅರ್ಹತೆಯ ಜೊತೆಗೆ ಆತನ ಹವ್ಯಾಸವನ್ನು ಹಿರಿಯರು ಗಂಭೀರವಾಗಿ ಪರಿಗಣಿಸುವುದು, ಹುಡುಗಿಯ ಇಷ್ಟಗಳಿಗೆ ಮನ್ನಣೆ ನೀಡುವುದು ಈ ಅರ್ಥದಲ್ಲಿ ಹೆಣ್ಣು ಹೆತ್ತವರು ಮಗಳ ಭವಿಷ್ಯವನ್ನು ಕುರಿತು ಸುಭದ್ರತೆಯನ್ನು ನಿರೀಕ್ಷಿಸುವುದು **ಸ್ತ್ರೀಲೋಕ** ಪಠ್ಯದ ಒಳಗೆ ಬೆಳವಣಿಗೆಯಾಗಿ ಕಾಣಿಸಿಕೊಳ್ಳುತ್ತದೆ.

"ನೀನು ಹೀಗೇ ಆದ್ರೆ ಕೊನೆಗೆ ಕಷ್ಟ ಆಗುತ್ತೆ. ಸಕ್ಕೂಗೇನು ಸಣ್ಣ ವಯಸ್ಸಾ? ನನಗೆ ನೋಡು..... ಆಗ್ಲೆ ಒಂದು ಮಗುನೂ ಇದೆ.

ವಿಜಯ : ನಿನಗೆ ಬಿಡು ಬೇಗನೆ ಆಯ್ತು. ನಂದೂ ಅಷ್ಟೆ ಬಂದ್ರು, ನೋಡಿದ್ರು, ಒಪ್ಪಿಕೊಂಡ್ರು, ಒಂದು ತಿಂಗಳಲ್ಲಿ ಮುಗಿದೇ ಹೋಯ್ತು. ಮತ್ತೆ ನಂಗೆ ಹೀಗೇ ಇರಬೇಕು. ಹಾಗೇ ಇರಬೇಕು ಅಂತಾನೂ ಇರಲಿಲ್ಲ. ನೋಡಿದ ಕೂಡ್ಲೆ ಒಪ್ಪಿಕೊಂಡರಲ್ಲ ಅಂತ ನಂಗೆ ಸಂತೋಷಾನೇ ಆಗಿತ್ತು. ಆಗೇನು ನಮ್ಮನೆಯವರಿಗೆ ಪ್ರೈವೇಟ್‌ನಲ್ಲಿ ಕೆಲ್ಸ ಇದ್ದಿದ್ದು. ನನ್ನ ಅದೃಷ್ಟ ಚೆನ್ನಾಗಿತ್ತು, ನಮ್ಮ ಮನೆಯವರಿಗೆ ಆ ಮೇಲೆ ಬ್ಯಾಂಕಿನಲ್ಲಿ ಕೆಲ್ಸ ಸಿಕ್ತು. ನಮ್ಮ ಸಕ್ಕೂದು... ಕಂಡೀಷನ್ ಬೇರೆ ಇದೆ ! ಹುಡುಗನಿಗೆ ಗೌರ್ನಮೆಂಟ್ ಕೆಲಸ ಇರಬೇಕು.... ಹುಡುಗ ಬೆಳ್ಳಗೆ ಇರಬೇಕು...... ಹೀಗೇ..." (ಸವಿತಾ ನಾಗಭೂಷಣ :೧೯೯೬; ೧೦೭)

ಯೌವ್ವನದ ನಿರೀಕ್ಷೆಗಳನ್ನು ಬದುಕಿನ ಬಗೆಗಿನ ಸುಂದರ ಕನಸುಗಳನ್ನು ಪ್ರತಿ ಹೆಣ್ಣು - ಗಂಡು ಹೊಂದಿರುತ್ತಾರೆ. ಆದರೆ, ಇವೆಲ್ಲವುಗಳು ಆಯಾ ವ್ಯಕ್ತಿಗಳ ಅಂತರಂಗದಿಂದ ಪ್ರೇರಿತವಾದುವು. ಸಂವೇದನೆಯೇ ವಾಸ್ತವಿಕ ಪ್ರಜ್ಞೆಗೆ ಆಧಾರ. ಇದು ವಸ್ತು ಮತ್ತು ಅನುಭವಗಳೆರಡನ್ನೂ ಅವಲಂಬಿಸಿರುತ್ತದೆ. ಅಲ್ಲದೆ, ಇವು ಯಾವುದೇ ವಿಚಿತ್ರ ದ್ವಂದ್ವಗಳಿಂದ (Complexities) ಹುಟ್ಟಿ ಬರುವ ಆಕಾಂಕ್ಷೆಗಳಲ್ಲ. ಅವಿವಾಹಿತ ನೆಲೆಯಿಂದ ಉಂಟಾಗುವ ಏಕಾಂಗಿತನಕ್ಕೆ ಹೆದರಿ, ಆದರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಹೆಚ್ಚಿನ ಯುವತಿಯರು ಬೇಗನೆ ಮದುವೆಯಾಗುವುದನ್ನು ಸಮಾಜ ನೈಜವಾಗಿ ಸ್ವೀಕರಿಸುತ್ತದೆ. ಇಲ್ಲಿ ಸಮಾಜವೆಂದರೆ, **ಸ್ತ್ರೀಲೋಕ** ಸ್ತ್ರೀಯರೇ ಇರುವ ಅವರ ಜಗತ್ತು. ತನಗೆ ಒಪ್ಪಿಗೆಯಾಗುವ ಹುಡುಗನನ್ನು ಮಾತ್ರ ಮದುವೆಯಾಗುವುದೆಂದು ತೀರ್ಮಾನಿಸುವ ಸಕ್ಕೂ; ವರದಕ್ಷಿಣೆ ಕೊಟ್ಟು ವಿವಾಹವಾಗುವುದನ್ನು ನಿರಾಕರಿಸುವ, ತಂದೆ ತಾಯಿಗಳಲ್ಲಿ ಇದನ್ನು ಸ್ಪಷ್ಟವಾಗಿ ಹೇಳಿ ಅಂತರ್‌ಜಾತಿಯ ಪ್ರೇಮ ವಿವಾಹ ಮಾಡಿಕೊಳ್ಳುವ ಪ್ರಜ್ಞಾ; ಮೈದುನ ರಾಜೀವನು ಭಿನ್ನ ಜಾತಿಯವಳೂ, ವಿಧವೆಯೂ ಆದ ಸಹೋದ್ಯೋಗಿ ಯುವತಿಯನ್ನು ಪ್ರೀತಿಸಿ ವಿವಾಹವಾಗುವುದನ್ನು ಪ್ರೋತ್ಸಾಹಿಸುವ ಸುಮಾ, ಇವರೆಲ್ಲರೂ ಮಧ್ಯಮವರ್ಗದ ಪರ್ಯಾಯ ಮಾದರಿಗಳೆನಿಸುತ್ತಾರೆ. ಇನ್ನೂರು, ಮುನ್ನೂರು ಜನ ಸ್ನೇಹಿತ ವರ್ಗದವರು ಸೇರಿ ಸರಳವಾಗಿ ಹಾರ ಬದಲಾಯಿಸಿಕೊಂಡು, ಎಲ್ಲ ಕೂಡಿ ಊಟ ಮಾಡಿ ಸುಮಾರು ಎರಡು ಸಾವಿರ ರೂಪಾಯಿ ಖರ್ಚಿನಲ್ಲಿ ಜರುಗುವ ಪ್ರಜ್ಞಾ - ನರೇಂದ್ರರ ವಿವಾಹವನ್ನು **ಸ್ತ್ರೀಲೋಕ** ಎಲ್ಲಾ ಅರ್ಥಗಳಿಂದಲೂ ಪರ್ಯಾಯ ಮಾದರಿಯಾಗಿ ತೆರೆದಿಡುತ್ತದೆ.

"ಪ್ರಜ್ಞಾ: ಹೂಂ... ವಿವಾಹ ಸಂಹಿತೆಯನ್ನು ನರೇಂದ್ರನ ಗೆಳೆಯರೊಬ್ಬರು ಓದಿದ್ರು... ನಾವಿಬ್ಬರು ಹಾರ ಬದಲಾಯಿಸಿ ಕೊಂಡ್ವಿ.

ನಾನು: ಹೌದಾ? 'ವಿವಾಹ ಸಂಹಿತೆ' ಏನಿತ್ತು ಅದರಲ್ಲಿ......

ಪ್ರಜ್ಞಾ: ನಂಗೆ ಸರಿಯಾಗಿ ನೆನಪಿಲ್ಲ... ಬಹುಶಃ... ಈ ರೀತಿ ಇತ್ತು ಅನಿಸುತ್ತೆ..... ಹಾಂ...

ಶ್ರೀಯುತ ನರೇಂದ್ರ ಎಂಬ ವರನೇ, ಶ್ರೀಮತಿ ಪ್ರಜ್ಞಾ ಎಂಬ ವಧುವೇ, ನಿಮ್ಮಿಬ್ಬರ ವಿವಾಹದ ಈ ಸಂದರ್ಭದಲ್ಲಿ ಮೂಲಭೂತ ಸ್ವಾತಂತ್ರ್ಯದ ಈ ಕೆಲವು ಸಂದೇಶಗಳನ್ನು ತಿಳಿಸಿದ್ದೇವೆ. ನೀವಿಬ್ಬರೂ ಗಮನವಿಟ್ಟು ಕೇಳಿಸಿಕೊಳ್ಳಿ...

ಈ ದಿನ ನೀವು ಎಲ್ಲ ಈ ರೀತಿ ಸರಳವಾಗಿ ಮದುವೆಯಾಗುವುದರ ಮೂಲಕ ನೀವು ನಿಮ್ಮ ಎಲ್ಲಾ ಮಾನಸಿಕ ಮತ್ತು ಆಧ್ಯಾತ್ಮಿಕ ಸಂಕೋಲೆ ಮತ್ತು ದಾಸ್ಯಗಳಿಂದ ಸ್ವತಂತ್ರರಾಗುತ್ತಿದ್ದೀರಿ...

ನಿಮ್ಮನ್ನು ಇಂದು ಎಲ್ಲಾ ಜಾತಿ, ಮತಗಳಿಂದ ಮುಕ್ತರನ್ನಾಗಿ ಮಾಡಿದ್ದೇವೆ. ನೀವು ಈ ಭೂ ಮಂಡಲದ ಯಾವುದೇ ಜಾತಿ ಜನಾಂಗಗಳಿಗಿಂತ ಮೇಲಾದವರಲ್ಲ ಅಥವಾ ಕೀಳಾದವರಲ್ಲ.

ಗಂಡ ಹೆಂಡಿರನ್ನು ಒಟ್ಟಿಗೆ ಬದುಕುವಂತೆ ಮಾಡುವ ಸಾಧನ ಪ್ರೀತಿಯೊಂದೇ. ಒಬ್ಬರನ್ನೊಬ್ಬರು ಪ್ರೀತಿಸದವರು ತಾಳಿ ಕಟ್ಟಿಕೊಂಡರೂ ವ್ಯರ್ಥ. ಅಗ್ನಿಯನ್ನು ಸುತ್ತಿದರೂ ವ್ಯರ್ಥ. ಯಾವ ಯಾವ ಶಾಸ್ತ್ರಾಚಾರದ ಪ್ರಕಾರ ಮದುವೆಯಾದರೂ ವ್ಯರ್ಥ.... ಮಾನವರೆಲ್ಲರೂ ಸಮಾನರು, ಪುರುಷರು ಸ್ತ್ರೀಗಿಂತ ಮೇಲು ಎಂದು ಹೇಳುವಂತಿಲ್ಲ. ಮೂಢ ಸಂಪ್ರದಾಯಗಳನ್ನು ನೀವು ಇಂದು ತಿರಸ್ಕರಿಸಿದ್ದೀರಿ....ಹೀಗೆ ಹತ್ತೋ, ಹನ್ನೆರಡೋ... ಇತ್ತುರೀ....

ನಾನು : ಎಷ್ಟು ಅರ್ಥ ಪೂರ್ಣವಾಗಿದೆ. ಯಾರು ಬರೆದಿದ್ದು?

ಪ್ರಜ್ಞಾ: ಮೂಲ ಕುವೆಂಪುದು....

ನಾನು : ನಿಮ್ಮದೇನೋ ನೀವು ಬಯಸಿದ ಹಾಗೇ ಆಯ್ತು.... ಎಲ್ಲರಿಗೂ... ಅವರು ಆಸೆಪಟ್ರೂ, ನಿಮ್ಮ ತರಾ ಮದುವೆ ಮಾಡಿಕೊಳ್ಳೋಕೆ ಆಗೊಲ್ಲವಲ್ಲ?

ಪ್ರಜ್ಞಾ: ಇಲ್ಲ... ಸುಮಾ ತುಂಬಾ ಜನರಿಗೆ ನಮ್ಮಥರಾ ಮದುವೆ ಆಗೋಕೆ ಇಷ್ಟ ಇರಲ್ಲ..... ಬಾಯಲ್ಲಿ ಹೇಳ್ತಾರೆ... ಆದ್ರೆ ಆಚರಣೆ ಮಾಡಲಿಕ್ಕೆ ಹೆದರ್ತಾರೆ.... ಅದಕ್ಕೂ ಧೈರ್ಯ ಬೇಕು....." (ಸವಿತಾ ನಾಗಭೂಷಣ : ೧೯೯೬;೧೯೯,೨೦೦)

ಹೀಗೆ ಕುವೆಂಪು ಅವರ ಜೀವನ ದೃಷ್ಟಿಯನ್ನು **ಸ್ತ್ರೀಲೋಕ** ಒಪ್ಪಿಕೊಳ್ಳುವ ನೆಲೆ ಅನನ್ಯವಾದದ್ದು. 'ವಿವಾಹವನ್ನು ಆತ್ಮ ಸಿದ್ಧಿಯ ಮಾಧ್ಯಮ'ವಾಗಿ ಕುವೆಂಪು ಅವರ 'ಮಂತ್ರ ಮಾಂಗಲ್ಯ' ಬಿಂಬಿಸುತ್ತದೆ. •೨೨ ವಿವಾಹದ ಬಾಹ್ಯ ಆಡಂಬರಕ್ಕಿಂತ ವಿವಾಹಿತ ಗಂಡು - ಹೆಣ್ಣುಗಳಲ್ಲಿ ಇರಬೇಕಾದ ಆತ್ಮೀಯತೆ, ತಾದಾತ್ಮ್ಯತೆ, ಹೃದಯ ಸಂವಾದಿತ್ವದ ಕಡೆಗೆ ಇದು ಹೆಚ್ಚಿನ ಗಮನಹರಿಸಿದೆ.

ಹಸೆಮಣೆಯ ಮೇಲೆ ಕುಳಿತ ಗಂಡಿಗೆ ಮದುವೆ ಆಗಿದೆ ಒಂದು ಮಗುವಿದೆ ಎಂದು ವಿವಾಹವನ್ನು ನಡೆಯದಂತೆ ಮಾಡುವುದು (ಮೊದಲ ಹೆಂಡತಿ); ಅದನ್ನು ಒಪ್ಪಿ ವಿವಾಹವನ್ನೇ ರದ್ದು ಮಾಡುವುದು (ವಧುವಿನ ಕಡೆಯವರು); ಮದುವೆಯಾಗಿ ಇಬ್ಬರು ಮಕ್ಕಳಿದ್ದರೂ ತನಗಿಂತ ವಯಸ್ಸಿನಲ್ಲಿ ಕಿರಿಯನಾದ ಹುಡುಗನ ಜೊತೆ 'ಓಡಿಹೋಗುವ ಹೆಂಗಸು'; ವಿವಾಹಕ್ಕೆ ಸಂಬಂಧಿಸಿದಂತೆ ಇರುವ ಇಂತಹ

ನಿದರ್ಶನಗಳು ಸಮಾಜದ ಸಂಭವನೀಯ ಘಟನೆಗಳಾದರೂ ಇವುಗಳು 'ಅಪವಾದದ ಮಾದರಿಗಳು' ಸಮೂಹ ಇದನ್ನು ನಿದರ್ಶನಗಳಾಗಿ ಒಪ್ಪಿಕೊಳ್ಳುತ್ತದೆ. ಆದರೆ, ರೂಢಿಯ ನೆಲೆಯಲ್ಲಿ ಮಾನ್ಯಮಾಡುವುದಿಲ್ಲ. ವ್ಯಕ್ತಿಗಳಲ್ಲಿ ವೈವಿಧ್ಯತೆ ಇರುವಂತೆ ಅವರ ಬದುಕಿನ ಅಭಿರುಚಿಗಳಲ್ಲಿ, ತೀರ್ಮಾನಗಳಲ್ಲಿ 'ವೈವಿಧ್ಯತೆ' ಇದ್ದೇ ಇರುತ್ತದೆ. ಆದ್ದರಿಂದ ಸಂಬಂಧಗಳನ್ನು ಸಮಾಜಶಾಸ್ತ್ರ, ಮಾನವಶಾಸ್ತ್ರ ಗುರುತಿಸುವಂತೆ ರೇಖಾತ್ಮಕವಾಗಿ ಗ್ರಹಿಸುವುದು ಅಸಾಧ್ಯವೆಂಬುದನ್ನು **ಸ್ತ್ರೀಲೋಕ** ನಿರೂಪಿಸುತ್ತದೆ. ಮತ್ತೊಂದು ರೀತಿಯಲ್ಲಿ ಸ್ಪಷ್ಟ ಪಡಿಸುವುದಾದರೆ, ಗಂಡಿನ ಹಿನ್ನೆಲೆಯಲ್ಲಿ 'ಸಾಧ್ಯವಾಗುವ' ಎಲ್ಲಾ ಸಾಧ್ಯಾಸಾಧ್ಯತೆಗಳು ಹೆಣ್ಣಿನ ನೆಲೆಯಿಂದಲೂ ಘಟಿಸುತ್ತದೆ ಎಂಬುದನ್ನು ಸ್ತ್ರೀಲೋಕವು ವಿವರಣೆಯ ನೆಲೆಯಲ್ಲಿ ನಿರೂಪಿಸುತ್ತದೆ. ಆಧುನಿಕ ಸಮಾಜದಲ್ಲಿ ವಿವಾಹ ಸಂಸ್ಥೆಯು ಎದುರಿಸುವ ವೈರುದ್ಧ್ಯಗಳನ್ನು ಶಕ್ತವಾಗಿ ಬಿಂಬಿಸುವ ಪ್ರಯತ್ನವನ್ನು ಸ್ತ್ರೀಲೋಕ ಪಠ್ಯವು ಮಾಡುತ್ತದೆ. ವಿವಾಹದ ಪರಿಕಲ್ಪನೆಯ ಬದಲಾಗುವ ಸಾಧ್ಯತೆಗಳ ಅನಾವರಣವು ಕೂಡ ಪಠ್ಯದ ಒಳಗೆ ಪಾತ್ರಗಳ ಮೂಲಕ ಸಾಂದರ್ಭಿಕವಾಗಿ ಚರ್ಚೆಗೆ ಒಳಗಾಗಿದೆ.

**ತಾರಾಭಟ್. ಕೆ. ಅವರ ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ವಿವಾಹದ ಸ್ವರೂಪ :**

ಮುಂಬೈಯಿಂದ ಆಧುನಿಕ ಸಮಾಜದ ಉನ್ನತ ವಿದ್ಯಾಭ್ಯಾಸ ಪಡೆದು ಜೀವನವನ್ನು ತನ್ನದೇ ಆದ ನೆಲೆಯಿಂದ ಕಟ್ಟಲು ಶಕ್ತವಿರುವ ಅದಿತಿಯ ವಿವಾಹವನ್ನು **ಅವ್ಯಕ್ತ** ಕೃತಿ ಆಧುನಿಕ ಸಮಾಜದ 'ಚೌಕಟ್ಟಾ'ಗಿ (Frem) ತೆರೆದಿಡುತ್ತದೆ. ಪಠ್ಯದ ಒಳಗೆ ವಿವಾಹದ ಪೂರ್ಣರೂಪದ ಚರ್ಚೆಯು ಚದುರಿದಂತೆ ನಿರೂಪಿತಗೊಂಡಿದೆ. (ಇದಕ್ಕೆ ಕಾರಣ ವಿವಾಹದ ಅಭದ್ರತೆಯನ್ನು ಶಕ್ತವಾಗಿ ಬಯಲುಗೊಳಿಸುವುದೇ ಆಗಿದೆ.) ವಿಜ್ಞಾನದ ಪದವಿ ಪರೀಕ್ಷೆಗಳಲ್ಲಿ ರ್‍ಯಾಂಕ್ ಪಡೆದು, ನಂತರ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಚಿತ್ರಕಲೆ ಅಭ್ಯಾಸವನ್ನು ನಡೆಸುತ್ತಿರುವ ಅದಿತಿ ಯೂತ್ ಕ್ಲಬ್ಬಿನಲ್ಲಿ ಕಾರ್ಯದರ್ಶಿತ್ವ ಸ್ಥಾನವನ್ನು ವಹಿಸಿಕೊಂಡ ಬಹಿರ್‌ಮುಖಿ ಸ್ವಭಾವದ ಯುವತಿ. ಅವಳ ಉತ್ಸಾಹದ ವ್ಯಕ್ತಿತ್ವವು ಇಡೀ ಬದುಕೇ ಅವಳ ಮುಂದೆ ಅನಾವರಣಗೊಂಡು ಆಹ್ವಾನಿಸುತ್ತಿದೆ ಎಂಬುದಾಗಿ ಪರಿಭಾವಿಸಿರುವಂಥದ್ದು. ಸಾಮಾನ್ಯವಾಗಿ ಹೆಚ್ಚಿನ ವ್ಯಕ್ತಿಗಳಲ್ಲಿ ಕ್ಷುಲ್ಲಕ ವಿಚಾರಗಳು, ಘಟನೆಗಳು ಬದುಕಿನ ಮಹತ್ವದ ತಿರುವಾಗಿ ಪರಿಣಮಿಸಿಬಿಡುತ್ತದೆ. ಹಾಗೇ ಅದಿತಿಯ ಬದುಕಿನಲ್ಲಿ ಯೂತ್ ಕ್ಲಬ್ಬಿನಲ್ಲಿ ಜರುಗಿದ ರಾತ್ರಿಯ ಪಾರ್ಟಿಯೊಂದನ್ನು ಮುಗಿಸಿಕೊಂಡು ಜೋರಾಗಿ ಬೀಸುವ ಮಳೆಯಲ್ಲಿ ಟ್ಯಾಕ್ಸಿಯೊಳಗಿದ್ದ ಪುರುಷನನ್ನು ಗಮನಿಸಿದೆ ಹತ್ತಿ ಮನೆಸೇರಿದ್ದು, ಇಡೀ ಅವಳ ಬದುಕನ್ನು ನಿಯಂತ್ರಿಸುವ ಘಟನೆಯಾಗಿ ಏರ್ಪಡುತ್ತದೆ. ಜಯದೇವನ ಮತ್ತು ಅದಿತಿಯ ಆಕಸ್ಮಿಕ ಭೇಟಿಯನ್ನು ಜಯದೇವ ನಿರರ್ಥಕವಾಗಲು ಬಿಡದ ಕಾರಣ, ಪರಿಚಯವೆಂಬುದು ಪ್ರೇಮವಾಗಿ ಪರಿವರ್ತಿತಗೊಳ್ಳುತ್ತದೆ. ಜಯದೇವನ ಸ್ವಭಾವ, ವ್ಯಕ್ತಿತ್ವ, ಹವ್ಯಾಸಗಳ ಪೂರ್ಣ ಪರಿಚಯವಿರದೆ, ಇದೊಂದು 'ಅಪಕ್ವ ಪ್ರೇಮ'ವೆಂಬಂತೆ ಪಠ್ಯದೊಳಗೆ ಕಂಡುಬರುತ್ತದೆ. ಅಲ್ಲದೆ, ಇಲ್ಲಿ ಜಯದೇವ ಮತ್ತು ಅದಿತಿ ಕೈಗೊಳ್ಳುವ 'ವಿವಾಹ'ದ ನಿರ್ಧಾರವೆಂಬುದು ಕೂಡ ಅಪಕ್ವವಾದ ಅವಸರದ ನಿರ್ಧಾರವಾಗಿ ತೋರುತ್ತದೆ. (ಹೀಗಾದಾಗ ಇದನ್ನು ವಿಧಿ ಎಂಬಂತೆ ಸ್ವೀಕರಿಸುವವರು ಹೆಚ್ಚಿನ ಸಂಖ್ಯೆಯಲ್ಲಿ ಇರುತ್ತಾರೆ.) ತಮ್ಮ ಕೈಮೀರಿದ ಸಂದರ್ಭವನ್ನು 'ವಿಧಿವಾದ'ಕ್ಕೆ ಒಪ್ಪಿಸಿ ನೋಡಿದಾಗ ತಮ್ಮ ನಿರ್ಧಾರಗಳ ಪೂರ್ವಾಪರ, ಒಳಿತು ಕೆಡುಕುಗಳು ಗೌಣವಾಗಿ

ಪರಿಗಣಿತಗೊಳ್ಳುತ್ತವೆ. ಯಾವುದೇ ಉನ್ನತ ಪದವಿ, ಉದ್ಯೋಗ, ಹವ್ಯಾಸದ ಅರ್ಹತೆಗಳೆಲ್ಲ ಮರೆಯಾಗಿ, ಜೀವನದ ದಿಕ್ಕನ್ನು ಬದಲಾಯಿಸುವುದು ಯುವಜನತೆಯ 'ಅಪಕ್ವ ಜೀವನ ಸಂಗಾತಿ'ಗಳ ಆಯ್ಕೆಯಲ್ಲಿಯೇ ಆಗಿರುತ್ತದೆ. ಇದು ಬದುಕನ್ನು ವ್ಯಕ್ತಿಗಳು ಊಹಿಸಿರುವುದಕ್ಕಿಂತ ಬೇರೆ ವಿಧಾನಗಳಲ್ಲಿ ನಿಯಂತ್ರಿಸುತ್ತವೆ. ಜಯದೇವ, ಅದಿತಿ ಇವರ ನಡುವೆ ಏರ್ಪಡುವ ದಿಢೀರ್ ಪ್ರೇಮದ ಹಿಂದೆ ಯಾವ ಒಂದು 'ಭಾವನೆ' ಬಲವಾಗಿತ್ತು? ಇವರಿಬ್ಬರನ್ನು ಒಟ್ಟುತರಲು ಯಾವುದು ಕಾರಣವಾಯಿತು? ಎನ್ನುವ ಅಂಶಗಳು ಪತ್ಯದ ಒಳಗೆ ಗೋಪ್ಯವಾಗಿರುವುದೇ ಯುವ ಜನತೆಯ 'ಅಪಕ್ವ ನಿರ್ಧಾರ'ಗಳನ್ನು ಪರಿಣಾಮಕಾರಿಯಾಗಿ ಬಿಂಬಿಸುವ ಕಾರಣದಿಂದಾಗಿಯೇ ಆಗಿದೆ.

ಅದಿತಿಯ ತಂದೆ ಅತಿ ಶಿಸ್ತಿನ ವ್ಯಕ್ತಿ. ಈ ಅತಿ ಶಿಸ್ತಿನ ವ್ಯಕ್ತಿಯ ವ್ಯಕ್ತಿತ್ವ ಆತನ ಮಗಳ ಜೀವನವನ್ನು ವಿರುದ್ಧ ನೆಲೆಯಲ್ಲಿ ನಿಯಂತ್ರಿಸುವುದು ಇಲ್ಲಿ ವ್ಯಕ್ತವಾಗುವ ಗಮನಾರ್ಹ ಸಂಗತಿ. ಇದರ ಪರಿಣಾಮದಿಂದಾಗಿ, ಸ್ನೇಹಿತೆಯ ಮದುವೆ ಎಂದು ಕಾರಣ ಹೇಳಿ ಅದಿತಿ ಸೂಟ್‌ಕೇಸಿನಲ್ಲಿ ಅವಳ ಎಲ್ಲಾ ಸಾಮಾನುಗಳನ್ನು ತುಂಬಿಕೊಂಡು ಟೇಬಲ್ ಮೇಲೊಂದು ಚೀಟಿ ಬರೆದಿಟ್ಟು ಜಯದೇವನೊಡನೆ ರಿಜಿಸ್ಟರ್ ಮದುವೆ ಮಾಡಿಕೊಂಡು ಅವನ ಮನೆ ಸೇರುತ್ತಾಳೆ. 'ವಿವಾಹ'ದ ಚೌಕಟ್ಟನ್ನು ಅದಿತಿಯ ನೆಲೆಯಿಂದ ಪರಿಶೀಲಿಸಿದಾಗ ಪ್ರಕಟವಾಗುವ ಪ್ರಧಾನ ಅಂಶಗಳೆಂದರೆ:

೧) ಅನಿರೀಕ್ಷಿತವಾಗಿ ಬೇಟಿಯಾಗುವ ವ್ಯಕ್ತಿಯೋರ್ವನ 'ಆಕರ್ಷಣೆ'ಗೆ ಒಳಗಾಗಿ ಅದನ್ನೇ ಪ್ರೇಮವೆಂದು ಪರಿಭಾವಿಸಿಕೊಂಡು ಮದುವೆ ಮಾಡಿಕೊಳ್ಳುವ ಅತಿ ಶೀಘ್ರದ ನಿರ್ಣಯವನ್ನು ಕೈಗೊಳ್ಳುವುದು.

೨) ತಂದೆ- ತಾಯಿ ಕೊನೆಗೆ ಸ್ನೇಹಿತರೊಡನೆ ಕೂಡ ವಿವಾಹದ ನಿರ್ಣಯದ ಕುರಿತು ಚರ್ಚೆ, ಸಂವಾದವನ್ನು ನಡೆಸದೇ ಇರುವುದು.

೩) ತನ್ನ ನಿರ್ಣಯಗಳಿಗೆ ತಾನೇ ಹೊಣೆಗಾರಳೆಂಬಂತೆ ಜವಾಬ್ದಾರಿಗಳನ್ನು ಹೊರುವುದು.

೪) ಆದ್ಯಂತವಾಗಿ, ವಿವಾಹದಿಂದ ಮಾತ್ರ, ತನ್ನ ಸಾಮರ್ಥ್ಯಕ್ಕೆ ಮೇಲ್ಪಟ್ಟದ್ದನ್ನು ರಚಿಸಿಕೊಳ್ಳಬಹುದು (Over canopy) ಎಂಬುದಾಗಿ ಭಾವಿಸುವುದು.

೫) ಇವೆಲ್ಲವನ್ನೂ ಸಮದೂಗಿಸಿಕೊಳ್ಳಲಾಗದೆ ವಿವಾಹವಾಗುವ ಪುರುಷನನ್ನು ಪೂರ್ಣವಾಗಿ ಅವಲಂಬಿಸಿ ಬಿಡುವುದು. ನಂಬಿಕೆ ಬೆಳಸಿಕೊಳ್ಳುವುದು.

ಈ ಎಲ್ಲ ಅಂಶಗಳ ಪರಿಣಾಮವಾಗಿ, ಮಗಳು ಮದುವೆಯಾಗಿರುವ ವಿಚಾರ ತಿಳಿದೂ ತಕ್ಷಣ ಪ್ರತಿಕ್ರಿಯಿಸುವ ತಂದೆ ತಾಯಿಗಳ ಪತ್ರ:

> "…. ನಿನ್ನ ಮದುವೆಗೆ ನಮ್ಮ ಆಶೀರ್ವಾದಗಳು. ನಮ್ಮ ಯಾವುದೇ ರೀತಿಯ ಆಗ್ರಹ ನಿನ್ನ ಮೇಲೆ ಹೇರಲು ನಾವು ಇಷ್ಟ ಪಡುವುದಿಲ್ಲ. ನಿನ್ನನ್ನು ನೋಡಬೇಕೆಂಬ ಕಾತುರ ನಮಗೆ ಕಾಡುತ್ತಿದೆ. ಬ್ಯಾಂಕಿನಲ್ಲಿ ನಿನ್ನ ಹೆಸರಿನಲ್ಲಿರುವ ಹಣ ಉಪಯೋಗಿಸುವ ಹಕ್ಕು ನಿನ್ನದೇ…."
> (ತಾರಾಭಟ್.ಕೆ.: ೧೯೯೪ ; ೮೩)

ಹೀಗೆ ಬರೆದು ಬ್ಯಾಂಕಿನ ಪಾಸ್‌ಬುಕ್, ಚೆಕ್ ಬುಕ್‌ಗಳನ್ನು ಕಳುಹಿಸಿಕೊಡುತ್ತಾರೆ. ಇದಕ್ಕೆ ಅದಿತಿ ಪ್ರತಿಕ್ರಿಯಿಸುವುದಿಲ್ಲ. ಇದು ಅವಳದೇ ಆದ ಅಸ್ತಿತ್ವವೊಂದನ್ನು ವಿವಾಹದ ಮೂಲಕ ಅನ್ವೇಷಿಸುವ

ಪ್ರಯತ್ನದಲ್ಲಿಯೇ ಆದರೂ ಅವಳ ಬದುಕು ಇಂಥವರ ಮಗಳು, ಇಂಥವರ ಹೆಂಡತಿ ಎಂದು ಮುಖ್ಯವಾಗುತ್ತದೆಯೇ ವಿನಃ 'ಅವಳೊಬ್ಬಳೇ ನಿಲ್ಲುವ ಸ್ಥಿತಿ'ಯಲ್ಲಿ ಅದಕ್ಕೆ ಅಸ್ತಿತ್ವವೇ ಇಲ್ಲವೆಂಬುದನ್ನೂ ಅದಿತಿಯ ಬದುಕು ನಿರೂಪಿಸಿಬಿಡುತ್ತದೆ. ಎಷ್ಟೇ ಮುಂದುವರಿದ ತಾಂತ್ರಿಕ ಪ್ರಗತಿ ಸಾಧಿಸಿದ ಆಧುನಿಕ ಸಮಾಜವೇ ಇರಲಿ, ಪರಂಪರೆಯ ವರ್ತುಲವನ್ನು ಬೇರು ಸಹಿತ ಕಿತ್ತೊಗೆದ ಸನ್ನಿವೇಶವನ್ನು ಸ್ತ್ರೀಯರ ಸಂದರ್ಭದಲ್ಲಿ ಕಲ್ಪಿಸುವುದು ಸಾಧ್ಯವಾಗುವುದಿಲ್ಲ. ಇದು ವಿವಾಹದ ಸ್ವರೂಪದ ಎಲ್ಲಾ ಪಲ್ಲಟಗಳ ನಡುವೆಯೂ ವಾಸ್ತವವಾಗಿ ವ್ಯಕ್ತವಾಗುವ ಅಂಶವಾಗಿದೆ. ವಿವಾಹವೆಂಬುದು ಸಾಂಸ್ಥಿಕವಾಗಿ ಎಲ್ಲಾ ರೀತಿಯ ಬಾಹ್ಯ ಪಲ್ಲಟಗಳಿಗೆ ಒಳಗಾದರೂ ಅದರ 'ಮೂರ್ತ ರೂಪ' (Externality)ಕ್ಕೆ ಧಕ್ಕೆ ಬಂದಿಲ್ಲ. ಇದು ಹೆಚ್ಚು ನಿಖರತೆ ಸಾಧಿಸುವುದು ಆಧುನಿಕ ಸುಶಿಕ್ಷಿತ ಸ್ತ್ರೀಯರ ಸಂದರ್ಭದಲ್ಲಿ ವಿವಾಹದ 'ಆಯ್ಕೆ'ಯಾರದೇ ಇರಲಿ, ಹೇಗೂ ಇರಲಿ, ಅದರ ಅಂತರಿಕ ರಚನೆ ಮಾತ್ರ ಪುರುಷನಿಗೆ ಪೂರಕವಾಗಿಯೇ ನೇಯ್ದು ಕೊಂಡಿರುತ್ತದೆ. ಈ ಕಾರಣದಿಂದಾಗಿ ಯಾವ ಸಮಾಜವೇ ಇರಲಿ, ಯಾವ ಕಾಲಘಟ್ಟವೇ ಇರಲಿ ವಿವಾಹ ಸ್ತ್ರೀಯರ ಬದುಕಿನ ನೆಲೆಯಿಂದ 'Fair play' (ನಿಷ್ಪಕ್ಷಪಾತ) ಯಾಗಿ ರಚನೆಗೊಳ್ಳುವುದೇ ಇಲ್ಲ.

ಪಠ್ಯದೊಳಗೆ ತಂದೆ-ತಾಯಿಗಳು ಮಕ್ಕಳ ಜವಾಬ್ದಾರಿಯನ್ನು ಆರೋಗ್ಯ ಪೂರ್ಣವಾಗಿ ಅವಲೋಕಿಸಿ ಹೇಗೆ ಪ್ರತಿಕ್ರಿಯಿಸಬೇಕೋ ಹಾಗೇ ಅದಿತಿಯ ತಂದೆ - ತಾಯಿಗಳು ಪ್ರತಿಕ್ರಿಯಿಸುತ್ತಾರೆ. ಇದರಿಂದ ಹೆಚ್ಚು ಸಂವೇದನಾ ಪೂರ್ಣ ಪ್ರಗತಿಪರ ಹೆತ್ತವರಾಗಿ ಕಾಣಿಸಿಕೊಳ್ಳುತ್ತಾರೆ. ಅವರ 'ಆಹ್ವಾನ', 'ಆದರ'ವನ್ನು ಅದಿತಿ ನಿರಾಕರಿಸುವುದು ಅವಳದೇ ಆದ ಶಕ್ತ ಕಾರಣಗಳ ಸಲುವಾಗಿ. ಯಾವುದನ್ನೂ, ಯಾರನ್ನೂ ಅವಲಂಬಿಸದೆ ಇರುವ ಪ್ರಬುದ್ಧ ವ್ಯಕ್ತಿತ್ವ ಅವಳದಾಗಿರುತ್ತದೆ. ಇದು ಅನನ್ಯತೆಯ ಅನ್ವೇಷಣೆಯಾಗಿ ಪರಿಣಮಿಸುವುದು ಕೂಡ ಅವಳ ಅಸ್ತಿತ್ವದ ನೆಲೆಯಿಂದಲೇ ಆಗಿದೆ.

**ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹದ ಸ್ವರೂಪ:**

೧) ಆಧುನಿಕ ಜಾಗತೀಕರಣದ ಸಂದರ್ಭದಲ್ಲಿ ವಿವಾಹವನ್ನು ಸಮಾಜಶಾಸ್ತ್ರ, ಮಾನವಶಾಸ್ತ್ರ ಗುರುತಿಸುವಂತೆ ಸರಳರೇಖಾತ್ಮಕವಾಗಿ ಗುರುತಿಸುವುದನ್ನು ಪಠ್ಯಗಳು ಅವುಗಳ ಸಂವಿಧಾನದಲ್ಲಿ ನಿರಾಕರಿಸುತ್ತವೆ.

೨) ಆಧುನಿಕ ಜಾಗತೀಕರಣ ಸಂದರ್ಭದೊಳಗೆ ವಿವಾಹವು ಸ್ತ್ರೀಯರ ಅಸ್ತಿತ್ವದ ಮಾನದಂಡವಾಗಿ ಪರಿಭಾವಿತಗೊಳ್ಳುತ್ತವೆ.

೩) ಆಧುನಿಕ ಪುರುಷ ಪ್ರಧಾನ ಸಮಾಜದೊಳಗೆ ವಿವಾಹವನ್ನು ನಿರಸನಗೊಳಿಸಿ ಸ್ತ್ರೀಯರ ನೆಲೆಯಿಂದ ಈ ವ್ಯವಸ್ಥೆಯನ್ನು ಮರುಕಲ್ಪಿಸುವ ಪ್ರಯತ್ನವು ಪಠ್ಯಗಳ ಒಳಗೆ ಅನಾವರಣಗೊಂಡಿವೆ.

೪) ವಿವಾಹದ ಕುರಿತ ರಮ್ಯಕಲ್ಪನೆಗಳನ್ನು ಮತ್ತು ವಾಸ್ತವದಲ್ಲಿ ನಿರಸನಗೊಳ್ಳುವ ಬಗೆಗಳನ್ನು ಮೊದಲಕಟ್ಟಿನ ಕಾದಂಬರಿಗಳು ಅನಾವರಣಗೊಳಿಸುತ್ತವೆ.

೫) ಮೊದಲ ಕಟ್ಟಿನ ಕಾದಂಬರಿಗಳು ಜಾಗತೀಕರಣದ ಸಂದರ್ಭದಲ್ಲಿ ಪುರುಷನಷ್ಟೇ ಸ್ತ್ರೀಗೂ ಕೂಡ ಸಾಮಾಜಿಕ ಅಸ್ತಿತ್ವವೆನ್ನುವುದು ಮುಖ್ಯವೆನ್ನುವ ಅಂಶವನ್ನು ವಿವಾಹದ ಆವರಣದ ಒಳಗೆ ಬಿಂಬಿಸುತ್ತವೆ.

೬) ಮೊದಲಕಟ್ಟಿನ ಪಠ್ಯಗಳ ಒಳಗೆ ಮೇಲಿನ ಎಲ್ಲಾ ಕಾರಣಗಳಿಂದ ವಿವಾಹವೆನ್ನುವ ಪ್ರಕ್ರಿಯೆಯೆ ಪರಿಧಿಯಲ್ಲಿ ನಿರೂಪಣೆಗೊಂಡಿದೆ.

### ೫.೨.೨ ಮೊದಲ ಕಟ್ಟಿನ ಕಾದಂಬರಿಗಳು : ದಾಂಪತ್ಯದ ಸ್ವರೂಪ.

**ಸವಿತಾ ನಾಗಭೂಷಣ ಅವರ ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ದಾಂಪತ್ಯದ ಸ್ವರೂಪ:**

**ಸ್ತ್ರೀಲೋಕ** ಕಾದಂಬರಿಯು ದಾಂಪತ್ಯವೆಂಬುದು ಏಕಪಕ್ಷೀಯವೂ ಅಲ್ಲ, ಏಕಮಾರ್ಗೀಯೂ ಅಲ್ಲ, ಅದು ಪಾರಸ್ಪರಿಕ; ಈ ಕಾರಣದಿಂದ ಪರಸ್ಪರ ಜೀವನವನ್ನು ಪರಿವರ್ತಿಸಿ, ವ್ಯಕ್ತಿತ್ವ ವಿಕಸನಕ್ಕೆ ಅನುವಾಗುವಂಥದ್ದು ಎಂಬುದನ್ನು ಸ್ತ್ರೀಯರು ಪರಿಭಾವಿಸುವ ನೆಲೆಯಿಂದ ನಿರೂಪಿಸುತ್ತದೆ. ಸ್ತ್ರೀಯರಿಗೆ ಪ್ರತ್ಯೇಕವಾದ ಅಸ್ತಿತ್ವವಿದೆಯೇ? ಎಂಬುದನ್ನು ದಾಂಪತ್ಯದಲ್ಲಿ ಪುರುಷನ 'ನೆರಳಾ'ಗಿ ಶತಮಾನಗಳಿಂದ ಅನುಸರಿಸಿಕೊಂಡು ಬಂದ ಸ್ತ್ರೀಯರು ತಮ್ಮೊಳಗೆ ತಾವೇ ಕೇಳಬೇಕಾದ ಪ್ರಸ್ತುತತೆಯೊಂದನ್ನು ಪಠ್ಯದೊಳಗೆ ಅಂತರ್ಗತವಾಗಿ ಪ್ರತಿಬಿಂಬಿತಗೊಂಡಿದೆ. ಗುಲಾಮಳಾಗಿ, ಪರಾವಲಂಬಿಯಾಗಿ, ಅಪರಿಮಿತ ಕೀಳಿರಿಮೆಯಿಂದ, ಆತ್ಮವಿಶ್ವಾಸದ ಕೊರತೆಯಿಂದ ಬಳಲುವ ಸ್ತ್ರೀಯರು ತಮ್ಮೊಳಗೆ ತಮ್ಮ ದಾಂಪತ್ಯದೊಳಗೆ ಮಾಡಿಕೊಳ್ಳಬೇಕಾದ ಸ್ಥಳನಿರ್ಮಾಣದ ಕುರಿತಂತೆ **ಸ್ತ್ರೀಲೋಕ** ಪ್ರಾತಿನಿಧಿಕ ಮಾದರಿಗಳನ್ನು ಆಧುನಿಕ ಕುಟುಂಬ ವ್ಯವಸ್ಥೆಯ ಅನಿವಾರ್ಯವಾಗಿ ಪರಿಭಾವಿಸುತ್ತದೆ. ದಾಂಪತ್ಯವನ್ನು ಕಟ್ಟುವ ಕೇಂದ್ರ ರೂಪದ ಸಾಂದ್ರ ಚಿತ್ರಣದ ಕಾದಂಬರಿ ಇದಲ್ಲ. ಆದರೆ ಹಲವು ದಾಂಪತ್ಯಗಳ ಅನುಭವದ ಅಂಶಗಳು ಇಲ್ಲಿ ದಕ್ಕುತ್ತವೆ. ಪಠ್ಯದೊಳಗೆ ಕಾಣಿಸಿಕೊಳ್ಳುವ ಹೆಚ್ಚಿನ ದಾಂಪತ್ಯ ಚಿತ್ರಣ ಯಾಂತ್ರಿಕವಾದದ್ದು. ಸಾಮಾನ್ಯ ಗ್ರಹಿಣಿ ಇದರಲ್ಲಿ ಏಕಾಂಗಿತನದಿಂದ ಬಳಲುವ ಒಂಟಿಯಾಗಿರುತ್ತಾಳೆ ಇದನ್ನು ಕಾದಂಬರಿಯ ನಿರೂಪಣೆಯೇ ದೃಢಪಡಿಸುತ್ತದೆ.

> "ನನ್ನ ಗಂಡ ಏಳೋದು ಎಂಟು ಗಂಟೆಗೆ... ಆ ಎಂಟರಿಂದ ಹತ್ತರವರೆಗೆ ಅವರು ನನ್ನ ಹತ್ರ ಆಡೊ ಮಾತುಗಳು ಅಂದ್ರೆ 'ಕಾಫಿಕೊಡು ಸ್ನಾನಕ್ಕೆ ನೀರು ತೋಡು' ಟವಲ್ ಎಲ್ಲಿದೆ ಷರ್ಟು ಇಸ್ತ್ರಿ ಆಗಿದೆಯಾ? 'ತಿಂಡಿ ಏನು' 'ಬ್ಯಾಗ್ ಕೊಡು' 'ಹೋಗಿ ಬರ್ತೀನಿ'. ಇಷ್ಟೇ..... ಸಂಜೆ ನಾಲ್ಕು ಗಂಟೆಗೆ ಮಗ ಬರ್ತಾನೆ. ಅವನಿಗೆ ಹೋಂ ವರ್ಕ್ ಮಾಡಿಸೋ ಹೊತ್ತಿಗೆ ನನ್ನ ಗಂಡ ಬರ್ತಾರೆ. ಕಾಫಿ ಕುಡಿತಾರೆ, ಪೇಪರು ಓದ್ತಾರೆ. ಸಂಜೆ ಅವರು ನನ್ನ ಹತ್ರ ಮಾತಾಡೋದು 'ಕಾಫಿಕೊಡು' ಎಲ್ಲಿ, ನಿತಿನ್ ಎಲ್ಲಿ?, 'ಪೇಪರೆಲ್ಲಿ', 'ನಿತಿನ್‌ದು ಹೋಂವರ್ಕ್ ಆಯ್ತಾ, ಅವನ ಡೈರಿ ನೋಡಿದೀ ತಾನೆ?' ಅಡಿಗೆ ಏನು? . 'ಬೆನ್ನು ನೋಯ್ತು ಇದೆ'. 'ಬ್ಯಾಂಕಿನಲ್ಲಿ ತುಂಬಾ ಕೆಲಸ' 'ಸ್ವಲ್ಪ ಎಣ್ಣೆ ತಿಕ್ಕು, ಬೆನ್ನಿಗೆ' 'ಊಟ ಹಾಕು ಯಾಕೋ ಸುಸ್ತು' ಗುಡ್‌ನೈಟ್ 'ಬೆಳಿಗ್ಗೆ ಬೇಗ ಎಬ್ಬಿಸು'. ಭಾನುವಾರ ಒಂದು ದಿನ ಮನೇಲಿ ಇರ್ತಾರೆ. ಅವೊತ್ತು ನನ್ನವರಿಗೆ ತಲೆಸ್ನಾನ. ಮಧ್ಯಾಹ್ನ ಆರಾಮ ನಿದ್ದೆ. ನನ್ನ ಮಗನಿಗೂ ಅವೊತ್ತು ತಲೆಸ್ನಾನ. ಸಂಜೆ ಎಲ್ಲಾದ್ರೂ ಅರ್ಧಗಂಟೆ ವಾಕಿಂಗ್ ಸಿನಿಮಾ ಅಂದ್ರೆ ನನ್ನ ಗಂಡನಿಗೆ ಆಗಲ್ಲ. ಪುಸ್ತಕ ಓದೋ ಅಭ್ಯಾಸ ನನಗಿಲ್ಲ. ಸಂಗೀತದಲ್ಲಿ ನನಗೆ ಅಭಿರುಚಿ ಇಲ್ಲ. ನನ್ನ ಸ್ವರ ಕೂಡ ಚೆನ್ನಾಗಿಲ್ಲ. ನನಗಂತೂ ಈ ಯಾಂತ್ರಿಕ ಜೀವನ ಎಷ್ಟು ಬೇಸರ ತಂದಿದೆ ಅಂದ್ರೆ..... ಆದ್ರೆ.... ನಾನೇನು ಮಾಡಲಿ? ಗಂಡನಿಗೆ ಒಳ್ಳೆ ಕೆಲಸವಿದೆ. ಮುತ್ತಿನಂತ ಮಗ. ಉಡೋಕೆ, ಉಣ್ಣೋಕೆ ಬೇಕಾದಷ್ಟು ಇದೆ. ಆದ್ರೂ ಮನದಲ್ಲಿ ಏನೊ.... ಒಂಥರಾ ಅಶಾಂತಿ, ಒಂಥರಾ ಹಿಂಸೆ, ನನ್ನ ಗಂಡನ ಹತ್ರ ಹೇಳಿದ್ರೆ

'ನಿಂಗೇನು ಕಮ್ಮಿಯಾಗಿದೆ? ಅಂತ ಕೇಳ್ತಾರೆ. ಇದೇ ಮಾತನ್ನ ನನ್ನ ಗೆಳತಿಯರೂ ಹೇಳ್ತಾರೆ. ನನ್ನ ಬಂಧು ಬಳಗನೂ ಹೇಳುತ್ತೆ." (ಸವಿತಾ ನಾಗಭೂಷಣ ೧೯೯೬ : ೨೮೮ ೨೮೯)

ಸಂಸಾರದೊಳಗೆ ಮಹಿಳೆಯರ ಜೀತವು ಶತಮಾನದಿಂದ ಅವಿರತವಾಗಿ ಮುಂದುವರಿಯುತ್ತಿದೆ. ಇದನ್ನು ಒಡೆಯುವ ಪ್ರಯತ್ನವು ಸ್ತ್ರೀಲೋಕದೊಳಗೆ ಕಾಣಿಸಿಕೊಳ್ಳುತ್ತದೆ. ಗೃಹಿಣಿ ಎಂದರೆ, ಪೂರ್ಣಕಾಲಿಕ ಕೆಲಸದ ಆಳು. ಸ್ತ್ರೀಯರು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವುದು ತಮ್ಮ ಗೃಹಾಭಿಮುಖದ ಜೀವನದಲ್ಲಿಯೇ ಹೆಚ್ಚು. ಹೆಚ್ಚಿನ ದಾಂಪತ್ಯದಲ್ಲಿ ಸ್ತ್ರೀಯರ ಎಲ್ಲ ಕ್ಷಮತೆಗಳು ಪುರುಷರ ಯೋಜನೆಯ ಚೌಕಟ್ಟಿಗೆ ಒಳಪಟ್ಟಿರುತ್ತವೆ. ಇದರಲ್ಲಿ ಸ್ತ್ರೀಯರ ಜೀವನದ ಒಂದೊಂದು ವ್ಯವಹಾರವೂ ಪುರುಷರ ಇಚ್ಛೆಯಂತೆ ನಡೆಯುತ್ತದೆ. ಇದರೊಳಗಿನ ಸ್ತ್ರೀಯರ ಮಾನಸಿಕ ಹೊಯ್ದಾಟಗಳು ಕ್ಷೋಭೆಯಾಗಿ, ಉನ್ಮಾದವಾಗಿ, ಕಾಣಿಸಿಕೊಳ್ಳುವ ಬಗೆಯನ್ನು ಸ್ತ್ರೀಲೋಕವು ಬಯಲುಮಾಡುತ್ತದೆ. ಪುರುಷಪ್ರಧಾನ ಸಮಾಜ ಅಧೀನತೆಯಲ್ಲಿರುವ ಸುರಕ್ಷಿತೆಯೇ ಗೃಹಿಣಿಯರಾಗಿರುವ ಸ್ತ್ರೀಯರಿಗೆ ಸಮಧಾನಕರ ಎಂಬ ನಿಲುವಿಗೆ ಬರುತ್ತದೆ. ಆದರೆ, ಅವು ಆಂತರ್ಯದ ವಿವರಗಳಲ್ಲ. ಆಂತರ್ಯದ ವಿವರಗಳಲ್ಲಿ ಸ್ತ್ರೀಯರ ಹಳಹಳಿಕೆಯನ್ನು ಸ್ತ್ರೀಲೋಕ ಪಠ್ಯದೊಳಗೆ ಪ್ರಜ್ಞಾ ಸುಧಾ, ವಿಮಲ, ಸುನೀತ, ಕಮಲ, ವಿಜಯ, ಅಮೀನ ಇವರಂಥ ಪಾತ್ರಗಳು ತೋಡಿಕೊಳ್ಳುತ್ತವೆ. ಆಯಾ ಸ್ತ್ರೀಯರ ಮನಸ್ಥಿತಿಯು ಅವರ ಪರಿಸರದ ಫಲ, ದಾಂಪತ್ಯದ ಫಲ. ಈ ಅರ್ಥದಲ್ಲಿ ಸ್ತ್ರೀಯರ ಲೋಕದಲ್ಲಿ ಪುರುಷರ ಇಚ್ಛೆಯೇ ಪ್ರಧಾನ ವಾಹಕ. ಹಾಗಿದ್ದು ಇದು ಪುರುಷ ಪ್ರಾಧಾನ್ಯವನ್ನು ಇಲ್ಲದಾಗಿ ಮಾಡಿದ ಸಮಾನತೆಯನ್ನು ಆಧರಿಸಿದ, ವ್ಯಕ್ತಿ ವಿಕಾಸದಲ್ಲಿ ಸರಿಸಮಾನ ಅವಕಾಶ ಇರುವ ಸ್ತ್ರೀ-ಪುರುಷರ ಸಹಜೀವನವನ್ನು, ದಾಂಪತ್ಯವನ್ನು ಬಯಸುತ್ತದೆ. ಇದರೊಳಗೆ ದಾಂಪತ್ಯದಲ್ಲಿನ ಲೈಂಗಿಕ ಅಪೇಕ್ಷೆಯ ಪೂರೈಕೆಗೆ ಪರಸ್ಪರರ ಅನುಮತಿ, ಮತ್ತು ಇಚ್ಛೆಯ ಮನ್ನಣೆ ಅಗತ್ಯವೆಂಬುದು ಹಲವು ಗೃಹಿಣಿಯರ ಅಭೀಪ್ಸೆಯ ಚಿತ್ರಣದಲ್ಲಿ ಪ್ರಕಟವಾಗುತ್ತದೆ. ದಾಂಪತ್ಯದಲ್ಲಿ ಪ್ರೇಮಭಾವನೆ, ರಸಿಕತೆ, ಪರಸ್ಪರರ ಸಮ್ಮತಿ, ಸಹಕಾರಗಳಿಂದ ಲೈಂಗಿಕ ಸುಖವನ್ನು ಪಡೆಯುವ ಕಲ್ಪನೆಯನ್ನು ಇಂತಹ ಪಾತ್ರಗಳು ನಿರೀಕ್ಷಿಸುವುದು ಸಮಾನತೆಯ ಮೂಲದಿಂದ ಮಾತ್ರವಲ್ಲದೆ, ಸ್ತ್ರೀಯರ ಸಹಜ ಆಕಾಂಕ್ಷೆಯಾಗಿಯೂ ಪಠ್ಯದೊಳಗೆ ಅನಾವರಣಗೊಳ್ಳುತ್ತದೆ. ದಾಂಪತ್ಯದ ನೆಲೆಯಲ್ಲಿ ಸ್ತ್ರೀಯ ಜೀವನದ ಜನನ ಕ್ಷಮತೆ, ಲೈಂಗಿಕತೆ, ಶ್ರಮ, ಮಾನಸಿಕತೆ ಇವುಗಳ ಮೇಲಿನ ನಿರ್ಬಂಧಗಳು ಪುರುಷರ ವರ್ಚಸ್ಸಿನ ಒಟ್ಟು ಪರಿಣಾಮದ ಮೇಲೆ ಅವಲಂಬಿತವಾಗಿದೆ. ಸ್ತ್ರೀಲೋಕದ ಪಾತ್ರಗಳ ಚರ್ಚೆಯ ವಸ್ತುಗಳೆಂದರೆ, ದಿನನಿತ್ಯದ ಅಡುಗೆ, ಒಗ್ಗರಣೆ, ಪಾತ್ರೆ ಬೆಳಗುವುದು ಇತ್ಯಾದಿ ಸಾಮಾನ್ಯ ವಿಷಯಗಳು. ಇಂತಹ ವಿವರಗಳ ಒಳಗೆ ದಾಂಪತ್ಯದ ಎಲ್ಲ ಬಗೆಯ ಭಾವನೆಗಳನ್ನು ಇಲ್ಲಿನ ಪಾತ್ರಗಳು ನಿವೇದಿಸಿಕೊಳ್ಳುತ್ತವೆ. ದಾಂಪತ್ಯದ ಒಳಗೆ ಹಾಗೂ ಕುಟುಂಬದಲ್ಲಿ ಮಹಿಳೆಯರಿಗೆ ಸಿಕ್ಕಿರುವ ಹಾಗೂ ಸಿಗಬೇಕಾದ ಅವಕಾಶ ಸಾಧ್ಯತೆಗಳ ಚರ್ಚೆ ಇವುಗಳ ಜೊತೆಗೆ ದಾಂಪತ್ಯದಲ್ಲಿನ ಅಸಮಧಾನ, ಕೋಪ ತಾಪಗಳ ಪಾರ್ಶ್ವಿಕ ಚಿತ್ರಣ ಸ್ತ್ರೀ ಲೋಕದಲ್ಲಿ ಸಿಗುತ್ತದೆ.

"ನಾನು : ..... ನಮ್ಮನೆಯವರ ಜೊತೆ ಸ್ವಲ್ಪ ಜಗಳ ಆಯ್ತು ಯಾಕೋ ಜೀವನವೇ ಬ್ಯಾಡ ಅನಿಸುತ್ತೆ ರೀ.... ಸತ್ತಾದ್ರೂ ಸಾಯ ಬಾರದಾ... ಯಾಕೀ ರಗಳೆ ಅಂತ ಅನಿಸುತ್ತೆ.

ಪ್ರಜ್ಞಾ : ಎಲಾ... ಸಾಯೋ ವಿಚಾರ... ಅಂದ್ರೆ ಏನೋ... ಮಹಾಭಾರತ ಯುದ್ಧಾನೇ ನಡೆದಿರಬೇಕು... ಏನಪ್ಪ ಅಂತಾದ್ದು.

ನಾನು : ಎಲ್ಲಾ ನಮ್ಮ ಪಾಪುನಿಂದ ರೀ....

ಪ್ರಜ್ಞಾ : ಪಾಪ .... ಅಂತಾದ್ದು ಏನು ಮಾಡಿತ್ತು ರೀ....

ನಾನು : ಅದೇ ರೀ..... ಮಕ್ಕಳ ಜಗಳ.... ಅದೇ ಆಟ ಆಡೋ ಹುಡುಗರು.... ಯಾರೋ ಹುಡುಗ ಬೇವರ್ಸಿ ಅಂತ ಬಯ್ತಾ ಇದ್ದನಂತೆ... ನೋಡಿದ್ರೆ.... ಅದು ನಮ್ಮ ಪಾಪುನೇ.... ನಮ್ಮನೆಯವರು ಆಶ್ಚರ್ಯಪಟ್ಕೋತ ಹತ್ರ ಹೋಗೋದ್ರಲ್ಲಿ ಅದೇ ನಮ್ಮ ಪಾಪುನಿಂದ ಬಯ್ಸಿಕೊಂಡ ಹುಡುಗ ಇನ್ನೇನೋ ಅಂದನಂತೆ..... ಅದಕ್ಕುತ್ತರವಾಗಿ ನಮ್ಮ ಪಾಪು ಸೂಳೆ ಮಗನೇ ಅಂತ ಬೈದನಂತೆ! ನಮ್ಮನೆಯವರು ನಾಲ್ಕು ಬಾರಿಸಿ ಮನೆಗೆ ಕರಕೊಂಡು ಬಂದ್ರು ನೋಡಿ.... ನನಗಾದರೂ ವಿಚಾರ ಏನಂತ ಗೊತ್ತಾಗಬೇಕು? ನಮ್ಮನೆಯವರು ಒಂದೇ ಸಮ ನನ್ನನ್ನ ಬಯ್ಯೋದಾ? ಅಲ್ಲರೀ.... ಬೈಗುಳಾನ ನಾನು ಹೇಳ್ಕೊಟ್ಟಿದೀನಾ? ಅಂತಹ ಶಬ್ದಗಳನ್ನು ಬಳಸಿಯೇ ನಂಗೆ ಗೊತ್ತಿಲ್ಲ.

ಪ್ರಜ್ಞಾ : ಸಮಾಧಾನ... ಸಮಾಧಾನ..

ನಾನು : ನೀವು ನರೇಂದ್ರ ಅವರ ಜತೆ ಜಗಳ ಮಾಡೋದಿಲ್ಲ ಅಂತ ಕಾಣುತ್ತೆ.

ಪ್ರಜ್ಞಾ : ಹಾಗಂತ ಅನಿಸುತ್ತಾ ನಿಮಗೆ?

ನಾನು : ಹೂಂ

ಪ್ರಜ್ಞಾ : ನೀವು ಎಲ್ಲೋ..... ವರ್ಷಕ್ಕೆ ಒಂದೋ ಎರಡೋ ಸಲ ಆಡ ಬಹುದು.... ನಮ್ದು ದಿನಾ ಇರುತ್ತೆ ಗೊತ್ತಾ? ಜಗಳ ಆಡಿದ್ರೇನೆ ನಮ್ಮಿಬ್ಬರಿಗೂ ಸಮಾಧಾನ! ಹಾಗೇ ಸತತವಾಗಿ ಜಗಳ ಮಾಡಿ ಮಾಡಿ ನಾನು ಏನೂಂತ ಅವರಿಗೂ ಅವರು ಏನೂಂತ ನನಗೂ ಚೆನ್ನಾಗಿ ಗೊತ್ತಾಗಿ ಹೋಗಿದೆ. ಯಾವತ್ತಾದ್ರೂ ಇಡೀ ವಾರ ಜಗಳ ಆಡಲಿಲ್ಲ ಅಂತ ಅಂದ್ರೆ..... ಅವರೇ ಕೇಳ್ತಾರೆ.... ಏನು ವಿಶೇಷ ಇತ್ತೀಚೆಗೆ ನಿನಗೆ ಕಾಲು ಕಡಿತ ನಿಂತು ಹೋದ ಹಾಗಿದೆ.... ಜಗಳಕ್ಕೇ ಬಂದಿಲ್ಲ.... ಅಂತ. ಸಣ್ಣ ಪುಟ್ಟದಕ್ಕೇ... ಜಗಳ ನಮ್ದು....

ನಾನು : ಸಣ್ಣದು ಅಂದ್ರೆ !

ಪ್ರಜ್ಞಾ : ಚಪಾತಿ ಮಾಡು ಅಂದಿರ್ತಾರೆ.....ನಾನು ಮರೆತು ಅಥವಾ ಯಾರು ಚಪಾತಿ ಲಟ್ಟಿಸ್ತಾರೆ ಅಂತ ಅನ್ನ ಮಾಡಿದ್ರೆ... ಅದಕ್ಕೊಂದು ಜಗಳ, ಅಥವಾ ಸ್ವಲ್ಪ ನೀರು ಬಿಟ್ಟು ಟ್ಯಾಂಕ್ ತುಂಬಿಸಿ ಅಂತ ಹೇಳಿರ್ತಿನಿ. ಅಥವಾ ಕೆ.ಇ.ಬಿ. ಬಿಲ್‌ಕಟ್ಟಿ ಅಂತ ಅಂದಿರ್ತೀನಿ.... ಇವರು ಆರಾಮವಾಗಿ ಪೇಪರು ಓದಿಕೋತ ಮನೇಲಿ ಕೂತಿರ್ತಾರೆ. ಹೀಗೇ ನಿತ್ಯದ ವಿಷಯಗಳಿಗಾಗಿ ಜಗಳ. ಸಂಸಾರ ಅಂದ ಮೇಲೆ

ಜಗಳ ಇಲ್ಲದೆ ಇರುತ್ತಾ? ಒಂದೊಂದು ಸಲ ಭಾಳ ಸಿಟ್ಟು ಬಂದು ಅರ್ಧದಿನ ಊಟ ಬಿಡ್ತಾರೆ. ಅವರು ಊಟ ಬಿಟ್ರೆ ನಂಗೆ ಊಟ ಮಾಡೋಕೆ ಆಗುತ್ತಾ? ಇಬ್ಬರಿಗೂ ತುಂಬಾ ಹಸಿವಾಗಿ ರಾಜಿ ಮಾಡ್ಕೊಬೇಕಾಗಿ ಬರುತ್ತೆ.... ಆಮೇಲೇನು? ಜಗಳ ಆಗಿತ್ತು ಅನ್ನೋದನ್ನೇ ಮರೆತು, ಸ್ವಲ್ಪ ಚೆನ್ನಾಗಿಯೇ ಅಡಿಗೆ ಮಾಡ್ಕೊಂಡು ಊಟ ಮಾಡೋದು.....

ನಾನು: ನಮ್ಮನೇಲೂ ಹಾಗೇ ಆಯ್ತು. ತಟ್ಟೆಗೆ ಬಡಿಸಿದ್ರೆ.... ಊಟಾನೇ ಮಾಡಿಲ್ಲ...... ಆ ಮೇಲೆ ನಾನೆ ತಡೀಲಾರದೆ 'ನನ್ನ ಮೇಲಿನ ಸಿಟ್ಟಿಗೆ ಹೊಟ್ಟೆಗೆ ಕಮ್ಮಿ ಮಾಡ್ಕೊಬೇಡಿ.... ನಂದೇ ಎಲ್ಲ ತಪ್ಪು' ಅಂತ ಕ್ಷಮೆ ಕೇಳಿದೆ... ಆಮೇಲೇ ನೋಡಿ.... ಅವರು ಊಟ ಮಾಡಿದ್ದು.....

ಪ್ರಜ್ಞಾ : ಮತ್ತೆ ಎಲ್ಲ ಸರಿ ಹೋಯಿತಲ್ಲ..... ಇನ್ನೇನು ತಾಪತ್ರಯ?

ನಾನು : ಸರಿಹೋಯ್ತು.... ಆದ್ರೆ ಪ್ರತಿಸಲಾನೂ ನಾನೇ ಬಗ್ಗ ಬೇಕಲ್ಲ? ಏನು ಜನ್ಮ ನಂದು ಅಂತ ಅನಿಸುತ್ತೆ..... ನಂದೇನೂ ತಪ್ಪಿಲ್ಲದಿದ್ದರೂ ನಾನೇ ಯಾಕೆ ತಲೆಬಾಗಬೇಕು.... ತಪ್ಪು ಮಾಡೋದು ಅವರು..... ಅನ್ನಿಸಿಕೊಳ್ಳೋದು ನಾನು.....

ಪ್ರಜ್ಞಾ : ಅಹಂಕಾರ ಕಮ್ಮಿ ಇದ್ದೋರು ತಲೆಬಾಗ್ತಾರೆ....

ನಾನು : ಹಾಗಾದ್ರೆ ಅವರ ಅಹಂಕಾರ ಬೆಳಕೋತ ಹೋಗಲ್ಲವಾ ನನ್ನ ಗತಿ ಏನು?

ಪ್ರಜ್ಞಾ : ಹೌದು..... ಹೌದು.... ಮಾಡಿದ ತಪ್ಪನ್ನು ಒಪ್ಪಿಕೊಂಡು... ಅದೂ ಹೆಂಡತಿ ಹತ್ರ ಕ್ಷಮೆ ಕೇಳಬೇಕು ಅಂದ್ರೆ... ದೊಡ್ಡ ಮನಸ್ಸೇ ಇರಬೇಕು... ಆದ್ರೆ ಎಷ್ಟು ಜನರಿಗೆ ಇರುತ್ತೆ... ಹೇಳಿ..." (ಸವಿತಾ ನಾಗಭೂಷಣ: ೧೯೯೬ ; ೩೦೮-೩೦೯)

ದಾಂಪತ್ಯದಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಹೆಂಗಸರೇ ಸೋಲುವ ಮತ್ತು ಸೋಲಬೇಕಾದ ಪರಿಸ್ಥಿತಿ ನಿರ್ಮಾಣವಾಗುವುದನ್ನು ಮೇಲಿನ ವಿವರಗಳು ಪಠ್ಯದೊಳಗೆ ಅನಾವರಣಗೊಳಿಸುತ್ತವೆ. ದಾಂಪತ್ಯದಲ್ಲಿ ದೈನಂದಿನ ಸಣ್ಣ ಅಂಶಗಳಲ್ಲೂ ಸ್ತ್ರೀಯರ 'ಗೆಲುವು' ಎಂಬುದು ಹಾಸ್ಯಾಸ್ಪದ ಸಂಗತಿಯಾಗಿ ಪರಿಣಮಿಸುತ್ತದೆ. ಹೆಂಡತಿಯನ್ನು ಒಪ್ಪುವ, ಪ್ರೀತಿಸುವ ಗಂಡಿನ ಒಳಗೂ ಪುರುಷನೆನ್ನುವ ಸ್ಥಾಪಿತ 'ಅಹಂ' (ego) ಕೆಲಸ ಮಾಡುತ್ತಲೇ ಇರುತ್ತದೆ. ಇದಕ್ಕೆ ಮನಃಶಾಸ್ತ್ರಜ್ಞನಾದ ಯೂಂಗ್ ಕೊಡುವ ಕಾರಣವೆಂದರೆ. ಗಂಡು ವಾಸ್ತವೀಕೃತ ಆತ್ಮ, ಹೆಣ್ಣು ಆತ್ಮ ಗರ್ಭಿತ ದ್ರವ್ಯ ( man is materialized spirit ; the woman matter impergnated with spirit). ಸ್ತ್ರೀ - ಪುರುಷರ ವ್ಯಕ್ತಿತ್ವದೊಳಗೆ ಈ ಮನೋಧೋರಣೆಯು ಬಹುಮುಖ್ಯವಾಗಿ ಕಾಣಿಸಿಕೊಳ್ಳುತ್ತದೆ. •೧೩ ಇದರ ಪ್ರಾಥಮಿಕ ವಿನ್ಯಾಸಗಳನ್ನು 'ದಾಂಪತ್ಯ'ದಲ್ಲಿ ಗುರುತಿಸಬಹುದಾಗುತ್ತದೆ ಎಂದು ಅಭಿಪ್ರಾಯಪಡುತ್ತಾನೆ.

**ತಾರಾ ಭಟ್ ಅವರ ಕಾದಂಬರಿಯಲ್ಲಿ ಪ್ರಕಟವಾಗುವ ದಾಂಪತ್ಯದ ಸ್ವರೂಪ :**

ಯಾವುದೇ ಸಂಬಂಧಗಳು ಅತ್ಯಂತ ಪ್ರಾಮಾಣಿಕವಾಗುವುದು ಅವು ಹುಟ್ಟಿದ ಸನ್ನಿವೇಶಗಳು ಕೇವಲ ಮಾನವೀಯವಾದಾಗ ಮಾತ್ರ. ಸುಳ್ಳು ಪ್ರಜ್ಞೆಯ ಮೇಲೆ ಹುಟ್ಟನ್ನು ಪಡೆಯುವ ಸಂಬಂಧಗಳು ಅವು ಬೆಳೆಯುತ್ತಿರುವ ಆರಂಭಿಕ ಸ್ಥಿತಿಯಲ್ಲೇ ತಮ್ಮ ಸತ್ವವನ್ನು ಕಳೆದುಕೊಂಡು ನಕಲಾಗಿ,

ಪೊಳ್ಳುತನ ಮಾತ್ರ ಉಳಿಸಿಕೊಂಡು ಬಿಡುತ್ತವೆ. ಇದರೊಳಗೆ ಮುಖವಾಡಗಳು ಅನಿವಾರ್ಯವಾಗುತ್ತವೆ. ಇವು ಸಮಾಜವನ್ನು ಒಪ್ಪಿಸುವ ಬಗೆಗಳಲ್ಲಿ ಮಾತ್ರ ಪ್ರವೃತ್ತಗೊಳ್ಳುತ್ತವೆಯೇ ಹೊರತು, ಸಂಬಂಧಗಳನ್ನು ನವೀಕರಿಸುವ ಯಾವ ವಿಧದ ಪ್ರಯತ್ನಗಳನ್ನು ನಡೆಸುವುದರಲ್ಲಿ ಕೂಡ ವಿಫಲತೆ ಹೊಂದುತ್ತವೆ. ಎನ್ನುವ ಅಂಶಗಳು ಅವ್ಯಕ್ತ ಕೃತಿಯ ಒಳಗೆ ವಿವರಿತಗೊಂಡಿದೆ. ಬಂಡವಾಳಶಾಹಿ ಜಾಗತೀಕರಣ ಸಮಾಜದಲ್ಲಿ ಗಂಡು-ಹೆಣ್ಣಿನ ವೈವಾಹಿಕ ಸಂಬಂಧವೆನ್ನುವುದು ಪರಸ್ಪರ 'ವ್ಯಕ್ತಿತ್ವಗಳ ಪೊಟ್ಟಣ'(Personaliy Packages)ಗಳನ್ನು ವಿನಿಮಯ ಮಾಡಿಕೊಳ್ಳುವ ಒಂದು ಒಪ್ಪಂದವಾಗಿ ಮಾರ್ಪಟ್ಟು ಬಿಡುತ್ತವೆ. ಇದರಿಂದ 'ಯಾಂತ್ರಿಕತೆ' ಎನ್ನುವುದು ಬದುಕಿನಲ್ಲಿ ಹಾಸುಹೊಕ್ಕು, ಸಂವೇದನೆಗಳ ಮೌಲ್ಯಗಳು ಅರ್ಥವನ್ನು ಕಳೆದುಕೊಳ್ಳುತ್ತವೆ. ಆಧುನಿಕ ಸಮಾಜದ ದಾಂಪತ್ಯವನ್ನು ಋಣಾತ್ಮಕವಾಗಿ ಅವ್ಯಕ್ತ ಪಠ್ಯವು ಅನಾವರಣಗೊಳಿಸುತ್ತದೆ. ಇದರಲ್ಲಿ ಪರಿಸ್ಥಿತಿಗಳೊಂದಿಗೆ ಸುಲಭವಾಗಿ ರಾಜಿ ಮಾಡಿಕೊಂಡು, ಸಂತೃಪ್ತರಾಗಿದ್ದೇವೆ ಎಂದು ತಮ್ಮನ್ನು ತಾವೇ ಒಪ್ಪಿಸಿಕೊಂಡು ಬದುಕುವ 'ಸೋಗಿನ ದಾಂಪತ್ಯ'ದ ಜೀವನ ವಿಧಾನ ಒಂದು ಬಗೆಯದಾದರೆ, ಸೋಗಿನ ವರ್ತುಲಗಳನ್ನು ಧಿಕ್ಕರಿಸಿ ಹೊರಬಂದು ಸಮಾಜದ ಸ್ಥಾಪಿತ ಮೌಲ್ಯಗಳೊಂದಿಗೆ ಮುಖಾಮುಖಿಗೊಳ್ಳಲಾಗದೆ, ಸಂಘರ್ಷಕ್ಕೆ ಗುರಿಯಾಗುವ ಮಾದರಿ ಇನ್ನೊಂದು ಬಗೆಯದ್ದು. ಈ ಎರಡನೆ ಮಾದರಿಯು ಹೆಚ್ಚು ಸವಾಲುಗಳನ್ನು ಎದುರಿಸುವಂಥದ್ದಾಗಿ ಪಠ್ಯದೊಳಗೆ ಬಿಂಬಿತಗೊಂಡಿದೆ.

'ಬೆನ್ಸನ್ ಪಬ್ಲಿಸಿಟಿ ಕಂಪೆನಿ'ಯ ಸೀನಿಯರ್ ಎಕ್ಸಿಕ್ಯೂಟಿವ್ ರಾವ್ ಮತ್ತು ಆತನ ಪತ್ನಿ ಸುಚಿತ್ರಾರಾವ್ ಅವರದು ಪರಿಸ್ಥಿತಿಗಳೊಂದಿಗೆ ಲಾಭದ ಆಯಾಮದಿಂದಲೇ ಪರಸ್ಪರ ರಾಜಿಮಾಡಿಗೊಂಡು ಬದುಕುವ 'ಸೋಗಿನ ದಾಂಪತ್ಯ' ಹೆಂಡತಿಯ ಸೌಂದರ್ಯವನ್ನು ಮಿ.ರಾವ್ ಅಧಿಕಾರ, ವರ್ಚಸ್ಸನ್ನು ಉಳಿಸಿಕೊಳ್ಳುವ ಸಾಧನವಾಗಿ ಬಳಸಿಕೊಳ್ಳುತ್ತಾನೆ. ಇದು ಕೊಳ್ಳುಬಾಕ ಸಂಸ್ಕೃತಿಯೊಳಗೆ ವೈವಾಹಿಕ ಸಂಬಂಧಗಳು ಶಿಥಿಲೀಕರಣಕ್ಕೆ ಒಳಗಾಗುವುದನ್ನು ನಿರೂಪಿಸುತ್ತದೆ. ಮಿ.ರಾವ್ ವಿದೇಶಿ ಮೇಲಾಧಿಕಾರಿ ಅವಿವಾಹಿತ ಜೋಫ್ರೆಯನ್ನು ಆತನ ಸೌಂದರ್ಯವತಿಯಾದ ಹೆಂಡತಿಯ ಸಹಕಾರದಿಂದ ತನ್ನ ಪರವಾಗಿ ಒಲಿಸಿಕೊಳ್ಳುವ ಯೋಜನೆಯಲ್ಲಿ ಇದು ಪ್ರಕಟವಾಗುತ್ತದೆ;

> "ಈ ಸಲವಾದರೂ ಹೇಗಾದರೂ ಮಾಡಿ ವಿದೇಶಕ್ಕೆ ಹೋಗುವ ಅವಕಾಶ ಮಾಡಿಕೊಳ್ಳುವುದು ಡಿಯರ್! ನಾನು ಅವನ ಸ್ವಾಗತಕ್ಕಾಗಿ ದೊಡ್ಡ ಪಾರ್ಟಿಯನ್ನು ಏರ್ಪಡಿಸಿದ್ದೇನೆ. ಈ ಪಾರ್ಟಿಯಲ್ಲಿ ನೀನು ಆತಿಥೇಯಳಾಗಿ ಸ್ವಲ್ಪ ಹೆಚ್ಚಿನ ಮುತುವರ್ಜಿ ವಹಿಸಬೇಕು. ಜಾಗ್ರತೆ! ನನ್ನ ಕೆಲಸ ಈ ರೀತಿಯ ಹೊಂದಾಣಿಕೆ ಬೇಡುತ್ತೆ. ಭಾವಗರ್ಭಿತ ಇಂಗಿತದಿಂದ ಅವಳ ನೆಟ್ಟ ಕಣ್ಣಲ್ಲಿ ನೋಡಿದನು." (ತಾರಾಭಟ್.ಕೆ. ೧೯೯೪; ೪)

ಸುಚಿತ್ರ ಆಕೆಯ ಗಂಡನ ಕುರಿತು ಯೋಚಿಸುವ ಹೆಣ್ಣಾಗಿ ತೋರುವುದಿಲ್ಲ. ಮಿದುಳಿಗೆ ಹೆಚ್ಚು ಶ್ರಮ ಕೊಡದ ಅವರ ಜೀವನ ಒಂದರ್ಥದಲ್ಲಿ ಸಾಮಾಜಿಕ ಹಂಗಿಗೆ ಒಳಪಟ್ಟಿರುವಂಥದ್ದು. ನೈಜವಾದ ದಾಂಪತ್ಯ ತನ್ನ ಪರಿಧಿಯನ್ನು ಕಳೆದುಕೊಂಡು ಆಕಾರ ರಹಿತಗೊಳ್ಳುವುದು ಇಂತಹ ಸಂದರ್ಭಗಳಲ್ಲಿಯೇ ಆಗಿರುತ್ತದೆ. ಇಲ್ಲಿ ಸ್ತ್ರೀಯನ್ನು ಯಾವ ಮೂಲದಿಂದಲಾದರೂ ತನ್ನ ಅಪೇಕ್ಷೆಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳುವ ಪುರುಷನ ಬದುಕಿನ ಎಲ್ಲೆಯೊಳಗೆ ಸ್ತ್ರೀಯೋರ್ವಳು ಸಾಧನವಾಗಿ ಮಾರ್ಪಡುವುದು ಅವಳ ಸೌಂದರ್ಯದ ಕಾರಣದಿಂದಲೇ ಆಗಿವೆ. ಸ್ತ್ರೀಯ ಸೌಂದರ್ಯ ಪುರುಷನ ಲೈಂಗಿಕ ದೌರ್ಬಲ್ಯಕ್ಕೆ ಕಾರಣವಾಗಿ

ಪರಿಗಣಿತವಾದಾಗ ಅನಿವಾರ್ಯವಾಗಿ ಹೆಂಡತಿಯಾದವಳು ಇದನ್ನು ಸಹಿಸುವುದು ಜೀವನದ ಭದ್ರತೆ ಮತ್ತು ಬದುಕಿನ ಸೌಕರ್ಯಗಳ ಆಮಿಷಗಳಿಗೆ ಒಳಗಾಗಿಯೇ ಆಗಿದೆ. ಇಂತಹ ಆಧುನಿಕ ಸಮಾಜದ ಸ್ತ್ರೀಯರ ಸ್ಥಿತಿಯನ್ನು ಅವ್ಯಕ್ತ ಕೃತಿಯ ಒಡಲು ತೆರೆದಿಡುತ್ತದೆ.

ಶ್ರೀನಿವಾಸ್ ರಾವ್‌ಗೆ ಪತ್ನಿಯಾಗಿರುವ ಸುಚಿತ್ರ ವಿವಾಹಕ್ಕೆ ಪೂರ್ವದಲ್ಲಿ ಜಾಹೀರಾತು ಕಂಪೆನಿಗೆ ಮಾಡಲ್ಲಾಗಿ ಕೆಲಸ ಮಾಡಿಕೊಂಡಿದ್ದವಳು. ಕ್ಲಬ್, ಪಾರ್ಟಿ, ಡಿನ್ನರ್, ಡ್ಯಾನ್ಸ್‌ಗಳಲ್ಲಿ ಪರಿಣಿತಳಾಗಿದ್ದವಳು. ರಾವ್ ಅವಳನ್ನು ಪತ್ನಿಯಾಗಿ ವಿವಾಹ ಮಾಡಿಕೊಂಡದ್ದೇ ಆತನ ಅಧಿಕಾರದಲ್ಲಿ ಪತ್ನಿಯ ಸೌಂದರ್ಯದ ವರ್ಚಸ್ಸು ಸಹಾಯಕ್ಕೆ ಬರುತ್ತದೆ ಎನ್ನುವ ಸ್ಪಷ್ಟ ಉದ್ದೇಶವಿರುವುದರಿಂದ. ಸುಚಿತ್ರಾಳ ಸ್ವಭಾವ ಹವ್ಯಾಸಗಳು ಅವನಿಗೆ ಪೂರಕವಾಗಿರುವುದರಿಂದ ದಾಂಪತ್ಯದಲ್ಲಿ ವಿಶೇಷ ಘರ್ಷಣೆಗಳಿಗೆ ಅವಕಾಶವಿರುವುದಿಲ್ಲ. ಏನನ್ನೂ ಆಳವಾಗಿ ಗಂಭೀರವಾಗಿ ತೆಗೆದುಕೊಳ್ಳದೇ ಇರುವುದರಿಂದ ಅವರ ದಾಂಪತ್ಯ ಜೀವನದಲ್ಲಿ ಯಾವುದೇ ವೈರುಧ್ಯಗಳು ಏರ್ಪಡುವ ಸೂಚನೆಗಳು ಕೂಡ ಕನಿಷ್ಠ ಪಕ್ಷ ವ್ಯಕ್ತವಾಗುವುದಿಲ್ಲ. ವೈವಾಹಿಕ ಸಂಬಂಧಗಳು ಯಾಂತ್ರಿಕವಾಗಿ ಲಾಭ ನಷ್ಟದ ಬಂಡವಾಳಗಳಾಗಿ ಪ್ರಕಟಗೊಂಡಾಗ ದೇಹವೆಂಬುದು ಕೂಡ ವಿನಿಮಯದ ಸರಕಾಗಿ ಬಿಡುತ್ತದೆ. 'ಬೆನ್ಸನ್ ಪಬ್ಲಿಸಿಟಿ ಕಂಪೆನಿ'ಯೊಳಗಿನ ವ್ಯಕ್ತಿವ್ಯಕ್ತಿಗಳ ನಡುವಣ ಸಂಬಂಧಗಳು ಪರಸ್ಪರ ಜಾಹೀರಾತಿನ ವ್ಯಾಪಾರಿ ಕಲ್ಪನೆಯೊಳಗೆ ಬೆಸೆದುಕೊಳ್ಳುವುದರಿಂದ ವ್ಯಕ್ತಿ ಸಂಬಂಧಗಳಲ್ಲಿ ವಿಶೇಷವಾದ ಮೌಲ್ಯಗಳನ್ನು ನಿರೀಕ್ಷಿಸುವುದು ಸಾಧ್ಯವಾಗುವುದಿಲ್ಲ. ಲಾಭದ ನಿರೀಕ್ಷೆಯನ್ನು ಮಾತ್ರ ಮೌಲ್ಯವೆಂದು ಭಾವಿಸುವ ಜಾಹೀರಾತಿನ ಕ್ಷೇತ್ರದಲ್ಲಿ ವಿಚಾರ ಮಾಡುವುದು, ಸಮಸ್ಯೆಗೆ ಸಿಕ್ಕಿ ಬೀಳುವುದು ಈ ಯಾವುದೂ ಇಲ್ಲದೆ, ಯಾವುದೂ ತಟ್ಟದಂತೆ ಬದುಕಬೇಕೆಂದು ನಿರೀಕ್ಷಿಸುವ ಮಂದಿ ಇರುತ್ತಾರೆ. ರಾವ್ ಮತ್ತು ಸುಚಿತ್ರಾ ರಾವ್ ಇವರ ದಾಂಪತ್ಯವು ಆ ಕ್ಷೇತ್ರದೊಳಗೆ ಅಸಹಜವಾಗಿ ಕಾಣಿಸಿಕೊಳ್ಳುವುದಿಲ್ಲ. ಪಾಶ್ಚಾತ್ಯ ಸಂಸ್ಕೃತಿಯಲ್ಲಿದ್ದ 'ಮೆಟೀರಿಯಲಿಸಂ' ಅನ್ನು ಗಾಢವಾಗಿ ಅನುಸರಿಸಿದ ಪರಿಣಾಮವಾಗಿ ಭಾರತೀಯ 'ದಾಂಪತ್ಯ ಸಂಹಿತೆ' ಅದರೊಳಗೆ ಅರ್ಥಕಳೆದುಕೊಂಡು ಬಿಡುವುದು ಸಹಜ ಪ್ರಕ್ರಿಯೆ ಎಂಬಂತೆ ಪಠ್ಯವು ನಿರೂಪಿಸುತ್ತವೆ. ಮೆಟೀರಿಯಲಿಸಂ ಸಂಸ್ಕೃತಿಯೊಳಗೆ ಸೆಕ್ಸ್ ಮತ್ತು ಹಣದ ವ್ಯಾಮೋಹವಿಲ್ಲದ ವ್ಯಕ್ತಿಗಳು ವಿಚಿತ್ರ ಪ್ರಾಣಿಗಳಂತೆ ಪರಿಗಣನೆಗೆ ಒಳಪಡುತ್ತಾರೆ ಎನ್ನುವುದನ್ನು ಕೃತಿ ಶಕ್ತವಾಗಿ ವಿವರಿಸುತ್ತದೆ.

ಬೆನ್ಸನ್ ಪಬ್ಲಿಸಿಟಿ ಕಂಪೆನಿಯಲ್ಲಿರುವ ಭೂಷಣ ಮೆಟಿರಿಯಲ್ ಸಂಸ್ಕೃತಿಯೊಳಗೆ ಭದ್ರವಾಗಿ ಸ್ಥಾಪಿತಗೊಂಡ ವ್ಯಕ್ತಿ. ಆತನ ದಾಂಪತ್ಯ ಬದುಕನ್ನು ಆತ ರೂಪಿಸಿಕೊಂಡಿರುವ ಬಗೆಯೂ ಕೂಡ ಇದೇ ತೆರನದ್ದಾಗಿದೆ. ಯಾವುದೋ ಗ್ರಾಮದಿಂದ ಕೆಲಸ ಹುಡುಕುತ್ತಾ ಬಂದ ಭೂಷಣನು ಮೊದಲು ಹೊಟೇಲೊಂದರಲ್ಲಿ ಮಾಣಿಯಾಗಿ ಸೇರಿ ನಂತರ ಹುಡುಗಿಯರನ್ನು ಹೊಟೇಲ್ ಅತಿಥಿಗಳಿಗೆ ಸರಬರಾಜು ಮಾಡುತ್ತಾ, ಹಣ ಮಾಡುತ್ತಾ ಮಹಡಿ ಮನೆ ಕಟ್ಟಿಕೊಂಡಿರುವ ವ್ಯಕ್ತಿ. ಅಂತಹ ಹುಡುಗಿಯೊಬ್ಬಳನ್ನು ತಾನೇ ಮದುವೆ ಮಾಡಿಕೊಂಡಿದ್ದ ಈತ, ಸ್ವಲ್ಪ ಪ್ರತಿಷ್ಠಿತ ಪುರುಷರನ್ನು ಪುಸಲಾಯಿಸಿ ಹೆಂಡತಿಯೊಡನೆ ಸಂಬಂಧ ಕುದುರಿಸುತ್ತಿದ್ದ. ಇವನ ಹೆಂಡತಿ ಬಹಳ ಚೆಲುವೆಯಾಗಿರುವುದರಿಂದ ಹೆಂಡತಿ ಮೂಲಕ ಬರುವ ಆದಾಯ ಹೆಚ್ಚು ಮುಖ್ಯವೇ ವಿನಃ ಬದುಕಿನ ಗುರಿಯೇನು ಗಮ್ಯವೇನು ಎಂಬುದು ಈತನಿಗೆ ಮುಖ್ಯವಾಗಿರುವುದಿಲ್ಲ. ಇದರಿಂದ ಯಾವುದು ಸಮಾಜದ ದೃಷ್ಟಿಯಲ್ಲಿ ಹೇಯವೋ, ಅದರ ಬಗ್ಗೆ ಭೂಷಣನಿಗೆ ಹೆಮ್ಮೆಯಿಂದ ಹೇಳಿಕೊಳ್ಳುವುದು ಸಾಧ್ಯವಾಗುತ್ತದೆ. ಇದೇ ಆಯಾಮದಿಂದಾಗಿ 'ಕೊಳ್ಳುಬಾಕ' ಸಂಸ್ಕೃತಿಯೊಳಗೆ 'ಹೆಣ್ಣಿನ

ಸ್ವಾತಂತ್ರ್ಯ'ವೆಂಬುದು ಸ್ತ್ರೀಯನ್ನು ಪುರುಷರಿಗೆ ಬೇಕಾದಂತೆ ಬಳಸಲು ಪಿತೃಸತ್ತೆ ಉಪಯೋಗಿಸುವ ಭಾಷೆ ಎಂದೆನಿಸಿಕೊಳ್ಳುತ್ತದೆ. ಇಲ್ಲಿ ಪುರುಷರ ವ್ಯವಹಾರ ಜಗತ್ತು ಅವರ ಆಗತ್ಯಗಳಿಗೆ ತಕ್ಕಂತೆ ಸ್ತ್ರೀಯರನ್ನು ತಿದ್ದುತ್ತಿವೆ ಎಂದಷ್ಟೇ ಅರ್ಥ. ಇದನ್ನು ಪಥ್ಯದೊಳಗೆ ಅದಿತಿಯ ಅಭಿಪ್ರಾಯಗಳಲ್ಲಿ ಗುರುತಿಸಬಹುದು;

> "Man feels that his ego is threatened if woman continue to be involved in fighting this." (ತಾರಾಭಟ್ ಕೆ. :೧೯೯೪ ;೩೨.)

ಸೌಂದರ್ಯದ ನೆಲೆಯಲ್ಲಿ ಸ್ತ್ರೀಯ ದೇಹವನ್ನು ಬಳಸಿಕೊಳ್ಳುವುದು ಮಹಿಳೆಯ ಅರಿವಿನ ವಿಕಾಸದ ಬೇರೆ ಮಾರ್ಗಗಳನ್ನು ಮುಚ್ಚಿ ಬಿಡುವ ಪುರುಷರ ಚಾತುರ್ಯವಾಗಿದೆ.

ದಾಂಪತ್ಯದ ಸೋಗಿನ ವರ್ತುಲಗಳನ್ನು ಮೀರಿ ಸಮಾಜದ ಸ್ಥಾಪಿತ ಮೌಲ್ಯಗಳೊಂದಿಗೆ ಮುಖಾಮುಖಿಯಾಗಿ, ಸಂಘರ್ಷಕ್ಕೆ ಗುರಿಯಾಗುವ ಮಾದರಿ ಎಂದರೆ, ಪಥ್ಯದಲ್ಲಿ ಬರುವ ಅದಿತಿಯ ವೈವಾಹಿಕ ಮಾದರಿ. 'ಮದುವೆ' ಎನ್ನುವ ಕನಸು ಅನುಭವದ ರೂಪ ತಳೆಯುವಾಗ ಜಗತ್ತನ್ನೇ ಜಯಿಸುತ್ತೇನೆ ಎನ್ನುವ ಆತ್ಮವಿಶ್ವಾಸ ಹೊಂದಿದ್ದ ಅದಿತಿಯು ವಾಸ್ತವ ಬದುಕಿನಲ್ಲಿ ಜಯದೇವನೊಂದಿಗಿನ ದಾಂಪತ್ಯದಲ್ಲಿ ನಿರಾಶೆಹೊಂದುತ್ತಾಳೆ. ಜಯದೇವನೊಡನೆ ಸಂಸಾರವು ಬದುಕಿನ ಸಂಘರ್ಷದ ವಿವಿಧ ಪದರುಗಳನ್ನು ಬಿಚ್ಚಿ ಅವಳ ಮುಂದೆ ಹರಡಿ ತೋರಿಸುವುದೇ ಅವಳ ನಿರಾಶೆಗೆ ಕಾರಣವಾಗುತ್ತದೆ. ಅತ್ಯಾಧುನಿಕವೆನಿಸುವ ಬಂಗಲೆಯಿಂದ ಒಂದೇ ರೂಮಿನಲ್ಲಿ ಸಂಸಾರ ಹೂಡಬೇಕಾದ ಪರಿಸ್ಥಿತಿ ಅದಿತಿಯ ಎಲ್ಲಾ ಆಸಕ್ತಿಗಳನ್ನು ಕುಂಠಿತಗೊಳಿಸುತ್ತವೆ. ಮಾತ್ರವಲ್ಲ ಅವುಗಳಿಗೆ ಎಡೆಯಿಲ್ಲದಂತೆ ಮಾಡುತ್ತವೆ. ಸ್ವಲ್ಪ ದೊಡ್ಡ ಮನೆಯನ್ನು ಮಾಡುವ ಅಪೇಕ್ಷೆಯನ್ನು ಜಯದೇವನೊಡನೆ ವ್ಯಕ್ತಪಡಿಸಿದಾಗ ಆತನಿಂದ ಸಿಗುವ ಉತ್ತರ ಅವಳನ್ನು ಧೃತಿಗೆಡಿಸುತ್ತದೆ.

> "ತಂದೆಯ ಮನೆಯಿಂದ ಸಂಬಂಧ ಇಲ್ಲದವಳಂತೆ ಓಡಿ ಬಂದೆಯಲ್ಲ. ಇಲ್ಲದಿದ್ದರೆ ವರದಕ್ಷಿಣೆಯಾದರೂ ಸಿಗುತ್ತಿತ್ತು. ಇಲ್ಲವೇ ಅವರೇ ಬೇರೊಂದು ಮನೆಕೊಂಡು ಕೊಡುತ್ತಿದ್ದರು. ನಿನಗೆ ಸರಿಯಾಗಿ ಅಡಿಗೆ ಮಾಡಲೂ ಬರುವುದಿಲ್ಲ. ಅಡಿಗೆ ಮಾಡಲು ಬಾರದವಳೊಡನೆ ಬೇರೆ ಇದ್ದು ನಾನೇನು ಸುಖ ಪಟ್ಟೇನು ?" (೧೯೯೪; ೮೦)

ಜಯದೇವ ನಿರೀಕ್ಷಿಸುವುದು 'ಭಾರತೀಯ ಗೃಹಣಿ'ಯನ್ನು ಎನ್ನುವ ಅಂಶವು ಪಥ್ಯದೊಳಗೆ ಆತನ ಮಾತುಗಳಿಂದ ಸ್ಪಷ್ಟವಾಗುತ್ತದೆ. ಅದಿತಿಗೆ ಹಾಗೆ ಇರುವುದು ಸಾಧ್ಯವಾಗದಾಗ ಆತ ಅದನ್ನು ಆಕ್ಷೇಪಣೀಯವೆಂಬಂತೆ ಅವಳ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳದೇ ನೇರವಾಗಿ ಆರೋಪಿಸುತ್ತಾನೆ. ಇಲ್ಲಿಯೇ ಅವನ ವ್ಯಕ್ತಿತ್ವಕ್ಕೆ ಬೇರೆ ಮುಖವಿದೆ ಎಂದು ಅವಳಿಗೆ ಅರಿವಿಗೆ ಬರುತ್ತದೆ. ಪುರುಷ ಪ್ರೇಮಿಸುವ ಸಂದರ್ಭದಲ್ಲಿ ಪ್ರಕಟಗೊಳ್ಳುವುದಕ್ಕಿಂತ ದಾಂಪತ್ಯದಲ್ಲಿ ಮುಖವಾಡಗಳನ್ನು ಕಳಚಿಕೊಂಡು ಕಾಣಿಸಿಕೊಳ್ಳುವ ರೀತಿಗಳಲ್ಲಿ ಆತನ ವ್ಯಕ್ತಿತ್ವ ಹೆಚ್ಚು 'ಅಹಂ' (ego) ನಿಂದ ಕೂಡಿರುತ್ತದೆ. ದಾಂಪತ್ಯದಲ್ಲಿ ಪರಸ್ಪರರು ಅಪರಿಚಿತರೆನಿಸಿಕೊಳ್ಳುವುದು ಇಂತಹ ಸಂದರ್ಭಗಳಲ್ಲೇ ಆಗಿರುತ್ತದೆ. ಪಥ್ಯದೊಳಗೆ ಅಭಿವ್ಯಕ್ತಿಗೊಂಡ ವಿವರದ ನೆಲೆಯಲ್ಲಿ ಹೇಳುವುದಾದರೆ ಜಯದೇವನು - ಅದಿತಿಯ ಜೊತೆಗಿನ ಸಂಬಂಧದಲ್ಲಿ ಕೊಪ್ಲರನ 'ಸಂದರ್ಭಕ್ಕೆ ತಕ್ಕಂತೆ ಅಳವಡಿಸುವ ಸೂತ್ರ' (Modular Princepal)ವನ್ನು ದಾಂಪತ್ಯದ ಸಂಬಂಧಗಳಿಗೂ ಅನ್ವಯಿಸಿದ್ದ

ಎಂಬುದು ವ್ಯಕ್ತವಾಗುತ್ತದೆ. ಇದರಿಂದ ಅವರ ವೈವಾಹಿಕ ಸಂಬಂಧದಲ್ಲಿ ಜಯದೇವನ ಧೋರಣೆ ಕೊಪ್ಲರ್ ಗುರುತಿಸುವ ರೀತಿಯದ್ದಾಗಿದೆ. ಕೊಪ್ಲರ್ ಹೇಳುವಂತೆ :

"ಕೆಲವರು ಮನುಷ್ಯ ಸಂಬಂಧವನ್ನು ಹೆಚ್ಚು ತೀವ್ರಗತಿಯಲ್ಲಿ ಕುದುರಿಸಲು ಸಮರ್ಥರಾಗಿ ಅಷ್ಟೇ ಸಮರ್ಥವಾಗಿ ಕಿತ್ತೆಸೆಯುವುದರಲ್ಲೂ ಜಾಣರು. ಇಂದು ಪ್ರಪಂಚ ಒಂದು ಕೊಳ್ಳು - ಉಪಯೋಗಿಸು- ಎಸೆದುಬಿಡು ಸಮಾಜದತ್ತ ಹೆಜ್ಜೆ ಹಾಕುತ್ತಿದೆ ಮತ್ತು ಮದುವೆಯೂ ತಾತ್ಕಾಲಿಕ ಸಂಬಂಧ ಎಂಬ ಹೊಸ ಮೌಲ್ಯದತ್ತ ನಾವು ಸಾಗುತ್ತಿದ್ದೇವೆ.

ಜಯದೇವ ಕೂಡ ವ್ಯಕ್ತಿ ಸಂಬಂಧವನ್ನು ಹೆಚ್ಚು ತೀವ್ರಗತಿಯಲ್ಲಿ ಕುದುರಿಸಲು ಸಮರ್ಥವಾಗಿ ಅಷ್ಟೇ ತೀವ್ರಗತಿಯಲ್ಲಿ ಕಿತ್ತೆಸೆಯಲೂ ಸಮರ್ಥನಾಗಿರುತ್ತಾನೆ. ಅಮೇರಿಕಾದಲ್ಲಿ ಹೆಚ್ಚು ಸಾಧ್ಯತೆ ಆತನಿಗಿದೆ ಎಂದೆಲ್ಲಾ ಅದಿತಿಯನ್ನು ಒಪ್ಪಿಸಿ ಅವಳ ಚಿನ್ನ ಮಾರಾಟ ಮಾಡಿ ಅಮೇರಿಕಾಕ್ಕೆ ಹೋಗುತ್ತಾನೆ. ಮತ್ತು ಹೋದ ಎರಡು ತಿಂಗಳಲ್ಲೇ ಅದಿತಿಗೆ ನಾನು ಮದುವೆಯ ಸುಳಿಯಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ. ನನ್ನನ್ನು ಕ್ಷಮಿಸಿ ನೀನು ಬೇರೆ ಮದುವೆಯಾಗು."(ತಾರಾಭಟ್. ಕೆ. : ೧೯೯೪; ೪೧)

ಎಂದು ಕಾಗದ ಬರೆದು ಅವಳೊಂದಿಗಿನ ಆತನ ಸಂಬಂಧವನ್ನು ಮುಕ್ತಾಯಗೊಳಿಸುತ್ತಾನೆ. ಪತ್ರದ ಒಳಗೆ ಅದಿತಿ ಮತ್ತು ಜಯದೇವನ ಸಂಬಂಧದಲ್ಲಿ 'ಪ್ರೇಮ' ಮತ್ತು 'ವಿವಾಹ' ಈ ಎರಡರಲ್ಲಿ ಯಾವುದರ 'ವಿಫಲತೆ' ಯಾವುದನ್ನು ನಿಶ್ಚಯಿಸಿತು ಎನ್ನುವ ದ್ವಂದ್ವತೆ ಸೃಷ್ಟಿಯಾಗುತ್ತದೆ. ಇದರಲ್ಲಿ ಜಯದೇವನ ಸಂದರ್ಭ ಅರಿವಿಗೆ ಬರುವುದಿಲ್ಲ. ಆದರೆ, ಅದಿತಿಯ ಪರಿಸ್ಥಿತಿಯಲ್ಲಿ ಇದು ಅವಳ 'ಆತ್ಮವಿಶ್ವಾಸ'ಕ್ಕೆ ಭಾರೀ ಹೊಡೆತದ ಪರಿಣಾಮಗಳನ್ನು ಉಂಟು ಮಾಡುತ್ತದೆ. ಅವಳ ಸಂದರ್ಭದಲ್ಲಿ ಎಲ್ಲ ಸಂಬಂಧದಂತೆ ಮದುವೆಯೂ ತಾತ್ಕಾಲಿಕ ಸಂಬಂಧವಾಗುವುದನ್ನು ಸಮಾಜ ಸಹಿಸುವುದಿಲ್ಲ.

"ಅವಳಿಗೆ ಗಂಡ ಬಿಟ್ಟಿದ್ದಾನಂತೆ ಪಾ...ಪ!'

'ನೀನೊಬ್ಬ ಹುಚ್ಚಿಕಣೆ; ಇವಳೇ ಅವನನ್ನು ಇಲ್ಲಿಂದ ಓಡಿಸಿದ್ದಾಳೆ. ಈಗ ಹೊಸದಾಗಿ ಹುಟ್ಟಿಕೊಂಡಿವೆಯಲ್ಲ; ಮಹಿಳಾ ಚಳುವಳಿಗಳು. ಇವರೆಲ್ಲಾ ಮಾಡುವುದೇ ಇಂಥಹ ಕೆಲಸವನ್ನು ಗಂಡನ ಜತೆ ಇರುವುದು ಇವರ ಫ್ಯಾಶನ್ನಿಗೆ ಸರಿಹೊಂದುವಂತಹದಲ್ಲ. ಇವರೆಲ್ಲಾ ಫೆಮಿನಿಸ್ಟ್ ಲಿಬ್‌ನವರು." (ತಾರಾಭಟ್.ಕೆ. ೧೯೯೪. ೮೯)

ದಾಂಪತ್ಯ ಸಂಬಂಧವನ್ನು ಮುರಿಯುವುದಕ್ಕೇ ಗಂಡೇ ಸಂಪೂರ್ಣ ಕಾರಣಕರ್ತನಾದರೂ ಸಮಾಜ ಇದನ್ನು ಹೆಣ್ಣಿಗೇ ಆರೋಪಿಸುತ್ತದೆ. ಅಲ್ಲದೆ ಅಕಾರಣವಾಗಿ ಹೆಣ್ತನವನ್ನೇ ಶಿಕ್ಷಿಸುತ್ತದೆ. ಸ್ತ್ರೀಯರನ್ನು ಸಂಪೂರ್ಣ ಹತೋಟಿಯಲ್ಲಿಡುವುದಕ್ಕಾಗಿಯೇ 'ಗಂಡ ಬಿಟ್ಟವಳೆಂದು' ಗುರುತಿಸುವ ನಡೆಸಿಕೊಳ್ಳುವ ವ್ಯವಸ್ಥೆ ಇರಬಹುದೇ ಎಂಬ ಸಂಶಯ ಮೂಡುತ್ತದೆ. ದಾಂಪತ್ಯ ಒಂದನ್ನು ಸಮಾಜ ಸ್ವೀಕರಿಸುವ, ಮಾನ್ಯಮಾಡುವ ರೀತಿಯಲ್ಲೇ ಅದು ಪುರುಷಸತ್ತೆಯನ್ನು ಪೋಷಿಸುವಂಥದಾಗಿರುತ್ತದೆ.

'ಬೆನ್ಸನ್ ಪಬ್ಲಿಸಿಟಿ ಕಂಪೆನಿ'ಯ ಸೀನಿಯರ್ ಎಕ್ಸಿಕ್ಯೂಟಿವ್ ರಾವ್‌ನ ಸೆಕ್ರೆಟರಿ ಮಿಸೆಸ್ ರಾಜೀವಿಯ ಪೊಳ್ಳು ದಾಂಪತ್ಯದ ವಿವರಣೆಗಳು ದಾಂಪತ್ಯವನ್ನು ಸಮಾಜ ಸಿನಿಕ ರೀತಿಯಲ್ಲಿ

ಸ್ವೀಕರಿಸುವ ಬಗೆಯದ್ದಾಗಿದೆ. ಮಿಸೆಸ್ ರಾಜೀವಿ ಪ್ರತೀ ಮಾತಿಗೆ 'ನನ್ನ ಯಜಮಾನ'ರು ಎಂದೇ ದಿನಚರಿ ಶುರು ಮಾಡುವ ಗೃಹಿಣಿಯಾಗಿರುತ್ತಾಳೆ.

> "ನನ್ನ ಯಜಮಾನ್ರಿಗೆ ನನ್ನ ಸಂತೋಷಕ್ಕಿಂತ ಹೊರತಾದ ಬೇರೆ ಭಾವನೆಯೇ ಇಲ್ಲ ಕಣೆ. ಅಡಿಗೆಗೆ ಒಂದು ಹುಡುಗಿಯನ್ನು ಇಟ್ಟುಕೋ ಎಂದು ಅವರ ಒತ್ತಾಯ. ನಾನೇ ಯಾಕೆ ಸುಮ್ಮನೇ ಎಂದು ಇಟ್ಟುಕೊಂಡಿಲ್ಲ. ಅವರಿಗೆ ನಾನು ಯಾವ ಕೆಲಸ ಮಾಡಿದರೂ ದಣಿಯುತ್ತೇನೆ ಎಂದು ಹೆದರಿಕೆ. ಭಾನುವಾರ ಅಂದರೆ ಮನೆಯಲ್ಲಿ ಅಡಿಗೆ ಬಂದ್. ಹೋಟೇಲಿನಲ್ಲೇ ನಮ್ಮ ಊಟ." (ತಾರಾಭಟ್. ಕೆ. ೧೯೬೪; ೬೨)

ಎನ್ನುವ ವಿವರಗಳಲ್ಲಿ ದಾಂಪತ್ಯದ ಪೊಳ್ಳುವೈಭವೀಕರಣ ಕಾಣಿಸಿಕೊಳ್ಳುತ್ತದೆ.

ದಾಂಪತ್ಯದಲ್ಲಿ ಪ್ರೀತಿಯನ್ನು ಪರಿಭಾವಿಸುವುದು, ವ್ಯಾಖ್ಯಾನಿಸುವುದು ಆಯಾ ಸಮಾಜಕ್ಕೆ ಅನುಗುಣವಾಗಿಯೇ ಇರುತ್ತದೆ. ಆಧುನಿಕ ಸಮಾಜದ ಯಾಂತ್ರಿಕ ವ್ಯವಸ್ಥೆಯು ವ್ಯಕ್ತಿಗಳ ಸಂವೇದನೆಗಳಿಗೆ ಸಂಬಂಧಿಸಿದಂತೆ ಒಂದು ರೀತಿಯ ಅನಾಥ ವ್ಯವಸ್ಥೆಯೇ ಆಗಿರುವಂಥದ್ದು. ಈ ರೀತಿಯ ವ್ಯವಸ್ಥೆಯಲ್ಲಿ 'ದಾಂಪತ್ಯ ಪ್ರೇಮ'ವೆಂದರೆ, ಇಬ್ಬರು ವ್ಯಕ್ತಿಗಳು 'ಒಂದು ತಂಡ'ವಾಗಿ ಯಶಸ್ವಿಯಾಗಿ ಕೆಲಸ ಮಾಡುವುದೇ ಆಗುತ್ತದೆ. 'ಸುಖೀ ವೈವಾಹಿಕ ಬದುಕು' ಎಂದರೆ, ಚೆನ್ನಾಗಿ ಎಣ್ಣೆ ಹಾಕಿದ ಯಂತ್ರದಂತೆ, ಯಾವ ಘರ್ಷಣೆಯೂ ಇಲ್ಲದೆ ಜೀವನ ನಡೆಸುತ್ತಿರುವ ಗಂಡಹೆಂಡತಿಯರ ತಂಡವನ್ನೇ ದಾಂಪತ್ಯ ಜೀವನದ ಆದರ್ಶವೆಂದು ಭಾವಿಸಲಾಗುತ್ತದೆ. ಎರಿಕ್ ಫ್ರಾಂ ಆತನ 'ಆರ್ಟ್ ಆಫ್ ಲವಿಂಗ್'ನಲ್ಲಿ ಹೇಳುವಂತೆ :

> "ವೈವಾಹಿಕ ಸಮಸ್ಯೆಗಳಲ್ಲಿ ಮಾರ್ಗದರ್ಶನ ಮಾಡುವ ಮಹನೀಯರು ಹೇಳುವಂತೆ ಗಂಡನು ಹೆಂಡತಿಯನ್ನು 'ಅರ್ಥಮಾಡಿಕೊಳ್ಳಬೇಕು'. ಅವಳ ಕೆಲಸಗಳಲ್ಲಿ ಸಣ್ಣ ಪುಟ್ಟ ಸಹಾಯ ಮಾಡಬೇಕು. ಅವಳು ಧರಿಸುವ ಹೊಸ ಉಡುಪನ್ನೋ ಅಥವಾ ತಯಾರಿಸುವ ರುಚಿಕರವಾದ ತಿಂಡಿಯನ್ನೋ 'ಬಾಯಿತುಂಬ' ಹೊಗಳಬೇಕು. ಅದೇ ರೀತಿಯಲ್ಲಿ ಹೆಂಡತಿ ಕೂಡಾ. ಅವನು ದಣಿದು, ಗೊಣಗಾಡುತ್ತಾ ಮನೆಗೆ ಬಂದಾಗ ಅವನನ್ನು ಅರ್ಥಮಾಡಿಕೊಳ್ಳಬೇಕು. ತನ್ನ ಹಣಕಾಸಿನ ಸಮಸ್ಯೆಗಳನ್ನು ಕುರಿತು ಅವನು ಮಾತನಾಡಿದರೆ ಗಮನವಿಟ್ಟು ಆಲಿಸಬೇಕು. ಅವನು ತನ್ನ ಹುಟ್ಟಿದ ಹಬ್ಬವನ್ನು ಮರೆತುಬಿಟ್ಟರೆ ಕೋಪಮಾಡಿಕೊಳ್ಳುವ ಬದಲು ಅರ್ಥ ಮಾಡಿಕೊಳ್ಳಬೇಕು. ಒಟ್ಟಿನಲ್ಲಿ ಪ್ರಾಮಾಣಿಕವಾದ ಭಾವನೆಗಳನ್ನು ವ್ಯಕ್ತಪಡಿಸುವ ತಂಟೆಗೇ ಹೋಗದೆ, ಸೌಜನ್ಯಶೀಲ ವರ್ತನೆಯಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಾ ಬದುಕಿರಬೇಕು. ಈ ರೀತಿ ಬದುಕುವ ಗಂಡ ಹೆಂಡಿರಿಬ್ಬರೂ ಜೀವಮಾನ ಪರ್ಯಂತ ಪರಸ್ಪರ 'ಕೂಡಿ ಬಾಳುತ್ತಿರುವ' ಆಗಂತುಕರಾಗಿಯೇ ಉಳಿಯುತ್ತಾರೆ. ಅವರಿಬ್ಬರ ನಡುವೆ ಯಾವುದೇ ವಿಧವಾದ ಅರ್ಥಪೂರ್ಣ ಹೃದಯ ಸಂವಾದ ಏರ್ಪಡುವುದಿಲ್ಲ." (ನಾರಾಯಣ ಕೆ.ವಿ.ರಾಘವೇಂದ್ರ ರಾವ್ ಎಚ್. ಎಸ್. ಅನು: ೨೦೦೧: ೭೩)

ಹೀಗೆ ಆಧುನಿಕ ಸಮಾಜದ 'ದಾಂಪತ್ಯ ಸಂಹಿತೆ'ಯು ಪರಸ್ಪರ ಸಹಿಷ್ಣುತೆ, ತಂಡದ ಮನೋಭಾವ ಮುಂತಾದವು ಪ್ರೀತಿಯ ಲಕ್ಷಣಗಳೆಂದು ಪರಿಭಾವಿಸುತ್ತದೆ. ಇದು ಕಾದಂಬರಿಯೊಳಗೆ ವ್ಯಕ್ತಿಗಳು ಬದುಕುತ್ತಿರುವ

ಸಮಾಜದ ನಿರ್ದಿಷ್ಟ ರಚನೆಯಿಂದ ತೀರ್ಮಾನವಾಗುವ ಜೀವನ ವಿಧಾನವನ್ನು ಅನಾವರಣಗೊಳಿಸುವ ಸಂವಿಧಾನವಾಗಿ ಪ್ರಕಟವಾಗುತ್ತದೆ.

**ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಪ್ರಕಟಗೊಂಡಿರುವ ದಾಂಪತ್ಯದ ಸ್ವರೂಪ:**

೧) ತಾರಾಭಟ್ ಮತ್ತು ಸವಿತಾ ನಾಗಭೂಷಣ ಇಬ್ಬರು ಲೇಖಕಿಯರ ಕಾದಂಬರಿಗಳಲ್ಲಿ ವಿಭಿನ್ನ ನೆಲೆಗಳಲ್ಲಿ ಆಧುನಿಕ ಶ್ರೀಮಂತ ಮೇಲ್ ಮಧ್ಯಮವರ್ಗ, ಮಧ್ಯಮವರ್ಗಗಳ ದಾಂಪತ್ಯದ ಮಾದರಿಗಳನ್ನು ಶಕ್ತವಾಗಿ ಬಿಂಬಿಸುವ ಪ್ರಯತ್ನವಿದೆ.

೨) ಸ್ತ್ರೀಲೋಕದ ಹೆಚ್ಚಿನ ಪಾತ್ರಗಳು ಬದುಕಿನ ಪರಿಪೂರ್ಣತೆಯ ನೆಲೆಯಿಂದ ದಾಂಪತ್ಯವನ್ನು ಸವಾಲಾಗಿ ಪರಿಭಾವಿಸುತ್ತವೆ. ಇದರೊಳಗೆ ಸ್ತ್ರೀ- ಪುರುಷ ಇವರಿಬ್ಬರ ಅಭಿಲಾಷೆ, ಅಭಿರುಚಿ ಮನೋಧೋರಣೆಗಳು ವಿಭಿನ್ನ ಬಗೆಗಳಲ್ಲಿ ದಾಂಪತ್ಯದಲ್ಲಿ ಒತ್ತಡವನ್ನು ಸೃಷ್ಟಿಸುತ್ತದೆ.

೩)ಮೊದಲ ಕಟ್ಟಿನ ಪಠ್ಯದೊಳಗೆ ದಾಂಪತ್ಯದ ಅಂತರ್ಯದಲ್ಲಿ ಸ್ತ್ರೀಯರ ಶರಣಾಗತಿಯನ್ನು ಪುರುಷರ ರಾಜಕಾರಣದ ನೆಲೆಯಿಂದ ಅನಾವರಣಕ್ಕೆ ಒಳಪಡುತ್ತದೆ.

೪) ಪೂರ್ವದ ದಾಂಪತ್ಯ ನಿರ್ವಚನಗಳು ಪರಸ್ಪರ ಹೊಂದಿಬಾಳುವ ಜೀವನ ಕ್ರಮವನ್ನು ಆದರ್ಶವೆಂದು ಪರಿಭಾವಿಸಿದರೆ ಸ್ತ್ರೀಲೋಕ ಮತ್ತು ಅವ್ಯಕ್ತ ಪಠ್ಯಗಳಲ್ಲಿ ದಾಂಪತ್ಯದಲ್ಲಿನ ಸಂಘರ್ಷವನ್ನು ವಿವಿಧ ಆಯಾಮಗಳಿಂದ ಸಂರಚಿಸುವ ಪ್ರಯತ್ನ ವ್ಯಕ್ತವಾಗುತ್ತದೆ.

೫) ದಾಂಪತ್ಯವನ್ನು ಅದರ ಎಲ್ಲಾ ಮಗ್ಗುಲುಗಳಿಂದ ನೋಡುವ ಪ್ರಯತ್ನವು ಅನನ್ಯ ಸಾಂಸ್ಕೃತಿಕ ನೆಲೆಯ ಮೊದಲ ಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಿಗೊಂಡಿವೆ.

### ೫.೨.೩ ಮೊದಲ ಕಟ್ಟಿನ ಕಾದಂಬರಿಗಳು : ಕುಟುಂಬದ ಸ್ವರೂಪ.

**ಸವಿತಾ ನಾಗಭೂಷಣ ಅವರ ಕಾದಂಬರಿಯಲ್ಲಿನ ಕೌಟುಂಬಿಕ ಸ್ವರೂಪ :**

**ಸ್ತ್ರೀ ಲೋಕ**ದೊಳಗೆ ಎಲ್ಲ ಕುಟುಂಬಗಳ ಸ್ವರೂಪ ವಿನ್ಯಾಸಗಳು ಸ್ತ್ರೀಯರ ನೆಲೆಯಿಂದ ಅಭಿವ್ಯಕ್ತಗೊಳ್ಳುತ್ತವೆ. ಸ್ತ್ರೀಲೋಕವು ಕುಟುಂಬದ ತಳಹದಿಯಿಂದ ಆಧುನಿಕ ಸಮಾಜವು ಎದುರಿಸುವ ದ್ವಂದ್ವ ವೈರುಧ್ಯಗಳನ್ನು ಬಯಲುಗೊಳಿಸುವ ಪ್ರಯತ್ನವನ್ನು ನಡೆಸುತ್ತದೆ. ಪಠ್ಯದೊಳಗೆ ಆಧುನಿಕ ಸರಳಕುಟುಂಬದ ಆವರಣ ಅಲ್ಲದೆ ಅಂಥ ಕುಟುಂಬವು ಹಿರಿಯರ ಜವಾಬ್ದಾರಿಯನ್ನು ಎದುರಿಸುವಲ್ಲಿ ಸೋಲುವ ಬಗೆಗಳನ್ನು ನಿರೂಪಿಸುವ ನೆಲೆ ಮುಖ್ಯವಾಗುತ್ತದೆ. ಪಠ್ಯದೊಳಗೆ ಗಂಡ- ಹೆಂಡತಿ ಇಬ್ಬರೂ ದುಡಿಯುವ ಪ್ರಜ್ಞಾ, ವಿಜಯ, ಕಮಲ, ಪ್ರತಿಮಾ, ಸಂಗೀತ ಇವರೆಲ್ಲರದು ಆಧುನಿಕ ಕುಟುಂಬ. ಇದರಲ್ಲಿ ಸಂಗೀತಳು ಮಾತ್ರ ಉದ್ಯೋಗದ ನಿಮಿತ್ತ ತನ್ನ ಕುಟುಂಬದಿಂದ ಬೇರೆ ಇರುವವಳು. ಅಲ್ಲದೆ, ಅವಳದು ಕೂಡುಕುಟುಂಬ. ಆಧುನಿಕ ಸಮಾಜದ ಒಳಗಿನ ಸರಳ ಮತ್ತು ಕೂಡುಕುಟುಂಬಗಳ ಸಮಸ್ಯೆ, ಸಂಸಾರದ ಆರ್ಥಿಕತೆಯನ್ನು ನಿಭಾಯಿಸುವಲ್ಲಿ ಸ್ತ್ರೀಯರದ್ದು ಗಣನೀಯ ಜವಾಬ್ದಾರಿಯಾಗಿ ಪರಿಣಮಿಸುವ ಸೂಕ್ಷ್ಮಗಳು ಇಲ್ಲಿ ವ್ಯಕ್ತವಾಗುತ್ತದೆ. ಆಧುನಿಕ ಕುಟುಂಬಗಳಲ್ಲಿ ಉದ್ಯೋಗ ಮತ್ತು ಇತರ ಕಾರಣಗಳಿಂದ ದಂಪತಿಗಳು ವಿಭಿನ್ನ ಪ್ರದೇಶಗಳಲ್ಲಿ ನೆಲೆನಿಲ್ಲುವ ಸಮಸ್ಯೆಯು ಪಠ್ಯದೊಳಗೆ ಗಂಭೀರವಾಗಿ ಚರ್ಚೆಗೆ ಒಳಗಾಗಿದೆ. ಕುಟುಂಬದೊಳಗೆ

ಗಂಡ- ಹೆಂಡತಿ ಬೇರೆ ಬೇರೆ ಕಡೆ ಇರುವುದು ಗಂಭೀರ ಸಮಸ್ಯೆ. ಇದನ್ನು ಸಂಗೀತ ಅವಳ ಅನುಭವ ಹೇಳಿಕೊಳ್ಳುವ ನೆಲೆಯಲ್ಲಿ ಅದರ ತೀವ್ರತೆಯು ಅರಿವಿಗೆ ಬರುತ್ತದೆ.

"ಸಂಗೀತಾ: ಇಲ್ಲ ಸುಮಾ, ನಮ್ಮನೆಯವರು ಪ್ರೈವೇಟಿನಲ್ಲಿ ಇರೋದು. ಯಾವಾಗ ಬೇಕಾದ್ರೂ ತೆಗೆದುಹಾಕಬಹುದು. ಈಗ ಬಿಟ್ಟೆ ಅಂದ್ರೆ... ಕೆಲಸ ಮತ್ತೆ ಸಿಗೋದು ಕನಸೇ ಸರಿ. ಎಲ್ಲರಿಗೂ ಸಿಗುತ್ತೆ. ನನಗೆ ಮಾತ್ರ ಕಷ್ಟ ಆಗಿದೆ. ಈ ಟ್ರಾನ್ಸ್‌ಫರ್‌ದು ನಾನು ಮದುವೆಯಾದ ನೋಡು ಕೂಡಲೇ ಟ್ರಾನ್ಸ್‌ಫರ್ ಬ್ಯಾನ್ ಬಂತು. ನನ್ನ ಗ್ರಹಚಾರ ಸರೀ ಇಲ್ಲ ಅಷ್ಟೇ. ನನ್ನ ಗಂಡನಿಗೆ 'ನೋಡಿ... ನಿಮ್ದು ಪ್ರೈವೇಟ್ ಕೆಲಸ. ಅಕಸ್ಮಾತ್ ಅದು ಹೋದ್ರೆ. ನಾನೂ ಕೆಲಸ ಬಿಟ್ರೆತೊಂದರೆ ಅಲ್ಲವಾ? ಹೇಗಿದ್ರೂ ಎರಡು ವರುಷ ತಡೆದಿದ್ದೀರಿ.... ಇನ್ನೊಂದು ಆರು ತಿಂಗಳು. ಅಷ್ಟರೊಳಗೆ ಟ್ರಾನ್ಸ್‌ಫರ್ ಮಾಡಿಸಿಕೋತೀನಿ' ಅಂತ ಹೇಳಿದ್ರೆ.... ಆಯ್ತು ಅಂತ ಒಪ್ಕೊತಾರೆ. ಆಮೇಲೆ ನಮ್ಮತ್ತೆ, ಮತ್ತೆ ನನ್ನ ನಾದಿನಿ ಏನು ಕಿವಿ ಚುಚ್ಚುತಾರೋ... ನನ್ನ ಮೇಲೆ ರೇಗ್ತಾರೆ. ನನ್ನ ಸಮಸ್ಯೇನ ಅರ್ಥಮಾಡಿಕೊಳ್ಳುವ ಮನಸ್ಸೇ ಇಲ್ಲ ಅವರಿಗೆ. ನನ್ನ ಅತ್ತೆಗಂತೂ ಬೇಕೂಂತ ನಾನೇ ಟ್ರಾನ್ಸ್‌ಫರ್ ತಗೊಳ್ಳದೆ ಇಲ್ಲಿದೀನಿ..... ಇಲ್ಯಾರೋ.. ಇದಾನೆ ನನಗೆ.... ಅಂತ ಅಂದು ಕೊಂಡಿದ್ದಾರೆ. ಇದೆಲ್ಲ ಬೇಡವೇ ಬೇಡ ಅಂತ ಮೊನ್ನೆ ಡಿಸೆಂಬರ್‌ನಲ್ಲಿ ತಿಂಗಳಿಡೀ ರಜಾ ಹಾಕಿ ಅಲ್ಲೇ ಇದ್ದೆ. ನಾನು ಎಷ್ಟು ಹೊಂದಿಕೊಳ್ಳೋಕೆ ಪ್ರಯತ್ನ ಮಾಡ್ತೀನಿ. ಆದ್ರೆ ಏನೂ ಉಪಯೋಗ ಇಲ್ಲ. ನೇರವಾಗಿ ಮಾತನಾಡೋ ಅಭ್ಯಾಸನೇ ಇಲ್ಲ ಅವರಿಗೆ. ಸುತ್ತಿ ಬಳಸಿ ಚುಚ್ಚಿ ಮಾತಾಡೋದು." (ಸವಿತಾ ನಾಗಭೂಷಣ : ೧೯೯೬; ೬೮,೬೯)

ಕೂಡು ಕುಟುಂಬದಲ್ಲಿ ಸ್ತ್ರೀ 'ಸಹಿಸಬೇಕಾದ' ಪರಿಸ್ಥಿತಿಗಳ ಕಾರಣಗಳು, ಅನಿವಾರ್ಯಗಳು ವಿಭಿನ್ನವಾಗಿರುತ್ತವೆ. ಇಲ್ಲಿ ಆರ್ಥಿಕ ಸ್ವಾವಲಂಬನೆ ನೀಡುವ ಭದ್ರತೆ ಇದೆಯಾದರೂ ವ್ಯಕ್ತಿ ಸಂಬಂಧಗಳ ಧೋರಣೆಗಳಲ್ಲಿ ವಿಶೇಷ ಬದಲಾವಣೆ ಕಂಡು ಬರುವುದಿಲ್ಲ. ಈ ರೀತಿಯ ಸಂದರ್ಭಗಳಲ್ಲಿ ಜೀವನ ಸವಾಲಾಗಿ ಪರಿಣಮಿಸುತ್ತದೆ. ಮಾತ್ರವಲ್ಲ ಸಂಬಂಧಗಳು ನಿಕಷಕ್ಕೆ ಒಡ್ಡಿದ ಹಾಗೇ ಹೆಚ್ಚು ಸ್ಪುಟವಾಗಿ, ಪ್ರಖರವಾಗಿ ಬಯಲುಗೊಳ್ಳುತ್ತವೆ. ಅತ್ತೆ-ಸೊಸೆಯನ್ನು; ಗಂಡ-ಹೆಂಡತಿಯನ್ನು; ನಾದಿನಿ-ಅತ್ತಿಗೆಯನ್ನು ಪರಸ್ಪರರು ಅರ್ಥಮಾಡಿಕೊಳ್ಳುವಲ್ಲಿ ಹೊಂದಾಣಿಕೆಯ, ಸಹಬಾಳ್ವೆಯ ವೈರುಧ್ಯಗಳು ಆಯಾ ಕುಟುಂಬಗಳ ಮಿತಿಗಳಷ್ಟೇ ಅಲ್ಲದೆ, ಅದನ್ನು ಮೀರಬೇಕಾದ ಸವಾಲು ಆಯಾ ಕುಟುಂಬಗಳಿಗಿವೆ. ಸಂಗೀತಳ ಕುಟುಂಬಕ್ಕಿಂತ ಸಮಸ್ಯೆಗಳ ಸಂದರ್ಭಗಳು ಬೇರೆ ಇರಬಹುದು ಆದರೆ, 'ಹೊಂದಾಣಿಕೆ' ಎನ್ನುವುದು ಹಲವು ಕುಟುಂಬಗಳ ಪ್ರಶ್ನೆಯಾಗಿ ಪಠ್ಯದೊಳಗೆ ಕಾಣಿಸಿಕೊಳ್ಳುತ್ತದೆ. ಸುಮ ಮತ್ತು ಕಮಲ ಇದನ್ನು ಅವರವರ ಅನುಭವಗಳ ಮೂಲಕ ವ್ಯಕ್ತಪಡಿಸುವ ರೀತಿಯು ಕೂಡ ಇದೇ ತೆರನದ್ದಾಗಿದೆ.

"ಕಮಲ: ಹಾಗಲ್ಲ .... ಸುಮಾ...ನಮ್ಮತ್ತೆ ಏನೂ ಮಾತಾಡೋದೇ ಇಲ್ಲ. ನನಗೂ ನಾಕು ಮಾತು ಅನ್ಲಿ ಬೇಡ ಅನ್ನೋಲ್ಲ. ಸುಮ್ಮನೆ ಇದ್ದು ಬಿಡ್ತಾರೆ. ನಾನಾದ್ರೂ ಏನೂ ಅಂತ ಅಂದುಕೊ ಬೇಕು? ಅನ್ನೋದು, ಆಡೋದು ಯಾರ ಮನೇಲಿ ಇಲ್ಲ ಹೇಳಿ? ನನಗೂ

ನಮ್ಮತ್ತೆಯ ಸಮಸ್ಯೆ ಅರ್ಥ ಆಗುತ್ತೆ. ನಾನೂ ಹೊರಗೆ ಹೋಗ್ತೀನಿ, ನಮ್ಮನೆಯವರೂ ಇರೋಲ್ಲ..... ಒಬ್ಬರೇ ಇರ್ತಾರೆ... ನಾನೂ ಎಷ್ಟೋ ಸಲ ಹೇಳಿದೀನಿ.... ಅವರಿವರ ಮನೆಗೆ ಹೋಗಿ... ಮಾತಾಡಿಕೊಂಡು ಬನ್ನಿ.... ಸಂಜೆಗೆ ಗುಡಿಗೆ ಹೋಗಿ ಬನ್ನಿ... ಗುರುವಾರ ಗುರುವಾರ ಹರಿಕಥೆ ಇರುತ್ತೆ.... ನಿಮ್ಮ ವಯಸ್ಸಿನೋರೇ...... ಬಂದಿರ್ತಾರೆ.... ಅಂತ......

ನಾನು : ಹೂಂ, ನಮ್ಮತ್ತೆ ಜೊತೆಗೆ ಒಂದೆರಡು ಸಲ ಗುಡಿಗೆ.... ಹೋಗಿದ್ರಲ್ಲಾ?

ಕಮಲ: ಹಳ್ಳಿ ಕಡೆಯವರು ಅಲ್ಲವಾ? ಒಂಥರಾ ಮುಂದಾಗಿ ಹೋಗಿ ಯಾರನ್ನೂ ಮಾತನಾಡಿಸೋದಿಲ್ಲ. ಹಾಗಾಗಿ ನಮ್ಮತ್ತೆಗೆ ಪರಿಚಯದವರೂ ಕಡಿಮೆ. ನಂಗೊ ಸಂಜೆ ಬರೊ ಹೊತ್ತಿಗೆ ಸಾಕಾಗಿರುತ್ತೆ. ಮತ್ತೆ ರಂಜೂಗೆ ಓದಿಸಬೇಕು.... ಅಡಿಗೆ ಆಗಬೇಕು.... ನಂದೇ ವಿಚಾರ ತಗಳ್ಳಿ..... ತಿಂದ್ಯಾ ಉಂಡ್ಯಾ ಅಂತ ಕೇಳೊರು ಯಾರಿದಾರೆ? ನಮ್ಮನೆಯವರಿಗೆ ಎಷ್ಟು ಸಲ ಹೇಳ್ತೀನಿ.... ಆಗ್ಗಾಗ್ಗೆ ನಿಮ್ಮ ತಾಯನ್ನ ಸ್ವಲ್ಪ ವಿಚಾರಿಸಿಕೊಳ್ರಿ..... 'ಏನಮ್ಮಾ ಚೆನ್ನಾಗಿದ್ದಿಯಾ ಅಂತ ನಾಲ್ಕು ಮಾತಾಡಿ ಅಂತ.... ಹೇಳ್ತೀನಿ. ಆದ್ರೆ ಇವರು ಕಿವಿಮೇಲೆ ಹಾಕ್ಕೋಳೋದಿಲ್ಲ. ನಾನು ಏನಾದ್ರೂ ಅಚ್ಚೆ ಮಾಡಕ್ಕೆ ಹೋದ್ರೆ ಅವರಿಗೆ ಇಷ್ಟಾನೂ ಆಗೋದಿಲ್ಲ. ನಾವೆಷ್ಟ ಮಾಡಿದರೂ ಸೊಸೆ ಸೊಸೇನೆ, ಮಗ ಮಗಾನೆ.....

ನಾನು: ಅಯ್ಯೋ....... ನಮ್ಮತ್ತೆನೂ ಹಾಗೇ ಮಾಡ್ತಾರೆ ಬಿಡ್ರೀ... ಇಲ್ಲಿ ಆಗ್ಗಾಗ್ಗೆ ಬಂದು ಇರ್ತಾರಲ್ಲ...... ಒಂದೊಂದು ಸಲ ಇದ್ದಕ್ಕಿದ್ದ ಹಾಗೆ ಮುನಿಸಿಕೊಂಡು ರಾತ್ರಿ ಊಟ ಮಾಡದೆ ಮಲಗಿಬಿಡ್ತಾರೆ. ಎಷ್ಟು ಎಬ್ಬಿಸಿದ್ರೂ 'ನಂಗೆ ಬೇಡ' ಅಂದು ಬಿಡ್ತಾರೆ. ನಮ್ಮಮ್ಮ ಆದ್ರೆ ಒಂಥರಾ ಜೋರು ಮಾಡಬಹುದು..... ಇವರಿಗೇನು ಮಾಡೋದು? ಹೆಚ್ಚು ಹೇಳಲಿಕ್ಕೂ ಭಯ? ಹೇಳಿದೆ ಅಂತ ಇಟ್ಕೊಳ್ಳಿ....' 'ನನ್ನ ಹೊಟ್ಟೆ ನಿನಗ್ಯಾಕೆ ಚಿಂತೆ' ಅಂತಾರೆ, ನಮ್ಮನೆಯವರೂ ಅಮ್ಮನಿಗೆ ಹಸಿವಿಲ್ಲವೇನೋ ನೀನ್ಯಾಕೆ ಜುಲುಮೆ ಮಾಡ್ತೀಯಾ ಅಂತಾರೆ. ಅವರನ್ನು ಬಿಟ್ಟು ಊಟ ಮಾಡೋಕೆ ಹೇಗೆ ಮನಸಾಗುತ್ತೆ ಹೇಳಿ? ಅದೇ ನಮ್ಮ ನಾದಿನಿ ಮನೇಲಿ ಎಷ್ಟು ಚುರುಕಾಗಿ ಇರ್ತಾರೆ ಗೊತ್ತಾ? ನನ್ನ ಹತ್ರಾನೂ ಯಾಕೆ ಇರಬಾರದು ಅಂತೀನಿ..."(ಸವಿತಾ ನಾಗಭೂಷಣ: ೧೯೯೬; ೧೧೨, ೧೧೩)

ಕುಟುಂಬಗಳೊಳಗೆ ವಯಸ್ಸಾದ ವೃದ್ಧರನ್ನು ನೋಡಿಕೊಳ್ಳುವುದು, ಅನುಸರಿಸಿಕೊಂಡು ಹೋಗುವುದು ಆಯಾ ಕುಟುಂಬದ ಸೊಸೆಯಂದಿರಿಗೆ ಮಕ್ಕಳಿಗೆ ಗಂಭೀರವಾದ ಪ್ರಶ್ನೆಯಾಗುತ್ತದೆ. ಇದಕ್ಕೆ ಮುಖ್ಯ ಕಾರಣ ವೃದ್ಧರ ಏಕತಾನತೆಯ ಬದುಕಿನಲ್ಲಿ ಬದಲಾವಣೆಯ ಹೊಸ ವಾತಾವರಣ ಕಲ್ಪಿಸುವಲ್ಲಿ ಆಯಾ ಕುಟುಂಬದ ಸದಸ್ಯರು ಸೋಲುವುದು ಒಂದಾದರೆ, ವೃದ್ಧರು ಇತರ ಸದಸ್ಯರ ದುಡಿಯುವ ಸೊಸೆಯಂದಿರ ಪರಿಸ್ಥಿತಿಗಳ ಸಂಘರ್ಷಗಳನ್ನು ಸರಿಯಾಗಿ ಅರ್ಥೈಸಿಕೊಳ್ಳದಿರುವುದು ಮತ್ತೊಂದು ಮುಖ್ಯ ಕಾರಣವಾಗಿದೆ. ಕುಟುಂಬದಲ್ಲಿ ಪರಸ್ಪರರನ್ನು 'ವಸ್ತುನಿಷ್ಠ'ವಾಗಿ ಗ್ರಹಿಸಿ ಸಹಕರಿಸಿದರೆ ಮಾತ್ರ ನೆಮ್ಮದಿಯ ಕೌಟುಂಬಿಕ ಜೀವನ

ಸಾಧ್ಯವಾಗುತ್ತದೆ. ಅದಿಲ್ಲದ ಪಕ್ಷದಲ್ಲಿ ಕುಟುಂಬಗಳಲ್ಲಿ ಅಸಹಕಾರ ಮನೋಭಾವ ತಲೆದೋರುತ್ತದೆ. ಮಾತ್ರವಲ್ಲ ದೈಹಿಕ ಮಾನಸಿಕ ಕ್ಷಮತೆಯ ಕುಗ್ಗುವಿಕೆಗೆ ಕುಟುಂಬದ ಸದಸ್ಯರು ಒಳಗಾಗಬೇಕಾಗುತ್ತದೆ. ಆಧುನಿಕ ಕುಟುಂಬಗಳು ಇದನ್ನು ತೀವ್ರವಾಗಿ ಗುರುತಿಸುವುದರಿಂದ ಭಾರತದಲ್ಲೂ ಕೂಡ ವೃದ್ಧಾಶ್ರಮಗಳ ಸಂಖ್ಯೆ ಹೆಚ್ಚಾಗುತ್ತಿದೆ. ನೆಮ್ಮದಿಯನ್ನು ಹುಡುಕುವ ನೆಲೆಯಲ್ಲಿ ವೃದ್ಧಾಶ್ರಮಗಳ ಬದುಕು ಆಧುನಿಕ ಕುಟುಂಬಗಳ ಪರ್ಯಾಯ ಶೋಧವಾಗಿ ಮಾರ್ಪಟ್ಟಿವೆ.

ಹೆಣ್ಣಿನ ಲೈಂಗಿಕ ಶೋಷಣೆ, ಅತ್ಯಾಚಾರದಂತಹ ಅಮಾನವೀಯ ಕಾನೂನು ಬಾಹಿರ ವರ್ತನಾ ವ್ಯವಹಾರಗಳು ಉಳಿದ ಕಡೆಗಳಿಗಿಂತ ಹೆಚ್ಚಾಗಿ ಸಮಾಜದೊಳಗೆ ಕುಟುಂಬಗಳಲ್ಲಿ ಉದ್ಭವಿಸುತ್ತವೆ. ಗಂಡ- ಹೆಂಡತಿಯನ್ನು, ತಂದೆ-ಮಗಳನ್ನು, ಅಣ್ಣ-ತಂಗಿಯನ್ನು ಲೈಂಗಿಕವಾಗಿ ಶೋಷಿಸುವ ಅಸಾಮಾನ್ಯದ ಹಲವು ಮಾದರಿಗಳು ಅನನ್ಯ ಸಾಂಸ್ಕೃತಿಕ ಪಠ್ಯದೊಳಗೆ ಚರ್ಚೆಗೆ ಒಳಗಾಗುವುದು ಕೂಡ ಕಂಡುಬರುತ್ತವೆ. ತಂದೆಯೇ ಮಗಳನ್ನು ಅತ್ಯಾಚಾರ ಮಾಡಿ ಅವಳ ಗರ್ಭಾವಸ್ಥೆಗೆ ಕಾರಣವಾದ ನಿದರ್ಶನದ ಚರ್ಚೆ ಸ್ತ್ರೀಲೋಕದಲ್ಲಿ ಕಾಣಿಸಿಕೊಳ್ಳುತ್ತದೆ.

"ಕಮಲ : ಈ ಊರಿನವರು ಅಲ್ಲ..... ಸಾಗರದವರು ಅನಿಸುತ್ತೆ...

ನಾನು : ಏ ...... ಇಲ್ಲಿಗ್ಯಾಕೆ ಬರ್ತಾರೆ.... ಅಲ್ಲೇನು ಆಸ್ಪತ್ರೆ ಇಲ್ಲವಾ?

ಕಮಲ : ಯಾರಿಗೆ ಗೊತ್ತು? ಆ ನರ್ಸುಗಳು ಮಾತಾಡ್ತಾ ಇದ್ರಲ್ಲ.... ಹಾಗೆ ಗೊತ್ತಾಯ್ತು... ನನ್ನ ಪಕ್ಕದ್ದೇ ಬೆಡ್ಡು.. ಹುಡುಗಿಗೆ ಹದಿನಾರು ವರ್ಷದ ಮೇಲೆ ಇರಲಿಲ್ಲ ನೋಡ್ರೀ.....

ನಾನು : ಕಾಲ ಕೆಟ್ಟೋಗಿದೆ ಬಿಡ್ರೀ..... ಹುಡುಗಿ ಒಂದೇ ಇತ್ತಾ?

ಕಮಲ : ಇಲ್ಲ.... ಹುಡುಗಿಯ ತಾಯಿ ಮತ್ತೆ ಇನ್ನೊಂದು ಹೆಂಗಸು.... ಹುಡುಗಿಯ ತಾಯಿದಂತೂ ಅತ್ತೂ ಅತ್ತೂ ಕಣ್ಣು ಕೆಂಪಗೆ.......

ನಾನು : ಎಷ್ಟು ತಿಂಗಳಾಗಿತ್ತಂತೆ ?

ಕಮಲ : ಎರಡು ಎರಡೂವರೆ.... ಸರಿಯಾಗಿ ಗೊತ್ತಿಲ್ಲ...

ನಾನು : ಹುಡುಗೀ ತಂದೆ?

ಕಮಲ : ಅವನ್ಯಾಕೆ ಬರ್ತಾನೆ ಹೇಳಿ......

ನಾನು : ಯಾಕೆ ...... ಅವರಿಗೆ ವಿಷಯ ಗೊತ್ತಿಲ್ಲವಾ?

ಕಮಲ : ನೀವು ಹೇಳಿದ್ರೇ..... ನಂಬಲ್ಲ..... ನಂಗೆ ಬಾಯಿಂದ ಹೇಳಕ್ಕೆ ಅಸಹ್ಯ ಆಗುತ್ತೆ.... ಮತ್ತೆ.... ಮತ್ತೆ.... ಅವನಿಂದಾನೇ...

ನಾನು: ಶಿವ...... ಶಿವ..... ಇಂಥಾ ತಂದೆನೂ ಇರ್ತಾರೇನ್ರೀ? ನಾನಂತು ನಂಬಲ್ಲ..... ನಾನುಂತು ನಂಬಲ್ಲ.... ದೇವರೇ.. ಇದೇನು ಪ್ರಪಂಚನಪ್ಪಾ!?" (೧೯೯೬; ೧೭೮)

ಕುಡಿತದ ಅಮಲಿನಲ್ಲಿ ಹೆಂಡತಿ ಮಗಳ ನಡುವಿನ ವ್ಯತ್ಯಾಸ ಗುರುತಿಸದೆ ವರ್ತಿಸಿದ ಆತ ನೈಜ ವಿಚಾರ ಅರಿವಾದಾಗ ಯಾರಿಗೂ ಮುಖ ತೋರಿಸದೆ ಪಲಾಯನ ಮಾಡುತ್ತಾನೆ. ಇಲ್ಲಿ ಪ್ರಶ್ನೆ ಎದುರಾಗುವುದು ಪುರುಷನ ಅರಿವಿದ್ದು ಮಾಡಿದ ಕೃತ್ಯವೇ? ಅಥವಾ ಆತನ ಅರಿವಿಗೆ ಬಾರದೆ ಮಾಡಿದ್ದೇ ಎಂಬುದಲ್ಲ. ಗಂಡಸಿನ ಯಾವುದೇ ವರ್ತನೆಗಳಿಗೂ ಅದರ ಪರಿಣಾಮಗಳ ಅನುಭವಿಸುವಿಕೆಗೆ ವಿನಃಕಾರಣ ಹೆಣ್ಣು

ಗುರಿಯಾಗಬೇಕಾಗುತ್ತದೆ. ಇದನ್ನು ಪುರುಷರ ಮನಸ್ಥಿತಿಗಳು ಸರಿಯಾಗಿ ಗ್ರಹಿಸಿದ ಪಕ್ಷದಲ್ಲಿ ಇಂತಹ ಶೋಷಣೆಗಳಿಗೆ ಕುಟುಂಬದಲ್ಲಿ ಎಡೆ ಇರುವುದಿಲ್ಲ. ಅಲ್ಲದೆ ಮಾನವ ಸಂಬಂಧಗಳ ಮೂಲ ತಿಳುವಳಿಕೆ ಕುಟುಂಬದಲ್ಲಿ ಹೆಚ್ಚು 'ನಿಖರ'ವಾಗಿ ವಸ್ತುನಿಷ್ಠವಾಗಿ ರಚನೆಗೊಂಡಾಗ ಮಾತ್ರ ಕುಟುಂಬಗಳಲ್ಲಿ ಅತ್ಯಾಚಾರದಂತಹ ಅನುಚಿತ ಅಮಾನವೀಯ ಸನ್ನಿವೇಶಗಳನ್ನು ಮೀರುವುದು ಸಾಧ್ಯವಾಗುತ್ತದೆ.

ಕುಟುಂಬದ ಒಳಗೆ ಮಕ್ಕಳು ಎಷ್ಟು ಬೇಕೆಂದು ನಿರ್ಣಯಿಸುವುದು, ಮಕ್ಕಳ ವಿದ್ಯಾಭ್ಯಾಸದ ಪ್ರಶ್ನೆ, ಸ್ತ್ರೀ ಹೊರಗೆ ದುಡಿಯುವುದರ ಬಗೆಗಿನ ತೀರ್ಮಾನ, ಹಿರಿಯರನ್ನು, ವೃದ್ಧರನ್ನು ಪರಿಭಾವಿಸುವ ರೀತಿಗಳು, ಇವುಗಳಲೆಲ್ಲಾ ಪುರುಷನ ಯಾಜಮಾನ್ಯ ಮೇಲಾಳ್ವಿಕೆ ಎನ್ನುವುದು ಹೇಗೆ ಎಲ್ಲಾ ಕುಟುಂಬದೊಳಗೆ ನಿಯಂತ್ರಣ ಶಕ್ತಿಯಾಗಿ ಪರಿಣಮಿಸುತ್ತವೆ ಎನ್ನುವುದನ್ನು ಪಠ್ಯವು ವಿಶದಪಡಿಸುತ್ತದೆ. ಈ ವಿಚಾರಗಳಿಗೆ ಸಂಬಂಧಿಸಿದಂತೆ **ಸ್ತ್ರೀ ಲೋಕ** ತಿಳಿವಳಿಕೆ ಮೂಡಿಸುತ್ತದೆ. ಜೊತೆಗೆ, ಮಧ್ಯಮವರ್ಗದ ಮಹಿಳೆಯರನ್ನು ತೀವ್ರವಾಗಿ ಕಾಡುವ ಬೆಲೆಯೇರಿಗೆ, ನಿರುದ್ಯೋಗ, ದಿನಬಳಕೆಯ ದಿನಸಿಗಳು, ವಿದ್ಯುತ್, ನೀರು ಇವುಗಳಂತಹ ಮೂಲಭೂತ ಅನಿವಾರ್ಯತೆಯೊಳಗೆ ಸ್ತ್ರೀಯರು ಜೀವನ ಪೂರ್ತಿ ತೊಳಲಾಡುವ, ತಮ್ಮ ತಮ್ಮ ಕುಟುಂಬದ ಗಡಿಗಳನ್ನು ಸ್ತ್ರೀಯರಿಗೆ ಮೀರುವುದು ಸಾಧ್ಯವೇ ಆಗದ ವಾಸ್ತವ ಸ್ಥಿತಿಯನ್ನು ಕಾದಂಬರಿ ಪಠ್ಯ ಕಟ್ಟಿಕೊಡುತ್ತದೆ. ಕುಟುಂಬದ ಒಳಗೆ ಸ್ತ್ರೀಯರನ್ನು ದಮನಿಸುವ ಅದುಮುವ ಮೂಢನಂಬಿಕೆ ಹಾಗೂ ಕುರುಡು ಧೋರಣೆಗಳನ್ನು ವಿರೋಧಿಸುವ ವಿಚಾರವಾದಿ ಚಿಂತನೆಗಳನ್ನು ಕುರಿತಂತೆ 'ಸ್ತ್ರೀಲೋಕ' ಧ್ವನಿ ಹೊರಡಿಸುತ್ತದೆ.

**ತಾರಾಭಟ್ ಅವರ ಕಾದಂಬರಿಯಲ್ಲಿನ ಕೌಟುಂಬಿಕ ಸ್ವರೂಪ:**

**ಅವ್ಯಕ್ತ** ಕಾದಂಬರಿಯಲ್ಲಿ ಕುಟುಂಬವು ಪ್ರಧಾನ ಭೂಮಿಕೆಯಲ್ಲಿ ಕಾಣಿಸಿ ಕೊಳ್ಳುವುದಿಲ್ಲ. ಆಧುನಿಕ ಸಮಾಜದ ದ್ವಂದ್ವಗಳನ್ನು, ಸಂಘರ್ಷಗಳನ್ನು ಎದುರಿಸುವಲ್ಲಿ ಕುಟುಂಬವು ನಿಷ್ಫಲ ಹೊಂದುವ ಬಗೆಯಲ್ಲಿ ಕೌಟುಂಬಿಕ ವಿವರಗಳು ಪಠ್ಯದ ಒಳಗೆ ಕಾಣಿಸಿಕೊಳ್ಳುತ್ತವೆ. ಇದರಿಂದಾಗಿ ಕುಟುಂಬವೆನ್ನುವುದು ಕಾದಂಬರಿಯ ಪರಿಧಿಯಲ್ಲಿ ಚಿತ್ರಣಗೊಂಡಿದೆ. ಈ ಕಾರಣದಿಂದಾಗಿ ಆಧುನಿಕ ಸಮಾಜದ ವ್ಯಕ್ತಿಗಳ ಬದುಕಿನ ವೈರುಧ್ಯಗಳನ್ನು ಪರಿಣಾಮಕಾರಿಯಾಗಿ ಪಠ್ಯದೊಳಗೆ ನಿರೂಪಿಸಲು ಸಾಧ್ಯವಾಗಿದೆ. ಅದಿತಿ ಮತ್ತು ಹಾಸ್ಟೆಲಿನಲ್ಲಿ ಒಂದೇ ರೂಮಿನಲ್ಲಿ ವಾಸವಾಗಿರುವ ರೋಸಿ ಇವರಿಬ್ಬರ ಹಿನ್ನೆಲೆಯಲ್ಲಿ ಆಧುನಿಕ ಕೌಟುಂಬಿಕ ಸ್ವರೂಪವು ಸಂಕೀರ್ಣವಾಗಿ ಅನಿವಾರ್ಯವಾದ ಸಾಮಾಜಿಕ ಪರಿಸ್ಥಿತಿ(milieu)ಯಾಗಿ ಪಠ್ಯದೊಳಗೆ ಅನಾವರಣಗೊಳ್ಳುತ್ತದೆ. ಅದಿತಿ ಮತ್ತು ರೋಸಿ ಇವರಿಬ್ಬರ ಜೀವನ ಸ್ಥಿತಿಯಲ್ಲಿ ಮಧ್ಯವಯಸ್ಸಿನ ಬದುಕಿನಲ್ಲಿ ಬಾಲ್ಯದ ಕೌಟುಂಬಿಕ ಪರಿಸರದ ಪ್ರಭಾವ ಅವರ ಜೀವನ ನಿರ್ಣಯಕ್ಕೆ ವಿರುದ್ಧವಾಗಿ (Militarization) ಪರಿಣಾಮವನ್ನು ಬೀರುವುದರಿಂದ ಕೌಟುಂಬಿಕ ವ್ಯವಸ್ಥೆ ಹೆಚ್ಚು ಸಂಕೀರ್ಣ ರಚನೆಗಳಾಗಿ ಕಾಣಿಸಿಕೊಳ್ಳುತ್ತದೆ. ಅಲ್ಲದೆ ಅವರು ಬದುಕುವ ಪರಿಸರದಲ್ಲಿ ಭದ್ರತೆಯ ದೃಷ್ಟಿಯಿಂದ ಅವರಿಬ್ಬರ ವ್ಯಕ್ತಿತ್ವಗಳನ್ನು ತಾತ್ಕಾಲಿಕವಾಗಿ ಕನಿಷ್ಠವಾದುದನ್ನು ಒಪ್ಪಿಕೊಳ್ಳಲು ಸಿದ್ಧರಾಗುವ ವ್ಯಕ್ತಿತ್ವಗಳಾಗಿ ರೂಪುಗೊಳ್ಳುವುದರಲ್ಲಿ ಅವರ ಕೌಟುಂಬಿಕ 'ನಿಷ್ಕ್ರಷ್ಟತೆ'ಯ ಸ್ವರೂಪ ಕಾರಣವಾಗುತ್ತದೆ. 'ಅವ್ಯಕ್ತ' ಈ ಪಠ್ಯದಲ್ಲಿ ಕಂಡು ಬರುವ ಕೌಟುಂಬಿಕ ರಚನೆಗಳು ಎರಡು.

ಅ) ಮಕ್ಕಳನ್ನು ಶಿಸ್ತಿನಲ್ಲಿ ಬೆಳೆಸುವ, ಕಟ್ಟುನಿಟ್ಟಾದ ನಿಷ್ಠುರವಾದ ಪೋಷಣೆಯ ಕುಟುಂಬ ವಾತಾವರಣ.

ಆ) ತಾಯಿ ಇಲ್ಲದೆ, ಮತ್ತೊಂದು ಮದುವೆಯಾಗಿರುವ ಕುಡುಕ ತಂದೆಯು ಆತನ ಮಗಳನ್ನು ಸಾಕುವ ಕುಟುಂಬದ ಪರಿಸರ.

ಮನೆಯ ವಾತಾವರಣವೇ ಮಕ್ಕಳ ವ್ಯಕ್ತಿತ್ವವನ್ನು ರೂಪಿಸುವ ಪ್ರಬಲ ಅಂಶವಾಗಿರುತ್ತದೆ. ಎರಡು ಭಿನ್ನ ಮಾದರಿಗಳಲ್ಲಿ ಮೊದಲಿನ ರಚನೆಯ ಕುಟುಂಬ ವಾತಾವರಣದೊಳಗೆ ಅದಿತಿಯ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಮುಂಬಾಯಿಯ ಬಣ್ಣ ತಯಾರಿಸುವ ಕಂಪೆನಿಯೊಂದರಲ್ಲಿ ವರಿಷ್ಠಾಧಿಕಾರಿಯಾಗಿರುವ ಅದಿತಿಯ ತಂದೆ. ಪ್ರಭಾದೇವಿಯ ಬೀಚಿನಲ್ಲಿ ಆರು ಕೋಣೆಯ ಸುಸಜ್ಜಿತ ಬಂಗಲೆಯ ಮನೆಯ ಯಜಮಾನ. ಆತ- ಹೆಂಡತಿ ಹಿರಿ ಮಗಳು ಅದಿತಿ, ಕಿರಿಮಗಳು ಮೀನಾಕ್ಷಿ ಕೆಲಸದಾಕೆ ಹೀರಾ ಎನ್ನುವ ಹೆಂಗಸು ಕಾರಿನ ಡ್ರೈವರ್ ಇವರ ಕುಟುಂಬ ಒಳಗೊಂಡಿರುವ ಸದಸ್ಯರಾಗಿರುತ್ತಾರೆ. ಇದರೊಳಗೆ ಅದಿತಿಯ ವ್ಯಕ್ತಿತ್ವ ಮನೆಯೊಳಗಿನ ಕಟ್ಟುನಿಟ್ಟಾದ ಶಿಸ್ತು ಮತ್ತು ಆ ಶಿಸ್ತನ್ನು ಮುರಿಯಬೇಕೆಂದು ಸುಪ್ತವಾಗಿ ರೂಪುಗೊಳ್ಳುತ್ತದೆ. ಆಧುನಿಕ ಸಂಕೀರ್ಣ ಕುಟುಂಬ ವ್ಯವಸ್ಥೆಯು ಎದುರಿಸುವ ದ್ವಂದ್ವವನ್ನು ಅದಿತಿಯು ಒಳಗೊಂಡಿರುವ ಪರಿಸರ ತೆರೆದಿಡುತ್ತದೆ. ಮೂರನೇ ವಯಸ್ಸಿನಲ್ಲೇ ಅದಿತಿಯನ್ನು 'ಡಾನ್ ಬೋಸ್ಕೋ' ಇಂಗ್ಲೀಷ್ ಸ್ಕೂಲಿನ ಕೆ.ಜಿ.ತರಗತಿಯಲ್ಲಿ ಸೇರಿಸುವುದರಿಂದ ಮನೆಯಲ್ಲಿ ಮತ್ತು ಸ್ಕೂಲಿನಲ್ಲಿ ಇರುವ ಶಿಸ್ತಿನ ಕಟ್ಟುನಿಟ್ಟು ಮುರಿಯಬೇಕೆಂಬ ಪ್ರವೃತ್ತಿ ಅವಳಿಗೆ ಅರಿವಿಲ್ಲದಂತೆ ಅವಳೊಳಗೆ ಬೆಳೆಯುವುದಕ್ಕೆ ನಾಂದಿಯಾಗುತ್ತದೆ. ಮನೆಯಲ್ಲಿ ಮತ್ತು ಶಾಲೆಯಲ್ಲಿದ್ದ ಶಿಸ್ತನ್ನು ಮುರಿಯಬೇಕೆಂಬ ಭ್ರಮೆಯಲ್ಲಿದ್ದ ಅದಿತಿ ಓದುವ ಪಠ್ಯ ಪುಸ್ತಕದಲ್ಲೆಲ್ಲಾ ಏನೇನೋ ಗೀಚುವುದು ಕ್ಲಾಸ್ ಟೀಚರ್‌ಗೆ ಗೊತ್ತಾಗುತ್ತದೆ. ಎಲ್ಲಾ ಪುಸ್ತಕಗಳನ್ನೂ ತಪಾಸಣೆ ನಡೆಸಿದಾಗ ಎಲ್ಲದರ ಮೇಲೂ 'ಸುಳ್ಳು... ಇದು ತಪ್ಪು..... ನಿನ್ನ ತಲೆ..... ಹೀಗೆ ಏನೇನೋ ಗೀಚಿದ್ದು ಕಂಡು ಬರುತ್ತದೆ. ಅವಳ ತಂದೆಗೆ ದೂರು ಹೋಗುತ್ತದೆ. ತಂದೆಯಿಂದ ಹೊಡೆತ ನಿರೀಕ್ಷಿಸುವ ಅದಿತಿಗೆ ತಂದೆ ಅದಕ್ಕೆ ವಿರುದ್ಧವಾಗಿ ಪ್ರತಿಕ್ರಿಯಿಸುವುದು ಅವಳೊಳಗಿನ ಸಾಮರ್ಥ್ಯವನ್ನು ಸಾಣೆ ಹಿಡಿಯುವಂಥದ್ದಾಗುತ್ತದೆ.

> "ನನ್ನ ಮಗಳು ಅದಿತಿ ಪಠ್ಯ ಪುಸ್ತಕ ಬರೆದವರಿಗಿಂತ ಹೆಚ್ಚು ಬುದ್ಧಿವಂತಳು. ಅವರು ಬರೆದುದನ್ನು ಸುಳ್ಳು ಎಂದು ಪ್ರೂವ್ ಮಾಡುವೆಯಾ?" (ತಾರಾಭಟ್.ಕೆ. : ೧೯೯೪ ;೭೯)

ಇದು ಅದಿತಿಯ ಒಳಗೆ 'ಹಠಸಾಧನೆ'ಗೆ ಕೆಚ್ಚಿಗೆ ಕಾರಣವಾಗುತ್ತದೆ. ಸಾಬೀತು ಪಡಿಸಬೇಕೆಂದು ಸತ್ಯ ತಿಳಿಯಲು ಸಂಬಂಧಪಟ್ಟ ಪುಸ್ತಕಗಳನ್ನೆಲ್ಲಾ ಅವಳು ಓದಲು ಆರಂಭಿಸುತ್ತಾಳೆ. ಹೀಗೆ ಅವಳ ಆಂತರಿಕ ಪ್ರಪಂಚ ವಿಸ್ತಾರವಾಗುತ್ತಾ ಹೋಗುತ್ತದೆ. ಅವಳ ಆಲೋಚನೆ ಮತ್ತು ಅವಳೊಳಗೇ ನಡೆಯುವ ಆಂತರಿಕ ಸಂಭಾಷಣೆಗೆ ಆಕಾರ ಕೊಡಲು ಅವಳು ಚಿತ್ರಕಲೆಯನ್ನು ಕಲಿಯಲು ಆರಂಭಿಸುವ ಮೂಲಕ ಇದು ಪ್ರಕಟವಾಗುತ್ತದೆ. ಯಾವ ವಿಚಾರಗಳಿಗೂ ತಂದೆ- ತಾಯಿಯನ್ನು ಆಶ್ರಯಿಸದ ಸ್ವತಂತ್ರ್ಯ ಮನೋಭಾವನೆಯಿಂದಾಗಿ ಹೆತ್ತವರಿಗೆ ಯಾವುದೇ ಸುಳಿವು ನೀಡದೆ ಜಯದೇವನೆಂಬ ವ್ಯಕ್ತಿಯನ್ನು ಆತ 'ಅನಾಮಿಕ'ನಾಗಿರುವ ಸ್ಥಿತಿಯಲ್ಲೇ ವಿವಾಹವಾಗುವಂತೆ ರೂಪಿಸುತ್ತದೆ. ಆತ ಯಾವುದೇ ಸೂಚನೆ ನೀಡದೆ ತೊರೆದು ಅಮೆರಿಕಾದಲ್ಲಿ ಮತ್ತೊಂದು ಮದುವೆಯಾದಾಗಲೂ, ಅದನ್ನು ಅಂತರ್‌ಮುಖಿಯಾಗಿ, ಒಂಟಿಯಾಗಿ ಅನುಭವಿಸುವಂತೆ ಮಾಡುತ್ತದೆ. ಅವಳ ವ್ಯಕ್ತಿತ್ವದ ಹೋರಾಟ ಪ್ರಕಟವಾಗುವುದು, 'ಬೆನ್ಸನ್ ಪಬ್ಲಿಸಿಟಿ ಕಂಪೆನಿ'ಯಂತಹ ಯಾವ ಮಾನವೀಯ ಸಾಮಾಜಿಕ ಸಂಬಂಧಗಳೂ ಸಾಧ್ಯವಿಲ್ಲದ ಪರಿಸರದಲ್ಲಿಯೇ ಆಗಿರುತ್ತದೆ. ಹೆಣ್ಣಿನ ಸಮಸ್ಯೆಯನ್ನು ಗಂಡಸರ ದೃಷ್ಟಿಯಿಂದ ಮಾತ್ರ ವಿವೇಚಿಸುತ್ತಾ ಲೈಂಗಿಕತೆಗೂ, ಸ್ತ್ರೀಗೂ ತಾಳೆ ಹಾಕುತ್ತಾ ಫ್ರಾಯ್ಡ್‌ನ ಚಿಂತನೆಗಳನ್ನು

ವೈಭವೀಕರಿಸುತ್ತಾ ಬದುಕುವ ಸಾಮಾಜಿಕ ಪರಿಸರ ಅದಾಗಿ ಕಂಡುಬರುತ್ತದೆ. ಇಂತಹ ಪರಿಸರಕ್ಕೆ ತೀಕ್ಷ್ಣವಾಗಿ ಅದಿತಿ ಪ್ರತಿಕ್ರಿಸುತ್ತಾಳೆ. ಪುರುಷರು ತಮ್ಮ ಅಗತ್ಯಗಳಿಗೆ ತಕ್ಕಂತೆ ಸ್ತ್ರೀಯನ್ನು ತಿದ್ದುವ ಚಾತುರ್ಯವನ್ನು ಗ್ರಹಿಸುವ ಆಕೆ ಹೆಣ್ಣು ಉಪಭೋಗಕ್ಕೆ ಎಂದೇ ಹುಟ್ಟಿದವಳು, ಎನ್ನುವ ಸರ್ವವ್ಯಾಪಿ ಮನೋಧೋರಣೆಯನ್ನು ತಡೆಯುವುದೇ ತನ್ನ ಜೀವನ ಧ್ಯೇಯವಾಗಿ ಅದಿತಿ ಸ್ವೀಕರಿಸುತ್ತಾಳೆ. ಇದು ಅವಳ ಜೀವನದ ಬದ್ಧತೆಯಲ್ಲಿ ಪ್ರಕಟವಾಗುತ್ತದೆ. ಅವಳ ಈ ಪ್ರತಿಭಟನೆ ಕಂಪೆನಿಯಲ್ಲಿ ಅರ್ಥಪೂರ್ಣವಾಗಿ ತೊಡಗಿಸಿಕೊಳ್ಳುವ ಅವಳ ಕ್ರಿಯೆಯಲ್ಲಿ ಎದ್ದು ಕಾಣುತ್ತದೆ.

ಹಾಸ್ಟೆಲಿನ ಪರಿಸರದಲ್ಲಿ ಅದಿತಿಯ ಮೇಲೆ ಪ್ರಭಾವ ಬೀರುವ, ವ್ಯಕ್ತಿತ್ವ ರೋಜಿಯದ್ದು. ಅದಿತಿಯ ಅಸ್ತಿತ್ವದ ನೆಲೆಯಿಂದಲೇ ರೋಸಿಯ ಬದುಕು ಅವಳ ಕುಟುಂಬ ಪರಿಸರ ಪಠ್ಯದಲ್ಲಿ ಅನಾವರಣಗೊಳ್ಳುತ್ತದೆ. ರೋಜಿ ಫಿಲೋಸಫಿಯಲ್ಲಿ ಎಂ.ಎ. ಮಾಡಿ ರೀಸರ್ಚ್ ಮಾಡಲು ಅವಕಾಶ ದೊರಕದೇ ಒಂದು ವರ್ಷ ಸೇಲ್ಸ್‌ಗರ್ಲ್, ಮಾಡೆಲಿಂಗ್ ಮಾಡಿ ಸರಿಹೋಗದೆ, pick up girl ಆಗಿರುವ ಯುವತಿ.

"'ಮುದುಕ ಬೇರೆ ಈಗ ಗಂಟು ಬಿದ್ದಿದ್ದಾನೆ. ಅಲ್ಪ ಸ್ವಲ್ಪ ಸಂಪಾದನೆಯಾಗುತ್ತಿದೆ.' "

(ತಾರಾಭಟ್.ಕೆ. : ೧೯೯೪ ; ೧೦೩)

ಎಂದು ನೇರವಾಗಿ ಅದಿತಿಯೊಡನೆ ಪರಿಚಯ ಮಾಡಿಕೊಳ್ಳುತ್ತಾಳೆ. ಯಾವೊಂದೂ ಸುಳ್ಳನ್ನು ಹೇಳದೆ ಪ್ರಾಮಾಣಿಕ ಭಾಷೆಯಲ್ಲಿ ಪರಿಸ್ಥಿತಿಗೆ ಮಾರಿಕೊಂಡಂತೆ ತೋರುವ ಅವಳ ನೇರ ನಡೆ ಅದಿತಿಯನ್ನು ಸೆಳೆಯಲು ಕಾರಣವಾಗುತ್ತದೆ. ಅದಿತಿಯ ಕುತೂಹಲಕ್ಕೆ ಕಾರಣವಾಗುವುದರಿಂದ ಪಠ್ಯದ ಒಳಗೆ ರೋಜಿಯ ಕೌಟುಂಬಿಕ ಪರಿಸರ ತೆರೆದುಕೊಳ್ಳುತ್ತದೆ. ಹುಟ್ಟಿದ ಕೂಡಲೇ ತಾಯಿಯನ್ನು ಕಳೆದುಕೊಳ್ಳುವ ರೋಜಿ ತಂದೆ ಎರಡನೆ ಮದುವೆಯಾದ ಕುಟುಂಬದಲ್ಲಿ ಪರಕೀಯವಾಗಿ ಬೆಳೆಯುತ್ತಾಳೆ. ಯೌವ್ವನಕ್ಕೆ ಕಾಲಿಟ್ಟ ಆರಂಭದಿಂದಲೇ ತಂದೆ ಇವಳನ್ನೂ ಉಪಭೋಗಿಸಲು ತೊಡಗುತ್ತಾನೆ. (ಕುಟುಂಬದ ಹಿನ್ನೆಲೆಯಿಂದ ರೋಸಿಯನ್ನು ಆಕೆಯ ತಂದೆ ಲೈಂಗಿಕವಾಗಿ ಉಪಯೋಗಿಸಿಕೊಳ್ಳುವಂಥ ತಂದೆ- ಮಗಳ ದೈಹಿಕ ಸಂಬಂಧವನ್ನು 'ಅಗಮ್ಯಗಮನ' ಎಂದು ಮನೋರೋಗ ವಿಜ್ಞಾನದಲ್ಲಿ ಗುರುತಿಸಲಾಗಿದೆ. ೧೮ ಪ್ರತಿಯೊಂದು ಸಂಸ್ಕೃತಿಯಲ್ಲೂ ತಂದೆ- ಮಗಳ, ತಾಯಿ- ಮಗನ ಮತ್ತು ಒಡಹುಟ್ಟಿದವರ ನಡುವಣ ಲೈಂಗಿಕ ಸಂಬಂಧ ನಿಷಿದ್ಧವಾದುದ್ದು. ಇಂಥ ಅಗಮ್ಯಗಮನವು ವೈಜ್ಞಾನಿಕ, ನೈತಿಕ, ಮತ್ತು ಸಾಮಾಜಿಕ ದೃಷ್ಟಿಗಳಿಂದ ಹಾನಿಕರವಾದುದರಿಂದ ನಿಷೇಧಿತಗೊಂಡಿದೆ. ಮನಃಶಾಸ್ತ್ರವು ಅಗಮ್ಯಗಮನ- ಸಂಬಂಧದ ಕಾರಣಗಳನ್ನು ಹಲವು ವಿಧಗಳಲ್ಲಿ ಗುರುತಿಸುತ್ತದೆ. ಇದರಲ್ಲಿ ಮದ್ಯವ್ಯಸನದಿಂದ ಕೂಡ ಇಂತಹ ಸಂಬಂಧಗಳು ಹುಟ್ಟಿ ಕೊಳ್ಳುತ್ತವೆ ಎನ್ನಲಾಗಿದೆ.) ರೋಸಿಯ ತಂದೆ ಮದ್ಯ ವ್ಯಸನಿಯಾಗಿದ್ದು ಮಗಳನ್ನು ಬಳಸಿಕೊಳ್ಳುತ್ತಾನೆ. ತಂದೆಯ ಈ ವರ್ತನೆಯ ಬಗ್ಗೆ ಜಿಗುಪ್ಸೆಗೊಂಡು, ಆತನನ್ನು ತಿರಸ್ಕರಿಸಿ ರೋಸಿಯು ಕುಟುಂಬದ ಸಂಬಂಧವನ್ನು ಕಡಿದುಕೊಳ್ಳುತ್ತಾಳೆ. ಕೆಲಸಕ್ಕೆ ಸೇರುವ ರೋಜಿ ಫಿಲೋಸಪಿ ಎಂ.ಎ ಮುಗಿಸುತ್ತಾಳೆ. ಈ ಅವಧಿಯಲ್ಲಿ ಸಹಪಾಠಿಯೊಬ್ಬನನ್ನು ಪ್ರೀತಿಸಿ ಅವನಿಗೆ ಪಿಎಚ್.ಡಿ. ಯಲ್ಲಿ ರೀಸರ್ಚ್ ಪ್ರೋಪೊಸಲ್‌ಗೆ ಸಹಾಯ ಮಾಡುತ್ತಾಳೆ. ಆತನು ಇವಳನ್ನು ವಂಚಿಸಿ ಮೊದಲೇ ನಿಶ್ಚಯವಾಗಿದ್ದ ಯುವತಿಯನ್ನು ಮದುವೆಯಾಗುತ್ತಾನೆ. ಬದುಕಿನುದ್ದಕ್ಕೂ ಇಂತಹ ವಂಚನೆಗಳಿಗೆ ಒಳಗಾದ ರೋಜಿ ಪಕ್ಕಾ ಚರಸ್ಸಿಯಾಗಿ ಪರಿವರ್ತನೆಗೊಳ್ಳುತ್ತಾಳೆ. ಸರಿಯಾದ ಕೆಲಸವೇ ಸಿಗದ ಕಾರಣ ಕಾಲ್‌ಗರ್ಲ್

ಕೆಲಸವನ್ನು ಆರಂಭಿಸುತ್ತಾಳೆ. ಒಂದು ದಿನ ಸಿನಿಮಾ ನೋಡುತ್ತಿದ್ದಂತೆ ಪಕ್ಕದಲ್ಲಿ ಕುಳಿತ ವ್ಯಕ್ತಿಯನ್ನು ಒತ್ತಾಯಿಸುತ್ತಾಳೆ. ಹೊರಗೆ ಬೆಳಕಿನಲ್ಲಿ ಮುದುಕನೆಂದು ಅರಿವಿಗೆ ಬಂದು ಆತನಿಂದ ಪಾರಾಗಲು ಪ್ರಯತ್ನಿಸಿದರೂ ಅದು ಅವಳಿಗೆ ಸಾಧ್ಯವಾಗುವುದಿಲ್ಲ. ಒಮ್ಮೆ ಪೊಲೀಸರು ಇಬ್ಬರನ್ನೂ ಹಿಡಿದಾಗ ಪೋಲಿಸ್‌ನವರನ್ನೂ ಆಕೆ ತೃಪ್ತಿಪಡಿಸಬೇಕಾಗುತ್ತದೆ. ಈ ವ್ಯೂಹದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಆತ್ಮಹತ್ಯೆಗೆ ಶರಣಾಗುತ್ತಾಳೆ.

ಅನುಭವ ಪಡೆಯುವ ಮತ್ತು ಸ್ವೀಕರಿಸುವ ವಿಧಾನಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ರೋಜಿ ವಾಸ್ತವವನ್ನು ಇಡಿಯಾಗಿ ತಿರಸ್ಕರಿಸಿ ಚರಸ್ ಸೇವಿಸುವ ಮೂಲಕ ಮನೋವ್ಯಾಧಿಗೆ ಒಳಗಾಗುವುದು, ಆತ್ಮಹತ್ಯೆ ಮಾಡಿಕೊಳ್ಳುವುದು ಮತ್ತು ಇದನ್ನೇ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಎಂದು ಭಾವಿಸುವುದು ಕಂಡು ಬರುತ್ತದೆ. ಕುಟುಂಬದ ವಿಚ್ಛಿದ್ರ ಪರಿಸ್ಥಿತಿ, ಒತ್ತಡಗಳು ರೋಸಿಯನ್ನು ಚರಸ್ಸಿಯಾಗಿ ಮಾರ್ಪಡಿಸುವಲ್ಲಿ, ಆತ್ಮಹತ್ಯೆಗೆ ಒಳಪಡಿಸುವಲ್ಲಿ ಮುಖ್ಯ ಕಾರಣವಾಗುತ್ತದೆ. ಇದು ಅವಳೇ ಅರ್ಥಮಾಡಿಕೊಂಡ ಪರಿಸ್ಥಿತಿ. ಅದಿತಿಯೊಂದಿಗೆ ಹೇಳಿಕೊಳ್ಳುವ ಅವಳ ಮಾತುಗಳಲ್ಲಿ ಇದು ಪ್ರಕಟಗೊಳ್ಳುತ್ತದೆ;

> "ಅದಿತಿ ನಿನ್ನ ಜನ್ಮಕ್ಕೆ ಕಾರಣವಾದ ರೇತಸ್ಸು ಸೀತಾ, ಸಾವಿತ್ರಿತನದ ಶಹಬಾಷ್‌ಗಿರಿ ಪಡೆದ ನಿನ್ನ ತಾಯಿಯಿಂದಲೇ ಪಡೆದುದು. ಆ ಲಕ್ಷ್ಮಣರೇಖೆ ನೀನೆಂದೂ ದಾಟಲಾರೆ. ಮತ್ತೆ ನಾನು ನನ್ನ ಆಲೋಚನೆಗಳೆಲ್ಲಾ ಕ್ರಿಶ್ಚಿಯನ್‌ದಾದರೂ ನನ್ನ ಜನ್ಮಕ್ಕೆ ಕಾರಣವಾದ ರೇತಸ್ಸು ನನ್ನ ತಂದೆಯದು. ತನ್ನ ಲೈಂಗಿಕ ತೃಷೆ ಅದರ ಒತ್ತಡಕ್ಕೆ ಅಸಹಾಯಕನಾಗಿದ್ದ ಅವನು ಮಗಳನ್ನು ಉಪಯೋಗಿಸಿದ. ಅವನದೇ ರೇತಸ್ಸು ನನ್ನಲ್ಲಿದ್ದು ಅದೇ ಬದುಕನ್ನು ನೇಯುತ್ತಿದೆ. ಆದ ಕಾರಣ ನನಗೆ ಇದರಿಂದ ಬಿಡುಗಡೆ ಇಲ್ಲ. ಒಂದು ರೀತಿಯಲ್ಲಿ ಎಲ್ಲರೂ ಇದರಿಂದ ತಾವು ಬಯಸದ ತಮ್ಮಲ್ಲಿದ್ದ ರೇತಸ್ಸಿನಿಂದ ತಪ್ಪಿಸಿಕೊಳ್ಳುವಂತಿಲ್ಲ. ಇದೇ ನಮ್ಮ ಗುಲಾಮಸ್ಥಿತಿ, ಸಾವಿನಿಂದಲೇ ಇದಕ್ಕೆ ಬಿಡುಗಡೆ." (ತಾರಾಭಟ್ ಕೆ. : ೧೯೯೪; ೧೪೪)

ಪತ್ಯದ ಒಳಗೆ ಮುಂಬೈಯಂಥ ಆಧುನಿಕ ಸಮಾಜದಲ್ಲಿ ಮನೆಯನ್ನು ಒಂದು ದ್ವೀಪದ ಪ್ರತೀಕವಾಗಿ ಚಿತ್ರಿಸಲಾಗಿದೆ. ಮುಚ್ಚಿದ ಬಾಗಿಲ ಒಳಗಡೆ ಬದುಕುವ ಜನರಿಗೆ ಸುತ್ತಮುತ್ತಲಿನ ಜೀವನ ಪರಿಸ್ಥಿತಿಗಳ ಅರಿವಿರುವುದಿಲ್ಲ. ಪರಸ್ಪರ ಹಂಚಿಕೊಂಡು ಅನುಸರಿಸಿಕೊಂಡು ಬದುಕುವ ಬಗ್ಗೆ ಅವರಿಗೆ ನಂಬಿಕೆ ಇರುವುದಿಲ್ಲ. ಇದರಿಂದಾಗಿ ಆಧುನಿಕ ಜೀವನವೆಂದರೆ, ಸೀಸೆಯಲ್ಲಿ ಬೆಳಸಿದ ಬೋನ್‌ಶಾಯಿ ಮರದಂತೆ ಎನಿಸುತ್ತದೆ. ಹೊರಗಿನ ಸಂಪರ್ಕವಿಲ್ಲದೆ, ತಮ್ಮನ್ನು ತಾವೇ ಬಂಧಿಸಿಕೊಂಡು ಬದುಕುವ ಕೌಟುಂಬಿಕ ಪರಿಸರದಲ್ಲಿ ಮಕ್ಕಳನ್ನು ಕಾಡುವ 'ಅನಾಥಪ್ರಜ್ಞೆ'ಗೆ ಸಾಕ್ಷಿಯಾಗಿ ಪತ್ಯದೊಳಗೆ ಅದಿತಿ ಮತ್ತು ರೋಸಿಯ ಬದುಕಿನ ಪಲ್ಲಟಗಳು, ತೀರ್ಮಾನಗಳು ಕಂಡು ಬರುತ್ತವೆ. ಆಧುನಿಕ ಔದ್ಯೋಗಿಕ ಕುಟುಂಬಗಳಲ್ಲಿ ವ್ಯಕ್ತಿಗಳ ಪರಿಸ್ಥಿತಿಯ ಒತ್ತಡದಿಂದಾಗಿ ಹೆಚ್ಚು ಸ್ವಾರ್ಥಿಗಳಾಗುತ್ತಾರೆ. ಅವರ ಪ್ರತಿಯೊಂದು ವರ್ತನೆಗಳು 'ತಾನು ಮತ್ತು ತನಗಾಗಿ' ಎಂಬ ತಳಹದಿಯ ಮೇಲೆ ನಿರ್ಧಾರಿತವಾಗುತ್ತದೆ. ಪ್ರತಿ ವ್ಯಕ್ತಿಗಳು ಈ ಪ್ರಪಂಚದ ಅನುಕೂಲತೆಗಳನ್ನು ಅವರ ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳುವ ಪ್ರಯತ್ನದಲ್ಲಿ ನಿರತರಾಗಿರುತ್ತಾರೆ. ಈ ಸ್ಥಿತಿ ಎಮಿಲಿ ಡರ್ಕ ಹೀಮ (Emile Durkheim) ಎನ್ನುವ ಸಮಾಜಶಾಸ್ತ್ರನ ದೃಷ್ಟಿಯಲ್ಲಿ ವ್ಯಕ್ತಿಗಳನ್ನು 'ಸಮಾಜ'ದಿಂದ ಬೇರ್ಪಡಿಸುವ ಸ್ಥಿತಿಯಾಗಿದೆ. •[೧೫] ಆಧುನಿಕ ಪೂರ್ವದ ಸಮಾಜಗಳಲ್ಲಿ ಧರ್ಮ ಮತ್ತು

ಕುಟುಂಬ ಹೇಗೆ ವ್ಯಕ್ತಿಗಳ ವರ್ತನೆಗೆ ಭದ್ರ ಬುನಾದಿಯನ್ನು ಒದಗಿಸುತ್ತಿದ್ದವೋ ಹಾಗೆ ಆಧುನಿಕೋತ್ತರ ಪರಿಸ್ಥಿತಿ ಉಳಿದಿಲ್ಲ. ವ್ಯಕ್ತಿಗಳು ಆತ್ಮ ಕೇಂದ್ರಿತ (Egoistic)ರಾಗಿರುವುದರಿಂದ ಕುಟುಂಬದಲ್ಲಿ ಹಾಗೂ ಹೊರಗಿನ ಸಮಾಜದಲ್ಲಿ ಸಮಾಧಾನ, ಸಹಾನುಭೂತಿ, ಪ್ರೇಮಗಳಿಂದ ಅವರು ದೂರವಾಗುವುದು ವ್ಯಕ್ತವಾಗುತ್ತದೆ. ಇದರೊಳಗೆ ವ್ಯಕ್ತಿಗಳ ಪೊಳ್ಳಿನ ಜೀವನದಿಂದ ಭ್ರಮನಿರಸನಗೊಂಡು ಆತ್ಮಹತ್ಯೆ ಅನಿವಾರ್ಯ ಮುಕ್ತಾಯ ಎಂದು ವ್ಯಕ್ತಿಗಳು ಭಾವಿಸುವುದು ಸಹಜ. ರೋಸಿಯ ಆತ್ಮಹತ್ಯೆ ಈ ನೆಲೆಯಿಂದ 'ಆತ್ಮಕೇಂದ್ರಿತ ಆತ್ಮಹತ್ಯೆ' (Egoistic suicide)ಯಾಗಿ ಕಂಡು ಬರುತ್ತದೆ.

**೫.೩. ಕೂಡುಕಟ್ಟಿನ ಕಾದಂಬರಿಗಳು :**

ಅನನ್ಯ ಸಾಂಸ್ಕೃತಿಕ ನೆಲೆಯ ಕೂಡುಕಟ್ಟಿನ ಕಾದಂಬರಿಗಳಾಗಿ ಚಂಪಾವತಿ ಎಚ್.ಎಸ್ ಅವರ **ಶಿವಗಂಗಾ** (೧೯೯೭) ಕೃತಿಯನ್ನು ಹಾಗೂ ಉಮಾರಾವ್ ಅವರ **ನೂರುಸ್ವರ** (೨೦೦೦) ಕೃತಿಯನ್ನು ಪರಿಭಾವಿಸಲಾಗಿದೆ. ಈ ಕೂಡುಕಟ್ಟಿನ ಕಾದಂಬರಿಗಳ ಕೇಂದ್ರೀಯ ನಿರ್ವಚನವೇ ವ್ಯಕ್ತಿಗಳು ಸ್ತ್ರೀಯರಾಗಲಿ, ಪುರುಷರಾಗಲಿ ತಮ್ಮ ಅಸ್ತಿತ್ವದ ಕೇಂದ್ರಗಳಿಂದ ಪರಸ್ಪರ ವಿಚಾರ ಸಂವಹನ ನಡೆಸಿದಾಗ ಮಾತ್ರ ಪರಸ್ಪರ ಪ್ರೀತಿಸುವುದು ಸಾಧ್ಯ ಎಂಬುದಾಗಿದೆ. ವ್ಯಕ್ತಿಗಳು ಅವರವರ ಸಮಗ್ರತೆಯನ್ನು 'ಅಸ್ತಿತ್ವ'ದ ಕೇಂದ್ರದಿಂದಲೇ ಅನುಭವಿಸ ತೊಡಗುವುದು ವ್ಯಕ್ತವಾಗುತ್ತದೆ. ಎಂದರೆ, ಸ್ತ್ರೀ- ಪುರುಷರ ಅಸ್ತಿತ್ವದ ಇರುವಿಕೆಯ ಕೇಂದ್ರ ಮೂಲ ಅನುಭವಗಳಲ್ಲಿ ಮಾತ್ರ ಆಯಾ ವ್ಯಕ್ತಿಗಳ ಬದುಕಿನ ವಾಸ್ತವತೆ ಅಡಗಿರುತ್ತದೆ. ಮತ್ತು ಅದರಲ್ಲಿ ಜೀವಂತಿಕೆ ಇರುತ್ತದೆ. ಎಲ್ಲೆಲ್ಲಿ ಜೀವಂತಿಕೆ ಇರುತ್ತದೋ ಅಲ್ಲಿ ಮಾತ್ರ ಪ್ರೀತಿಯ ತಳಹದಿಯ ಮೇಲೆ ಅನುಭವಗಳು 'ಹಿತಕರ'ವಾಗಿ, ಆರೋಗ್ಯಪೂರ್ಣವಾಗಿ ರೂಪಿತಗೊಳ್ಳುತ್ತಿರುತ್ತವೆ. ಹೀಗೆ ಪರಿಭಾವಿಸಿಕೊಂಡು ಅನುಭವಿಸಲಾಗುವ ಸ್ತ್ರೀ-ಪುರುಷರ ವಿವಾಹ ಸಂಬಂಧ ಒಂದು ನಿರಂತರ ಸವಾಲು. ಅದು ವಿಶ್ರಾಂತಿಯ ನಿಲುಗಡೆಯ ತಾಣವಲ್ಲ. ಈ ನೆಲೆಯಲ್ಲಿ ಕೂಡುಕಟ್ಟಿನ ಕಾದಂಬರಿಗಳ ಕೌಟುಂಬಿಕ ಮೂಲದ ಸ್ತ್ರೀ - ಪುರುಷರ ದಾಂಪತ್ಯ ಪ್ರೀತಿಯೆಂದರೆ ಒಟ್ಟಾಗಿ ಚಲಿಸುವುದು, ಒಟ್ಟಾಗಿ ಬೆಳೆಯುವುದು, ಒಟ್ಟಾಗಿ ಕೆಲಸ ಮಾಡುವುದು. ಸಂಘರ್ಷ, ಸಾಮರಸ್ಯ, ಸುಖ, ದುಃಖ ಇವುಗಳ ಪ್ರಶ್ನೆ ಇಲ್ಲಿ ಮುಖ್ಯವಲ್ಲ. ಸ್ತ್ರೀ - ಪುರುಷರು ತಮ್ಮ ವ್ಯಕ್ತಿತ್ವಗಳ ಕೇಂದ್ರಗಳಿಂದ ಪರಸ್ಪರರನ್ನು ಅನುಭವಿಸುತ್ತಿದ್ದಾರೆನ್ನುವುದು ಮುಖ್ಯವಾಗುತ್ತದೆ. ಅವರು ಪರಸ್ಪರ ಐಕ್ಯತೆಯನ್ನು ಸಾಧಿಸಿಕೊಳ್ಳುವುದು ಮುಖ್ಯವಾಗುತ್ತದೆ. ಈ ಸಾಧನೆಯು 'ಸ್ವ'ದಿಂದ ಪಲಾಯನ ಮಾಡುವುದರಿಂದ ಪ್ರಾಪ್ತವಾಗುವುದಿಲ್ಲ. 'ಸ್ವ'ದ ಅಸ್ತಿತ್ವದೊಂದಿಗೆ ಬೆರೆತು ಹೋಗುವುದರಿಂದ ಅದು ಸಾಧ್ಯವಾಗುತ್ತದೆ. ತನ್ನತನವನ್ನು ಕಳೆದುಕೊಳ್ಳುವುದರಿಂದ ಅಲ್ಲ. ಕಂಡುಕೊಳ್ಳುವುದರಿಂದ ಮಾತ್ರ ಸಾಧ್ಯ ಎಂಬ ನೆಲೆ ಇಲ್ಲಿ ಹೆಚ್ಚು ಮುಖ್ಯವಾಗುವ ಅಂಶವಾಗಿದೆ. ಸ್ತ್ರೀ - ಪುರುಷರ ನಡುವಿನ ಇಂತಹ ಅನನ್ಯ ಪ್ರೀತಿಯ ಅಸ್ತಿತ್ವಕ್ಕೆ ಒಂದೇ ಒಂದು ಸಾಕ್ಷಿ ಎಂದರೆ, 'ಸಂಬಂಧದ ಆಳ ಮತ್ತು ಆ ವ್ಯಕ್ತಿಗಳಲ್ಲಿ ಕಂಡು ಬರುತ್ತಿರುವ ಶಕ್ತಿ ಮತ್ತು ಜೀವಂತತೆ'. ವ್ಯಕ್ತಿಗಳ ಪ್ರತಿಯೊಂದು ಚಟುವಟಿಕೆ ಕೂಡಾ ಆರ್ಥಿಕ ಗುರಿಗಳಿಂದ ನಿರ್ದೇಶಿತವಾಗಿರುವುದರಿಂದ ಸಮಾಜದಲ್ಲಿ ವಸ್ತುಗಳ ಉತ್ಪಾದನೆ ಮತ್ತು ವಿತರಣೆಗಳು ತಮ್ಮಷ್ಟಕ್ಕೆ ತಾವೇ ಗುರಿಗಳಾಗಿ ಬಿಡುತ್ತವೆ. ಜಾಗತೀಕರಣದ ಸಂದರ್ಭವೆಂಬುದು ವ್ಯಕ್ತಿಗಳನ್ನು ಪೂರ್ಣ ಪ್ರಮಾಣದ ಯಂತ್ರಗಳಾಗಿ ಮಾರ್ಪಡಿಸಿರುವಲ್ಲಿ ಸಫಲವಾಗಿವೆ. ವ್ಯಕ್ತಿಗಳ ಆಹಾರ ಉಡುಪುಗಳಿಗೆ ಕೊರತೆ ಇಲ್ಲವೆಂಬಂತೆ ಪ್ರಚಾರ ಮಾಧ್ಯಮಗಳು ಜನರ ಅಂತರಂಗಿಕ

ಪ್ರೇರಣೆಗಳನ್ನು ನಿಯಂತ್ರಿಸಿವೆ. ಆದರೆ ಸಮಾಜದಲ್ಲಿ ವ್ಯಕ್ತಿ ವಿಶಿಷ್ಟವಾದ ಸ್ವಭಾವಗಳಿಗೆ ಮತ್ತು ಕರ್ತವ್ಯಗಳ ಬಗೆಗೆ ಯಾವ ರೀತಿಯ ತೀವ್ರ ಕಾಳಜಿಯೂ ಅಭಿವ್ಯಕ್ತಗೊಳ್ಳುವುದಿಲ್ಲ. ಸ್ತ್ರೀ-ಪುರುಷರು ಪರಸ್ಪರ ಸಮರ್ಥರಾಗಬೇಕಾದರೆ, ಅವರಿಬ್ಬರಿಗೂ ಅರ್ಥವ್ಯವಸ್ಥೆಯ ಒಳಗೆ ಸಮಾನ ಸ್ಥಾನ ಸಿಗಬೇಕಾಗುತ್ತದೆ. ಆಗ ಅರ್ಥವ್ಯವಸ್ಥೆಯ ಯಂತ್ರಗಳು ವ್ಯಕ್ತಿಗಳನ್ನು ನಿಯಂತ್ರಿಸುವ ಬದಲು ವ್ಯಕ್ತಿಗಳೇ ಅವುಗಳನ್ನು ನಿಯಂತ್ರಿಸುವಂತಾಗುತ್ತದೆ. ಇತರರೊಂದಿಗೆ ಕೇವಲ ಲಾಭದಲ್ಲಿ ಪಾಲುಗಾರರಾಗುವುದು ಮಾತ್ರವಲ್ಲದೆ, ಅನುಭವ ಮತ್ತು ಕೆಲಸಗಳನ್ನು ಹಂಚಿಕೊಳ್ಳುವ ಅವಕಾಶ ಸಿಗುತ್ತದೆ. ಹೀಗೆ ಪರಿವರ್ತನೆಗೊಳ್ಳಬೇಕಾದರೆ, ವ್ಯಕ್ತಿಗಳ ಸಾಮಾಜಿಕ, ಕೌಟುಂಬಿಕ ವಾತ್ಸಲ್ಯಪೂರ್ಣ ಸ್ವಭಾವಗಳಿಗೂ, ಅವರ ಸಾಮಾಜಿಕ ಅಸ್ತಿತ್ವಕ್ಕೂ ಅಂತರ ಏರ್ಪಡದೆ ಅವೆರಡೂ ಒಂದಾಗುವಂತೆ ಸಮಾಜ ರಚನೆ ಮಾರ್ಪಡಬೇಕಾಗುತ್ತದೆ. ವ್ಯಕ್ತಿ ಸಂಬಂಧಗಳ ಭಾವನಾತ್ಮಕ ಬೆಳವಣಿಕೆಗಳನ್ನು ನಿರ್ಲಕ್ಷಿಸುವ ಸಮಾಜಗಳು, ವ್ಯಕ್ತಿಗಳ ಮೂಲಭೂತ ಸ್ವಭಾವಕ್ಕೆ ವ್ಯತಿರಿಕ್ತವಾಗಿಯೇ ಕಾರ್ಯಪ್ರವೃತ್ತಗೊಳ್ಳುತ್ತಿರುತ್ತವೆ. ಈ ನೆಲೆಯಲ್ಲಿ ಜಾಗತೀಕರಣದ ಸಾಮಾಜಿಕ ಸಂದರ್ಭವು ಅದರ ಅಂತರ್ ರಚನೆಯಲ್ಲಿ ಬದಲಾವಣೆಗೆ ಒಳಪಡುವುದು ಅನಿವಾರ್ಯವಾಗುತ್ತದೆ ಎನ್ನುವ ಮೂಲ ಆಶಯ ಅನನ್ಯ ಸಾಂಸ್ಕೃತಿಕ ನೆಲೆಯ ಕೂಡುಕಟ್ಟಿನ ಕಾದಂಬರಿಗಳಲ್ಲಿ ಎದ್ದು ಕಾಣುವ ಅಂಶವಾಗಿದೆ.

### ೫.೩.೧ ಕೂಡುಕಟ್ಟಿನ ಕಾದಂಬರಿಗಳು: ವಿವಾಹದ ಸ್ವರೂಪ.

**ಚಂಪಾವತಿಯವರ ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ವಿವಾಹದ ಸ್ವರೂಪ:**

ಸ್ತ್ರೀ- ಪುರುಷರ ಸಂಬಂಧಗಳ ಆಕಾಂಕ್ಷೆಯನ್ನು ಲೈಂಗಿಕ ಹಾಗೂ ಲೈಂಗಿಕೇತರ ವಿಭಿನ್ನ ಆಯಾಮಗಳಲ್ಲಿ ಮರುಕಲ್ಪಿಸುವ ನೆಲೆಯಿಂದ ಚಂಪಾವತಿಯವರ **ಶಿವಗಂಗಾ**(೧೯೯೭) ಪ್ರಾರಂಭವಾಗುತ್ತದೆ. ಆ ಮೂಲಕ 'ವಿವಾಹ'ದಂತಹ ಸಾಂಸ್ಥಿಕ ಸಂಬಂಧಗಳ ಅರ್ಥ ವಿಶ್ಲೇಷಣೆಯು ಸಮಕಾಲೀನ ಬಂಡವಾಳಶಾಹಿ ಸಮಾಜದ ಅನಿವಾರ್ಯತೆಯಾಗಿ ಕೃತಿಯಲ್ಲಿ ಮೂಡಿದೆ. ಸಾಂಪ್ರದಾಯಿಕ ವಿವಾಹ ಮತ್ತು ಪರಸ್ಪರ ಒಪ್ಪಿತ ವಿವಾಹ ಈ ಎರಡು ಮಾದರಿಗಳನ್ನು ಅನುಸಂದಾನಗೊಳಿಸುವ ಹಿನ್ನೆಲೆಯಲ್ಲಿ ಕಥಾ ನಾಯಕಿ ಗಂಗಾಳ ತಾಯಿಯ ವಿವಾಹ, ಹಾಗೂ ಗಂಗಾ ತನ್ನ ಸ್ವ -ಇಚ್ಛೆಯಿಂದ ಮಾಡಿಕೊಳ್ಳುವ ವಿವಾಹ ಈ ಎರಡು ವಿಭಿನ್ನ ಮಾದರಿಗಳನ್ನು ಆತ್ಯಂತಿಕ (Coor level) ನೆಲೆಯಿಂದ ಮುಖಾ ಮುಖಿಗೊಳಿಸಲಾಗಿದೆ.

ಹೊನ್ನೇಕೆರೆಯಂತಹ ಹಳ್ಳಿಯಲ್ಲಿ ಬದುಕುವ, ವಿದ್ಯಾಭ್ಯಾಸದ ಸಂಸ್ಕಾರಗಳಿಗೆ ಒಳಗಾಗದ, ಪರಾವಲಂಬಿ ವ್ಯಕ್ತಿತ್ವದ ಗಂಗಾಳ ತಾಯಿಯು ತನ್ನ ಇಚ್ಛೆಗೆ ವಿರುದ್ಧವಾಗಿ ಹಿರಿಯರು ನಿಶ್ಚಯಿಸಿದ ವಿವಾಹಕ್ಕೆ ಸಮ್ಮತಿಸೂಚಿಸ ಬೇಕಾಗುತ್ತದೆ. ವಿವಾಹ ಕೊಡಮಾಡಿದ ಗಂಡ ಮತ್ತು ಇಬ್ಬರು ಮಕ್ಕಳೊಂದಿಗಿನ ಆಕೆಯ ಬದುಕಿನಲ್ಲಿ ಮೂಲದಲ್ಲಿದ್ದ ಏಕಾಂಗಿತನದ ತೀವ್ರತೆಯು ಮನೋವಿಕಲ್ಪತೆಗೆ ಕಾರಣವಾಗುತ್ತದೆ. ತಾಯಿಯ ಬದುಕಿನ ದೌರ್ಬಲ್ಯಗಳನ್ನು ಮೀರುವ ತಳಹದಿಯಿಂದ ಗಂಗಾಳ ವ್ಯಕ್ತಿತ್ವವು ರೂಪುಗೊಳ್ಳುತ್ತದೆ. ವ್ಯಕ್ತಿತ್ವದ ಪರಿಪೂರ್ಣತೆಯ ಹಿನ್ನೆಲೆಯಲ್ಲಿ ಪ್ರಧಾನವಾಗುವ ಅಂಶಗಳೆಂದರೆ;

೧)ಹಳ್ಳಿಯನ್ನು ತ್ಯಜಿಸಿ ನಗರ ಮುಖಿಯಾಗುವುದು ಮತ್ತು ಸ್ನಾತಕೋತ್ತರ ಶಿಕ್ಷಣದಿಂದ ಪರಿಷ್ಕರಣಕ್ಕೆ ಒಳಗಾಗುವುದು.

೨) ಸ್ತ್ರೀ ಮುಕ್ತಿ ಸಂಘಟನೆಯ ಮೂಲಕ ಸಮಾಜದ ಸ್ತ್ರೀ ಶೋಷಣೆಯ ಕುರಿತು ಜಾಗೃತಗೊಳ್ಳುವುದು.

೩) ಶಿಕ್ಷಣದ ಭಾಗವಾಗಿ ಸ್ಕಾಲರ್‌ಶಿಪ್ ಮೂಲಕ ಮಹಿಳಾ ಅಧ್ಯಯನದ ಅವಕಾಶಗಳಿಂದ ಬಹುಮುಖ ವ್ಯಾಪಕತೆಯನ್ನು ಸಾಧಿಸಿಕೊಳ್ಳುವುದು.

ಇದರಿಂದ ಸ್ತ್ರೀಯ ಬದುಕಿನ ಆಯ್ಕೆಯ ಸಮಸ್ತ ಅವಕಾಶಗಳನ್ನು ಒಂದರ್ಥದಲ್ಲಿ ಸಾಧಿಸಿಕೊಳ್ಳುವ ಗಂಗಾ ಬಂಡವಾಳಶಾಹಿ ಇಂಡಿಯಾದ ಸಮಾಜದಲ್ಲಿ ಪರಿಪೂರ್ಣ ವ್ಯಕ್ತಿತ್ವವೊಂದನ್ನು ಹೊಂದಿರುವ ಸ್ತ್ರೀ ಪ್ರತಿನಿಧಿಯಾಗಿ ಆರಂಭದಲ್ಲಿ ಕಂಡು ಬರುತ್ತಾಳೆ. ಇವಳು ಸ್ವಂತಿಕೆಯಿಂದ ಬದುಕನ್ನು ರೂಪಿಸಿಕೊಳ್ಳುವ ಪ್ರಬಲ ಇಚ್ಛೆ, ಆಕಾಂಕ್ಷೆ ಇರುವ ಹೆಣ್ಣು. ಗಂಡು - ಹೆಣ್ಣಿನ ನಡುವೆ ಏರ್ಪಡುವ ಸಂಬಂಧವು ಆದರ್ಶ ಸಂಬಂಧವಾಗಿರಬೇಕೆಂದು ಬಯಸುವ ಅಲ್ಲದೆ, ವ್ಯಕ್ತಿಗಳ ಜೊತೆ ಸಂಬಂಧ ಬೆಳೆಸುವಾಗಲೂ ಅವಳ ಬದುಕಿನ ಚೌಕಟ್ಟಿಗೆ ಹೊಂದಿಕೆಯಾಗುವ ವ್ಯಕ್ತಿಯನ್ನು ಅನ್ವೇಷಿಸುವ ಮೂಲ ಪ್ರವೃತ್ತಿಯನ್ನು ಹೊಂದಿರುವವಳು. ವಿದೇಶದಲ್ಲಿ ಪರಿಚಯವಾಗುವ, ತನಗಿಂತಲೂ ಮೂರು ವರ್ಷಕ್ಕೆ ಚಿಕ್ಕವನಾದ ಭಾರತೀಯ ಗುಜರಾತಿ ಹುಡುಗ ರಮೇಶ್‌ನನ್ನು ಗಂಗಾ ವಿವಾಹವಾಗುವ ನಿರ್ಧಾರ ಕೈಗೊಳ್ಳುತ್ತಾಳೆ. ಹಾಲೆಂಡಿನ ವಸ್ತು ಪ್ರಪಂಚದ ಸುಖಕ್ಕಿಂತ ಗಂಗಾಳ ಸ್ನೇಹದಲ್ಲಿ ಮಮತೆಯ ಮಾರ್ದವತೆಯನ್ನು ಕಂಡುಕೊಂಡ ಇಪ್ಪತ್ನಾಲ್ಕು ವರ್ಷದ ರಮೇಶ ಅವಲಂಬಿತ ಅಥವಾ ಶರಣಾಗತ ವ್ಯಕ್ತಿತ್ವದವನಾಗಿರುತ್ತಾನೆ. ಸ್ವಭಾವತಃ ಅಂತರ್‌ಮುಖಿಯಾಗಿರುವ ಆತನಲ್ಲಿರುವ ಸ್ತ್ರೀ ಸಹಜ ಸ್ವಭಾವವಾದ ಶರಣಾಗತಿ (Masochism) ಗಂಗಾಳನ್ನು ಆಕರ್ಷಿಸುತ್ತದೆ. ಅಲ್ಲದೆ, ಭದ್ರತೆಯ ಭರವಸೆಯನ್ನು ಮೂಡಿಸುತ್ತದೆ. ವಿದೇಶಿ ವಿದ್ಯಾಭ್ಯಾಸ ಮುಗಿಸಿ ಭಾರತಕ್ಕೆ ಹಿಂದುರುಗುವ ಅವರು ಸರಳವಾಗಿ ಸರಕಾರಿ ಕಛೇರಿಯಲ್ಲಿ ರಿಜಿಸ್ಟರ್ ಮದುವೆ ಮಾಡಿಕೊಳ್ಳುತ್ತಾರೆ. ಇಲ್ಲಿ ರಮೇಶನ ಮನೆಯವರ ಅಸಮ್ಮತಿ, ಅಸಹಕಾರ ಇವರ ವಿವಾಹಕ್ಕೆ ದೊಡ್ಡ ಅಡ್ಡಿಯನ್ನು ಉಂಟುಮಾಡುವುದಿಲ್ಲ. ಬಂಡವಾಳಶಾಹಿ ಸಮಾಜವೊಂದರಲ್ಲಿ ವಿವಾಹವೆಂಬುದು ಹೇಗೆ ವಿವಾಹವಾಗುವ ಗಂಡು- ಹೆಣ್ಣಿಗೆ ಮಾತ್ರ ಸಂಬಂಧಿಸಿದ ವಿಚಾರ ಎಂಬುದನ್ನು ಇದು ಸೂಚಿಸುತ್ತದೆ. ಮಗ ಆತನ ಅಕ್ಕ- ತಂಗಿಯರ ವಿವಾಹ ಜವಾಬ್ದಾರಿ ಕರ್ತವ್ಯಗಳಿಂದ ಜಾರಿಕೊಳ್ಳುತ್ತಿದ್ದಾನೆ ಎನ್ನುವ ಆತಂಕವಷ್ಟೇ ರಮೇಶನ ಹೆತ್ತವರನ್ನು ಭಾದಿಸುತ್ತದೆ. ಗಂಗಾಳ ಸಂದರ್ಭದಲ್ಲಿ ಅವಿವಾಹಿತೆಯಾಗಿಯೇ ಉಳಿಯಲು ನಿಶ್ಚಯಿಸಿದ ಮಗಳು ವಿವಾಹವಾಗುತ್ತಾಳಲ್ಲ ಎನ್ನುವ ಸಾಂತ್ವಾನದ ಅಂಶ ಅವಳನ್ನು ಹೆತ್ತವರಿಗೆ ಮುಖ್ಯವಾಗುತ್ತದೆ. ಈ ಅರ್ಥದಲ್ಲಿ ಅಂತರ್‌ಜಾತಿಯ ಅಥವಾ ಅಂತರ್ ಪ್ರಾಂತೀಯ ವಿವಾಹದ ಸಂಘರ್ಷ ಇಲ್ಲಿ ಸಮಸ್ಯೆಯಾಗಿ ಕಾಡುವುದೇ ಇಲ್ಲ. ಬದಲಾಗಿ ವಿವಾಹ ಪೂರ್ವದ ಲೈಂಗಿಕ ಸಂಬಂಧವನ್ನು ಕುರಿತ ಗಾಢ ವಿಶ್ಲೇಷಣೆ ಗಂಗಾಳ ಮಾನಸಿಕ ತಳಹದಿಯಲ್ಲಿ ಪ್ರಕಟಗೊಳ್ಳುತ್ತದೆ.

ವಿವಾಹ ಪೂರ್ವದ ಭಗ್ನ ಪ್ರೇಮದಿಂದಾಗಿ ರವಿಯ ಜೊತೆಗಿನ ಸಂಸಾರ ಕಟ್ಟುವ ಗಂಗಾಳ ಕನಸು ಮುರಿದು ಬೀಳುತ್ತದೆ. ನಂತರದಲ್ಲಿ ಪರಿಚಿತರಾಗುವ ಮಾರ್ಕ್ಸ್‌ವಾದಿ ಸ್ನೇಹಿತರಾದ ಬಾಬು, ವೆಂಕಟೇಶ, ಕಾಲೇಜಿನ ಸಹವಿದ್ಯಾರ್ಥಿ ಸದಾಶಿವ ಕೊನೆಯಲ್ಲಿ ಪರಿಚಿತನಾಗುವ ಮಾರ್ಕ್ಸ್‌ವಾದಿ ಇಂದ್ರಜಿತ್ ಇವರೆಲ್ಲರ ಜೊತೆ ಲೈಂಗಿಕ ಸಂಬಂಧವನ್ನು ಆಯಾ ಸಂದರ್ಭಗಳಲ್ಲಿ ಈಕೆ ಪಡೆದುಕೊಂಡವಳಾಗಿರುತ್ತಾಳೆ. (ಕಾಮವನ್ನು ಬದುಕಿನಲ್ಲಿ 'ಸರಳರೇಖೆ'ಯ ಮೇಲೆ ಇಟ್ಟು ನೋಡುವ, ವ್ಯಕ್ತಿತ್ವದ ಅಭಿಮಾನದ ಮೂಲದಲ್ಲಿ ಗ್ರಹಿಸುವ ಸಲುವಾಗಿ ಅಥವಾ ಸಾರ್ವಜನಿಕವಾಗಿ ಹೆಸರಿರುವ ವ್ಯಕ್ತಿಯ ಜೊತೆ ತನಗೆ ಸಂಬಂಧವಿದೆ ಎನ್ನುವ ಲಾಲಸೆಯಲ್ಲಿ ವಿವಾಹ ಪೂರ್ವ ಕಾಮವನ್ನು ಒಪ್ಪಿಕೊಳ್ಳುತ್ತಾಳೋ ಎನ್ನುವ ಗೊಂದಲ ಗಂಗಾಳ ಒಳಗೆ ಕಾಡುವ ವಿಚಾರವಾಗಿದೆ.) ಆದರೆ ಆಕೆ ವಿವಾಹ ಪೂರ್ವದ ಲೈಂಗಿಕತೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು

ವಿಫಲಳಾಗುವುದು ಕಂಡು ಬರುತ್ತದೆ. ಅಂದರೆ, ಯಾವ ಸಂಬಂಧಗಳೂ ಆಕೆಯಲ್ಲಿ 'ನಂಬಿಕೆ'ಯ 'ಭದ್ರತೆ'ಯ ಬೇರುಗಳನ್ನು ಹುಟ್ಟುಹಾಕುವುದಿಲ್ಲ. ಇಂದ್ರಜಿತ್‌ನೊಂದಿಗಿನ ಸಂಬಂಧದ ಜಿಜ್ಞಾಸೆಯಲ್ಲಿ ಇದು ನಿಖರವಾಗಿ ವ್ಯಕ್ತವಾಗುತ್ತದೆ.

> "'ನೀನು ನಿನ್ನ ಬರಹಗಳಲ್ಲಿ ಹಾಗೂ ಸಂಬಂಧಗಳಲ್ಲಿ ಸೆಕ್ಸ್‌ನ ರಾಜಕೀಯ ಮುಖದ ಮೇಲೆಯೇ ಒತ್ತು ಹಾಕುತ್ತೀಯ'ಎನ್ನುತ್ತಾನೆ. 'ಮತ್ತೇನು ಮಾಡಲಿ' ಎಂದು ಗಂಗಾ ಅಸಹಾಯಕಳಂತೆ ಕೇಳುತ್ತಾಳೆ. 'ಯಾವ ಮುಖದ ಹಿನ್ನೆಲೆಯಲ್ಲಿ ಈ ಸಂಸ್ಕೃತಿಯಲ್ಲಿ ಗಂಡು-ಹೆಣ್ಣಿನ ಸಂಬಂಧ ನಿರ್ಧಾರವಾಗಿದೆ! ಕೌಟುಂಬಿಕ ಚೌಕಟ್ಟಿನೊಳಗಡೆ ಗಂಡು- ಹೆಣ್ಣಿನ - ಗಂಡ ಹೆಂಡತಿ ಸಂಬಂಧ ಹೇಗೆ ಯಾಂತ್ರಿಕವಾಗಿ ಬಿಡುತ್ತದೆ.? ಮನೆಗೆಲಸ, ಮಗುವನ್ನು/ ಲಾಲಿಸುವ, ಪಾಲಿಸುವ ಕೆಲಸಗಳು ಹೆಂಗಸಲ್ಲಿ ಅಸಹಾಯಕತೆ ಹುಟ್ಟುಹಾಕುವುದಿಲ್ಲವೇ? ಯಾವ ರೀತಿಯ ಕೌಟುಂಬಿಕ ಚೌಕಟ್ಟು ಹೆಂಗಸಿನ ಬದುಕನ್ನು ಅರಳಲು ಬಿಡುತ್ತದೆ? ಹೀಗೆಯೇ ಸಿಟ್ಟಿನಿಂದಲೇ ಮಾತನಾಡುತ್ತಲೇ ಇಂದ್ರಜಿತ್ ಬಳಿ ಹೇಳುತ್ತಾಳೆ. ನಿಮ್ಮಂತಹವರ ಸಂಬಂಧಗಳಿಗೆ ಮುಖ ತಿರುಗಿಸುವುದೂ ಕಷ್ಟ ಇಂದ್ರಜಿತ್. ಏಕೆಂದರೆ ಸಂಸ್ಕೃತಿಯಲ್ಲಿ ಇರುವವರು ನೀವುಗಳೇ. ಬಿಟ್ಟು ಬಿಡುತೀವಿ ಅಂದ್ರೂ ಈ ಸಂಸ್ಕೃತಿಯ ಪ್ರವಾಹದಲ್ಲಿ ನಿಮ್ಮಂತಹವರನ್ನೇ ನಾನು ಭೇಟಿಯಾಗಬೇಕಾಗುತ್ತೆ. ನಾವು ಯಾವುದೋ ಮೂಲೆಯಲ್ಲಿ ಕುಳಿತು ಈ ಸಂಸ್ಕೃತಿ ಬಗ್ಗೆ ಮಾತನಾಡೋಕೆ ಆಗೋಲ್ಲ. ನಿಮ್ಮಂತಹವರ ಜೊತೆ ಮುಖಾಮುಖಿಯಾಗುವುದೇ ನಮಗೆ ಅನಿವಾರ್ಯ ಚಾರಿತ್ರಿಕ ಸತ್ಯ ಆಗುತ್ತೆ. ಮುಖಾಮುಖಿಯಾಗೋಲ್ಲ ಅಂದ್ರೂ ರಾಜಕೀಯ, ಸಾಂಸ್ಕೃತಿಕ ಒತ್ತಡಗಳು ಮುಖಾಮುಖಿಯಾಗೋದನ್ನ ಅನಿವಾರ್ಯ ಸತ್ಯವಾಗಿಸುತ್ತೆ." (ಚಂಪಾವತಿ.ಎಚ್.ಎಸ್: ೧೯೯೭; ೩೧)

ಗಂಗಾ ತನ್ನ ಸಂಸರ್ಗಕ್ಕೆ ಒಳಗಾದ ಗಂಡಿನ ಸಂಬಂಧದ ಜೊತೆ 'ಶೋಧನಾತ್ಮಕವಾಗಿ ಸ್ತ್ರೀತನವನ್ನು (womanhood) ಒಳಗು ಮಾಡಿಕೊಳ್ಳುವುದರ ಫಲವಾಗಿ, ಪ್ರತಿಬಾರಿ ದೈಹಿಕವಾಗಿ ಗಂಡಸಿನ ಜೊತೆ ತೊಡಗಿಸಿಕೊಂಡಾಗ ಸಂಘರ್ಷಕ್ಕೆ ಒಳಗಾಗುವುದು ವ್ಯಕ್ತವಾಗುತ್ತದೆ. ಗಂಡು-ಹೆಣ್ಣಿನ ಸಂಬಂಧದಲ್ಲಿ ಇಂತಹ ಅರ್ಥವಂತಿಕೆಯನ್ನು ಹುಡುಕುವ ಹಾದಿಯಲ್ಲಿ ವಯಸ್ಸಿನಲ್ಲಿ ಕಿರಿಯವನಾದ, ಮುಗ್ಧ ಅಂತರ್‌ಮುಖಿ ಸಂವೇದನಾಶೀಲನಾದ ರಮೇಶನ ಜೊತೆಗಿನ ಲೈಂಗಿಕ ಅನುಭವ ಅವಳಿಗೆ ಭರವಸೆ ಮೂಡಿಸುತ್ತದೆ. ಸುಮಿತ್ರಾಬಾಯಿಯವರು ಗುರುತಿಸುವಂತೆ,

> "ರವಿಯಲ್ಲಿ ನಿರೀಕ್ಷಿಸಿ, ದಕ್ಕದೆ ಹೋಗಿದ್ದದ್ದು ಪಿತೃ ಸಹಜ ರಕ್ಷಕಭಾವ, ಮಾತೃ ಸಹಜ ಅಂತಃಕರಣ ಹಾಗೂ ಗೆಳೆಯನಲ್ಲಿ ಸಾಧ್ಯವಾಗಬಹುದಾದ ಸಖ್ಯ- ಈ ಮೂರು ಮೇಳವಿಸಿರುವಂಥ ಒಬ್ಬ ಸಂಗಾತಿ. ಬದುಕಲ್ಲಿ ಬಹುಕಾಲ, ಬಹು ವಿಧ ವ್ಯಕ್ತಿಗಳೊಂದಿಗೆ ತೊಡಗಿಕೊಳ್ಳುತ್ತಲೇ ಈ ಹುಡುಕಾಟ ಕೈ ಬಿಡದ ಗಂಗಾ ಕೊನೆಗೆ ವಿದೇಶವೊಂದರಲ್ಲಿ ಕಲಿಯುತ್ತಿದ್ದ ಹೊತ್ತಲ್ಲಿ ತನ್ನದೇ ದೇಶದ ರಮೇಶನಲ್ಲಿ ತನ್ನ ಸಂಗಾತಿಯನ್ನು ಕಂಡುಕೊಳ್ಳುತ್ತಾಳೆ. ಈ ಸಂಬಂಧದ ವಾಸ್ತವ ಅವಳ ಬದುಕಿಡೀ ಜಿಜ್ಞಾಸೆಯೇ ಆಗಿ ಮುಂದುವರೆಯುತ್ತದೆ." (ಚಂಪಾವತಿ.ಎಚ್.ಎಸ್: ೧೯೯೭; IX)

ವಿವಾಹದ ನೆಲೆಯಲ್ಲಿ ಗಂಡು-ಹೆಣ್ಣಿನ ಸಂಬಂಧಗಳಿಗೆ ಮುಖಾಮುಖಿಗೊಳ್ಳುವ ಸಂದರ್ಭದಲ್ಲಿ ವಿರುದ್ಧ ಧ್ರುವೀಕರಣದ ಸಂಬಂಧವೆಂದರೆ, ವಿವಾಹದ ಚೌಕಟ್ಟಿನೊಳಗೆ ಮಂಡನೆಗೊಳ್ಳುವ ಹೆಣ್ಣು - ಹೆಣ್ಣಿನ ಸಂಬಂಧ. ಮಹಿಳೆ ಮತ್ತೊರ್ವ ಮಹಿಳೆಯನ್ನು ಪುರುಷನಿಗೆ ಪರ್ಯಾಯವಾಗಿ ರೂಪಿಸಿಕೊಂಡು ಬದುಕುವ ಲೆಸ್‌ಬಿಯನ್‌ರ ವಿವಾಹ ಜೀವನ ಹಾಲೆಂಡಿನಲ್ಲಿ ಗಂಗಾಳಿಗೆ ಪರಿಚಯವಾಗುತ್ತದೆ. ಲೆಸ್‌ಬಿಯನ್ ಎಂದು ಪರಿಚಿತಳಾಗುವ ಸಾಶಾ ಗಂಗಾಳ ಅಧ್ಯಾಪಕಿ. ೩೦- ೩೫ರ ಹರೆಯದ ಆರು ಅಡಿ ಎತ್ತರದ ಒರಟು ಧ್ವನಿಯ ಗಂಡು ನಿಲುವಿನ ಸಾಶಾ ಬದುಕುತ್ತಿದ್ದುದು ಒಂದು ಮಗುವಿದ್ದ ಹೆಂಗಸಿನೊಡನೆ. ಪಾಶ್ಚಾತ್ಯ ಜೀವನ ಕ್ರಮದಲ್ಲಿ ಸಾಮಾನ್ಯವೆಂಬಂತೆ ಪರಿಗಣಿತಗೊಂಡ ಲೆಸ್‌ಬಿಯನಿಸಂ ಬದುಕು ಭಾರತೀಯ ಸಂಸ್ಕೃತಿಯ ನೆಲೆಯಿಂದ ಸಂಪೂರ್ಣ ವಿರೋಧಾಭಾಸವಾಗುತ್ತದೆ. ಬಡತನ, ನಗರೀಕರಣ, ಆರ್ಥಿಕ ಬಿಕ್ಕಟ್ಟು ಇಂತಹ ಸಮಸ್ಯೆಗಳೊಂದಿಗೆ ತಳುಕು ಹಾಕಿಕೊಂಡಿರುವ ಮಹಿಳಾ ಸಮಸ್ಯೆಗಳಿಗೆ ಲೆಸ್‌ಬಿಯನಿಸಂವಾದ ಒಂದು ಪರ್ಯಾಯವಾಗಬಹುದೇ ಎಂಬ ಪ್ರಶ್ನೆ ಗಂಗಾಳ ಮೂಲಕ ಕೃತಿಯಲ್ಲಿ ಚರ್ಚೆಗೆ ಒಳಪಡುತ್ತದೆ. ಜಾತಿ, ವರ್ಗ ಬಡತನಗಳೊಂದಿಗೆ ಹೆಣೆದುಕೊಂಡಿರುವ ಭಾರತದ ಮಹಿಳೆಯರ ಸಮಸ್ಯೆಗಳಿಗೆ ಈ ವಿವಾಹ ಹತ್ತಿರ ಎನಿಸುವುದಿಲ್ಲ. ಭಾರತೀಯ ಸಮಾಜದಲ್ಲಿ ಅಕ್ಕ ತಂಗಿಯರೆಲ್ಲ ಇಪ್ಪತ್ತು, ಇಪ್ಪತ್ತೈದು ವರ್ಷ ಒಟ್ಟಿಗೆ ಬದುಕುತ್ತಾರೆ. ಹಾಸ್ಟೆಲ್‌ಗಳಲ್ಲಿ ಸ್ತ್ರೀಯರು ಒಟ್ಟಿಗೆ ಇರುತ್ತಾರೆ. ಪಾಶ್ಚಿಮಾತ್ಯ ರಾಷ್ಟ್ರಗಳಿಗಿಂತ ಹೆಚ್ಚು ಅರ್ಥಪೂರ್ಣವಾಗಿ ಸ್ಥಾಪಿತಗೊಳ್ಳುವ ಇಂಡಿಯಾದ ಹೆಣ್ಣಿನ ಕೌಟುಂಬಿಕ, ಸಾಮಾಜಿಕ ಸಂಬಂಧಗಳು ಮಹತ್ವ ಸಾಧಿಸುತ್ತವೆ. ಆದರೆ, ಈ ಸಂಸ್ಕೃತಿಯ ಮೂಲಭೂತ ವಿಧಿನಿಯಮಗಳಿಗೆ, ಸೃಷ್ಟಿಗೆ ವಿರೋಧವಾಗಿ ಪೂರ್ಣ ಚಳುವಳಿ ಕಟ್ಟಿಕೊಂಡ ಲೆಸ್‌ಬಿಯನಿಸಂ ವಿವಾಹ ಮಾದರಿ 'ಅತಿರೇಕ'ವಾಗಿ ಪ್ರಕಟಗೊಳ್ಳುತ್ತದೆ. ಇದಕ್ಕೆ ಇಂಡಿಯಾದ ಚಿಂತನಕ್ರಮವೇ ಕಾರಣವಾಗಿದೆ.

'ವಿವಾಹ'ದ ಚೌಕಟ್ಟಿಗೆ ಒಳಪಡದೆ ಗಂಡು-ಹೆಣ್ಣು ಒಟ್ಟಾಗಿ ಬದುಕುವ ಮೂರನೆಯ ಸಾಧ್ಯತೆಯನ್ನು ರೋಹಿಣಿ ಮತ್ತು ಥಾಂಸನ್ ಇವರ ಜೀವನದ ಮೂಲಕ ನೋಡುವ ಪ್ರಯತ್ನವೊಂದು ಪತ್ಯದೊಳಗೆ ಅನಾವರಣಗೊಳ್ಳುತ್ತದೆ. ಹತ್ತು ವರ್ಷ ಜೊತೆಯಲ್ಲಿ ಇದ್ದ ವ್ಯಕ್ತಿಯನ್ನು ರೋಹಿಣಿ ಅರ್ಥಮಾಡಿಕೊಂಡದನ್ನು ಗಂಗಾಳ ಜೊತೆ ಹಂಚಿಕೊಳ್ಳುವಲ್ಲಿ ಈ ಸಂಬಂಧದ ಸಾಧ್ಯಾ ಸಾಧ್ಯಾತೆಗಳು ವಿಮರ್ಶಿತಗೊಳ್ಳುತ್ತವೆ. ಈ ಸಂಬಂಧದ ಕುರಿತ ಹೆಚ್ಚಿನ ವಿವರವು ಪತ್ಯದೊಳಗೆ ದಾಂಪತ್ಯದ ಸ್ವರೂಪದ ಜಿಜ್ಞಾಸೆಯ ಒಳಗೆ ಕಾಣಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ವಿವಾಹವನ್ನು, ಅದರ ಚೌಕಟ್ಟನ್ನು ಮೀರಿದ ಮಾದರಿ ಇದಾಗಿ ಪತ್ಯದೊಳಗೆ ಅನಾವರಣಗೊಂಡಿದೆ.

ಇಂಡಿಯಾದ ಸಂದರ್ಭದಲ್ಲಿ ಗಂಡು-ಹೆಣ್ಣು ಪರಸ್ಪರ ವಿವಾಹಿತರಾಗದೆ ಒಟ್ಟಿಗೆ ಬದುಕುವುದು ಆಧುನಿಕ ಬಂಡವಾಳಶಾಹಿ ಸಮಾಜದಲ್ಲಿ ಮಾತ್ರ ಸಾಧ್ಯವಾಗಿದೆ. ಸಮಾಜ ಇಂತಹ ಸಂಬಂಧಗಳನ್ನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ ಎನ್ನುವುದು ಸತ್ಯದ ಒಂದು ಅಂಶ. ಉಳಿದಂತೆ ವಿವಾಹಿತರಾಗದ ಗಂಡು- ಹೆಣ್ಣು ಒಟ್ಟಿಗೆ ಜೀವನ ನಿರ್ವಹಿಸುವ ಸಂಬಂಧ ದೀರ್ಘವಾಗಿ ಉಳಿಯಲಾರದು. ಕೇವಲ ಲೈಂಗಿಕ ಆಕರ್ಷಣೆಯಷ್ಟೇ ಮುಖ್ಯವಾಗುವ ಇದರಲ್ಲಿ 'ಪರಿಪೂರ್ಣತೆ'ಯನ್ನು ಹುಡುಕುವುದು ವ್ಯರ್ಥವಾಗುತ್ತದೆ. ಗಂಡು- ಹೆಣ್ಣಿನ ಸ್ವ- ಇಚ್ಛೆಯ ಮೇಲೆ ಸ್ಥಾಪಿತಗೊಳ್ಳುವ ಇಂಥ ಸಂಬಂಧಗಳು ವಿವಾಹದ ಸಂವಿಧಾನಕ್ಕಿಂತ ಸಂಪೂರ್ಣ ಭಿನ್ನವಾಗಿರುತ್ತದೆ. ಇದರೊಳಗೆ ವಿವಾಹದಿಂದ ಸಿಗುವ ಭದ್ರತೆ, ನಂಬಿಕೆಗಳನ್ನು

ನಿರೀಕ್ಷಿಸುವುದು ಸುಲಭವಲ್ಲ. ಈ ಅರ್ಥಗಳಿಂದ ಸ್ತ್ರೀ ಮತ್ತು ಪುರುಷರ ನಡುವೆ ಏರ್ಪಡುವ ಸಂಬಂಧಗಳನ್ನು ಮರುಶೋಧಿಸುವ, ಮರುಕಲ್ಪಿಸುವ ಪ್ರಯತ್ನವಾಗಿ **ಶಿವಗಂಗಾ** ಕಾದಂಬರಿಯನ್ನು ಪರಿಭಾವಿಸಿ ಕೊಳ್ಳಬೇಕಾಗುತ್ತದೆ.

**ಉಮಾ ರಾವ್ ಅವರ ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ವಿವಾಹದ ಸ್ವರೂಪ:**

ಮುಂಬೈಯಂತಹ ಆಧುನೀಕೃತ ನಗರದಲ್ಲಿ ವ್ಯಕ್ತಿಗಳ ಸಂಬಂಧಗಳು ಮುಖ್ಯವಾಗಿ ಆರ್ಥಿಕ ಮತ್ತು ಆ ಮೂಲಕ ಸಾಮಾಜಿಕ ನಿಯಂತ್ರಣಕ್ಕೆ ಒಳಪಡುತ್ತವೆ. ಬಂಡವಾಳಶಾಹೀ ವ್ಯವಸ್ಥೆಯು ಮಾರುಕಟ್ಟೆಯ ಲಾಭದಾಯಕ 'ಹೂಡಿಕೆ' ಮತ್ತು 'ದುಡಿಮೆ' ಈ ನೆಲೆಯಲ್ಲಿ ವ್ಯಕ್ತಿಗಳ ಸಂಬಂಧಗಳನ್ನು ಕಟ್ಟುತ್ತದೆ. ಇದರಿಂದಾಗಿ ಬಂಡವಾಳಕ್ಕೆ ವ್ಯಕ್ತಿಗಳನ್ನು ಹಿಡಿತದಲ್ಲಿಟ್ಟುಕೊಳ್ಳುವ ಶಕ್ತಿ ಬರುತ್ತದೆ. ಆಧುನಿಕ ಬಂಡವಾಳಶಾಹೀ ವ್ಯವಸ್ಥೆಯಲ್ಲಿ ವ್ಯಕ್ತಿಗಳು ತಾವು ಹೆಚ್ಚು ಸ್ವತಂತ್ರರು, ಸ್ವಾವಲಂಬಿಗಳು ಎಂದು ಭಾವಿಸುವುದು; ಅವರು ತಮ್ಮ ಶಕ್ತಿ ಪ್ರತಿಭೆಗಳನ್ನು ಹೆಚ್ಚು ಹೆಚ್ಚು ಮಾರಾಟ ಮಾಡುತ್ತ ಹೋಗುವಲ್ಲಿಯೇ ಆಗಿರುತ್ತದೆ. ಪರಿಣಾಮವಾಗಿ ಇಂಥ ಸಂದರ್ಭಗಳಲ್ಲಿ ವ್ಯಕ್ತಿಗಳು ಯಾಂತ್ರೀಕರಣಕ್ಕೆ ಒಳಗಾಗುವುದು ಹಾಗೂ ಯಂತ್ರಗಳೇ ಆಗಿಬಿಡುವುದು ಸಹಜ ಪ್ರಕ್ರಿಯೆಯಾಗುತ್ತದೆ. ಇದರ ಫಲಿತಾಂಶವನ್ನು ನಿರೂಪಿಸುವ **ನೂರು ಸ್ವರ** ಕಾದಂಬರಿಯು ವ್ಯಕ್ತಿ ಪ್ರಕೃತಿಯಿಂದ, ತನ್ನ ಸಹಜೀವಿಗಳಿಂದ ಮಾತ್ರವಲ್ಲದೆ ಕೊನೆಗೆ ವೈಯಕ್ತಿಕ ಇಷ್ಟಾನಿಷ್ಟಗಳಿಂದ ದೂರವಾಗುವುದನ್ನು ಚಿತ್ರಿಸುತ್ತದೆ. ಇದರಲ್ಲಿ ವ್ಯಕ್ತಿಗಳ ವಿವಾಹ ಸಂಬಂಧಗಳೆಂಬುದು ಪರಸ್ಪರ ಅಪರಿಚಿತರಾದ ಯಂತ್ರ ಜೀವಿಗಳ ನಡುವಿನ ಸಂಬಂಧಗಳಾಗಿ ಪರಿಣಮಿಸುತ್ತವೆ. ಅವರು ತಮ್ಮೆಲ್ಲಾ ಜೀವಶಕ್ತಿಗಳನ್ನು ಮಾರಾಟದ ವಸ್ತುವಾಗಿ ಮಾರುಕಟ್ಟೆಯಲ್ಲಿಟ್ಟು 'ಮಾರಾಟ'ಮಾಡಬೇಕಾಗುವುದರಿಂದ ಸಂಬಂಧಗಳನ್ನು 'ನವೀಕರಿಸುವ' ವಿಧಾನಗಳು ನಿಷ್ಫಲಗೊಳ್ಳುತ್ತವೆ. ಇವೆಲ್ಲವುಗಳ ಪರಿಣಾಮವಾಗಿ 'ವಿವಾಹ'ವೆಂಬುದು ಕೂಡ ಕರಾರುವಕಾಗಿ ಅವರವರ ಯಾಂತ್ರಿಕ ಬದುಕಿನಲ್ಲಿ ಅನುಕೂಲತೆಯನ್ನು ಕಲ್ಪಿಸಿಕೊಳ್ಳುವ ಪ್ರಾಥಮಿಕ ಘಟಕವಾಗುತ್ತದೆ. ಇಲ್ಲಿ ಹಣ, ಅಧಿಕಾರ, ರೂಪವಂತಿಕೆ, ಇವುಗಳು ಚಲಾವಣೆಗೊಳ್ಳುತ್ತವೆ. ಹಿರಿಯರು ನಿಶ್ಚಯಿಸುವ ವಿವಾಹಗಳು, ಪರಸ್ಪರ ಒಪ್ಪಿಮಾಡಿಕೊಳ್ಳುವ ಪ್ರೇಮ ವಿವಾಹಗಳು, ಪತ್ರಿಕೆಯ ಜಾಹೀರಾತಿನ ಮೂಲಕ ಒಪ್ಪಂದಗೊಳ್ಳುವ ವಿವಾಹಗಳು, ರಿಜಿಸ್ಟ್ರಾರ್ ಕಛೇರಿಯ ಕಾನೂನು ಸಮ್ಮತ ವಿವಾಹಗಳು ಯಾವುದನ್ನೇ ಆದರೂ ಮುಂಬೈನಗರದ ಬಂಡವಾಳ ಸಂಸ್ಕೃತಿ ಯಾಂತ್ರಿಕಗೊಳಿಸುತ್ತದೆ. ಇದನ್ನು ಪಾಪು, ಲತಾ, ಸುಮಾ, ಲಕ್ಷ್ಮಿಯರ ದಾಂಪತ್ಯದ 'ಅವಲೋಕನ'ಗಳ ನೆಲೆಯಲ್ಲಿ ಪಠ್ಯ ಚರ್ಚಿಸುತ್ತದೆ. ಮೈಸೂರಿನಲ್ಲಿ ಹಿರಿಯರು ನಿಶ್ಚಯಿಸುವ ಪಾಪುವಿನ ವಿವಾಹದ ನಿರೀಕ್ಷೆಗಳಿಗೂ ಅವರವರೇ ನೋಡಿ ಒಪ್ಪಿ ಮದುವೆಯಾಗುವ ಲತಾ, ಸುಮಾ, ಲಕ್ಷ್ಮಿಯರ ವಿವಾಹಗಳಿಗೂ ಇಲ್ಲಿ ಯಾವುದೇ ವಿಶೇಷ ವ್ಯತ್ಯಾಸವಿಲ್ಲ. ಹುಡುಗನಿಗೆ ಕೈತುಂಬ ಸಂಪಾದನೆಯ ಉದ್ಯೋಗ, ಸುರಕ್ಷಿತ ಮನೆ, ಓಡಾಡಲು ಕಾರಿನಂತಹ ವಾಹನ, ಅಲ್ಲದೆ, ತಕ್ಕ ಮಟ್ಟಿಗಿನ ಸೌಂದರ್ಯ, ಆಳ್ತನ ಇವು ಆಧುನಿಕ ಸಮಾಜದ ಯುವತಿಯರೆಲ್ಲರ ನಿರೀಕ್ಷೆಗಳಾಗಿ ಪಠ್ಯದೊಳಗೆ ಅನಾವರಣಗೊಳ್ಳುತ್ತವೆ. ಹುಡುಗಿಯರ ಸೌಂದರ್ಯ, ವರದಕ್ಷಿಣೆಯಾಗಿ ನಿಗದಿಗೊಳ್ಳುವ ಹಣ, ಸಾಧನ ಸಲಕರಣೆಗಳು ಯುವಕರ ನಿರೀಕ್ಷೆಗಳಾಗಿ ಹಿರಿಯರು ನಿಶ್ಚಯಿಸುವ ವಿವಾಹದಲ್ಲಿ ಕಾಣಿಸಿಕೊಳ್ಳುತ್ತದೆ. ಪ್ರೇಮ ವಿವಾಹದಲ್ಲಿ ಗಂಡು- ಹೆಣ್ಣಿಗೆ ಉದ್ಯೋಗ, ಆರ್ಥಿಕ ಭದ್ರತೆ ವಿವಾಹದ ನಿರ್ಧಾರಕ್ಕೆ ಕಾರಣಗಳಾಗುತ್ತವೆ.

ಯಾಂತ್ರಿಕ ವಿವಾಹ ಮಾದರಿಗಳನ್ನು ನಿರ್ವಚಿಸುವ ತಳಹದಿಯಿಂದಲೇ ವಿವಾಹದಂತಹ ಸಾಂಸ್ಥಿಕತೆಗೆ ಒಳಗಾಗದ ಗಂಡು- ಹೆಣ್ಣಿನಲ್ಲಿರುವ ಲೈಂಗಿಕವಾದ ಅನೌಪಚಾರಿಕ ಸಂಬಂಧವೊಂದನ್ನು ವಿವಾಹದ ಸಾಧ್ಯತೆಗಳ ಹಲವು ನೆಲೆಗಳಲ್ಲಿ ಒಂದಾಗಿ ಇಟ್ಟು ನೂರು ಸ್ವರ ಶೋಧಿಸುವ ಪ್ರಯತ್ನವನ್ನು ನಡೆಸುತ್ತದೆ. ಈ ಶೋಧ ಅನಾವರಣಗೊಳ್ಳುವುದು ಮುಂಬೈಯ ಪ್ರಖ್ಯಾತ ಕಂಪೆನಿಯ ಜಾಹಿರಾತು ಸಂಸ್ಥೆಯಲ್ಲಿ ಕೆಲಸಮಾಡುವ ಗೌರಿ, ಮತ್ತು ಕಾಲೇಜೊಂದರಲ್ಲಿ ಅಧ್ಯಾಪಕನಾಗಿ ಚಿತ್ರಕಲೆಯನ್ನು ಹವ್ಯಾಸವಾಗಿ ಬದುಕುವ ಅನಿರುದ್ಧ ಇವರ ಸಂಬಂಧಗಳ ನೆಲೆಯಲ್ಲಿ ಈ ಶೋಧ ಅನಾವರಣಗೊಳ್ಳುತ್ತದೆ. ಪರಸ್ಪರ ಪರಿಚಿತರಾದರೂ, ಅಪರಿಚಿರಂತೆಯೇ ತಮ್ಮ ತಮ್ಮ 'ಖಾಸಗೀತನ'ಗಳನ್ನು ಹಂಚಿಕೊಳ್ಳದ ಇವರಿಬ್ಬರ ನಡುವೆ ಮುಂಬೈಯ ಬಾಂಬ್ ಸ್ಫೋಟದ ಪ್ರಕರಣವೊಂದು ತೀವ್ರವಾದ ಅಭದ್ರತೆಗೆ ಕಾರಣವಾಗುತ್ತದೆ. ಇದು ಅವರೀರ್ವರ ದೈಹಿಕ ಸಂಬಂಧಕ್ಕೂ ಕಾರಣವಾಗುತ್ತದೆ.

> "ಬಾಂಬು ಸಿಡಿಯದೆ ಮುಂಬೈಕತೆಯೇ ಪೂರ್ಣವಾಗದೆ ?! ಇಲ್ಲಿ ಅದು ಗೌರಿ- ಅನಿರುದ್ಧರ ಉತ್ಕಂಠತೆಗೆ ಸ್ಫೋಟಕ ಬಿಸಿ ತಾಕಿಸಿದ ಅದಕ್ಕೆ ಸಂಪೂರ್ಣ ವಿರುದ್ಧವಾದೊಂದು ತೀಕ್ಷ್ಣವೇದನೆಯ ವಿದ್ಯಮಾನ" (ಉಮಾರಾವ್ ೧೯೯೯.೧.೨)

ಎನ್ನುವ ವೈದೇಹಿಯವರ ಮಾತು ಹೆಚ್ಚು ಅರ್ಥಪೂರ್ಣ. ವಿವಾಹವನ್ನಷ್ಟೇ ಯೋಚಿಸದ ಅವಳಿಗೆ ತಾಯಿ ಹುಡುಕಿದ ವರ ಅವಳನ್ನು ಒಪ್ಪಿದರೂ ವಿವಾಹವಾಗುವ ಕೊನೆಯ ವಯೋಗಡಿಯಲ್ಲಿ (ಮೂವತ್ತು, ಮೂವತ್ತೈದು ವರ್ಷಗಳ ಅಂಚಿನಲ್ಲಿ) ಅವಳಿದ್ದರೂ ಉಳಿದ ಅರ್ಥಗಳಲ್ಲಿ ಅವಳಿಗೆ ಮದುವೆ ಮುಖ್ಯವೆನಿಸುವುದಿಲ್ಲ. ವಿವಾಹದ ನೆಲೆಯಿಂದ ಗೌರಿ ಎದುರಿಸುವ ತಲ್ಲಣಗಳನ್ನು, ಮೈಸೂರಿನಲ್ಲಿರುವ ತಂದೆ-ತಾಯಿ-ತಂಗಿ-ಸ್ನೇಹಿತೆ(ವಿವಾಹಿತರಾದ)ಯರ ಒತ್ತಡಗಳನ್ನು ಅನಿರುದ್ಧ ಎದುರಿಸುವುದಿಲ್ಲ. ತಂದೆ-ತಾಯಿಯರನ್ನು ನಾಲ್ಕು- ಐದು ವರ್ಷಕ್ಕೆ ಕಳೆದುಕೊಂಡು, ಆಂಟಿಯೋರ್ವಳ ಆಶ್ರಯದಲ್ಲಿ ಮುಂಬೈಯಲ್ಲಿ ಬೆಳೆವ ಅನಿರುದ್ಧ ಗೌರಿಯ ಮೂವತ್ತೈದು ವರ್ಷದ ಒಂಟಿ ಬದುಕನ್ನು ಅರ್ಥೈಸಿಕೊಳ್ಳುವುದು ಅವನ ನೆಲೆಯಿಂದಲೇ ಆಗಿದೆ. ಇದರಿಂದಾಗಿ ಗೌರಿಗೆ ವಿಳಾಸವನ್ನು ಕೂಡ ಸ್ಪಷ್ಟವಾಗಿ ತಿಳಿಸದ ಆತ ಆಧುನಿಕ ಬದುಕಿನ ಯಾಂತ್ರಿಕತೆಯೊಳಗಿನ ಆಗಂತುಕನಾಗಿ ಪತ್ರದೊಳಗೆ ಕಾಣಿಸಿಕೊಳ್ಳುತ್ತಾನೆ. ವಿವಾಹದ ಹಿನ್ನೆಲೆಯಲ್ಲಿ ಗೌರಿ ಆತನನ್ನು ಕಲ್ಪಿಸುವ ಎಲ್ಲಾ ಅಸ್ತಿತ್ವಗಳೂ ಇದರೊಳಗೆ ತಮ್ಮ ಬಿಂಬಗಳನ್ನು ಕಳೆದುಕೊಳ್ಳುತ್ತವೆ. ಹೆಚ್ಚು ಸಂವೇದನಶೀಲೆಯಾದ ಗೌರಿ ಆತನನ್ನು ಮದುವೆಯಾಗುವುದಕ್ಕೆ ಅನ್ವೇಷಿಸುವುದು ಕೂಡ ಅರ್ಥಕಳೆದುಕೊಳ್ಳುತ್ತದೆ. ಆದರೆ, ಅನಿರುದ್ಧನಂಥ ವ್ಯಕ್ತಿಯೊಂದಿಗೆ ಮಾತ್ರ ವಿವಾಹ ಹೆಚ್ಚು ಭದ್ರತೆಯಿಂದ ಕೂಡಿರುತ್ತದೆ ಎಂದು ಅವಳು ಭಾವಿಸುವುದು ಅವಳ ನಗರ ಜೀವನದ ಅನುಭವ ಮತ್ತು ಸಂವೇದನಾಶೀಲವಾದ ಅವಳ ವ್ಯಕ್ತಿತ್ವದ ಆಳದಿಂದಲೇ ಆಗಿದೆ. ಇದರ ಮೂಲಕ ನೋಡಿದಾಗ ಮಾತ್ರ ಗೌರಿಯ ತಾಯಿ- ತಂಗಿ ಇವರು ನಡೆಸುವ ವರಾನ್ವೇಷಣೆಯ ಪ್ರಯತ್ನಗಳು, ವಧುಪರೀಕ್ಷೆಗಳು ಅರ್ಥ ಕಳೆದುಕೊಳ್ಳುತ್ತವೆ. ಬಂಡವಾಳಶಾಹಿ ವ್ಯವಸ್ಥೆಯ ಸಮಾಜದಲ್ಲಿ ವ್ಯಕ್ತಿಗಳ ಸಂಬಂಧಗಳಿಗೆ ಅಥವಾ ಗಂಡು - ಹೆಣ್ಣಿನ ವಿವಾಹ ಸಂಬಂಧಗಳಿಗೆ ಮಾನವಶಾಸ್ತ್ರ, ಸಮಾಜಶಾಸ್ತ್ರ ನಿರೂಪಿಸುವ ಸೈದ್ಧಾಂತಿಕ ಅರ್ಥವಾಗಲಿ, ಸಾಹಿತ್ಯ ಕಟ್ಟಿಕೊಡುವ ಆದರ್ಶೀಕೃತ ಅರ್ಥವಾಗಲಿ ಇರಬೇಕಾಗಿಲ್ಲ. ಇವೆಲ್ಲವುಗಳಿಗಿಂತಲೂ ಅಂತಹ ಪರಿಸ್ಥಿತಿಗಳಲ್ಲಿ ಬದುಕುವ ವ್ಯಕ್ತಿಗಳ ಅನುಭವ ತೀರ್ಮಾನಗಳು ಭಿನ್ನ ಎಂಬುದನ್ನು ವಿವಾಹವಿಲ್ಲದೆ, ಗಂಡಿನ ವಿಳಾಸವಿಲ್ಲದೆ ನಿಭಾಹಿಸುವೆನೆಂಬ ಗೌರಿಯ

ತೀರ್ಮಾನ ಬಿಂಬಿಸುತ್ತದೆ. ಆಕಸ್ಮಿಕ ಗರ್ಭದ ಹೊಣೆಗಾರಿಕೆಯ ಪರಿಣಾಮಗಳು ಮುಂಬೈ ಬದುಕಿನಲ್ಲಿ ವ್ಯಕ್ತಿ ಸಂಬಂಧದೊಳಗೆ ಯಾವುದನ್ನು ಹುಡುಕುವುದಿದ್ದರೂ ಗೊಂದಲ ಸಂಘರ್ಷಗಳ ದಾರಿ ಮಾತ್ರ ನಿಚ್ಚಳ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಅಭಿಮಾನ, ಕೋಮಲತೆ, ತಿಕ್ಕಲುತನ, ವೈಚಾರಿಕ ಪ್ರಜ್ಞೆ- ಎಲ್ಲವನ್ನು ಒಳಗೊಂಡ ಮಿಶ್ರ ವ್ಯಕ್ತಿತ್ವದ ಗೌರಿ ಅನಿರೀಕ್ಷಿತವಾಗಿ ಅವಳ ಬದುಕನ್ನು ಪ್ರವೇಶಿಸಿ ಅಷ್ಟೇ ಅನಿರೀಕ್ಷಿತವಾಗಿ ನಿರ್ಗಮಿಸುವ ಪುರುಷನೋರ್ವನನ್ನು ಅಸ್ತಿತ್ವದ ಪ್ರಜ್ಞಾಸ್ತರದಲ್ಲಿ ಯಾವುದೇ ಗೊಂದಲಗಳಿಲ್ಲದೆ ವಿಮರ್ಶಾತ್ಮಕವಾಗಿ ನೋಡುವುದು ಮತ್ತು ಒಪ್ಪಿಕೊಳ್ಳುವುದು ವಿವಾಹದ ಚೌಕಟ್ಟಿನಿಂದ ಹೊರಗುಳಿಯುವ ಸ್ತ್ರೀಯ ಪ್ರಜ್ಞಾಪೂರ್ವಕ ಪರ್ಯಾಯ ಶೋಧವಾಗಿದೆ. ಆದ್ದರಿಂದಲೇ ಇದು ಪಠ್ಯದೊಳಗೆ ಒಪ್ಪಿತಗೊಳ್ಳುತ್ತದೆ.

**ಕೊಡುಕಟ್ಟಿನ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ವಿವಾಹದ ಸ್ವರೂಪ :**

ಚಂಪಾವತಿ ಮತ್ತು ಉಮಾರಾವ್ ಅವರ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ವಿವಾಹ ಸಂರಚನೆಯ ಸ್ವರೂಪಗಳು ಈ ಕೆಳಗಿನ ಅಂಶಗಳಿಗೆ ಮುಖಾಮುಖಿಗೊಳ್ಳುತ್ತದೆ.

೧) ಆಧುನಿಕ ಸಮಾಜದ ವ್ಯಕ್ತಿಗಳಲ್ಲಿ ತಾವು ಇರುವುದಕ್ಕಿಂತ ಮೇಲೇರಬೇಕು, ಸಮಾಜದಲ್ಲಿ ಗಣ್ಯ ವ್ಯಕ್ತಿಗಳಾಗಬೇಕು ಎನ್ನುವ ತೀವ್ರ ತುಡಿತವಿರುತ್ತದೆ. ಇದರಿಂದ ವಿವಾಹ ಎನ್ನುವುದು ಐಚ್ಛಿಕ ಆಯ್ಕೆ ಎನ್ನುವುದಕ್ಕಿಂತ ಹೆಚ್ಚಾಗಿ ಸಾಂದರ್ಭಿಕ ಆಯ್ಕೆಯಾಗಿ ಕಾಣಿಸಿಕೊಳ್ಳುತ್ತದೆ.

೨) ಕೊಡುಕಟ್ಟಿನ ಕಾದಂಬರಿಗಳಲ್ಲಿ ಸ್ತ್ರೀಯರ ಬದುಕಿನಲ್ಲಿ ಉಂಟಾಗುವ ಎಲ್ಲಾ ರೀತಿಯ ಬಿಕ್ಕಟ್ಟುಗಳನ್ನು, ವ್ಯಕ್ತಿತ್ವಗಳ ವಿಘಟನೆಯನ್ನು ವಿವಾಹದ ಭೂಮಿಕೆಯೊಳಗೆ ಸಮೀಕರಿಸಿ ನೋಡುವ ಪ್ರಯತ್ನ ವ್ಯಕ್ತವಾಗುತ್ತದೆ.

೩) ಆಧುನಿಕ ಸಮಾಜದಲ್ಲಿ ಸ್ತ್ರೀಯರ ಆತ್ಮಪ್ರತಿಮೆ ಅಥವಾ ಅವರ ಬಗೆಗೆ ಅವರೊಳಗೆ ಇರುವ ಮನೋಭಾವಗಳಲ್ಲಿ ಖಚಿತತೆ ಇರುವುದರಿಂದ ಇದು ವಿವಾಹವನ್ನು ನಿರ್ಧರಿಸುವ ಅಥವಾ ಅದನ್ನು ಮೀರುವ ಬಗೆಯಲ್ಲಿ ಪ್ರಧಾನ ಪಾತ್ರವಹಿಸುತ್ತದೆ.

೪) ವಿವಾಹದ ಎಲ್ಲಾ ಸಾಧ್ಯತೆಗಳನ್ನು ಮತ್ತು ಮಿತಿಗಳನ್ನು ಸ್ತ್ರೀಯರ ಬದುಕಿನಲ್ಲಿ ಅವರ ಅಸ್ತಿತ್ವದ ವಿಭಿನ್ನ ಆಯಾಮಗಳ ಮೂಲಕ ಚಿತ್ರಿಸುವಲ್ಲಿ ಕೊಡುಕಟ್ಟಿನ ಕಾದಂಬರಿಗಳು ಪರಿಣಾಮಕಾರಿ ಪಾತ್ರವಹಿಸುತ್ತವೆ.

೫) ಸ್ತ್ರೀಯರ ಸಾಮಾಜಿಕ ಅಸ್ತಿತ್ವಕ್ಕೆ ಹೆಚ್ಚಿನ ಮಹತ್ವ ನೀಡುವ ಸಂದರ್ಭದಲ್ಲಿ ವಿವಾಹವು ಬಂಧನವಾಗಿ ಕೊಡುಕಟ್ಟಿನ ಪಠ್ಯಗಳ ಒಳಗೆ ಪರಿಭಾವಿತಗೊಂಡಿದೆ.

೬) ಆಧುನಿಕ ಸಮಾಜದಲ್ಲಿ ವಿವಾಹ ಪೂರ್ವದ ಲೈಂಗಿಕ ಅನುಭವ ಸ್ತ್ರೀಯರ ನೆಲೆಯಿಂದ ಎರಡು ರೀತಿಯಲ್ಲಿ ಸ್ಥಿರವಾಗುತ್ತದೆ. ಅ) ವಯೋಸಹಜ ಕುತೂಹಲದಿಂದ ಕೂಡಿದ್ದಾಗಿ ಕಾಣಿಸಿಕೊಳ್ಳುತ್ತದೆ. ಆ)ಗಂಡು ಹೆಣ್ಣುಗಳಿಬ್ಬರೂ ಒಂದು ಒಪ್ಪಂದಕ್ಕೆ ಬದ್ಧರಾಗುವುದು. ಅಲ್ಲದೆ, ವಿವಾಹವನ್ನು ಸಂವೇದನಾತ್ಮಕ ಅವಲಂಬನೆಯಾಗಿ ಒಪ್ಪಿಕೊಳ್ಳುವುದು ವ್ಯಕ್ತವಾಗುತ್ತದೆ.

**೫.೩.೨. ಕೂಡುಕಟ್ಟಿನ ಕಾದಂಬರಿಗಳು: ದಾಂಪತ್ಯದ ಸ್ವರೂಪ.**

**ಚಂಪಾವತಿಯವರ ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ದಾಂಪತ್ಯದ ಸ್ವರೂಪ:**

**ಶಿವಗಂಗಾ** ಕಾದಂಬರಿಯಲ್ಲಿ ವೈವಾಹಿಕ ಸ್ವರೂಪವು ಅದರ ಸಾಧ್ಯಾ ಸಾಧ್ಯಾತೆಗಳ ಮೂರು ಮಾದರಿಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಅ) ಗಂಡ- ಹೆಂಡತಿಯ ಸಫಲ, ಮತ್ತು ವಿಫಲ ದಾಂಪತ್ಯ.

ಆ) ಸ್ತ್ರೀ- ಮತ್ತು ಪುರುಷ ಮದುವೆಯಾಗದೆ ಒಟ್ಟಿಗೆ ಇರುವ ಸಂಬಂಧ.

ಇ) ಹೆಣ್ಣು ಮತ್ತೊಂದು ಹೆಣ್ಣಿನ ಜೊತೆ ಬದುಕುವ ಲೈಂಗಿಕ /ಲೈಂಗಿಕೇತರ ಸ್ವರೂಪ.

**ಅ) ಗಂಡ- ಹೆಂಡತಿಯ ಸಫಲ ದಾಂಪತ್ಯ.**

ವಿದೇಶದಲ್ಲಿ ಪರಿಚಿತರಾಗುವ, ಪ್ರೇಮಿಗಳಾಗುವ ಗಂಗಾ ರಮೇಶ್ ವಿವಾಹ ಪೂರ್ವದಲ್ಲೇ ಪರಸ್ಪರ ಲೈಂಗಿಕ ಸಂಪರ್ಕ ಹೊಂದಿರುವವರಾಗಿರುತ್ತಾರೆ. ಅತಿ ಸರಳವಾಗಿ ಬದುಕುವ ರಮೇಶನೊಡನೆ ಬದುಕುವುದು ಸಾಧ್ಯ ಎನ್ನುವಂತಹ ನಂಬಿಕೆಗಳು ಗಂಗಾಳಲ್ಲಿ ಮೂಡಿದರೆ, ಗಂಗಾ ತನ್ನ ವ್ಯಕ್ತಿತ್ವದ ಭಾಗ ಎಂಬಂತೆ ರಮೇಶ್ ಕೂಡ ಭಾವಿಸ ತೊಡಗುವುದರಿಂದ ಭಾರತಕ್ಕೆ ಹಿಂದಿರುಗಿದ ಅವರು ವಿವಾಹಿತರಾಗುತ್ತಾರೆ. ಇವರ ನಡುವೆ ಭಿನ್ನಾಭಿಪ್ರಾಯಕ್ಕೆ ಅವಕಾಶಗಳು ಇಲ್ಲವೇ ಇಲ್ಲ ಎಂಬಷ್ಟು ರಮೇಶ ಗಂಗಾಳನ್ನು ಅವಲಂಬಿಸುವ ಪರಿಣಾಮವಾಗಿ ಗಂಗಾ ನಿರೀಕ್ಷಿಸುವ ಸರಳ ಜೀವನ ಅವಳದಾಗಿರುತ್ತದೆ. ಗಂಗಾ ರಮೇಶನಿಗಿಂತ ವಯಸ್ಸಿನಲ್ಲಿ ಹಿರಿಯವಳು. ಅಲ್ಲದೆ, ರಮೇಶನ ಸಂಬಂಧ ಸ್ಥಾಪಿತಗೊಳ್ಳುವ ಪೂರ್ವದಲ್ಲಿ ಹಲವು ಯುವಕರೊಡನೆ ಲೈಂಗಿಕವಾಗಿ 'ತೆರೆದು'ಕೊಂಡವಳು. ಇದು ರಮೇಶನಿಗೆ ಸಂಪೂರ್ಣವಾಗಿ ಗೊತ್ತಿದ್ದರೂ ಹಿಂದಿನ ಯಾವ ಘಟನೆಗಳೂ ಅವರ ದಾಂಪತ್ಯಕ್ಕೆ ತೊಡಕಾಗಿ ಪರಿಣಮಿಸುವುದಿಲ್ಲ. ಏಳೆಂಟು ವರ್ಷಗಳಲ್ಲಿ ಗಂಡ 'ಪ್ರತಿಫಲ ಬಯಸದೇ' ಪ್ರೀತಿಸಿದುದರ ಅರಿವು ಗಂಗಾಳಿದೆ. ರಮೇಶ ಉಡಾಫೆಯಿಂದ ಮಾತನಾಡಿದ್ದಾಗಲೀ, ನೋಯಿಸಿದ್ದಾಗಲೀ ಗಂಗಾಗೆ ಜ್ಞಾಪಕ ಇಲ್ಲ.

> "Sorry ganga I Know you will be waiting please putti sorry ಎಂದು ಸಾವಿರಾರು ಬಾರಿ ಹೇಳುತ್ತಾ, ನೀನು ಬೆಳಿಗ್ಗೆ ನಿಧಾನ ಏಳು, ನಾನು ನೀರು ಕಾಯಿಸಿ ಇಟ್ಟಿರ್ತೀನಿ, ಇಡ್ಲೀನಾ ತಿಂಡಿ, ಇಡ್ಲಿ ನಾನೇ ಮಾಡ್ತೀನಿ, ನೀನು ಸ್ನಾನ ಮಾಡಿ Fresh ಆಗಿ ಕಾಲೇಜಿಗೆ ಹೋಗಮ್ಮ ಎನ್ನುತ್ತಾ ಈಗ ಕ್ಷಮಿಸಿ ಬಿಡು- ಎನ್ನುತ್ತಾನೆ. ನನ್ನ ಹೆಂಡ್ತಿ ಫೆಮಿನಿಸ್ಟ್, ಹಾಗಾಗಿ ನಾನು ಹೆಂಗಸರ ಬಗ್ಗೆ ಸೂಕ್ಷ್ಮವಾಗಿರೋದನ್ನ ಅವಳಿಂದ ಕಲ್ತಿದೀನಿ." (ಚಂಪಾವತಿ ೧೯೯೭.೩)

ಎಂದು ರಮೇಶ್ ಆತನ ಮಹಿಳಾ ಸಹೋದ್ಯೋಗಿಗಳೊಡನೆ ಕೂಡ ಸೂಕ್ಷ್ಮವಾಗಿ ವರ್ತಿಸುವುದು ಸ್ವತಃ ಗಂಗಾಳಿಗೂ ಗೊತ್ತಿರುವ ಅಂಶ. ಅಕ್ಕ - ತಂಗಿಯರ ಜೊತೆ ಒಡನಾಟ, ತಾಯಿಯ ಬೆಚ್ಚನೆಯ ಹೃದಯ, ತಂದೆಯ ಕಾಠಿಣ್ಯತೆಯಲ್ಲಿ ಸಂರಕ್ಷಿತವಾಗಿ ಬೆಳೆದ ರಮೇಶನ ವ್ಯಕ್ತಿತ್ವದ ಬಹುಭಾಗ ಹೆಣ್ಣಿನ ಮನಸ್ಸಿನ ಸೂಕ್ಷ್ಮತೆಗಳನ್ನು ಒಳಗೊಂಡಿದ್ದಾಗಿದೆ. ಹೀಗಾಗಿ ಗಂಗಾಳ ಪಾಲಿಗೆ ಆತ ತಂದೆಯ ಜವಾಬ್ದಾರಿಯನ್ನು ನಿರ್ವಹಿಸುವ, ಮಗುವಿನ ಸರಳತೆಯನ್ನು ಉಳಿಸಿಕೊಂಡ ಭರವಸೆಯ ಪತಿಯೆನಿಸುತ್ತಾನೆ. ರಮೇಶ ಮನಸ್ಸು ನೋಯಿಸಿ ಮಾತನಾಡಿದ, ರೇಗಿದ ದಿನಗಳು ವಿರಳವಾದ್ದರಿಂದ ಅವರದು ಸುಖ ದಾಂಪತ್ಯ. ಗಂಗಾ ಸಾಹಿತ್ಯದ ಅಥವಾ ಇನ್ಯಾವುದೋ ಮಹಿಳಾ ಸಮಸ್ಯೆಯ ಕುರಿತು ಚರ್ಚೆಗೋ, ಸೆಮಿನಾರ್‌ಗೋ ಹೋದಾಗ ರಮೇಶ್

ಪ್ರೀತಿಯಿಂದ ಮನೆಯಲ್ಲಿದ್ದು ಮಗು ಮಿತಾಳನ್ನು ನೋಡಿಕೊಳ್ಳುವ ಸಂವೇದನಾಶೀಲ ವ್ಯಕ್ತಿ. ಹೀಗಿದ್ದರೂ, ಇವರ ದಾಂಪತ್ಯ ಸಂಬಂಧವು 'ಆಯತಪ್ಪುವುದು' ಪ್ರಕಟವಾಗುತ್ತದೆ. ಭರವಸೆಯ ಹೆಚ್ಚು ಧನಾತ್ಮಕವಾದ ಅವರ ಜೀವನದಲ್ಲಿ ಸಂಶಯ, ಅಭದ್ರತೆ ಕಾಡುತ್ತದೆ. ಒಂಟಿತನದ ತೀವ್ರತೆ ಗಂಗಾಳನ್ನು ಬಾಧಿಸುತ್ತದೆ. ಕೆಲಸದಲ್ಲಿ ಹೆಚ್ಚು ಆಸಕ್ತಿ ಬೆಳಸಿಕೊಂಡ ರಮೇಶನಿಗೆ ಗಂಗಾಳ ಬದುಕಿನ ಒಂಟಿತನ, ಯಾಂತ್ರಿಕತೆ ಅರ್ಥವಾದರೂ ಯಾವ ರೀತಿಯ ಬದಲಾವಣೆ ತರುವುದೆಂದು ಯೋಚಿಸಬಲ್ಲನೇ ವಿನಾ ಅವನಲ್ಲಿ ಪರಿಹಾರಗಳಿಲ್ಲ ಕೆಲಸದ ಬಗ್ಗೆ ಹೆಚ್ಚು ಶ್ರದ್ಧೆ ಪ್ರೀತಿ ಬೆಳಸಿಕೊಂಡ ರಮೇಶ್ ಮನೆಯಿಂದ ಹೊರಗೆ ಹೆಚ್ಚಾಗಿ ದಿನಗಳನ್ನು ಕಳೆಯುತ್ತಾ ಹೋದ ಹಾಗೆ ಗಂಗಾಳಲ್ಲಿ ಏಕತಾನತೆ, ಏಕಾಂಗಿತನ ಹೆಚ್ಚು ತೀವ್ರವಾಗಿ ಕಾಡುತ್ತವೆ. ಮಗಳು ಮಿತಾಳನ್ನು ಬೆಳೆಸುವುದಕ್ಕೆ ಏನಿಲ್ಲವೆಂದರೂ ಆಕೆಯ ಬದುಕಿನ ಐದು ವರ್ಷಗಳು ಕಳೆದಿವೆ. (ಮಿತ ತನ್ನ ವಲಯವೊಂದನ್ನು 'ಕಟ್ಟಿಕೊಳ್ಳಲು' ತೊಡಗಿದ ನಂತರ ಮಗಳ ಬದುಕನ್ನು ರೂಪಿಸುವುದೇ ಗಂಗಾಳ ಬದುಕಿನ ಆಶಯವಾಗಿ ಉಳಿಯುವುದಿಲ್ಲ.) ಇಂತಹ 'ಸಂದಿಗ್ಧ ಸಂದರ್ಭ'ದಲ್ಲಿ ಪರಿಚಯಗೊಳ್ಳುವ ಹಳೆ ವಿದ್ಯಾರ್ಥಿ ಮಧು ಹೆಚ್ಚು ಹತ್ತಿರವಾಗುತ್ತಾನೆ. ರಮೇಶನ ವ್ಯಕ್ತಿತ್ವವನ್ನು ಮಧುವಿನಲ್ಲೂ ಗುರುತಿಸುವ ಗಂಗಾ ಮಧುವಿನ ಸಂಬಂಧದಲ್ಲಿ ಹುಡುಕುವುದು ಕಾಮವನ್ನಲ್ಲ, ಬದಲಾಗಿ ಜೀವಂತಿಕೆಯನ್ನು. ಇದನ್ನು ರಮೇಶನ ಬಳಿ ಅವಳು ಸ್ಪಷ್ಟವಾಗಿ ಹೇಳಿಕೊಳ್ಳುತ್ತಾಳೆ. ರಮೇಶ ಇದಕ್ಕೆ ಪ್ರತಿಕ್ರಿಯಿಸುವುದು ಕೂಡ ಅತಿ ಆರೋಗ್ಯಪೂರ್ಣವಾಗಿ :

> "ಇದೊಂದು ಚಿಕ್ಕ ಘಟನೆ. ನಮ್ಮಿಬ್ಬರ ಬದುಕನ್ನು ಮತ್ತೊಮ್ಮೆ ಕುರಿತು ಅವಲೋಕಿಸುವುದಕ್ಕೆ ಇದು ಕಾರಣವಾಗಬೇಕು ಅಷ್ಟೇ ಗಂಗಾ! ಬಹುಶಃ ನೀನು ಹಂಚಿಕೊಂಡ ಸಂಗತಿಗಳಲ್ಲಿ ಸತ್ಯವಿದೆ. ಎಲ್ಲಿಯೋ ಸಂಸಾರದೊಳಗೆ ಸಿಕ್ಕಿ ಹಾಕಿಕೊಂಡಿದ್ದೇನೆಂಬ ಭಯ ನಿನ್ನನ್ನು ವಿಚಿತ್ರವಾಗಿ ಕಾಡುತ್ತಿರಬಹುದು. ಇನ್ನೆಲ್ಲಿಯೋ ಇನ್ನೇನನ್ನೋ ಕಂಡು ಕೊಳ್ಳುವ ನಿನ್ನ ಬಯಕೆ ನನಗೆ ಅರ್ಥವಾಗುತ್ತದೆ. ನಾವು ಕುಳಿತು ಮತ್ತೆ ಬದುಕನ್ನು ನೋಡೋಣ, ಮತ್ತೆ ಕುಳಿತು ಬದುಕಿನ ಬಗ್ಗೆ ಮಾತನಾಡೋಣ, ನನ್ನ ಬದುಕಿನ ಮಿತಿಗಳೂ ನಿನ್ನ ಹುಡುಕಾಟಗಳಿಗೆ ಕಾರಣವಾಗಿರಬಹುದು. ಇವೆಲ್ಲಾ ಕುರಿತು ಮತ್ತೆ ಮಾತನಾಡೋಣ." (ಚಂಪಾವತಿ.ಎಚ್.ಎಸ್ : ೧೯೯೭ ; ೨೫೨)

ಆದರೆ ಹೀಗೆ ಪ್ರಜ್ಞಾಪೂರ್ವಕವಾಗಿ ಹೆಚ್ಚು ವಿಶ್ವಾಸನೀಯವಾಗಿ ವರ್ತಿಸುವ ರಮೇಶನ ವಿವೇಚನೆಯನ್ನು ಗಂಗಾಳ ಅಣ್ಣ ಶಂಕರನ ತೀರ್ಮಾನಗಳು ಭಿನ್ನ ರೀತಿಯಲ್ಲಿ ನಿರ್ದೇಶಿಸುತ್ತವೆ. ಹಾಗೂ ರಮೇಶನ ಬದುಕಿನ ಅಸ್ತವ್ಯಸ್ತತೆಗೆ ಕಾರಣವಾಗುತ್ತವೆ. ಕುಡಿದು ಬರುವಲ್ಲಿ, ಗಂಗಾಳಿಗೆ ಹೊಡೆಯುವಲ್ಲಿ, ಅಧಿಕಾರಿ ಶಾಂತಾರಾಂನನ್ನು ಮಧ್ಯವರ್ತಿಯಾಗಿ ಬಳಸುವ ರಮೇಶನ ವರ್ತನೆಯು ಪುರುಷನ ಬಲ (Male power)ಕ್ಕೆ ಸಾಕ್ಷಿಯಾಗುತ್ತದೆ. ಇವರ ದಾಂಪತ್ಯದಲ್ಲಿ ಉಂಟಾದ ಬಿರುಕು, ವೈಷಮ್ಯ, ಅನುಮಾನಗಳಿಗೆ ಕಾರಣಗಳನ್ನು ಕಾದಂಬರಿಯ ಪಠ್ಯವೇ ಗುರುತಿಸುತ್ತದೆ;

> "ಗಂಡ - ಹೆಂಡತಿ ಇಬ್ಬರಲ್ಲಿ ಒಬ್ಬರು ಕೇಂದ್ರ ಬಿಂದುವಾಗಿ ಕೆಲಸ ಮಾಡಿದರೆ ಇನ್ನೊಬ್ಬರು ಫೆರಿಫೆರಿಯಲ್ಲಿ ಕೆಲಸ ಮಾಡಬೇಕಾಗುತ್ತದೆ. ಇದು ಅನಿವಾರ್ಯ ಕೂಡಾ. ಇಬ್ಬರೂ ಬದುಕಿನಲ್ಲಿ ಕೇಂದ್ರ ಬಿಂದುವೇ ಆಗಲು ಪ್ರಯತ್ನಿಸಿದಲ್ಲಿ ಘರ್ಷಣೆಗಳು, ಅಸಮಾಧಾನಗಳು, ವೈಷಮ್ಯಗಳು ಅನಿವಾರ್ಯ ಹಾಗೂ ಸಹಜವಾಗಿ ಬಿಡುತ್ತವೆ. ಹಾಗಾಗಿ ಕುಟುಂಬದಲ್ಲಿ ನಿಮ್ಮ ಪಾತ್ರಗಳ

ಬಗ್ಗೆ ನೀವೆಯೇ ನಿರ್ಧಾರ ತೆಗೆದುಕೊಳ್ಳಬೇಕಾಗುತ್ತದೆ." (ಚಂಪಾವತಿ. ಎಚ್. ಎಸ್: ೧೯೯೭; ೨೭೭)

ಗಂಗಾ ಮತ್ತು ರಮೇಶರ ಆರಂಭದ ದಾಂಪತ್ಯದ ಸಾಂಪ್ರದಾಯಿಕ, ಸ್ಥಾಪಿತ ಮೌಲ್ಯಗಳನ್ನು ಒಡೆಯುವ ಮತ್ತು ಆರೋಗ್ಯ ಪೂರ್ಣನೆಲೆಯಲ್ಲಿ ಮರಳಿ ಕಟ್ಟುವ ಮಾದರಿಯಾಗಿ ಕಾಣಿಸಿಕೊಳ್ಳುತ್ತದೆ. ಆದರೆ ವ್ಯಕ್ತಿಗಳಲ್ಲಿ ಕಾಣಿಸಿಕೊಳ್ಳುವ ಭಾವನಾತ್ಮಕ ಬಿರುಕು ಎಲ್ಲಾ ಬಗೆಯ ನೂತನ ಆಯಾಮಗಳನ್ನು ನಿಷ್ಕ್ರೀಯಗೊಳಿಸುತ್ತದೆ. ಮಾತ್ರವಲ್ಲ ಸ್ತ್ರೀಯರ ಸಂದರ್ಭದಲ್ಲಿ ಪುರುಷನಿಷ್ಠ ಸಂರಚನೆಯು ಅತಿಶಕ್ತವಾಗಿ ಇದನ್ನು ನಿರ್ವಹಿಸುತ್ತದೆ ಎನ್ನುವ ಅಂಶವನ್ನು ಪಠ್ಯವು ಅನಾವರಣಗೊಳಿಸುತ್ತದೆ.

ಇಂಡಿಯಾದ ಸಾಮಾಜಿಕ ಸಂದರ್ಭದಲ್ಲಿ ಪುರುಷರೇ ಕೇಂದ್ರ ಬಿಂದುವಾಗಿರಲು ಬಯಸುವುದು ಹಾಗೂ ಅದು ಸಹಜ ಎಂಬಂತೆ ಸಮಾಜ ಮಾನ್ಯ ಮಾಡುವುದು ವಾಸ್ತವ. ಕೊನೆಗೆ ಹೆಂಗಸರೇ ಅನಿವಾರ್ಯವಾಗಿ ಪರಿಧಿಯಲ್ಲಿರುವ ಪಾತ್ರವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಸ್ತ್ರೀಯರಿಗೆ ಅದು ಅನಿವಾರ್ಯವಾಗಿ ಬಿಡುತ್ತದೆ. ಗಂಗಾಳ ಬದುಕಿನಲ್ಲಿಯೂ ಇದು ಹಾಗೇ ವ್ಯಕ್ತವಾಗುತ್ತದೆ. ದಾಂಪತ್ಯ ಬದುಕಿನಲ್ಲಿ ಅವಳ ಸಂಸಾರ, ಮನೆ, ತಾಯ್ತನ ಒಂದು ಹೊರೆಯೇ ಆಗಿ ಬಿಡುತ್ತದೆ. ಸ್ತ್ರೀಯರಿಗೆ ತಾಯ್ತನವೆಂಬುದು ಅವರಿಗೆ ದಕ್ಕುವ ಹಕ್ಕು. ಆದರೆ ಹಕ್ಕಿನ ಜೊತೆ ಕರ್ತವ್ಯಗಳ ಪ್ರಶ್ನೆ ಬಂದಾಗ ತಾಯಿಯೇ ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಕರ್ತವ್ಯದ ಆಯ್ಕೆಯ ಪಾತ್ರ ತಂದೆಗೆ ಮುಖ್ಯವಾಗುವುದಿಲ್ಲ. ಕೇಂದ್ರ ಮತ್ತು ಪರಿಧಿ ಇಂತಹವು ನಿರ್ಧರಿತಗೊಳ್ಳುವ ಸಂದರ್ಭಗಳೇ ಇವುಗಳಾಗಿರುತ್ತವೆ. ರಮೇಶನ ಬದುಕಿನಲ್ಲಿ ಕೇಂದ್ರ ಬಿಂದುವಾಗಿಯೇ ಪ್ರವೇಶಿಸುವ ಗಂಗಾ, ಕುಟುಂಬದ ಚೌಕಟ್ಟಿನಲ್ಲಿ, ಮಗಳ ಆಗಮನದಲ್ಲಿ, ಕೆಲಸದ, ಗಳಿಕೆಯ ಅನಿವಾರ್ಯತೆಯಿಂದಾಗಿ ಆಯ್ಕೆಗಳನ್ನು ಮಾಡಿಕೊಳ್ಳುತ್ತಾ ಹೋಗುವವಳಾಗುತ್ತಾಳೆ. ಈ ಘರ್ಷಣೆ ರಮೇಶನಿಗೆ ಎದುರಾಗುವುದೇ ಇಲ್ಲವೆನಿಸುತ್ತದೆ. ಗಂಡು ಹೆಣ್ಣಿನ ದಾಂಪತ್ಯದಲ್ಲಿ ಮರೆಯುವಿಕೆ, ಕ್ಷಮೆಗಳು ಜಟಿಲ ಸಮಸ್ಯೆಗಳಿಗೆ ಪರಿಹಾರಗಳಾಗುತ್ತವೆಯೇ ಅಥವಾ ಸಂಬಂಧಗಳು ಪುನರ್‌ನವೀಕರಣಗೊಳ್ಳುತ್ತವೆ ಎನ್ನುವ ಆಯಾಮದಿಂದ ದಾಂಪತ್ಯದ ಸುಳಿಗಳನ್ನು ಶೋಧಿಸುವುದಕ್ಕೆ, ಅರ್ಥೈಸುವುದಕ್ಕೆ, ಗ್ರಹಿಸುವುದಕ್ಕೆ ಗಂಗಾ ಮತ್ತು ರಮೇಶರ ಮಧ್ಯೆ ಮಧು ಬಿಟ್ಟುಹೋದ ಸಮಸ್ಯೆಗಳು ನಿಂತುಕೊಳ್ಳುತ್ತವೆ.

**ಆ) ಗಂಡು- ಹೆಣ್ಣು ವಿವಾಹಿತರಾಗದೆ ಒಟ್ಟಿಗೆ ಇರುವ ಸಂಬಂಧ :**

ವಿವಾಹದ ಮೂರು ಮಾದರಿಗಳಲ್ಲಿ ಎರಡನೆಯ ಮಾದರಿಯಾದ ರೋಹಿಣಿ- ಥಾಂಸನ್ ಅವರ ಸಂಬಂಧವನ್ನು ವೈವಾಹಿಕ ಸಂಬಂಧಗಳಿಗೆ ಪರ್ಯಾಯವಾದ ರಚನೆಯಾಗಿ **ಶಿವ ಗಂಗಾ** ಪಠ್ಯವು ಅನಾವರಣಗೊಳಿಸುತ್ತದೆ. ರೋಹಿಣಿ- ಥಾಂಸನ್ ಹತ್ತು ವರ್ಷ ಜೊತೆಗೆ 'ಇರುವ' ವ್ಯಕ್ತಿಗಳು. ದೇಹ - ಮನಸ್ಸು ಹಂಚಿಕೊಂಡರೂ ಅವರ ಸಂಬಂಧ ಪರಸ್ಪರ ಆತ್ಮೀಯ ಮಟ್ಟಕ್ಕೆ ಏರುವುದೇ ಇಲ್ಲ. ರೋಹಿಣಿಯ ಅನುಭವ ಇದಕ್ಕೆ ಪುರಾವೆಯಾಗಿದೆ;

"ನನ್ನ ತಾಯಿ ಸತ್ತಾಗ ಎಲ್ಲೋ ಇದ್ದವನು ಏರೋಪ್ಲೇನ್ ಹತ್ತಿಕೊಂಡು ದೆಹಲಿಗೇನೋ ಬಂದ. ಬಂದವನು ಅರೆಗಳಿಗೆ ನನ್ನ ಪಕ್ಕ ನಿಲ್ಲಲಿಲ್ಲ. ನನ್ನ ಕೈಯ ಹಿಡಿದುಕೊಂಡು ಸಮಾಧಾನ ಮಾಡಲಿಲ್ಲ. ನನ್ನ ತಲೆ ಸವರಲಿಲ್ಲ. ನನಗೆ ಆ ಸಂದರ್ಭದಲ್ಲಿ ಯಾವ ಮಾನಸಿಕ ಶಾಂತಿ/ ಸಮಾಧಾನ ಬೇಕಿತ್ತೋ ಅದನ್ನ ಆತ ನನಗೆ ನೀಡಲಿಲ್ಲ. ತಾಯಿ ಸತ್ತ ಮನೆ ಭಿಕೋ

ಅನ್ನುತ್ತಿತ್ತು. ಮನೇಲಿ ಕೂತು ಸಮಧಾನವಾಗದೇ ಥಾಂಸನ್‌ನ ಹುಡುಕಿಕೊಂಡು ನಾನೇ ಹೋದೆ. ಯಾರದೋ ಹುಡುಗಿಯ ಮನೆ. ಒಳಗಡೇನೇ ಇದ್ದ. ಹೊರಗೆ ಬಂದು ನನ್ನನ್ನು meet ಮಾಡೋದಕ್ಕೇನೇ ತಿರಸ್ಕರಿಸಿ ಬಿಟ್ಟ. ಬಾಗಿಲ ಬಳಿ ಬಂದು ಮುಖ ಕೂಡಾ ತೋರಿಸಲಿಲ್ಲ. ತಾಯಿಯ ಸಾವಿನ ಜೊತೆ ಥಾಂಸನ್‌ನ ಪ್ರೀತಿ ಕೂಡಾ ನಾಶವಾಗಿ ಹೋಯ್ತು." (ಚಂಪಾವತಿ.ಎಚ್.ಎಸ್. ೧೯೯೭; ೧೪೯)

ಎಲ್ಲರ ವಿರೋಧ ಕಟ್ಟಿಕೊಂಡು ಹತ್ತು ವರ್ಷ ರೋಹಿಣಿ ಥಾಂಸನ್‌ನ ಜೊತೆ ಇದ್ದರೂ, ಸಾವಿನ ಮನೆಯ ಒಂಟಿ ಹೆಣ್ಣಿನ ಜೊತೆ ಆತನಿಗೆ ಬೇಡವಾಗುವುದನ್ನು ಗಮನಿಸಿದರೆ, ಆತನ ಬದುಕಿನಲ್ಲಿ ರೋಹಿಣಿ ಭರವಸೆ ಮೂಡಿಸುವ 'ವಸ್ತು' ಮಾತ್ರವಾಗಿ ಕಾಣಬರುತ್ತಾಳೆ. ಅಲ್ಲದೆ, ಅವಳ ಸೌಂದರ್ಯವೇ ಆತನಲ್ಲಿ ಭರವಸೆ ಹುಟ್ಟು ಹಾಕುವ ಅಂಶವಾಗಿತ್ತೆಂಬಂತೆ ತೋರುತ್ತದೆ. ಈ ದೀರ್ಘಕಾಲದಲ್ಲಿ ಅವರಿಬ್ಬರು ಪರಸ್ಪರ ಪಡೆದಿರುವುದೆಂದರೆ, ಥಾಂಸ್‌ನ್‌ನ 'ಬೌದ್ಧಿಕತೆ'ಗೆ ಆಕೆ ಬೆಂಬಲವಾಗಿ ನಿಂತದ್ದು ಹಾಗೇ ರೋಹಿಣಿಯ ಬದುಕಿನಲ್ಲಿ ಆತನಿಂದಲೇ 'ವೈಚಾರಿಕತೆ' ಬೆಳಸಿಕೊಂಡದ್ದು. ಇಷ್ಟಲ್ಲದೆ 'ಸಂವೇದನೆ'ಯ ನೆಲೆಯಲ್ಲಿ ಇವರ ಸಂಬಂಧ 'ದಾಂಪತ್ಯದ ಭದ್ರತೆ'ಯನ್ನು ಅನುಭವಿಸಿದಂತೆ ತೋರುವುದಿಲ್ಲ. ನಿಸ್ವಾರ್ಥವಾಗಿ ಯಾವುದೇ ಒಪ್ಪಂದಗಳಿಗೆ ಒಳಗಾಗದೆ ಜೊತೆಗೆ ಬದುಕಿದರೂ ಗಂಡು- ಹೆಣ್ಣು ತನ್ನನ್ನು ಮೀರಿ ಬೆಳೆಯುವುದನ್ನು ಶತಮಾನಗಳಿಂದ ಸಹಿಸಿಲ್ಲ. ಮುಂದೆ ಸಹಿಸುವುದೂ ಇಲ್ಲವೆಂದೆನಿಸುತ್ತದೆ. ಪಠ್ಯದೊಳಗೆ ಕ್ರಮೇಣವಾಗಿ ಥಾಂಸನ್‌ನ ವರ್ತನೆ ಅತಿರೇಕದ್ದು ಎನಿಸತೊಡಗುತ್ತದೆ. ಒಟ್ಟಿನಲ್ಲಿ ಕಾನೂನಿನ ಪ್ರಕಾರ ಇವರ ಸಂಬಂಧ ಸ್ಥಾಪಿತ ಗೊಳ್ಳದಿರುವುದೇ ಉತ್ತಮವೆನಿಸುತ್ತದೆ.

ಗಂಗಾ -ರಮೇಶರ ದಾಂಪತ್ಯ ಸಂಬಂಧ, ಹಾಗೂ ರೋಹಿಣಿ- ಥಾಂಸನ್‌ರ ಅವಿವಾಹಿತ ದಾಂಪತ್ಯ ಸಂಬಂಧ ಇವೆರಡೂ ಒಟ್ಟಂದದಲ್ಲಿ ಪುರುಷರ 'ಸ್ಥಾಪಿತ ಮೌಲ್ಯ'ಗಳಲ್ಲಿನ ಹುನ್ನಾರವನ್ನು ಬಯಲಿಗಿಡುತ್ತವೆ. ಇದು ಸಂಸಾರದೊಳಗಿನ 'ರಾಜಕೀಯ'ದ ಕುರಿತಂತೆ ಪುರುಷರ 'ಹೊಣೆಗೇಡಿತನ' ಮತ್ತು ಸ್ತ್ರೀಯರ 'ಸಂದಿಗ್ಧತೆ'ಗಳನ್ನು ಮುಖಾಮುಖಿಗೊಳಿಸುತ್ತದೆ.

**ಇ) ಲೆಸ್ಬಿಯನ್ ವೈವಾಹಿಕ ಸ್ವರೂಪ :**

ವಿದೇಶದಲ್ಲಿ ಗಂಗಾಳಿಗೆ ಪರಿಚಿತಳಾಗುವ ಪ್ರೊ.ಸಾಶಾ ತೆರೆದುಕೊಂಡದ್ದು ಬರಿಯ ರಾಜಕೀಯ ಲೆಸ್‌ಬಿಯನಿಸಂಗೆ ಮಾತ್ರವಲ್ಲ, ವೈಯಕ್ತಿಕ ಜೀವನದಲ್ಲೂ ಆಕೆ ಇದನ್ನು ನಂಬಿಕೊಂಡು ಬದುಕುವವಳು. 'ಸ್ತ್ರೀವಾದ ಎಲ್ಲಾ ವೈರುದ್ಧ್ಯಗಳಿಗೆ 'ಸ್ಥಳ ನಿರ್ಮಾಣ' ಮಾಡಿ ಕೊಡುವುದಾದರೆ, ಲೈಂಗಿಕ ಪ್ರಕ್ರಿಯೆಯಲ್ಲಿ ತಮ್ಮದೇ ಅಭಿವ್ಯಕ್ತಿ ವಿಧಾನ ಕಂಡುಕೊಳ್ಳುವ, ಸಾಮಾಜಿಕ ಮತ್ತು ಕೌಟುಂಬಿಕ ರಚನೆಗಳಲ್ಲಿ ತಮ್ಮದೇ ವಿಶಿಷ್ಟ ಸಾಧ್ಯತೆಯನ್ನು ಕಂಡುಕೊಳ್ಳುವ ಈ ಲೆಸ್‌ಬಿಯನಿಸಂಗೂ ಒಂದು ಜಾಗ ಇರಬೇಕು' ಎಂಬುದನ್ನು ಸಾಶಾ ತೀವ್ರವಾಗಿ ವಾದಿಸುವಲ್ಲಿ ಇದು ಪಠ್ಯದೊಳಗೆ ವ್ಯಕ್ತವಾಗುತ್ತದೆ. (ಅಕ್ಕ, ತಂಗಿ, ತಾಯಿಯ ಬಾಂಧವ್ಯ ಹತ್ತಿರವಾಗುವ ಯಾವ ಕೌಟುಂಬಿಕ ರಚನೆ ಇರದ ವಿದೇಶದಲ್ಲಿನ ಬದುಕಿನ 'ಹುಡುಕುವಿಕೆ' ಪ್ರಕಟವಾಗುತ್ತದೆ. ಪಾಶ್ಚಿಮಾತ್ಯ 'ಲೈಂಗಿಕ' ಬದುಕಿನ ಕ್ರೂರತೆ ಅನಾವರಣಗೊಳ್ಳುತ್ತದೆ.) ಸಾಶಾ ಕೂಡ ಹತ್ತು ವರ್ಷ ಓರ್ವ ಪುರುಷನೊಡನೆ ಸಂಸಾರ ಮಾಡಿದ ವ್ಯಕ್ತಿ. ಇದನ್ನು ಸಾಶಾಳ ಮೂಲಕವೇ ತಿಳಿಯುವ ಪ್ರಯತ್ನ ಮಾಡಿದರೆ ಮಾತ್ರ ಅದರಲ್ಲಿ ಹಿಂಸೆಯ ತೀವ್ರತೆ ಬಿಂಬಿತಗೊಳ್ಳುತ್ತದೆ.

"ಆ ಹತ್ತು ವರ್ಷಗಳಲ್ಲಿ ಎಲ್ಲಿಯೋ ನನ್ನ ಕಳೆದುಕೊಳ್ತಾ ಇದೀನಿ ಅಂತ ನನಗೆ ಅನ್ನಿಸತೊಡಗಿತ್ತು. ಅವನಿಗೆ ಫೈನಲ್ ಆಗಿ ಬೇಕಾದದ್ದು ಒಂದು ರೀತಿಯ ಲೈಂಗಿಕ ಸಂತೋಷ ನನಗೆ ಹಿಂಸೆ. ಹೊಸತರಲ್ಲಿ ಬಹುಶಃ ಅರ್ಥ ಮಾಡಿಕೊಳ್ಳಬೇಕು ಅಂತ ಸಹಿಸಿಕೊಂಡೆ. ಕೊನೆ ಕೊನೆಗೆ ಅದು ಒಂಥರಾ ರೇಪ್ ಅಂತ ನನಗೆ ಅನ್ನಿಸತೊಡಗಿತ್ತು. ನಾನು ಯಾವುದಾದರೂ ಮೀಟಿಂಗ್‌ಗೆ ಅಂತ ಹೋಗುವೆ. ಮನೆಗೆ ಹೋಗೋದರಲ್ಲಿ ರಾತ್ರಿ ಹತ್ತು. ಹನ್ನೊಂದು ಘಂಟೆ ಆಗ್ತಾ ಇತ್ತು. ಆತ ಡ್ರಿಂಕ್ಸ್ ಮಾಡಿಕೊಂಡು ಕಾದಿರ್ತಾ ಇದ್ದ. ಅವನಿಗೆ ನಾನು ಆ ದಿನದ ದಿನಚರಿ ಹೇಳುವುದನ್ನು ಕೇಳುವ ಹಾಗೆ ನಟಿಸುತ್ತಿದ್ದ ಅಷ್ಟೇ. ಅವನಿಗೆ ಬೇಕಾಗಿರುತ್ತಿದ್ದುದು ನನ್ನ ಮನಸ್ಸಲ್ಲ ಮೈ. ಯಾಕೋ ಒಂಥರಾ ಹಾಗೇ ಒಪ್ಕೊಂಡೂ, ಒಪ್ಕೊಂಡೂ ಬೇಸರವಾಯ್ತು. ಜವಾಬ್ದಾರಿ ತೆಗೆದುಕೊಳ್ಳದಿರುವ, ಮನೆಗೆಲಸದ ಜವಾಬ್ದಾರಿ ಫೀಲ್ ಮಾಡದಿರುವ ಅವನ ಸನಿಹದಲ್ಲಿ ತಾಯ್ತನವೂ ಬೇಡವಾಯ್ತು. ಕೊನೆಗೆ ಜಗಳವಾಡ್ತಾ ಹೋದೆ. ನಿತ್ಯ ಸೆಕ್ಸ್‌ಗಾಗಿ ಹಿಂಸಿಸಬೇಡ ಎಂದೆ. ತಲೆಕೆಡಿಸಿಕೊಳ್ಳುವಂತಹ ಹಲವಾರು ವಿಚಾರಗಳು ನನ್ನ ತಲೆಯಲ್ಲಿ ಇವೆ ಎಂದು ಹೇಳಿದೆ. ಆತ ಕೇಳಿಸಿಕೊಳ್ಳುತ್ತಿರಲಿಲ್ಲ. ಕೊನೆಕೊನೆಗೆ ಆತ ರೇಪ್ ಮಾಡ ತೊಡಗಿದ. ರೇಪ್ ಅನ್ನುವ ಪದವನ್ನು ಬಹಳಷ್ಟು ಕ್ರೂಡ್ ಆಗಿರೋದಕ್ಕೆ ನಾನು ಬಳಸ್ತಾ ಇಲ್ಲ. ಸೂಕ್ಷ್ಮವಾಗಿರೋ, ನನಗೆ ಒಪ್ಪಿಗೆ ಇಲ್ಲದೇ ಮಲಗಬೇಕಾದ ಒತ್ತಾಯಕ್ಕೆ ಬಳಸ್ತಾ ಇದೀನಿ. ಯಾಕೋ ನನ್ನ ಮನಸ್ಸು ದೇಹ ಎರಡೂ ನನ್ನ ಕೈಲಿ ಉಳಿಯಲೇ ಇಲ್ಲ ಅಂತ ತೀವ್ರವಾಗಿ ಅನ್ನಿಸತೊಡಗಿದಾಗ ನಾನು ಕೆಲವು ನಿರ್ಧಾರಗಳಿಗೆ ಬರತೊಡಗಿದ್ದೆ." (ಚಂಪಾವತಿ.ಎಚ್.ಎಸ್ : ೧೯೯೭ ; ೧೪೩)

ಸಾಶಾ ಅನುಭವಿಸಿದ ಪುರುಷನ 'ದೌರ್ಜನ್ಯ'ದ ಪರಿಣಾಮಗಳಿಂದಾಗಿ ಆಕೆ ಒಂದು ಮಗುವಿರುವ ಗಂಡನಿಲ್ಲದ ಗೆಳತಿ ಲೈಲಾಸ್ ಜೊತೆಯೇ ಬದುಕುವ ತೀರ್ಮಾನಗಳನ್ನು ಕೈಗೊಳ್ಳುತ್ತಾಳೆ. ಲೈಲಾಸ್‌ನ ಮಗನಿಗೆ 'ಅಪ್ಪ'ನ ಸ್ಥಾನದಲ್ಲಿರುವ ಸಾಶಾ ಲೈಲಾಸ್‌ಗೆ 'ಗಂಡ'ನಾಗುವುದು ಪರಸ್ಪರ ಅವಲಂಬಿಗಳಾಗಿ ಬದುಕುವ ನೆಲೆಯಿಂದಲೇ ಆಗಿದೆ. ಸ್ತ್ರೀಯದೇ ಆದ 'ಲೈಂಗಿಕ ಶೋಧ'ದಲ್ಲಿ ಒತ್ತಾಯದ ಬದುಕನ್ನು ಮೀರುವ, ಒತ್ತಾಯದ ಲೈಂಗಿಕತೆಯನ್ನು ಧಿಕ್ಕರಿಸುವ ಮನೋಭಿಲಾಷೆ ಸ್ಪಷ್ಟವಾಗುತ್ತದೆ. ಹತ್ತು ವರ್ಷ ಗಂಡನೊಟ್ಟಿಗೆ ಸಂಸಾರ ಮಾಡಿದ ಸಾಶಾಳಿಗೆ ಎರಡು ವರ್ಷದಲ್ಲಿ ಲೈಲಾಸ್ ಅವಳನ್ನು ಅರ್ಥಮಾಡಿಕೊಂಡಷ್ಟು ಅವಳ ಗಂಡ ಹತ್ತು ವರ್ಷದ ಅವಧಿಯಲ್ಲಿ ಕಿಂಚಿತ್ತೂ ಅರ್ಥಮಾಡಿಕೊಳ್ಳಲಿಲ್ಲ ಎನಿಸುವುದು, 'ಒತ್ತಾಯ'ದ 'ಬಲವಂತ'ದ ಜೀವನವನ್ನು ಮೀರಿದ ನೆಲೆಯಿಂದಲೇ ಆಗಿದೆ. ಮದುವೆಯ ನೆಲೆಯಲ್ಲಿಯೇ ಗಂಡು- ಹೆಣ್ಣಿನ ಸಂಬಂಧಗಳಿಗೆ ಅರ್ಥವನ್ನು ಹುಡುಕುವ ಭಾರತೀಯ ಸಂಸ್ಕೃತಿಗೆ 'ವಿವಾಹ'ದ ಸಾಧ್ಯತೆಗಳೇ 'ಪರಮೋಚ್ಚ ವಾಸ್ತವ' (Suprime lciality)ವಾಗಿದೆ. ಆದ್ದರಿಂದ ಸ್ತ್ರೀತನದ ಸೂಕ್ಷ್ಮ ಬದುಕು ಕಾಣಸಿಗುವ ಇನ್ನೊಬ್ಬ ಹೆಣ್ಣಿನೊಂದಿಗಿನ ಲೆಸ್ಬಿಯನ್ ಸಂಬಂಧವನ್ನು ಒಂದು 'ಶಾಕ್'ಆಗಿ ಭಾರತೀಯ ಸಮಾಜ ಸ್ವೀಕರಿಸುತ್ತದೆ. (೧೯೯೦ರಲ್ಲಿ ಬಿಡುಗಡೆಗೊಂಡ 'ಫೈಯರ್' ಚಿತ್ರವನ್ನು ಭಾರತೀಯ ಸಮಾಜ ಹೆಚ್ಚು ದ್ವಂದ್ವಾತ್ಮಕವಾಗಿ ಸಂಘರ್ಷಪೂರ್ಣವಾಗಿ ಸ್ವೀಕರಿಸಿದ್ದನ್ನು ಗಮನಿಸಿಕೊಂಡಂತೆ) 'ಲೆಸ್ಬಿಯನ್' ಪರಿಕಲ್ಪನೆ ಸಮಾಜವನ್ನು, ಸಂಬಂಧಗಳನ್ನು, ಲೈಂಗಿಕತೆಯನ್ನು ಹೊಸದಾಗಿ ಗ್ರಹಿಸಲು ಮತ್ತು ವ್ಯಾಖ್ಯಾನಿಸಲು ಒತ್ತಾಯಿಸುತ್ತದೆ.

**ಉಮಾರಾವ್ ಅವರ ಕಾದಂಬರಿಯಲ್ಲಿನ ದಾಂಪತ್ಯದ ಸ್ವರೂಪ :**

ನೂರು ಸ್ವರದಲ್ಲಿ ದಾಂಪತ್ಯ ಜೀವನದ ಪರಿಪೂರ್ಣ ಚಿತ್ರಣ ಸಿಗುವುದಿಲ್ಲ. ಮೈಸೂರಿನಲ್ಲಿ ವಕೀಲ ಸೀತಾರಾಮರ ಮೊದಲ ಮಗಳಾದ ಗೌರಿಯ ಮುಂಬೈ ಜೀವನ ಕ್ರಮದ ಒಳಗೆ ಹಾಸು ಹೊಕ್ಕಾದ ಆಕೆಯ ತಂದೆ, ತಂಗಿ, ಗೆಳತಿ ಲಕ್ಷ್ಮಿ, ನೆರೆಮನೆಯ ಪೂನಂ ಇವರ ದಾಂಪತ್ಯವನ್ನು ಗ್ರಹಿಸುವ ಅವಿವಾಹಿತ ಗೌರಿಯ ಚಿಂತನೆಯ ತುಣುಕುಗಳಾಗಿ ಉಳಿದವರ ದಾಂಪತ್ಯ ಚಿತ್ರಣಗೊಳ್ಳುತ್ತದೆ.

> "ಇವರು ಇಂಗ್ಲೆಂಡಿನಿಂದ ನಿನ್ನೆ ರಾತ್ರಿ ವಾಪಸ್ಸು ಬಂದರು. ನಮಗಾಗಿ ಎಷ್ಟೆಲ್ಲಾ ಸಾಮಾನು ತಂದಿದ್ದಾರೆ ಗೊತ್ತಾ? ಒಳ್ಳೆ ಕ್ರಾಕರಿ, ಮಿಕ್ಸರ್, ಮ್ಯೂಸಿಕ್ ಸಿಸ್ಟಿಮ್, ಕಾರ್ಡ್‌ಲೆಸ್.... ಸ್ವೆಟರ್‌ಗಳು. ಮಕ್ಕಳಿಗಂತೂ ಏನು ಚೆನ್ನಾಗಿರೋ ಆಟದ ಸಾಮಾನು ತಂದಿದಾರೋ? ನೋಡೋಕೆ ಎರಡು ಕಣ್ಣು ಸಾಲದು. ಮುಂದಿನವಾರ ಅಪ್ಪ, ಅಮ್ಮನ್ನ ನೋಡಿಕೊಂಡು ಬರೋಣವೆಂದಿದ್ದೇನೆ. ಹೊಸ ಫಿಯಟ್ ಬುಕ್ ಮಾಡಿದ್ವಿ- ಇವತ್ತು- ನಾಳೆ ಬರುತ್ತೆ. ಅದರಲ್ಲೇ ಮೈಸೂರಿಗೆ ಹೋಗಬೇಕೆಂದಿದ್ದೇವೆ. ನಮ್ಮ ವೆಡಿಂಗ್ ಆನಿವರ್ಸರಿ ಅಲ್ಲೇ ಸೆಲೆಬ್ರೇಟ್ ಮಾಡೋಣಾಂತ....ನೀನು ಯಾವಾಗ ಬರ್ತೀಯಾ? ಎಲ್ಲರೂ ಸೇರಿ ಎಷ್ಟು ದಿನ ಆಯ್ತು ಮಕ್ಕಳೂ ನಿನ್ನ ಬಗ್ಗೆ ಕೇಳ್ತಿರ್ತಾರೆ. ಗೌರಿ, ನಾನೆಷ್ಟು ಸಂತೋಷವಾಗಿದೀನಿ ಗೊತ್ತಾ? ನೀನೇನೇ ಹೇಳು ಮದುವೆ ಆಗದ ಹೆಣ್ಣಿನ ಜೀವನದಂಥಾ ಬೋರ್ ಇನ್ನೊಂದಿಲ್ಲ." (ಉಮಾರಾವ್: ೧೯೯೯;೧೨)

ಗೌರಿಯ ತಂಗಿ ಪಾಪುವಿನ ಪತ್ರ ಸಾಮಾನ್ಯ ಗೃಹಿಣಿಯೋರ್ವಳು ತನ್ನ ದಾಂಪತ್ಯವನ್ನು ವಿವರಿಸುವಂಥದ್ದು. ಹೆಂಡತಿಗಾಗಿ ಮಕ್ಕಳಿಗಾಗಿ ಸದಾ ದುಡಿಯುವ ಗಂಡ. ಮನೆ, ಕಾರು, ಮಕ್ಕಳು ಇವು ಸಂತೃಪ್ತ ಗೃಹಿಣಿಯೋರ್ವಳ ಕನವರಿಕೆಗಳು. ಬಂಡವಾಳ ಸಮಾಜದ ಕೊಳ್ಳುಬಾಕ ಸಂಸ್ಕೃತಿಯಲ್ಲಿ ದಾಂಪತ್ಯದ ಮಾದರಿಯೊಂದು ಹೇಗಿರಬಹುದು ಎಂಬುದನ್ನು ಪಾಪುವಿನ ಪತ್ರದ 'ಸಂತೃಪ್ತ' ಸಾಲುಗಳು ಧ್ವನಿಸುತ್ತವೆ. ಪಾಪುವಿನ ಬದುಕಿಗಿಂತ ಗೌರಿಯ ಮೈಸೂರಿನ ಗೆಳತಿ ಲಕ್ಷ್ಮಿಯ ಬದುಕು ಭಿನ್ನವಾಗಿಲ್ಲ. ತಂದೆ ತಾಯಿ ಆರಿಸಿದ ಹುಡುಗನನ್ನು ಮದುವೆಯಾಗಿ, ತುಂಬು ಸಂಸಾರಗಳಲ್ಲಿ ಹೊಂದಿಕೊಂಡು, ಗಂಡಂದಿರಿಗೆ ಮಕ್ಕಳನ್ನು ಹೆತ್ತು ಕೊಟ್ಟು, ಅವರಿಗೆ ದಿನಾ ಹೋಂವರ್ಕ್ ಮಾಡಿಸಿ, ಗಂಡನಿಗೆ ಬೇಕಾದ ತಿನಿಸುಗಳನ್ನು ಮಾಡಿಕೊಡುವುದರಲ್ಲಿ ಅವರ ದಿನಗಳು ಉರುಳಿಹೋಗುತ್ತವೆ. ಗಂಡನಿಗೆ ಇಷ್ಟವಿಲ್ಲವೆಂದು ಸಂಗೀತ ಬಿಡುವ, ಮಕ್ಕಳೊಡನೆ ಹಿಂದಿಯಲ್ಲೇ ಮಾತಾಡುವ, ಯಾವಾಗಲೂ ವಿಮಲ್ ಸೀರೆಗಳನ್ನೇ ಉಟ್ಟು ತುರುಬು ಕಟ್ಟುವ, ಎಲ್ಲಿಗೆ ಹೋದರೂ ಗಂಡ ಮಕ್ಕಳೊಂದಿಗೇ ಹೋಗುವ, ಫೆಮಿನಾ ಟಿಪ್ಸ್ ಓದಿ ಅಡಿಗೆ ಮಾಡುವ ಲಕ್ಷ್ಮಿಯು ಆದರ್ಶಗೃಹಿಣಿ ಎನಿಸಿಕೊಳ್ಳುತ್ತಾಳೆ. ಜಹಾಂಗೀರ್ ಆರ್ಟ್ ಗ್ಯಾಲರಿಯಲ್ಲಿ ಸಿಕ್ಕಾಗ ಗೌರಿಯ ಜೊತೆ ಬೀಗಿ ಮಾತನಾಡುವ ರೀತಿಯಲ್ಲಿ ಅವಳ ಒಟ್ಟು ಬದುಕಿನ ಅಪೇಕ್ಷೆಗಳು ಪ್ರಕಟಗೊಳ್ಳುತ್ತವೆ. ಮುಂಬೈಯಲ್ಲಿ ಆಕಸ್ಮಿಕವಾಗಿ ಬೇಟಿಯಾಗುವ ಗೆಳತಿಯರಿಬ್ಬರ ಮಾತುಗಳಲ್ಲಿ ಇದು ಸ್ಪಷ್ಟವಾಗುತ್ತದೆ;

> "ಲಕ್ಷ್ಮಿ! ಎಷ್ಟುದಿನದ ಮೇಲೆ ಗುರುತು ಸಿಗೋಕೆ ಸ್ವಲ್ಪ ಸಮಯ ಬೇಕಾಯಿತು. ಎಷ್ಟು ಊದಿದಿಯಾ!"

"'ಸಂಸಾರ ಸುಖ' ಎಂದಿನಂತೆಯೇ ಕಿಲಕಿಲನೆ ನಕ್ಕಳು ಲಕ್ಷ್ಮಿ 'ಹೂಂ ಇಟ್ ಈಸ್ ಆಬ್ವಿಯಸ್!" (ಉಮಾರಾವ್ :೧೯೯೯;೧೦)

ಪಾಪು ಮತ್ತು ಲಕ್ಷ್ಮಿ ಅವರವರ ದಾಂಪತ್ಯದೊಳಗೆ ಸಂತೃಪ್ತರು. ಆದರೆ ಇವರಿಬ್ಬರ ಗಂಡಂದಿರ ಮೂಲಕ ಪಠ್ಯದಲ್ಲಿ ಅಭಿಪ್ರಾಯಗಳನ್ನು ಕಲೆಹಾಕುವುದು ಸಾಧ್ಯವಿಲ್ಲ. ಹಾಗಿದ್ದರೂ ಅವರಿಬ್ಬರ 'ನಿಲುವು'ಗಳಲ್ಲಿ ಮಧ್ಯಮವರ್ಗದ ಆಧುನಿಕ ದಾಂಪತ್ಯ ಜೀವನವು ಅನಾವರಣಗೊಂಡಿದೆ.

ಗೌರಿಯ ತಂದೆ ತಾಯಿಗಳು ಪರಸ್ಪರ ಹೊಂದಿಕೆಯಾಗದ ವ್ಯಕ್ತಿತ್ವದವರಾದರೂ ಮದುವೆಯಾಗಿದೆ ಮಕ್ಕಳಾಗಿದೆ ಎಂದು ಬದುಕನ್ನು 'ಬಂದಹಾಗೇ' ಒಪ್ಪಿಕೊಂಡವರು. ಇದರಲ್ಲಿ ಗೌರಿಯ ತಾಯಿ ಮಕ್ಕಳ ಸಂತೃಪ್ತ ಜೀವನ ನಡೆಸುವ ಗೃಹಿಣಿ ಎಂಬಂತೆ ಮೂಡಿಬಂದಿದ್ದಾಳೆ. ಹಿರಿಯ ಮಗಳು ಮುಂಬೈಯಲ್ಲಿ ಒಂಟಿಯಾಗಿರುವ ಗೌರಿ ಮದುವೆಯಾಗಿಲ್ಲ ಎಂಬುದು ಮಾತ್ರ ಅವಳ ಏಕೈಕ ಕೊರಗು. ಉಳಿದಂತೆ ಮನೆಯೊಳಗೆ ಅವಳದೇ ಆಡಳಿತ. ತಂದೆ ತಾಯಿಯರ ಇಂತಹ ದಾಂಪತ್ಯದಲ್ಲಿ ಗೌರಿಗೆ ತಂದೆಯ ಪುಸ್ತಕದೊಳಗೆ ಸಿಗುವ ಹಳೆಯ ಪತ್ರವೊಂದು ಅವಳ ಹೆತ್ತವರ ದಾಂಪತ್ಯವನ್ನು ವಿಶ್ಲೇಷಣೆ ನಡೆಸಲು ಕಾರಣವಾಗುತ್ತದೆ. ಲಾಯರ್ ಸೀತಾರಾಮ್ ಅವರ ಪುಸ್ತಕಗಳಲ್ಲಿ 'ಗಾನ್ ಮಿತ್'ದ ವಿಂಡ್' ಕೃತಿಯೊಳಗೆ ಗುಲಾಬಿ ಬಣ್ಣದ ಮಾಸಿದ ಕವರಿನಲ್ಲಿ ಇರುವ

"ಪ್ರೀತಿಯ ರಾಮ್

ನಾನು ನಾಳೆ ಹೊರಡುತ್ತೇನೆ. ಮತ್ತೆ ಸಿಗುತ್ತೀನೋ

ಇಲ್ಲವೋ ಗೊತ್ತಿಲ್ಲ

ನಿಮ್ಮ

ಕಮಲಾ." ( ಉಮಾರಾವ್ ೧೯೯೯ : ೪೨)

ಈ ಪತ್ರ ಗೌರಿಗೆ ತಂದೆಯ ಜೀವನ ನಿರೀಕ್ಷೆಯ ಬಗ್ಗೆ ಬೇರೆಯೇ ಕಥೆ ಹುದುಗಿದೆ ಎಂದು ಹೇಳುತ್ತದೆ. ಮಾತ್ರವಲ್ಲ ತಾಯಿ ತಂದೆಗೆ ಸರಿಯಾದ ಜೊತೆಯಲ್ಲ ಎನ್ನುವುದು ಆಕೆಯನ್ನು ತೀವ್ರವಾಗಿ ಕಾಡಲು ಆರಂಭವಾಗುತ್ತದೆ. ಅಲ್ಲಿಂದ ತಂದೆಯ ಪುಸ್ತಕದಲ್ಲಿ ಸಿಕ್ಕ ಪತ್ರದಲ್ಲಿನ ಕಮಲಾಳ ಹುಡುಕಾಟ ಅವಳಲ್ಲಿ ಪ್ರಾರಂಭವಾಗುತ್ತದೆ. ಇದು ಅವಳು ಮನೆಗೆ ಬರುತ್ತಿದ್ದ ಪ್ರತಿಯೊಬ್ಬ ಹೆಂಗಸನ್ನು ನೋಡುವುದರಲ್ಲಿ, ಕೋರ್ಟ್ ಕೇಸಿಗಾಗಿ ಬರುವ ಹೆಂಗಸರನ್ನು, ತಾಯಿಯ ಗೆಳತಿಯರನ್ನು, ಮದುವೆ ಮನೆಗೆ ಬರುವ ನೆಂಟರಲ್ಲಿ, ತಂದೆಯ ಕಾಲೇಜು ಫೋಟೋಗಳಲ್ಲಿ ಎಲ್ಲದರೊಳಗೆ ಹುಡುಕುವ ಸ್ಥಿತಿಗಳಲ್ಲಿ ಕಂಡು ಬರುತ್ತದೆ. ತಂದೆ 'ನಿರೀಕ್ಷಿಸುವ' ಸುಖವನ್ನು ತಾಯಿ ನೀಡುವುದು ಸಾಧ್ಯವಿಲ್ಲವೆಂದೇ ಅವಳ ಮನಸ್ಸು ಲೆಕ್ಕಹಾಕುವುದು ಕಮಲಾಳ ನೆಲೆಯಿಂದಲೇ ಆಗಿದೆ. ಇದನ್ನು ಪಠ್ಯವು ಶಕ್ತವಾಗಿ ತೆರೆದಿಡುತ್ತದೆ.

**ನೂರುಸ್ವರದ** ದಾಂಪತ್ಯ ಚಿತ್ರಣದಲ್ಲಿ ಕಂಡು ಬರುವ ಮತ್ತೆರಡು ಮಾದರಿಗಳೆಂದರೆ, ಪಕ್ಕದ ಮನೆಯ ಪೂನಂ ಮತ್ತು ಮನೆಕೆಲಸಕ್ಕೆ ಬರುವ ರಕುಮಾ ಇವರ ದಾಂಪತ್ಯ. ಪೂನಂಳ ಗಂಡ ಶ್ಯಾಂ ಮಗಳು ಶಶಿ. ಈ ಪುಟ್ಟ ಸಂಸಾರದಲ್ಲಿ ಅವರಿಬ್ಬರ ದಾಂಪತ್ಯ ಆರೋಗ್ಯ ಪೂರ್ಣವಾಗಿದೆ ಎಂದೇ ಗೌರಿ ಭಾವಿಸಿರುತ್ತಾಳೆ. ಆದರೆ ಪೂನಂ ಮಗಳೊಡನೆ ತವರಿಗೆ ಹೋದ ಸಂದರ್ಭದಲ್ಲಿ ಶ್ಯಾಂ ಇಲ್ಲದ ನೆಪವೂಡಿ ಗೌರಿಯ ಮನೆಗೆ ಬಂದ ನಂತರ ಅವಳ ತೀರ್ಮಾನ ಬೇರೆಯಾಗುತ್ತದೆ.

"ಹಿಹ್ಹಿ... ನಾನು ಕಾಫಿ ಕುಡಿಯೋಕೆ ಬಂದೆ ಅಂತಲ್ಲ ನಿಮಗೆ ಹೇಗೆ ಹೇಳಬೇಕೋ ಗೊತ್ತಾಗ್ತಾ ಇಲ್ಲ.... ನೋಡಿ ... ನಾನು ನಿಮ್ಮನ್ನು ನೋಡಿದ ದಿನದಿಂದ ಹುಚ್ಚನಾಗಿದ್ದೇನೆ." (ಉಮಾರಾವ್: ೧೯೯೯: ೩೨)

ಎಂದು ಅನುಚಿತವಾಗಿ ವರ್ತಿಸುವುದು ಒಟ್ಟು ಸೋನಂ- ಶ್ಯಾಂನ ದಾಂಪತ್ಯದ ಬಗ್ಗೆ ಅದಕ್ಕಿಂತಲೂ ಹೆಚ್ಚಾಗಿ ಶ್ಯಾಂ ವ್ಯಕ್ತಿತ್ವದ ಬಗ್ಗೆ ಗೌರಿಯಲ್ಲಿ ಹೇಸಿಗೆ ಹುಟ್ಟಿಸುತ್ತದೆ. ಹೆಂಡತಿಯ ಗಮನಕ್ಕೆ ಬಾರದಂತೆ ಗಂಡನೆನಿಸಿಕೊಳ್ಳುವವನು ಮತ್ತೊಬ್ಬ ಹೆಣ್ಣನ್ನು ಬಯಸುವುದನ್ನು ಆಯಾ ವ್ಯಕ್ತಿಗಳ ದೌರ್ಬಲ್ಯವಾಗಿ ಪರಿಗಣಿಸಬೇಕೇ ಅಥವಾ ಪುರುಷ ಸಂಸ್ಕೃತಿಯ 'ದಬ್ಬಾಳಿಕೆ'ಯಾಗಿ ನೋಡಬೇಕೆ ಎಂಬ ಪ್ರಶ್ನೆಯನ್ನು ಮುಂದಿಡುತ್ತವೆ. ಈ ಅಂಶ ಹೆಚ್ಚು ನಿರ್ದಿಷ್ಟತೆ, ಒತ್ತಡಗಳನ್ನು ಪಡೆದುಕೊಳ್ಳುವುದು ಕೆಲಸದ ರಕುಮಾ ತನ್ನ ಅವಳ ದಾಂಪತ್ಯದ ಬಗ್ಗೆ ಗೌರಿಯೊಡನೆ ಹೇಳಿಕೊಳ್ಳುವ ವಿವರಗಳಲ್ಲಿ;

"ಅಂದು ರುಕುಮಾ ಎಂದಿನಂತಿರಲಿಲ್ಲ. ತಲೆಕೆದರಿಕೊಂಡು, ಕುಂಕುಮ ಹಚ್ಚದೆ ಬಂದವಳು ಮನಸ್ಸಿಲ್ಲದ ಮನಸ್ಸಿನಿಂದ ಪಾತ್ರೆ ತೊಳೆದಳು. ಬಟ್ಟೆ ಒಗೆದಳು. ಯಾಕೆ ರಕುಮಾ ಮೈಸರಿಯಾಗಿಲ್ಲವೇನು? ಗೌರಿ ಕೇಳಿದಳು. ಹಾಗೇನಿಲ್ಲ, 'ತಬೀಯತ್ ಬರಾಬರ್ ಹೈ. ನನ್ನ ಗಂಡನೇ ನನ್ನ ದೊಡ್ಡ ತಲೆನೋವು.' ಏನಾಯ್ತು? ಮತ್ತೆ ಕುಡಿದು ಬಂದು ಹೊಡದ್ನೇನು? .

'ಹೂಂ, ಅಷ್ಟೇ ಆಗಿದ್ರೆ ಹೇಗೋ ಸುಮ್ನಿರ್ತಿದ್ದೆ, ನನ್ನ ಸವತೀನ ಕರ್ಕೊಂ ಬಂದಿದಾನೆ, ನೆನ್ನೆ ಸಂಜೆ ಆ ರಂಡೇನ್ನ ಮನೆಗೆ ಕರ್ಕೊಂಡು ಬಂದ...... 'ನೀನೇಕೆ ಬೇಡ ಅನ್ನಲಿಲ್ಲ ?'" .

'ಬೇಡ ಅಂದ್ರೆ ಕೇಳ್ತಾನಾ ಹೇಳ್ತಾನೆ, ಸುಮ್ಮನಿರಬೇಕಂತೆ. ನಾನು ತೆಪ್ಪಗೆ ಇಲ್ಲದಿದ್ರೆ ನನ್ನನ್ನೇ ಹೊರಗೆ ಹಾಕ್ತಾನಂತೆ ಮನೆಯಿಂದ, ಬಾಯಿ, ನಾನು ಸಂಪಾದಿಸಿ ತಕೊಂಡ ಮನೆ ಇದು, ನೋಡಿ ಅವನ ಅಹಂಕಾರ, ಹುಂ ಹಾಳಾಗಿ ಹೋಗಲೀಂತ ಬೆಳಗಾಗೆದ್ದು ನನ್ನ ಸೀರೆ, ರವಿಕೆ ಕೊಟ್ಟೆ ಅವಳಿಗೆ ಉಟ್ಕೊಳ್ಳೋಕೆ."

ಅವನು ಮಾಡಿರೋದು ಸರಿಯಲ್ಲ ರಕುಮಾ, ಪೋಲೀಸ್‌ಗೆ.....'

"ಪೋಲೀಸ್ ಕೋರ್ಟ್ ಎಲ್ಲಾ ಪ್ರಯೋಜನ ಇಲ್ಲ. ನಾನೇ ಸರಿ ಮಾಡ್ತೀನಿ ಅವನನ್ನು. ಆಗಲಿ ಒಂದಷ್ಟು ದಿನ ಪೋಲೀಸ್‌ಗೆ ತಿನ್ನಿಸೋಕೆ ಪೈಸಾ ಎಲ್ಲಿದೆ ನನ್ನತ್ರ?"

ಗೌರಿ ಏನೂ ಹೇಳಲೂ ತೋಚದೆ ಸುಮ್ಮನಾದಳು. ರಕುಮಾ ಕಣ್ಣೊರಸಿಕೊಂಡು ಕಸ ಗುಡಿಸಲಾರಂಭಿಸಿದಳು.

ಹೋಗ್ಲಿ ಈಗ ಕೆಲಸಕ್ಕೆ ತಪ್ಪದೆ ಹೋಗ್ತಾನಾ....

"ಇಲ್ಲ ಬಾಯಿ, ಹೋದರೆ ಹೋದ ಇಲ್ದಿದ್ರೆ ಇಲ್ಲ. ಇನ್ನ ಮಳೆಗಾಲ ಬಂದರಂತೂ ಮೂರು ತಿಂಗಳ ಮಟ್ಟಿಗೆ, ಗಾರೆ ಕೆಲಸವೇ ಬಂದ್ ಆಗುತ್ತಲ್ಲಾ. ಇನ್ನು ಇವಳು ಬೇರೆ ಬಂದಿದಾಳೆ. ಬೆಳಗ್ಗೆ ಎದ್ದು ಅವಳಿಗೆ ಸ್ನಾನಕ್ಕೆ ಬಿಸಿನೀರು ಬೇರೆ.... ಕಾಸಿಕೊಟ್ಟು ಬಂದೆ. ಅವಳನ್ನು ಅಂದೇನು ಪ್ರಯೋಜನ ನಮ್ಮ ಬಂಗಾರನೇ ಸರಿ ಇಲ್ಲದಾಗ...." (ಉಮಾರಾವ್ ೧೯೯೯ ; ೫೨-೫೩)

ಹೆಂಗಸು ಗಂಡಿನ ದಬ್ಬಾಳಿಕೆಯನ್ನು ಸಹಿಸುವುದು, ಅನಿವಾರ್ಯತೆಯ ನೆಲೆಯಲ್ಲಿ. ಇದನ್ನು ಪುರುಷ ಸಂಸ್ಕೃತಿ ಗೆಲುವಿನ ಅಂಶವಾಗಿ ಸ್ವೀಕರಿಸುತ್ತದೆ ಮತ್ತು ಹೆಣ್ಣಿನ ಮಣಿಯುವಿಕೆಯನ್ನು ಗಂಡುತನದ ಜಯವಾಗಿ ಪರಿಭಾವಿಸುತ್ತದೆ. ಆಯಾ 'ವರ್ಗ'ಗಳಿಗೆ ಅನುಗುಣವಾಗಿ ಪರಿಸ್ಥಿತಿಗಳು ಬೇರೆ ಬೇರೆಯಾದರೂ ಒಟ್ಟು ಮಹಿಳೆಯರು ಎದುರಿಸುವ ದಾಂಪತ್ಯದ ತಲ್ಲಣಗಳು ಏಕ ರೂಪದವಾಗಿರುತ್ತವೆ. ಗಂಡಸರು ಪರಸ್ತ್ರೀಯನ್ನು ಕಾಮಿಸುವುದನ್ನು, ಬಯಸುವುದನ್ನು ಸಮಾಜ ಪರಿಗಣಿಸುವ ಹಿನ್ನೆಲೆ ಕೂಡ ಗಂಡಸರಿಗೆ ಪೂರಕವಾಗಿಯೇ ರಚನೆಗೊಂಡಿರುತ್ತದೆ. ಸ್ತ್ರೀಯೊರ್ವಳು ಪರ ಪುರುಷನೊಂದಿಗೆ ಸಂಬಂಧ ಇರಿಸಿಕೊಳ್ಳುವುದನ್ನು ಅಪರಾಧವಾಗಿ ಕಾಣುವ ಸಮಾಜ ಪುರುಷನ ಸಂದರ್ಭಗಳಿಗೆ ಬಂದಾಗ ಹೆಚ್ಚು ರಿಯಾಯಿತಿ ತೋರಿಸುತ್ತದೆ. ವ್ಯಕ್ತಿಗಳಿಗೆ ಸೀಮಿತಗೊಳಿಸಿ ದಾಂಪತ್ಯದಲ್ಲಿ ಪರಸ್ಪರ ಒಪ್ಪಿ ಕೊನೆಯವರೆಗೂ ನಂಬಿಕೆಯನ್ನು ಉಳಿಸಿಕೊಂಡು ಬಾಳಲು ಸ್ತ್ರೀ-ಪುರುಷರಿಬ್ಬರಲ್ಲೂ ಸೃಜನಶೀಲವಾದ ಮತ್ತು ಪರಿಪಕ್ವವಾದ ಸ್ವಭಾವಗಳಿರಬೇಕಾದುದು ಪ್ರಾಥಮಿಕ ಅವಶ್ಯಕತೆಯಾಗುತ್ತದೆ. ಹೀಗಿದ್ದಾಗ ದಾಂಪತ್ಯದಲ್ಲಿ ಸಂದರ್ಭವನ್ನು ಅರಿತು ಗಂಡ- ಹೆಂಡತಿ ಎನ್ನುವ ಬೇಧವಿಲ್ಲದೆ ಬಾಳಲು ಸಾಧ್ಯವಾಗುತ್ತದೆ. ಪ್ರಮೇಯವಾಗಿ ಪರಸ್ಪರ 'ಅರ್ಥಮಾಡಿಕೊಳ್ಳುವ' ದಾಂಪತ್ಯವನ್ನು ಸಾರ್ವತ್ರಿಕಗೊಳಿಸಿ ರೇಖಾತ್ಮಕವಾಗಿ ಚಿತ್ರಿಸಬಹುದಾದರೂ ವ್ಯಕ್ತಿಗಳ ಸ್ವಭಾವಗಳು ಅವರ ಪರಿಸರ ದೃಷ್ಟಿಕೋನಗಳು ಆಯಾ ವ್ಯಕ್ತಿಗಳ ದಾಂಪತ್ಯವನ್ನು ನಿಯಂತ್ರಿಸುತ್ತಿರುತ್ತವೆ. ಈ ನೆಲೆಯಿಂದ ಆಧುನಿಕ ವ್ಯಕ್ತಿಗಳ ಜೀವನ ಸಂಘರ್ಷವನ್ನು 'ನೂರುಸ್ವರ' ದಾಖಲಿಸುವ ಪ್ರಯತ್ನ ನಡೆಸುತ್ತದೆ.

**ಕೂಡುಕಟ್ಟಿನ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ದಾಂಪತ್ಯದ ಸ್ವರೂಪ :**

೧) ಆಧುನಿಕ ಜಾಗತೀಕರಣದ ಪ್ರಕ್ರಿಯೆಗೆ ತೆರೆದುಕೊಳ್ಳುವ ಕುಟುಂಬದ ಸಂರಚನೆಗಳಲ್ಲಿ ದಾಂಪತ್ಯದ ಪರಿಕಲ್ಪನೆಯು ಯಾವ ಬಗೆಯಲ್ಲಿ ಕೊಳ್ಳುಬಾಕ ಸಂಸ್ಕೃತಿಗೆ ತೆರೆದುಕೊಳ್ಳುತ್ತದೆ ಎನ್ನುವುದನ್ನು ನೂರು ಸ್ವರ ಕೃತಿಯು ನಿರೂಪಿಸುತ್ತದೆ ಮಾತ್ರವಲ್ಲ 'ಮೆಟೀರಿಯಲಿಸಂ' ದಾಂಪತ್ಯದ ಸಂವೇದನಾ ಶೀಲತೆಯನ್ನು ಮೇಲ್‌ಪದರದಲ್ಲಿ ಬೆಸೆಯುತ್ತದೆ ಎನ್ನುವುದನ್ನು ಅನಾವರಣಗೊಳಿಸುತ್ತದೆ.

'ಶಿವಗಂಗಾ' ಇದಕ್ಕಿಂತ ಭಿನ್ನವಾದ ರೀತಿಯಲ್ಲಿ ದಾಂಪತ್ಯವನ್ನು ಮರುಕಲ್ಪಿಸುವ ಪ್ರಯತ್ನಗಳ ಮಾದರಿಯನ್ನು ಮುಂದಿಡುತ್ತದೆ. ಇವು ಅನನ್ಯ ಸಾಂಸ್ಕೃತಿಕ ನೆಲೆಯಲ್ಲಿನ ವೈವಾಹಿಕ ಜೀವನಗಳ ಸಂಘರ್ಷಗಳನ್ನು ಮಾತ್ರ ತೆರೆದಿಡುವ ಪ್ರಯತ್ನಗಳಾಗಿರದೆ, ಪಾತ್ರಗಳು ಅವುಗಳ ಒಡಲೊಳಗೆ ವೈರುಧ್ಯಗಳನ್ನು ದರ್ಶಿಸುವ ಮೂಲಸೆಲೆಗಳಾಗಿವೆ.

೨) ಆಧುನಿಕ ಔದ್ಯೋಗಿಕ ಆವರಣವು ದಾಂಪತ್ಯದ ಏಕತಾನತೆಗೆ ಕಾರಣಗಳಾಗುವುದನ್ನು ವಿವರಿಸುವಲ್ಲಿ ಅನನ್ಯ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ಶೋಧನಾತ್ಮಕ ರಚನೆಗಳಾಗಿವೆ.

೩) ಕೂಡುಕಟ್ಟಿನ ಕಾದಂಬರಿಗಳ ಒಡಲು ದಾಂಪತ್ಯದ ಒಳಗೆ ಮತ್ತು ಹೊರಗೆ ಸ್ತ್ರೀಯರ ಸ್ವಾತಂತ್ರ್ಯದ ಸಾಧ್ಯಾ ಸಾಧ್ಯತೆಗಳನ್ನು ಒರೆಗೆ ಹಚ್ಚುವ ರಚನಾ ಬಂಧಗಳಾಗಿವೆ. ಆದ್ದರಿಂದ ಬದುಕಿನ ಧೋರಣೆಗಳನ್ನು ಹಲವು ಕೋನಗಳಲ್ಲಿ ಇಟ್ಟು ನೋಡುವ ಪ್ರಯತ್ನ ಇಲ್ಲಿ ಸಾಧ್ಯವಾಗಿದೆ.

೪) ದಾಂಪತ್ಯದ ಪರ್ಯಾಯ ಸಾಧ್ಯತೆಗಳಾದ ಗಂಡು- ಹೆಣ್ಣು ವಿವಾಹಿತರಾಗದೆ ಒಟ್ಟಿಗೆ ಇರುವ ಸಂಬಂಧ, ಲಿಸ್ಬಿಯನ್ ವೈವಾಹಿಕ ಸ್ವರೂಪಗಳು ಸಾಧ್ಯತೆಗಳ ಮಾದರಿಗಳಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಈ ಸಂಬಂಧಗಳು ಎದುರಿಸುವ ಸಾಮಾಜಿಕ ಒತ್ತಡಗಳನ್ನು ಪಾತ್ರಗಳ ಸಂವಿಧಾನಗಳಲ್ಲಿ ಸ್ಪಷ್ಟವಾಗಿ

ಗುರುತಿಸುವುದು ಕಷ್ಟವಾಗುತ್ತದೆ. ಇದಕ್ಕಿಂತ ಭಿನ್ನವಾಗಿ ಒಂಟಿಯಾಗಿ ಬದುಕುವ ಸಾಧ್ಯತೆ ಹೆಚ್ಚು ಸುರಕ್ಷಿತವೆಂಬಂತೆ ಮೂಡಿಬಂದಿದೆ. ಇಲ್ಲಿ ವಿವಾಹದ ಬಂಧನವನ್ನು ಹೆಚ್ಚು ಪರಿಣಾಮಕಾರಿಯಾಗಿ ಮೀರುವುದು ಸಾಧ್ಯವಾಗುತ್ತದೆ. ಎಂದರೆ, ಆರ್ಥಿಕ ಸ್ವಾವಲಂಬನೆಯಿಂದ ಸ್ತ್ರೀಯರು ಒಂಟಿ ಬಾಳಿಗೆ ಯಶಸ್ವಿಯಾಗಿ ಹೊಂದಿಕೊಳ್ಳಬಹುದಾಗುತ್ತದೆ.

### ೫.೩.೩ ಕೂಡುಕಟ್ಟಿನ ಕಾದಂಬರಿಗಳು: ಕೌಟುಂಬಿಕ ಸ್ವರೂಪ.

**ಚಂಪಾವತಿಯವರ ಕಾದಂಬರಿಯಲ್ಲಿ ಅಭಿವ್ಯಕ್ತಗೊಂಡಿರುವ ಕೌಟುಂಬಿಕ ಸ್ವರೂಪ :**

ವಿವಾಹ ಮತ್ತು ವೈವಾಹಿಕ ಸಂಬಂಧದ ಸಂಕೀರ್ಣತೆಯನ್ನು ಹಲವು ಮೂಲಗಳಿಂದ ಅರ್ಥೈಸುವ ಗ್ರಹಿಸುವ ಪ್ರಯತ್ನ ಚಂಪಾವತಿಯವರ ಕಾದಂಬರಿಯಲ್ಲಿ ಸಹಜವಾಗಿ ಪ್ರಕಟಗೊಳ್ಳುತ್ತದೆ. ಹಾಗೆಯೇ 'ಕುಟುಂಬ'ದ ಸ್ಥಿತಿಸ್ಥಾಪಕತ್ವದ ನೆಲೆಯಲ್ಲಿ ಆಧುನಿಕ ಬದುಕು ಎದುರಿಸಬೇಕಾದ ವೈರುದ್ಧಗಳು, ತುಮುಲ, ದ್ವಂದ್ವ, ಘರ್ಷಣೆಗಳು ಸಾಂಸ್ಕೃತಿಕವಾಗಿ ಅನಾವರಣಗೊಳ್ಳುತ್ತವೆ. ಹಳ್ಳಿಯ ಕುಟುಂಬ ವ್ಯವಸ್ಥೆಯೊಳಗಿನ ಸದಸ್ಯರ ಸಂಬಂಧಗಳು, ಅವುಗಳ ಸ್ಥಿತಿಸ್ಥಾಪಕತ್ವ ಅಂಶಗಳನ್ನು ಉದ್ದೇಶ ಪೂರ್ವಕವಾಗಿ ಆಧುನಿಕ ನಗರ ಕುಟುಂಬ ವ್ಯವಸ್ಥೆಗೆ ಎದುರು ಬದುರಾಗಿ ನಿಲ್ಲಿಸಿ, 'ಪರ್ಯಾಯ'ದ ಕೌಟುಂಬಿಕ ರಚನೆಗಳನ್ನು ಶೋಧಿಸುವುದು ಶಿವಗಂಗಾ ಕಾದಂಬರಿಯ ಪಠ್ಯದೊಳಗಿನ ತಾತ್ವಿಕ ತಳಹದಿಯಾಗಿದೆ.

ಹೊನ್ನೆಕೆರೆಯಂತಹ ಹಳ್ಳಿಯಲ್ಲಿ ಗಂಗಾಳ ತಂದೆ ತಾಯಿ ಕಟ್ಟಿದ ಕುಟುಂಬ ಹೆಚ್ಚು ಶಿಥಿಲವಾದದ್ದು. ಇದರಲ್ಲಿ ತಂದೆ- ತಾಯಿ ಒಟ್ಟಿಗೆ ಓಡಾಡಿದ್ದನ್ನು ಮಾತಾಡಿದ್ದನ್ನು ಮಕ್ಕಳು ಕಂಡವರೇ ಅಲ್ಲ. ಗಂಗಾ ನೆನಪಿಸಿಕೊಳ್ಳುವ ಅವಳು ಬೆಳೆದ ಕುಟುಂಬ, ಬಾಲ್ಯದ ದಿನಗಳೆಂದರೆ, ತಟ್ಟೆ ಲೋಟ ಬಿಸಾಕುವ ದೃಶ್ಯ, ತಾಯಿಯ ರೋದನ, ತಂದೆಯ ಬೈಗಳ ಏಟು, ಸಿಟ್ಟು ಮಾಡಿಕೊಂಡು ಮನೆ ಬಿಟ್ಟು ಹೋಗುವ ತಾಯಿ ಇತ್ಯಾದಿಗಳೇ ಆಗಿವೆ. ಇಂತಹ 'ಕಲುಷಿತ' ಕುಟುಂಬದೊಳಗಿನ ಬಾಲ್ಯದ ಅವಳ ಲೈಂಗಿಕ ಅನುಭವ ಕೂಡ 'ಹಿಂಸಾತ್ಮಕ' ನೆಲೆಯದ್ದು.

> "ಒಂಟಿಯಾಗಿ ಮಲಗಿ ನಿದ್ದೆ ಮಾಡುತ್ತಿದ್ದಾಗಲೊಮ್ಮೆ ಅಣ್ಣನ ಕೈಗಳು ತನ್ನ ಮೇಲೆ ಹರಿದಾಡಿದ್ದು ಗಂಗಾಗೆ ಜ್ಞಾಪಕಕ್ಕೆ ಬರುತ್ತದೆ. ಅಣ್ಣನ ಚಡ್ಡಿಯಿಂದ ಈಚೆ ಬಂದ ಅಲುಗಾಡುವ ವಸ್ತುವೊಂದನ್ನು ತನ್ನ ಚಡ್ಡಿಯೊಳಗೆ ತೂರಿಸಿ ಅದನ್ನು ಸವರುತ್ತಾ ಕೊನೆಗೆ ಸಿಂಬಳ ಸಿಂಬಳವೆಲ್ಲ ತೊಡೆಗೆ ಹತ್ತಿದಂತಾಗಿ ಗಂಗಾ ಗುಬ್ಬಚ್ಚಿ ಮರಿಯಾಗಿ ಹೆದರಿ ಓಡಿ ಅಡಿಗೆ ಮನೆಯಲ್ಲಿ ಅಮ್ಮನನ್ನು ಅಪ್ಪಿಕೊಂಡಿದ್ದಳು. ಬಿಕ್ಕಿ ಬಿಕ್ಕಿ ಅತ್ತಿದ್ದಳು. ಅಣ್ಣ ಮಲಗಲು ಬಿಡುವುದಿಲ್ಲ. ಅದೇನೇನೋ ಮಾಡುತ್ತಾನೆ. ನೋಡು ಇಲ್ಲಿ, ಎಂತಹದೋ ಸಿಂಬಳ, ಸಿಂಬಳ ಅಮ್ಮ ಅಣ್ಣನಿಗೆ ಗದರುತ್ತಾಳೆ. ತನಗೂ ಗದರುತ್ತಾಳೆ. ನನ್ನ ಹತ್ತಿರವೇ ಮಲಗು ಎನ್ನುತ್ತಾಳೆ." (ಚಂಪಾವತಿ ಎಚ್.ಎಸ್. ೧೯೯೭ ೩೧)

ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ನಿರೀಕ್ಷಿಸುವ 'ಭದ್ರತೆ' ಸಿಗುವುದು ದುಸ್ತರವಾದರೆ ಅಂತಹ ಹೆಣ್ಣುಗಳು ಒಂದೋ ಆ ವ್ಯವಸ್ಥೆಯೊಳಗೆ ನಲುಗಿ ಅನಿವಾರ್ಯ ಜೀವನ ನಡೆಸಬೇಕಾಗುತ್ತದೆ. ಇಲ್ಲವೇ ಆತ್ಮಹತ್ಯೆ ಮಾಡಿಕೊಳ್ಳಬೇಕಾಗುತ್ತದೆ. ಜೀವನವನ್ನು ಎದುರಿಸುವ ಧೈರ್ಯವಿದ್ದ ಹೆಣ್ಣು ಮಕ್ಕಳಾದರೆ, ಪಲಾಯನ ಮಾಡಬೇಕಾಗುತ್ತದೆ. ಪಲಾಯನವೆಂದರೆ, ಇಲ್ಲಿ ಪೂರ್ವದ ಬದುಕಿಗಿಂತ ಭಿನ್ನವಾದ ಆಯ್ಕೆ ಎಂಬುದಷ್ಟೇ

ಆಗುತ್ತದೆ. ಗಂಗಾ ಓದಲೆಂದು ಅವಳ ಊರು ಹೊನ್ನೆಕೆರೆಯನ್ನು ಹೆತ್ತವರಿಗೆ ತಿಳಿಸದೆ ತೊರೆದು ಶಿವಮೊಗ್ಗೆಯ ಹಾಸ್ಟೆಲ್ ಸೇರಿಕೊಳ್ಳುವುದು ಇದಕ್ಕೆ ನಿದರ್ಶನ. ಕುಟುಂಬದ ರಚನೆಯ ಒಳಗೆ ಸ್ತ್ರೀಯರು ಎದುರಿಸುವ ವೈರುಧ್ಯಗಳು ಹಲವಾರು. ಹೆಣ್ಣು ಮಕ್ಕಳು ಹೊಸ್ತಿಲು ದಾಟಿ ಹೋಗುವುದು, ಮುಕ್ತವಾಗಿ ಓಡಾಡುವುದು, ಹಲವಾರು ಸಾಂಪ್ರದಾಯಿಕ ಕುಟುಂಬಗಳಲ್ಲಿ ಅಕ್ಷಮ್ಯ ಅಪರಾಧ. ಹಾಗಾಗಿ ಅಂತಹ ಕುಟುಂಬಗಳಲ್ಲಿ ಕಟ್ಟುನಿಟ್ಟು, ಬಿಗಿ ಹೆಚ್ಚಾಗಿರುತ್ತದೆ. ಹೊನ್ನೆಗೆರೆಯ ಗಂಗಾಳ ಹಲವು ಗೆಳತಿಯರ ಕುಟುಂಬ ಇದೇ ಬಗೆಯದು.

ಮಡಿ ಮೈಲಿಗೆಯನ್ನು ಆಚರಿಸುವ ಹಲವು ಕುಟುಂಬಗಳಲ್ಲಿ ರಜಸ್ವಲೆಯಾದ ಮೂರು ದಿನಗಳು ಹೆಣ್ಣು ಮಕ್ಕಳಿಗೆ ತೀವ್ರ ಏಕಾಂತದ ಅಸಹನೀಯ ಬದುಕಾಗಿರುತ್ತದೆ. ಅನುರಾಧ, ಜಯ ಇವರ ಅನುಭವಗಳು ಈ ಅಸಹಾಯಕತೆಯನ್ನು ಮೀರುವ ಪ್ರಯತ್ನಗಳಾಗಿವೆ. ಕುಟುಂಬದಲ್ಲಿ ಸ್ತ್ರೀಯರು ಎದುರಿಸುವ ಅಸ್ವಾತಂತ್ರ್ಯ, ಪರಾವಲಂಬನೆ, ಹೆಂಡತಿಯರನ್ನು ಹೊಡೆದು ಬಡಿದು ಹಿಂಸಿಸುವುದು, ಲೈಂಗಿಕ ದೌರ್ಜನ್ಯ, ಗಂಡು-ಹೆಣ್ಣಿಗೆ ಶಿಕ್ಷಣದಲ್ಲಿ ಕುಟುಂಬದ ತಾರತಮ್ಯ ನೀತಿ, ಋತುಚಕ್ರದಂತಹ ಜೈವಿಕ ಕಾರಣಗಳಿಗೆ ಹೆಣ್ಣು ಹೀನಾಯವಾಗಿ ಅವಗಣನೆಗೆ ಒಳಗಾಗುವುದು, ವರದಕ್ಷಿಣೆ, ಸಾವು, ಇಂತಹ ವ್ಯಾಪಕ ಕೌಟುಂಬಿಕ ಸಮಸ್ಯೆಗಳು ಹೊನ್ನೆಗೆರೆಯಲ್ಲಿ ಗಂಗಾ ಮತ್ತು ಅವಳ ಗೆಳತಿಯರು ಕೂಡಿ ಹುಟ್ಟುಹಾಕಿದ 'ಗೆಳತಿಯರ ಬಳಗ'ದಲ್ಲಿ ಬಯಲಾಗುತ್ತವೆ; ಚರ್ಚೆಗೆ ಒಳಗಾಗುತ್ತವೆ. ಅಲ್ಲಿನ ಯುವತಿಯರು ಪ್ರಜ್ಞಾವಂತಿಕೆಯನ್ನು ಬೆಳಸಿಕೊಂಡರೂ ಕೌಟುಂಬಿಕ ಸಂರಚನೆಯ ಒಳಗೆ ಅನಿವಾರ್ಯವಾಗಿ ವರದಕ್ಷಿಣೆ ಕೊಟ್ಟು ವಿವಾಹಿತರಾಗುವುದು ಕೌಟುಂಬಿಕ ಸಮಸ್ಯೆಯ ಸಂಕೀರ್ಣತೆಯನ್ನು ಒಡೆದು ತೋರಿಸುತ್ತದೆ. ಕುಟುಂಬದೊಳಗೆ ಅಂತಿಮವಾಗಿ ಮಾನ್ಯಮಾಡಬೇಕಾದ 'ಪುರುಷ ಮೌಲ್ಯ' (Male values)ಗಳು ಸಾಂಪ್ರದಾಯಿಕ ಕುಟುಂಬ ರಚನೆಗಳಲ್ಲಿ ಅಥವಾ ಕೂಡು ಕುಟುಂಬ ಮತ್ತು ಸರಳ ಕುಟುಂಬಗಳಲ್ಲಿ 'ಸಹಜ'ವೆಂಬಷ್ಟು ಅನಿವಾರ್ಯವಾಗುವುದು ಪಠ್ಯದೊಳಗೆ ಅಭಿವ್ಯಕ್ತಗೊಳ್ಳುತ್ತದೆ.

ಕೌಟುಂಬಿಕವಾಗಿ ವ್ಯಕ್ತಿಗತ ಶೋಧದ ನೆಲೆಯಿಂದ ಬದುಕನ್ನು ಕಟ್ಟುವ ಪ್ರಯತ್ನ ಗಂಗಾಳ ಕುಟುಂಬದಲ್ಲಿ ವ್ಯಕ್ತವಾಗುತ್ತದೆ. ಇದು 'ಸಂಸಾರ', 'ಮಕ್ಕಳು', 'ಮನೆ'ಯನ್ನು ಸಾಧಿಸುವ ಆದರ್ಶ ನೆಲೆಯ ಪ್ರಯತ್ನ. ಇದರೊಳಗೆ ಅಣ್ಣನ ಮಗಳು ಸಾಧನಾಳ ಸಾವು. ಗಂಗಾಳ ಅಕಾಲದಲ್ಲಿ ಉದುರುವ ಹಲ್ಲುಗಳು ಮೃತ್ಯುವಿನ ಭೀತಿಯನ್ನು ಅವಳೊಳಗೆ ಮೂಡಿಸಿ ಬದುಕನ್ನು ಹೊಸ ಅರ್ಥದಲ್ಲಿ ಪರಿಭಾವಿಸಲು ಒತ್ತಾಯಿಸುತ್ತವೆ. ವಿದೇಶಕ್ಕೆ ಒಬ್ಬಳೇ ಹೋಗಿ ಬಂದ, ಬೆಂಗಳೂರಿನಲ್ಲಿ ಹಲವಾರು ವಿದ್ಯಾರ್ಥಿಗಳಿಗೆ ಪಾಠ ಹೇಳುವ, ಮಹಿಳಾ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಗಂಗಾಳ ವ್ಯಕ್ತಿತ್ವಕ್ಕೆ ಪರಿಪೂರ್ಣ ಜೀವನ ದೃಷ್ಟಿ ಇದೆ. ರಮೇಶ ಕೆಲಸದಲ್ಲಿ ತೊಡಗಿಸಿಕೊಂಡ ಶ್ರದ್ಧೆಯು ಗಂಗಾಳಲ್ಲಿ ಕಂಡುಬರುವುದಿಲ್ಲ. ಅವಳ ಸಾಮರ್ಥ್ಯವೆಲ್ಲ ತನ್ನ ಕನಸಿನ ಕುಟುಂಬವನ್ನು ಸಾಕಾರಗೊಳಿಸುವಲ್ಲಿ ಕಳೆದುಹೋಗುತ್ತದೆ. ಇದರಿಂದ ಅವಳ ಅಂತರಂಗದ ಆತಂಕಗಳು ಹೊಸ ಅವಕಾಶವೊಂದನ್ನು ಎದುರು ನೋಡುವಂತೆ ಮಾಡುತ್ತವೆ. ಸಾಂಸ್ಕೃತಿಕ ವಾತಾವರಣದಲ್ಲಿ ತೊಡಗಿಸಿಕೊಳ್ಳಲಾಗದ, ಓಡಾಡಲಾರದ, ಏನೂ ಮಾಡಲಾಗದ ಗಂಗಾಳಿಗೆ ತನ್ನ ಮತ್ತು ಅವಿವಾಹಿತ ಮಧುವಿನ ನಡುವೆ ಏರ್ಪಡುವ ಸಂಬಂಧ ಒಂದು ಚೈತನ್ಯದ ಸಂಕೇತವಾಗಿ ಕಂಡು ಬರುತ್ತದೆ. ಕೌಟುಂಬಿಕ ರಚನೆಯಲ್ಲಿ ವ್ಯಕ್ತಿಗತ ಸ್ವರೂಪಗಳ ಜಿಜ್ಞಾಸೆ ಬಂಡವಾಳಶಾಹಿ ಸಮಾಜ ಹುಟ್ಟು ಹಾಕುವ ಆಯ್ಕೆಗಳ ಆಧಾರದಲ್ಲಿ ಆರಂಭಗೊಳ್ಳುತ್ತದೆ. ಇದರೊಳಗೆ ಕುಟುಂಬದ ಸದಸ್ಯರು ಪರಕೀಯತೆಯನ್ನು ಅನುಭವಿಸುವ,

ಅನಾಥ ಪ್ರಜ್ಞೆಯಿಂದ ನರಳುವ ಅಂಶಗಳು ಬಿಡಿಸಲಾಗದ ಕಗ್ಗಂಟುಗಳಾಗಿ ಪರಿಣಮಿಸುತ್ತವೆ. ಇದರೊಳಗೆ ಗಳಿಸುವ ಜವಾಬ್ದಾರಿ ಮತ್ತು ಕೆಲಸದ ಜವಾಬ್ದಾರಿಗಳನ್ನು ಗಂಡ- ಹೆಂಡತಿ ಸಮನಾಗಿ ನಿಭಾಯಿಸಿದರೆ ಮಾತ್ರ ಕುಟುಂಬದೊಳಗೆ 'ಐಕ್ಯತೆ'ಯ 'ಸಾಮರಸ್ಯ'ದ ವಾತಾವರಣ ನಿರ್ಮಿಸುವುದು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಗಂಗಾ- ರಮೇಶ, ರೋಹಿಣಿ- ಥಾಂಸನ್, ಸಾಶಾ- ಲೈಲಾಸ್ (ಲೆಸ್‌ಬಿಯನ್ ಮಾದರಿ) ಇವರ ಕುಟುಂಬಗಳು ಬಂಡವಾಳ ಸಮಾಜ ಹುಟ್ಟು ಹಾಕುವ ವೈರುಧ್ಯಗಳನ್ನು ಎದುರಿಸುವ ಮಾದರಿಗಳಾಗಿ ಪರಿಣಮಿಸುವುದು ಕಂಡು ಬರುತ್ತದೆ. ಹೆಣ್ಣನ್ನು ಖಾಸಗಿ ಆಸ್ತಿ ಎಂಬ ಪರಿಭಾವನೆಯನ್ನು ಎತ್ತಿ ಹಿಡಿಯುವ ಕುಟುಂಬದ ಕಲ್ಪನೆಗೆ ವಿರುದ್ಧವಾದ ಆಧುನಿಕ ಕುಟುಂಬದ ಸಂರಚನೆಯಲ್ಲಿ ಇವರೆಲ್ಲರೂ ಬದುಕುವ ಪ್ರಯತ್ನ ನಡೆಸುತ್ತಾರೆ. ಇದರೊಳಗೆ ಗಂಗಾ, ರೋಹಿಣಿ, ಸಾಶಾ ಇವರಂತಹ ಸ್ತ್ರೀಯರು ಎದುರಿಸುವ ಪುರುಷರ ಅಹಂ ಕೇಂದ್ರಿತ ವರ್ತನೆಗಳು, ಲೈಂಗಿಕ ರಾಜಕೀಯ ಇವುಗಳು ಬಂಡವಾಳಶಾಹಿ ವ್ಯವಸ್ಥೆಯ ಅನಿವಾರ್ಯ ಭಾಗವೆಂಬಂತೆ ಭಾಸವಾಗುತ್ತದೆ. ಮಕ್ಕಳನ್ನು ಹೆರುವ, ಅವರನ್ನು ಬೆಳೆಸುವ ಜವಾಬ್ದಾರಿಯಿಂದಾಗಿ, ಸ್ತ್ರೀಯರು ಅವರ ಬದುಕಿನಲ್ಲಿ ಬೇರೆ ಚಹರೆಗಳನ್ನೇ ಪಡೆದುಕೊಳ್ಳದಂತೆ ಆಗುತ್ತವೆ. ಇದನ್ನು ಪುರುಷರ 'ಸಾಂದರ್ಭಿಕತೆ'ಯು ಅತಿ ಸರಳಗೊಳಿಸುತ್ತದೆ. ಕುಟುಂಬದ ಪ್ರಾಥಮಿಕ ಹಾಗೂ ಮೂಲಭೂತ ಜವಾಬ್ದಾರಿಗಳಾದ ಮಕ್ಕಳ ಪಾಲನೆ, ವೃದ್ಧರನ್ನು ನೋಡಿಕೊಳ್ಳುವುದು, ಇವುಗಳನ್ನೆಲ್ಲ ಸ್ತ್ರೀಯರು ಪರಿಭಾವಿಸುವಷ್ಟು ತೀವ್ರವಾಗಿ ಪುರುಷರು ಪರಿಭಾವಿಸುವುದಿಲ್ಲ. ಸ್ತ್ರೀಯರ ದೇಹ ಮಾತ್ರವೇ ಆಕೆಯ ಅಸ್ತಿತ್ವ ಎಂದು ನಂಬುವ ಪುರುಷ ಸಂಸ್ಕೃತಿಯನ್ನು ವಿಡಂಬಿಸುವ 'ಸ್ತ್ರೀ ಮುಕ್ತಿ' ಸದಸ್ಯರ ಹಲವು ಕುಟುಂಬ ಕಂಡು ಬರುತ್ತವೆ. ಇದರೊಳಗೆ ಪಾರ್ವತಿ, ಅನು, ಸರೂ, ತಿಮ್ಮು, ಶಿಲ್ಪ, ಕಮಲ, ರಾಗಿಣಿ, ಸೇಸೆಯಮ್ಮ ಇವರ ಆತ್ಮಸ್ಥೈರ್ಯ 'ಹೊಸ ಕುಟುಂಬ ಸಂರಚನೆಯ' ಶೋಧದ ಮಾದರಿಗಳಾಗಿವೆ. ಐಕ್ಯತೆ ಮತ್ತು ಸಮನ್ವಯತೆಯ ನೆಲೆಯಲ್ಲಿ ಕುಟುಂಬದ ರಚನಾತ್ಮಕ ಬಂಧದೊಳಗೆ ವಿರೋಧಾಭಾಸಗಳು ಪ್ರಖರವಾಗಿ ತೋರುತ್ತವೆ. ಸ್ತ್ರೀ ಶಿಕ್ಷಣ, ವರದಕ್ಷಿಣೆ, ಆಸ್ತಿಯ ಹಕ್ಕಿನ ಕಲ್ಪನೆ ಈ ಹಲವು ಚೌಕಟ್ಟಿನ ಹಿನ್ನೆಲೆಯಲ್ಲಿ ಸ್ತ್ರೀಯರ ಬದುಕು ಅರಳುವುದಕ್ಕಿಂತ ಕಮರುವುದು ಎದ್ದು ಕಾಣುತ್ತದೆ.

**ಉಮಾರಾವ್ ಅವರ ಕಾದಂಬರಿಯಲ್ಲಿನ ಕೌಟುಂಬಿಕ ಸ್ವರೂಪ :**

ಮಕ್ಕಳ ಬೆಳವಣಿಗೆಗೆ ಕುಟುಂಬದ ವಾತಾವರಣ ಹೇಗೆ ಪೂರಕವಾಗಿರಬೇಕು ಎಂಬುದನ್ನು ಕುಟುಂಬದ ಕಲುಷಿತ ಸ್ವಾರ್ಥಪರ ವಾತಾವರಣದೊಳಗೆ ತೆರೆದಿಡುವ ಪ್ರಯತ್ನ ನೂರುಸ್ವರದಲ್ಲಿ ಇದೆ. ಮಕ್ಕಳಿಗೆ ಅವರ ದೈಹಿಕ- ಮಾನಸಿಕ ಸ್ವಾವಲಂಬನೆಗಾಗಿ ಪರಿಪೂರ್ಣವಾದ ಆರೋಗ್ಯಪೂರ್ಣ ಕೌಟುಂಬಿಕ ಪರಿಸರ ಅತ್ಯಗತ್ಯ. ಇದರಲ್ಲಿ ತಂದೆ- ತಾಯಿ ಇವರ ಸಂಬಂಧಗಳು, ಅವರು ಮಕ್ಕಳನ್ನು ಬೆಳೆಸುವ ರೀತಿ, ಒದಗಿಸುವ ಸೌಲಭ್ಯಗಳು ಕುಟುಂಬದ ಆರ್ಥಿಕ ಸ್ಥಿತಿಗತಿಗಳು ಇವೆಲ್ಲವೂ ಮಕ್ಕಳ ಮನಸ್ಥಿತಿಯ ಮೇಲೆ ಪ್ರಭಾವ ಬೀರುವ ಅಂಶಗಳಾಗಿವೆ. ಪಠ್ಯದ ಒಳಗೆ ಕೆಳಗಿನ ಅಂಶಗಳು ಅನಾವರಣಗೊಳ್ಳುತ್ತವೆ.

ಅ) ತಂದೆ- ತಾಯಿ ಇಬ್ಬರಲ್ಲಿ ತಂದೆಗೆ ಹೆಚ್ಚು ಅಂಟಿಕೊಂಡು ಬೆಳೆಯುವ ಗೌರಿ. (ಕುಟುಂಬದ ವಿಶ್ಲೇಷಣೆ ನಡೆಯುವುದು ಈ ಕಾದಂಬರಿಯ ಪ್ರಧಾನ ಲಕ್ಷಣ)

ಆ) ತಂದೆ- ತಾಯಿ ಇಬ್ಬರನ್ನು ಕಳೆದುಕೊಂಡು ಆಂಟಿಯೋರ್ವಳ ಆಶ್ರಯದಲ್ಲಿ ವ್ಯಕ್ತಿತ್ವರೂಪಿಸಿಕೊಂಡು ಅನಿರುದ್ಧ.

ಇ) ತಂದೆಯನ್ನು ಕಳೆದುಕೊಂಡು ತಾಯಿಯ ಆಸರೆಯಲ್ಲಿ ಅತಂತ್ರ ಸ್ಥಿತಿಯನ್ನು ಅನುಭವಿಸುವ ಎಂಟು ವರ್ಷದ ಬೆಂಬು.

ಈ) ತಾಯಿಯನ್ನು ಹುಟ್ಟಿದಾಗಲೇ ಕಳೆದುಕೊಳ್ಳುವ ಅಜ್ಜಿಯ ಆಸರೆಯಲ್ಲಿ ಬದುಕಿದ ಶಾಂತಿ. ಈ ಪಾತ್ರಗಳ ಆಯಾಮದಿಂದ ದಟ್ಟ ಕೌಟುಂಬಿಕ ಪರಿಸರಗಳ ರಚನೆಗಳಾಗಿವೆ.

ಬಾಲ್ಯವೆನ್ನುವುದು ವ್ಯಕ್ತಿಗಳ ಸಂಪೂರ್ಣ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ನಿರ್ಣಾಯಕ ಪಾತ್ರವಹಿಸುವುದನ್ನು ಅತೀ ಸೂಕ್ಷ್ಮವಾಗಿ ತೆರೆದುಕೊಳ್ಳುವುದು ಆಯಾ ಪಾತ್ರಗಳ ಒಳಗಿನ ಸಂಬಂಧಗಳಲ್ಲಿ. ಇದರಲ್ಲಿ ಕುಟುಂಬದ ಪರಿಣಾಮಗಳು ಆಯಾ ಪಾತ್ರಗಳ ಸಂಬಂಧಗಳನ್ನು ಬೆಸೆಯುತ್ತವೆ. ಮುಂಬೈಯಂಥ ನಗರ ಕೂಡ ಮಾಡುವ ಎಲ್ಲಾ ರೀತಿಯ ಭದ್ರತೆಗಳು ಆಳದಲ್ಲಿ ಶಿಥಲೀಕರಣಗೊಂಡಿರುವಂಥದ್ದು. ಇಲ್ಲಿ ಕಾದಂಬರಿಯ ಕೇಂದ್ರ 'ಪ್ರತಿಮೆ'ಗಳು ಬಾಲ್ಯದ ದಟ್ಟ ಕೌಟುಂಬಿಕ ರಚನೆಗಳಾಗಿವೆ. ಗೌರಿ, ಅನಿರುದ್ಧ, ಇವರ ಪ್ರೌಢವಸ್ಥೆಯ ಬದುಕು ಬಾಲ್ಯದ ನೆರಳುಗಳನ್ನು ಗಾಢವಾಗಿ ಆವರಿಸಿಕೊಂಡಿರುವಂಥದ್ದು. ಚಂಬು, ಶಾಂತಿ ಇವರ ಬಾಲ್ಯ ಗೌರಿಯನ್ನು ಕದಡುವುದು ಅವಳ ಬಾಲ್ಯದ ಅನುಭವ, ಸಂಸ್ಕಾರಗಳ ಆಧಾರದಿಂದಲೇ ಆಗಿವೆ. ಗೌರಿ ತಂದೆಯ ಮುದ್ದಿನ ಮಗಳು. ಕಪ್ಪು ಬಣ್ಣದ ಜೊತೆಗೆ ಸೌಂದರ್ಯವನ್ನು ಪಡೆದಿದ್ದರೂ ಬಿಳಿ ಬಣ್ಣದ ಪಾಪಳ ಮುಂದೆ ಗೌರಿ ಮುಸುಕಾಗಿ ಕಾಣುತ್ತಿದ್ದಳು. ಹೆಣ್ಣು ಮಕ್ಕಳ ಸೌಂದರ್ಯದ ಕಾರಣದಿಂದ ತಾಯಿಗೆ ಗೌರಿಗಿಂತ ಪಾಪುವಿನಲ್ಲಿ ಹೆಚ್ಚು ಪ್ರೀತಿ ಇರುತ್ತದೆ. ಈ ಕಾರಣದಿಂದಲೇ ತಾಯಿ ಗೌರಿಯನ್ನು ಅನಾದಾರದಿಂದ ಕಾಣುವುದು ತಂದೆಯನ್ನು ಒಳಗೊಂಡು ಮನೆಯ ಎಲ್ಲರ ಗಮನಕ್ಕೆ ಬರುವ ಅಂಶವಾಗಿರುತ್ತದೆ.

> "ನಾಲ್ಕು ವರ್ಷದ ಗೌರಿ ಶಾಲೆಯಿಂದ ಮರಳಿ ತಾಯಿಯ ಕೋಣೆಗೆ ಇಣುಕಿದರೆ ಪಾಪು ಆಡುತ್ತ ಮಂಚದ ತುದಿಗೆ ಸರಿದಿದ್ದಳು ಅವಳನ್ನು ಎತ್ತಲಾರದೆ, ಮೈಯೊರಗಿ ಜಾರುತ್ತಿದ್ದ ತಂಗಿಯನ್ನು ತಡೆಹಿಡಿದು ತಾಯಿಯನ್ನು ಕೂಗಿ ಕರೆದ ಗೌರಿಯ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲಾಗದ ತಾಯಿ ತಂದೆಯ ಜೊತೆ ಇನ್ಮೇಲೆ ಪಾಪು ಒಬ್ಬಳೇ ಇದ್ದಾಗ ಪ್ರೇಂನ ಹತ್ತಿರ ಬಿಡಬಾರದು. ಸ್ವಲ್ಪ ಹೊಟ್ಟೆಕಿಚ್ಚು ಇದ್ದೇ ಇರುತ್ತಲ್ಲಾ..." (ಉಮಾರಾವ್ :೧೯೯೯: ೧೪)

> "ಈಗಲೂ ಅಮ್ಮ ತನಗೆ ಪಾಪನ್ನ ಕಂಡರೆ ಹೊಟ್ಟೆ ಉರಿ ಎಂದು ಕೊಂಡಾಗ ಎಷ್ಟು ನೋವಾಗುತ್ತದೆ. ಆದರೆ ಇಲ್ಲಾಂತ ತೋರಿಸುವುದು ಹೇಗೆ. ನಂಬಬಾರದೆಂದು ಕೊಂಡವರನ್ನು ನಂಬಿಸುವುದು ಹೇಗೆ? ಅಮ್ಮ ಅಂದ ಮಾತುಗಳನ್ನು ಮರೆಯುವುದು ಹೇಗೆ ?"(ಉಮಾರಾವ್ ೧೯೯೯; ೨೬)

ಇಂತಹ ಬಾಲ್ಯದ ಅನುಭವಗಳು ಗೌರಿಯನ್ನು ಅವಳ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ತೀವ್ರವಾಗಿ ಘಾಸಿಗೊಳಿಸುತ್ತದೆ. ತಾಯಿಯ ಮೂಲದಿಂದ ಸ್ಮೃತಿ ಕಟ್ಟುವ ಅವಳ ಬಾಲ್ಯ ಸದಾ ಅವಳನ್ನು ಛಿದ್ರಗೊಳಿಸುವಂಥದ್ದು. ತಂಗಿ ಮತ್ತು ಅವಳ ನಡುವೆ ತಾಯಿ ಕಲ್ಪಿಸುವ ಬೇಧಬಾವದಿಂದ ಮುಂದೆ ತಾಯಿ ಮತ್ತು ತಂಗಿಯೊಡನೆ ಎಂತಹ ಬಿಕ್ಕಟ್ಟಿನ ಸಂದರ್ಭಗಳಲ್ಲೂ ಆಕೆ ಮನಬಿಚ್ಚಿ ವ್ಯವಹರಿಸಲು ಸಾಧ್ಯವಾಗುವುದಿಲ್ಲ. ಅವರಲ್ಲಿ ನಂಬಿಕೆ ಎನ್ನುವುದನ್ನು ಸ್ಥಾಪಿಸಿಕೊಳ್ಳುವುದು ಗೌರಿಗೆ ಸಾಧ್ಯವಾಗುವುದಿಲ್ಲ. ತಂದೆಯ ಆರೋಗ್ಯಪೂರ್ಣ ಒಡನಾಟದಿಂದ ಗೌರಿಯ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಮತ್ತು ಎಂತಹ

ಸನ್ನಿವೇಶವನ್ನಾದರೂ ನಿರ್ಭೀಡೆಯಿಂದ ಎದುರಿಸುವ ಸಜ್ಜನಿಕೆಯ ದೃಢ ವ್ಯಕ್ತಿತ್ವವನ್ನು ಬೆಳಸಿಕೊಳ್ಳುವುದಕ್ಕೆ ಕಾರಣವಾಗುತ್ತದೆ. ಅನಿರುದ್ಧನಂಥ ಪುರುಷನ ಸಹಾಯವಿಲ್ಲದೇ ಆತನಿಂದ ಉಂಟಾದ ಗರ್ಭಕ್ಕೆ ತಾಯಾಗುವ, ತಂದೆ ಇಲ್ಲದೆಯೇ ಆ ಮಗುವನ್ನು ಆರೋಗ್ಯಪೂರ್ಣ ವಾತಾವರಣದಲ್ಲಿ ಬೆಳೆಸಬಹುದೆನ್ನುವ ಆಕೆಯ ನಿರ್ಧಾರಕ್ಕೆ ತಂದೆಯ ದೃಢ ವ್ಯಕ್ತಿತ್ವದ ಪ್ರಭಾವ ಕಾರಣವಾಗುತ್ತದೆ.

ತಂದೆ- ತಾಯಿ ಇದ್ದು ತಂದೆಯ ವಾತ್ಸಲ್ಯದ ಕೋಟೆಯೊಳಗೆ ಬೆಳವಣಿಗೆ ಸಾಧಿಸುವ ಗೌರಿಯ ಪಾತ್ರಕ್ಕೆ ಮುಖಾಮುಖಿಗೊಳ್ಳುವ ಪಾತ್ರವೆಂದರೆ ಅನಿರುದ್ಧನದು. ತಂದೆ ತಾಯಿಗಳು ಯಾರೆಂದು ಅರಿಯದೆ, ಆಂಟಿಯ ಆಶ್ರಯದಲ್ಲಿ ಬೆಳೆದು ಬಾಂಬೆಯ ಕನ್ನಡಿಗನಾಗಿ ಗೌರಿಗೆ ಪರಿಚಿತನಾಗುತ್ತಾನೆ. ಆತನ ಚಿತ್ರಕಲೆಯ ಹವ್ಯಾಸದ ಮೂಲಕ ಗೌರಿಗೆ ಹತ್ತಿರವಾಗುತ್ತಾನೆ. ಅಪರಿಚಿತ ವರ್ತುಲದೊಳಗೆ ಆಕೆಗೆ ಬೆಚ್ಚಗಿನ ಭದ್ರತೆಯ ಅರಿವು ಮೂಡಿಸುವುದು ಅನಿರುದ್ಧನ 'ಒರಟು ಪ್ರಾಮಾಣಿಕ' ವ್ಯಕ್ತಿತ್ವವಾಗಿರುತ್ತದೆ. ಅನಾರೋಗ್ಯದಿಂದ ಬಳಲುವ ಗೌರಿಯನ್ನು ಒಂದು ವಾರ ಉಪಚರಿಸುವ ಅನಿರುದ್ಧನ ಬಗ್ಗೆ ಗೌರಿ ತನ್ನ ತಂದೆಯ ಸ್ವಭಾವವನ್ನು 'ಆರೋಪಿಸಿ' ಗ್ರಹಿಸುತ್ತಾಳೆ. ಆತ ಅವಳ ಅನುಭವ ದಕ್ಕಿಸಿ ಕೊಂಡಿದ್ದುರೊಳಗೆ ಉಳಿದ ಪುರುಷರಿಗಿಂತ ಭಿನ್ನವಾಗಿ, ಪ್ರತ್ಯೇಕ ವ್ಯಕ್ತಿತ್ವದವನಾಗಿ ಕಾಣಿಸಿಕೊಳ್ಳುತ್ತಾನೆ. ಅನಿರುದ್ಧ ಉಂಟುಮಾಡಿದ ಸ್ಪಂದನೆಗಳನ್ನು, ಆತನ ಒಡನಾಟದ ಅನುಭವವನ್ನು, ಆತ ಅಪರಿಚಿತನಾಗಿ ಉಳಿದು ಬಿಡುವ ರೀತಿಯನ್ನು ತಂದೆಯ ಜೊತೆ ಮನಬಿಚ್ಚಿ ಗೌರಿ ಹೇಳಿಕೊಳ್ಳುತ್ತಾಳೆ. ತಂದೆ ಒದಗಿಸಿದ ಕುಟುಂಬದ ಭದ್ರತೆಯ ನೆಲೆಯಲ್ಲಿ ಇದು ಅವಳಿಗೆ ಸಾಧ್ಯವಾಗುತ್ತದೆ. ಇದೇ ಕಾರಣಕ್ಕಾಗಿ, ಒಬ್ಬ ಗಂಡಸಿನೊಡನೆ ಮದುವೆ ಬಿಟ್ಟರೆ ಬೇರೆ ಯಾವ ಸಂಬಂಧಗಳೂ ಸಾಧ್ಯವಿಲ್ಲವೆಂದು ಭಾವಿಸುವ ತಾಯಿಗೆ ಏನನ್ನೂ ಹೇಳದವಳಾಗುತ್ತಾಳೆ. ಗೌರಿ ಅನಿರುದ್ಧನ ಸಂಸರ್ಗದಿಂದ ತಾಯಿಯಾಗುತ್ತಿರುವುದನ್ನು ಆತನಿಗೆ ತಿಳಿಸುವುದು ಅನಿವಾರ್ಯವೆಂದು ಭಾವಿಸಿ ಆತನ ವಿಳಾಸ ಹುಡುಕಿ ಆತನಿರುವ ಮನೆಗೆ ಬಂದಾಗ ಅನಿರುದ್ಧನ ಒಟ್ಟು ಬದುಕನ್ನು ಅವಳಿಗೆ ಗ್ರಹಿಸುವುದು ಸಾಧ್ಯವಾಗುತ್ತದೆ. ಆತ ಹತ್ತಿರದವನಾಗಿದ್ದರೂ ಆತನ ನೋವಿನ ಬದುಕನ್ನು, ಕತ್ತಲ ವಲಯವನ್ನು ಗೌರಿಗೆ ಪರಿಚಯಿಸಿಕೊಳ್ಳಲು ಆತ ಇಷ್ಟ ಪಟ್ಟಿರುವುದಿಲ್ಲ. ಇದಕ್ಕೆ ಕಾರಣ ಅನಾವರಣಗೊಳ್ಳುವುದು ಆತನ ವಿಳಾಸವನ್ನು ಗೌರಿ ತಲುಪಿದಾಗಲೇ,

"ಗೌರಿ ತನ್ನ ಪರಿಚಯ ಮಾಡಿಕೊಂಡು ಅನಿರುದ್ಧನ ಬಗ್ಗೆ ಕೇಳಿದಳು. ಅವರು ನಿನ್ನೆ ಇಲ್ಲಿಂದ ಇದ್ದಕ್ಕಿದ್ದಂತೆ ಹೊರಟು ಹೋದರು. ಸಂಜೆ ಸಾಮಾನೆಲ್ಲಾ ಟ್ಯಾಕ್ಸೀಲಿ ಇಡುತ್ತಿದ್ದುದನ್ನು ನೋಡಿದೆವು. ಜೊತೆಗೆ ಮಗಳು, ಆಯಾನೂ ಇದ್ದರು.'

'ಮಗಳು .......?'

'ಹೂಂ..... ಅವರೆಂದೂ ಊರಿಗೆ ಹೋದದ್ದೇ ನೋಡಿರಲಿಲ್ಲ. ಕಾಲೇಜು, ಮನೆ. ಮನೆಗೆ ಬಂದು ಬಿಟ್ಟರೆ ಮಗಳೊಂದಿಗೇ ಅಷ್ಟು ಕಾಲಾನೂ ಕಳೆಯುತ್ತಿದ್ದರು. ಆಯಾ ಮನೆಯವಳಂತೆ ಅವರಿಬ್ಬರನ್ನೂ ನೋಡಿಕೊಳ್ತಿದ್ದಳು. ಇಲ್ಲದಿದ್ದರೆ ಅಂಥಾ ಮಗು ಇಟ್ಟುಕೊಂಡು ಎಷ್ಟು ಕಷ್ಟ ನೋಡಿ ...... '

'ಹೂಂ .......

ನೋಡೊಕೆ ಏನೂ ಗೊತ್ತಾಗ್ತಿರಲಿಲ್ಲ. ಆದರೆ ಮೂರು ವರ್ಷದ ತಿಳುವಳಿಕೆ ಕೂಡ ಇಲ್ಲ ಆ ಮಗೂಗೆ. ಹುಂ ಅನಿರುದ್ಧ ಅವರೂ ಯಾರೊಡನೆಯೂ ಹೆಚ್ಚು ಬೆರೆಯುತ್ತಿರಲಿಲ್ಲ. ಎಲ್ಲಿ ಹೋದರೋ, ವಾಪಸ್ಸು ಬರುತ್ತಾರೋ ಇಲ್ಲವೋ ಏನೂ ತಿಳಿಯದು.... ನೀವು ಅವರ ಸಂಬಂಧಿಕರೇನು?'

'ಹೌದು.... ಮತ್ತೆ ಬರುತ್ತೇನೆ ಅವರು ಬಂದರೆ ನಾನು ಬಂದಿದ್ದೇತ ಹೇಳಿಬಿಡಿ. ನನ್ನ ಹೆಸರು ಗೌರಿ." (ಉಮಾರಾವ್: ೧೯೯೯: ೭೮)

ಅನಿರುದ್ಧನನ್ನು ಹುಡುಕುವ ಗೌರಿಗೆ ಆತನ ವಾಸ್ತವದ ಬದುಕು ಅರಿವಾದಾಗ ಅವಳ ಗರ್ಭದೊಳಗೆ ಬೆಳೆಯುವ ಆತನ ಮಗುವಿನ ಬಗ್ಗೆ ಯೋಚಿಸಲು ಭಯವಾಗುತ್ತದೆ. ತಂದೆ ಇಲ್ಲದ ಮಗುವನ್ನು ಸಾಕುವ ಜವಾಬ್ದಾರಿಯನ್ನು ಗೌರಿ ಅತಿಶಕ್ತವಾಗಿ ಎದುರಿಸುವ ತೀರ್ಮಾನವನ್ನು ನಂತರದಲ್ಲಿ ಕೈಗೊಳ್ಳುವುದು ಅವಳ ವ್ಯಕ್ತಿತ್ವದ ಪರಿಪೂರ್ಣತೆ ಆಳದಿಂದಲೇ ಆಗಿದೆ. ಪಠ್ಯವು ತಂದೆಯ ವಿಳಾಸವನ್ನು ಅರಿಯದೆ ಮಗು ಬೆಳೆಯುವ ಸಂದರ್ಭವನ್ನು ಓದುಗರ ಊಹೆಗಷ್ಟೆ ಬಿಟ್ಟುಕೊಡುತ್ತದೆ. ಆದರೆ ವಿದ್ಯಾವಂತಳಾದ ತಾಯಿ ಮಗುವನ್ನು ಶಕ್ತವಾಗಿ, ಆರೋಗ್ಯಪೂರ್ಣ ಪರಿಸರದಲ್ಲಿ ಬೆಳೆಸಬಹುದು ಎಂಬ ಭರವಸೆಯಲ್ಲಿ ಕೃತಿ ಮುಕ್ತಾಯವಾಗುತ್ತದೆ. ಇದನ್ನು ಗೌರಿಯ ವರ್ತನೆಯು ಧ್ವನಿಸುತ್ತದೆ;

"ಹೋಗಿ ಟೇಬಲ್ ಮುಂದೆ ಕೂತಳು. ಲೆಟರ್ ಪ್ಯಾಡ್ ತೆಗೆದು ಪೆನ್ನೆತ್ತಿಕೊಂಡಳು. ಪತ್ರ ಶುರು ಮಾಡಿದಾಗ ಖುಷಿಯಿಂದ ಅವಳ ಕಣ್ಣಲ್ಲಿ ಮತ್ತೆ ಹನಿ, ಬರೆದಳು....

ಚಿಂಚೂ, ಒಂದು ಸರ್‌ಪ್ರೈಸ್ ನಿನಗೆ ನೀನು ಮುಂದಿನ ಸಲ ಬೇಸಿಗೆ ರಜಕ್ಕೆ ಊರಿಗೆ ಬರ್ತೀಯಲ್ಲಾ ಆಗ ನಿನಗೆ ಒಬ್ಬ ಪುಟ್ಟ ತಮ್ಮನೋ ತಂಗೀನೋ ಬಂದಿರ್ತಾರೆ ಗೊತ್ತಾ? ಇನ್ಮೇಲೆ ನಿಂಗೆ ಎಂದೂ ಒಬ್ಬನೇ ಬೇಜಾರಾಗೊಲ್ಲ....." (ಉಮಾರಾವ್ :೧೯೯೯; ೧೪೨.)

ತನ್ನ ಒಳಗೆ ಬೆಳೆಯುತ್ತಿರುವ ಮಗುವಿನ ಬಗ್ಗೆ ಗೌರಿಗೆ ಹೇಳಲು ಸಾಧ್ಯವಾಗುವುದು ಆಕೆಯ ಬಳಿ ಪಾಠಕ್ಕೆ ಬರುತ್ತಿದ್ದ ಎಂಟು ವರ್ಷದ ಚಿಂಚೂವಿನ ಬಳಿ ಮಾತ್ರ. ಬದುಕಿನುದ್ದಕ್ಕೂ ಭರವಸೆ ಮೂಡಿಸಿದ ತಂದೆಯ ಬಳಿಕೂಡ ಅವಳ ತಲ್ಲಣವನ್ನು ಹೇಳಿಕೊಳ್ಳುವುದು ಆಕೆಗೆ ಸಾಧ್ಯವಾಗುವುದಿಲ್ಲ. ಕೌಟುಂಬಿಕ ಅತಂತ್ರತೆಯು ಉಂಟು ಮಾಡುವ ಪರಿಣಾಮವನ್ನು ಪಠ್ಯವು ಗೌರಿಯ ನಿದರ್ಶನದ ಮೂಲಕ ಪ್ರತಿಮಾತ್ಮಕವಾಗಿ ತೆರೆದಿಡುತ್ತದೆ.

ಗೌರಿ ಅತಿಯಾಗಿ ಹಚ್ಚಿಕೊಳ್ಳುವ ನೆರೆಮನೆಯ ಹುಡುಗ ಚಿಂಚೂ ತಂದೆ ಇಲ್ಲದ ತಾಯಿಯ ಆರ್ಥಿಕ ಭದ್ರತೆಯೊಳಗೆ ಬೆಳೆಯುವ ಹುಡುಗ. ಮಾನಸಿಕವಾಗಿ ಸದಾ ಏಕಾಂಗಿಯಾಗಿರುವ ಚಿಂಚೂ ಗೌರಿಯನ್ನು ಅತಿಯಾಗಿ ಹಚ್ಚಿಕೊಳ್ಳುವುದು ತನ್ನೊಳಗಿನ ಅನಾಥ ಪ್ರಜ್ಞೆಯನ್ನು ನೀಗಿಸುವ ಸಲುವಾಗಿಯೇ. ಚಿಂಚೂವಿನ ತಾಯಿ ಮುಂಬೈಯ ಪ್ರತಿಷ್ಠಿತ ಕಂಪೆನಿಯೊಂದರಲ್ಲಿ ಉದ್ಯೋಗಿಯಾಗಿರುವಾಕೆ. ಆರ್ಥಿಕವಾಗಿ ಚಿಂಚೂವನ್ನು ಸಮರ್ಥವಾಗಿ ನೋಡಿಕೊಳ್ಳುವ ಇವಳು ಮಾನಸಿಕವಾಗಿ ಚಿಂಚೂವನ್ನು ಅರ್ಥಮಾಡಿಕೊಳ್ಳದೆ ಹೋಗುತ್ತಾಳೆ. ಇದಕ್ಕೆ ಕಾರಣ ಅವಳು ಸಹುದ್ಯೋಗಿಯೋರ್ವನ ಜೊತೆ ಇರಿಸಿಕೊಂಡ ಸಂಬಂಧವಾಗಿರುತ್ತದೆ. ಗೌರಿಯ ಬಳಿ ಪಾಠಹೇಳಿಸಿ ಕೊಡಲು ತನ್ನ ಮಗನನ್ನು ಬಿಡುವ ಈಕೆಗೆ ಆತನ ಶಾಲೆಯ ಬೆಳವಣಿಗೆ ಮಾತ್ರ ಮುಖ್ಯವಾಗುತ್ತದೆ.

"ಒಳಗೆ ಬನ್ನಿ ಲತಾ, ಕೂತ್ಕೊಳ್ಳಿ, ಕೂತ್ಕೋ ಚಿಂಚೂ ಎಂದವಳೇ ಗ್ಯಾಸ್ ಸ್ಟೋವ್ ಮೇಲೆ ಉಕ್ಕಿ ಬರುತ್ತಿದ್ದ ಹಾಲನ್ನು ಇಳಿಸಿ ಹೊರಗೆ ಬಂದಳು.

ಗೌರಿ, ಐ ಲ್ಯಾಮ್ ವೆರಿ ಡಿಸ್‌ಪಾಯಂಟೆಡ್ ವಿದ್ ಚಿಂಚೂಸ್ ಪರ್‌ಫಾರಮೆನ್ಸ್.

ಯಾಕೆ, ಏನಾಯ್ತು?

ನಿನ್ನೆ ಅವನ ರಿಪೋರ್ಟ್ ಕಾರ್ಡ್ ಸಿಕ್ಕಿದೆ. ಹೋದ ಯುನಿಟ್ ಟೆಸ್ಟದು. ಇಂಗ್ಲಿಷ್‌ನಲ್ಲಿ ಫೇಲಾಗಿದಾನೆ.

ಹೂಂ, ನಿನ್ನೆ ಕಾಂಪೋಜಿಶನ್ ಕೂಡ ಮಾಡಿಕೊಂಡು ಬಂದಿರಲಿಲ್ಲ. ಇತ್ತೀಚೆಗೆ ತುಂಬಾ ಲ್ಯಾಬ್‌ಸೆಂಟ್- ಮೈಂಡೆಡ್ ಆಗಿರ್ತಾನೆ.

ಹೌದು ಗೌರಿ ಅದಕ್ಕೆ ನೀವೇನು ಮಾಡ್ತಿದೀರಿ ಹೇಳಿ. ಅದಕ್ಕೇ ನಾನು ಅವನನ್ನು ನಿಮ್ಮ ಹತ್ತಿರ ಕಳಿಸೋದು.

ನೋಡಿ ಲತಾ, ಐ ಟ್ರೈ ಮೈ ಬೆಸ್ಟ್. ತುಂಬಾ ಜಾಣ. ತುಂಬಾ ಸೆನ್ಸಿಟಿವ್ ಚಿಂಚು. ಆದರೆ.... ಸಂಥಿಂಗ್.. ಈಸ್ ಟ್ರಬ್ಲಿಂಗ್ ಹಿಮ್....

ದಟ್ಸ್‌ದ ಪ್ರಾಬ್ಲಮ್ ವಿದ್ ದೀಸ್ ಕಿಡ್ಸ್. ನಾನೇನು ಕಡಿಮೆ ಮಾಡಿದೀನಿ ಅವನಿಗೆ. ಅವನ ಅಪ್ಪನ ಲ್ಯಾಬ್‌ಸೆನ್ಸ್ ಒಂದು ಕೊರತೆ ಆಗಬಾರದೂಂತ ಹೆಚ್ಚೇ ಗಮನ ಕೊಡ್ತೀನಿ. ಅವನ ಹತ್ತಿರ ಇಲ್ಲದ ಆಟದ ಸಾಮಾನಿಲ್ಲ. ಅವನು ತಿನ್ನದ ಚಾಕೋಲೇಟ್, ಐಸ್‌ಕ್ರೀಂ ಇಲ್ಲ. ಒಂದೊಂದು ಸಲ ನನಗನ್ನಿಸುತ್ತೆ, ನಾನವನನ್ನು ಹಾಳು ಮಾಡ್ತಾ ಇದೀನೋ ಏನೋಂತ...

ಆದರೆ ಅವನ ತುಂಬಾ ಇನ್‌ಸೆಕ್ಯೂರ್ ಆಗಿದಾನೆ. ಬಹುಶಃ ಪ್ರತಿ ಸಂಜೆ ನೀವು ಅವನೊಡನೆ ಒಂದೆರಡು ಗಂಟೆ ಕಳೆಯುವ ಹಾಗೆ ಮಾಡಿಕೊಂಡರೆ...

ಲುಕ್ ಗೌರಿ. ಲೆಟ್ಸ್ ನಾಟ್ ಗೆಟ್ ಪರ್ಸನಲ್. ನಾನು ಸಂಜೆ ಬೇಗ ಬರೋದು ಸಾಧ್ಯವೇ ಇಲ್ಲ. ಐ ಹ್ಯಾವ್ ಟು ಥಿಂಕ್ ಆಫ್ ಮೈ ಲೈಫ್. ಮೈ ಕರಿಅರ್. ಅವನಿಗೆ ಬೇಕಾದ್ದೆಲ್ಲಾ ನಾನು ಪ್ರೊವೈಡ್ ಮಾಡಿದ್ಮೇಲೆ, ಹಿ ಹ್ಯಾಸ್ ನೋ ರೀಜನ್ ಟು ಕಂಪ್ಲೇನ್." (ಉಮಾರಾವ್ :೧೯೯೯; ೭-೮)

ಖಚಿತವಾಗಿ ತನ್ನ ಜೀವನದ ಕುರಿತು ನಿಲುವನ್ನು ಹೊಂದಿರುವ ಲತಾ ಚಿಂಚುವಿನ ಪಾಲಿಗೆ ಪರಿಪೂರ್ಣ ತಾಯಿಯಾಗಿ ಕಾಣಿಸಿಕೊಳ್ಳುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಕೌಟುಂಬಿಕವಾಗಿ ಸ್ತ್ರೀ ಹೊರಗೆ ಉಳಿಯಲು ಪ್ರಯತ್ನಿಸುವುದು. ಮಕ್ಕಳ ಸಂದರ್ಭದಲ್ಲಿ ಈ ಬೆಳವಣಿಗೆಯು ಆರೋಗ್ಯಪೂರ್ಣ ಎನಿಸುವುದಿಲ್ಲ.

ಚಿಂಚುವಿನ ಜೀವನದಂತೆ ತಾಯಿ ಇಲ್ಲದೆ ಬೆಳೆಯುವ ಶಾಂತಿ ಕೂಡ ಗೌರಿಯ ಜೀವನದಲ್ಲಿ ಅತಿಯಾಗಿ ಕಾಡುವ ಹುಡುಗಿ. ಅವಳ ಜೀವನದ ಅಭದ್ರತೆಯನ್ನು ಪಠ್ಯವು ಪರಿಣಾಮಕಾರಿಯಾಗಿ ತೆರೆದಿಡುವ ಪ್ರಯತ್ನ ನಡೆಸುತ್ತದೆ.

"ಕಾರ್ಗತ್ತಲ ರಾತ್ರಿ. ಧೋ ಎಂದು ಮಳೆ. ಕೋಲ್ಮಿಂಚು. ಪಿಕ್‌ನಿಕ್ ಎಂದು ಹೋದ ಹುಡುಗಿಯರೆಲ್ಲಾ ನಡಗುತ್ತಾ, ಬೆಳಿಗ್ಗೆ ಕೇಳಿದ ಕತೆಗಳ ದೆವ್ವಗಳು ಎಲ್ಲಿ ಕಿಟಕಿಯಿಂದ ಇಣುಕುವುವೋ ಎಂದು ಹೆದರಿ ಗಟ್ಟಿಯಾಗಿ ಕಣ್ಮುಚ್ಚಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಮಲಗುವ ಸಮಯ.

ನಡುರಾತ್ರಿಯಲ್ಲಿ ಶಾಂತಿಯ ಕಿರುಚಾಟ, ನಡುಕ, ಕಣ್ಣೀರು. ಹಿಂದಿನ ತಿಂಗಳು ಅವರಮ್ಮ ಎರಡು ತಿಂಗಳು ಮಗೂನ ಬಿಟ್ಟು ಬಾವಿಗೆ ಹಾರಿಕೊಂಡಿದ್ದರು. ಬಾಣಂತಿಸನ್ನಿ ಎಂದು ಜನ ಅನ್ನುತ್ತಿದ್ದರು. ಅಂದಿನಿಂದ, ಅವಳು ಅಜ್ಜಿಯ ಪಕ್ಕ ಮಲಗದಿದ್ದರೆ ನಿದ್ದೆ ಬರುವುದಿಲ್ಲವಂತೆ." (ನೂರು ಸ್ವರ: ೧೯೯೯;೮-೯)

ನೂರು ಸ್ವರದಲ್ಲಿ ಮಕ್ಕಳ ನೆಲೆಯಿಂದ ಕುಟುಂಬದ ಭದ್ರತೆಯ ಕುರಿತಂತೆ ತೀವ್ರ ಜಿಜ್ಞಾಸೆಯನ್ನು ಗಮನಿಸಬಹುದು. ಕುಟುಂಬದ ಭದ್ರತೆ ಎನ್ನುವುದು ಮಕ್ಕಳ ನೆಲೆಯಿಂದ, ಅವರ ಪರಿಪೂರ್ಣ ವ್ಯಕ್ತಿತ್ವದ ಬೆಳವಣಿಗೆಯ ನೆಲೆಯಿಂದ ಅತಿ ಅನಿವಾರ್ಯ ಎಂಬುದನ್ನು ಪಠ್ಯವು ಆತ್ಯಂತಿಕ ನೆಲೆಯಲ್ಲಿ ಅನಾವರಣಗೊಳಿಸುತ್ತದೆ. ಆಧುನಿಕ ಸಮಾಜದ ಕೌಟುಂಬಿಕ ವಿಘಟನೆಯನ್ನು, ತಲ್ಲಣಗಳನ್ನು, ಸಂಘರ್ಷಗಳನ್ನು ನೂರುಸ್ವರ ತೆರೆದಿಡುವ ಪ್ರಯತ್ನ ನಡೆಸುತ್ತದೆ.

**ಕೂಡುಕಟ್ಟಿನ ಕಾದಂಬರಿಗಳಲ್ಲಿ ಪ್ರಕಟಗೊಂಡಿರುವ ಕೌಟುಂಬಿಕ ಸ್ವರೂಪ:**

೧. ಕೂಡುಕಟ್ಟಿನ ಕಾದಂಬರಿಗಳು ಆಧುನಿಕ ಕುಟುಂಬದ ತಲ್ಲಣಗಳನ್ನು ಶಕ್ತವಾಗಿ ತೆರೆದಿಡುವ ರಚನೆಗಳಾಗಿವೆ. ಮಕ್ಕಳ ನೆಲೆಯಿಂದ ಕೌಟುಂಬಿಕ ಪರಿಸರವು ಉಂಟುಮಾಡುವ ಪರಿಣಾಮವನ್ನು ವಿವಿಧ ಆಯಾಮಗಳಲ್ಲಿ ಇಲ್ಲಿನ ಪಠ್ಯಗಳು ಬಿಂಬಿಸುತ್ತವೆ.

೨. ಸ್ತ್ರೀಯರು ತಮ್ಮ ಅಸ್ತಿತ್ವದ ನೆಲೆಯಲ್ಲಿ ಸಾಮಾಜಿಕ ಬದುಕಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ ಸಂದರ್ಭದಲ್ಲಿ ಕುಟುಂಬವು ಅದರ ದುಷ್ಪರಿಣಾಮವನ್ನು ಎದುರಿಸಬೇಕಾಗುತ್ತದೆ ಎನ್ನುವ ತೀರ್ಮಾನವು ಕೂಡುಕಟ್ಟಿನ ಕಾದಂಬರಿಗಳ ನಿರೂಪಣೆಯು ಬಿಂಬಿಸುತ್ತವೆ.

೩. ಕೌಟುಂಬಿಕ ಸಂಘರ್ಷವು ಸ್ತ್ರೀಯರನ್ನು ಕಾಡುವಷ್ಟು ಗಾಢವಾಗಿ ಪುರುಷರನ್ನು ತಟ್ಟುವುದಿಲ್ಲ. ಆಧುನಿಕ ಸಮಾಜದ ಒಳಗೆ ಪುರುಷ ಕುಟುಂಬದ ಆವರಣದೊಳಗೆ ಆಗಂತುಕನಾಗಿಯೇ ಕಂಡು ಬರುತ್ತಾನೆ.

೪. ಜಾಗತೀಕರಣದ ಎಲ್ಲಾ ಬೆಳವಣಿಗೆಯು ಕೌಟುಂಬಿಕ ಆವರಣವನ್ನು ನಿಶಕ್ತಗೊಳಿಸುವುದನ್ನು ಕೂಡುಕಟ್ಟಿನ ಕಾದಂಬರಿಗಳು ತೆರೆದಿಡುತ್ತವೆ.

೫. ಮಹಿಳೆಗೆ ಮಾತ್ರ ಕುಟುಂಬ ವ್ಯವಸ್ಥೆಯನ್ನು ನವೀಕರಿಸುವ, ಮರಳಿಕಟ್ಟುವ ಮಾತ್ರವಲ್ಲ ಕುಟುಂಬದ ಚೌಕಟ್ಟಿಗೆ ಹೊಸತನವನ್ನು ಕಲ್ಪಿಸಲು ಸಾಧ್ಯ ಎನ್ನುವ ಅಂಶವನ್ನು ಕೂಡುಕಟ್ಟಿನ ಕಾದಂಬರಿಗಳ ಅಂತರ್ಯವು ಧ್ವನಿಸುತ್ತದೆ.

೬. ಸಮಗ್ರವಾಗಿ ಕೂಡುಕಟ್ಟಿನ ಕಾದಂಬರಿಗಳು ಜಾಗತೀಕರಣಗೊಂಡ ಸಮಾಜದ ವಿಪ್ಲವತೆಯನ್ನು ಕೌಟುಂಬಿಕ ನೆಲೆಯಲ್ಲಿ ಅನಾವರಣಗೊಳಿಸುವ ಸಂರಚನೆಗಳಾಗಿವೆ.

## ಅನುಬಂಧ

*೧. ಎಂಬತ್ತರ ದಶಕದ ನಂತರದಲ್ಲಿ ಎಲ್ಲಾ ಜ್ಞಾನ ಕ್ಷೇತ್ರಗಳಲ್ಲಿ ವ್ಯಾಪಕವಾದ ಪಲ್ಲಟಗಳು, ಬೆಳವಣಿಗೆಗಳು ಕಂಡು ಬಂದ ಪರಿಣಾಮವಾಗಿ ಸಾಹಿತ್ಯ ಕ್ಷೇತ್ರದಲ್ಲಿ ಹಲವಾರು ಸಿದ್ಧಾಂತಗಳು, ಮೀಮಾಂಸೆಗಳು ಅಧ್ಯಯನದ ಕಾರಣದಿಂದಾಗಿ, ವಿಮರ್ಶೆಯ ಪ್ರಸ್ಥಾನಗಳಾಗಿ ಹುಟ್ಟಿಕೊಂಡವು. ಸಮಾಜೋ ಆರ್ಥಿಕ ಕಾರಣಗಳಿಂದಾಗಿ ರೂಪುಗೊಂಡು ಆನಂತರದಲ್ಲಿ ವಿಶಾಲವಾದ ತಾತ್ವಿಕತೆಯಾಗಿ ರೂಪಿತಗೊಂಡ ಮಾರ್ಕ್ಸ್‌ವಾದವು ಹುಟ್ಟು ಹಾಕಿದ ಸಾಮಾಜಿಕ ನ್ಯಾಯ (Social Jastiees) ಪರಿಕಲ್ಪನೆಯು ವರ್ಗಬೇಧದ ನಿರ್ಮೂಲನೆಗೆ ಮಾತ್ರ ಕಾರಕವಾಗದೆ ವರ್ಣ, ಜಾತಿ, ಜನಾಂಗ, ಲಿಂಗ ಇವುಗಳ ಕಾರಣದಿಂದ ಉಂಟಾದ ಅಸಮಾನತೆಗಳನ್ನು, ಶೋಷಣೆಗಳನ್ನು ತೀವ್ರವಾಗಿ ವಿರೋದಿಸಲು ಪ್ರಬೋಧಕವಾಯಿತು. ಸಾಹಿತ್ಯ ಇದನ್ನು ವ್ಯಾಪಕವಾಗಿ ಪ್ರತಿಫಲಿಸುವಲ್ಲಿ ಕಾರ್ಯ ಪ್ರವೃತ್ತಗೊಂಡು 'ಜಾಗತಿಕ' ಚಾಲನೆಯನ್ನು ಪಡೆದುಕೊಂಡಿತು. ರಚನಾವಾದ, ನಿರಚನಾವಾದ, ಚಾರಿತ್ರಿಕವಾದ, ನವಚಾರಿತ್ರಿಕವಾದ, ಆಧುನಿಕವಾದ, ಆಧುನಿಕೋತ್ತರವಾದ, ವಸಾಹತ್ತುವಾದ ವಸಹತೋತ್ತರವಾದ, ಸ್ತ್ರೀವಾದಗಳಂತಹ ಚಿಂತನೆಗಳು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಚಿಂತನೆಗಳಾಗಿ, ವಿಮರ್ಶಾ ಪ್ರಸ್ಥಾನಗಳಾಗಿ, ಬೆಳವಣಿಗೆಗೊಂಡವು. ನಿರ್ದಿಷ್ಟವಾಗಿ, ಭಾರತೀಯ ಸಾಹಿತ್ಯ ಸಂದರ್ಭಕ್ಕೆ ಅನ್ವಯಿಸಿದಾಗಲು, ಪಾಶ್ಚಾತ್ಯ ಸಾಹಿತ್ಯ ಸಿದ್ಧಾಂತಗಳು ಸ್ಥಳೀಯ ಭಾಷಾ ಸಾಹಿತ್ಯ ಬೆಳವಣಿಗೆಗಳ ಮೇಲೆ ದಟ್ಟ ಪರಿಣಾಮ ಬೀರಿ ರೂಪಿಸಿರುವುದು ಸ್ಪಷ್ಟವಾಗುತ್ತದೆ. ಇದು ನಿಖರವಾಗಿ ಅಭಿವ್ಯಕ್ತಗೊಳ್ಳುವುದು ಸ್ತ್ರೀವಾದದ ಚಾರಿತ್ರಿಕತೆಯನ್ನು ಗುರುತಿಸುವ ನಿಲುವುಗಳಲ್ಲಿ. ಪಶ್ಚಿಮದಲ್ಲಿ ಸ್ತ್ರೀವಾದವು ಹುಟ್ಟಿಕೊಂಡಿರುವುದರ ಹಿಂದೆ ದೀರ್ಘವಾದ ಮಹಿಳಾ ಹೋರಾಟದ ಚರಿತ್ರೆ ಇದೆ. ಯುರೋಪ್‌ನ ದೇಶಗಳಾದ ಜರ್ಮನಿ, ನೆದರ್ ಲ್ಯಾಂಡ್, ಫ್ರಾನ್ಸ್ , ಇಟಲಿ, ಸ್ಕಾಂಡಿನೇಮಿಯಾ ದೇಶಗಳಲ್ಲಿ ಬ್ರಿಟನ್ ಮತ್ತು ಉತ್ತರ ಅಮೆರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ ಆಯಾ ದೇಶದ ಸಾಂಸ್ಕೃತಿಕ ಹಿನ್ನೆಲೆಗೆ ಅನುಗುಣವಾಗಿ ಸ್ತ್ರೀಯರ ಸ್ಥಾನಮಾನ ಮತ್ತು ಹಕ್ಕುಗಳಿಗಾಗಿ ಸ್ತ್ರೀಯರೇ ಹೋರಾಟ ಮಾಡುತ್ತಾ ಬಂದಿರುವ ಚರಿತ್ರೆಗೆ ಸುಮಾರು ಇನ್ನೂರು ವರ್ಷಗಳಷ್ಟು ದೀರ್ಘ ಇತಿಹಾಸವಿದೆ. ನಿರ್ದಿಷ್ಟವಾಗಿ ಪಶ್ಚಿಮದ ಸ್ತ್ರೀಯರ ೧೯೬೦, ೧೯೭೦ರ ದಶಕಗಳ ಹೋರಾಟಗಳನ್ನು ಒಟ್ಟಾಗಿ, 'ಸ್ತ್ರೀ ವಿಮೋಚನಾ ಚಳವಳಿ' (Women's Liberation Movement )ಎಂದು ಪರಿಗಣಿಸಲಾಗಿದೆ.

*೨. ರೋಜಲಿಂಡ ಕ್ಯಾವೈ ಹೇಳುವಂತೆ ಸ್ತ್ರೀಯರು ಬರೆದ ಕಾದಂಬರಿಗಳು ಹೆಚ್ಚಿನವು ಪುರುಷ ಮನೋಧೋರಣೆಯನ್ನು ಪ್ರತಿಬಿಂಬಿಸುವ ರಚನೆಗಳಾಗಿವೆ. ಇವನ್ನು ಸ್ತ್ರೀವಾದದ ನೆಲೆಯಲ್ಲಿ ಪುರುಷ ಸಂರಚನೆಗಳೆಂದೆ ಪರಿಭಾವಿಸಬೇಕಾಗುತ್ತದೆ. ಮಾತ್ರವಲ್ಲ, ಸ್ತ್ರೀಯರು ಬರೆದ ರಚನೆಗಳೆಲ್ಲವೂ ಸ್ತ್ರೀವಾದದ ಫಲಶೃತಿಗಳಲ್ಲ ಎಂಬುದಾಗಿಯೂ ಆಕೆ ಅಭಿಪ್ರಾಯಪಡುತ್ತಾಳೆ. ಸ್ತ್ರೀಯರದ್ದೇ ಆಗಲಿ, ಪುರುಷರದ್ದೇ ಆಗಲಿ, ಯಾವುದೇ ರಚನೆಗಳನ್ನು ಸ್ತ್ರೀಯಾಗಿ ಓದುವುದು ಸಾಧ್ಯವಿದೆ. (Reading as a Women) ಈ ಅಂಶದ ನೆಲೆಯಲ್ಲಿ ಸ್ತ್ರೀಯರ ಕಾದಂಬರಿಗಳನ್ನು ಓದುವ ಆಯಾಮವನ್ನು ರೋಜಲಿಂಡ ಕ್ಯಾವೈ Are women Novels Feminist Novels ಎನ್ನುವ ಕೃತಿಯಲ್ಲಿ ಹೆಚ್ಚು ಸಂಕೀರ್ಣವಾಗಿ ಚರ್ಚೆಗೆ ಎತ್ತಿಕೊಳ್ಳುತ್ತಾಳೆ. (Basil Blackwell Oxford; 1999, 220)

*೩. ಸ್ತ್ರೀಯರ ಬದುಕನ್ನು ಪುರುಷಾಧಿಕಾರದ ನೆಲೆಯಲ್ಲಿ ನೋಡುವ ಯಾವುದೇ ರಾಷ್ಟ್ರಗಳ ಸಂಸ್ಕೃತಿಯಲ್ಲಿ ಪುರುಷರ ಗೆಲ್ಲುವ, ಆಳುವ ಅಧಿಕಾರ ಹೆಚ್ಚು ತೀವ್ರವಾಗುತ್ತ ಹೋಗುತ್ತದೆ. ಇದು ಸಹಜವಾಗಿ ಸ್ತ್ರೀಯರ ಶೋಷಣೆಯ ಸಂಬಂಧಗಳ ನಿರ್ವಚನವಾಗುತ್ತದೆ. ಶೋಷಣೆಯ ಸಂಬಂಧ (ಆಳುವವ - ಆಳಿಸಿಕೊಳ್ಳುವವ)ದೊಳಗೆ ಅಂತಃ ವಿಸ್ತಾರದ ಕಲ್ಪನೆಯೇ ಸೀಮಿತವಾಗುತ್ತದೆ. ಸ್ತ್ರೀಯರ ಸ್ವಾಯತ್ತತೆಯ ಬಹುಮುಖೀ ಆಯಾಮಗಳು ಕುಗ್ಗುತ್ತ ಹೋಗುತ್ತವೆ. ಎನ್ನುವುದನ್ನು ಗಂಭೀರವಾಗಿ ಸ್ವೀಕರಿಸುವ ಸ್ತ್ರೀವಾದಿ ಸಂಸ್ಕೃತಿ ಮೀಮಾಂಸೆ 'ಶೋಷಿತ ವರ್ಗಗಳ ಶಕ್ತಿ' ಅರ್ಥಾತ್ ಸ್ತ್ರೀಯರ ಸಂಘಟನಾತ್ಮಕ ಶಕ್ತಿ ಎನ್ನುವುದು ಆಳುವ ಪುರುಷ ಸತ್ತೆಗೆ ತೋರಿಸುವ ಪ್ರತಿರೋಧ ಎಂಬರ್ಥಕ್ಕೆ ಮಾತ್ರ ಸೀಮಿಗೊಳ್ಳಬಾರದೆಂಬ ಅಂತರ್ಗತ ಧೋರಣೆ ಉಳ್ಳದ್ದು. ಅಂದರೆ, ಪ್ರತಿರೋಧಕ್ಕಿಂತ ಹೆಚ್ಚು ಒತ್ತು ಸ್ವಾಯತ್ತ ಶಕ್ತಿಗೆ ನೀಡಬೇಕು ಎನ್ನುವುದನ್ನು ನಿರೂಪಿಸುವ ಮೂಲದಿಂದಲೇ ಸ್ತ್ರೀಯಾತ್ಮಕತೆ ಸ್ತ್ರೀತ್ವಕ್ಕೆ ಹೆಚ್ಚು ಒತ್ತು ನೀಡುತ್ತದೆ. ಹಾಗಾಗಿ, ಆಧುನೀಕರಣ ಮತ್ತು ಬಂಡವಾಳಶಾಹಿ ಪ್ರಕ್ರಿಯೆಗಳು ಸ್ತ್ರೀಯರ ಬದುಕಿನಲ್ಲಿ ತಂದ ಇತ್ಯಾತ್ಮಕ ಬದಲಾವಣೆಗಳು ಮತ್ತು ಉಂಟು ಮಾಡಿದ ಹಾನಿಕಾರಕ ಪರಿಣಾಮಗಳ ಸ್ವರೂಪವನ್ನು ಒಕ್ಕಟ್ಟಾಗಿ ಇಟ್ಟು ಸ್ತ್ರೀವಾದ ಅಧ್ಯಯನ ಮಾಡುತ್ತದೆ.

*೪. " She is the chaos whence all have come and whither all must one day return; she is nothingness. In the night are confused together the multiple aspects of the world which daylight reveals: night of spirit confined in the generality and opacity of matter, night of sleep and of nothingness. In the deeps of the sea it is night. Woman is the mare tene brarum, dreaded by vavigators of oldl it is night in the entrails of the earth. Man is frightened of this night, the reverse of fecundity, which threatens to swallow him up. He aspires to the sky, to the light, to the sunny summits, to the pure and crystalline frigidity of the blue sky; and under his feet there is a moist, warm, and darkling gulf ready to draw him down, in many a legend do we see the hero lost forever as he fells back into the maternal shadows - cave abyss, hell" (Simone de Beauvoir, The second sex, trans. Howard Madison Parshley (New York : Random House; 1952 ,166.)

*೫. Self iconoelcast ಎನ್ನುವ ಪರಿಕಲ್ಪನೆಯನ್ನು Chilla Bulbeck ಎಂಬ ಲೇಖಕಿ Re Orienting Western Feminisms ಎನ್ನುವ ಕೃತಿಯಲ್ಲಿ ನಿರ್ವಚಿಸಿದ್ದಾರೆ. Constructing and Deconstructing the Western individual ಎನ್ನುವ ಲೇಖನದಲ್ಲಿ ಅಲ್ಲದೆ Speaking the 'Self' ಎನ್ನುವ ಲೇಖನದಲ್ಲಿ ಸ್ವಯಂ ವಿಗ್ರಹ ಭಂಜಕಿ ಪ್ರತಿಮೆಯ ಪರ ಮತ್ತು ವಿರುದ್ಧದ ದೀರ್ಘ ಚರ್ಚೆ ಇದೆ. ಅಂತಿಮವಾಗಿ ಪುರುಷ ಮಾದರಿಯನ್ನು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳಲ್ಲಿ ನಿರ್ವಚಿಸುವ ಈ ಪರಿಕಲ್ಪನೆಯನ್ನು ಸಾಂಸ್ಕೃತಿಕ ಸ್ತ್ರೀವಾದವು ತೀವ್ರವಾಗಿ ವಿರೋಧಿಸುತ್ತದೆ. (Cambridge University Press, (1998) 58-60)

*೬. ವಿವೇಕ ರೈ ಬಿ.ಎ. ಇವರ ಗಿಳಿಸೂವೆ ಎಂಬ ಕೃತಿಯಲ್ಲಿ 'ಅನನ್ಯತೆಯ ನೆಲೆಗಳು : ವ್ಯಕ್ತಿ, ಸ್ಥಳ, ರಾಷ್ಟ್ರ, ಜಾತಿ, ಮತ, ರಾಜಕೀಯ' ಈ ಲೇಖನವು ಅನನ್ಯತೆಯನ್ನು ವ್ಯಕ್ತಿಗಳಿಗೆ, ಸಮುದಾಯಗಳಿಗೆ, ವ್ಯಾಪಕ ಸಾಮಾಜಿಕ ಘಟಕಗಳಿಗೆ ಮುಖ್ಯವಾದ ಮುನ್ನಣೆಯ ಅಂಶ. ಸಮಾಜದಲ್ಲಿ ವ್ಯಕ್ತಿಗಳು ಅನನ್ಯತೆಗಳ

ಮೂಲಕವೇ ವ್ಯವಹರಿಸುವುದರಿಂದ 'ಅನನ್ಯತೆ'ಯನ್ನು ಅದರ ಶೋಧಕ ಆಕರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ವ್ಯಕ್ತವಾಗುತ್ತದೆ. (ಅಕ್ಕೆ ಸಿರಿ ಪ್ರಕಾಶನ ಮಂಗಳೂರು ೧೯೯೫.)

*೭. ಪಾಶ್ಚಾತ್ಯ ಸ್ತ್ರೀವಾದದ ಸಿದ್ಧಾಂತಗಳ ಕುರಿತಂತೆ ಹಲ್ಬ್‌ರಾನೆಟ್ ವ್ಯಕ್ತಪಡಿಸುವ ಭಾರತೀಯ ಸ್ತ್ರೀವಾದದ ಸಿದ್ಧಾಂತಗಳ ಸಂದರ್ಭದಲ್ಲೂ ಪುರುಷಾಧಿಕಾರ, ಅವುಗಳೊಳಗೆ ಸ್ತ್ರೀ ರಕ್ಷಣೆ ಮತ್ತು ಪ್ರತಿರೋಧಗಳನ್ನು 'ಊಹಾತ್ಮಕ ತಾತ್ವಿಕ ನಿಲುವಿನಲ್ಲಿ ಅಭಿವ್ಯಕ್ತ' ಪಡಿಸುವ ಅತಿರೇಖತೆಯನ್ನು ಧ್ವನಿಸುತ್ತದೆ. ಎಂದರೆ, ಭಾರತೀಯ ಸ್ತ್ರೀವಾದ ಇಂಡಿಯಾದ ಸಮಸ್ತ ಸ್ತ್ರೀಯರ ಸಮಾನತೆ ಮತ್ತು ಗೌರವಗಳಿಗೆ ಬದ್ಧವಾಗಿರುವಂಥದ್ದು. ಆದರೆ, ಹಲವು ಸ್ತ್ರೀಯರ ಬದುಕು ಸ್ತ್ರೀವಾದವು ಗುರುತಿಸುವ 'ಅಬಲೆ' 'ಶೋಷಿತ' ಪಡಿಯಚ್ಚಿಗೆ ಹೊಂದಿಕೆಯಾಗುವುದಿಲ್ಲ. ಈ ಸಂದರ್ಭದಲ್ಲಿ ಸ್ತ್ರೀವಾದವು ಅದರ ಅಂತರ್‌ರಚನೆಯಲ್ಲಿ ಸಡಿಲತೆಯನ್ನು ಅನುಭವಿಸುವುದು ಸಹಜವಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಸ್ತ್ರೀಯರ ನೈಜವಾದ ಹಿತಾಸಕ್ತಿಗಳನ್ನು ಅವರಿಗೆ ಮನವರಿಕೆ ಮಾಡಿಕೊಡುವ ಮತ್ತು ಆ ನಿಟ್ಟಿನಲ್ಲಿ ಸ್ತ್ರೀಯರಿಗೆ ಮಾರ್ಗದರ್ಶನ ಮಾಡಬೇಕಾಗವ ಗುರುತರ ಜವಾಬ್ದಾರಿಯನ್ನು ಸ್ತ್ರೀವಾದ ನಿಭಾಯಿಸಬೇಕಾಗುತ್ತದೆ. Holub, Renate (1994) ' Between the united states and Italy : Critical Reflections on Diotima's Feminist/ Feminine Ethics in Giovanna Miceli Jefferice London :University of Minnesota Press.

ಸಮಾಜದ ಜನತೆಯ ಮನಸ್ಸುಗಳನ್ನು ಬದಲಾಯಿಸಲು ಪ್ರಯತ್ನಿಸಬೇಕಾಗುತ್ತದೆ. ಇದು ಅನನ್ಯತೆಯ ಶೋಧನ ಮಾರ್ಗವಾಗಿ ಪರಿಣಮಿಸುತ್ತದೆ. ಸಾಮಾಜಿಕ ಪರಿವರ್ತನೆ ಎನ್ನುವುದು ಒಂದೊಂದು ಬಿಡಿ ಬಿಡಿ ಸಾಂಸ್ಕೃತಿಕ ಸಂದರ್ಭಗಳ ದುರಸ್ತಿಯಿಂದ ಆಗುವಂಥದ್ದಲ್ಲ. ಶೋಷಿತರು, ಶೋಷಕರು ಇರುವ ಸಮಾಜದಲ್ಲಿ ಶೋಷಿತರನ್ನು ಶಿಕ್ಷಿಸುವುದರಿಂದ ನಿರ್ದಿಷ್ಟ ಸಂದರ್ಭವೊಂದು ಪಲ್ಲಟಗೊಳ್ಳುವುದು ಅಸಂಭವ. ಯಾವುದೇ ಶೋಷಣೆಗೆ ಅವಕಾಶ ಕೊಡುವ ಸಾಮಾಜಿಕ ನಂಬುಗೆಗಳನ್ನು ಮತ್ತು ಸಂಸ್ಥೆಗಳನ್ನು ಬದಲಾಯಿಸುವ ಕಡೆ ಸ್ತ್ರೀವಾದ ದೃಢಪಯತ್ನಗಳನ್ನು ಮಾಡಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ 'ಮಾನವ ಹಕ್ಕುಗಳೇ ಬೇರೆ' 'ವ್ಯಕ್ತಿಗತ ಸ್ವಭಾವಗಳೇ ಬೇರೆ' ಎನ್ನುವ ಮುಖ್ಯ ಎಚ್ಚರ ಅದಕ್ಕಿರಬೇಕಾಗುತ್ತದೆ. 'ಸ್ತ್ರೀವಾದ'ದ ಸುಧಾರಣೆಯ ನೆಲೆಗಳು ಈ ನಿಟ್ಟಿನಲ್ಲಿ ಹೆಚ್ಚು ಪಾರದರ್ಶಕವಾಗಿ ಇರಬೇಕಾಗುತ್ತದೆ. ಇಂಡಿಯಾದ ಸ್ತ್ರೀವಾದದ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳ ಸುಧಾರಣಾ ಯೋಜನೆಗಳು ಹೆಚ್ಚು ಹೆಚ್ಚು ಜನರನ್ನು ಒಳಗೊಳ್ಳಬೇಕೆನ್ನುವುದರಲ್ಲಿ ಅದರ ಅನನ್ಯತೆಯು ಸಾಕಾರಗೊಳ್ಳುತ್ತದೆ. ಇಲ್ಲಿ ಹೆಚ್ಚು ಮುಖ್ಯವಾಗಿ ಕಾಣಿಸಿಕೊಳ್ಳುವುದು ಮಧುಕೀಶ್ವರ್ ಅವರಂತಹ ಕ್ರಿಯಾಶೀಲ ಸ್ತ್ರೀವಾದಿಗಳ ವೈಚಾರಿಕ ನಿಲುವು. "ಜನರನ್ನು ಒಡೆದು ಬೇರೆ ಮಾಡುವಂಥ ರಾಜಕಾರಣ ಅದರ ಹುಟ್ಟಿನಲ್ಲೇ ತೀರಾ ಸಂಕುಚಿತವಾದದ್ದು. ನಾವು ಎಂದಿಗೂ ಒಂದು ಗುಂಪನ್ನು ಇನ್ನೊಂದು ಗುಂಪಿನ ವಿರುದ್ಧ ಎತ್ತಿಕಟ್ಟಬಾರದು. ಒಂದು ಗುಂಪು ಇನ್ನೊಂದನ್ನು ಸಹಿಸುವುದನ್ನು ಕಲಿತಾಗ ಮಾತ್ರ ಸಾಧ್ಯ. ಇದು ಸಾಧ್ಯವಾಗುವುದು ಯಾವಾಗ ಅಂದರೆ ಜನರು ತಮ್ಮ ಪರಸ್ಪರ ಸಂಬಂಧಗಳಲ್ಲಿ (ಪ್ರಜ್ಞಾಪೂರ್ವಕವಾಗಿಯಾದರೂ) ಮಾನವೀಯರಾಗಿ ವರ್ತಿಸಿದಾಗ, ನಾವು ಈ ದಿಸೆಯಲ್ಲಿ ಕೆಲಸ ಮಾಡಬೇಕು." (ಮೀರಾ ಎಲ್.ಜಿ. (ಅನು) : ೧೯೯೭ ; ೧೧೪) ಸ್ತ್ರೀಯರ ಅನನ್ಯತೆಯನ್ನು

ಸಮುದಾಯದಲ್ಲಿ ಅತ್ಯಂತ ಪಾರದರ್ಶಕವಾಗಿ ಗುರುತಿಸಬೇಕಾಗುತ್ತದೆ. ಸತ್ಯದೊಡನೆ ಮುಖಾಮುಖಿ ಗೊಂಡಾಗ ಮಾತ್ರ ಇದು ಸಾಧ್ಯವಾಗುತ್ತದೆ. ಸ್ತ್ರೀಯರಿಂದ ಮಾತ್ರ ಸ್ತ್ರೀಯರ ಉದ್ಧಾರ ಸಾಧ್ಯ. ಪುರುಷರೆಲ್ಲರೂ ಸ್ತ್ರೀ ದ್ವೇಷಿಗಳು. ಸ್ತ್ರೀಯರನ್ನು ಗುರಿಯಾಗಿ ಪರಿಭಾವಿಸುವ ಸಮಾಜ ಮಾತ್ರ ಸ್ತ್ರೀಯರ ಅನನ್ಯತೆಯನ್ನು ಮಾನ್ಯ ಮಾಡುವುದು ಸಾಧ್ಯ ಎಂದು ಗ್ರಹಿಸುವುದು ತಪ್ಪಾಗುತ್ತದೆ. ವ್ಯಕ್ತಿಗಳ ಸಮಾಜದಲ್ಲಿ 'ಕೇವಲ ಪುರುಷರಿಗೆ' ಮತ್ತು 'ಕೇವಲ ಸ್ತ್ರೀಯರಿಗೆ' ಎನ್ನುವ ಒಡೆಯುವಿಕೆಯು ಆರೋಗ್ಯಪೂರ್ಣವಾದ ಸಂದರ್ಭವೊಂದನ್ನು ಸಮಾಜದಲ್ಲಿ ಹುಟ್ಟುಹಾಕಲು ಖಂಡಿತಾ ವಿಫಲವಾಗುತ್ತವೆ. ಈ ನಿಟ್ಟಿನಲ್ಲಿ ಸ್ತ್ರೀಯರ ಧ್ವನಿ ಮತ್ತು ಪುರುಷರ ಧ್ವನಿಗಳಿಗೆ ಸಮಾಜದಲ್ಲಿ ಸಮಾನ ಮಾನ್ಯತೆ ಪ್ರಾಪ್ತವಾದಾಗ ಮಾತ್ರ ಅನನ್ಯವಾದ ಸಾಂಸ್ಕೃತಿಕ ನೆಲೆಯೊಂದನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಸ್ತ್ರೀಯರ ವಿಷಯಗಳಲ್ಲಿ ಯಾವುದೇ ಬದಲಾವಣೆ ಮಾಡಬೇಕಿದ್ದರೂ ಅದು ಕುಟುಂಬ ರಚನೆಯ ಮೂಲದಿಂದಲೇ ಕ್ರಿಯಾಶೀಲಗೊಳ್ಳಬೇಕು. ಸ್ತ್ರೀಯರು ಪರಿಸ್ಥಿತಿಯ ಸುಧಾರಣೆಯಲ್ಲಿ ಕುಟುಂಬ ಸಹಕರಿಸಿದರೆ ಮಾತ್ರ ಸ್ತ್ರೀಯರ ಸಬಲೀಕರಣದ ಸಮೀಕರಣ ಸುಲಭ ಸಾಧ್ಯವಾಗುತ್ತದೆ. ಸ್ತ್ರೀ - ಪುರುಷ ಲಿಂಗಾನುಪಾತವನ್ನು ಕುಟುಂಬದ ಮೂಲದಿಂದಲೇ ತೊಡೆದು ಹಾಕಿದಲ್ಲಿ ಮಾತ್ರ ಅನನ್ಯ ಸಾಂಸ್ಕೃತಿಕ ನೆಲೆ ಸಾಕಾರಗೊಳ್ಳುತ್ತದೆ.

*೮. ' Susan Moller Okin ' Is Multiculturalism bad for women ?' ಎನ್ನುವ ಕೃತಿಯಲ್ಲಿ ಭಾಗ ಎರಡರ ಎನ್ನುವ ಅಧ್ಯಾಯದಲ್ಲಿ ಸ್ತ್ರೀಯರ 'ಸ್ವಾಯತ್ತ ಶಕ್ತಿ'ಯ ಮರುಕಲ್ಪಿಸುವಿಕೆಯ ಕುರಿತು ದೀರ್ಘವಾಗಿ ಚರ್ಚಿಸಲಾಗಿದೆ. Susan Moller Okin (1999) : Is Multiculturalism Bad for Women ? ; Princetion University Press, William Street West Sussex.

*೯. 'ಸಬಲೀಕರಣ'ವನ್ನು ಇಂಡಿಯಾದ ಸ್ತ್ರೀಯರಿಗೆ ಸಂಬಂಧಿಸಿದಂತೆ ಸಂಶೋಧನಾತ್ಮಕವಾಗಿ ರೂಪಿಸಿ ವಿಶ್ಲೇಷಿಸುವ ಪ್ರಯತ್ನ ನಡೆದಿದೆ. ಈ ನೆಲೆಯಿಂದ ಮುಖ್ಯವಾಗುವ ಕೃತಿಗಳೆಂದರೆ ;'Empowering the Indian woman', ಈ ಕೃತಿಯಲ್ಲಿ ಲೇಖನಗಳಾದ 'Marriage and the working woman in India, the changing status of working woman in India', 'The Indian call- Girls' ಮುಖ್ಯವಾಗುತ್ತವೆ. (Empowering the Indian woman: Promilla Kapur: Publications Division Govt. of India Patiala House, New Delhi,2001)

*೧೦. ಆಧುನಿಕೋತ್ತರ ಸಮಾಜದ ಕುಟುಂಬ (Postmodern society family) ಮತ್ತು ಆಧುನಿಕೋತ್ತರ ಸ್ತ್ರೀವಾದಿ ಕುಟುಂಬ (Postmodern feminist family) ಈ ಎರಡೂ ಸಂರಚನೆಗಳು ಅನನ್ಯ ಸಾಂಸ್ಕೃತಿಕ ನೆಲೆಯ ವಸ್ತುನಿಷ್ಠ ಆದರ್ಶಗಳನ್ನು ಒಡೆಯುವ ಅಪಾಯಕಾರಿ ಪ್ರವಾಹಗಳಾಗಿವೆ. (Dangerous tides) ಆಧುನಿಕೋತ್ತರ ಸಮಾಜದ ಕುಟುಂಬ ಗಂಡ-ಹೆಂಡತಿ-ಮಕ್ಕಳನ್ನು ಒಳಗೊಂಡು ಮಾರುಕಟ್ಟೆಯ ಅನಿವಾರ್ಯತೆಯನ್ನು ಆಧರಿಸಿದಂತೆ ಏಕರೂಪದಲ್ಲಿ ಎರಕಗೊಂಡಿದ್ದರೂ ಅಂತರಾಭಿಮುಖವಾಗಿ ಸಾಂಸ್ಕೃತಿಕ ಎಲ್ಲೆಯ ಒಳಗೆ ಜಾತಿ, ಉಪಜಾತಿ, ಸಂಸ್ಕಾರ, ಆಚರಣೆ ಇಂತಹ ಹಲವು ನೆಲೆಗಳಲ್ಲಿ ಪ್ರತ್ಯ ಪ್ರತ್ಯೇಕವಾಗಿ ಗುರುತಿಸಿಕೊಳ್ಳುತ್ತದೆ. ಆಧುನಿಕೋತ್ತರ ಸಮಾಜದ ಕುಟುಂಬಗಳು ಆರ್ಥಿಕ ರಾಜಕೀಯವಾಗಿ ಸಂರಚನಾತ್ಮಕವಾಗಿ ಒಂದೇ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತಿರುತ್ತವೆ. ಕುಟುಂಬ ಯೋಜನೆ, ಸರಕಾರದ ಜನಸಂಖ್ಯಾ ನಿಯಂತ್ರಣ ಯೋಜನೆಗಳು, ಆಧುನಿಕ ಮನೋಭಾವ, ಸರಕಾರದ

ಕಾನೂನುಗಳಿಂದಾಗಿ ಗಂಡ- ಹೆಂಡತಿ-ಮಕ್ಕಳನ್ನು ಒಳಗೊಂಡ 'ಸರಳ ಕುಟಂಬ'ಗಳೇ ನಮ್ಮ ಸಮಾಜದಲ್ಲಿ ಶೇಕಡಾವಾರು ಅಧಿಕವಾಗಿದ್ದರೂ ಕುಟುಂಬದ ಗುರುತಿಸುವಿಕೆ (Identity) ಎನ್ನುವುದು ಆಯಾ ಪ್ರದೇಶಗಳ ಜಾತಿ-ಉಪಜಾತಿಗಳಂತಹ ನೆಲೆಯಲ್ಲಿ ಸಂಕೀರ್ಣನೆಲೆಯಲ್ಲಿ ಪ್ರತ್ಯೇಕಗೊಳ್ಳುತ್ತಿವೆ. ಆಧುನಿಕೋತ್ತರ ಸಂದರ್ಭದ ಜಾತಿ-ಉಪಜಾತಿ ಸಂಘಟನೆಗಳು, ಸಮಾವೇಶಗಳು, ವ್ಯಕ್ತಿ ವ್ಯಕ್ತಿಗಳ ನಡುವಿನ ವ್ಯತ್ಯಾಸಗಳಿಗೆ (Difference)ಕಾರಣಗಳಾಗಿವೆ. ಆಧುನಿಕೋತ್ತರ ಕುಟುಂಬ ಸಂರಚನೆಯು ವ್ಯಕ್ತಿ ವ್ಯಕ್ತಿಗಳ ನಡುವಿನ ಗಾಢವಾದ ಏಕಾಂಗಿತನಕ್ಕೆ (lonelyness) ಕಾರಣಗಳಾಗಿವೆ. ಎಂದರೆ, ಇದು ಸ್ಥಾಪಿತಗೊಳ್ಳುವ ಅಥವಾ ಘನಾಕಾರಿ ಮಾದರಿಯಲ್ಲ. ಆದರೆ, ವ್ಯಕ್ತಿ ಸಂಬಂಧಗಳನ್ನು ವಸ್ತು ಪ್ರಪಂಚದ ಲಾಭ ನಷ್ಟಗಳ ಗ್ರಹಿಕೆಯ ಮೇಲೆ ಮಾತ್ರ ಅರ್ಥೈಸಲು ಪ್ರಯತ್ನಿಸುತ್ತದೆ. ಸಂಬಂಧಗಳ ಅರ್ಥವನ್ನು ವಸ್ತು ವ್ಯಾಮೋಹವೆಂದು ಕಾಣುವಂತೆ ಒತ್ತಡ ಹೇರುತ್ತದೆ. ಇದಕ್ಕೆ ಮುಖ್ಯ ಕಾರಣವೇ ಆಧುನಿಕೋತ್ತರ ಸಮಾಜಗಳ ಶಿಕ್ಷಣ ಕ್ರಮದಲ್ಲಿರುವ ಅತಿ ಮಹತ್ವದ ಕೊರತೆ ಎಂದು ಎರಿಕ್ ಫ್ರಾಂ 'Art of Loving 'ನಲ್ಲಿ ಅಭಿಪ್ರಾಯ ಪಡುತ್ತಾರೆ. ಅವರ ಪ್ರಕಾರ ; "ನಾವು ಜ್ಞಾನವನ್ನು ಕಲಿಸುತ್ತೇವೆ. ಆದರೆ ಮನುಷ್ಯನ ಬೆಳವಣಿಗೆಗೆ ಬಹಳ ಮುಖ್ಯವಾದ ಕಲಿಕೆಯ ಅಂಶವನ್ನು ನಾವು ಕಳೆದು ಬಿಡುತ್ತೇವೆ. ಅದು ಪ್ರಬುದ್ಧನಾದ, ಪ್ರೀತಿಯುಕ್ತನಾದ ಒಬ್ಬ ವ್ಯಕ್ತಿಯ ಉಪಸ್ಥಿತಿ ಕೊಡಬಹುದಾದ ಕಲಿಕೆ. ಪಾಶ್ಚಾತ್ಯ ಸಂಸ್ಕೃತಿಯ ಹಿಂದಿನ ಯುಗಗಳಲ್ಲಿ, ಚೈನಾ ಮತ್ತು ಭಾರತಗಳಲ್ಲಿ ಆಧ್ಯಾತ್ಮಿಕ ಗುಣಗಳನ್ನು ಹೊಂದಿರುವ ಮಹಾಪುರುಷರಿಗೆ ಸಮಾಜದಲ್ಲಿ ಅತ್ಯುನ್ನತ ಸ್ಥಾನ ಮೀಸಲಾಗಿತ್ತು. ಉಪಾಧ್ಯಾಯ ಕೂಡ ಕೇವಲ ಅಥವಾ ಮುಖ್ಯವಾಗಿ ಮಾಹಿತಿಗಳನ್ನು ಸರಬರಾಜು ಮಾಡುವ ಯಂತ್ರವಾಗಿರದೆ, ತನ್ನ ನಡತೆಯ ಮೂಲಕ ಕೆಲವು ಮಾನವೀಯ ದೃಷ್ಟಿಕೋನಗಳನ್ನು ಕಲಿಸುನಂಥವನಾಗಿದ್ದ. ಸಮಕಾಲೀನ ಬಂಡವಾಳಶಾಹೀ ವ್ಯವಸ್ಥೆಯಲ್ಲೇ ಆಗಲಿ ಅಥವಾ ರಷ್ಯಾದ ಸಮತಾವಾದಿ ವ್ಯವಸ್ಥೆಯಲ್ಲೇ ಆಗಲಿ ಜನರು ಮುಚ್ಚಲು ಮತ್ತು ಅನುಕರಿಸಲು ಸೂಚಿತರಾಗುವ ವ್ಯಕ್ತಿಗಳು ಯಾವುದೇ ವಿಧವಾದ ಆಧ್ಯಾತ್ಮಿಕ ಗುಣಗಳನ್ನು ಹೊಂದಿದವರಲ್ಲ. ಸಾಮಾನ್ಯ ಜನರ ಕಣ್ಣ ಮುಂದೆ ಕುಣಿದಾಡುವ 'ಮಹಾಪುರುಷ'ರು ನೈತಿಕ ದಿವಾಳಿತನಕ್ಕೆ ಪ್ರಸಿದ್ಧರಾದವರಾಗಿರುತ್ತಾರೆ. ಚಲನಚಿತ್ರ ತಾರೆಯರು, ಕ್ರೀಡಾ ಪಟುಗಳು, ಪತ್ರಿಕೋದ್ಯಮಿಗಳು, ರಾಜಕಾರಣಿಗಳು, ಯಶಸ್ವೀ ವರ್ತಕರು, ಆಕಾಶವಾಣಿಯಲ್ಲಿ ಜನರನ್ನು ರಂಜಿಸುವವರು ಇಂಥವರೇ ನಮ್ಮ ಯುವಜನಾಂಗಕ್ಕೆ ಮಾದರಿಗಳಾಗಿ ಬಿಡುತ್ತಾರೆ. ಅವರಿಗಿರುವ ಏಕಮಾತ್ರ ಅರ್ಹತೆಯೆಂದರೆ ಅವರು ಸಂಪರ್ಕ ಮಾಧ್ಯಮಗಳ ಬೆಂಬಲದಿಂದ 'ಸುದ್ಧಿ'ಯಾಗುವುದರಲ್ಲಿ ಯಶಸ್ವಿಯಾದರು ಎನ್ನುವುದು." (ನಾರಾಯಣ ಕೆ.ವಿ. ರಾಘವೇಂದ್ರ ರಾವ್ ಎಚ್. ಎಸ್. (ಅನು): ೨೦೦೧; ೯೮, ೯೯)

*೧೧. ಸಮಗ್ರವಾಗಿ ಆಧುನಿಕೋತ್ತರ ಸಂದರ್ಭವೆನ್ನುವುದು ವ್ಯಕ್ತಿಗಳನ್ನು 'ಮಾರಾಟ' ಮತ್ತು 'ಕೊಳ್ಳುವ' ಆಧುನಿಕ ಮನೋವಿಶ್ಲೇಷಣೆಯಲ್ಲಿಯೇ ಬೆಳಸುತ್ತಿರುತ್ತದೆ. ಇದು ಒಂದು ಅತಿಯಾದರೆ, ಆಧುನಿಕೋತ್ತರ ಸ್ತ್ರೀವಾದಿ ಕುಟುಂಬವು 'ಸ್ವರತಿ' ಸಾಧನೆಯನ್ನು ಪ್ರಚೋದಿಸುವಂತದ್ದು. ಆಧುನಿಕೋತ್ತರ ಸ್ತ್ರೀವಾದಿ ಕುಟಂಬದಲ್ಲಿನ ಗೃಹಿಣಿ ತನ್ನೊಳಗೆ ನಡೆಯುತ್ತಿರುವ ಸಂಗತಿಗಳಿಗೆ ಅತಿ ಮಹತ್ವ ನೀಡುವವಳಾಗಿರುತ್ತಾಳೆ. ಅವಳ 'ಅಹಂ' (ego) ಕೇಂದ್ರದ ಕಕ್ಷೆಯ ಒಳಗಿನಿಂದಲೇ ಗಂಡ- ಮಕ್ಕಳು- ಕುಟುಂಬ- ಸಂಸಾರದ ಒಟ್ಟು

ಆಗುಹೋಗುಗಳನ್ನು ಪರಿಭಾವಿಸು ವವಳಾಗಿರುತ್ತಾಳೆ. ಇಂತಹ ಕುಟಂಬ ಸದಸ್ಯರುಗಳು ತಮ್ಮನ್ನು ತಾವೇ ಪ್ರೀತಿಸುವ ಗೀಳಿನಿಂದ (harcistic) ನರಳುತ್ತಿರುತ್ತಾರೆ. ಸಂಬಂಧಗಳಲ್ಲಿ ಸ್ವಾಭಾವಿಕವಾದ ಪ್ರೀತಿಯನ್ನು ಅನುಭವಿಸುವುದು ಅಸಾಧ್ಯವಾಗುವ ಕೃತಕ ವಾತಾವರಣ, ಅತಿ ಭಾವುಕತೆ, ಹಗೆ ಸಾಧಿಸುವ ಬುದ್ಧಿಗೆ ಪ್ರಚೋದಕಗಳಾಗಿ ಮಾರ್ಪಡುವುದು ಆಧುನಿಕೋತ್ತರ ಸ್ತ್ರೀವಾದಿ ಕುಟುಂಬಗಳ ದುರಂತವಾಗಿದೆ. ತಮ್ಮನ್ನು ತಾವೇ ಪ್ರೀತಿಸುವ ಗೀಳಿನಿಂದ ತಮ್ಮೊಳಗೆ ನಡೆಯುತ್ತಿರುವ ಸಂಗತಿಗಳನ್ನು ಬಿಟ್ಟರೆ ಬೇರಾವ ಅನುಭವಗಳನ್ನು ವಾಸ್ತವವೆಂದು ಪರಿಗಣಿಸಲು ಸಾಧ್ಯವಾಗುವುದೇ ಇಲ್ಲ. ಹೊರಜಗತ್ತಿನಲ್ಲಿ ಸಂಭವಿಸುವ ಘಟನೆಗಳು- ಅವುಗಳಿಂದ ತಮಗೆ ಲಾಭವಿದೆಯೋ ಅಥವಾ ಅಪಾಯವಿದೆಯೋ ಎಂಬುದನ್ನು ಬಿಟ್ಟರೆ- ಬೇರೆ ಯಾವ ರೀತಿಯ ವಾಸ್ತವಾದ ಅಸ್ತಿತ್ವವನ್ನು ಒಪ್ಪಿಕೊಳ್ಳುವುದು, ಮನ್ನಿಸುವುದು ಅವರಿಗೆ ಸಾಧ್ಯವಾಗುವುದಿಲ್ಲ. ಎರಿಕ್ ಫ್ರಾಂ ಇದನ್ನೇ ನಾರ್ಸಿಸಿಸ್ಟಿಕ್ ದೃಷ್ಟಿಕೋನದಿಂದ ವಿಕೃತನಾದ, ವಸ್ತುನಿಷ್ಠವಲ್ಲದ ಧೋರಣೆಗಳನ್ನೇ ಹೊರಜಗದ ಬಗ್ಗೆ ಹೊಂದಿದ್ದೇವೆ ಎಂದು ಹೇಳುವುದು. ಆತ ಪರಿಭಾವಿಸುವಂತೆ ; "ಇದಕ್ಕೆ ನಿದರ್ಶನಗಳನ್ನು ಬೇರೆ ಕೊಡಬೇಕೋ? ಪ್ರತಿಯೊಬ್ಬ ವ್ಯಕ್ತಿಯೂ ತನ್ನನ್ನು ಅಥವಾ ತನ್ನ ನೆರೆಹೊರೆಯವರನ್ನು ಗಮನಿಸುವುದರಿಂದ, ವೃತ್ತ ಪತ್ರಿಕೆಗಳನ್ನು ಓದುವುದರಿಂದ ಇದರ ನಿದರ್ಶನಗಳನ್ನು ಕಾಣಬಲ್ಲ. ಆ ವ್ಯಕ್ತಿ ತನ್ನದೇ ಆದ ನಾರ್ಸಿಸಿಸ್ಟಿಕ್ ದೃಷ್ಟಿಕೋನದಿಂದ ಎಷ್ಟರ ಮಟ್ಟಿಗೆ ಪ್ರಭಾವಿತನಾಗಿರುವನೆನ್ನುವುದರಿಂದ ಅವು ನಿರ್ಧರಿತವಾಗುತ್ತವೆ. ಉದಾಹರಣೆಗೆ ಒಬ್ಬ ಮಹಿಳೆ, ವೈದ್ಯರೊಬ್ಬರಿಗೆ ಫೋನ್ ಮಾಡಿ ತಾನು ಅದೇ ದಿನ ಮಧ್ಯಾಹ್ನ ಅವರ ಕಛೇರಿಯಲ್ಲಿ ಅವರನ್ನು ನೋಡಬಯಸುವೆನೆಂದು ತಿಳಿಸುತ್ತಾಳೆ. ವೈದ್ಯರು ತಮಗೆ ಆದಿನ ಮಧ್ಯಾಹ್ನ ಬಿಡುವಿಲ್ಲವೆಂದೂ ಬೇಕಾದರೆ ಮಾರನೆಯ ದಿನ ಮಧ್ಯಾಹ್ನ ತಮ್ಮನ್ನು ಆಕೆ ನೋಡಬಹುದೆಂದೂ ತಿಳಿಸುತ್ತಾರೆ. ಆಕೆ ಕೊಡುವ ಉತ್ತರ : 'ಆದರೆ , ಡಾಕ್ಟರ್, ನನ್ನ ಮನೆಯಿಂದ ನಿಮ್ಮಲ್ಲಿಗೆ ಬರಲು ಕೇವಲ ಐದು ನಿಮಿಷ ಸಾಕು'. ಪ್ರಯಾಣ ಮಾಡುವ ದೂರ ಕಡಿಮೆಯಿರುವುದರಿಂದ 'ಅವರ' ಸಮಯವೇನೂ ಉಳಿಯುವುದಿಲ್ಲವೆನ್ನುವ ವಿವರಣೆ ಆಕೆಗೆ ಅರ್ಥವಾಗುವುದೇ ಇಲ್ಲ. ಅವಳು ಆ ಸನ್ನಿವೇಶವನ್ನು ಕೇವಲ ಸ್ವರತಿಯಿಂದ ನೋಡುತ್ತಿರುತ್ತಾಳೆ." (ನಾರಾಯಣ ಕೆ.ವಿ. ರಾಘವೇಂದ್ರರಾವ್ ಎಚ್.ಎಸ್. (ಅನು) : ೨೦೦೧ ; ೧೦೧) ನಾರ್ಸಿಸಿಸಂನ ಹೆಚ್ಚೂ ಕಡಿಮೆ ಗೈರು ಹಾಜರಿಯನ್ನೇ 'ಸೌಹಾರ್ದತೆ'ಯ ಯಶಸ್ಸು ಅವಲಂಬಿಸಿದೆಯಾದ್ದರಿಂದ ವಿನಯಶೀಲತೆ, ವಸ್ತುನಿಷ್ಠೆ ಮತ್ತು ವಿವೇಚನಾಶೀಲತೆ ಕುಟುಂಬ ಸಂಬಂಧಗಳಲ್ಲಿ ಅನಿವಾರ್ಯವಾಗಿರುತ್ತದೆ. ಅನನ್ಯ ಸಾಂಸ್ಕೃತಿಕ ನೆಲೆ ಎನ್ನುವುದು ಕುಟುಂಬ ಸಂಸ್ಥೆಯ ಒಳಗೆ ಇದನ್ನೇ ನಿರೀಕ್ಷೆಮಾಡುತ್ತದೆ.

*೧೨. "ಶುಚಿಯಾದ ಶಾಂತಿಯುತವಾದ ಜೀವನ ಸಾಗಿಸುವ ಸಲುವಾಗಿ ಜೀವನ ನೀಡಬಹುದಾದ ಸಕಲ ಸುಖಗಳನ್ನು ನಿಯತಿ ನಿಯಮ ಮೀರದಂತೆ ಪಡೆಯುವ ಸಲುವಾಗಿ, ಮೇಲಾಗಿ ಪೂರ್ಣ ಜೀವನದ ಸಾಕ್ಷಾತ್ಕಾರಕ್ಕಾಗಿ ಸುಸಂಸ್ಕೃತ ಮಾನವ ಏರ್ಪಡಿಸಿ ಕೊಂಡ ವ್ಯವಸ್ಥೆಯೇ ಮದುವೆ." (ಕುವೆಂಪು : ಮಂತ್ರ ಮಾಂಗಲ್ಯ; ೧೯೭೫, ೩೫)

*೧೩.ಯೂಂಗ್ ಮೂಲತಃ ಒಬ್ಬ ಮನೋಚಿಕಿತ್ಸಕ ಈತ ಪರಿಭಾವಿಸುವಂತೆ ವ್ಯಕ್ತಿಗಳ 'ಸ್ವಯಂ'ಅನ್ನು ಪರಿಪೂರ್ಣವಾಗಿ ಅರಿಯುವುದು ಮಾನವನ ತಿಳುವಳಿಕೆಗೆ ಮೀರಿದ್ದು. ಅದು ಸ್ವಲ್ಪ ಮಟ್ಟಿಗೆ ವ್ಯಕ್ತಿಗಳ

ಅನುಭವಕ್ಕೆ ಬಂದರೂ ಅದನ್ನು ವಿವರಿಸುವುದು ಕಷ್ಟ. ವ್ಯಕ್ತಿಗಳಿಗೆ ಗೊತ್ತಿರುವುದೆಲ್ಲ ಸ್ವಯಂನ ಒಂದು ಘಟಕವಾದ ಅಹಂ ಮಾತ್ರ. ಅಹಂ ಕೂಡ ತಾನು ತನಗೇ ತಿಳಿಯದ ಯಾವುದೋ ಉನ್ನತ ಮಟ್ಟದ ವಿಷಯಿಗೆ (subject) ವಿಷಯ (object)ವಾಗಿರುವಂತೆ ಭಾವಿಸುತ್ತದೆ. ಹೀಗೆ ಸ್ವಯಂ ಎಂಬುದು 'ವ್ಯಕ್ತಿ'ಯೇ ಆದರೂ ಅದು ಆತನಿಗೆ ಅಪರಿಚಿತ. ಅದೊಂದು ರಹಸ್ಯ ಕಾರ್ಯ ಕ್ರಮಗಳ ಕೇಂದ್ರ. ನಮ್ಮ ಮಾನಸಿಕ ಜೀವನದ ಮೂಲ ಬೇರು ಹೊರಟಿರುವುದು ಸ್ವಯಂನಿಂದ. ಅಂದರೆ, ವ್ಯಕ್ತಿ ತನ್ನನ್ನು ತಾನು ಅರಿತುಕೊಳ್ಳುವುದು ಒಂದು ಆಧಾರ ಕಲ್ಪನೆ (postulate) ಈ ಕಾರಣದಿಂದಾಗಿ ಆತನ ಅರಿವಿಗೆ ಬರುವ ಇನ್ನಾವುದೇ ವಿಷಯ.... ವ್ಯಕ್ತಿಯನ್ನು ಅರ್ಥವತ್ತಾಗಿ ತಿಳಿಯುವುದು, ವಿವರಿಸುವುದು ಅಸಾಧ್ಯವಾಗುತ್ತದೆ. ಇದರಿಂದಲೇ ಸ್ವಯಂ ಮನೋವಿಶ್ವದ ಪ್ರಥಮತೆ. ವ್ಯಕ್ತಿಗಳು ಹಾಯಲಾಗದ ಒಂದು ಆಳದ ಪ್ರತೀಕ. ಯೂಂಗ್ ಪ್ರತಿಪಾದಿಸುವ 'ಸ್ವಯಂ ಸಾಕ್ಷಾತ್ಕಾರ'ದ ನೆಲೆಯಿಂದ ಗಂಡು-ಹೆಣ್ಣಿನ ದಾಂಪತ್ಯ ಜೀವನದ ಸವಾಲುಗಳನ್ನು ವಿವರಿಸುವುದರಿಂದ ನಿಖರವಾದ ತೀರ್ಮಾನಗಳನ್ನು ಪಡೆಯಲು ಸಾಧ್ಯವಾಗುತ್ತದೆ.

*೧೪. 'ಅಗಮ್ಯಗಮನ' ತಂದೆ - ಮಗಳ ಮತ್ತು ತಾಯಿ - ಮಗನ ಲೈಂಗಿಕ ಸಂಬಂಧ, ಸೋದರ-ಸೋದರಿಯರ ಲೈಂಗಿಕ ಸಂಬಂಧಕ್ಕಿಂತ ಬಹಳ ಕಡಿಮೆ. ಪ್ರತಿಯೊಂದು ಸಂಸ್ಕೃತಿಯಲ್ಲೂ ಇಂತಹ ಲೈಂಗಿಕ ಸಂಬಂಧ ನಿಷಿದ್ಧವಾದುದು. ಈ ನಿಷೇಧಕ್ಕೆ ಕೆಲವು ಸಾಮಾಜಿಕ ಕಾರಣಗಳುಂಟು. ಈ ನಿಷೇಧವಿಲ್ಲದಿದ್ದರೆ, ಲೈಂಗಿಕ ತೃಪ್ತಿಗಾಗಿ ತಂದೆ- ಮಗಳ ನಡುವೆ, ತಾಯಿ-ಮಗನ ನಡುವೆ, ಸೋದರ-ಸೋದರಿಯರ ನಡುವೆ ಸ್ಪರ್ಧೆ, ದ್ವೇಷ ಮತ್ತು ರಕ್ತಪಾತಗಳಾಗುತ್ತಿದ್ದವು. ಇದನ್ನು ತಪ್ಪಿಸುವುದಕ್ಕಾಗಿಯೇ ಸಮಾಜ ಈ ಸಂಬಂಧವನ್ನು ಬಹಿಷ್ಕರಿಸಿತು. ತತ್ಫಲವಾಗಿ ಕುಟುಂಬದ ವ್ಯಕ್ತಿಗಳು ಲೈಂಗಿಕ ತೃಪ್ತಿಗಾಗಿ ಹೊರಗಿನವರೊಡನೆ ಸಂಪರ್ಕ ಮತ್ತು ಸಂಬಂಧ ಬೆಳೆಸುವುದು ಅತ್ಯಗತ್ಯವಾಗುತ್ತದೆ. ಹೀಗೆ ಹೊರಗೆ ಹೋಗುವುದರಿಂದ ಕುಟುಂಬದೊಳಗಿನ ಅನಾಹುತಗಳು ತಪ್ಪುತ್ತವೆಯಲ್ಲದೆ ವ್ಯಕ್ತಿಯ ಸಾಮಾಜೀಕರಣಕ್ಕೆ ಅನುಕೂಲವಾಗುತ್ತದೆ. ಅಲ್ಲದೆ ಸಮಾಜದಲ್ಲಿದ್ದೂ ಏಕಾಂಗಿಯಾಗಿರುವ ಸಾಧ್ಯತೆ ತಪ್ಪುತ್ತದೆ. ಮನಃಶಾಸ್ತ್ರದ ಪ್ರಕಾರ ಅಗಮ್ಯಗಮನವು ಸಮಾಜದ ಎಲ್ಲ ಆರ್ಥಿಕ, ಸಾಮಾಜಿಕ ವರ್ಗಗಳಲ್ಲಿ ಕಂಡು ಬಂದರೂ ಬುದ್ಧಿಮಾಂದ್ಯರ, ಮಧ್ಯವ್ಯಸನಿಗಳ, ನೀತಿ ಬಾಹಿರರ ಮತ್ತು ಅಪರಾಧ ಇತಿಹಾಸ ಉಳ್ಳವರ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅಲ್ಲದೆ, ಮನಃಶಾಸ್ತ್ರದ ಸರ್ವೇ ಪ್ರಕಾರ ಅಗಮ್ಯಗಮನದಲ್ಲಿ ತಂದೆ- ಮಗಳ ಮತ್ತು ತಾಯಿ- ಮಗನ ಲೈಂಗಿಕ ಸಂಬಂಧ, ಸೋದರ- ಸೋದರಿಯರ ಲೈಂಗಿಕ ಸಂಬಂಧಕ್ಕಿಂತ ಬಹಳ ಕಡಿಮೆ ಎಂದು ಗುರುತಿಸಲಾಗಿದೆ. (Nataraj P. Psychology for Beginnerss, Parts I and II, Sreenivasa Publications Mysore, 1994.)

*೧೫. ಎಮಿಲಿ ಡರ್ಕಹೀಮ ಆಧುನಿಕ ಸಮಾಜದ ಆತ್ಮಹತ್ಯೆಯನ್ನು ಮೂರು ನೆಲೆಗಳಿಂದ ಗುರುತಿಸುತ್ತಾನೆ. ೧) ಆತ್ಮ ಕೇಂದ್ರಿತ (Egoistic) ಪರಹಿತವಾದೀ (Altruislic) ಶೂನ್ಯ ಭಾವೋತ್ಪನ್ನ (Anomic) ಈ ಸಮಾಜಶಾಸ್ತ್ರಜ್ಞರ ಪ್ರಕಾರ ಮನೋವಿಕಲ್ಪ ಮಾನಸಿಕ ತುಮುಲ ಹಾಗೂ ಮನೋ ವಿಕೃತಿ ಮೊದಲಾದ ಕಾರಣಗಳು ಆತ್ಮಹತ್ಯೆಗೆ ನೇರವಾಗಿ ಸಂಬಂಧಿಸಿಲ್ಲ. ವ್ಯಕ್ತಿ ತನ್ನನ್ನು ತಾನು ಉದ್ದೇಶಪೂರ್ವಕವಾಗಿ ಕೊಂದು ಕೊಳ್ಳುವ ಕ್ರಿಯೆಗೆ ಅಥವಾ ಘಟನೆಗೆ ಸಮಾಜ- ಸಾಂಸ್ಕೃತಿಕ ಹಿನ್ನೆಲೆ ನೇರವಾದ ಸಂಬಂಧ

ಹೊಂದಿವೆ ಎಂಬುದಾಗಿ ಅಭಿಪ್ರಾಯ ಪಡುತ್ತಾನೆ. (Emile Durkhim; Theory of suicide ; university of oklahoman Press. 1973.) (ಗಮನಿಸಿ : The girl child in crisis) ಕರ್ತೃ 'Azius sherwani).

## ಕೊನೆ ಟಿಪ್ಪಣಿ

೧. ಕಟ್ಟಿ ಎ.ಆರ್. (೧೯೮೪) : ಸಾಮಾಜಿಕ ವ್ಯಕ್ತಿತ್ವಗಳು ; ಮನೋಹರ ಗ್ರಂಥಾಲಯ, ಧಾರವಾಡ.

೨. ಗಾಯತ್ರಿ ಎನ್. (೧೯೯೬): ಬಿಡುಗಡೆಯ ಹಾದಿಯಲ್ಲಿ ; ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩. ಮೀರಾ ಎಲ್.ಜಿ. (ಅನು) : (೧೯೯೭) ಮಾನುಷಿಯ ಮಾತು: ಅಕ್ಷರ ಪ್ರಕಾಶನ, ಹೆಗ್ಗೋಡು.

೪. ವಿಜಯಾದಬ್ಬೆ (೧೯೯೭) : ನಾರಿ ದಾರಿ-ದಿಗಂತ: ರಚನಾ ಪ್ರಕಾಶನ ವಿಜಯನಗರ ಮೊದಲ ಹಂತ, ಮೈಸೂರು.

೫. ವಿಠಲರಾವ್ ಗಾಯಕ್ವಾಡ್ (ಅನು): (೨೦೦೧) ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು ; ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೬. ವಿವೇಕ ರೈ ಬಿ.ಎ. :(೧೯೯೫) ಗಿಳಿಸೂವೆ ; ಅಕ್ಕೆಸಿರಿ ಸಾಂಸ್ಕೃತಿಕ ಕೇಂದ್ರ, ಮಂಗಳೂರು.

೭. ಸರಸ್ವತೀ ರಿಸಬೂಡ (ಅನು) :(೧೯೯೨) ಸ್ತ್ರೀ- ಪುರುಷ ; ಇಳಾ ಪ್ರಕಾಶನ, ಬೆಂಗಳೂರು.

೮. ಸುಮಿತ್ರಾ ಬಾಯಿ ಬಿ.ಎನ್.: (೧೯೯೯): ಸ್ತ್ರೀವಾದ ; ಕರ್ನಾಟಕ ಸಾಹಿತ್ಯ ಅಕೆಡೆಮಿ, ಬೆಂಗಳೂರು.

9. Butter Judith (1993) : Bodies that Matter: On the Discursive Limits of Sex; NewYork. Routledge.

10. Drucilla Cornell (1998):Feminist/ Feminine Ethics ;University of Minnesota Press. London.

11. Foucault Michel : (1986) The history of sexuality Vol. II; Random House, NewYork.

12. Gandi M.K.: (1992) An Anlobiography ; Navjigan Publication House, Anmedabad.

13. Gates Henry Louis (Edi) :(1987) Feminism and Philosophy; Cambridge Press, London.

14. Holub, Renate : (1994) 'Between the united states and Italy: Critical Reflections on Diotima's Feminist; University of Minnesota Press, London.

15. Kamlanath and Milly Chatterjee :(1996) why women? what Politics? ;Centre for social Research, New Delhi.

16. Maternal pasts, Feminst Futures : (1998) LYNNE HUFFR ;Stanford university Press Stanford; California.

17. Nuernberger Phil : 1985) Freedom from stress; A Holistic Approach. W.D.S. New Delhi.

18. 'Ounei, Susan: (1992) 'Kanak women : out of hte kitchen into the struggle' in Davies. Third world - second sex; Zed Books, London.

19. Promilla Kapur :(2001) Empowering the Indian woman: Publications Division Govt. of India Patiala House, New Delhi.

20. Simone de Beauvoir (1952): The second sex ; Random House, New York.

# ಅಧ್ಯಾಯ ಆರು :

# ಸಾಂಸ್ಕೃತಿಕ ನೆಲೆಗಳ ಅಂತರ್ ಸಂಬಂಧ : ವಿಕಾಸ ಮುಖೀ ರೇಖೆ.

**ಮಹಿಳೆಯರ ಅಸ್ತಿತ್ವದ ಸಂಕಥನ :**

ಅಧ್ಯಯನದ ಭೂಮಿಕೆಯಾಗಿ ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಮತ್ತು ಅನನ್ಯ ಸಾಂಸ್ಕೃತಿಕ ನೆಲೆ ಎಂಬ ನಿರ್ವಚನದೊಳಗೆ 'ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ' ಎನ್ನುವ ವಾಗ್ವಾದವನ್ನು ಕಟ್ಟಲಾಗಿದೆ. ವಸ್ತು ವಿನ್ಯಾಸದ ಆಶಯದ ಹಿನ್ನೆಲೆಯಲ್ಲಿ ನಡೆಸಲಾದ ಸಾಂಸ್ಕೃತಿಕ ವಾಗ್ವಾದವೆನ್ನುವುದು ಹಲವು ಅರ್ಥಗಳಲ್ಲಿ ಸ್ತ್ರೀಯರ ಅಸ್ತಿತ್ವವನ್ನು ಕೌಟುಂಬಿಕ ತಳಹದಿಯಿಂದ ಪದರ ಪದರಗಳಾಗಿ ಪೇರಿಸಿಟ್ಟ ಏಕಕಾರಿ ರಚನೆಯಾಗಿದೆ. ಈ ಗ್ರಹೀತಗಳು ವಾಸ್ತವದ ಬಹುಮುಖೀ ಅಸ್ತಿತ್ವದ ಅರಿವಿನಿಂದ ರೂಪುಗೊಂಡಿರುವಂಥದ್ದು. ಆದುದರಿಂದ ವಿಭಿನ್ನ ಸಾಂಸ್ಕೃತಿಕ ನೆಲೆಗಳ ವಿಚಾರಗಳಿಗೆ, ಅನುಭವಗಳಿಗೆ ಅರ್ಥಸಾಧ್ಯತೆಯ ಅನೇಕ ಮಗ್ಗಲುಗಳು, ಹಲವು ಆಯಾಮಗಳು ಪ್ರಾಪ್ತವಾಗುತ್ತವೆ. ತಿರುಮಲಾಂಬಾ ಅವರಿಂದ ತೊಡಗಿ ಉಮಾರಾವ್ ಅವರವರೆಗಿನ ಕಾದಂಬರಿ ರಚನೆಗಳೆನ್ನುವ ಕಥನಗಳು (Narratives) ಮಹಿಳೆಯರ ಅಸ್ತಿತ್ವವನ್ನು ಕೌಟುಂಬಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಸಂವಾದಿಸುವ ಸಂಕಥನ (Discourse) ಗಳಾಗಿವೆ. ಕಾಲ, ಧೋರಣೆ ಮತ್ತು ಪ್ರಯೋಗಗಳಿಗೆ ಸಂಬಂಧಿಸಿದಂತೆ ಇವು ವಿಭಿನ್ನ ಆಕೃತಿಗಳು. ಇವುಗಳ ಒಳಗಿನ ಮಹಿಳೆಯರ ಕೌಟುಂಬಿಕ, ಸಾಮಾಜಿಕ ಅಸ್ತಿತ್ವಗಳು ಪ್ರತ್ಯ- ಪ್ರತ್ಯೇಕವಾಗಿರದೆ ಸಂದರ್ಭಸ್ಪಂದಿಗಳಾಗಿ ಒಂದೇ ಆಗಿ ಕಾಣಿಸಿಕೊಳ್ಳುತ್ತವೆ. ಸ್ತ್ರೀಯರ 'ಇರುವಿಕೆ'ಯ ಕಥನ (Narratives)ಗಳ ನೆಲೆಯಿಂದ ತಿರುಮಲಾಂಬ ಅವರಿಂದ ಉಮಾರಾವ್ ಅವರವರೆಗಿನ ಕಾದಂಬರಿಗಳು ಒಂದು ಶತಮಾನದ ದೃಷ್ಟಿಕೋನಗಳು. ಮಾತ್ರವಲ್ಲದೆ ಇದು ಸ್ತ್ರೀಯರ ವೈಚಾರಿಕ ಇತಿಹಾಸದ ಕುರಿತ ಶತಮಾನದ ದಾಖಲೆಗಳು. ಹೀಗಾಗಿ ವರ್ತಮಾನದ ಒತ್ತಡ ಹಾಗೂ ಅವಶ್ಯಕತೆಗಳನ್ನು ಮಾನ್ಯ ಮಾಡಿರುವ ನೆಲೆಗಳಿಂದ ಮಾತ್ರವೇ ಮಹಿಳೆಯರ ಕಾದಂಬರಿಗಳು ಸಂದರ್ಭನಿಷ್ಠ ರಚನೆಗಳಾಗಿ ಕಾಣಿಸಿಕೊಳ್ಳುತ್ತವೆ. ಎಂದರೆ ವರ್ತಮಾನದ ಒತ್ತಡ (ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ)ಗಳು ಸ್ತ್ರೀಯರ ಒಟ್ಟು ಬದುಕನ್ನು ಅನೇಕ ಆಯಾಮಗಳಿಂದ ನೋಡುವಂತೆ ಪ್ರಚೋದಿಸಿವೆ. ಅರ್ಥಗಳನ್ನು ಹಲವು ಮೂಲಗಳಿಂದ ಶೋಧಿಸುವಂತೆ, ವ್ಯಾಖ್ಯಾನಿಸುವಂತೆ ಒತ್ತಾಯಿಸಿವೆ. ಹೀಗಾಗಿ ಒಂದು ಕಾದಂಬರಿಯ ನಿರ್ದಿಷ್ಟ

ಕಾಲಘಟ್ಟದ ನೆಲೆಯಲ್ಲಿ (ಉದಾರವಾದಿ ಸಾಂಸ್ಕೃತಿಕ ನೆಲೆ ; ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ; ಅನನ್ಯ ಸಾಂಸ್ಕೃತಿಕ ನೆಲೆ) ಒಟ್ಟು ಸಂಸ್ಕೃತಿಯ ಮೂಲಭೂತ ಪ್ರಚೋದನೆಗಳಿಗೆ ಒಳಪಟ್ಟೇ ರಚನೆಗೊಂಡಿರುತ್ತವೆ. ಇದರಿಂದ ವರ್ತಮಾನದ ಒತ್ತಡಗಳು ಎಂದು ಗ್ರಹಿಸಿಕೊಳ್ಳುವಲ್ಲಿ ಮಹಿಳೆಯರು ಇದ್ದ ಮತ್ತು ಇರುವ ವ್ಯವಸ್ಥೆಯೊಳಗಿನ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಸಂದರ್ಭಗಳೆಲ್ಲವೂ ಮುಖ್ಯವಾಗುತ್ತವೆ. ಈ ಅರ್ಥದಿಂದ ವ್ಯವಸ್ಥೆಯೊಂದರ ಕಾಲದ ಮತ್ತು ಮಹಿಳೆಯರ ಇರುವಿಕೆಯ, ಸಂದರ್ಭವೆನ್ನುವುದು ಪರಸ್ಪರ ಅನ್ಯೋನ್ಯ ಸಂಬಂಧವುಳ್ಳ (Correlative) ರಚನೆಗಳಾಗಿ ಕಾಣಿಸಿಕೊಳ್ಳುತ್ತವೆ. (ನಿರ್ದಿಷ್ಟ ಆಂತರಿಕ ಸಂರಚನೆಯಿಂದ ಪ್ರಸ್ತುತ ಅಧ್ಯಯನದಲ್ಲಿ ನಿರ್ವಚಿಸಿಕೊಂಡ ಮೂರೂ ಸಾಂಸ್ಕೃತಿಕ ನೆಲೆಗಳೂ ಭಿನ್ನವಾಗಿವೆ.) ಆದರೆ, ವಸಾಹತು ಪೂರ್ವ, ವಸಾಹತೋತ್ತರ ಇಂಡಿಯಾದ ಸನ್ನಿವೇಶದಲ್ಲಿ ಈ ಮೂರು ಸಾಂಸ್ಕೃತಿಕ ನೆಲೆಗಳೂ ಏಕೀಕೃತ ಘನಾಕೃತಿಯುಳ್ಳ (Cubic) ರಚನೆಗಳಾಗಿವೆ. ಎಂದರೆ, ಹನ್ನೆರಡು ಜನ ಲೇಖಕಿಯರ ಐವತ್ತ ಒಂದು ಪಠ್ಯಗಳನ್ನು ಅಧ್ಯಯನದ ಚೌಕಟ್ಟಿಗೆ ನಿರ್ಬಂಧಿಸಿಕೊಂಡಂತೆ, ವಿವಾಹ ಮತ್ತು ಕುಟುಂಬದ ತಳಹದಿಯಿಂದ ಮಹಿಳೆಯರ ಇರುವಿಕೆಯ ಸ್ಥಿತಿಯು ಹಲವು ರೇಖೆಗಳಿಂದ ಚಿತ್ರಿಸಲಾಗಿರುವ ಸ್ಫಟಿಕಾಕೃತಿ (Crystallize)ಯಾಗಿದೆ. ಹೀಗೆ ಹೇಳುವಾಗ, 'ವಿವಾಹ ಮತ್ತು ಕುಟುಂಬ'ದ ಸಮತಲ ಮುಖಗಳಿಂದ ರೂಪುಗೊಂಡ ವಿಭಿನ್ನ ಆಂತರಿಕ ವಿನ್ಯಾಸಗಳು ಅತಿ ಮುಖ್ಯವಾಗುತ್ತವೆ. ಮಹಿಳೆಯರ ಅಸ್ತಿತ್ವದ ಅನ್ವೇಷಣೆಯು ಬರವಣಿಗೆಯ ಕೇಂದ್ರೀಯ ಒತ್ತಡವಾಗಿದೆ. ಮಹಿಳೆಯರ ಬರೆಹಗಳಿಗೆ ಸಂಬಂಧಿಸಿದಂತೆ ಅದೊಂದು ತಾತ್ವಿಕ ನಿಲುವು ಮಾತ್ರವಲ್ಲ ಜೀವನ ದೃಷ್ಟಿಯಾಗಿದೆ. ತಿರುಮಲಾಂಬ ಅವರಿಂದ ಆರಂಭಿಸಿ ಉಮಾರಾವ್ ತನಕದ ಕಥನಗಳಲ್ಲಿ ಮಹಿಳೆಯ ಧ್ವನಿಯಲ್ಲಿ 'I think there fore I am' ನಿಂದ ಹಿಡಿದು doubt there fore I am' ಎನ್ನುವವರೆಗೆ ಅಸ್ತಿತ್ವದ ಅನನ್ಯತೆಯ ಬೆಳವಣಿಗೆಯಿದೆ. ನೆಲೆಯಲ್ಲಿ ವ್ಯವಸ್ಥೆ ಹಾಗೂ ಕ್ರಮಬದ್ಧತೆಯಲ್ಲಿ ನಂಬಿಕೆಯಿರಿಸಿದ ಮಹಿಳಾ ಬರಹಗಾರರಿಗೆ ಮಹಿಳೆಯರು ಇದ್ದ, ಇರುವ ವ್ಯವಸ್ಥೆಯ ಆಂತರಿಕ, ಬಾಹ್ಯ ಅರಾಜಕತೆ, ಅವ್ಯವಸ್ಥೆಯನ್ನು ನಿರೂಪಣೆಯ ಸಂವಿಧಾನವನ್ನಾಗಿ ಪರಿಭಾವಿಸುವುದು ಮುಖ್ಯವಾಗಿದೆ. ಮಾತ್ರವಲ್ಲದೆ, ಅಂತಹ ವ್ಯವಸ್ಥೆಯನ್ನು ಪಳಗಿಸುವ, ಹತೋಟಿಗೆ ತರುವ ಪ್ರಯತ್ನಗಳು ಪಠ್ಯಗಳ ಒಳಗೆ ಕಾಣಿಸಿಕೊಳ್ಳುತ್ತವೆ. ವಿವಾಹ ಮತ್ತು ಕುಟುಂಬದ ಅಭಿವ್ಯಕ್ತಿಯಲ್ಲಿ ಮಹಿಳಾ ಕೇಂದ್ರೀಕೃತ ಮನೋಭಾವ, ತರ್ಕ, ಚಿಂತನೆಗಳು ಪ್ರಧಾನವಾಗುತ್ತವೆ. ಅಲ್ಲದೆ ಇವು ಸಮಗ್ರವಾಗಿ ಸ್ತ್ರೀ- ಪುರುಷರ ಅಸಮಾನತೆಗಳನ್ನು ಮಹಿಳೆಯರ ಬರಹಗಳಲ್ಲಿ ಗುರುತಿಸುವುದಕ್ಕೆ ಸಹಕಾರಿಯಾಗಿವೆ.

ಉದಾರವಾದಿ ಸಾಂಸ್ಕೃತಿಕ ನೆಲೆಯ ಒಟ್ಟು ಸಂದರ್ಭವೇ ಸ್ತ್ರೀಯರ ಗುರುತಿಸುವಿಕೆಯನ್ನು ಅಪೂರ್ವವಾಗಿ ಮಾನ್ಯ ಮಾಡಿದ ಕಾಲಘಟ್ಟವಾಗಿದೆ. ವಸಾಹತುಪೂರ್ವದ ಮಹಿಳೆಯರ ಸ್ಥಿತಿ-ಗತಿಗಳಿಗೆ ಹೋಲಿಸಿದರೆ ಇದು ಮಹತ್ವದ ಪಲ್ಲಟವಾಗಿದೆ. ಉದಾರವಾದಿ ಸಾಂಸ್ಕೃತಿಕ ನೆಲೆಯೊಳಗೆ ಘಟಿಸಿದ ರಾಷ್ಟ್ರೀಯ ಹೋರಾಟಗಳು, ಚಿಂತನೆಗಳು ಸ್ತ್ರೀಯರ ಇರುವಿಕೆಯನ್ನು ರಾಷ್ಟ್ರದ ಕಟ್ಟುವಿಕೆಯ ಆನುಷಂಗಿಕ ಭಾಗವಾಗಿ ಪ್ರಸ್ಫುಟಗೊಳಿಸಿದವು. ಇದರ ಪರಿಣಾಮವಾಗಿಯೇ ಸ್ವಾತಂತ್ರ್ಯ ಹೋರಾಟವೂ ಸೇರಿದಂತೆ ಆಧುನಿಕ ಭಾರತವನ್ನು ಕಟ್ಟುವ ಒಟ್ಟು ಪ್ರಕ್ರಿಯೆಯಲ್ಲಿ ಸ್ತ್ರೀಯರ ಇರುವಿಕೆಯ ಪ್ರಶ್ನೆ ಒಂದು ಪ್ರಮುಖವಾದ ಆಶಯವಾಗಿ ಕಾಣಿಸಿಕೊಂಡಿವೆ. ಇದರೊಳಗೆ ಮಹಿಳೆಯರ ಇದ್ದ ಸ್ಥಿತಿಯನ್ನು

ಪರಿವರ್ತನೆಗೊಳಿಸುವ ಪ್ರಕ್ರಿಯೆಯು ಒಂದು ಆದರ್ಶ ಜೀವನಧೋರಣೆಯಾಗಿ ಮಾರ್ಪಾಡುಗೊಂಡಿದೆ. ಉದಾರವಾದಿ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ಈ ಆವರಣವನ್ನು ಎರಡು ಮಗ್ಗಲುಗಳಿಂದ ಗಮನಿಸಿವೆ.

ಒಂದು : ಸಾಮಾಜಿಕ ಚಟುವಟಿಕೆಗಳ ಕ್ಷೇತ್ರದಲ್ಲಿ ಮಹಿಳೆಯರಿಗೆ ದೊರೆತ ಸ್ಥಳಾವಕಾಶ. ಇದು ಸ್ತ್ರೀಯರಿಗೆ ಶಿಕ್ಷಣದ ಅವಕಾಶವನ್ನು ಕಲ್ಪಿಸಿದ್ದು ಮಾತ್ರವಲ್ಲದೆ, ಬಾಲ್ಯವಿವಾಹ ರದ್ದತಿ, ವರದಕ್ಷಿಣೆ ರದ್ದತಿ, ವಿಧವಾ ವಿವಾಹ, ಸ್ತ್ರೀ ಶಿಕ್ಷಣದಂಥ ಮಹಿಳೆಯರಿಗೆ ಸಂಬಂಧಿಸಿದ ಸಾಮಾಜಿಕ ಅಂಶಗಳ ಪುನರುತ್ಥಾನದ ಪ್ರಕ್ರಿಯೆಯು ಜರುಗಲು ಕಾರಣವಾಗಿದೆ.

ಎರಡು : ಸ್ತ್ರೀತ್ವದ ಸಾಂಪ್ರದಾಯಿಕ ಜವಾಬ್ದಾರಿಗಳನ್ನು ಸಡಿಲುಗೊಳಿಸುವ ಕಾರ್ಯಾಚರಣೆಯ ಆರಂಭ. ಇಲ್ಲಿ ಸಂಪ್ರದಾಯಕ್ಕೆ ಅನುಗುಣವಾದ ಸ್ತ್ರೀಯರ ಕರ್ತವ್ಯಗಳನ್ನು, ಕನ್ಯೆ- ಗೃಹಿಣಿ- ವಿಧವೆ- ವೃದ್ಧೆಯರಿಗೆ ಸಾಪೇಕ್ಷಗೊಳಿಸಲಾಗಿರುವ ರೂಢಿ ನಿಯಮಗಳನ್ನು ಸಂಪೂರ್ಣವಾಗಿ ನಿರಾಕರಿಸುವ ಪ್ರಯತ್ನ ನಡೆಯದಿದ್ದರೂ ಸಾಮಾಜಿಕ ಸುಧಾರಣೆಯ ಮೂಲಕವಾಗಿ ಕಾಣಿಸಿಕೊಂಡ ಪರಿವರ್ತನೆಗಳಿಂದ ಸ್ತ್ರೀಯರ ಸಂಪ್ರದಾಯನಿಷ್ಠ ಜೀವನ ಕ್ರಮವು ಅದರ ಬಿಗಿಯನ್ನು ಕಳೆದುಕೊಂಡಿದೆ. ಹೀಗಾಗಿಯೇ ಉದಾರವಾದಿ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ಅವುಗಳ ಸಂವಿಧಾನದ ಅಂತರ್ ರಚನೆಯಲ್ಲಿ ರಾಷ್ಟ್ರ ಕಟ್ಟುವ ಕ್ರಿಯೆಯನ್ನು ಕುಟುಂಬವನ್ನು ಕಾಪಾಡುವ ಕ್ರಿಯೆಗೆ ಸಮೀಕರಿಸುವುದು ವ್ಯಕ್ತವಾಗುತ್ತದೆ. ಕುಟುಂಬದ ಚೌಕಟ್ಟಿಗೆ ಬಂಧಿಸಿಕೊಂಡಂತೆ ಆಧುನಿಕ ಭಾರತವನ್ನು ಕಟ್ಟುವ ಕ್ರಿಯಾಚರಣೆಯು ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳಲ್ಲಿ ಕಾಣಿಸಿಕೊಂಡಿವೆ. ಇದರಿಂದಾಗಿಯೇ ಆರಂಭದ ಮಹಿಳೆಯರ ಕಥನಗಳಲ್ಲಿ ಕುಟುಂಬ ಒಂದರಲ್ಲಿ ಕಾಣಿಸಿಕೊಳ್ಳುವ ವಿಧವಾ ಸಮಸ್ಯೆ, ಸ್ತ್ರೀ ಶಿಕ್ಷಣ, ಬಾಲ್ಯ ವಿವಾಹದಂತಹ ಸಮಸ್ಯೆಗಳು ಒಟ್ಟು ಅಭಿವ್ಯಕ್ತಿಯಲ್ಲಿ ಸಾರ್ವತ್ರಿಕ ರೂಪವನ್ನು ಪಡೆದಿವೆ. ತಿರುಮಲಾಂಬ, ಕಲ್ಯಾಣಮ್ಮ ಈ ಇಬ್ಬರು ಲೇಖಕಿಯರ ಕಾದಂಬರಿಗಳು ಇದನ್ನು ಪ್ರಾಥಮಿಕ ಅಂಶಗಳಾಗಿ ನಿರೂಪಿಸಿವೆ. ಇದರೊಳಗೆ ಮಹಿಳೆಯರಿಗೆ ಕೌಟುಂಬಿಕವಾಗಿ ಸಂಪ್ರದಾಯದ ಕಟ್ಟಾ ಆಚರಣೆಗಳಿಂದ ಸಿಗಬೇಕಾದ ರಿಯಾಯಿತಿಯು ಮೊದಲಕಟ್ಟಿನ ಕಾದಂಬರಿಗಳ ಲೇಖಕಿಯರಿಗೆ (ತಿರುಮಲಾಂಬ, ಕಲ್ಯಾಣಮ್ಮ) ಮುಖ್ಯವಾಗಿ ಪರಿಣಮಿಸಿದೆ. ಆದರೆ ಕೂಡುಕಟ್ಟಿನ ಕಾದಂಬರಿಗಳ ಲೇಖಕಿಯರಿಗೆ (ತ್ರಿವೇಣಿ, ಎಂ.ಕೆ. ಇಂದಿರಾ) ಸಂಪ್ರದಾಯದ ನಿಷ್ಠುರತೆಯಿಂದ ಮಹಿಳೆಯರಿಗೆ ಸಿಗಬೇಕಾದ ವಿಮೋಚನೆ- ಬಿಡುಗಡೆ ಮುಖ್ಯವಾಗುತ್ತದೆ. ಮಹಿಳೆಯರಿಗೆ ಸಿಗಬೇಕಾದ ರಿಯಾಯಿತಿ ಬಿಡುಗಡೆ ಎನ್ನುವುದು. (ಪುರುಷಜನ್ಯ ಪ್ರಧಾನ ಸಮಾಜವನ್ನು ಒಪ್ಪಿಕೊಂಡೇ ಆದರ ಒಳಗಿನಿಂದಲೇ) ಗಮನಾರ್ಹ ಅಂಶವಾಗಿದೆ. ಈ ಕಾರಣದಿಂದ ಪಠ್ಯಗಳು ಕುಟುಂಬದ ವ್ಯವಸ್ಥೆಯ ಒಳಗೆ ಪುರುಷರಿಗೆ ಪೂರಕವಾಗಿಯೇ ಸ್ತ್ರೀಯರ ನೆಲೆಯನ್ನು ಪರಿಷ್ಕರಿಸುವ ವಿರಚನೆಗಳಾಗಿವೆ. ಉದಾರವಾದಿ ಸಾಂಸ್ಕೃತಿಕನೆಲೆಯ ಪಠ್ಯಗಳು ಪುರುಷನಿಷ್ಠ ಕುಟುಂಬದ ವ್ಯವಸ್ಥೆಯ ಗುಣದೋಷಗಳನ್ನು ಪರಿಶೀಲಿಸುತ್ತವೆ ಎನ್ನುವುದು ನೈಜವಾಗಿ ಕಂಡರೂ, ಗುಣದೋಷಗಳನ್ನು ಸ್ತ್ರೀಯರ ಇರುವಿಕೆಯ ಒಳಗೆ ವಿದ್ರಾವಕಗೊಳಿಸಿ, ಕರಗಿಸಿ ನೋಡುತ್ತವೆ. ಎಂದರೆ, ಸ್ತ್ರೀಯರ ಇರುವಿಕೆಗೆ ಸ್ತ್ರೀಯರೇ ಕಾರಣರಾಗಿ, ಪುರಷನಿಷ್ಠ ವ್ಯವಸ್ಥೆ ನಿಮಿತ್ತವಾಗಿ ಬಿಡುತ್ತದೆ. ಕುಟುಂಬದ ಸ್ತ್ರೀಯರು ಸದ್ಗೃಹಿಣಿಯರಾಗಿದ್ದರೆ ಸಹಜವಾಗಿಯೇ ಕುಟುಂಬದ ಸದಸ್ಯರೆಲ್ಲರೂ ಒಳ್ಳೆಯವರಾಗಿ ಬಿಡುತ್ತಾರೆ ಎನ್ನುವ ಸರಳ ಮನೋಧೋರಣೆಯನ್ನು ಪಠ್ಯಗಳು (ಕಂಕಣ, ಮುಕ್ತಿ, ಅಪಸ್ವರ, ಕೀಲುಗೊಂಬೆಯಂಥ ಪಠ್ಯಗಳನ್ನು ಹೊರತುಪಡಿಸಿ) ಬಿಂಬಿಸುತ್ತವೆ. ಈ ಕಾರಣಕ್ಕಾಗಿ ವಿವಾಹವೆನ್ನುವುದು ಸ್ತ್ರೀ- ಪುರುಷರ ಸಾಹಚರ್ಯಾತ್ಮಕ

(Paradigmatic) ಸಂಬಂಧವಾಗಿ ಮಾತ್ರ ಕಾಣಿಸಕೊಳ್ಳದೆ, ಪುರುಷ - ಪ್ರಕೃತಿ ತತ್ವಗಳಾಗಿ (Philosophy) ಕೂಡಿಕೊಳ್ಳುತ್ತ ಹೋಗುವುದು ಕಂಡುಬರುತ್ತದೆ. (ಇದಕ್ಕೆ ರಾಷ್ಟ್ರೀಯ ಚಿಂತನೆಯು ಕೂಡ ಕಾರಣವಾಗಿದೆ.) ಇದರಿಂದಾಗಿ ಉದಾರವಾದಿ ಸಾಂಸ್ಕೃತಿಕನೆಲೆಯ ಕಾದಂಬರಿಗಳಲ್ಲಿ ಸ್ತ್ರೀ- ಪುರುಷ ಸಂಬಂಧಗಳಿಗೆ, ಕುಟುಂಬದ ಸಹಜೀವನಕ್ಕೆ ಆದರ್ಶ ಮತ್ತು ಆಧ್ಯಾತ್ಮದ ಅರ್ಥ ವ್ಯಾಪ್ತಿಗಳು ಒದಗಿಬಂದಿವೆ.

ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳ ರಚನಾ ವಿನ್ಯಾಸಗಳ ಒಳಗೆ ಕುಟುಂಬ ಮತ್ತು ಸಮಾಜಗಳು ಅವಿಚ್ಛಿನ್ನವಾಗಿ ಕಂಡು ಬರುತ್ತವೆ. ಅವು ರಚನಾಕ್ರಮದೊಳಗೆ ಹೇಗೆ ಅಭಿನ್ನವೋ ಹಾಗೆಯೇ ತಾತ್ವಿಕವಾಗಿ ಸಹ ಅಭಿನ್ನವಾಗಿಯೇ ಪ್ರಕಟಗೊಂಡಿವೆ. ಎಂದರೆ, ಪಠ್ಯಗಳು ಕಾಲಘಟ್ಟದ ನಿರ್ದಿಷ್ಟ ನಿರ್ವಚನಗಳಾಗಿ ಕುಟುಂಬ ಮತ್ತು ಸಮಾಜವನ್ನು ಒಂದರ ಒಳಗೆ ಒಂದನ್ನು ಇಟ್ಟು ನೋಡುತ್ತವೆ. ಇದರೊಳಗೆ ರಾಷ್ಟ್ರವನ್ನು ಕಟ್ಟುವ ಆಯಾಮದಿಂದಲೇ ಕುಟುಂಬವನ್ನು ಪರಿಕಲ್ಪಿಸುವ ಬಗೆಯಲ್ಲಿ ಆಧುನಿಕತೆಗೆ ಸಂಪ್ರದಾಯವು ಕಾಲ್ತೊಡಕಾಗಿರುವ ದಿಗ್ಭ್ರಾಂತಿಯ ಸ್ಥಿತಿಯೊಂದನ್ನು ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳು ಅನಾವರಣಗೊಳಿಸುತ್ತವೆ. ಎಂದರೆ, ಬಾಲ್ಯ ವಿವಾಹ, ವಿಧವಾ ವಿವಾಹ, ವರದಕ್ಷಿಣೆ, ಸ್ತ್ರೀ ಶಿಕ್ಷಣ, ಪ್ರಾಪ್ತ ವಯಸ್ಸಿನ ವಿವಾಹ, ವಿಧವಾ ವಿವಾಹ ಇಂತಹ ವಿಷಯಗಳು ಆಧುನಿಕತೆ ಮತ್ತು ಸಂಪ್ರದಾಯದ ನೆಲೆಯಲ್ಲಿ ಮುಖಾಮುಖಿಗೊಂಡಿವೆ ಮಾತ್ರವಲ್ಲದೆ ಬದಲಾವಣೆಗಳು ಅತಿ ಸೂಕ್ಷ್ಮವಾಗಿಯಷ್ಟೇ ಘಟಿಸಿವೆ. ತಿರುಮಲಾಂಬ, ಕಲ್ಯಾಣಮ್ಮ ತ್ರಿವೇಣಿ, ಎಂ.ಕೆ. ಇಂದಿರಾ ಈ ಲೇಖಕಿಯರು ಇದನ್ನು ಕೌಟುಂಬಿಕವೆಂದೋ, ಸಾಮಾಜಿಕವೆಂದೋ ಬೇರ್ಪಡಿಸಲಾಗದ ಅದ್ವೈತಾರ್ಥಗಳಲ್ಲಿ ನಿರೂಪಿಸಿದ್ದಾರೆ. ಇದರಿಂದಾಗಿ ಸ್ತ್ರೀಯರ ಕೌಟುಂಬಿಕ ಮತ್ತು ಸಾಮಾಜಿಕ ಅಸ್ತಿತ್ವವೆನ್ನುವುದು ಏಕೀಕೃತ ವಿಧೇಯಕಗಳಾಗಿ ಸೂಚಿತಗೊಂಡಿವೆ. ಸ್ತ್ರೀಯರ ಕೌಟುಂಬಿಕ ಮತ್ತು ಸಾಮಾಜಿಕ ಇರುವಿಕೆಗಳು ಏಕಮುಖಿಯಾಗಿ ಅಭಿವ್ಯಕ್ತಿಗೊಳ್ಳಲು ನಾಲ್ಕು ಜನ ಲೇಖಕಿಯರು ನೋಡಿದ ಅನುಭವಿಸಿದ, ಗ್ರಹಿಸಿದ ವೈದಿಕ ಜೀವನ ಕ್ರಮ- ಪರಿಸರಗಳು ಕಾರಣವಾಗಿವೆ. ಅಲ್ಲದೆ ಇವು ಅವರ ಕಾದಂಬರಿ ವಸ್ತುಗಳ, ಆಶಯಗಳ ಆವರಣಗಳನ್ನು ಸಹಜವೆಂಬಂತೆ ನಿಯಂತ್ರಿಸಿವೆ. ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ಹಾಗೂ ಪರಂಪರಾಗತ ಬ್ರಾಹ್ಮಣ ವಿಧಿ, ನಿಷೇಧಗಳನ್ನೊಳಗೊಂಡ ಮೌಲ್ಯವ್ಯವಸ್ಥೆಯನ್ನು ರಕ್ತಗತವಾಗಿಸಿ ಕೊಂಡಿರುವ ಮಹಿಳಾ ಲೇಖಕರಿಗೆ ಪ್ರಜ್ಞಾಪೂರ್ವಕವಾಗಿ ಇಂತಹ ಸಮಾಜದ ಹಾಗೂ ಮೌಲ್ಯ ವ್ಯವಸ್ಥೆಯ ಅನೇಕ ಇತಿಮಿತಿಗಳು ಕಂಡು ಬಂದರೂ ಆ ಅರಿವನ್ನು ಅವರ ಅಜಾಗೃತ ಪ್ರಜ್ಞೆ ತಿರಸ್ಕರಿಸುತ್ತದೆ. ಪರಿಣಾಮವಾಗಿ ಇವರ ಹೆಚ್ಚಿನ ಕಾದಂಬರಿಗಳಲ್ಲಿ ಕೃತಿಗಳ ಹೊರರಚನೆಗಳ 'ಆಧುನಿಕ' ವೈಚಾರಿಕತೆಯನ್ನು ಅವುಗಳ ಸಂಪ್ರದಾಯನಿಷ್ಠ ಒಳರಚನೆಗಳು ಅಲ್ಲಲ್ಲೇ ಸತತ ವಿರೋಧಿಸುತ್ತ, ಖಂಡಿಸುತ್ತ ಹೋಗುತ್ತವೆ. ಮಂಡನೆ ಘೋಷಿತವಾಗಿದ್ದರೆ ಖಂಡನೆ ಸೂಚ್ಯವಾಗಿರುತ್ತದೆ. ಮಂಡನೆ ಸರಳವಾಗಿದ್ದರೆ ಖಂಡನೆ ಸಂಕೀರ್ಣವಾಗಿರುತ್ತದೆ. ಇದರಿಂದಾಗಿ ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳಿಗೆ ವ್ಯಾಪಕವಾಗಿ ವೈದಿಕ ಮನೆತನಗಳ ಕೌಟುಂಬಿಕ ಸ್ಥಿತಿಗತಿ, ಸ್ತ್ರೀಯರ ಜೀವನವನ್ನು ಮಾತ್ರ ಚಿತ್ರಿಸುವುದು ಸಾಧ್ಯವಾಗಿದೆ. ಉಳಿದಂತೆ ಶೂದ್ರಾದಿ ದಲಿತ ವರ್ಗಗಳ ಪರಿಸರ, ಅದರೊಳಗಿನ ಸ್ತ್ರೀಯರ ವಿವಾಹ ಮತ್ತು ಕುಟುಂಬದ ಚಿತ್ರಣಗಳು ತಿರುಮಲಾಂಬ ಮತ್ತು ಕಲ್ಯಾಣಮ್ಮನವರ ಕೃತಿಗಳಲ್ಲಿ ಸಿಗುವುದೇ ಇಲ್ಲ. ಆದರೆ ತ್ರಿವೇಣಿ ಮತ್ತು ಇಂದಿರಾ ಅವರ ಕಾದಂಬರಿಗಳಲ್ಲಿ ಶೂದ್ರ, ದಲಿತ ವರ್ಗದ ಸ್ತ್ರೀಯರ ಜೀವನ ಕ್ರಮಗಳು ಆಂಶಿಕವಾಗಿ ಪ್ರಕಟಗೊಂಡಿವೆ ಎಂದು ಹೇಳಬೇಕಾಗುತ್ತದೆ. ಹೀಗಾಗಿ, ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳಲ್ಲಿ ವೈದಿಕ ಜಗತ್ತನ್ನೇ

ಸಾರ್ವತ್ರಿಕಗೊಳಿಸಿ ಪರಿಗ್ರಹಿಸಲಾಗಿದೆ. ಇದಕ್ಕೆ ಆ ಕಾಲದ ಎಲ್ಲಾ ಸುಧಾರಣೆಗಳು ಸನಾತನ ಧರ್ಮದ ಸತ್ವಗಳನ್ನು ಆಧರಿಸಿ ಘಟಿಸಿವೆ ಎನ್ನುವುದು ಕೂಡ ಕಾರಣ.

ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳ ರಚನೆ- ತಂತ್ರ- ವಿನ್ಯಾಸ ಇವೆಲ್ಲವೂ ಒಟ್ಟಾಗಿ ಕಾದಂಬರಿಗಳ ಸಂವಿಧಾನದ ತೋರಿಕೆಯ ವ್ಯತ್ಯಾಸಗಳನ್ನು ಪರಿಣಾಮಕಾರಿಯಾಗಿ ತೆರೆದಿಟ್ಟಿವೆ. ವಿಧವಾ ವಿವಾಹ (ನಭಾ, ನಿರ್ಭಾಗ್ಯವನಿತೆ, ಹಣ್ಣೆಲೆ ಚಿಗುರಿದಾಗ, ಸದಾನಂದ, ಫಣಿಯಮ್ಮ) ಬಾಲ್ಯ ವಿವಾಹ (ವಿರಾಗಿಣಿ, ಗಿರಿಜಾಬಾಯಿ, ಸದಾನಂದ) ಸ್ತ್ರೀ ಶಿಕ್ಷಣ (ಪ್ರಿಯಂವದೆ, ಮಾತೃ ನಂದಿನಿ, ಕಂಕಣ, ಮುಕ್ತಿ, ಅಪಸ್ವರ), ಅಂಗವಿಕಲ ಹೆಣ್ಣುಗಳ ವಿವಾಹದ ಸಮಸ್ಯೆ (ತುಂಗಭದ್ರ) ವೇಶ್ಯಾ ಸಮಸ್ಯೆ (ಗೆಜ್ಜೆ ಪೂಜೆ), ವಿವಾಹ ಪೂರ್ವದ ಸ್ನೇಹ ಸಂಬಂಧಗಳು (ಕಂಕಣ, ಮುಕ್ತಿ, ಶರಪಂಜರ) ಉದ್ಯೋಗ ಅಥವಾ ವಿವಾಹ ಇವುಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾದ ಹಾಗೂ ಇವುಗಳನ್ನು ಸಮನ್ವಯಗೊಳಿಸಿ ನೋಡಬೇಕಾದ ಸ್ತ್ರೀಯರ (ವೈಯಕ್ತಿಕ- ಕೌಟುಂಬಿಕ) ಆಂತರಿಕ ಮತ್ತು ಬಾಹ್ಯ ಆತಂಕ, ತಲ್ಲಣಗಳು (ಮುಕ್ತಿ, ಕಂಕಣ) ಇತ್ಯಾದಿ ವಿವಾಹ ಮತ್ತು ಕುಟುಂಬದ ಘಟನೆಗಳು, ವಿವರಗಳು ಅನೇಕ ಬಾರಿ ಸಾದಂರ್ಭಿಕ ಒತ್ತಡಗಳಿಂದ ವಿಭಿನ್ನ ಅರ್ಥಗಳನ್ನು ಸೃಜಿಸುವ ವಿನ್ಯಾಸಗಳಾಗಿ ಕಂಡು ಬರುತ್ತವೆ. ಆದರೆ ಇವು ವಿವಾಹ ಮತ್ತು ಕುಟುಂಬದೊಳಗೆ ಸ್ತ್ರೀಯರ ಇರುವಿಕೆಯ ಅರ್ಥವನ್ನು ಒಂದೇ ನೆಲೆಯಿಂದ (ಪರಂಪರೆಯ ಮೌಲ್ಯಗಳ ನೆಲೆ) ಸೃಜಿಸುವ ರಚನೆಗಳಾಗಿವೆ. ವಿವಾಹ ಮತ್ತು ಕುಟುಂಬದಲ್ಲಿ ಸ್ತ್ರೀಯರ ಗುರುತಿಸುವಿಕೆಗೆ ಸಂಬಂಧಿಸಿದಂತೆ ಇವೆಲ್ಲ ಒಂದೇ ಮಾದರಿಯವು.

ಉದಾರವಾದಿ ಸಾಂಸ್ಕೃತಿಕನೆಲೆಯ ವಸ್ತು, ವಿಚಾರ, ಆಶಯಗಳಲ್ಲಿ ಪುರುಷನಿಷ್ಠ ಕುಟುಂಬ ವ್ಯವಸ್ಥೆಯ ಆಧಿಪತ್ಯ, ದಬ್ಬಾಳಿಕೆ, ಪ್ರಾಬಲ್ಯಗಳು ಸಮರ್ಥವಾಗಿ ಪ್ರತಿಬಿಂಬಿತಗೊಂಡಿವೆ. ಇವು ಸ್ತ್ರೀಯರ ವ್ಯಕ್ತಿತ್ವವನ್ನು ನಿರಸನಗೊಳಿಸುವ ಪ್ರತಿಬಂಧಕಗಳು. ಕಾದಂಬರಿಗಳ ಒಳಗೆ ಸ್ತ್ರೀಯರ ಕೌಟುಂಬಿಕ ಜೀವನದ ಒಂದು ಘಟನೆಗೆ ಅಥವಾ ಅವರ ಬದುಕಿನ ಚರಿತ್ರೆಗೆ ಸಂಬಂಧಿಸಿದ ಆಧಾರ ಕಟ್ಟು (Dossies)ಗಳಿವು. ಹೀಗಾಗಿ ಪಠ್ಯಗಳಲ್ಲಿ ಅಭಿವ್ಯಕ್ತಿ ರೂಪ ಪಡೆಯುವ ವಿವಾಹ ಮತ್ತು ಕುಟುಂಬಕ್ಕೆ ತಗಲು ಹಾಕಿಕೊಂಡ ಪಲ್ಲಟಗಳು (ಪ್ರೌಢ ವಿವಾಹ, ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ವರದಕ್ಷಿಣೆ ವಿರೋಧ, ಸರಳ ಕುಟುಂಬದ ಬೆಳವಣಿಗೆ, ಕೂಡು ಕುಟುಂಬದ ಸಂಕ್ರಮಣ ಸ್ಥಿತಿ ಇವೆಲ್ಲವೂ) ಬಾಹ್ಯ ಪರಿವರ್ತನೆ ಮಾತ್ರವೇ ಆಗಿ ಕಾಣಿಸಿಕೊಳ್ಳುತ್ತವೆ. ಆಂತರಿಕ ತಳಹದಿಯಲ್ಲಿ ವಿವಾಹ ಮತ್ತು ಕುಟುಂಬದ ಒಳಗಿನ ಸ್ತ್ರೀಯರ ಬದುಕು ಸಂಪ್ರದಾಯದ ಕಕ್ಷೆಯ ಒಳಗೆ ಮುಗಿದುಬಿಡುತ್ತದೆ. ಇಲ್ಲಿ ಗಂಡ- ಮಕ್ಕಳು- ಮನೆ-ಸಂಸಾರ ಇವುಗಳನ್ನಷ್ಟೇ ಪ್ರಧಾನವೆಂದು ಪರಿಭಾವಿಸುವ ಸ್ತ್ರೀಯರು ವ್ಯವಸ್ಥೆಯ ಜೊತೆ ಸದಾ. ರಾಜಿಮಾಡಿಕೊಳ್ಳುವವರಾಗಿ ಪಠ್ಯದೊಳಗೆ ಬಿಂಬಿತಗೊಂಡಿದ್ದಾರೆ. ಈ ರಾಜಿಮಾಡಿಕೊಳ್ಳುವಿಕೆಯು ಅವರ ಆರ್ಥಿಕ ಮತ್ತು ಮಾನಸಿಕ ಪರಾವಲಂಬಿತನಕ್ಕೆ ಸಂಬಂಧಿಸಿದ ಅಂಶವಾಗಿ ಕಾಣಿಸುತ್ತದೆಯಾದರೂ ಇದಕ್ಕೆ ಸಂಸ್ಕೃತಿಯ ಪುರುಷ ಪ್ರಧಾನ ಧೋರಣೆಗಳು ಪ್ರೇರಕಗಳಾಗಿವೆ. ಇದನ್ನು ಕೂಡುಕಟ್ಟಿನ ಕಾದಂಬರಿಗಳು (ತ್ರಿವೇಣಿ, ಎಂ.ಕೆ. ಇಂದಿರಾ ಅವರ ಕಾದಂಬರಿಗಳು) ಮಿತಿಗಳಾಗಿ ಗುರುತಿಸಿವೆ, ವಿಶ್ಲೇಷಿಸಿವೆ. ಆದರೆ ಬದಲಾವಣೆಯ ಸಂದರ್ಭದಲ್ಲಿ ವ್ಯವಸ್ಥೆಯ ಸಂಕೀರ್ಣತೆಗೆ ಶರಣಾಗಿವೆ. ಇದರ ಪರಿಣಾಮವಾಗಿ ಸ್ತ್ರೀಯರ ಬದುಕಿನ ದುರ್ಬಲತೆಯನ್ನು ಅರಿಯುವ ಬಗೆಗಿಂತ ಇರುವ ಸ್ಥಿತಿಯನ್ನು ದುಪ್ಪಟ್ಟರಷ್ಟು ಬಯಲುಗೊಳಿಸುವ ಪ್ರಯತ್ನ ಉದಾರವಾದಿ ಸಾಂಸ್ಕೃತಿಕ ನೆಲೆಯ ಕಾದಂಬರಿಗಳಲ್ಲಿ ನಡೆದಿವೆ. ಕುಟುಂಬದ ಒಳಗೆ ಪುರುಷರ ಆಧಿಪತ್ಯ ಮತ್ತು ಸ್ತ್ರೀಯ ಪ್ರತಿಕ್ರಿಯೆ ಆ ಮೂಲಕ ಕಾಣಿಸಿಕೊಳ್ಳುವ ಪಲ್ಲಟಗಳು,

ಬೆಳವಣಿಗೆಗಳು ಒಂದರ ಒಳಗೆ ಒಂದರಂತೆ ಕಂಡು ಬರುತ್ತವೆ. ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ಒಟ್ಟಂದದ ರಚನೆಯ ಒಳಗೆ ಸ್ತ್ರೀಯರ ಅಸ್ತಿತ್ವವೆನ್ನುವುದು ಪುರುಷ ವ್ಯವಸ್ಥೆಯ ಮೇಲೆ ಸ್ತ್ರೀ ಶಿಕ್ಷಣ ಮತ್ತು ಅದು ಕೊಡಮಾಡಿದ ತಿಳುವಳಿಕೆ, ಉದ್ಯೋಗಗಳ ಅವಕಾಶಗಳಿಂದ ಮತ್ತೊಂದು ಅವಕಾಶವನ್ನು ಹೊಂದಿಸಿ ಹೊಲಿದಂತೆ (Double breasted) ಕಂಡು ಬರುತ್ತದೆ. ಇದನ್ನೇ ತಾತ್ವಿಕವಾದ ಮಾತುಗಳಲ್ಲಿ ಹೇಳುವುದಾದರೆ, ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳಿಗೆ ಅಮೂರ್ತವಾಗಿಯಷ್ಟೇ ಸ್ತ್ರೀಯರ ಕೌಟುಂಬಿಕ ಅಸ್ತಿತ್ವವನ್ನು ಸಾಮಾಜಿಕವಾಗಿ ಅನಾವರಣಗೊಳಿಸುವುದಕ್ಕೆ ಸಾಧ್ಯವಾಗಿದೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಎನ್ನುವ ಚೌಕಟ್ಟು ಹಲವು ಚಿಂತನೆಗಳನ್ನು, ಪ್ರಭಾವಗಳನ್ನು ಅರಗಿಸಿಕೊಂಡು ಮೈದಾಳಿದ ಒಂದು ಸಂದರ್ಭವಾಗಿದೆ. ಸ್ತ್ರೀಯರ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಕನಿಷ್ಠ ಪಕ್ಷ ಸಿದ್ಧಾಂತಗಳ ನೆಲೆಯಲ್ಲಾದರೂ ಬದಲಾವಣೆಗಳು ಕಾಣಿಸಕೊಂಡ ಸಂದರ್ಭ ಇದು. ಈ ಸಂದರ್ಭದಲ್ಲಿ ಸಾಹಿತ್ಯದ ಒಳಗೆ ಎಲ್ಲಾ ವರ್ಗದ ಜನತೆಯ ಧ್ವನಿಗಳು ಪ್ರತಿನಿಧೀಕರಣಗೊಂಡಿವೆ. ವೈದಿಕರು, ಶೂದ್ರರು, ದಲಿತರು, ಅಲ್ಪಸಂಖ್ಯಾತರು ಹೀಗೆ ಎಲ್ಲಾ ವರ್ಗಕ್ಕೆ ಸೇರಿದ ಲೇಖಕಿಯರು ಈ ಸಂದರ್ಭದಲ್ಲಿ ಕಾಣಿಸಕೊಂಡಿದ್ದಾರೆ. ಹೀಗಾಗಿ ಮಹಿಳೆಯರ ಕಥನಸಾಹಿತ್ಯದ ಒಳಗೆ ವಿವಾಹ ಮತ್ತು ಕುಟುಂಬದ ವ್ಯವಸ್ಥೆಯನ್ನೂ ಸೇರಿಸಿಕೊಂಡಂತೆ ವಿಭಿನ್ನ ಮೂಲಗಳಿಂದ ಇಂಡಿಯಾದ ಸಂಪ್ರದಾಯ ಮತ್ತು ಆಧುನಿಕತೆಗಳನ್ನು ಕಟ್ಟುವ ಮತ್ತು ಒಡೆಯುವ ಪ್ರಕ್ರಿಯೆಯು ಜರುಗಿದೆ. ಕುಟುಂಬ ಮತ್ತು ಸಮಾಜದ ವ್ಯವಸ್ಥೆಗಳು ಸಂಪ್ರದಾಯ ಮತ್ತು ಆಧುನಿಕತೆಯ ಒಳಗೆ ಹೆಚ್ಚು ಸಂಕೀರ್ಣಗೊಂಡ ಸಂದರ್ಭವು ಕೂಡ ಇದಾಗಿದೆ. ಇದರ ಪರಿಣಾಮವಾಗಿ ಸ್ಥಿತ್ಯಂತರ ಸಾಂಸ್ಕೃತಿಕ ಸನ್ನಿವೇಶದಲ್ಲಿ ಮಹಿಳೆಯರಿಂದ ನಿರ್ಮಿತಿಗೊಂಡ ಕಾದಂಬರಿಗಳು ಸಾಂಪ್ರದಾಯಿಕ ಪರಂಪರೆಯನ್ನು ಮುಂದುರಿಸುವ ಕಥನಕಗಳಾಗಿರದೆ, ಸ್ತ್ರೀಯರ ಇರುವಿಕೆಗೆ ಸಂಬಂಧಿಸಿದಂತೆ ಪರಂಪರೆಯನ್ನು ಮುರಿಯುವ ಒಡೆದು ಕಟ್ಟುವ ಸಂರಚನೆಗಳಾಗಿವೆ. ಹೀಗಾಗಿ ಇಲ್ಲಿನ ಕಥನಗಳಿಗೆ ಸಹಜವೆಂಬಂತೆ ಅರ್ಥದ ಬಹುಮುಖಿ ಆಯಾಮಗಳು ಪ್ರಾಪ್ತವಾಗಿವೆ. ಈ ಕಾಲಾವಧಿಯ ಮಹಿಳೆಯರ ಬರಹಗಳು ಬಹುಮುಖತೆ, ಬಹುಲಯತ್ವ, ಬಹುಸ್ವರತ್ವದ ಸೃಜನಾತ್ಮಕತೆಯಿಂದಾಗಿ ಉದಾರವಾದಿ ಸಾಂಸ್ಕೃತಿಕನೆಲೆಯ ಮಹಿಳೆಯರ ಬರಹಗಳಿಗಿಂತ ಭಿನ್ನವಾಗಿ ಕಾಣಿಸಿಕೊಂಡಿವೆ. ಉದಾರವಾದಿ ಸಾಂಸ್ಕೃತಿಕ ನೆಲೆಯಲ್ಲಿ ಸ್ತ್ರೀ- ಪುರುಷರ ಸಂಬಂಧವು ಪರಿಕಲ್ಪಿಸುವುದಕ್ಕಂತ ಭಿನ್ನವಾಗಿ ಸ್ತ್ರೀಯರ ವ್ಯಕ್ತಿತ್ವವನ್ನು ಪುರುಷರಷ್ಟೇ ಸಮಾನವಾಗಿ, ಜೀವನ ದರ್ಶನಗಳ ನೆಲೆಯಲ್ಲಿ ಚಿತ್ರಿಸುವ ಪ್ರಯತ್ನ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಪಠ್ಯಗಳಲ್ಲಿ ಜರುಗಿವೆ. ಇದರಿಂದಾಗಿ ಇಲ್ಲಿನ ಕಥನಗಳಲ್ಲಿ ಸ್ತ್ರೀಯರ ಬದುಕಿನ ಚಲನಶೀಲತೆಯು ವಿಭಿನ್ನ ಧಾತುಗಳಲ್ಲಿ ಅನಾವರಣಗೊಂಡಿವೆ. ಮಾತ್ರವಲ್ಲದೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ಬಿಂಬಿಸುವ ವಿವಾಹ ಮತ್ತು ಕುಟುಂಬದ ತಾತ್ವಿಕತೆಯಲ್ಲಿ ಏಕರೂಪತೆಯು ಕಣ್ಮರೆಗೊಂಡು ಬಹುರೂಪತೆ ಎದ್ದು ಕಾಣುತ್ತದೆ. ಸ್ತ್ರೀಯರ ಕೌಟುಂಬಿಕ ಇರುವಿಕೆಯ ನೆಲೆಯಿಂದ ಪಾರಂಪರಿಕ ಮೌಲ್ಯಗಳನ್ನು ಮತ್ತು ಫ್ಯೂಡಲ್ ಸಂಸ್ಕೃತಿಯನ್ನು ಧಿಕ್ಕರಿಸುವ ರಚನೆಗಳಿವು. ಪುರುಷನಿಷ್ಠ ಸಮಾಜವು ಸಾಂಪ್ರದಾಯಿಕವಾಗಿ ಮಾನ್ಯ ಮಾಡಲಾಗಿರುವ ವಿವಾಹ ಮತ್ತು ಕುಟುಂಬದ ಆಶಯ, ಧೋರಣೆ, ದೃಷ್ಟಿಕೋನಗಳನ್ನು ಮರುಕಲ್ಪಿಸುವ, ಪುನರ್‌ರಚಿಸುವ ಪ್ರಯೋಗಶೀಲ ಪ್ರಯತ್ನವನ್ನು ನಡೆಸುವಲ್ಲಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ಆಸಕ್ತವಾಗಿವೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳಲ್ಲಿ ಕೌಟುಂಬಿಕ ವ್ಯಕ್ತಿ ಸಂಬಂಧಗಳು ತುಂಬುಶ್ರದ್ಧೆಯ ಮತ್ತು ಗಾಢ ಅನುಮಾನದ ವಿಭಿನ್ನ ಪ್ರತೀಕಗಳಾಗಿವೆ. ಎಂದರೆ, ಸ್ತ್ರೀ- ಪುರುಷರ ಅನ್ಯೋನ್ಯ ದಾಂಪತ್ಯ ಸಂಬಂಧಗಳು, ಕುಟುಂಬ ಸಂಬಂಧಗಳು ತುಂಬು ಜೀವನಶ್ರದ್ಧೆಯ ಮಾದರಿಗಳಾಗಿ ಕೆಲವು ಪಠ್ಯಗಳಲ್ಲಿ (ನೀಲಗಂಗಾ, ಬದುಕು, ನೂಲು ನೇಯ್ದ ಚಿತ್ರ, ಅನಂತಗೀತ, ಸ್ನೇಹ ಪಲ್ಲವಿ, ಚಿತ್ತಮೋಹನ) ಪ್ರಕಟಗೊಂಡರೆ, ಕೆಲವು ಪಠ್ಯಗಳಲ್ಲಿ (ಮುಕ್ತಿಚಿತ್ರ, ಆಳ, ಗಂಡಸರು, ಶೋಷಣೆಬಂಡಾಯ ಇತ್ಯಾದಿ) ವ್ಯಕ್ತಿ ಸಂಬಂಧಗಳ ಗಾಢ ಅನುಮಾನದ ಮಾದರಿಗಳಿವೆ. ಸ್ತ್ರೀಯರ ಕುಟುಂಬದ ಇರುವಿಕೆಯನ್ನು ಸಾಮಾಜಿಕ ಇರುವಿಕೆಯ ಒಳಗೆ ಇಟ್ಟು ಪರಿಭಾವಿಸುವ ಇಲ್ಲಿನ ಪಠ್ಯಗಳು ಸ್ತ್ರೀಯರ ಅಸ್ತಿತ್ವವನ್ನು ಆ ಕಾಲದ ವಿದ್ಯಮಾನಗಳ ಜೊತೆಗೆ ಸಮೀಕರಿಸಿ ನೋಡುವ ತುರ್ತನ್ನು ಬಿಂಬಿಸಿವೆ.

ವಿವಾಹ ಮತ್ತು ಕುಟುಂಬದ ಒಳಗೆ ಮಹಿಳೆಯರ ದೇಹದ ಮೂಲಕವೇ ಅವರ ಇರುವಿಕೆಯ ಮೂಲಭೂತ ಸ್ಥಿತಿಯ ಅರಿವು ನಿಂತಿದೆ (ಇದು ಸಾರಾ ಅವರ ಕಾದಂಬರಿಗಳಲ್ಲಿ ಒಡೆದು ತೋರುತ್ತದೆ). ಇದನ್ನು ಸಾಮಾಜಿಕವಾಗಿ ಸ್ತ್ರೀಯರ ಬುದ್ಧಿ- ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ಪರಿಕಲ್ಪಿಸುವ ಹಂಬಲ ಮತ್ತು ಒತ್ತಡವನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಪಠ್ಯಗಳು ಬಿಂಬಿಸಿವೆ. ಇದನ್ನು ಮೊದಲಕಟ್ಟಿನ ಕಾದಂಬರಿಕಾರರು (ಗೀತಾ ನಾಗಭೂಷಣ, ಸಾರಾ ಅಬೂಬಕರ್) ತಮ್ಮ ತಮ್ಮ ಸಮಾಜದ ಕುಟುಂಬದ ಚಿತ್ರಣಗಳಲ್ಲಿ ಅಭಿವ್ಯಕ್ತಿಗೊಳಿಸಿದರೆ, ಕೂಡುಕಟ್ಟಿನ ಕಾದಂಬರಿಕಾರರು (ಅನುಪಮಾ ನಿರಂಜನ, ವೀಣಾ ಶಾಂತೇಶ್ವರ) ಆಧುನಿಕ ಪರಿಸರದೊಳಗಿನ ಸ್ತ್ರೀಯರ ಕುಟುಂಬ, ಸಮಾಜ ಮತ್ತು ಪರಿಸರದ ಚಿತ್ರಣಗಳ ಮೂಲಕವಾಗಿ ನಿರೂಪಿಸುವ ಪ್ರಯತ್ನವನ್ನು ನಡೆಸಿದ್ದಾರೆ.

ಉದಾರವಾದಿ ಸಾಂಸ್ಕೃತಿಕ ನೆಲೆಯ ಪಠ್ಯಗಳು ಸಾರ್ವತ್ರಿಕ ನೆಲೆಯಲ್ಲಿ ಬಿಂಬಿಸಿರುವ ವಿಧವಾ ವಿವಾಹ, ಬಾಲ್ಯ ವಿವಾಹ, ಮರು ವಿವಾಹದಂತಹ ಕೌಟುಂಬಿಕ ಬಿಕ್ಕಟ್ಟುಗಳನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಪಠ್ಯಗಳು ದೇಸಿಯ ಆವರಣದೊಳಗೆ ಬಿಂಬಿಸಿವೆ. ಎಂದರೆ ಮೇಲ್ವರ್ಗದ ಕೌಟುಂಬಿಕ ಆಶಯಗಳಿಗೆ ಭಿನ್ನವಾಗಿ ಕೆಳವರ್ಗದ ಕುಟುಂಬ ಸಂಬಂಧಗಳು ಪಠ್ಯದೊಳಗೆ ಬಿಂಬಿತಗೊಂಡಿವೆ. ಮಾತ್ರವಲ್ಲದೆ ಈ ಪಠ್ಯಗಳ ಒಳಗೆ ವ್ಯಕ್ತಿ ಸಂಬಂಧಗಳು ಹೆಚ್ಚು ಜೀವಂತಿಕೆಯಿಂದ ಕಾಣಿಸಿಕೊಳ್ಳುತ್ತವೆ.

ಸ್ಥಿತ್ಯಂತರ ಸಾಂಸ್ಕೃತಿಕನೆಲೆಯ ಮೊದಲ ಕಟ್ಟಿನ ಕಾದಂಬರಿಗಳಲ್ಲಿ ದಲಿತರ ಮತ್ತು ಅಲ್ಪಸಂಖ್ಯಾತರ ವಿಸ್ಮೃತಿಗೆ ಸಂದ ಬದುಕು ಅಧಿಕೃತವಾಗಿ ಅನಾವರಣಗೊಂಡಿವೆ. ವಸಾಹತು ಸಂಸ್ಕೃತಿಯ ಪ್ರಭಾವದ ಎದುರಲ್ಲಿ ದಲಿತರ, ಅಲ್ಪಸಂಖ್ಯಾತರ ಜೀವನ ಮೌಲ್ಯಗಳು ಪಲ್ಲಟಗೊಳ್ಳುತ್ತಿರುವುದನ್ನು ಮೊದಲ ಕಟ್ಟಿನ ಈ ಇಬ್ಬರು ಲೇಖಕಿಯರೂ (ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್) ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಇವರ ಕಾದಂಬರಿಗಳಲ್ಲಿ ಬೇಜವಾಬ್ದಾರ, ಅಲೆಮಾರಿ, ಪಲಾಯನಾವಾದಿ, ಅಮಾನವೀಯ ಪುರುಷರ ಅಸ್ಥಿರತೆಯ ಮಾದರಿಗಳಿಗೆ ಮುಖಾಮುಖಿಯಾಗಿ ದೇಸಿ ಸಂಸ್ಕೃತಿಯ ಮೌಲ್ಯಗಳನ್ನು ಗಟ್ಟಿಯಾಗಿ ಬಿಂಬಿಸುವಂಥ, ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸಿಕೊಂಡು ಸಂಸಾರವನ್ನು ಸಾಗಿಸುವ ಆಧಾರ ಸ್ಥಂಭಗಳಂತಿರುವ ಸ್ತ್ರೀಯರ ಮಾದರಿಗಳನ್ನು ಚಿತ್ರಿಸಿದ್ದಾರೆ. ಈ ಮಾದರಿಗಳಲ್ಲಿ ಬಂಡಾಯವೆನ್ನುವುದು ಒಂದು ಮನೋಧರ್ಮವಾಗಿ ಕಾಣಿಸಿಕೊಳ್ಳುತ್ತದೆ. ಇದರಿಂದಾಗಿ ಇಲ್ಲಿನ ಸ್ತ್ರೀ ಪಾತ್ರಗಳು ಕುಟುಂಬವನ್ನು ಕಟ್ಟಬಲ್ಲರು ಮಾತ್ರ. ಈ ಕಟ್ಟುವ ಪ್ರಕ್ರಿಯೆಯು ಕೂಡುಕಟ್ಟಿನ ಕಾದಂಬರಿಗಳಲ್ಲಿ ಸ್ತ್ರೀಯರ ಅಸ್ತಿತ್ವದ ತಾತ್ವಿಕ ಸಂಕೇತವಾಗಿ

ಕಾಣಿಸಿಕೊಳ್ಳುತ್ತದೆ. ಆದರೆ, ವಿವಾಹ ಮತ್ತು ಕುಟುಂಬದ ವ್ಯವಸ್ಥೆಯನ್ನು (ಸ್ತ್ರೀಯರ ಇರುವಿಕೆಯ ನೆಲೆಯಿಂದ) ಪುರುಷ ಪ್ರಧಾನ ಫ್ಯೂಡಲ್ ವ್ಯವಸ್ಥೆಯ ಒಳಗೆ ಚಿತ್ರಿಸುವ ಕಾರ್ಯವನ್ನು ಈ ಇಬ್ಬರು ಲೇಖಕಿಯರು ಮಾಡಿದ್ದಾರೆ ಎನ್ನುವುದು ಮಹತ್ವದ ಅಂಶವಾಗಿದೆ. ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್ ಅವರ ಕಾದಂಬರಿಗಳಲ್ಲಿ ಸ್ತ್ರೀಯರ ಅನುಭವಗಳು ನಿರ್ದಿಷ್ಟ ಚಾರಿತ್ರಿಕ ಸತ್ವದಿಂದಲೇ ರೂಪು ತಾಳುತ್ತವೆ. ಇದರ ಪರಿಣಾಮವಾಗಿ ಸ್ತ್ರೀಯರ ಅಸ್ತಿತ್ವದ ನಿರಸನಗೊಂಡ ರಚನೆಗಳೇ ಹೆಚ್ಚಾಗಿವೆ. ಕುಟುಂಬದಲ್ಲಿ ಸ್ತ್ರೀಯರ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಗೀತಾ ನಾಗಭೂಷಣ ಮತ್ತು ಸಾರಾ ಅಬೂಬಕ್ಕರ್ ಅವರಿಗೆ ಶಕ್ತವಾದ ಪ್ರತಿಮೆಗಳನ್ನು ಕೆತ್ತಲು/ರಚಿಸಲು ಸಾಧ್ಯವಾಗಿಲ್ಲ. ಇವರ ಪಠ್ಯಗಳಲ್ಲಿ ವಿವಾಹ ಮತ್ತು ಕುಟುಂಬದ ತಳಹದಿಯಲ್ಲಿ ಮುಖ್ಯವಾಗುವ (ಮರು ವಿವಾಹ (ಉಡಿಕಿ) ನಿಖಾಹ, ತಲಾಕ್, ಬಹುಪತ್ನಿತ್ವ ನೆಲೆಗಳಲ್ಲಿ) ಸ್ತ್ರೀಯರ ಜೀವನ ಮೌಲ್ಯಗಳು ಸಾಮಾಜಿಕ ಆಶಯಗಳಾಗಿ ನಿಷ್ಕ್ರಿಯಗೊಳ್ಳುತ್ತವೆ. ಇವರ ಪಠ್ಯಗಳಲ್ಲಿ ಪುರುಷ ಕೇಂದ್ರೀತ ಮೌಲ್ಯಗಳು ಮಾತ್ರ ಸಾಮಾಜಿಕ ಆಶಯಗಳಾಗಿ ಕ್ರಿಯಾತ್ಮಕವಾಗಿ ವ್ಯಕ್ತವಾಗುವುದರಿಂದ ಇದನ್ನು ಮೊದಲ ಕಟ್ಟಿನ ಪಠ್ಯಗಳ ಮಿತಿ ಎಂದು ಭಾವಿಸುವುದಕ್ಕಿಂತ ಭಿನ್ನವಾಗಿ ಸ್ತ್ರೀಯರ ಇರುವಿಕೆಯ ಮೂಲದಲ್ಲಿ ವ್ಯವಸ್ಥೆಯ ಸಂಕೀರ್ಣತೆಯನ್ನು ಬಿಂಬಿಸುವ ರಚನೆಗಳೆಂದು ಪರಿಗಣಿಸುವುದು ಸೂಕ್ತವೆನಿಸಿದೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕೂಡುಕಟ್ಟಿನ ಕಥನಗಳು ವಿವಾಹ ಮತ್ತು ಕುಟುಂಬದ ಕಲ್ಪನೆ, ನಂಬಿಕೆಗಳನ್ನು ಪರೀಕ್ಷಕ ದೃಷ್ಟಿಕೋನಗಳಿಂದಲೇ ನಿರೂಪಿಸಿವೆ. ಇದರಿಂದಾಗಿ ಕುಟುಂಬ ವ್ಯವಸ್ಥೆಯ ಒಳಗೆ ಸ್ತ್ರೀಯರ ಇರುವಿಕೆಗೆ ಸಂಬಂಧಿಸಿದ ಸ್ಥಿತಿಗತಿ, ಸಂಘರ್ಷಗಳು ವಸ್ತುನಿಷ್ಠವಾಗಿ ಶೋಧನೆಗೆ ಗುರಿಯಾಗಿದೆ ಹಾಗೂ ಅನುಪಮಾ ನಿರಂಜನ ಮತ್ತು ವೀಣಾ ಶಾಂತೇಶ್ವರ ಇವರ ಬರಹಗಳಲ್ಲಿ ಸ್ತ್ರೀಯ ಅಸ್ತಿತ್ವವನ್ನು ಕೌಟುಂಬಿಕ, ಸಾಮಾಜಿಕ ನೆಲೆಗಟ್ಟಿನಲ್ಲಿ (ಅದರ ಸಾಧ್ಯಾಸಾಧ್ಯತೆಗಳನ್ನು) ಬಹುಮುಖ ಆವರಣಗಳಿಂದ ನೋಡುವುದು ಸಾಧ್ಯವಾಗಿದೆ. ಅಲ್ಲದೆ ಇವರ ಪಠ್ಯಗಳಲ್ಲಿ ಸ್ತ್ರೀಯರ ಅಸ್ತಿತ್ವವು ಹೆಚ್ಚು ಸಂಕೀರ್ಣವಾಗಿ, ಸೂಕ್ಷ್ಮವಾಗಿ ಬಿಂಬಿತಗೊಂಡಿದೆ.

ವಿವಾಹ ಮತ್ತು ಕುಟುಂಬದ ಚೌಕಟ್ಟಿನೊಳಗೆ ಸ್ತ್ರೀ- ಪುರುಷರ ನಡುವಿನ ಅಸಮಾನತೆ, ಸಂಘರ್ಷಗಳು ಎಂದಿಗೂ 'ಪೂರ್ವನಿರ್ಧರಿತ' (Pre-determined)ಗಳಾಗಿರುವುದಿಲ್ಲ. ಈ ಕಾರಣದಿಂದ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಪಠ್ಯಗಳು ಸ್ತ್ರೀಯರ ಕೌಟುಂಬಿಕ ಆಯ್ಕೆ, ಸಾಮಾಜಿಕ ಆಯ್ಕೆಯ ಸಾಧ್ಯತೆಗಳನ್ನು ಸಂಪೂರ್ಣವಾಗಿ ದುಡಿಸಿಕೊಳ್ಳುವ ರಚನೆಗಳಾಗಿವೆ. ವಿವಾಹ ಮತ್ತು ಕುಟುಂಬದ ಒಳಗಿದ್ದು ಅಥವಾ ಅದರಿಂದ ವಿಮುಖರಾಗಿ ಅಸ್ತಿತ್ವದ ಅನ್ವೇಷಣೆಯಷ್ಟೇ ಮುಖ್ಯವೆಂದು ಭಾವಿಸುವ ಪಾತ್ರಗಳು ಅನುಪಮಾ ನಿರಂಜನ ಮತ್ತು ವೀಣಾಶಾಂತೇಶ್ವರ ಅವರ ಕಾದಂಬರಿಗಳಲ್ಲಿ ವ್ಯಕ್ತಿ ಸಂಬಂಧಗಳ ಆದರ್ಶ ಮತ್ತು ವಾಸ್ತವವನ್ನು ಬಗೆಯುವ ಪರಿಶೋಧಕ (Explorsive)ಗಳಾಗಿವೆ.

ಸ್ತ್ರೀ ಸಮಾನತೆಯ ಆಶಯ, ಧೋರಣೆಗಳ ಒಳಗೆ ಅನನ್ಯ ಸಾಂಸ್ಕೃತಿಕ ನೆಲೆ ರೂಪಿತಗೊಂಡಿದೆ. ಬದುಕನ್ನು ಹೆಣ್ಣು-ಗಂಡಿಗೆ ಇಬ್ಬರಿಗೂ ತಾರತಮ್ಯವಿಲ್ಲದೆ ತೆರೆದಿಡಲು ಬಯಸುವ ದೃಷ್ಟಿಕೋನಗಳಿಂದ ಅನನ್ಯ ಸಾಂಸ್ಕೃತಿಕ ನೆಲೆಯ ಪಠ್ಯಗಳು ರಚನೆಗೊಂಡಿವೆ. ಸ್ತ್ರೀಯರ ಕೌಟುಂಬಿಕ, ಸಾಮಾಜಿಕ ಅಸ್ತಿತ್ವದ ನೆಲೆಯಿಂದ ಹೊಸ ಮೌಲ್ಯಗಳನ್ನು ಹುಟ್ಟುಹಾಕುವ ರಚನೆಗಳಿವು. ಅನನ್ಯ ಸಾಂಸ್ಕೃತಿಕ

ನೆಲೆಯ ಕಾದಂಬರಿಗಳ ಒಳಗೆ ಕುಟುಂಬದ ಸ್ಥಾಪಿತ ಮೌಲ್ಯಗಳು, ಮಾದರಿಗಳು ಪುನರ್ ಪರಿಶೀಲನೆಗೊಳ್ಳುತ್ತವೆ. ಸ್ತ್ರೀಯರ ಕುರಿತಾದ ತಪ್ಪುಗ್ರಹಿಕೆ, ಏಕರೂಪಕಗಳನ್ನು ನಿರಾಕರಿಸುವ ಸ್ತ್ರೀಕೇಂದ್ರಿತ ಕೃತಿಗಳು ಇವು. ಇಲ್ಲಿನ ಕೃತಿಗಳು ಹೆಣ್ಣು- ಗಂಡು ಪರಸ್ಪರ ವಿರುದ್ಧ ವ್ಯಕ್ತಿತ್ವಗಳೆಂಬ ಕಲ್ಪನೆಯನ್ನು ತೊಡೆದುಹಾಕುತ್ತವೆ. ಅಲ್ಲದೆ ಕುಟುಂಬದ ಒಳಗೆ ಹೆಣ್ಣು ಗಂಡಿನ ವಿಭಿನ್ನತೆಯನ್ನು ವ್ಯಕ್ತಿ ವೈಶಿಷ್ಟ್ಯವೆಂದು ಪರಿಗಣಿಸುತ್ತವೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಕಾಣಿಸಕೊಳ್ಳುವ ಅನನ್ಯ ಸಾಂಸ್ಕೃತಿಕ ನೆಲೆಯ ಕಥನಗಳು ಪರಂಪರೆಯಿಂದ ವಿಚ್ಛಿನ್ನಗೊಂಡ ರಚನೆಗಳು. ಮಾತ್ರವಲ್ಲದೆ ಸ್ತ್ರೀ ಕೇಂದ್ರಿತವಾದ ಮತ್ತು ತರ್ಕಬದ್ಧ ವಿವರಗಳಿಗೆ ಕಟ್ಟುಬಿದ್ದ ಕೃತಿಗಳಿವು.

ಉದಾರವಾದಿ ಸಾಂಸ್ಕೃತಿಕ ನೆಲೆ ಮತ್ತು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ವಿವಾಹ ಮತ್ತು ಕುಟುಂಬದ ನೆಲೆಯಿಂದ ಸ್ತ್ರೀ ಶೋಷಣೆಯ ವಾಸ್ತವತೆಯ ಬಗ್ಗೆ ಅರಿವು ಮೂಡಿಸುತ್ತವೆಯಷ್ಟೇ ಅಲ್ಲದೆ ಪರ್ಯಾಯವನ್ನು ಹುಡುಕುವಲ್ಲಿ ಪರಂಪರೆ ಅಥವಾ ಆಧುನಿಕತೆ ಎನ್ನುವ ದ್ವಂದ್ವಗಳನ್ನು ಮೀರಲಾಗದೆ ಹೋಗುತ್ತವೆ. ಅವುಗಳಿಗಿಂತ ಭಿನ್ನವಾಗಿ ಅನನ್ಯ ಸಾಂಸ್ಕೃತಿಕ ನೆಲೆಯ ಪಠ್ಯಗಳು ಸ್ತ್ರೀಯರ ಅಸ್ತಿತ್ವದ ನಿರಾಕರಣದ ಧ್ವನಿ ಅಡಗಿಸುವಿಕೆಯನ್ನೂ, ಹೋರಾಡುವ ಸಾಂಸ್ಕೃತಿಕ ವಿಧಾನಗಳನ್ನು ಪುನರುಜ್ಜೀವನಗೊಳಿಸುವ ವಾಹಕಗಳಾಗಿಯೂ ಕಾಣಿಸಿಕೊಳ್ಳುತ್ತವೆ. ಉದಾರವಾದಿ ಸಾಂಸ್ಕೃತಿಕ ನೆಲೆ ಮತ್ತು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಪಠ್ಯಗಳಿಗಿಂತ ಭಿನ್ನವಾಗಿ ಇದರಲ್ಲಿ ಸ್ತ್ರೀಯರ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ವಿವಾಹ ಮತ್ತು ಕುಟುಂಬವು ಪರಿಧಿಯಲ್ಲಷ್ಟೇ ಕಾಣಿಸಿಕೊಳ್ಳುತ್ತದೆ. ಇದನ್ನು ಸವಿತಾ ನಾಗಭೂಷಣ ಅವರ **ಸ್ತ್ರೀಲೋಕ**, ತಾರಾಭಟ್ ಕೆ, ಅವರ **ಅವ್ಯಕ್ತ** ಚಂಪಾವತಿ ಎಚ್.ಎಸ್. ಅವರ **ಶಿವಗಂಗಾ**, ಉಮಾರಾವ್ ಅವರ **ನೂರುಸ್ವರ** ಕೃತಿಗಳು ಪ್ರಜ್ಞಾಪೂರ್ವಕವಾಗಿ ವಿರಚಿಸಿವೆ. ಮಾತ್ರವಲ್ಲದೆ ಸಾಮಾಜಿಕ ಅನನ್ಯತೆಯೆನ್ನುವುದು ಪಠ್ಯಗಳ ಪ್ರಧಾನ ಭೂಮಿಕೆಯಲ್ಲಿ ಚರ್ಚಿತಗೊಳ್ಳುವುದರಿಂದ ಆರ್ಥಿಕ ಸ್ವಾವಲಂಬನೆ, ಸ್ವ-ವ್ಯಕ್ತಿತ್ವದ ವಿಕಸನಗಳು ಇಲ್ಲಿನ ಸ್ತ್ರೀ ಪಾತ್ರಗಳಿಗೆ ಮಹತ್ವದ್ದೆನಿಸುತ್ತವೆ. **ಸ್ತ್ರೀ ಲೋಕ**ದೊಳಗಿನ ಎಲ್ಲಾ ಸ್ತ್ರೀ ಪಾತ್ರಗಳು, **ಅವ್ಯಕ್ತ**ದ ನಾಯಕಿ ಅದಿತಿ, **ಶಿವಗಂಗಾ**ದ ನಾಯಕಿ ಗಂಗಾ, ಸ್ತ್ರೀಮುಕ್ತಿ ಸಂಘಟನೆಯ ಎಲ್ಲಾ ಸದಸ್ಯರು **ನೂರುಸ್ವರ**ದ ನಾಯಕಿ ಗೌರಿ ಮುಂತಾದವರು ಆರ್ಥಿಕ ಸ್ವಾವಲಂಬನೆಯನ್ನು, ಸ್ವ-ವ್ಯಕ್ತಿತ್ವದ ವಿಕಸನವನ್ನು ಅತಿ ಗಂಭೀರವಾಗಿ ಪರಿಗಣಿಸುವುದು ಕಂಡು ಬರುತ್ತದೆ. ಹೀಗಾಗಿ ಅನನ್ಯ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ಸಂಘರ್ಷ-ಸಹಕಾರಗಳ ಒಂದು ಸಂಯುಕ್ತ ಘಟಕ 'ಕುಟುಂಬ' ಎಂಬ ಪರಿಭಾವನೆಯನ್ನು ಮೂಡಿಸುವ ರಚನೆಗಳಾಗಿವೆ. ಇದು ಸ್ತ್ರೀಲೋಕ ಮತ್ತು ಶಿವಗಂಗಾ ಪಠ್ಯಗಳ ಒಳಗೆ ನೇರವಾಗಿ ಪ್ರತಿಬಿಂಬಿತಗೊಂಡಿದ್ದರೆ ಅವ್ಯಕ್ತ ಮತ್ತು ನೂರುಸ್ವರದಲ್ಲಿ ಸೂಚಿತನೆಲೆಯಲ್ಲಿ ಮಾತ್ರ ಪ್ರಕಟಗೊಂಡಿವೆ.

ಅನನ್ಯ ಸಾಂಸ್ಕೃತಿಕ ನೆಲೆಯಲ್ಲಿ ಬಿಂಬಿತಗೊಂಡಿರುವ ಪ್ರಗತಿ, ಬೆಳವಣಿಗೆ, ಸಂಪ್ರದಾಯ, ಆಧುನಿಕತೆ, ಸಾಮಾಜಿಕ ಸಂಸ್ಥೆಗಳ ಬಗ್ಗೆ ಈ ಲೇಖಕರು ಪ್ರದರ್ಶಿಸುವ ಮುಕ್ತ ಧೋರಣೆ ಮತ್ತು ಸಮಾನ ಅನುಮಾನಗಳು ಲೇಖಕರಿಗೆ ಗತಕಾಲ ಮತ್ತು ವರ್ತಮಾನಗಳಲ್ಲಿ ಸಿಕ್ಕಿಹಾಕಿಕೊಳ್ಳದೆ ಅನುಸಂಧಾನ ನಡೆಸಲು ಸಾಧ್ಯವಾಗುವುದಕ್ಕೆ ಕಾರಣಗಳಾಗಿವೆ. ಹೀಗಾಗಿ ಸ್ತ್ರೀಯರ ಪುನರುಜ್ಜೀವನ ಎಂಬುದೇನಾದರೂ ಇದ್ದರೆ ಅದು ಗತಕಾಲ (ಸಂಪ್ರದಾಯ) ಅಥವಾ ವರ್ತಮಾನ (ಆಧುನಿಕತೆ)ದ ಎಲ್ಲ ರೀತಿಯ ಸಂಕುಚಿತತೆಯನ್ನು

ವಿರೋಧಿಸುವ ಪ್ರಜ್ಞಾಪೂರ್ವಕ ವರ್ತನೆಗಳಲ್ಲಿರುತ್ತವೆ ಎಂಬುದನ್ನು ಇಲ್ಲಿನ ಪಠ್ಯಗಳು ಬಲವಾಗಿ ಪ್ರತಿಪಾದಿಸುತ್ತವೆ.

ಕುಟುಂಬ ಸಂಬಂಧದೊಳಗೆ ಸ್ತ್ರೀ- ಪುರುಷರ ನಡುವಿನ ಅಧಿಕಾರದ ಅಸೌಷ್ಟವತೆಯನ್ನು ಮತ್ತು ಲಿಂಗ ಸಂಬಂಧಿ ಅಸಮಾನತೆಯನ್ನು ಅಂತರ್ಗತ ಮಾಡಿಕೊಂಡಿರುವ, ಅಂತರಂಗೀಕರಣ ಗೊಳಿಸಿಕೊಂಡಿರುವ ಬಗೆಗಳನ್ನು ಈ ಕಾದಂಬರಿಗಳು ಶಕ್ತವಾಗಿ ಬಯಲುಗೊಳಿಸುತ್ತವೆ. ಮಾತ್ರವಲ್ಲದೆ, ತಾಯ್ತನದ ಹಂಬಲ, ಸತೀತ್ವ, ಶೀಲ, ಪಾತಿವ್ರತ್ಯ ಇಂತಹ ಮನೋಧೋರಣೆಗಳು ಪುರುಷನಿಷ್ಠ ಸಮಾಜದ ಕೌಟುಂಬಿಕ ನಿರೀಕ್ಷೆಗಳೇ ಹೊರತು ಇವು ಹೆಣ್ಣಿಗೆ ವರ್ಣತಂತುಗಳಿಂದಲೇ ಹರಿದು ಬರುವುದಿಲ್ಲ ಎನ್ನುವುದನ್ನು ಅನನ್ಯ ಸಾಂಸ್ಕೃತಿಕ ನೆಲೆಯ ಪಠ್ಯಗಳು ಪೂರ್ವದ ಸಾಂಸ್ಕೃತಿಕ ನೆಲೆಗಳ ಪಠ್ಯಗಳಿಗಿಂತ ಹೆಚ್ಚು ಶಕ್ತವಾಗಿ ಬಿಂಬಿಸುತ್ತವೆ. ಇದರ ಪರಿಣಾಮವಾಗಿ ಸಾಂಪ್ರದಾಯಿಕ ಸಾಮಾಜಿಕ ಬಂಧನಗಳಿಂದ ಪಾರಾಗಲು ಆಧುನಿಕತೆಯ ಜೊತೆಗೆ ಅನುಸಂಧಾನ ನಡೆಸುವ ಇಲ್ಲಿನ ಪಠ್ಯಗಳ ಪಾತ್ರಗಳಲ್ಲಿ ಸ್ವಂತಿಕೆಯ ಹುಡುಕಾಟ, ವೈಯಕ್ತಿಕ ಮೌಲ್ಯಗಳ ಶೋಧವಿದೆ. ಇದನ್ನು ಸ್ತ್ರೀಲೋಕದ ಪ್ರಜ್ಞಾ, ಸಮ, ವಿಜಯ ಇಂತಹ ಪಾತ್ರಗಳು; ಅವ್ಯಕ್ತದ ಅದಿತಿ, ರೋಸಿ, ಶಿವಗಂಗಾದ ಗಂಗಾ, ಪಾರ್ವತಿ, ರೋಸಿಯಮ್ಮ, ರೋಹಿಣಿ ಇಂತಹ ಪಾತ್ರಗಳು; ನೂರುಸ್ವರದ ಗೌರಿಯಂತಹ ಪಾತ್ರಗಳು ಗಂಭೀರವಾಗಿ ಪರಿಗಣಿಸುವುದು ಕಂಡು ಬರುತ್ತದೆ. ಅನನ್ಯ ಸಾಂಸ್ಕೃತಿಕ ನೆಲೆಯ ಪಠ್ಯಗಳಲ್ಲಿ ಆಧುನಿಕತೆಯ ವಿಶ್ಲೇಷಣೆಯು ವಿವಾಹ ಮತ್ತು ಕುಟುಂಬದ ಆವರಣದೊಳಗೆ ಶಕ್ತವಾಗಿಯೇ ಜರುಗಿವೆ. ಇದನ್ನು ಎರಡು ರೀತಿಯಲ್ಲಿ ಗುರುತಿಸಲಾಗಿದೆ.

ಒಂದು : ಸ್ತ್ರೀಯರ ದೈನಂದಿನ ಬದುಕಿನ ಹಲವಾರು ಸಂಗತಿಗಳಿಗೆ ಜೀವ ತುಂಬುವ ನೆಲೆಯಲ್ಲಿ.

ಎರಡು : ಸಂಪ್ರದಾಯದಲ್ಲಿ ಅಡಗಿರುವ ಅನೇಕ ಮಿತ್‌ಗಳನ್ನು ಒಡೆಯುವ ನೆಲೆಯಲ್ಲಿ (ಗಂಡ ಹೆಂಡತಿಯ ಆದರ್ಶ ದಾಂಪತ್ಯದ ಕಲ್ಪನೆ, ಪಾತಿವ್ರತ್ಯ, ಶೀಲ, ಸತೀತ್ವ, ತಾಯ್ತನ)

ಆದರೆ ಆಧುನಿಕತೆಯನ್ನು ದಿಟ್ಟತನದಿಂದ ಎದುರಿಸುವ ಧೈರ್ಯ, ನೈತಿಕತೆಯು ಈ ಎಲ್ಲ ಪಾತ್ರಗಳು ಕೂಡ ಆಧುನಿಕ ಪುರುಷನಿಷ್ಠ ಕುಟುಂಬ ಮತ್ತು ಸಮಾಜದ ಒಳಗೆ ನಿರಸನಗೊಳ್ಳುತ್ತವೆ. ಇಲ್ಲಿನ ಸ್ತ್ರೀ ಪಾತ್ರಗಳು ಗೃಹಿಣಿ ಜೀವನಕೆ ಮರಳುವ (ಸ್ತ್ರೀಲೋಕದ ಪಾತ್ರಗಳು, ಶಿವಗಂಗೆ ನಾಯಕಿಯನ್ನೊಳಗೊಂಡಂತೆ ಸ್ತ್ರೀ ಮುಕ್ತಿ ಸಂಘಟನೆಯ ಹೆಚ್ಚಿನ ಪಾತ್ರಗಳು); ಆತ್ಮಹತ್ಯೆ ಮಾಡಿಕೊಳ್ಳುವ (ಅವ್ಯಕ್ತದ ರೋಸಿ) ಸಾವನ್ನಪ್ಪುವ (ಅವ್ಯಕ್ತದ ಅದಿತಿ); ಅಲ್ಲದೆ ವಿವಾಹವನ್ನು ಧಿಕ್ಕರಿಸಿದರೂ ಕುಟುಂಬ ಎಲ್ಲೆಯನ್ನು ಉಲ್ಲಂಘಿಸಲಾಗದ (ನೂರು ಸ್ವರದ ಗೌರಿ) ಇವರೆಲ್ಲರೂ ಪುರುಷ ಪ್ರಧಾನ ವ್ಯವಸ್ಥೆಯ ಬಲಾಢ್ಯತೆಯನ್ನು ಪ್ರತಿಬಿಂಬಿಸುವವರಾಗಿ ಕಾಣಿಸಿಕೊಳ್ಳುತ್ತಾರೆ. ಒಳಗೆ ಆಧುನಿಕತೆಯನ್ನು ದಿಟ್ಟತನದಿಂದ ಎದುರಿಸುವ ಧೈರ್ಯ ಮತ್ತು ನೈತಿಕತೆ ಆದರ ಚಲನಶೀಲತೆಯನ್ನು, ಚೈತನ್ಯ ಶೀಲತೆಯನ್ನು ಕಳೆದುಕೊಳ್ಳುವುದು ಕಂಡು ಬರುತ್ತದೆ.

ಕಣ್ಣಿಗೆ ಕಾಣುವ ಹೊರಗಿನ ವಾಸ್ತವ ಜಗತ್ತು ನಿಜವಾಗಿಯೂ ಮನಸ್ಸಿನೊಳಗೆ ಹುಟ್ಟುವ ಭ್ರಮೆಯ ಜಗತ್ತು ಕೂಡ ಎಂಬುದು ಅನನ್ಯ ಸಾಂಸ್ಕೃತಿಕ ನೆಲೆಯ ಬರಹಗಾರರ ಕಥನಗಳ ಹೆಣಿಗೆಯಾಗಿದೆ. (ವಸಾಹತೋತ್ತರ ಜಾಗತೀಕರಣದ ಸಂದರ್ಭವು ಕೂಡ ಇದೇ ಆಗಿದೆ.) ಇದರಿಂದಾಗಿ, ಸ್ತ್ರೀಯರ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ವಿವಾಹ ಮತ್ತು ಕುಟುಂಬದ ನೆಲೆಗಟ್ಟನ್ನು ನಿರಾಕರಿಸುವ ಪರ್ಯಾಯದ ಅನ್ವೇಷಣೆಯು

'ಅಪ್ಪಟ ಕಾಲ್ಪನಿಕ ಕಟ್ಟುವಿಕೆ'ಯಾಗಿ ಕಾಣಿಸಿಕೊಳ್ಳುತ್ತದೆ. ಎಂದರೆ ಅನನ್ಯ ಸಾಂಸ್ಕೃತಿಕ ನೆಲಯ ಮೊದಲ ಕಟ್ಟಿನ ಕಾದಂಬರಿಗಳಿಗಾಗಲಿ (ಸ್ತ್ರೀಲೋಕ, ಅವ್ಯಕ್ತ), ಕೂಡುಕಟ್ಟಿನ ಕಾದಂಬರಿಗಳಿಗಾಗಲಿ (ಶಿವಗಂಗಾ, ನೂರುಸ್ವರ) ಕುಟುಂಬಕ್ಕೆ ಶಕ್ತವಾದ ಪರ್ಯಾಯವನ್ನು ಶೋಧಿಸುವುದು ಸಾಧ್ಯವಾಗದೆ ಹೋಗುತ್ತದೆ.

ಸಮಗ್ರವಾಗಿ ಹೇಳುವುದಾದರೆ ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ವಿವಾಹ ಮತ್ತು ಕುಟುಂಬವನ್ನು ಸ್ತ್ರೀಯ ಅಸ್ತಿತ್ವದ ಮೂಲದಲ್ಲಿ ಶೋಧಿಸುವ ಸಂಕಥನಗಳಾಗಿವೆ. ಹೀಗಾಗಿ ಇದರಲ್ಲಿ ಸಹಜವಾಗಿ ಆಯಾ ಪರಿಸರದ ಕಾಲಘಟ್ಟದ ಸಾಮಾಜಿಕ ಧೋರಣೆ, ಪ್ರಭಾವ, ಪಲ್ಲಟಗಳನ್ನು ಶಕ್ತವಾಗಿ ತೆರೆದಿಡಲು ಇಲ್ಲಿನ ಕಥನಗಳಿಗೆ ಸಾಧ್ಯವಾಗಿದೆ.

## ಉಪಸಂಹಾರ

ಕನ್ನಡದ ಮಹಿಳೆಯರ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ ಎಂಬ ಈ ಮಹಾಪ್ರಬಂಧವು ಪ್ರತಿನಿಧೀಕರಿಸಿಕೊಂಡ ಬರೆವಣಿಗೆಯ ಸರಿಸುಮಾರು ಒಂದು ಶತಮಾನದ ಅವಧಿಯಷ್ಟು ವಿಸ್ತಾರವಾದುದು. ವಿವಾಹ ಮತ್ತು ಕುಟುಂಬ ಎನ್ನುವ ಸಮಾಜೋ-ಸಾಂಸ್ಕೃತಿಕ (Socio-Cultural) ಚೌಕಟ್ಟನ್ನು ಮುಖ್ಯವಾಗಿ ಗ್ರಹಿಸಿಕೊಂಡ ಮತ್ತು ಅದನ್ನು ಸಾಧಿಸಿದ ಅಧ್ಯಯನ ಇದಾಗಿದೆ. ೧೯೧೩ರಿಂದ ೨೦೦೧ರ ತನಕದ ಮಹಿಳಾ ಕಾದಂಬರಿಗಳೆನ್ನುವ ಸಂಕಥನದಲ್ಲಿ ವಿಷಯಕ್ಕೆ ಪೂರಕವಾಗುವಂತೆ ಕೃತಿ ಮತ್ತು ಬರಹಗಾರರನ್ನು ಆಯ್ದುಕೊಂಡರೂ ಅದರ ಹಿಂದೆ ಅಧ್ಯಯನಕ್ಕೆ ನ್ಯಾಯ ಒದಗಿಸುವ ಇಂಗಿತವು ಕೆಲಸಮಾಡಿದೆ. ಹಾಗಾಗಿ ಇಷ್ಟು ದೀರ್ಘವಾದ ಕಾಲದ ಸಂರಚನೆಗಳಲ್ಲಿ ೧೨ ಜನ ಮಹಿಳಾ ಬರಹಗಾರರು ಮತ್ತು ಅವರ ೫೨ ಪಠ್ಯಗಳನ್ನು ಸೂಕ್ತವಾದ ರೀತಿಯಲ್ಲಿ ವಸ್ತುನಿಷ್ಠ ವರ್ಗೀಕರಣದ ಮೂಲಕ ಅಧ್ಯಯನ ಮಾಡಲಾಗಿದೆ. ಈ ರೀತಿ ವಿವಾಹ ಮತ್ತು ಕುಟುಂಬವನ್ನು ಕೇಂದ್ರವಾಗಿಟ್ಟುಕೊಂಡು ಮಂಡಿಸಿದ ವಾಗ್ವಾದವಾದ ಈ ಅಧ್ಯಯನವು ಸೂಕ್ಷ್ಮಗ್ರಾಹಿತ್ವ (Micro level)ದ ಚಿಂತನೆಗಳ ಮೂಲಕ ರೂಪುಪಡೆದುಕೊಂಡಿದೆ. ಅಂದರೆ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ ಸಾಹಿತ್ಯಕ ಸಾಮಾಜಿಕ ಮತ್ತು ಸಾಂಸ್ಕೃತಿಕವಾದ ಗ್ರಹೀತಗಳ ನೆಲೆಯಲ್ಲಿ ಸೂಕ್ಷ್ಮವಾದ ವಿಶ್ಲೇಷಣೆ ಮಾಡಲಾಗಿದೆ. ಈ ವಿಶ್ಲೇಷಣೆಗೆ ಪೂರಕವಾಗಿ ಅನ್ಯಜ್ಞಾನಶಿಸ್ತು (ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ)ಗಳ ನೆರವನ್ನು ಪಡೆಯಲಾಗಿದೆ. ವಾಗ್ವಾದವನ್ನು ಮಂಡಿಸುವಾಗ ಈ ವಿಷಯದ ಬಹುಮುಖೀ ನೆಲೆಯ ಆಯಾಮಗಳಿಗೆ ಮಹತ್ವನೀಡಿ ಫಲಿತಗಳನ್ನು ಆಯಾ ಅಧ್ಯಾಯಗಳ ಹಿನ್ನೆಲೆಯಲ್ಲಿಯೇ ನಿರ್ವಚಿಸಲಾಗಿದೆ. ಈ ಮೂಲಕವಾಗಿ ಮಹಾಪ್ರಬಂಧದಲ್ಲಿ ಪುನರುಲ್ಲೇಖಗಳನ್ನು ಪ್ರಜ್ಞಾಪೂರ್ವಕವಾಗಿ ನೀಗಿಸಿಕೊಂಡು ಕಾಲ, ಸಂದರ್ಭ, ವಸ್ತು ವಿಷಯಗಳಿಗೆ ತಕ್ಕಂತೆ ಭಿನ್ನವಾದ ಸೂಕ್ಷ್ಮನಿಲುವುಗಳಿಗೆ ಮಹತ್ವನೀಡಲಾಗಿದೆ. ನೇರವಾಗಿ ಮಾನವ ಶಾಸ್ತ್ರ, ಸಮಾಜಶಾಸ್ತ್ರ, ವಿಕಾಸಮನಃಶಾಸ್ತ್ರಗಳು ಸೈದ್ಧಾಂತೀಕರಣಗೊಳಿಸಿರುವ ವಿವಾಹ ಮತ್ತು ಕುಟುಂಬದ ವಸ್ತುವಿಷಯಗಳನ್ನು ಕಾದಂಬರಿ ಬರವಣಿಗೆಯ ಪರಂಪರೆಯೊಳಗೆ ಅಧ್ಯಯನ ಮಾಡುವಾಗ ಎದುರಾಗುವ ಸಮಸ್ಯೆಗಳು ಹೆಚ್ಚು ಸಂಕೀರ್ಣವಾದದ್ದು. ಇದರಲ್ಲಿನ ಅತಿ ದೊಡ್ಡ ಸಮಸ್ಯೆಯೆಂದರೆ, ವಿವಾಹ ಮತ್ತು ಕುಟುಂಬದ ವಸ್ತುವನ್ನು ಕುರಿತು ಚರ್ಚಿಸತೊಡಗಿದಂತೆ ಕಾದಂಬರಿಯ ಕೇಂದ್ರೀಯ ಸಂಕೀರ್ಣ ಸಮಗ್ರತೆ ಮರೆಯಾಗುವುದು. ಎಂದರೆ, ಕಾದಂಬರಿಯು ನೀಡುವ ಒಟ್ಟಂದದ ಸೌಂದರ್ಯಾನುಭವ ವಸ್ತು ವಿಶ್ಲೇಷಣೆಯ ಒಳಗೆ ಕರಗಿ ಬಿಡುವುದು. ಇದು ಅಧ್ಯಯನದ ಅನಿವಾರ್ಯ ಮಿತಿ ಎಂದು ಹೇಳಬೇಕಾಗಿದೆ. ಇದರಿಂದಾಗಿ ಮಹಾಪ್ರಬಂಧದ ಪರಿಮಿತಿಯ ಒಳಗೆ ಕಾದಂಬರಿಯನ್ನು 'ಕಲಾಕೃತಿ'ಯಾಗಿ ಸಮರ್ಥಿಸಿಕೊಳ್ಳುವ ಎಲ್ಲಾ ಬಗೆಯ ಒತ್ತಡಗಳನ್ನು (ಕಾದಂಬರಿ ವಿಮರ್ಶೆಯಲ್ಲಿ ಕೃತಿ-ಚರಿತ್ರೆ- ಐಡಿಯಾಲಜಿಗಳ ನಡುವೆ ತೀರಾ ನಿಕಟವಾದ ಸಾವಯವ ಸಂಬಂಧವಿದೆ.) ಮೀರುವ ಪ್ರಯತ್ನವು ಅಪ್ರಯತ್ನ ಪೂರ್ವಕವಾಗಿಯೇ ಪ್ರಕಟಗೊಂಡುಬಿಟ್ಟಿದೆ.

ಮಹಿಳಾ ಕಾದಂಬರಿಗಳು ಎನ್ನುವ ಸಮಗ್ರ ಕಥನ ಪರಂಪರೆಯ ಹಿನ್ನೆಲೆಯಲ್ಲಿ ಸ್ಥೂಲಗ್ರಾಹಿತ್ವ (Macro-level)ದ ಅಧ್ಯಯನ ಇದಾಗಿದೆ. ಎಂದರೆ ಹತ್ತೊಂಬತ್ತನೆ ಮತ್ತು ಇಪ್ಪತ್ತನೆಯ ಶತಮಾನದ ಉದ್ದಕ್ಕೂ ಹಲವಾರು ಲೇಖಕಿಯರು ಕಾದಂಬರಿ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಮಹಿಳಾ ಕಾದಂಬರಿಕಾರರಿಗೆ ಸಂಬಂಧಿಸಿದಂತೆ ಈ ಅಧ್ಯಯನದಲ್ಲಿ ಆಯ್ಕೆಮಾಡಿಕೊಂಡ ಹನ್ನೆರಡು ಜನ

ಲೇಖಕಿಯರು ಪ್ರಾದೇಶಿಕವಾಗಿ, ಕಾಲಘಟ್ಟದ ನೆಲೆಯಲ್ಲಿ ಭಿನ್ನತೆಯನ್ನು ಪ್ರತಿಬಿಂಬಿಸುವ ಬರಹಗಾರರಾಗಿ ಕಂಡುಬರುತ್ತಾರೆ. ಒಟ್ಟು ಮಹಿಳೆಯರ ಕಥನ ಪರಂಪರೆಯನ್ನು ಇದೇ (ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆ) ಚೌಕಟ್ಟಿನಲ್ಲಿ ಅಧ್ಯಯನ ಮಾಡಲು ಸಾಧ್ಯವಿದೆ. ಈ ಅಧ್ಯಯನದಲ್ಲಿ ಸಂಶೋಧನೆಯ ಶಾಸ್ತ್ರೀಯ ಹಿನ್ನೆಲೆ, ವ್ಯಾಪ್ತಿ, ವರ್ಗೀಕರಣಕ್ಕೆ ಸಂಬಂಧಿಸಿದಂತೆ ಚ್ಯುತಿ ಬರದ ರೀತಿಯಲ್ಲಿ ಎಲ್ಲೂ ನೀರಸವಾಗದಂತೆ ಎಚ್ಚರವಹಿಸಲಾಗಿದೆ.

ಪಾರಂಪರಿಕವಾಗಿ ಸಾಹಿತ್ಯ ವಾಙ್ಮಯ ಜಗತ್ತು ಎನ್ನುವುದು ಪುರುಷ ನಿರ್ಮಿತ ಮಾತ್ರವಲ್ಲ ಪುರುಷ ಕೇಂದ್ರಿತ ಪಾತಳಿಯಿಂದಲೇ ರೂಪುತಳೆದಿರುವಂಥದ್ದು. ಮಹಿಳೆಯರಿಂದ ರಚಿತವಾದ ಪಠ್ಯಗಳೂ ಆಂತರಿಕವಾಗಿ ಸಂವೇದನೆಗಳ ನೆಲೆಯಲ್ಲಿ ಪುರುಷತ್ವ ಮನೋಭೂಮಿಕೆಯ ಮುಂದುವರಿಕೆಗಳಂತೆಯೇ ಅಭಿವ್ಯಕ್ತಿಪಡೆದುಕೊಂಡಿವೆ. ಆದರೆ ಕನ್ನಡ ಸಂದರ್ಭದಲ್ಲಿ ಮಹಿಳಾ ಚಳುವಳಿಗಳು, ಹೋರಾಟಗಳು, ಸ್ತ್ರೀವಾದದ ಪ್ರಭಾವವು ಎಂಬತ್ತರ ದಶಕದ ನಂತರದಲ್ಲಿ ಕಾಣಿಸಿಕೊಂಡಿದೆ. ಇದು ಕಾದಂಬರಿ ಪ್ರಕಾರದ ಒಳಗೆ ತ್ತೊಂಬತ್ತರ ದಶಕದಲ್ಲಿ ಕಾಣಿಸಿಕೊಂಡಿದೆ. ಎಂದರೆ ಸ್ತ್ರೀವಾದ ಸಿದ್ಧಾಂತದ ನೆಲೆಯಲ್ಲಿ ಕನ್ನಡಕ್ಕೆ ಪರಿಚಯವಾಗಿ ಹತ್ತು ವರ್ಷಗಳ ಅಂತರದಲ್ಲಿ ಅದು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪ್ರತಿಫಲನಗೊಂಡಿವೆ.

ಆಧುನಿಕ ಕನ್ನಡ ವಾಙ್ಮಯವನ್ನು ಕಾಲ, ಸ್ಥಳ, ಸಂದರ್ಭ ವಸ್ತು ವಿನ್ಯಾಸಗಳಿಗೆ ಪೂರಕವಾಗಿ ವಿಂಗಡಿಸಿಕೊಂಡ ಕ್ರಮವೆಂದರೆ ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ, ನವ್ಯ ಸಾಹಿತ್ಯ, ಬಂಡಾಯ-ದಲಿತ ಸಾಹಿತ್ಯ (ನವ್ಯೋತ್ತರ) ಹೀಗೆ ವರ್ಗೀಕರಿಸಿಕೊಂಡ ವಿಭಜನೆಯಾಗಿದೆ. ಸಾಹಿತ್ಯ ಚರಿತ್ರೆಯಲ್ಲಿ ಓದುವ ಈ ಪದ್ಧತಿಯು ಸಾಮಾನ್ಯವೆಂಬಂತೆ ರೂಢಿಯಲ್ಲಿದೆ. ಎಲ್ಲಾ ಸಾಹಿತ್ಯ ಚರಿತ್ರೆಕಾರರು, ಸಂಶೋಧಕರು, ವಿಮರ್ಶಕರು ಸಾಮಾನ್ಯ ವೆಂಬಂತೆ ಈ ಗ್ರಹಿಕೆಗಳನ್ನು ಯಥವತ್ತಾಗಿ ಬಳಸಿಕೊಂಡು ಮುಂದುವರಿಸುತ್ತಾ ಬಂದಿದ್ದಾರೆ. ಪ್ರಧಾನ ಧಾರೆಯ ಈ ವರ್ಗೀಕರಣವನ್ನು ಮಹಿಳೆಯರ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪರಿಗಣಿಸುವುದು ಕಷ್ಟ ಸಾಧ್ಯ. ಇದಕ್ಕೆ ಕಾರಣವೆಂದರೆ, ರೂಢಿಯಲ್ಲಿರುವ ಪ್ರಧಾನ ಧಾರೆಯ ವರ್ಗೀಕರಣದ ಓದಿನ ವಿಧಾನವು ಸಾಂಸ್ಕೃತಿಕ ಬಹುಶ್ರುತತ್ವದ ಮೂಲಮಾನದಿಂದ ಸಿದ್ಧಿತವಾದವುಗಳಲ್ಲ. ಎಂಬುದನ್ನು ಈ ಅಧ್ಯಯನದ ಹಿನ್ನೆಲೆಯಲ್ಲಿ ಮನಗಾಣಲಾಗಿದೆ. ಮಾತ್ರವಲ್ಲ, ಮಹಿಳೆಯರಿಂದ ರಚಿತವಾದ ಬರೆವಣಿಗೆಗಳ ಸಂಬಂಧಿತ ಓದಿಗೆ ಈ ಸರಳ ಸೂತ್ರತ್ಮಾಕ ವಿಂಗಡಣೆಯ ವಿಧಾನಗಳನ್ನು ಸಮಗ್ರವಾಗಿ ಒಪ್ಪಿತವಾಗುವಂತೆ ಸಮರ್ಥಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಅನ್ವಯತ್ಮಕವಾಗಿ ಇದನ್ನು (ಪೂರ್ವದ ಸಾಹಿತ್ಯ ವಿಂಗಡಣೆಯನ್ನು) ಸಮರ್ಥಿಸಿಕೊಂಡರೂ ಅದು ಮಹಿಳೆಯರ ಸಾಹಿತ್ಯದ ವೈಶಿಷ್ಟ್ಯ ಮತ್ತು ಸಮಗ್ರತೆಯನ್ನು ಪರಿಪೂರ್ಣವಾಗಿ ಸೆರೆಹಿಡಿಯಲು ವಿಫಲವಾಗುತ್ತದೆ. ಏಕೆಂದರೆ, ಬರೆವಣಿಗೆ ಎನ್ನುವುದು ರೂಪುತಳೆಯುವಾಗ ಕಾಲ, ಪ್ರದೇಶ ಮತ್ತು ಸಮಾಜದ ಗತಿ ನಿರ್ಮಿತಿಗೆ ತಕ್ಕಂತೆ ಸಾಂದರ್ಭಿಕ ವೈಶಿಷ್ಟ್ಯವನ್ನು ತನ್ನ ಒಡಲಲ್ಲಿ ಹೊತ್ತುಕೊಂಡು ಜೀವ ಪಡೆಯುತ್ತಿರುತ್ತದೆ. ಓದಿನ ಬಹುಮುಖಿ ಆಯಾಮಗಳು ಸಾಂಸ್ಕೃತಿಕ ಎಚ್ಚರದ ಪ್ರತೀಕಗಳಾಗುವಾಗ ಪೂರ್ವರೂಪಿತ ವಿಂಗಡಣೆಗಳ ಕ್ರಮ ನಿರಸನಗೊಳ್ಳುತ್ತದೆ. ಅಲ್ಲದೆ, ಅಂತಯ..ಲ್ಲಿ ಹುದುಗಿರುವ ಸಾಂಸ್ಕೃತಿಕ ಒತ್ತಡವು ಹೊಸ ಓದನ್ನು ಕಟ್ಟುತ್ತದೆ. ಇದರಿಂದಾಗಿ ಮಹಿಳಾ ಬರೆವಣಿಗೆಯನ್ನು ಕೇಂದ್ರವಾಗಿ ಕಲ್ಪಿಸಿಕೊಂಡ ಈ ಅಧ್ಯಯನದ ಓದು ಪೂರ್ವರೂಪಿತ ವಿಂಗಡಣೆಯ

ಕ್ರಮವನ್ನು ಕೈಬಿಟ್ಟು ಸಾಂಸ್ಕೃತಿಕ ವಿಶಿಷ್ಟತೆಗೆ ಮಹತ್ವನೀಡಿ ಆ ಮೂಲಕ ಸಾಹಿತ್ಯವನ್ನು ಕ್ರಮಾಗತವಾಗಿ ಗ್ರಹಿಸಲಾಗಿದೆ. ಈ ದೃಷ್ಟಿಕೋನಕ್ಕೆ ಪೂರಕವಾಗಿ ಈ ಮಹಾಪ್ರಬಂಧದಲ್ಲಿ ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆ ಎಂಬ ಸಾಂಸ್ಕೃತಿಕ ಪರಿಪ್ರೇಕ್ಷ್ಯವನ್ನು ಪ್ರಧಾನವಾಗಿ ಗ್ರಹಿಸಲಾಗಿದೆ. ಈ ಮೂಲಕವಾಗಿ ಮಹಿಳಾ ಓದಿಗೆ ಒಂದು ಹೊಸತನದ ಮಾದರಿಯನ್ನು ಒದಗಿಸಿ ಕೊಡಲಾಗಿದೆ. ಈ ವಿಭಾಗ ಕ್ರಮದ ಆಯಾಮದಲ್ಲಿ ಒಟ್ಟು ಆಧುನಿಕ ಕನ್ನಡ ವಾಙ್ಮಯವನ್ನು ಓದುವುದು ಸಾಧ್ಯವಿದೆ ಎಂಬ ಮಹತ್ವದ ತೀರ್ಮಾನವನ್ನು ಈ ಮಹಾಪ್ರಬಂಧದ ಮೂಲಕ ಮನಗಾಣಲಾಗಿದೆ. ಸಾಹಿತ್ಯ ಮತ್ತು ಸಮಾಜವನ್ನು ಸಂವಾದಕ್ಕೆ ಮುಂದಿಟ್ಟುಕೊಳ್ಳುವಾಗ ಮಹಿಳಾ ಬರೆವಣಿಗೆಗಳು ಮತ್ತು ಮಹಿಳಾ ಓದಿನ ದೃಷ್ಟಿಕೋನವು ಸಾಂಸ್ಕೃತಿಕ ಪರಿಕಲ್ಪನೆಯ ಮೂಲಕವೇ ದೃಢತೆಯನ್ನು ಸಾಧಿಸಿಕೊಳ್ಳಬೇಕಾಗುತ್ತದೆ ಎಂಬ ಮಹತ್ವದ ಅಂಶವೂ ಇಲ್ಲಿ ಖಚಿತವಾದ ಅರ್ಥವನ್ನು ಪಡೆದುಕೊಳ್ಳುತ್ತದೆ. ಕನ್ನಡ ಸಾಹಿತ್ಯ ವಿಮರ್ಶೆ, ಸಂಶೋಧನೆಯ ಚರಿತ್ರೆಯಲ್ಲಿ ಮಾರ್ಗ ಸಂಪ್ರಾದಯದ ನಿರಾಕರಣೆ ಮತ್ತು ಭಿನ್ನ ನೆಲೆಯಲ್ಲಿ ಕಟ್ಟುವ ಕ್ರಿಯೆ ಒಂದು ಪ್ರಧಾನ ಅಂಶವಾಗಿದೆ. ಈ ಅನ್ವೇಷಣೆಯು ಹೊಸ ಓದಿನ ದಾರಿಗೆ ಮತ್ತು ಅರ್ಥ ಸಾಧ್ಯತೆಗಳಿಗೆ ಖಚಿತವಾದ ರೂಪುರೇಖೆಯನ್ನು ಒದಗಿಸಿ ಕೊಡಬಲ್ಲದು.

******

## ಪತ್ರ್ಯಗಳು

| ಲೇಖಕಿಯರು | | ಕೃತಿಗಳು | ಪ್ರಕಟಿತ ವರ್ಷ |
|---|---|---|---|
| ೧. ನಂಜನಗೂಡು ತಿರುಮಲಾಂಬ | : | ನಭಾ | ೧೯೧೩ |
| | | ವಿರಾಗಿಣಿ | ೧೯೧೪ |
| | | ಮಣಿಮಾಲಾ | ೧೯೧೩ |
| | | ಗಿರಿಜಾಬಾಯಿ | ೧೯೧೫ |
| | | ವಿದ್ಯುಲ್ಲತೆ | ೧೯೧೫ |
| | | ಮಾತೃನಂದಿನಿ | ೧೯೧೬ |
| ೨. ಆರ್. ಕಲ್ಯಾಣಮ್ಮ | : | ಪ್ರಿಯಂವದೆ | ೧೯೨೨ |
| | | ನಿರ್ಭಾಗ್ಯವನಿತೆ | ೧೯೨೩ |
| ೩. ತ್ರಿವೇಣಿ | : | ಹೂವುಹಣ್ಣು | ೧೯೫೦ |
| | | ಅಪಸ್ವರ | ೧೯೫೩ |
| | | ಕೀಲುಗೊಂಬೆ | ೧೯೫೬ |
| | | ಅಪಜಯ | ೧೯೫೬ |
| | | ಕಂಕಣ | ೧೯೫೭ |
| | | ಮುಕ್ತಿ | ೧೯೫೯ |
| | | ಕಾಶಿಯಾತ್ರೆ | ೧೯೬೨ |
| | | ಶರಪಂಜರ | ೧೯೬೨ |
| | | ಹಣ್ಣೆಲೆ ಚಿಗುರಿದಾಗ | ೧೯೬೩ |
| ೪. ಎಂ.ಕೆ.ಇಂದಿರಾ | : | ತುಂಗಾಭದ್ರ | ೧೯೬೩ |
| | | ಹೆಣ್ಣಿನ ಆಕಾಂಕ್ಷೆ | ೧೯೬೬ |
| | | ಗೆಜ್ಜೆಪೂಜೆ | ೧೯೬೬ |
| | | ಮನತುಂಬಿದ ಮಡದಿ | ೧೯೬೯ |
| | | ಚಿದ್ವಿಲಾಸ | ೧೯೭೧ |
| | | ಸದಾನಂದ | ೧೯೭೫ |
| | | ಮಧುವನ | ೧೯೭೬ |
| | | ಫಣಿಯಮ್ಮ | ೧೯೭೬ |
| | | ಸೂತ್ರಧಾರ. | ೧೯೮೪ |

| | | | |
|---|---|---|---|
| ೫. ಗೀತಾ ನಾಗಭೂಷಣ | | ನೀಲಾಗಂಗಾ<br>ಆಸರೆ<br>ಬದುಕು | ೧೯೮೬<br>೧೯೮೮<br>೨೦೦೧ |
| ೬. ಸಾರಾ ಅಬೂಬಕ್ಕರ್ | : | ಚಂದ್ರಗಿರಿಯ ತೀರದಲ್ಲಿ<br>ಸಹನ<br>ವಜ್ರಗಳು<br>ಸುಳಿಯಲ್ಲಿ ಸಿಕ್ಕವರು<br>ಪ್ರವಾಹ ಸುಳಿ | ೧೯೮೪<br>೧೯೮೫<br>೧೯೮೮<br>೧೯೯೪<br>೧೯೯೬ |
| ೭. ಅನುಪಮಾ ನಿರಂಜನ | : | ಅನಂತ ಗೀತ<br>ಸಂಕೋಲೆಯೊಳಗಿಂದ<br>ಶ್ವೇತಾಂಬರಿ<br>ನೂಲುನೆಯ್ದ ಚಿತ್ರ<br>ಹಿಮದ ಹೂ<br>ಸ್ನೇಹ ಪಲ್ಲವಿ,<br>ಚಿತ್ತಮೋಹನ<br>ಎಳೆ<br>ಮೂಡಣ ಪಡುವಣ<br>ಆಳ<br>ಮುಕ್ತಿ ಚಿತ್ರ | ೧೯೫೪<br>೧೯೫೪<br>೧೯೫೭<br>೧೯೬೧<br>೧೯೬೬<br>೧೯೬೭<br>೧೯೭೨<br>೧೯೮೦<br>೧೯೭೧<br>೧೯೮೯<br>೧೯೮೮ |
| ೮. ವೀಣಾ ಶಾಂತೇಶ್ವರ | : | ಗಂಡಸರು<br>ಬಂಡಾಯ ಶೋಷಣೆ | ೧೯೮೪<br>೧೯೮೬ |
| ೯. ಕೆ. ತಾರಾಭಟ್ | : | ಅವ್ಯಕ್ತ | ೧೯೯೪ |
| ೧೦. ಸವಿತಾ ನಾಗಭೂಷಣ | : | ಸ್ತ್ರೀಲೋಕ | ೧೯೯೬ |
| ೧೧. ಎಚ್.ಎಸ್.ಚಂಪಾವತಿ | : | ಶಿವಗಂಗಾ | ೧೯೯೭ |
| ೧೨. ಉಮಾರಾವ್ | : | ನೂರು ಸ್ವರ | ೨೦೦೦ |

## ಪರಾಮರ್ಶನ ಗ್ರಂಥಗಳು

೧) ಅ.ರಾ.ಸೇ(ಸಂ): (೧೯೯೯) *ಪರಮಾರ್ಥ ಪದಕೋಶ* ; ಕಾಮಧೇನು ಪ್ರಕಾಶನ, ಬೆಂಗಳೂರು.

೨) ಅಶೋಕ ಟಿ.ಪಿ. : (೧೯೯೯) *ವಾಸ್ತವತಾವಾದ* ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩) ಆಮೂರ ಜಿ.ಎಸ್. : (೧೯೯೪) *ಕನ್ನಡ ಕಥನ ಸಾಹಿತ್ಯ ಕಾದಂಬರಿ* ; ಶ್ರೀಹರಿ ಪ್ರಕಾಶನ, ಧಾರವಾಡ.

೪) ಆಮೂರ ಜಿ.ಎಸ್. : (೧೯೯೯) *ಕಾದಂಬರಿ ಸ್ವರೂಪ ಹೊಸ ಚಿಂತನೆ* ; ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು.

೫) ಇತಿಹಾಸಾಚಾರ್ಯ ರಾಜವಾಡೆ : (೧೯೯೩) *ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ*; ನವಕರ್ನಾಟಕ ಪ್ರಕಾಶನ, ಬೆಂಗಳೂರು.

೬) ಈಶ್ವರ ಭಟ್ಟ ಬೋಳಂತಕೋಡಿ(ಸಂ) :(೧೯೮೮) *ಅನುಪಮಾ ಅಭಿನಂದನ;* ಕರ್ನಾಟಕ ಸಂಘ, ಪುತ್ತೂರು.

೭) ಉಷಾ ಪಿ.ರೈ, ಕೆ. ವಿಜಯ ಲಕ್ಷ್ಮಿ(ಸಂ) :(೨೦೦೩) *ಲೇಖ -ಲೋಕ ೪*; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೮) ಎದುರ್ಕಳ ಶಂಕರ ನಾರಾಯಣ ಭಟ್(೧೯೮೬) : *ಹಿಂದೂ ಧರ್ಮದ ಪರಿಚಯ*; ಚೇತನ ಬುಕ್ ಹೌಸ್ ಪ್ರಕಾಶರು, ಮೈಸೂರು.

೯) ಐನಾಪುರ ಎಲ್.ಎಸ್. (೧೯೭೦): *ಮಾನವಶಾಸ್ತ್ರ ಪರಿಚಯ*; ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೧೦) ಒಡಿಯರ್ ಡಿ. ಹೆಗ್ಗಡೆ (೧೯೮೬):*ಅಂಬೇಡ್ಕರ್ ಅವರ ಸಮಗ್ರ ಚಿಂತನೆ* ; ಮಂಗಳ ಗಂಗೋತ್ರಿ, ಮಂಗಳೂರು.

೧೧) ಕಟ್ಟಿ ಎ.ಆರ್. (೧೯೮೪) : *ಸಾಮಾಜಿಕ ವ್ಯಕ್ತಿತ್ವಗಳು* ; ಮನೋಹರ ಗ್ರಂಥಾಲಯ, ಧಾರವಾಡ.

೧೨) ಕಂಠೀರಾವ್ (೧೯೭೮): *ಭಾರತೀಯ ನ್ಯಾಯ ಪದ್ಧತಿ*; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೧೩) ಕುರ್ತಕೋಟಿ.ಕೆ.ಡಿ. : (೧೯೯೧) *ಯುಗಧರ್ಮ ಹಾಗೂ ಸಾಹಿತ್ಯ ದರ್ಶನ* ; ಮನೋಹರ ಗ್ರಂಥಮಾಲೆ, ಧಾರವಾಡ.

೧೪) ಗಾಯತ್ರಿ ಎನ್. : (೧೯೯೬) *ಮಹಿಳೆ : ಬಿಡುಗಡೆಯ ಹಾದಿಯಲ್ಲಿ* ; ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೧೫) ಗೀತಾ ಕೃಷ್ಣಮೂರ್ತಿ:(೨೦೦೧) *ಮಹಿಳೆ ಕಾನೂನು ಮತ್ತು ರಾಜಕಾರಣ*; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬) ಗೋಪಾಲ ಕೃಷ್ಣ ಕೆ.ಎಲ್.(ಅನು):(೧೯೮೦) *ಏಂಗೆಲ್ಸ್*;ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗ, ಮೈಸೂರು.

೧೭) ಜವರಯ್ಯ ಮ.ನ.: (೧೯೯೫) **ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ**; ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

೧೮) ತಾಪಿ ಧರ್ಮರಾವ್ (ಮೂಲ): (೧೯೮೩) **ವಿವಾಹ ಹುಟ್ಟು ಮತ್ತು ಪೂರ್ವೋತ್ತರ**; ನವಕರ್ನಾಟಕ ಪಬ್ಲಿಕೇಷನ್ ಬೆಂಗಳೂರು.

೧೯) ತಿಪ್ಪೇರುದ್ರ ಸ್ವಾಮಿ(ಸಂ) : (೧೯೯೮) ***ಗಾಂಧಿ ವಿಚಾರ ಮಾರ್ಗ***; ಗಾಂಧಿ ಭವನ, ಮೈಸೂರು.

೨೦) ತಿಪ್ಪೇರುದ್ರಸ್ವಾಮಿ ಎಚ್ (ಅನು): (೧೯೭೦) ***ಮಹಾತ್ಮಾಗಾಂಧಿ ೧೦೦ ವರ್ಷಗಳು*** ;ಗಾಂಧೀಭವನ ಮಾನಸ ಗಂಗೋತ್ರಿ, ಮೈಸೂರು.

೨೧) ತೇಜಸ್ವಿನಿ ನಿರಂಜನ/ಸೀಮಂತಿನಿ ನಿರಂಜನ (ಸಂ): (೧೯೯೪) **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ**; ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು.

೨೨) ನಟರಾಜ ಹುಳಿಯಾರು (ಸಂ) :(೨೦೦೦) **ಮಾನವ ಕುಲದ ಏಕತೆ** (ರಾಮ ಮನೋಹರ ಲೋಹಿಯಾ ಬರಹಗಳು ಸಂಪುಟ : ನಾಲ್ಕು); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೩) ನಟರಾಜ ಹುಳಿಯಾರು (ಸಂ): (೨೦೦೦) **ಕಣ್ಣೆದುರಿನ ಪ್ರಶ್ನೆಗಳು** (ರಾಮ ಮನೋಹರ ಲೋಹಿಯಾ ಬರಹಗಳು ಸಂಪುಟ : ೫) ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೪) ನರಹಳ್ಳಿ ಬಾಲ ಸುಬ್ರಹ್ಮಣ್ಯ: (೧೯೯೦) **ನವ್ಯತೆ** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೫) ನಂಜಮ್ಮಣ್ಣಿ ಎಂ : (೧೯೭೧) **ಸಾಮಾಜಿಕ ಮಾನವಶಾಸ್ತ್ರ** ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೨೬) ನಾಗಮಣಿ ಎಸ್.ರಾವ್(ಸಂ) :(೧೯೯೯) ***ಲೇಖ - ಲೋಕ ೨***; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೨೭) ನಾಗಭೂಷಣ ಡಿ.ಎಸ್. : (೧೯೯೦) ***ಗಮನ*** ; ಸಂವಾದ ಪ್ರಕಾಶನ, ಮಲ್ಲಾಡಿ ಹಳ್ಳಿ.

೨೮) ನಾಗಭೂಷಣ ಸ್ವಾಮಿ ಓ.ಎಲ್. :(೧೯೯೮) **ಪ್ರಜ್ಞಾಪ್ರವಾಹ ತಂತ್ರ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೯) ನಾಗರಾಜ್ ಡಿ.ಆರ್.(ಸಂ) :(೧೯೯೫) ***ಆಶೀಶ್ ನಂದಿ ವಿಚಾರ*** ; ಅಕ್ಷರ ಪ್ರಕಾಶನ ಸಾಗರ, ಹೆಗ್ಗೋಡು.

೩೦) ನಾಗರಾಜ ಡಿ.ಆರ್. : (೧೯೯೬) ***ಸಾಹಿತ್ಯ ಕಥನ;*** ಅಕ್ಷರ ಪ್ರಕಾಶ, ಸಾಗರ.

೩೧) ನಾರಾಯಣ ಪಿ.ವಿ. : (೧೯೭೫) ***ಮದುವೆ ಮತ್ತು ನೀತಿ;*** ಜ್ಞಾನ ಪಥ ಜಯನಗರ, ಬೆಂಗಳೂರು.

೩೨) ನಾರಾಯಣ ಕೆ.ವಿ.(ಸಂ) :(೧೯೯೨) ***ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ;*** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೩) ನಾರಾಯಣ ಕೆ.ವಿ./ರಾಘವೇಂದ್ರರಾವ್ ಎಚ್.ಎಸ್ (ಅನು):(೨೦೦೧) ಪ್ರೀತಿಸುವುದೆಂದರೆ..... ; ಅಭಿನವ ಪ್ರಕಾಶನ, ಬೆಂಗಳೂರು.

೩೪) ನಾರಾಯಣ್ .ಎಚ್.ವಿ /ಕೃಷ್ಣಮೂರ್ತಿ.ಕೆ.ವಿ :(೧೯೭೫) ***ಸಮಾಜಶಾಸ್ತ್ರ ಪರಿಚಯ***; ಪದ್ಮ ಪ್ರಕಾಶನ, ಮೈಸೂರು.

೩೫) ನೇಮಿ ಚಂದ್ರ :(೨೦೦೧) ***ಮಹಿಳಾ ಅಧ್ಯಯನ*** ; ಅಂಕಿತ ಪುಸ್ತಕ ಬೆಂಗಳೂರು.

೩೬) ಪಡಿಕ್ಕಲ್ ಶಿವರಾಮ :(೨೦೦೧) ***ನಾಡು - ನುಡಿಯ ರೂಪಕ*** ; ಪ್ರಸಾರಾಂಗ ಮಂಗಳೂರು ವಿ.ವಿ., ಮಂಗಳಗಂಗೋತ್ರಿ.

೩೭) ಪಾರ್ವತಿ ಎಚ್.ಎಸ್. (ಸಂ) :(೧೯೯೧) ***ಸುರಗಿ*** ಶ್ರೀಮತಿ ಎಂ.ಕೆ. ಇಂದಿರಾ ಅಬಿನಂದನಾ ಗ್ರಂಥ ; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೩೮) ಬಸವಣ್ಣ ಎಂ.:(೧೯೭೪)***ಯೂಂಗ್‌ನ ಮನೋವೈಜ್ಞಾನಿಕ ಸಿದ್ಧಾಂತಗಳು*** ಪ್ರಕಟಣ ಮತ್ತು ಪ್ರಚಾರೋ ಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ ಬೆಂಗಳೂರು.

೩೯) ಬಸವರಾಜ ನಾಯ್ಕರ :(೧೯೯೯) ***ಸಂರಚನಾವಾದ*** ; ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೪೦) ಬಾಪು ಹೆದ್ದೂರ ಶೆಟ್ಟಿ: (೧೯೮೯) ***ಮಾರ್ಕ್ಸ್‌ವಾದ***; ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೪೧) ಮಂದಾಕಿನಿಪುರೋಹಿತ:(೧೯೯೧)***ಎಂ.ಕೆ.ಇಂದಿರಾ-ಸಮಗ್ರಅಧ್ಯಯನ***;ಹೇಮಂತಸಾಹಿತ್ಯ,ಬೆಂಗಳೂರು.

೪೨) ಮನು ಚಕ್ರವರ್ತಿ ಎನ್ (ಸಂ): (೧೯೯೩) ***ಭಾರತೀಯ ಸ್ತ್ರೀವಾದ*** ; ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ.

೪೩) ಮನು ಚಕ್ರವರ್ತಿ ಎನ್/ ಮೀರಾ ಎಲ್.ಜಿ. (ಅನು):(೧೯೯೯) ***ಬಹುಮುಖ*** ; ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ.

೪೪) ಮಲ್ಲಿನಾಥಯ್ಯ ಡಿ.ಎಚ್. : (೧೯೭೪) ***ಸಾಂಸ್ಕೃತಿಕ ಮಾನವಶಾಸ್ತ್ರ*** ;ಕನ್ನಡ ಅಧ್ಯಯನ ಸಂಸ್ಥೆ ,ಮೈಸೂರು.

೪೫) ಮಹಾಬಲೇಶ್ವರ ರಾವ್ (ಅನು): (೧೯೯೩) ***ಗಾಂಧೀಜಿ ಮತ್ತು ಮಹಿಳೆಯರು***; ಜನಪದ ಸೇವಾ ಟ್ರಸ್ಟ್, ಮೇಲುಕೋಟೆ.

೪೬) ಮೀರಾ ಎಲ್.ಜಿ. (ಅನು): (೧೯೯೭) ***ಮಾನುಷಿಯ ಮಾತು*** ; ಅಕ್ಷರ ಪ್ರಕಾಶನ, ಹೆಗ್ಗೊಡು.

೪೭) ಮೋಡಕ ಬಿ.ಆರ್. :(೧೯೭೪) ***ಮನಸ್ಮೃತಿ*** (ಅದ್ಯಾಯ -೭); ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೪೮) ಯಶಪಾಲ್ :(೧೯೯೮) ***ಗಾಂಧಿವಾದದ ಶವ ಪರೀಕ್ಷೆ*** ; ಡಿ.ವಿ.ಕೆ. ಮೂರ್ತಿ, ಮೈಸೂರು.

೪೯) ರಾಮಚಂದ್ರ ಬರಗೂರು (ಸಂ) : (೧೯೯೩) ***ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ*** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೦) ರಾಮಚಂದ್ರ ಬರಗೂರು (ಸಂ) : (೧೯೯೩) ***ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆ*** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೧) ರಾಮಚಂದ್ರನ್ ಸಿ.ಎನ್. :(೧೯೯೯) ***ತ್ರಿವೇಣೀ*** (ಅನಸೂಯ ಶಂಕರ್); ಸಾಹಿತ್ಯ ಅಕೆಡೆಮಿ, ನವದೆಹಲಿ.

೫೨) ರಾಮಾಚಂದ್ರನ್ ಸಿ.ಎನ್. :(೧೯೯೫) ***ಆಶಯ- ಆಕೃತಿ*** ; ಅಭಿನವ ಪ್ರಕಾಶನ, ಬೆಂಗಳೂರು.

೫೩) ರಾಮಚಂದ್ರನ್ ಸಿ.ಎನ್. :(೨೦೦೦) ***ವಸಾಹತೋತ್ತರ ಚಿಂತನೆ***; ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೫೪) ರೋಮಿಲಾಥಾಪರ್ :(೧೯೭೫) ***ಗತಕಾಲದ ಬಗ್ಗೆ ಪೂರ್ವಗ್ರಹ*** ; ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ.

೫೫) ವಸಂತ ಬನ್ನಾಡಿ :(೧೯೯೫) ***ಸಂಸ್ಕೃತಿ ಚಿಂತನೆ*** ; ಅರಿವು ಬರಹ ಪ್ರಕಾಶನ, ಮಂಗಳ ಗಂಗೋತ್ರಿ, ಮಂಗಳೂರು.

೫೬) ವಿಜಯಾದಬ್ಬೆ :(೧೯೮೯) ***ಮಹಿಳೆ ಸಾಹಿತ್ಯ ಸಮಾಜ*** ; ರಚನಾ ಪ್ರಕಾಶನ ,ಮೈಸೂರು

೫೭) ವಿಜಯಾದಬ್ಬೆ :(೧೯೯೭) ***ನಾರಿ ದಾರಿ-ದಿಗಂತ***; ರಚನಾ ಪ್ರಕಾಶನ ವಿಜಯನಗರ ಮೊದಲ ಹಂತ, ಮೈಸೂರು.

೫೮) ವಿಜಯಾದಬ್ಬೆ (ಸಂ):(೧೯೯೭) ***ಹಿತೈಷಿಣಿಯ ಹೆಜ್ಜೆಗಳು*** ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೫೯) ವಿಜಯಾ ದಬ್ಬೆ :(೧೯೯೮) ***ಅನುಪಮಾ ನಿರಂಜನ*** ; ಸಾಹಿತ್ಯ ಅಕಾಡೆಮಿ, ನವದೆಹಲಿ.

೬೦) ವಿಜಯಶ್ರೀ ಸಬರದ :(೧೯೯೪) ***ಅನುಪಮಾ ನಿರಂಜನ*** ; ಬದುಕು-ಬರಹ; ಮನೋಹರ ಪ್ರಕಾಶನ, ಧಾರವಾಡ.

೬೧) ವಿಠಲರಾವ್ ಗಾಯಕ್ವಾಡ್ (ಅನು) : (೨೦೦೧) ***ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು*** ; ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೬೨) ವೀಣಾ ಶಾಂತೇಶ್ವರ (ಸಂ) :(೧೯೯೩) ***ಮಹಿಳಾ ಅಧ್ಯಯನ*** ; ಪ್ರೊ ಎಚ್ ವಿ ನಾಗೇಶ ಅಭಿನಂದನಾ ಸಮಿತಿ, ಧಾರವಾಡ.

೬೩) ವಿವೇಕ ರೈ. ಬಿ.ಎ.(ಸಂ): (೧೯೮೭) ***ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು*** ; ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೬೪) ವಿವೇಕ ರೈ ಬಿ.ಎ. :(೧೯೯೫) ***ಗಿಳಿಸೂವೆ*** ; ಅಕ್ಕಿಸಿರಿ ಸಾಂಸ್ಕೃತಿಕ ಕೇಂದ್ರ, ಮಂಗಳೂರು.

೬೫) ಶಂಕರ್ ರಾವ್ ಚ.ನ. :(೧೯೯೧) ***ಭಾರತೀಯ ಸಮಾಜ*** ; ಜೈ ಭಾರತ್ ಪ್ರಕಾಶನ, ಮಂಗಳೂರು.

೬೬) ಶಿವಣ್ಣ ಡಿ.ಕೆ. : (೧೯೭೬) ***ಸಾಮಾಜಿಕ ಸಮಸ್ಯೆಗಳು*** ; ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬೭) ಶಿವಣ್ಣ ಡಿ.ಕೆ. : (೧೯೮೧) ***ಸಮಾಜ ಶಾಸ್ತ್ರ*** ; ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬೮) ಶಿವಣ್ಣ ಡಿ.ಕೆ. : (೧೯೮೮) ***ಮಾನವ ಶಾಸ್ತ್ರ*** ; ಕಲಾ ಪ್ರಕಾಶನ , ಬೆಂಗಳೂರು.

೬೯) ಶಿವಪ್ರಕಾಶ್ ಎಚ್. ಎಸ್. : (೧೯೯೫) ***ಮೊದಲ ಕಟ್ಟಿನ ಗದ್ಯ*** : ಅಭಿನವ ಪ್ರಕಾಶನ ಬೆಂಗಳೂರು.

೭೦) ಶಿವರುದ್ರಪ್ಪ ಜಿ.ಎಸ್. : (೧೯೭೪) ***ಗತಿಬಿಂಬ*** : ಸುರುಚಿ ಪ್ರಕಾಶನ ಮೈಸೂರು.

೭೧) ಶಿವರುದ್ರಪ್ಪ ಜಿ.ಎಸ್. (ಸಂ) : (೧೯೮೦) ***ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ*** :ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೭೨) ಶ್ರೀಕಂಠಯ್ಯ ಬಿ.ಎಂ. : (೧೯೭೦)***ಇಸ್ಲಾಂ ಸಂಸ್ಕೃತಿ***; ಪ್ರಸಾರಂಗ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

೭೩) ಶ್ರೀಧರ್ (ಸಂ) ಎಚ್. ಜಿ.: (೧೯೯೮) **ವಿವಾಹ** ; ಕನ್ನಡ ಸಂಘ ವಿವೇಕಾನಂದ ಕಾಲೇಜು, ಪುತ್ತೂರು.

೭೪) ಶ್ರೀಮತಿ ಎಚ್.ಎಸ್. :(೨೦೦೧) **ತ್ರಿವೇಣಿಯವರ ಕಾದಂಬರಿಗಳ ಮರು ಓದು**; ತ್ರಿವೇಣಿ ಪಬ್ಲಿಕೇಷನ್ಸ್, ಮೈಸೂರು.

೭೫) ಶ್ರೀಮತಿ ಎಚ್.ಎಸ್ :(೧೯೯೯) **ಮಹಿಳಾ ಅಧ್ಯಯನ** ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೬) ಶ್ರೀಮತಿ ಎಚ್.ಎಸ್. : (೨೦೦೦) **ಚಹರೆ** ; ಇಳಾ ಪ್ರಕಾಶನ, ಬೆಂಗಳೂರು.

೭೭) ಸತ್ಯನಾರಾಯಣ ಕೆ :(೧೯೯೧) **ಆಸಕ್ತಿ** ; ಹಂಸಧ್ವನಿ ಪ್ರಕಾಶನ, ಬೆಂಗಳೂರು.

೭೮) ಸರಸ್ವತೀ ರಿಸಬೂಡ (ಅನು): (೧೯೯೨) **ಸ್ತ್ರೀ- ಪುರುಷ** ; ಇಳಾ ಪ್ರಕಾಶನ, ಬೆಂಗಳೂರು.

೭೯) ಸುಮಿತ್ರಾ ಬಾಯಿ ಬಿ.ಎನ್(ಸಂ) : (೧೯೯೨) **ಕಲ್ಯಾಣ ಸರಸ್ವತಿ** ; ಇಳಾ ಪ್ರಕಾಶನ, ಬೆಂಗಳೂರು.

೮೦) ಸುಮಿತ್ರಾ ಬಾಯಿ ಬಿ.ಎನ್. :(೧೯೯೫) **ಸ್ತ್ರೀವಾದಿ ಪ್ರವೇಶಿಕೆ** ;ಕರ್ನಾಟಕ ಲೇಖಕಿಯರ ಸಂಘ,ಬೆಂಗಳೂರು.

೮೧) ಸುಮಿತ್ರಾಬಾಯಿ ಬಿ.ಎನ್. :(೧೯೯೫) **ವಿಚಯ** ; ಇಳಾ ಪ್ರಕಾಶನ, ಬೆಂಗಳೂರು.

೮೨) ಸುಮಿತ್ರಾ ಬಾಯಿ ಬಿ.ಎನ್. :(೧೯೯೯) **ಸ್ತ್ರೀವಾದ** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೩) ಹಾವನೂರು ಶ್ರೀನಿವಾಸ : (೧೯೭೪) **ಹೊಸಗನ್ನಡ ಅರುಣೋದಯ;**ಪ್ರಸಾರಾಂಗ ಮೈಸೂರು ವಿ.ವಿ., ಮೈಸೂರು.

೮೪) ಹೇಮಲತಾ ಮಹಿಷಿ :(೧೯೮೨) **ಹಿಂದೂ ವಿವಾಹ** ; ಭರಣಿ ಪ್ರಕಾಶನ ಮಲ್ಲೇಶ್ವರಂ, ಬೆಂಗಳೂರು.

# BIBLIOGRAPHY


1) Ahmed Sarn : (1998) ***Differences that matter Feminist Theory and post modernism ;*** Cambridge University Press, Newyork.

2) Amiran, Minda Rae : (1978) ***What women's literature*** ;College English, London.

3) Alice Browne : (1987) ***The Eighteenth Century Feminist Mind*** ; The HAR vester Press, West Sussex.

4) Ambedkar B.R.: (1973) ***Poona Pact Vol.1 Bhagawan Das (Ed)*** ; Bombay Press Group, Bombay.

5) Auerbach, Nina : (1980) ***Feminist Criticism reviewed;*** Gender and literary voice, New York.

6) Azim Sherwani : (1998) ***The Girl Child in Crisis*** ; A Sponsored Publication, New Delhi.

7) Bell Morman W./Voget Ezra, F. (Ed) :(1960) ***A Modrn Introduction to the Family;*** Routledge and Kegan Paul, London.

8) Bipanchandra : (1979) ***Nationalism and Colnialism in Modern India***; Orient Longman,Londan.

9) Burgess E.W / Locke, H.J.: (1948) ***The Family;*** New York.

10) Butter Judith (1993) : ***Bodies that Matter***: On the Discursive Limits of Sex; NewYork, Routledge.

11) Drucilla Cornell (1998): ***Feminist/ Feminine Ethics*** ;University of Minnesota Press, London.

12) Eagleton, Mary,ed : (1986) ***Feminist literary theory***: ***a reader ;*** Blackwell.

13) Foucault Michel (1986): ***The history of sexuality*** Vol. II ; Random House, NewYork.

14) Gandi M.K. : (1992) ***An Anlobiography*** ; Navjigan Publication House, Anmedabad.

15) Gates Henry Louis (Edi) : (1987) ***Feminism and Philosophy*** ; Cambridge Press, London.

16) Hari Bilas Sarda : (1935) ***Speeches and writings*** ; Ajmeer vedic yantralaya.

17) Hassan, Ihab : (1988) ***The Culture of Postmodernism ;*** University of Illinoins Press, Illinois.

18) Holub, Renate : (1994) ***Between the united states and Italy ,*** Critical Reflections on Diotima's Feminist; University of Minnesota Press, London.

19) John Lewis : (1978) ***Anthropology Made Simple*** ; A Howard & Wyndham Company, London.

20) Judith Evans : (1995) ***Feminist Theory Today***: ; Sage Publications, New Delhi.

21) Judith Newton and Deborah Rosenfelt (Ed.): (1985) ***Feminist Criticism and Social Change***; Methuen, London.

22) Julia Kristiva : (1985) ***The speaking subject***: On signs A semeotics Reader, Marshell Blonshy (Ed.,)Oxford Blackwell.

23) Kamlanath and Milly Chatterjee : (1996) ***why women? what Politics?*** ;Centre for social Research, New Delhi.

24) Kapadia K.M.: (1966) ***Marriage and Family in India*** ; Oxford University Press, London.

25) Kroeber A.L.(1948) ***Anthropology*** ; Harper & Row, New York.

26) Lacan, Jacques: (1977) ***Ecrits: a selection;*** Haward University Press, Norton.

27) Landis Judson P/Landis Mary: (1952) ***Readings in Marriage and Family*** ; Prentine Hall, Yew York.

28) Linda Kauffman (Edi) (1989): ***Gender and Theory ;*** Basil Blackwell, Oxford.

29) Maternal pasts (1998) ***Feminst Futures*** ; Stanford university Press Stanford California.

30) Natarajan. K.: (1928) ***Miss Mayo's Mother India*** ; A Rejoinder; G.A.Natesan and Co, Madras.

31) Nuernberger Phil (1985) : ***Freedom from stress*** ; A Holistic Approach W.D.S., New Delhi.

32) Ounei, Susan : (1992) ***Women : out of hte kitchen into the struggle*** ; in Davies, Third world - second sex; Zed Books, London.

33) Partha Ghatterjee: (1986) ***Nationalist Thought and the Colonial world*** ; A Derivative Discourse, Delhi.

34) Peter Barry : (1995) ***Begining Theory: An Intorduction to Literary and cultural Theory:*** Manchester University Press, Manchester & Newyork.

35) Promilla Kapur :(2001) ***Empowering the Indian woman*** ; Publications Division Govt. of India Patiala House, New Delhi.

36) Ruthven K.K : (1984) ***Feminist literary studies: an Introduction:*** University of Adelaide, Australia.

37) Simone de Beauvoir : (1952) ***The second sex*** ; Random House, New York.

38) Sumuel Rapport and Helen Wright (Edi): (1967) ***Anthropology*** ; Washington Square Press, NewYork.

39) Surest Renjen Bold: (1989) ***Novelists and Political Conciousness*** ; Chanakya Publications, Delhi.

40) Sucheta, Kriplani: (1975) ***An unfinished Auto Biography*** ; Calcutta Association Press.

41) Susan Moller Okin : (1999) ***Is Multiculturalism Bad for Women ?*** ; Princetion University Press, William Street West Sussex.

42) Susie tharn K Lalitha : (1995) ***Women writing in India*** ;Oxford University Press, Mubai.

43) Usha Chakraborty: (1963) ***Condition of Bengali woman Around the second Half of Nineteenth Century***; Culcutta.

44) Veda Mitra : (1965) ***Happy Married Life in Ancient India*** ;Aryans Book Depot, New Delhi.

45) Vijya Agnew: (1979) ***Elite women in Indian Politics*** ; Vikas Publishing House, New Delhi.

46) Winch Robert : (1964) ***The Modern Family*** ; Holt, Rinchart and winston, New York.

47) Westermarch: (1891) ***History of Human Marriage ;*** Zed Books, London.

48) Westermarch :(1926) ***Short History of Marriage;*** Zed Books, London.

